ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ.

[ಪಂಡಿತರಿಂದ ಬರೆಯಲ್ಪಟ್ಟ] ಅರ್ಥ, ತಾತ್ಪರ್ಯ, ವಿಶೇಷಾರ್ಥ ಸಹಿತ.



## *Part 1*.

ಪ್ರಕಾಶಕರು
ಎಂ. ಮೂರ್ತಿರಾವ್,
"ಶ್ರೀಹರಿಕೃಪಾ" ಮಲ್ಲೇಶ್ವರಂ, ಬೆಂಗಳೂರು.

[ಬೆಲೆ ರೂ. ೫.

ಶ್ರೀ

# ಮಹಾಭಾರತ ತಾತ್ಪರ್ಯ ನಿರ್ಣಯ



॥ ಶ್ರೀ ವೇದವ್ಯಾಸಾಯನಮಃ ॥

ಶ್ರೀ ಗುರುಭ್ಯೋನಮಃ ॥

ನರಸಿಂಹೋಽಖಿಲಾಜ್ಞಾನ ಮತಧ್ವಾಂತ ದಿವಾಕರಃ ॥
ಜಯತ್ಯಮಿತಸದ್-ಜ್ಞಾನ ಸುಖ ಶಕ್ತಿ ಪಯೋನಿಧಿಃ ॥ ೧ ॥

ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ॥
ಆನಂದತೀರ್ಥಮತುಲಂ ಭಜೇತಾಪ ತ್ರಯಾಪಹಂ ॥ ೨ ॥

ಶ್ರೀ ವಾದಿರಾಜ ಗುರುಭ್ಯೋನಮಃ ಶ್ರೀರಾಘವೇಂದ್ರಗುರುಭ್ಯೋನಮಃ

ಹರಿಃ ಓಂ.

**ಶ್ಲೋಕ॥ ಓಂ ನಮೋನಾರಾಯಣಾಯ ॥ ಓಂ ॥ ನಾರಾಯಣಾಯ ಪರಿಪೂರ್ಣಗುಣಾರ್ಣವಾಯ ವಿಶ್ವೋದಯ ಸ್ಥಿತಿ ಲಯೋನ್ನಯತಿಪ್ರದಾಯ ॥ ಜ್ಞಾನಪ್ರದಾಯವಿಬುಧಾಸುರಸೌಖ್ಯದುಃಖಸತ್ಕಾರಣಾಯವಿತತಾಯ ನಮೋನಮಸ್ತೇ ॥ ೧ ॥**

ಅರ್ಥ.—ಪರಿಪೂರ್ಣ ಗುಣಾರ್ಣವಾಯ, ಪರಿತಃ=ಎಲ್ಲಾ ದೇಶ ಕಾಲಗಳಲ್ಲಿಯೂ, ಪೂರ್ಣ=ಪೂರ್ಣಗಳಾದ, ಗುಣ=ಜ್ಞಾನಾನಂದಾದಿ ಗುಣಗಳಿಗೆ, ಅರ್ಣವಾಯ=ಸಮುದ್ರಪ್ರಾಯನಾದ, ವಿಶ್ವೋದಯ ಸ್ಥಿತಿ ಲಯೋನ್ನಯತಿಪ್ರದಾಯ, ವಿಶ್ವ=ಸರ್ವಜಗತ್ತಿಗೆ, ಉದಯ=ಉತ್ಪತ್ತಿ, ಸ್ಥಿತಿ=ಸಂರಕ್ಷಣ, ಲಯ=ನಾಶ, ಉನ್ನಯತಿ=ತತ್ವಾಭಿಮಾನಿ ದೇವತೆಗಳಲ್ಲಿ

ಇದ್ದು ಅವರನ್ನು ಪ್ರೇರಿಸುವುದರ ಮೂಲಕ ಜಗತ್ತಿಗೂ ಪ್ರೇರಣೆಯು, ಇವುಗಳನ್ನು, ಪ್ರದಾಯ=ಕೊಡುವ, ಜ್ಞಾನಪ್ರದಾಯ, ಜ್ಞಾನ=ಸಮ್ಯಗ್ ಜ್ಞಾನವನ್ನು, ಮಿಥ್ಯಾಜ್ಞಾನವನ್ನು, ಮಿಶ್ರಜ್ಞಾನವನ್ನು, (ತತ್ತದ್ಯೋಗ್ಯಚೇತನರಿಗೆ) ಪ್ರದಾಯ=ಕೊಡುವ, ವಿಬುಧಾಸುರ ಸೌಖ್ಯದುಃಖಸತ್ಕಾರಣಾಯ, ವಿಬುಧ=ದೇವತೆಗಳಿಗೂ, ಅಸುರ=ದೈತ್ಯರಿಗೂ, ಸೌಖ್ಯ=ಮುಕ್ತಿಯನ್ನು, ದುಃಖ=ತಮಸ್ಸನ್ನು ಕ್ರಮವಾಗಿ ಕೊಡುವ ವಿಷಯದಲ್ಲಿ, ಸತ್ಕಾರಣಾಯ=ಮುಖ್ಯ ಕಾರಣನಾದ, ವಿತತಾಯ=ವಿಶೇಷಾಕಾರದಿಂದ ವ್ಯಾಪ್ತನಾದ, ನಾರಾಯಣಾಯ=ಪರಬ್ರಹ್ಮನಾದ, ತೇ=ಪ್ರತ್ಯಕ್ಷನಾದ ನಿನಗೆ, ನಮೋ ನಮಃ=ನಮಸ್ಕಾರವು ನಮಸ್ಕಾರವು (ಆದರದಿಂದ ದ್ವಿರುಕ್ತಿಯು).

ತಾತ್ಪರ್ಯ.—ಬಾದರಾಯಣ ಪ್ರಣೀತ ಗ್ರಂಥಗಳಲ್ಲಿ ಬ್ರಹ್ಮ ಸೂತ್ರಗಳಂತೆ ಶ್ರೀ ಮನ್ಮಹಾಭಾರತವು ಉತ್ಕೃಷ್ಟವು. ಇದು ಗೂಢಾರ್ಥಗಳುಳ್ಳ ತತ್ವೋಪದೇಶಕ ಕಥೆಗಳಿಂದ ತುಂಬಿದ ಗ್ರಂಥವು. ಧರ್ಮಾರ್ಥ ಕಾಮ ಮೋಕ್ಷಾಖ್ಯ ಪುರುಷಾರ್ಥ ಚತುಷ್ಟಯಸಂಪಾದಕವಾದ ಉಪಾಯಾಮೃತಗಳನ್ನು ಮಳೆಗರೆಯುವ ಗ್ರಂಥರತ್ನವಾದಕಾರಣ 'ಭುಕ್ತಿವಿಮುಕ್ತೀ ಭಾರತತಃ' ಎಂದು ಹೇಳಿರುವರು. 'ಭಾರತವು ಅತಿ ವಿಸ್ತೃತವಾಗಿ ಪ್ರಮೇಯ ಭೂಯಿಷ್ಟದಿಂದ ಭಾರವತ್ತಾದ ಪ್ರಯುಕ್ತ ಸಂಕ್ಷೇಪತಃ ಮುಮುಕ್ಷುವಿಗೆ ತತ್ವಾರ್ಥವನ್ನು ತಿಳಿಸುವುದಕ್ಕೆ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯವನ್ನು ಮಾಡಿರಿ.' ಎಂದು ಶ್ರೀಮದಾನಂದ ತೀರ್ಥರು ವೇದವ್ಯಾಸರ ಸಂದರ್ಶನಕ್ಕೆ, ಎರಡನೇ ಆವರ್ತಿ ಬದರಿಕಾಶ್ರಮಕ್ಕೆ ದಯಮಾಡಿರಲು ವೇದವ್ಯಾಸರು ಶ್ರೀಮದಾಚಾರ್ಯರಿಗೆ ಅಪ್ಪಣೆಯನ್ನಿತ್ತರು. ಹೀಗೆ ಮಾಡಿದ ಆಜ್ಞೆಯನ್ನು ಶಿರಸಾವಹಿಸಿ, ಆನಂದತೀರ್ಥರು ಬದರಿಕಾಶ್ರಮದಿಂದ ಉಡುಪೀ ಕ್ಷೇತ್ರಕ್ಕೆ ಬಂದು, ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಗ್ರಂಥವನ್ನು ರಚಿಸಿದರು. ಆನಂದತೀರ್ಥರ ಹೃದಯದಲ್ಲಿ ನಾರಾಯಣನು ವಿಶೇಷ ಸನ್ನಿಹಿತನಾಗಿ ಇದ್ದಾನೆ. ಅವರಿಗೆ ವಿಘ್ನವೇ ಇಲ್ಲ. ಅದರಲ್ಲೂ ಹರಿಮಹಿಮೆ ಹೇಳುವುದರಲ್ಲಿ ವಿಘ್ನಾದಿಗಳು ಇಲ್ಲವೇ ಇಲ್ಲ. ಆದರೂ ಸಕಲ ಸಜ್ಜನರು ಗ್ರಂಥಾರಂಭದಲ್ಲಿ ಮಂಗಳಾಚರಣೆಯನ್ನು ಮಾಡಬೇಕೆಂಬ ಅಭಿಪ್ರಾಯದಿಂದಲೂ, ಪೂರ್ವ ಸಂಪ್ರದಾಯವನ್ನು ತೋರಿಸಬೇಕೆಂ

ತಲೂ, ಮತ್ತು ಮುಂದೆ ತಮ್ಮ ಶಿಷ್ಯರು ಮಂಗಳಾಚರಣೆ ಇಲ್ಲದೆ ಹರಿಮಹಿಮೆಯನ್ನು ಹೇಳಬಾರದೆಂತಲೂ, ತಾವೂ ಮಂಗಳಾಚರಣೆ ಮಾಡಿ ತೋರಿಸಿರುತ್ತಾರೆ. ನಿತ್ಯಾಪರೋಕ್ಷಿಗಳಾದ ಆಚಾರ್ಯರಿಗೆ ದೇವರು ಪ್ರತ್ಯಕ್ಷ ತೋರುತ್ತಿಹನಾದ್ದರಿಂದಲೇ, "ತೆ," ನಮೋನಮಃ ಎಂದು ಹೇಳಿರುವರು. ಆದರದಿಂದ ದ್ವಿರುಕ್ತಿ ಇರುತ್ತೆ. ನಾರಾಯಣನ ಸ್ವರೂಪ ತಿಳಿಯದೆ, ನಮಸ್ಕರಿಸಲು ಆಗುವುದಿಲ್ಲ, ಮತ್ತು ನಾರಾಯಣ ಶಬ್ದವು ಕೇವಲ ಸಾಂಕೇತಿಕವಲ್ಲ, ವಿಶಿಷ್ಟಾರ್ಥಪ್ರತಿಪಾದಕವಾದದ್ದು ಎಂಬ ಅರ್ಥ ತೋರಿಸುವುದಕ್ಕೆ "ಪರಿಪೂರ್ಣಗುಣಾರ್ಣವಾಯ" ಎಂದು ಪ್ರಯೋಗಿಸಿರುತ್ತಾರೆ. ಇದರಿಂದ ದೋಷವಿರುದ್ಧವಾದವು, ನಾರಾಃ ಗುಣಾಃ; ಅವುಗಳಿಗೆ, ಅಯನ=ಆಶ್ರಯವೆಂಬುವುದರಿಂದ ವಿಶಿಷ್ಟಾರ್ಥಪ್ರತಿಪಾದಕವಾಯಿತು. ಇಂಥವನಿಗೆ ಏನು ಲಕ್ಷಣವೆಂದರೆ, ಆಲಕ್ಷಣಗಳನ್ನು ಹೇಳುತ್ತಾರೆ. ಜಗತ್ತಿಗೆ ಸೃಷ್ಟಿ ಪಾಲನೆ ಸಂಹಾರ, ಮುಂತಾದುವುಗಳನ್ನು ಮಾಡಿದ್ದಾನೆ. ಸೃಷ್ಟಿ ಅಂದರೆ (೧) ಕೆಲವು ಜಡಪದಾರ್ಥಗಳಿಗೆ ಇಲ್ಲದೆ ಇರುವುದನ್ನು ಉಂಟುಮಾಡುವುದು, (೨) ಜೀವರುಗಳಿಗೆ ದೇಹಸಂಬಂಧವನ್ನುಂಟುಮಾಡುವುದು, (೩) ನಿತ್ಯವಾಗಿರುವ ಕೆಲವು ಜಡಪದಾರ್ಥಗಳಿಗೆ ಉಪಚಯವನ್ನು (ಅಭಿವೃದ್ಧಿ) ಕೊಡುವುದು, (೪) ಕೆಲವು ಜೀವರಿಗೆ ಪರಾಧೀನ ವಿಶೇಷಾವ್ಯಾಪ್ತಿಯು (ಇದು ಲಕ್ಷ್ಮೀ ದೇವಿಯರಿಗೆ ಮಾತ್ರ), ಆದರೆ ಸಕಲ ಜೀವರೂ ಪರಾಧೀನರು ಎಂದು ತಿಳಿಯಬೇಕು. ಅಂತು ಸೃಷ್ಟಿ ನಾಲ್ಕು ಪ್ರಕಾರ. ಇದರಂತೆ ಲಯವೂ ನಾಲ್ಕು ಪ್ರಕಾರವೆಂದು ತಿಳಿಯಬೇಕು. ಸಂರಕ್ಷಣೆ ಎಲ್ಲರಿಗೂ ಉಂಟು, ದೇವತೆಗಳಲ್ಲಿದ್ದು ಅವರನ್ನು ಪ್ರೇರಿಸಿ ಜಗತ್ತಿಗೆ ಪ್ರೇರಣೆಯನ್ನೂ ಬ್ರಹ್ಮಾದಿಗಳಿಗೆ ಜ್ಞಾನಪ್ರಕಾಶವನ್ನೂ ಮಾಡುತ್ತಾನೆ. ದೈತ್ಯರಿಗೆ ಅನ್ಯಥಾ ಜ್ಞಾನ ಹುಟ್ಟಿಸುತ್ತಾನೆ. ಸಕಲ ಜಗತ್ತಿಗೆಬಂಧಮೋಕ್ಷಗಳನ್ನುಕೊಡುತ್ತಾನೆ. (ಅಂದರೆ ದೇವತೆಗಳಿಗೆ ಮೋಕ್ಷ ದೈತ್ಯರಿಗೆ ತಮಸ್ಸು) ಇಂತಹ ಸ್ವಾಮಿ ಸ್ವಷ್ಟ್ಯಾದ್ಯಷ್ಟಕರ್ತೃ ಸರ್ವಾಂತರ್ಯಾಮಿಯಾಗಿ ಸರ್ವ ಜಗತ್ತಿನಲ್ಲಿಯೂ ಇರುವನು. ಪೂಜ್ಯರಾದ ಬ್ರಹ್ಮಾದಿ ದೇವತೆಗಳಿರುವಾಗ ನಾರಾಯಣನಿಗೆ ಏನು ಕಾರಣ ನಮಸ್ಕಾರ ಮಾಡಬೇಕೆಂದಲ್ಲಿ, ದೋಷವಿರೋಧವಾದ ಗುಣಗಳಿಗೆ ಆಶ್ರಯನಾದ ಕಾರಣ ಸರ್ವೋತ್ತಮನು. ಆದುದರಿಂದಲೆ ಅವನಿಗೆ ನಮ

ಸ್ಕಾರ ಮಾಡಿರುತ್ತಾರೆ. ಬ್ರಹ್ಮಾದಿದೇವತೆಗಳು ಗುಣಬದ್ಧರು. ನಾರಾಯಣನು ಸತ್ವಾದಿಗುಣರಹಿತ ಎಂದು ತಿಳಿಯಬೇಕು.

**ಶ್ಲೋಕ॥ ಆಸೀದುದಾರಗುಣವಾರಿಧಿರಪ್ರಮೇಯೋ। ನಾರಾಯಣಃಪರತಮಃಪರಮಾತ್ಸಏಕಃ॥ಸಂಶಾಂತಸಂವಿದಖಿಲಂ ಜಠರೇನಿಧಾಯ ಲಕ್ಷ್ಮೀಭುಜಾಂತರ ಗತಃ ಸ್ವರತೋಽಪಿಚಾಗ್ರೇ ॥ ೨ ॥**

ಅರ್ಥ.–ಅಗ್ರೇ=ಜಗತ್ಸೃಷ್ಟಿಗೆ ಪೂರ್ವದಲ್ಲಿ (ಪ್ರಳಯ ಕಾಲದಲ್ಲಿ) ಉದಾರಗುಣವಾರಿಧಿಃ ; ಉದಾರ=ಉತ್ಕೃಷ್ಟವಾದ, ಗುಣ=ಜ್ಞಾನಾನಂದಾದಿಗುಣಗಳಿಗೆ, ವಾರಿಧಿಃ=ಸಮುದ್ರಪ್ರಾಯನಾಗಿರುವ, ಅಪ್ರಮೇಯಃ=ತಿಳಿಯಲು ಅಶಕ್ಯನಾದ, ಪರಮಾತ್=ಲಕ್ಷ್ಮೀಬ್ರಹ್ಮಾದಿಗಳಿಗಿಂತಲೂ, ಪರಮಃ=ಅತ್ಯುತ್ತಮನಾದ, ಏಕಃ=ಸ್ವಗತಭೇದವಿವರ್ಜಿತನಾದ, ಸಂಶಾಂತಸಂವಿತ್=ಸಂಶಾಂತ=ಲೀನವಾದ, ಸಂವಿತ್=ಜ್ಞಾನವುಳ್ಳ, ಅಖಿಲಂ=ಚೇತನಾಚೇತನವಾದ ಪ್ರಪಂಚವನ್ನು, ಜಠರೇ=ಹೊಟ್ಟೆಯಲ್ಲಿ, ನಿಧಾಯ=ಇಟ್ಟುಕೊಂಡು, ಸ್ವರತೋಽಪಿ=ಸ್ವರಮಣನಾದರೂ, ಲಕ್ಷ್ಮೀಭುಜಾಂತರಗತಃ=ತನ್ನ ಭುಜದಲ್ಲಿ ಲಕ್ಷ್ಮಿಯನ್ನು ಅಡಗಿಸಿಕೊಂಡ (ಸಃ=ಪ್ರಸಿದ್ಧನಾದ) ನಾರಾಯಣ=ನಾರಾಯಣನು, ಆಸೀತ್=ಇದ್ದನು.

ತಾತ್ಪರ್ಯ.—ಮಂಗಳಾಚರಣದಿಂದಲೆ ಸರ್ವ ಶಾಸ್ತ್ರಾರ್ಥವೂ ಹೇಳಿದಂತಾಯಿತು. ಮುಂದಿನ ಗ್ರಂಥವು ಏತಕ್ಕೆಂದು ಪ್ರಶ್ನೆಯು ಬಂದರೆ, ದೇವತೆಗಳ ತಾರತಮ್ಯವು ಸೃಷ್ಟಿ ಲಯಗಳಲ್ಲಿ ವ್ಯಕ್ತವಾಗಿ ತಿಳಿಯುತ್ತದೆ. ಶಾಸ್ತ್ರವೆಲ್ಲವೂ ಈ ತಾರತಮ್ಯ ಜ್ಞಾನಪೂರ್ವಕವಾಗಿ ಪರಮಾತ್ಮನ ಉತ್ತಮತೆಯನ್ನು ಹೇಳುವುದರಲ್ಲಿ ಅಭಿಪ್ರಾಯವುಳ್ಳವು. ಆದುದರಿಂದ ಜಗತ್ಸೃಷ್ಟಿಗೆ ಕಾರಣನಾದ ಪರಮಾತ್ಮನು ಜಗದುತ್ಪತ್ತಿಯ ಮುಂಚೆ ಹೇಗಿದ್ದನೆಂಬುದನ್ನು (ಕಾರಣವು ಕಾರ್ಯಕ್ಕಿಂತ ಮುಂಚೆ ಇರುವುದು) ಈ ಗ್ರಂಥದಿಂದ ಹೇಳುತ್ತಾರೆ. ಪ್ರಳಯಕಾಲದಲ್ಲಿ ತಾನೊಬ್ಬನೆ ಇರುತ್ತಾನೆಂಬುದು 'ಆತ್ಮಾವಾ ಇದಮೇಕ ಏವಾಗ್ರ ಆಸೀತ್, ನಾನ್ಯತ್ಕಿಂಚನ ಮಿಷತ್' ಎಂದು ಐತರೇಯ ಶ್ರುತಿಯಲ್ಲಿ ಹೇಳಿರುತ್ತೆ. ದೇವರು ಜ್ಞಾನಾನಂದಾದಿ ಅನೇಕ ಅಪ್ರಾಕೃತ ಗುಣಗಳಿಂದ ತುಂಬಿರುವನು. ಆತನನ್ನು ಸಮಗ್ರ

ವಾಗಿ ತಿಳಿಯಲು ರಮಾಬ್ರಹ್ಮಾದಿಗಳಿಗೆ ಸಾಧ್ಯವಲ್ಲ. ಆತನು ಚೇತನಾಚೇತನ ಪ್ರಪಂಚಕ್ಕೆ ನಿಯಾಮಕನು. ಆತನ ಜ್ಞಾನಕ್ಕೆ ವಿಕಾರಾದಿಗಳಿಲ್ಲ. ಬ್ರಹ್ಮಾದಿಗಳ ಜ್ಞಾನಕ್ಕೆ ವಿಕಾರವುಂಟು. ಇವರುಗಳ ಜ್ಞಾನವು ನಾರಾಯಣನ ವಶದಲ್ಲಿರುತ್ತದೆ. ಮುಕ್ತಾಮುಕ್ತ ಪ್ರಪಂಚವನ್ನು ಪ್ರಳಯದಲ್ಲಿ ತನ್ನ ಉದರದಲ್ಲಿಟ್ಟುಕೊಂಡು, ತಾನೊಬ್ಬನೇ ಲಕ್ಷ್ಮಿಯನ್ನು ಭುಜಾಂತರದಲ್ಲಿ ಅಪ್ಪಿಕೊಂಡು ರಮಿಸುವನು. ಸ್ವರಮಣನಾದರೂ ಲಕ್ಷ್ಮೀದೇವಿಗೆ ಸುಖ ಹೆಚ್ಚಿಸುವುದಕ್ಕಾಗಿ ಅವರನ್ನು ಅಪ್ಪಿಕೊಂಡು ಪ್ರಳಯದಲ್ಲಿರುತ್ತಾನೆ.

**ಶ್ಲೋಕ॥ ತಸ್ಯೋದರಸ್ಥಜಗತಃಸದಮಂದಸಾಂದ್ರಸ್ವಾನಂದತುಷ್ಟವಪುಷೋಪಿ ರಮಾರಮಸ್ಯ॥ ಭೂತ್ಯೈ ನಿಜಾಶ್ರಿತಜನಸ್ಯ ಹಿ ಸೃಜ್ಯಸೃಷ್ಟಾವೀಕ್ಷಾ ಬಭೂವ ಪರನಾಮನಿಮೇಷಕಾಂತೇ॥೩॥**

ಅರ್ಥ.— ಪರನಾಮನಿಮೇಷಕಾಂತೇ=ಪರನಾಮ- (ಬ್ರಹ್ಮದೇವರ ಒಂದು ನೂರು ವರ್ಷಕ್ಕೆ ಪರವೆಂದು ಹೆಸರು) ಪರವೆಂಬ ಹೆಸರುಳ್ಳ ಬ್ರಹ್ಮದೇವರ ಒಂದುನೂರು ವರ್ಷವು ದೇವರಿಗೆ ಒಂದು ಸಲ ರೆಪ್ಪೆ ಬಡಿಯುವುದೆಂದು ಉಪಚಾರವಾಗಿ ಹೇಳಿದೆಯೆಂದು ತಿಳಿಯಬೇಕು. ಇಲ್ಲವಾದರೆ ಅನಾದ್ಯನಂತನಾದ ದೇವರಿಗೆ ಆಯುರ್ಗಣನೆ ಮಾಡಬೇಕಾಗುತ್ತದೆ. ನಿಮೇಷಕ=ರೆಪ್ಪೆ ಹಾಕುವುದರ, ಅಂತೇ=ಕಡೆಯ ಭಾಗದಲ್ಲಿ ಅಂದರೆ ಬ್ರಹ್ಮ ಪ್ರಳಯದ ನೂರುವರ್ಷದ ಕಡೆಯ ಹನ್ನೆರಡೂವರೆ ವರ್ಷವೆಂದು ತಿಳಿಯಬೇಕು) ಉದರಸ್ಥಜಗತಃ=ಉದರಸ್ಥ=ಉದರದಲ್ಲಿರುವ ಜಗತ್ತು ಉಳ್ಳ, ಸದಮಂದಸಾಂದ್ರಸ್ವಾನಂದತುಷ್ಟವಪುಷಃ=ಸತ್-ನಿರ್ದುಷ್ಟವಾದ, ಅಮಂದ-ಪೂರ್ಣನಾದ, ಸಾಂದ್ರ=ನಿಬಿಡವಾದ, ಸ್ವಾನಂದ=ಸ್ವರೂಪಾನಂದದಿಂದಲೇ, ತುಷ್ಟ=ತೃಪ್ತಿಯನ್ನು ಹೊಂದಿದ, ವಪುಷಃ-ದೇಹವುಳ್ಳ, ರಮಾರಮಸ್ಯ=ರಮಾ=ರಮಾದೇವಿಯರಿಗೆ, ರಮಸ್ಯ-ರಮಣವನ್ನು ಮಾಡಿಸುವ, ತಸ್ಯ=ಆ ಪರಮಾತ್ಮನಿಗೆ, ನಿಜಾಶ್ರಿತಜನಸ್ಯ=ನಿಜ=ತನ್ನನ್ನು, ಆಶ್ರಿತ=ಆಶ್ರಯಿಸಿರುವ, ಜನಸ್ಯ-ಭಗವದ್ಭಕ್ತರಿಗೆ, ಭೂತ್ಯೈ=ಮೋಕ್ಷಾದಿ ಪುರುಷಾರ್ಥವನ್ನು ಕೊಡಲಿಕ್ಕೆ, ಸೃಜ್ಯಸೃಷ್ಟಾ=ಈ ಕಲ್ಪದಲ್ಲಿ ಸೃಷ್ಟಿಗೆ ಬರುವವರ ಸೃಷ್ಟಿಯ ವಿಚಾರದಲ್ಲಿ, ಈಕ್ಷಾ=ಅಪೇಕ್ಷೆಯು, ಬಭೂವ=ಆಯಿತು, ಹಿ=ಪ್ರಸಿದ್ಧವು.

ತಾತ್ಪರ್ಯ. ಇಂತಹ ಲಕ್ಷ್ಮೀಪತಿಯು ಮುಂದೆ ಏನು ಮಾಡಿದನೆಂದರೆ, ಪ್ರಳಯಕಾಲದಲ್ಲಿ ತನ್ನ ಉದರದಲ್ಲಿದ್ದ ಈ ಕಲ್ಪಕ್ಕೆ ಸೃಷ್ಟಿಗೆ ಬರುವ ಲಿಂಗದೇಹ ಸಹಿತರಾದ ಜೀವರಿಗೆ ಸ್ಥೂಲ ಶರೀರ ಕೊಟ್ಟು ಸೃಷ್ಟಿ ಮಾಡಬೇಕೆಂದು, ಬ್ರಹ್ಮದೇವರ ನೂರು ವರ್ಷದ ಪ್ರಳಯ ಕಾಲದ ಕಡೆಯ ಹನ್ನೆರಡೂವರೆ ವರ್ಷಗಳ ಒಳಗೆ ಲಕ್ಷ್ಮಿಯಿಂದ ಸೃಷ್ಟಿ ಮಾಡಬೇಕೆಂದು ಸ್ತೋತ್ರ ಮಾಡಿಸಿಕೊಂಡು ಸೃಷ್ಟಿಸಲಿಕ್ಕೆ ಸ್ವಾಮಿ ಇಚ್ಛೆಮಾಡಿದನು. ಲಿಂಗಭಂಗ ಉಳ್ಳಂಥಾ ಮುಕ್ತರಿಗೂ ಪ್ರಾಪ್ತ ತಮಸ್ಕರಿಗೂ ಸ್ಥೂಲದೇಹ ಕೊಡುವುದಿಲ್ಲ. ಲಿಂಗದೇಹ ಉಳ್ಳ ತ್ರಿವಿಧ ಜೀವರಿಗೆ ಸ್ಥೂಲ ಶರೀರ ಕೊಟ್ಟು ಸೃಷ್ಟಿಮಾಡುತ್ತಾನೆ. ತಾನು ನಿರಪೇಕ್ಷನಾದರೂ ಉತ್ತಮ ಜೀವರಿಗೆ ಅನುಗ್ರಹಮಾಡಿ ಮೋಕ್ಷ ಕೊಡುವುದಕ್ಕೂ ಮತ್ತು ಉತ್ತಮಾಧಿಕಾರಿಗಳಿಗೆ ಮುಕ್ತಿಯಲ್ಲಿ ಆನಂದೋದ್ರೇಕವೆಂದರೆ ಆನಂದಾತಿಶಯವನ್ನು ಕೊಡಬೇಕಾಗಿ ಸ್ವಾಮಿಯು ಜಗತ್ಸೃಷ್ಟಿಯ ವ್ಯಾಪಾರವನ್ನು ಮಾಡುತ್ತಾನೆ. ತನ್ನ ಭಕ್ತರಿಗೆ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಹೆಚ್ಚಿಸಿಕೊಡುವನು. ಅಭಕ್ತರಿಗೆ ಅಜ್ಞಾನ ಹೆಚ್ಚಿಸಿಕೊಡುವನು, ನಿತ್ಯಸಂಸಾರಿಗಳಿಗೆ ಮಿಶ್ರಜ್ಞಾನದಿಂದ ಸುಖದುಃಖ ಮಿಶ್ರಾನುಭವವನ್ನು ಕೊಡುವುದಕ್ಕಾಗಿ ಜಗದ್ವ್ಯಾಪಾರ ಮಾಡುತ್ತಾನೆ. ಬ್ರಹ್ಮದೇವರ ನೂರುವರ್ಷ ಸೃಷ್ಟಿ, ನೂರುವರ್ಷ ಪ್ರಳಯ, ಇದು ದೇವರಿಗೆ ನಿಮೇಷವೆಂದು ಉಪಚಾರಕ್ಕೆ ಹೇಳುತ್ತಾರೆ. ಇದರಿಂದ ದೇವರಿಗೆ ಆಯುಃಪರಿಮಿತಿಯನ್ನು ಹೇಳಬಾರದು. ದೇವರು ಶಶ್ವದೇಕಪ್ರಕಾರನಾಗಿ ಅನಾದ್ಯನಂತ ಕಾಲದಲ್ಲಿಯೂ ಇದ್ದಾನೆ. ಇಂತಹ ಪರಮಾತ್ಮ ಸೃಜ್ಯರನ್ನು ಹುಟ್ಟಿಸಬೇಕೆಂದು ಇಚ್ಛೆಮಾಡಿದನು.

**ಶ್ಲೋಕ ॥ ದೃಷ್ಟ್ವಾ ಸಚೇತನ ಗಣಾನ್ ಜಠರೇಶಯಾನಾನಾನಂದಮಾತ್ರವಪುಷಃ ಸೃತಿವಿಪ್ರಮುಕ್ತಾನ್ । ಧ್ಯಾನಂಗತಾನ್ ಸೃತಿಗತಾಂಶ್ಚ ಸುಷುಪ್ತಿಸಂಸ್ಥಾನ್ ಬ್ರಹ್ಮಾದಿಕಾನ್ ಕಲಿಪರಾನ್ ಮನುಜಾಂಸ್ತಥೈಕ್ಷತ್ ॥೪॥**

**ಸ್ರಕ್ಷ್ಯೇಹಿ ಚೇತನಗಣಾನ್ ಸುಖದುಃಖಮಧ್ಯ ಸಂಪ್ರಾಪ್ತಯೇ ತನುಭೃತಾಂವಿಹೃತಿಂಮಮೇಚ್ಛನ್ ॥ ಸ್ವೋಯಂವಿಹಾರ ಇಹಮೇತನುಭೃತ್ ಸ್ವಭಾವ ಸಂಭೂತಯೇ ಭವತಿ ಭೂತಿಕೃದೇವಭೂತ್ಯಾಃ ॥೫॥**

ಅರ್ಥ.— ಸಃ= ಆ ನಾರಾಯಣನು, ಜಠರೇ= ಉದರದಲ್ಲಿ, ಶಯಾನಾನ್= ಮಲಗಿರುವ, ಚೇತನಗಣಾನ್= ಭಕ್ತರನ್ನೂ ಸಂಸಾರಿಗಳನ್ನೂ, ದೃಷ್ಟ್ವಾ= ನೋಡಿ ( ಮುಕ್ತರ ವಿಭಾಗವನ್ನೂ, ಸ್ವರೂಪವನ್ನೂ ಹೇಳುತ್ತಾರೆ. ಧ್ಯಾನಸಂಗತಾನ್- ಧ್ಯಾನವನ್ನು ಹೊಂದಿದ, ಸೃತಿವಿಪ್ರಮುಕ್ತಾನ್ = ಸಂಸಾರದಿಂದ ಬಿಡುಗಡೆ ಹೊಂದಿದ, ಆನಂದಮಾತ್ರವಪುಷಃ=ಆನಂದ ಸ್ವರೂಪರಾಗಿರತಕ್ಕ ಮುಕ್ತರನ್ನೂ ಮತ್ತು, ಸೃತಿಗತಾನ್=ಸೃಷ್ಟಿಯನ್ನು ಹೊಂದತಕ್ಕ, ಸುಷುಪ್ತಿಸಂಸ್ಥಾನ್- ಅನ್ಯಥಾ ಜ್ಞಾನ, ಅಜ್ಞಾನವಲ್ಲಿರುವ, ಬ್ರಹ್ಮಾದಿಕಾನ್= ಬ್ರಹ್ಮದೇವರೇ ಮುಂತಾದ ಮುಕ್ತಿಯೋಗ್ಯರನ್ನು, ಕಲಿಪರಾನ್=ಕಲಿಯೇ ಕಡೆಯಾದ ದೈತ್ಯರನ್ನು, ತಥಾ= ಹಾಗೆಯೇ, ಮನುಜಾನ್-ನಿತ್ಯ ಸಂಸಾರಿಗಳನ್ನೂ, ಐಕ್ಷತ್-ನೋಡಿದನು.

ಸೃಷ್ಟಿಯ ಪ್ರಯೋಜನವನ್ನು ಹೇಳುತ್ತಾರೆ.— ತನುಭೃತಾಂ=ತ್ರಿವಿಧ ಪ್ರಾಣಿಗಳಿಗೆ, ಸುಖದುಃಖಮಧ್ಯಸಂಪ್ರಾಪ್ತಯೇ= ಸುಖದುಃಖ, ಸುಖದುಃಖ ಮಿಶ್ರಗಳನ್ನು ಉಂಟುಮಾಡುವುದಕ್ಕೂ ಮತ್ತು ಮಮ= ನನ್ನ ( ಪರಮಾತ್ಮನ ) ರೂಪಗಳಿಗೆ, ವಿಹೃತಿಂ=ವಿಹಾರವನ್ನು (ಅವತಾರಗಳನ್ನು ವ್ಯಕ್ತಪಡಿಸುವಿಕೆ) ಇಚ್ಛನ್=ಅಪೇಕ್ಷಿಸಿದ, ಮೇ= ನನ್ನ, ಸೋಽಯಂವಿಹಾರಃ-ಅನಸ್ಯವಿಹಾರವು, ಇಹ= ಈ ಸಂಸಾರದಲ್ಲಿ, ತನುಭೃತ್ಸ್ವಭಾವಸಂಭೂತಯೇ, ತನುಭೃತ್= ಪ್ರಾಣಿಗಳ, ಸ್ವಭಾವಸಂಭೂತಯೇ=ಸ್ವಭಾವ ಪ್ರಾಪ್ತಿಗೋಸುಗವು, ಮತ್ತು ಭೂತ್ಯೈ= ಪ್ರಕೃತಿ ನಿಯಾಮಕಳಾದ ಲಕ್ಷ್ಮಿಗೂ ಕೂಡ, ಭೂತಿಕೃತ್= ನಿಯಾಮಕವಾದ ಅನೇಕ ರೂಪಗಳನ್ನು ಹೊಂದುವುದಕ್ಕೂ ( ಜೀವರಿಗೆ ಪುತ್ರಪೌತ್ರಾದಿ ಪ್ರಾಪ್ತಿಗೂ ) ಭವತಿ- ಆಗುತ್ತದೆ.

ತಾತ್ಪರ್ಯ.— ಮುಕ್ತರಾದ ಬ್ರಹ್ಮಾದಿಗಳು ಲಿಂಗಭಂಗ ಉಳ್ಳವರಾಗಿ ಆನಂದ ದೇಹದಿಂದ ಪರಮಾತ್ಮನನ್ನು ಧ್ಯಾನ ಮಾಡುತ್ತಾ ಪರಮಾತ್ಮನ ಉದರದಲ್ಲಿರುತ್ತಾರೆ. ತಮೋಯೋಗ್ಯರು ಲಿಂಗಭಂಗರಾಗಿ ತಮಸ್ಸಿನಲ್ಲಿ ಇದ್ದು ನಾರಾಯಣನನ್ನು ದ್ವೇಷಮಾಡುತ್ತಾ ಉದರದಲ್ಲಿಯೇ ಇರುತ್ತಾರೆ. ಲಿಂಗಭಂಗವಿಲ್ಲದ ಮೋಕ್ಷಯೋಗ್ಯರು, ತಮೋಯೋಗ್ಯರು, ನಿತ್ಯ ಸಂಸಾರಿಗಳು ಸುಷುಪ್ತ್ಯವಸ್ಥೆಯಲ್ಲಿರುತ್ತಾರೆ- ಬ್ರಹ್ಮಾದಿಗಳು ಅಂದರೆ ಶಿವ ಶೇಷ,

ಗರುಡ ಶೇಷ ದೇವಾಗಿ ಪುರುಷೋತ್ತಮರು, ಮನುಷ್ಯಾಧಮರು, ಕಲಿ ಮೊದಲಾದವರು ಸುಷುಪ್ತ್ಯವಸ್ಥೆಯಲ್ಲಿರುತ್ತಾರೆ. ಸುಷುಪ್ತ್ಯವಸ್ಥೆ ಅಂದರೆ ಕಣ್ಣು ತೆರೆದು ನೋಡುವುದಿಲ್ಲ. ಬ್ರಹ್ಮ, ವಾಯು ಲಕ್ಷ್ಮೀದೇವಿಯರಿಗೆ ಸುಷುಪ್ತಿ ಇಲ್ಲ. ಆದರೆ ಉನ್ಮೇಷಣ ಸ್ವಾತಂತ್ರ್ಯವಿಲ್ಲ. ಉನ್ಮೇಷಣವೆಂದರೆ ಕಣ್ಣು ತೆರೆದು ಮುಚ್ಚುವುದು. ಇವರುಗಳ ಉಸರು ಬಿಡುವ ವ್ಯಾಪಾರ ವ್ಯಾಪಾರ ಮೊದಲಾದವುಗಳು ನಾರಾಯಣನಧೀನ. ಲಿಂಗ ಭಂಗ ಉಳ್ಳವರಿಗೆ ಸ್ಥೂಲ ಶರೀರ ಕೊಡುವುದಿಲ್ಲ. ಲಿಂಗ ದೇಹ ಉಳ್ಳಂಥಾ ತ್ರಿವಿಧ ಜೀವರಿಗೆ ಸ್ಥೂಲ ಶರೀರವನ್ನು ಕೊಡುವನು. ಸಜ್ಜನರಿಗೆ ಮೋಕ್ಷ ಕೊಡುವುದಕ್ಕೂ, ತಮೋಯೋಗ್ಯರಿಗೆ ದುಃಖ ಕೊಡುವುದಕ್ಕೂ, ನಿತ್ಯ ಸಂಸಾರಿಗಳಿಗೆ ಸುಖ ದುಃಖ ಮಿಶ್ರಗತಿ ಕೊಡುವುದಕ್ಕೂ ಜಗತ್ತನ್ನು ಸೃಷ್ಟಿಸಿದನು. ಕ್ರೀಡೆಮಾಡಲಿಚ್ಛಿಸಿ ಲಕ್ಷ್ಮೀದೇವಿಯರಲ್ಲಿ ರಮಿಸಿ, ಆಕೆಗೆ ಬ್ರಹ್ಮಾದಿ ಪುತ್ರಪೌತ್ರಾದಿ ಸರ್ವ ಸಂಪತ್ತನ್ನು ಕೊಡುವುದಕ್ಕೆ ಜಗತ್ ಸೃಷ್ಟಿಮಾಡಲಪೇಕ್ಷಿಸಿದನು.

**ಶ್ಲೋಕ** || ಇತ್ಥಂವಿಚಿಂತ್ಯಪರಮಃ ಸತು ವಾಸುದೇವ ನಾಮಾಬಭೂವ ನಿಜ
ಮುಕ್ತಿಪದಪ್ರದಾತಾ || ತಸ್ಯಾಜ್ಞಯೈವನಿಯತಾಥ ರಮಾಪಿರೂಪಂ
ಬಭ್ರೇದ್ವಿತೀಯಮಪಿಯತ್ಪ್ರವದಂತಿಮಾಯಾಂ ||೬||

ಅರ್ಥ.— ಪರಮಃ=ಪರ=ಉತ್ಕೃಷ್ಟನಾದ, ಮ=ಜ್ಞಾನವುಳ್ಳ (ಬುದ್ಧಿ) ಅಂದರೆ ಸರ್ವಜ್ಞನಾದ, ಸತು=ಆ ನಾರಾಯಣನು, ಇತ್ಥಂ=ಹಿಂದೆ ಹೇಳಿದ ರೀತಿಯಾಗಿ, ವಿಚಿಂತ್ಯ-ಯೋಚಿಸಿ, ನಿಜಮುಕ್ತಿಪದಪ್ರದಾತಾ=ನಿಜ=ತನ್ನ ಭಕ್ತರಿಗೆ, ಮುಕ್ತಿಪದ-ಮೋಕ್ಷಸ್ಥಾನವನ್ನು, ಪ್ರದಾತಾ=ಕೊಡುವವನು, ಆದುದರಿಂದಲೇ, ವಾಸುದೇವನಾಮಾ=ವಾಸುದೇವನೆಂಬ ಹೆಸರು ಉಳ್ಳವನಾಗಿ, ಬಭೂವ-ಆದನು. ತಸ್ಯ=ಪರಮಾತ್ಮನ, ಅಜ್ಞಯೈವ-ಅಪ್ಪಣೆಯಿಂದಲೇ, ನಿಯತಾ=ಬದ್ಧಳಾದ ಅಂದರೆ ಅಪ್ಪಣೆಗೆ ಒಳಪಟ್ಟಿರುವ ರಮಾಪಿ=ರಮಾದೇವಿಯೂ ಸಹ, ಅಥ=ಅನಂತರದಲ್ಲಿ, ಯತ್=ಯಾವ ಲಕ್ಷ್ಮೀರೂಪವನ್ನು, ಜ್ಞಾನಿಗಳು, ಮಾಯಾಂ-ಮಾಯಾದೇವಿ ಎಂಬುದಾಗಿ ಪ್ರವದಂತಿ-ಹೇಳುತ್ತಾರೋ, ಅಂಥಾ ದ್ವಿತೀಯಮಪಿ-ಎರಡನೇ ರೂಪವನ್ನು, ಬಭ್ರೆ=ಧರಿಸಿದಳು.

ತಾತ್ಪರ್ಯ.— ಶುದ್ಧ ಸೃಷ್ಟಿಯನ್ನು ಮತ್ತು ಪರಾಧೀನ ವಿಶೇಷಾನ್ಯಾಸ್ತಿರೂಪವಾದ ಲಕ್ಷ್ಮೀ ಸೃಷ್ಟಿಯನ್ನು ಸಹ ಹೇಳುತ್ತಾರೆ. ಲಕ್ಷ್ಮೀಪತಿಯು ಮತ್ತು ಲಕ್ಷ್ಮಿಯು ಅವತಾರಗಳು ನಿತ್ಯವಾದವುಗಳು. ತನ್ನ ಭಕ್ತರುಗಳಿಗೆ ಮೋಕ್ಷ ಕೊಡೋಣವೆ. ಈ ಅವತಾರಗಳಿಗೆ ಪ್ರಯೋಜನವು, ಅವುಗಳನ್ನು ವ್ಯಕ್ತವಾಡಿ ನಾರಾಯಣನು ಭಕ್ತರಿಗ ಮೋಕ್ಷ ಕೊಡಬೇಕೆಂದು ವಾಸುದೇವರೂಪನಾದನು. ಲಕ್ಷ್ಮೀದೇವಿಯು ಆತನ ಆಜ್ಞಾನುಸಾರವಾಗಿ ಮಾಯಾದೇವಿಯಾದಳು.

**ಶ್ಲೋಕ || ಸಂಕರ್ಷಣಃ ಸಚಬಭೂವ ಪುನಃ ಸುನಿತ್ಯಃ ಸಂಹಾರಕಾರಣವಪುಃ**
**ತದನುಜ್ಞಯೈವ || ದೇವೀಚಯೇತ್ಯನುಬಭೂವ ಸಸೃಷ್ಟಿಹೇತೋಃ**
**ಪ್ರದ್ಯುಮ್ನತಾಮುಪಗತಃ ಕೃತಿತಾಂಚದೇವಿ ||೭||**

ಅರ್ಥ.— ಪುನಃ ಅದೇ ಶುದ್ಧ ಸೃಷ್ಟಿಯನ್ನೇ ಹೇಳುತ್ತಾರೆ. ಸಃ= ಆ ನಾರಾಯಣನು, ಪುನಃ=ವಾಸುದೇವನ ಅನಂತರ, ಸಂಹಾರಕಾರಣವಪುಃ-ಸಂಹಾರಕರ್ತೃರೂಪವುಳ್ಳ, ಸುನಿತ್ಯಃ=ಸನಾತನನಾಗಿರುವ, (ಈ ಸುನಿತ್ಯಃ ಎಂಬ ಪದವು ಎಲ್ಲಾ ಅವತಾರಕ್ಕೂ ಅನ್ವಯಿಸುವುದು.) ಸಂಕರ್ಷಣಃ=ಸಂಕರ್ಷಣ ರೂಪನಾಗಿ, ಬಭೂವ=ಆದನು. ದೇವಿ=ಲಕ್ಷ್ಮೀದೇವಿಯು, ತದನುಜ್ಞಯೈವ-ಆ ಪರಮಾತ್ಮನ ಆಜ್ಞೆಯಿಂದಲೇ, ಜಯೇತಿ=ಜಯಾ ಎಂಬ ಹೆಸರಿನಿಂದ, ಅನುಬಭೂವ-ಪರಮಾತ್ಮನ ಅನಂತರ ಅವತಾರವಾಡಿದಳು. ಸಃ=ಆ ನಾರಾಯಣನು, ಸೃಷ್ಟಿಹೇತೋಃ=ಸೃಷ್ಟಿಮಾಡುವುದಕ್ಕೋಸ್ಕರ, ಪ್ರದ್ಯುಮ್ನತಾಂ=ಪ್ರದ್ಯುಮ್ನ ರೂಪವನ್ನು, ಉಪಗತಃ-ಹೊಂದಿದನು. ದೇವೀಚ=ಲಕ್ಷ್ಮಿಯೂ ಕೂಡ, ಕೃತಿತಾಂ-ಕೃತೀರೂಪವನ್ನು, ಉಪಗತಾ=ಹೊಂದಿದಳು.

ತಾತ್ಪರ್ಯ.— ಸೃಷ್ಟಿ ಸಂಹಾರಕ್ಕಾಗಿ ಪರಮಾತ್ಮನು ಸಂಕರ್ಷಣನಾಗಿ ಅವತರಿಸಿದನು. ರಮಾದೇವಿಯು ಆತನ ಆಜ್ಞಾನುಸಾರವಾಗಿ ಜಯಾದೇವಿಯಾದಳು. ಆ ನಾರಾಯಣನೇ ಸೃಷ್ಟಿ ಮಾಡುವುದಕ್ಕಾಗಿ ಪ್ರದ್ಯುಮ್ನನಾಗಿ ಅವತರಿಸಿದನು. ರಮಾದೇವಿಯು ಆತನ ಹೆಂಡತಿ ಕೃತೀದೇವಿಯಾದಳು.

ಶ್ಲೋಕ || ಸೃಷ್ಟ್ಯೈ ಪುನಃ ಸಭಗವಾನನಿರುದ್ಧನಾಮಾ ದೇವೀಚ ಶಾಂತಿರಭ
ವಚ್ಛರದಾಂ ಸಹಸ್ರಂ | ಸ್ಥಿತ್ವಾಸ್ವಮೂರ್ತಿಭಿರಮೂಭಿ ರಚಿಂತ್ಯಶ
ಕ್ತಿಃ ಪ್ರದ್ಯುಮ್ನರೂಪಕ ಇಮಾಂಶ್ಚರಮಾತ್ಮನೇದಾತ್ ||೮||

ಅರ್ಥ.— ಪುನಃ= ಮತ್ತೆ, ಸಭಗವಾನ್= ಆ ನಾರಾಯಣನು, ಸೃಷ್ಟ್ಯೈ = ಪ್ರಪಂಚವನ್ನು ಸಂರಕ್ಷಣೆ ಮಾಡುವುದಕ್ಕಾಗಿ, ಅನಿರುದ್ಧನಾಮಾ- ಅನಿರುದ್ಧನೆಂಬ ಹೆಸರುಳ್ಳ ರೂಪವುಳ್ಳವನು, ಅಭವತ್=ಆದನು. ದೇವೀಚ= ಲಕ್ಷ್ಮಿಯೂ ಕೂಡ, ಶಾಂತಿಃ- ಶಾಂತಿರೂಪಳಾಗಿ, ಅಭವತ್ = ಆದಳು, ಅಮೂಭಿಃ- ಈ, ಸ್ವಮೂರ್ತಿಭಿಃ=ವಾಸುದೇವಾದಿ ರೂಪಗಳಿಂದ, ಶರದಾಂ ಮನುಷ್ಯಮಾನ ವರ್ಷಗಳ, ಸಹಸ್ರಂ=ಸಾವಿರ ಪರಿಯಂತರ, ಸ್ಥಿತ್ವಾ=ಸುಮ್ಮನೆ ಇದ್ದು, ಅಚಿಂತ್ಯಶಕ್ತಿಃ=ಅಪರಿಮಿತವಾದ ಶಕ್ತಿಯುಳ್ಳ, ಪ್ರದ್ಯುಮ್ನರೂಪಕಃ= ಪ್ರದ್ಯುಮ್ನಾವತಾರದಿಂದ, ಇಮಾನ್- ತನ್ನ ಉದರದಲ್ಲಿರುವ ಜೀವರುಗಳನ್ನು, ಚರಮಾತ್ಮನೇ=ಅನಿರುದ್ಧನಿಗೆ, ಅದಾತ್= ಕೊಟ್ಟನು.

ತಾತ್ಪರ್ಯ.— ನಾರಾಯಣನು ಜಗತ್ಪಾಲನೆಗಾಗಿ ಅನಿರುದ್ಧನಾಗಿ ಅವತರಿಸಿದನು, ಆತನ ಹೆಂಡತಿಯು ಶಾಂತಿದೇವಿಯಾದಳು. ಹೀಗೆ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಇದು ನಾಲ್ಕು ನಾರಾಯಣನ ಅವತಾರಗಳು. ಮಾಯಾ, ಜಯಾ, ಕೃತೀ, ಶಾಂತಿ ಎಂಬ ನಾಲ್ಕು ಲಕ್ಷ್ಮೀ ಅವತಾರಗಳು. ಲಕ್ಷ್ಮೀನಾರಾಯಣರು ಈ ಪ್ರಕಾರ ವಾಸುದೇವಾದಿ ಅವತಾರಗಳನ್ನು ವ್ಯಕ್ತಪಡಿಸಿ ಮನುಷ್ಯಮಾನದ ಒಂದು ಸಾವಿರ ವರ್ಷಗಳ ಪರ್ಯಂತ ಜಗದ್ವ್ಯಾಪಾರವಿಲ್ಲದೆ ರಮಿಸುತ್ತಿದ್ದರು. ಸಾವಿರ ವರ್ಷಗಳು ಮುಗಿದಮೇಲೆ ಪ್ರದ್ಯುಮ್ನನು ತನ್ನ ಉದರದಲ್ಲಿದ್ದ ಜೀವರಾಶಿಗಳನ್ನೆಲ್ಲವನ್ನು ಅನಿರುದ್ಧನಿಗೆ ಕೊಟ್ಟನು.

ಶ್ಲೋಕ || ನಿರ್ದೇಹಕಾನ್ ಸಭಗವಾನನಿರುದ್ಧನಾಮಾ ಜೀವಾನ್ ಕರ್ಮಸಹಿ
ತಾನುದರೇ ನಿವೇಶ್ಯ | ಚಕ್ರೇಥ ದೇಹಸಹಿತಾನ್ ಕ್ರಮಶಃ ಸ್ವಯಂ
ಭೂಪ್ರಾಣಾತ್ಮಶೇಷಗರುಡೇಶಮುಖಾನ್ ಸಮಗ್ರಾನ್ ||೯||

ಅರ್ಥ.— ಭಗವಾನ್- ಅವ್ಯಾಹತಷಡ್ಗುಣೈಶ್ವರ್ಯ ಸಂಪನ್ನನಾದ, ಅನಿರುದ್ಧನಾಮಾ = ಅನಿರುದ್ಧನೆಂದು ಹೆಸರುಳ್ಳ, ಸಃ = ಆ ನಾರಾಯಣನು,

ನಿರ್ದೇಶಕ = ಲಿಂಗದೇಹ ಹೊರತಾದ ಬೇರೆ ದೇಹವಿಲ್ಲದ, ಸ್ವಕರ್ಮಣಾ =ಅನಾದಿ ಕರ್ಮದಿಂದ ಕೂಡಿದ, ಜೀವಾನ್=ಜೀವರುಗಳನ್ನು, ಉದರೇ=ತನ್ನ ಹೊಟ್ಟೆಯಲ್ಲಿ, ನಿವೇಶ್ಯ=ಇಟ್ಟುಕೊಂಡು, ಅಥ = ಅನಂತರ, ಸ್ವಯಂಭೂಪ್ರಾಣಾತ್ಮಶೇಷ ಗರುಡೇಶಮುಖಾನ್=ಸ್ವಯಂಭೂ-ಬ್ರಹ್ಮದೇವರು, ಪ್ರಾಣಾತ್ಮ-ಪ್ರಾಣದೇವರು, ಶೇಷ-ಆದಿಶೇಷ, ಗರುಡ=ಗರುಡನು, ಈಶ ಇವು ಪ್ರಮುಖರಾದ, ಸಮಗ್ರಾನ್-ಎಲ್ಲಾ ಜೀವರನ್ನು ಕ್ರಮ ಶಃ ತಾರತಮ್ಯಾನುಸಾರವಾಗಿ, ದೇಹಸಹಿತಾನ್-ಅನಿರುದ್ಧ ದೇಹ ಉಳ್ಳವನ್ನಾಗಿ, ಚಕ್ರೇ=ಮಾಡಿದನು.

ತಾತ್ಪರ್ಯ.—ತ್ರಿವಿಧ ಜೀವರು ಲಿಂಗದೇಹ ವ್ಯತಿರಿಕ್ತ ದೇಹವಿಲ್ಲದವರು. ಇಂಥವರಿಗೆ ಅನಿರುದ್ಧನು ಲಿಂಗದೇಹದ ಮೇಲೆ ಅನಿರುದ್ಧ ದೇಹವನ್ನು ಕೊಟ್ಟನು. ಅದು ಹೇಗೆಂದರೆ, ಕಡಲೆಯ ಮೇಲೆ ಹೊಟ್ಟಿನಂತೆ ಇರುವುದು ಲಿಂಗದೇಹ, ಬೀಜದಂತಿರುವುದು ಸ್ವರೂಪದೇಹ, ಹೊಟ್ಟಿನ ಮೇಲೆ ಸೊಂಕಿನಂತೆ ಇರುವುದು ಅನಿರುದ್ಧ ದೇಹವೆಂದು ತಿಳಿಯಬೇಕು. ಈ ಅನಿರುದ್ಧ ದೇಹದ ಮೇಲೆ ಸ್ಥೂಲ ಶರೀರವನ್ನು ಕೊಡುವುದು ಅವರವರ ಅನಾದಿ ಕರ್ಮಾನುಸಾರ. ಈ ವಿಷಯವನ್ನು ಮೂರನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳುವರು.

**ಶ್ಲೋಕ ॥ ಪಂಚಾತ್ಮಕಃ ಸಭಗವಾನ್ ದ್ವಿಷಡಾತ್ಮಕೋಽಭೂತ್ ಪಂಚಪ್ವಯಾ ಶತಸಹಸ್ರಪರೋಽಮಿತಶ್ಚ । ಏಕಃಸಮೋಽಪ್ಯಖಿಲದೋಷ ಸಮುಜ್ಝಿತೋಽಪಿ ಸರ್ವತ್ರಪೂರ್ಣಗುಣಕೋಽಪಿ ಬಹೂಪಮೋಽಭೂತ್ ॥೧೦॥**

ಅರ್ಥ.—ಪುನಃ ಶುದ್ಧ ಸೃಷ್ಟಿಯನ್ನೇ ಹೇಳುತ್ತಾರೆ. ಸಃಭಗವಾನ್= ಆ ನಾರಾಯಣನು, ಪಂಚಾತ್ಮಕಃ=ವಾಸುದೇವಾದಿ ಪಂಚರೂಪನು, (ನಾರಾಯಣನೂ ಸೇರಿ ಎಂದು ತಿಳಿಯಬೇಕು ) ದ್ವಿಷಡಾತ್ಮಕಃ=ಕೇಶವಾದಿ ಹನ್ನೆರಡು, ಮತ್ತು ಸಂಕರ್ಷಣಾದಿ ಹನ್ನೆರಡು ರೂಪವುಳ್ಳವನು, ಅಭೂತ್ -ಆದನು. (ದ್ವಿಷಡಾತ್ಮಕಃ ಎಂಬ ಪದವನ್ನು ದ್ವಿರಾವೃತ್ತಿ ಮಾಡಬೇಕು. ) ಪಂಚಪ್ವಯಾ-ಮತ್ಸ್ಯಾದಿ ದಶ ರೂಪನು, ಶತ, ಸಹಸ್ರ, ಪರೋಽಮಿತಶ್ಚ- ಶತ=ನಾರಾಯಣಾದಿ ಶತರೂಪನು, ಸಹಸ್ರ=ವಿಶ್ವಾದಿ ಸಹಸ್ರರೂಪ, ಪರ=ಪರರೂಪ, ಅಂದರೆ ಏಕಸ್ಥಾನದಿಂದ ಹದಿನೆಂಟನೇ ಸ್ಥಾನದವರಿಗೆ

ಆಗುವ ಸಂಖ್ಯಾರೂಪನು, ಚ ಮತ್ತು ಅಮಿತಃ= ಅಸಂಖ್ಯಾತವಾದ ಅವತಾರ ಉಳ್ಳವನಾದನು, ಅಂದರೆ ಇವುಗಳನ್ನು ಮೂಲರೂಪದಿಂದ ವ್ಯಕ್ತಪಡಿಸಿದನೆಂದರ್ಥ. ಏಕೋऽಪಿ=ಒಬ್ಬನಾದಾಗ್ಯೂ, ಸಮಃ=ಎಲ್ಲಾ ಅವತಾರಗಳಲ್ಲಿಯೂ ಸಮನು. ಅಖಿಲದೋಷಸಮುಜ್ಝಿತೋऽಪಿ-ಅಖಿಲ=ಸಮಸ್ತವಾದ, ದೋಷ=ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತ್ವಾದಿ ದೋಷಗಳಿಂದ, ಸಮುಜ್ಝಿತೋऽಪಿ-ಬಿಟ್ಟಿರುವನಾದರೂ, ಸರ್ವತ್ರ-ಎಲ್ಲಾ ಅವತಾರಗಳಲ್ಲಿಯೂ, ಪೂರ್ಣಗುಣಕೋऽಪಿ=ಪೂರ್ಣ ಗುಣಗಳುಳ್ಳವನಾದರೂ, ಬಹುರೂಪಃ=ಬಹಳ ರೂಪ ಉಳ್ಳವನಾಗಿ, ಅಭೂವತ್=ಆದನು.

ತಾತ್ಪರ್ಯ.—ನಾರಾಯಣನು, ತಾನೂ ಸೇರಿ ವಾಸುದೇವಾದಿ ೫ ರೂಪಗಳೂ, ಕೇಶವಾದಿ ೧೨, ಸಂಕರ್ಷಣಾದಿ ೧೨, ಮತ್ಸ್ಯಾದಿ ೧೦, ನಾರಾಯಣಾದಿ ನೂರು, ವಿಶ್ವಾದಿ ಸಾವಿರ, ಪರಾದಿ, ಮತ್ತೆ ಅಮಿತಾವತಾರಗಳನ್ನೂ ಹೊಂದಿದನು. ಹೀಗೆ ಲಕ್ಷ್ಮೀದೇವಿಯರಿಗೂ ಅನಂತಾವತಾರ ಉಂಟು. ಲಕ್ಷ್ಮೀಪತಿಯು ಅಖಿಲದೋಷರಹಿತನು, ಆನಂದಾತ್ಮಕ, ದೇಶಕಾಲ ಪರಿಚ್ಛೇದಶೂನ್ಯ. ಇಂಥಹ ಪರಮಾತ್ಮನಿಗೆ ಸದೃಶರು ಯಾರೂ ಇಲ್ಲ

**ಶ್ಲೋಕ || ನಿರ್ದೋಷಪೂರ್ಣಗುಣವಿಗ್ರಹ ಆತ್ಮತಂತ್ರೋ ನಿಶ್ಚೇತನಾತ್ಮಕ**
**ಶರೀರಗುಣೈಶ್ಚ ಹೀನಃ || ಆನಂದಮಾತ್ರಕರಪಾದಮುಖೋದರಾದಿಃ**
**ಸರ್ವತ್ರಚಸ್ವಗತಭೇದವಿವರ್ಜಿತಾತ್ಮಾ ||೧೧||**

ಅರ್ಥ.—ನಿರ್ದೋಷಪೂರ್ಣಗುಣವಿಗ್ರಹ-ನಿರ್ದೋಷ = ದೋಷರಹಿತವಾದ, ಪೂರ್ಣ-ಪೂರ್ಣವಾದ, ಗುಣ=ಜ್ಞಾನಾನಂದಾದಿ ಗುಣಗಳೇ ವಿಗ್ರಹಃ=ಶರೀರವಾಗುಳ್ಳ, ಆತ್ಮತಂತ್ರಃ-ಸ್ವತಂತ್ರನಾದ, ನಿಶ್ಚೇತನಾತ್ಮಕ ಶರೀರಗುಣೈಶ್ಚ-ನಿಶ್ಚೇತನಾತ್ಮಕ=ಜಡರೂಪವಾದ, ಶರೀರ = ದೇಹವೇನು, ಗುಣೈಶ್ಚ-ಜಡಗುಣಗಳೇನು ಇವುಗಳಿಂದಲೂ, ಹೀನಃ-ಬಿಟ್ಟಿರುವ, ಆನಂದ ಮಾತ್ರಕರಪಾದಮುಖೋದರಾದಿಃ=ಆನಂದಮಾತ್ರ= ಆನಂದಜ್ಞಾನಾದಿರೂಪವಾದ, ಕರ=ಕೈ, ಪಾದ=ಕಾಲು, ಮುಖ, ಉದರ=ಹೊಟ್ಟೆ, ಆದಿಃ ಮೊದಲಾದ ಸರ್ವಾವಯವಗಳುಳ್ಳ, ಸರ್ವತ್ರಚ=ಎಲ್ಲಾ ಅವತಾರಗಳಲ್ಲಿ, ಸ್ವಗತಭೇದವಿವರ್ಜಿತಾತ್ಮಾ=ಸ್ವ-ತನ್ನಲ್ಲಿ, ಗತ-ಹೊಂದಿದ, ಭೇದ=ಅವ

ಯವಾಯುವನಿಭೇದಗಳಿಂದ, ವರ್ಜಿತಾತ್ಮಾ= ಬಿಡಲ್ಪಟ್ಟ ದೇಹವುಳ್ಳವನು.

ತಾತ್ಪರ್ಯ :—ಈಗ **ನಿರ್ದೋಷಪೂರ್ಣ** ಇತ್ಯಾದಿ ೧೧ನೆ ಶ್ಲೋಕ ಮೊದಲು ಅಥೋರ್ಯಮಿತ್ಯಾದಿ ೨೨ನೆ ಶ್ಲೋಕದ ವರಿವಿಗೂ ಸರ್ವ ಸದಾಗಮಾರ್ಥಗಳನ್ನು ಪ್ರಮಾಣದಿಂದ ಉಪಪಾದನಮಾಡುತ್ತಾರೆ. ಪರಮಾತ್ಮನು ಸರ್ವಶಕ್ತನು, ಸರ್ವಗುಣಪರಿಪೂರ್ಣನು, ಜಡಶರೀರರಹಿತನು, ಆನಂದಮಯವಾದ ಕೈ ಕಾಲು ಮುಖ ಹೊಟ್ಟೆ ಮುಂತಾದ ಅವಯವ ವುಳ್ಳವನು. ಸರ್ವಾವತಾರಗಳಲ್ಲಿಯೂ ಸ್ವಗತಭೇದವರ್ಜಿತನು. ಅಂದರೆ ಅವಯವಾವಯುವಗಳಿಗೆ ಭೇದಶೂನ್ಯನು.

**ಶ್ಲೋಕ ॥ ಕಾಲಾಚ್ಚ ದೇಶಗುಣತೋಽಸ್ಯ ಚಾದಿರಂತೋ**
**ವೃದ್ಧಿಕ್ಷಯೌ ನತು ಪರಸ್ಯ ಸದಾತನಸ್ಯ ।**
**ನೈತಾದೃಶಃ ಕ್ವಚ ಬಭೂವ ನಚೈವ ಭಾವ್ಯಃ**
**ನಾಸ್ತ್ಯುತ್ತರಃ ಕಿಮು ಪರಾತ್ಪರಮಸ್ಯ ವಿಷ್ಣೋಃ ॥೧೨॥**

ಅರ್ಥ :—ಕಾಲಾಚ್ಚ= ಕಾಲದಿಂದಲೂ, ದೇಶ= ದೇಶದಿಂದಲೂ, ಗುಣತಃ— ಆನಂದಾದಿ ಗುಣಗಳಿಂದಲೂ, ಅಸ್ಯ= ಈ ಪರಮಾತ್ಮನಿಗೆ, ಆದಿಃ= ಪೂರ್ವಾವಧಿಯು, ಅಂತಃ= ಉತ್ತರಾವಧಿಯು, ನ= ಇಲ್ಲ. ವೃದ್ಧಿಕ್ಷಯೌ= ವೃದ್ಧಿ =ಅಭಿವೃದ್ಧಿಯು, ಕ್ಷಯೌ= ನಾಶವೂ ಈ ಎರಡೂ, ಪರಸ್ಯ= ಸರ್ವೋತ್ತಮನಾದ, ಸದಾತನಸ್ಯ= ಸರ್ವದಾ ಏಕಪ್ರಕಾರದಿಂದಿರುವ ಪರಮಾತ್ಮನಿಗೆ, ನತು= ಇಲ್ಲವು. ಏತಾದೃಶಃ= ಇಂತಹವನು, ನಚಬಭೂವ= ಹಿಂದೆ ಇಲ್ಲ, ಭಾವ್ಯಃ= ಮುಂದೆ ಹುಟ್ಟುವದು, ನಚ= ಇಲ್ಲ. ಪರಾತ್— ಲಕ್ಷ್ಮೀದೇವಿಯರಿಗಿಂತಲೂ, ಪರತಮಸ್ಯ — ಉತ್ಕೃಷ್ಟನಾದ, ವಿಷ್ಣೋಃ= ನಾರಾಯಣನಿಗಿಂತಲೂ, ಉತ್ತರಃ= ಉತ್ತಮನು, ನಾಸ್ತಿ ಕಿಮು= ಇಲ್ಲವೆಂತ ಹೇಳುವುದು ಏನು.

ತಾತ್ಪರ್ಯ :—ಪರಮಾತ್ಮನು ಸ್ವಗತಭೇದವಿಲ್ಲದಿದ್ದರೂ ಕಾಲಾದ್ಯುಪಾಧಿಯಿಂದಲೂ ಬೇರೆ ರೀತಿಯಾಗುವುದಿಲ್ಲವೆಂದು ಹೇಳುತ್ತಾರೆ. ಕಾಲದಿಂದಲೂ, ದೇಶದಿಂದಲೂ, ಸರ್ವತ್ರ ವ್ಯಾಪ್ತನು. ಆನಂದಾದಿ ಗುಣಗಳಿಂದ ಪೂರ್ಣನು. ಸನಾತನನಾದ ನಾರಾಯಣನಿಗೆ ಆದಿಯೂ, ಅಂತ್ಯವೂ, ವೃದ್ಧಿಯೂ, ನಾಶವೂ ಕೂಡ ಇಲ್ಲ. ಲಕ್ಷ್ಮೀದೇವಿಗಿಂತಲೂ ಉತ್ತಮನಾದ, ದೇಶ ಕಾಲ ಗುಣಗಳಿಂದ ವ್ಯಾಪ್ತನಾದ ಪರಮಾತ್ಮನಿಗೆ ಸದೃಶರು ಮುಂದೆ ಹುಟ್ಟುವುದಿಲ್ಲ. ಹಿಂದೆ ಇರಲಿಲ್ಲ, ಈಗ ಇಲ್ಲವೇ ಇಲ್ಲ. ಈತನಿಗಿಂತ ಉತ್ತಮನಿದ್ದಾನೆಂದು ಹೇಳುವದು ಹ್ಯಾಗೆ.

**ಶ್ಲೋಕ ||** **ಸರ್ವಜ್ಞ ಈಶ್ವರತಮಃ ಸ ಚ ಸರ್ವಶಕ್ತಿಃ**
**ಪೂರ್ಣಾವ್ಯಯಾತ್ಮಬಲಚಿತ್ಸುಖವೀರ್ಯಸಾರಃ |**
**ಯಸ್ಯಾಜ್ಞಯಾ ರಹಿತಮಿಂಧಿರಯಾ ಸಮೇತಂ**
**ಬ್ರಹ್ಮೇಶಪೂರ್ವಕಮಿದಂ ನ ತು ಕಸ್ಯ ಚೇಶಂ ||೧೩||**

ಅರ್ಥ :—ಸಚ= ಆ ಪರಮಾತ್ಮನು, ಸರ್ವಜ್ಞಃ= ಸರ್ವವನ್ನೂ ತಿಳಿದವನು, ಈಶ್ವರತಮಃ= ನಿಯಾಮಕರಿಗೆ ನಿಯಾಮಕನು, ಸರ್ವಶಕ್ತಿಃ= ಸಮಸ್ತಶಕ್ತಿ ವುಳ್ಳವನು, ಪೂರ್ಣಾವ್ಯಯಾತ್ಮಬಲಚಿತ್ಸುಖವೀರ್ಯಸಾರಃ, ಪೂರ್ಣ= ಪೂರ್ಣವಾಗಿಯೂ, ಅವ್ಯಯ= ನಾಶರಹಿತವಾಗಿಯೂ, ಇರುವ ಆತ್ಮ= ದೇಹವೇನು, ಬಲ= ಬಲವೇನು, ಚಿತ್= ಜ್ಞಾನವೇನು, ಸುಖ= ಸುಖವೇನು, ವೀರ್ಯ = ಕಾಯಪುಷ್ಟಿಯೇನು, ಇವುಗಳಲ್ಲಿ, ಸಾರಃ = ಶ್ರೇಷ್ಠನಾದವನು, ಯಸ್ಯ= ಯಾವ ಪರಮಾತ್ಮನ, ಆಜ್ಞಯಾ= ಅಪ್ಪಣೆಯಿಂದ, ರಹಿತ= ಬಿಟ್ಟಿರುವ, ಇಂದಿರಯಾ = ಲಕ್ಷ್ಮೀದೇವಿಯಿಂದ, ಸಮೇತಂ = ಕೂಡಿದ, ಬ್ರಹ್ಮೇಶಪೂರ್ವಕಂ= ಬ್ರಹ್ಮ, ರುದ್ರ ಮೊದಲಾದ, ಇದಂ= ಈ ಪ್ರಪಂಚವು, ಕಸ್ಯಚ= ಯಾವ ಕೆಲಸದಲ್ಲಿಯೂ ಕೂಡ, ಈಶಂ= ಸಮರ್ಥವು, ನತು= ಅಲ್ಲ (ಆಗುವದಿಲ್ಲ).

ತಾತ್ಪರ್ಯ :—ಪರಮಾತ್ಮನಿಗೆ ಸಮರಿಲ್ಲವೆಂದು ಹೇಳುವುದಕ್ಕೋಸ್ಕರ ಪರಮಾತ್ಮನ ಸ್ವರೂಪವನ್ನು ಲಕ್ಷ್ಮೀಬ್ರಹ್ಮಾದಿಗಳ ಸ್ವರೂಪವನ್ನು ತಿಳಿಸುತ್ತಾರೆ. ನಾರಾಯಣನು ಸರ್ವಜ್ಞತಮ, ನಿಯಾಮಕರಾದ ಬ್ರಹ್ಮಾದಿ ದೇವತೆಗಳಿಗೆ ಅಂತರ್ನಿಯಾಮಕನು, ಸರ್ವಶಕ್ತಿಯುಳ್ಳವನು, ಪೂರ್ಣವಾದ ನಾಶರಹಿತವಾದ ದೇಹ, ಬಲ, ಜ್ಞಾನಸುಖ, ವೀರ್ಯಗಳಿಂದ ಶ್ರೇಷ್ಠನು ಇಂತಹ ಪರಮಾತ್ಮನ ಆಜ್ಞೆ ಇಲ್ಲದೆ ಲಕ್ಷ್ಮೀಸಹಿತವಾದ ಬ್ರಹ್ಮ ರುದ್ರ ಪೂರ್ವಕವಾದ ಚೇತನಾಚೇತನ ಪ್ರಪಂಚವು ಯಾವ ಕೆಲಸವನ್ನೂ ಮಾಡಲಾರದು. ಈತನಿಗೆ ಸಮರೇ ಇಲ್ಲ. ಹೀಗಿರುವಾಗ ಅಧಿಕರು ಎಲ್ಲಿಂದ ಬಂದಾರು ?

**ಶ್ಲೋಕ ॥ ಆಭಾಸಕೋऽಸ್ಯ ಪವನಃ ಪವನಸ್ಯ ರುದ್ರ-**
**ಶೇಷಾತ್ಮಕೋ ಗರುಡ ಏವ ಚ ಶಕ್ರಕಾಮೌ ।**
**ವೀಂದ್ರೇಶಯೋಸ್ತದಪರೇ ತ್ವನಯೋಶ್ಚ ತೇಷಾ-**
**ಮೃಷ್ಯಾದಯಃ ಕ್ರಮಶ ಊನಗುಣಾ ಶತಾಂಶಾತ್**
**॥೧೪॥**

ಅರ್ಥ :—(ಆ= ಈಷತ್–ಸ್ವಲ್ಪ) ಭಾಸತೆ= ಪ್ರಕಾಶತೆ, ಇತಿ ಆಭಾಸಃ ಅಂದರೆ ಪ್ರತಿಬಿಂಬವು ಎಂದು ಅರ್ಥ) ಅಸ್ಯ= ಹರಿಗೆ, ಪವನಃ= ಮುಖ್ಯ ಪ್ರಾಣನು, ಆಭಾಸಕಃ= ಪ್ರತಿಬಿಂಬನು (ಬಿಂಬಾಧೀನವೂ ಬಿಂಬ ಸದೃಶವೂ ಆದುದು ಪ್ರತಿ ಬಿಂಬವೆನಿಸುವುದು) ಪವನಸ್ಯ= ವಾಯುವಿಗೆ, ಶೇಷಾತ್ಮಕಃ= ಭಾವಿ ಶೇಷನಾದ ರುದ್ರನು, ಗರುಡ ಏ ವಚ= ಗರುಡನೂ ಸಹ ಆಭಾಸಕರು, ವೀಂದ್ರೇಶಯೋಃ= ಗರುಡ ರುದ್ರರಿಗೆ, ಶಕ್ರಕಾಮೌ= ಇಂದ್ರ ಕಾಮರು ಆಭಾಸಕರು, ಅನಯೋಶ್ಚ = ಇಂದ್ರ ಕಾಮರಿಗಾದರೋ, ಅಪರೇ = ಅಹಂಕಾರಿಕ ಪ್ರಾಣಾದಿಗಳು ಆಭಾಸಕರು, ತೇಷಾಂ= ಆ ಅಹಂಕಾರಿಕ ಪ್ರಾಣಾದಿಗಳಿಗೆ, ಋಷ್ಯಾದಯಃ= ಋಷಿಗಳೇ ಮೊದಲಾದವರು, ಆಭಾಸಕರು ಶತಾಂಶಾತ್= ನೂರು ಗುಣಗಳಿಂದ, ಕ್ರಮಶಃ= ತಾರತಮ್ಯಾನುಸಾರವಾಗಿ, **ಊನಗುಣಾಃ**= ಕಡಿಮೆ ಗುಣ ಉಳ್ಳವರು.

ತಾತ್ಪರ್ಯ :—ರಮಾ ಬ್ರಹ್ಮಾದಿಗಳು ಪರಮಾತ್ಮನ ಆಧೀನವೆಂದು ಬೇರೆ ರೀತಿಯಿಂದಲೂ ಹೇಳುತ್ತಾರೆ. ಆಭಾಸವೆಂದರೆ ಅಧೀನ ಮತ್ತು ಸ್ವಲ್ಪ ಸದೃಶವೆಂದು ತಿಳಿಯಬೇಕು. ಪರಮಾತ್ಮನಿಗೆ ಮುಖ್ಯ ವಾಯುದೇವರು ಲಕ್ಷ್ಮೀದ್ವಾರ ಪ್ರತಿಬಿಂಬರು, ಅವರಿಗೆ ಗರುಡ, ಶೇಷ, ರುದ್ರರು ಪ್ರತಿಬಿಂಬರು, ಗರುಡ ರುದ್ರರಿಗೆ ಇಂದ್ರ ಕಾಮರು, ಇಂದ್ರ ಕಾಮರಿಗೆ ಅಹಂಕಾರಿಕ ಪ್ರಾಣ ಅನಿರುದ್ಧ ಚಂದ್ರ ಸೂರ್ಯಾದಿಗಳು ಸೂರ್ಯಾದಿಗಳಿಗೆ ಋಷ್ಯಾದಿಗಳು ಪ್ರತಿಬಿಂಬರು, ಹೀಗೆ ತಾರತಮ್ಯಾನುಸಾರವಾಗಿ ನೂರು ಮೊದಲಾದ ಗುಣಗಳಿಂದ ಒಬ್ಬರಿಗೊಬ್ಬರು ಕಡಿಮೆಯಾಗಿರುತ್ತಾರೆ. ಯಾರು ಯಾರಿಗೆ ಅಧೀನರಾಗಿಯೂ ಈಷತ್ ಸಮರಾಗಿಯೂ ಇರುತ್ತಾರೊ ಅವರು ಅವರ ಪ್ರತಿಬಿಂಬವೆಂತ ಅರ್ಥವು. ಇದರಿಂದಲೇ ಸರ್ವರಿಗೂ ಭಗವದಧೀನತ್ವವು ತಿಳಿಸಲ್ಪಟ್ಟಿದೆ. ಶತ ಶಬ್ದವು ಯೋಗ್ಯತಾನುಸಾರ ಅನೇಕ ಸಂಖ್ಯೆಯನ್ನು ಬೋಧಿಸುತ್ತದೆ.

**ಶ್ಲೋಕ ||** **ಆಭಾಸಕಾ ತ್ವಥ ರಮಾಸ್ಯ ಮರುತ್ಸ್ವರೂಪಾ-**
**ಚ್ಛ್ರೇಷ್ಠಾ ಪ್ಯಜಾತ್ತದನು ಗೀಃ ಶಿವತೋ ವರಿಷ್ಠಾ |**
**ತಸ್ಯಾಉಮಾವಿಪತಿನೀಚ ಗಿರಸ್ತಯೋಸ್ತು**
**ಶಚ್ಯಾದಿಕಾಃ ಕ್ರಮಶ ಏವ ಯಥಾ ಪುಮಾಂಸಃ ||೧೫||**

ಸ್ತ್ರೀಯರೂ ಕೂಡ ಪರಮಾತ್ಮನ ಆಭಾಸಕರೆಂದು ಹೇಳುತ್ತಾರೆ.

ಅರ್ಥ :—ಪರಮಾತ್ಮನ ಅನಂತರಳಾದ (ಮಂಗಳ ರೂಪಳಾದ) ರಮಾ= ರಮಾದೇವಿಯರು, ಅಸ್ಯ= ಹರಿಗೆ, ಆಭಾಸಕಾ= ಮುಖ್ಯಾಭಾಸಕರು, ಮರುತ್ಸ್ವರೂಪಾತ್ = ವಾಯುದೇವರಿಗಿಂತಲೂ, ಅಜಾದಪಿ = ಬ್ರಹ್ಮದೇವ ಗಿಂತಲೂ, ಶ್ರೇಷ್ಠಾ= ಕೋಟಿ ಗುಣ ಅಧಿಕರು. ತದನು= ಲಕ್ಷ್ಮೀದೇವಿಯ ಅನಂತರದಲ್ಲಿ, ತಸ್ಯಾಃ= ಆ ಲಕ್ಷ್ಮೀದೇವಿಯರಿಗೆ, ಗೀಃ= ಸರಸ್ವತಿಯು (ಭಾರ ತಿಯು) ಆಭಾಸಕಳು, ಅವರು ಶಿವತಃ= ರುದ್ರದೇವರಿಗಿಂತಲೂ ಶ್ರೇಷ್ಠರು, ಗಿರಃ= ಸರಸ್ವತೀದೇವಿಯರಿಗೆ, ಉಮಾ ವಿಪತಿನೀಚ ಪಾರ್ವತಿಯು ಸೌಪರ್ಣಿ ಯೂ ಕೂಡ ಆಭಾಸಕರು, ತಯೋಸ್ತು= ಅವರಿಬ್ಬರಿಗೆ, ಶಚ್ಯಾದಿಕಾಃ= ಶಚೀದೇವಿಯೆ ಮುಂತಾದವರು ಆಭಾಸಕರು, ಯಥಾಪುಮಾಂಸಃ= ಪುರು ಷರಕ್ರಮ ಹೇಗೋ ಹಾಗೆ, ಕ್ರಮಶಃ= ಕ್ರಮಕ್ರಮವಾಗಿ ಸ್ತ್ರೀಯರು ಆಭಾ ಸಕರು.

ತಾತ್ಪರ್ಯ :—ಹೇಗೆ ಪುರುಷರು ಪರಮಾತ್ಮನ ಪ್ರತಿಬಿಂಬತ್ವದಿಂದ ತದ್ವಶರೋ ಹಾಗೆ ಸ್ತ್ರೀಯರೂ ಕೂಡಾ ಪರಮಾತ್ಮನ ಆಭಾಸಕತನದಿಂದ ವಶರಾಗಿರುತ್ತಾರೆ. ಪರಮಾತ್ಮನಿಗೆ ಅನಂತರಳಾದ ಮಂಗಳರೂಪಳಾದ ರಮಾದೇವಿಯು ನಾರಾಯಣನಿಗೆ ಮುಖ್ಯಾಭಾಸಕಳು, ವಾಯು ಬ್ರಹ್ಮರಿ ಗಿಂತಲೂ ಕೋಟಿ ಗುಣ ಅಧಿಕಳು. ಈಕೆಗೆ ಸರಸ್ವತೀ ಭಾರತೀಯರು ಆ ಭಾಸಕರು. ತಮ್ಮ ತಮ್ಮ ಗಂಡಂದಿರಿಗಿಂತ ನೀಚರು, ರುದ್ರ ಗರುಡರಿ ಗಿಂತ ಅಧಿಕರು,. ಈ ಸರಸ್ವತೀ ಭಾರತಿಯರಿಗೆ ಉಮಾಸೌಪರ್ಣಿಯರು ಆಭಾಸಕರು. ಅವರಿಬ್ಬರಿಗೆ ಶಚ್ಯಾದಿಗಳು ಆಭಾಸಕರು. ಶಚಿಯು ಅಹಂಕಾರಿಕಪ್ರಾಣನಿಗಿಂತಲೂ ಅಧಮಳೆಂದು ತಿಳಿಯಬೇಕು.

**ಶ್ಲೋಕ ॥ ತಾಭ್ಯಶ್ಚ ತೇ ಶತಗುಣೈರ್ದಶತೋ ವರಿಷ್ಠಾಃ**
**ಪಂಚೋತ್ತರೈರಪಿ ಯಥಾಕ್ರಮಶಃ ಶ್ರುತಿಸ್ಥಾಃ ।**
**ಶಬ್ದೋ ಬಹುತ್ವವಚನಃ ಶತಮಿತ್ಯತಶ್ಚ**
**ಶ್ರುತ್ಯಂತರೇಷು ಬಹುಧೋಕ್ತಿವಿರುದ್ಧತಾ ನ ॥೧೬॥**

ಅರ್ಥ :—ತೇ= ಆ ಪುರುಷರು, ತಾಭ್ಯಃ= ತಮ್ಮ ತಮ್ಮ ಸ್ತ್ರೀಯರಿಗಿಂತಲೂ, ಶತಗುಣೈಃ= ನೂರು ಗುಣಗಳಿಂದಲೂ, ದಶತಃ= ಹತ್ತು ಗುಣಗಳಿಂದಲೂ, ಪಂಚೋತ್ತರೈಃ= ಐದು ಮೊದಲಾದ ಗುಣಗಳಿಂದಲೂ, ವರಿಷ್ಟಾಃ = ಶ್ರೇಷ್ಠರು, ಯಥಾ= ಹೇಗೆ, ಕ್ರಮಶಃ= ಕ್ರಮವಾಗಿ, ಶ್ರುತಿಸ್ಥಾಃ= ಶ್ರುತಿಗಳಲ್ಲಿ ಹೇಳಿವೆಯೋ ಹಾಗೆ ತಿಳಿಯಬೇಕು, ಶತಮಿತಿ ಶಬ್ದಃ= ಶತವೆಂಬ ಶಬ್ದವು, ಬಹುತ್ವವಚನಃ = ಬಹುತ್ವವಾಚಿಯು, ಅತಃ = ಆದಕಾರಣದಿಂದ, ಶ್ರುತ್ಯಂತರೇಷು= ಇತರ ಶ್ರುತಿಗಳಲ್ಲಿ, ಬಹುಧೋಕ್ತಿಃ= ಹೆಚ್ಚು ಕಡಿಮೆಯಾಗಿ ಹೇಳಿರುವುದು, ವಿರುದ್ಧತಾ= ವಿರೋಧವು, ನ= ಅಲ್ಲ.

ತಾತ್ಪರ್ಯ :—ಶ್ರುತಿಗಳಲ್ಲಿ ಹೇಳಿದ ಪ್ರಕಾರ ಪುರುಷರು ತಮ್ಮ ತಮ್ಮ ಸ್ತ್ರೀಯರುಗಳಿಗಿಂತ ನೂರು ಹತ್ತು ಐದು ಮೊದಲಾದ ಗುಣಗಳಿಂದ ಶ್ರೇಷ್ಠರು. ಶ್ರುತಿಗಳಲ್ಲಿ ಪರಸ್ಪರ ವಿರೋಧವಿರುವ ಹಾಗೆ ತೋರುತ್ತದೆ. ಆ ವಿರೋಧವನ್ನು ತೋರಿಸಿ ಪರಿಹಾರ ಹೇಳುತ್ತಾರೆ. ತೈತ್ತಿರೀಯದಲ್ಲಿ ಪ್ರಜಾಪತಿವಾಚ್ಯ ರುದ್ರನಿಗಿಂತಲೂ, ಶತಗುಣಾಧಿಕತ್ವ ಬ್ರಹ್ಮ ದೇವರಿಗೆ ಹೇಳಿದೆ. ಛಾಂದೋಗ್ಯದಲ್ಲಿ ಸ್ಮರ ಶಬ್ದವಾಚ್ಯ ರುದ್ರನಿಗಿಂತಲೂ ಶತ ಗುಣಾಧಿಕಳು ಸರಸ್ವತಿ, ಸರಸ್ವತೀಗಿಂತಲೂ ಶತಗುಣಾಧಿಕ ಬ್ರಹ್ಮನೆಂದು ಹೇಳಿದೆ. ಇದಕ್ಕೆ ಪರಿಹಾರವು ಆನಂದತೀರ್ಥರು ಹೇಳಿರುತ್ತಾರೆ. ಶತ ಶಬ್ದಕ್ಕೆ ಅನೇಕವೆಂಬ ಅರ್ಥವನ್ನು ಒಪ್ಪಿಕೊಂಡು ಶ್ರುತಿಗಳಿಗೆ ಪರಸ್ಪರ ವಿರೋಧ ವಿಲ್ಲವೆಂದು ತಿಳಿಯಬೇಕು. ಆ ಶಬ್ದವು ಬಹುತ್ವವಾಚಕವು. ಇದರಂತೆ ವಿರೋಧ ಪರಿಹಾರ ಮಾಡಿಕೊಳ್ಳಬೇಕು.

**ಶ್ಲೋಕ ॥ ತೇಷಾಂ ಸ್ವರೂಪಮಿದಮೇವ ಯತೋऽಥ ಮುಕ್ತಾ-**
**ವಪ್ಯೇವಮೇವ ಸತತೋಚ್ಚವಿನೀಚರೂಪಾಃ ।**
**ಶಬ್ದಃ ಶತಂ ದಶಸಹಸ್ರಮಿತಿ ಸ್ಮ ಯಸ್ಮಾ-**
**ತ್ತಸ್ಮಾನ್ನ ಹೀನವಚನೋऽಥ ತತೋऽಗ್ರ್ಯರೂಪಾಃ ॥೧೭॥**

ಅರ್ಥ:—ಇದಂ= ಈ ತಾರತಮ್ಯವು, ತೇಷಾಂ= ಜೀವರುಗಳಿಗೆ, ಸ್ವರೂಪ ಮೇವ= ಸ್ವರೂಪವೇ ಆಗಿರುತ್ತದೆ. ಮುಕ್ತಾವಪಿ= ಮುಕ್ತಿಯಲ್ಲಿಯೂ ಕೂಡ, ಏವಮೇವ= ಹೀಗೆಯೇ ಇರುತ್ತದೆ. ಸತತೋಚ್ಚವಿನೀಚರೂಪಾಃ= ಸತತ= ಯಾವಾಗಲೂ, ಉಚ್ಚ= ಹೆಚ್ಚು, ವಿನೀಚರೂಪಾ= ಕಡಮೆ ರೂಪ ಉಳ್ಳವ ರಾಗಿಯೇ ಇರುತ್ತಾರೆ. ಯಸ್ಮಾತ್= ಯಾವ ಕಾರಣದಿಂದ, ಶತಂ= ಶತ ರೂಪವಾದ, ಶಬ್ದಃ = ಶಬ್ದವು, ದಶಸಹಸ್ರಮಿತಿ = ದಶವೆಂತಲೂ ಸಹಸ್ರ ವೆಂತಲೂ, ಇತಿಸ್ಮ= ಹೇಳಿರುವುದೋ, ತಸ್ಮಾತ್= ಆ ಕಾರಣದಿಂದ, ಶತ ಶಬ್ದವು, ಹೀನವಚನಃ= ಕಡಮೆ ವಾಚಕವು, ನ= ಅಲ್ಲ, ತತಃ= ಆದ್ದರಿಂದ, ಅಗ್ರ್ಯರೂಪಾಃ= ಶ್ರೇಷ್ಠವಾಚಕವೆಂದು ತಿಳಿಯಬೇಕು.

ತಾತ್ಪರ್ಯ :—ಜೀವರುಗಳಿಗೆ ಸಂಸಾರಾವಸ್ಥೆಯಲ್ಲಿ ಉಪಾಧಿ ವೈಚಿತ್ರ್ಯ ದಿಂದ ತಾರತಮ್ಯವಿರಲಿ, ಉಪಾಧಿ ನಾಶವಾಗುವ ಮುಕ್ತಿಯಲ್ಲಿ ತಾರತಮ್ಯ ವಿಲ್ಲ ಎಂದು ಹೇಳಿದರೆ ಅದಕ್ಕೆ ಹೇಳುತ್ತಾರೆ. ಈ ತಾರತಮ್ಯವು ಸ್ವರೂಪ ದಲ್ಲಿಯೇ ಇರೋಣದರಿಂದ ಸಂಸಾರಾವಸ್ಥೆಯಲ್ಲಿದ್ದ ಉಚ್ಚನೀಚತ್ವವು ಮುಕ್ತಿ ಯಲ್ಲಿಯೂ ಇದ್ದೇ ಇರುತ್ತೆ. ಯಾವಾಗಲೂ ಜೀವರು ಪರಸ್ಪರ ಭೇದ ಉಳ್ಳವರಾಗಿಯೇ ಇರುತ್ತಾರೆ. ಈ ವಿಷಯವಾಗಿ ಸ್ಕಾಂದ ಪುರಾಣದಲ್ಲಿ ಶ್ಲೋಕ ॥ ಜೀವೋಪಾಧಿಃ ದ್ವಿಧಾ ಪ್ರೋಕ್ತಃ ಸ್ವರೂಪಂ ಬಾಹ್ಯಮೇವ ಚ ॥ ಬಾಹ್ಯೋಪಾಧಿಃ ಲಯಂ ಯಾಂತಿ ಮುಕ್ತಾವನ್ಯಸ್ಯ ತು ಸ್ಥಿತಿಃ ॥ ಅರ್ಥ—ಜೀವ ರುಗಳಿಗೆ ಸ್ವರೂಪೋಪಾಧಿ, ಬಾಹ್ಯೋಪಾಧಿ ಎಂದು ಎರಡು ಉಪಾಧಿಗಳು ಉಂಟು. ಬಾಹ್ಯೋಪಾಧಿಯು—ಮುಕ್ತಿಯಾಗುವ ಕಾಲದಲ್ಲಿ ನಾಶವಾದರೂ ಸ್ವರೂಪೋಪಾಧಿಯು ಇದ್ದೇ ಇರುತ್ತೆ. ಆದ್ದರಿಂದ ಮುಕ್ತಿಯಲ್ಲಿಯೂ ತಾರತಮ್ಯ ಇರಲೇ ಬೇಕು. ಇದಕ್ಕೆ ಅನ್ಯಥಾ ಇಲ್ಲ. ಶತ ಶಬ್ದವು ಬಹುತ್ವವಾಚಿಯಾದ್ದ ರಿಂದ ಬೇರೆ ಶ್ರುತಿಯಲ್ಲಿ ಹೇಳಿದ್ದಕ್ಕೆ ವಿರೋಧವಿಲ್ಲವು, ಶತ ಶಬ್ದವು ಶ್ರೇಷ್ಠ ವಾಚಕವೆಂದು ತಿಳಿಯಬೇಕು, ಮತ್ತು ಭಗವದಾವೇಶ ಬಲದಿಂದ ಕಾಲತಃ ವ್ಯತ್ಯಾಸವು ಶ್ರುತಿಗಳಲ್ಲಿ ಹೇಳುತ್ತಾರೆ. ಇವುಗಳನ್ನೆಲ್ಲಾ ಅನುವ್ಯಾಖ್ಯಾನದಲ್ಲಿ ತಿಳಿಯಬೇಕು.

**ಶ್ಲೋಕ ॥ ಏವಂ ನರೋತ್ತಮಪರಾಸ್ತು ವಿಮುಕ್ತಿಯೋಗ್ಯಾ**
**ಅನ್ಯೇ ಚ ಸಂಸೃತಿಪರಾ ಅಸುರಾಸ್ತಮೋಗಾಃ ।**
**ಏವಂ ಸದೈವ ನಿಯಮಃ ಕ್ವಚಿದನ್ಯಥಾ ನ**
**ಯಾವನ್ನ ಪೂರ್ತಿರುತ ಸಂಸೃತಿಗಾಃ ಸಮಸ್ತಾಃ ॥೧೮॥**

ಅರ್ಥ :—ಏವಂ= ಈ ಪ್ರಕಾರ ಕೆಲವರಿಗೆ ಮುಕ್ತಿಯಾದಾಗ್ಯು, ಅನ್ಯೇ= ಬೇರೆಯಾಗಿರುವ, ನರೋತ್ತಮಪರಾಃ ; ನರೋತ್ತಮ = ವಾಯುದೇವರೆ, ಪರಾಃ = ಮುಖ್ಯರಾದ, ವಿಮುಕ್ತಿಯೋಗ್ಯಾಃ = ಮುಕ್ತಿಯೋಗ್ಯರು, ಸಂಸೃತಿ ಪರಾಃ= ನಿತ್ಯ ಸಂಸಾರಿಗಳೂ, ತಮೋಗಾಃ= ತಮೋಯೋಗ್ಯರಾದ, ಅಸುರಾಃ = ದೈತ್ಯರು, ಸಂತಿ= ಇರುತ್ತಾರೆ. ಏವಂ= ಇದೇ ರೀತಿಯಲ್ಲಿ, ನಿಯಮಃ= ನಿಯಮವು, ಸದೈವ= ಯಾವಾಗಲೂ, ಅಸ್ತಿ = ಇದೆ, ಕ್ವಚಿತ್= ಯಾವ ಕಾರಣದಿಂದಲೂ, ಅನ್ಯಥಾ= ಇದಕ್ಕೆ ವ್ಯತ್ಯಾಸವು, ನಭವತಿ= ಆಗುವುದಿಲ್ಲ. ಪೂರ್ತಿ = ಸೃಷ್ಟಿ ಪೂರ್ತಿಯು, ನ ಭವತಃ = ಆಗುವುದಿಲ್ಲ. ಉತ = ಮತ್ತು ಸಮಸ್ತಾಃ= ಎಲ್ಲಾ ವಿಧಗಳಾದ, ಸಂಸೃತಿಗಾಃ= ಸಂಸಾರವನ್ನು ಹೊಂದುವ ಜೀವರುಗಳ ತಂಡಗಳು, ಅಂದರೆ= ಸಾಧನವು ಇನ್ನು ಪೂರ್ತಿಯಾಗದಿರುವ ಮುಕ್ತಿಯೋಗ್ಯರು, ನಿತ್ಯ ಸಂಸಾರಿಗಳು, ತಮೋಯೋಗ್ಯರು ಎಲ್ಲರೂ, ಸಂತಿ= ಇದ್ದೇ ಇರುತ್ತವೆ.

ತಾತ್ಪರ್ಯ :—ಈ ಕಲ್ಪದ ಜೀವರುಗಳಿಗೆ ಮುಕ್ತಿ ಮುಂತಾದವುಗಳು ಆದಾಗ್ಯೂ ಮುಂದಿನ ಕಲ್ಪಕ್ಕೆ ಮೋಕ್ಷ ಯೋಗ್ಯರಾದ ವಾಯುದೇವರೇ ಮುಂತಾದ ದೇವತೆಗಳೂ ಮನುಷ್ಯೋತ್ತಮರುಗಳೂ ನಿತ್ಯ ಸಂಸಾರಿಗಳು ತಮೋಯೋಗ್ಯರು ಇದ್ದೇ ಇರುತ್ತಾರೆ. ಇದು ಯಾವ ಕಾರಣಗಳಿಂದಲೂ ವ್ಯತ್ಯಾಸವಾಗುವುದಿಲ್ಲ. ನಾರಾಯಣನು ಅನಂತಾನಂತ ಕಲ್ಪಗಳಲ್ಲಿ ಸೃಷ್ಟಿಸಿದರೂ ಜೀವರುಗಳು ಇಲ್ಲದೇ ಸೃಷ್ಟಿಯು ನಿಂತಿತು ಅನ್ನುವಹಾಗೆ ಇಲ್ಲ. ಸೃಷ್ಟಿಯ ಪ್ರವಾಹವು ಇದ್ದೇ ಇರುತ್ತೆ. ಎಲ್ಲಾ ವಿಧವಾದ ಜೀವರುಗಳ ಗುಣಗಳೂ ಅಸಂಖ್ಯಾತವಾಗಿರುತ್ತವೆ.

**ಶ್ಲೋಕ ॥ ಪೂರ್ತಿಶ್ಚ ನೈವ ನಿಯಮಾದ್ಭವಿತಾ ಹಿ ಯಸ್ಮಾತ್**
**ತಸ್ಮಾತ್ಸಮಾಪ್ತಿಮಪಿ ಯಾಂತಿ ನ ಜೀವಸಂಘಾಃ ।**
**ಆನಂತ್ಯಮೇವ ಗುಣತೋಽಸ್ತಿ ಯತೋ ಹಿ ತೇಷಾ-**
**ಮಿತ್ಥಂ ತತಃ ಸಕಲಕಾಲಗತಾ ಪ್ರವೃತ್ತಿಃ ॥೧೯॥**

ಅರ್ಥ :—ಯಸ್ಮಾತ್= ಯಾವ ಕಾರಣದಿಂದ, ಪೂರ್ತಿಶ್ಚ= ಸೃಷ್ಟಿಯ ಮುಗಿಯುವಿಕೆಯೂ ಕೂಡ, ನಿಯಾಮತ್= ಹರಿ ನಿಯಮದಿಂದ, ನೈವಭವ ವತಿ= ಆಗುವುದಿಲ್ಲವೋ, ತಸ್ಮಾತ್= ಆ ಕಾರಣದಿಂದ, ಜೀವಸಂಘಾಃ= ಜೀವ ರಾಶಿಗಳೂ, ಸಮಾಪ್ತಿಮಪಿ= ಮುಗಿಯುವಿಕೆಯನ್ನೂ, ನಯಾಂತಿ= ಹೊಂದುವು ದಿಲ್ಲ, ಯತಃ= ಯಾವ ಕಾರಣದಿಂದ, ತೇಷಾಂ= ಆ ಜೀವರಾಶಿಗಳ, ಗಣಃ = ಗುಂಪುಗಳು, ಅನಂತಮೇವ = ಕೊನೆಗಾಣದಿರುವಿಕೆಯೇ ಆಗಿ ಇದೆ. ಇತ್ಥಂ= ಇದೇ ರೀತಿಯಲ್ಲಿ, ಪ್ರವೃತ್ತಿಃ= ಸೃಷ್ಟಿ ವ್ಯಾಪಾರವು, ಸಕಲಕಾಲಗತಾ= ಎಲ್ಲಾ ಕಾಲಗಳಲ್ಲಿಯೂ ಇರುತ್ತದೆ.

ತಾತ್ಪರ್ಯ :—ಸೃಷ್ಟಿಯು ಮುಗಿಯುವುದೂ ಇಲ್ಲ. ಸೃಷ್ಟಿಗೆ ಬರತಕ್ಕ ಜೀವರಾಶಿಗಳ ಗುಂಪು ಪೂರ್ತಿಯಾಗುವುದೂ ಇಲ್ಲ. ಈ ರೀತಿ ಇರತಕ್ಕದ್ದು ಹರಿಯ ಸಂಕಲ್ಪ. ಸೃಷ್ಟಿಗೆ ಬರುವ ಜೀವರುಗಳು ಮುಗಿದುಹೋಗಿ ಸೃಷ್ಟಿ ನಿಲ್ಲುವಹಾಗಿಲ್ಲ. ಮತ್ತೇನೆಂದರೆ ಈಗ ಹೇಗೆ ಕೆಲವರು ಮುಕ್ತರಾಗಿಯೂ ಕೆಲವರು ಮುಕ್ತಿಯೋಗ್ಯರಾಗಿಯೂ ಕೆಲವರು ತಮಸ್ಸನ್ನು ಹೊಂದಿದವರಾಗಿಯೂ ಕೆಲವರು ತಮೋಯೋಗ್ಯರಾಗಿಯೂ ಇರುತ್ತಾರೊ ಹಾಗೆ ಕಾಲಪ್ರವಾಹ ಅನಂತವಾದ ಪ್ರಯುಕ್ತ ಅನಂತಕಾಲದಲ್ಲಿಯೂ ಜೀವರುಗಳು ಪ್ರತ್ಯೇತ ಪ್ರತ್ಯೇಕವಾಗಿ ಇದ್ದೇ ಇರುತ್ತಾರೆ.

**ಶ್ಲೋಕ ॥ ಏತ್ಯೈಃ ಸುರಾದಿಭಿರತಿಪ್ರತಿಭಾದಿಯುಕ್ತ್ಯೈಃ**
**ಯುಕ್ತ್ಯೈಃ ಸಹೈವ ಸತತಂ ಪ್ರವಿಚಿಂತಯದ್ಭಿಃ ।**
**ಪೂರ್ತೇರಚಿಂತ್ಯಮಹಿಮಃ ಪರಮಃ ಪರಾತ್ಮಾ**
**ನಾರಾಯಣೋ ಸ್ವಗುಣವಿಸ್ತೃತಿರಸ್ಯಗಾ ಕ್ವ ॥೨೦॥**

ಅರ್ಥ :—ಪರಮಃ= ಶ್ರೇಷ್ಠನಾದ (ಉತ್ತಮ ಜ್ಞಾನವುಳ್ಳ), ಪರಾತ್ಮಾ= ಸರ್ವ ಸ್ವಾಮಿಯಾದ, ನಾರಾಯಣಃ = ನಾರಾಯಣನು, ಅತಿಪ್ರತಿಭಾದಿ ಯುಕ್ತ್ಯೈಃ ಅತಿ= ಅತಿ ನಯವಾದ, ಪ್ರತಿಭಾದಿ = ಜ್ಞಾನವೇ ಮೊದಲಾದವು ಗಳಿಂದ, ಯುಕ್ತ್ಯೈಃ= ಕೂಡಿದ, ಯುಕ್ತ್ಯೈಃ = ಉದ್ಯುಕ್ತರಾದ, ಸಹೈವ= ಮಿಳಿತವಾದ, ಸತತಂ= ಯಾವಾಗಲೂ, ಪ್ರವಿಚಿಂತಯದ್ಭಿಃ= ವಿಶೇಷಾಕಾರ ವಾಗಿ ತನ್ನನ್ನು ಚಿಂತಿಸುತ್ತಿರುವ, ಏತ್ಯೈಃ= ಪ್ರಸಿದ್ಧರಾದ, ಸುರಾದಿಭಿಃ= ದೇವತೆಗಳಿಂದ, ಪೂರ್ತೇಃ = ದೇಶ ಕಾಲ ಗುಣಗಳಿಂದ ಪೂರ್ಣನಾದ ಪ್ರಯುಕ್ತ ಅಚಿಂತ್ಯ ಮಹಿಮಃ = ಆಲೋಚಿಸಲೂ ಕೂಡ ಅಸಾಧ್ಯವಾದ

ಮಹಾತ್ಮೆ ಉಳ್ಳವನು, ಆದುದರಿಂದ, ಅಸ್ಯ = ಈ ನಾರಾಯಣನ, ಗುಣ ವಿಸ್ತೃತಿಃ, ಗುಣ= ಜ್ಞಾನಾನಂದಾದಿ ಗುಣಗಳ,ವಿಸ್ತೃತಿಃ= ಆಧಿಕ್ಯವು,ಅನ್ಯಗಾ= ಇತರರಲ್ಲಿ, ಕ್ವ= ಹೇಗೆ ಬಂದೀತು ?

ತಾತ್ಪರ್ಯ :—ಶ್ರೇಷ್ಠನಾದ ಉತ್ತಮ ಜ್ಞಾನವುಳ್ಳ ಸರ್ವ ಸ್ವಾಮಿಯಾದ, ಅಚಿಂತ್ಯ ಮಹಿಮನಾದ ನಾರಾಯಣನ ಗುಣೈಕದೇಶವನ್ನೂ ಸಹ ಮಹಾ ಜ್ಞಾನಿಗಳಾದ ಬ್ರಹ್ಮಾದಿ ಸಮಸ್ತ ದೇವತೆಗಳೂ ಏಕಮತಿಕರಾಗಿ ಕೂಡಿ ಅನಂತ ಕಾಲಗಳಲ್ಲಿ ಯೋಚಿಸಿದಾಗ್ಯೂ ಸಾಕಲ್ಯೇನ ತಿಳಿಯಲಾರರು. ಅಂಥಾ ಹರಿಯ ಪೂರ್ಣ ಗುಣ ವಿಸ್ತಾರವು ಇತರರಿಗೆ ಯಾವ ಕಾಲಕ್ಕಾದರೂ ಹೇಗೆ ಬಂದೀತು.

**ಶ್ಲೋಕ ॥ ಸಾಮ್ಯಂ ನ ಚಾಸ್ಯ ಪರಮೇಣ ಚ ಕೇನ ಚಾಸ್ಯಂ**
**ಮುಕ್ತೇನ ಚ ಕ್ವಚಿದತಸ್ತ್ವಭಿದಾ ಕುತೋಽಸ್ಯ ।**
**ಪ್ರಾಪ್ಯೇತ ಚೇತನಗಣೈಃ ಸತತಾಸ್ವತಂತ್ರ್ಯೈಃ**
**ನಿತ್ಯಸ್ವತಂತ್ರವಪುಷಃ ಪರಮಾತ್ಪರಸ್ಯ ॥೨೧॥**

ಅರ್ಥ :—ಅಸ್ಯ= ಈ ಹರಿಗೆ, ಸಾಮ್ಯಂ= ಸಮತ್ವವು, ಕೇನಾಪಿ= ಯಾವನೇ ಆಗಲಿ, ಮುಕ್ತೇನ= ಮುಕ್ತನಾದ, ಪರಮೇಣ ಚ =ಬ್ರಹ್ಮನಿಂದಲೂ ಕೂಡ, ನಚಾಸ್ಯಂ= ಹೊಂದಲು ಸಾಧ್ಯವಲ್ಲ. ಅತಃ = ಆದಕಾರಣ, ಅಸ್ಯ= ಈ ಪರಮಾತ್ಮನೊಡನೆ, ಅಭಿದಾ = ಅಭೇದವು, ಕುತಃ = ಎಲ್ಲಿಂದ ಬಂದೀತು ಅಂದರೆ ಬರುವುದೇ ಇಲ್ಲ. ಸತತಾಸ್ವತಂತ್ರ್ಯೈಃ = ಯಾವಾಗಲೂ ಅಸ್ವತಂತ್ರ ರಾದ, ಚೇತನಗಣೈಃ = ಪ್ರಾಣಿಗಳ ಸಮೂಹಗಳಿಗಿಂತಲೂ, ಪರಮಾತ್= ಲಕ್ಷ್ಮೀದೇವಿಗಿಂತಲೂ, ಪರಸ್ಯ = ಸರ್ವೋತ್ತಮನಾದ, ನಿತ್ಯಸ್ವತಂತ್ರವಪುಷಃ, ನಿತ್ಯ = ನಿತ್ಯವಲ್ಲಿ, ಸ್ವತಂತ್ರ = ಸ್ವರೂಪ, ಪ್ರಮಿತಿ = ಪ್ರವೃತ್ತಿಗಳಲ್ಲಿ, ಪರಾನಪೇಕ್ಷವಾದ, ವಪುಷಃ = ದೇಹವುಳ್ಳ, ಪರಮಾತ್ಮನೊಡನೆ ಅಭೇದವು ಎಲ್ಲಿಂದ ಬಂದೀತು.

ತಾತ್ಪರ್ಯ :—ಮುಕ್ತರಾದ ಬ್ರಹ್ಮದೇವರು ಕೂಡಾ ಈ ನಾರಾಯಣ ದೇವರ ಸಾಮ್ಯವನ್ನು ಹೊಂದಲಾರರು. ಹೀಗಿರಲು ಯಾವಾಗಲೂ ಅಸ್ವತಂತ್ರರಾದ ಚೇತನರುಗಳಿಗೆ ನಿರಂತರ ಸ್ವತಂತ್ರ ಸ್ವರೂಪನಾದ, ಪ್ರಕೃತಿಗಿಂತಲೂ ಸರ್ವೋತ್ತಮವಾದ ಈ ಪರಮಾತ್ಮನ ಅಭೇದವು ಹೇಗೆ

ತಾನೆ ಉಂಟಾದೀತು ? ಪರಮಾತ್ಮನು ರಮಾ ಬ್ರಹ್ಮಾದಿಗಳಿಗಿಂತಲೂ ಅತ್ಯುತ್ತಮ ಸ್ವರೂಪ, ಪ್ರಮಿತಿ, ಪ್ರವೃತ್ತಿಗಳಲ್ಲಿ ಅನನ್ಯಾಧಿಪತಿಯು, ಜೀವರು ಮುಕ್ತಿಯಲ್ಲಿಯೂ ಅಸ್ವತಂತ್ರರು, ಹೀಗೆ ಭೇದವೇ ನಿತ್ಯವಾದದ್ದು.

**ಶ್ಲೋಕ ॥ ಅರ್ಥೋಽಯಮೇವ ನಿಖಿಲೈರಪಿ ವೇದವಾಕ್ಯೈಃ**
**ರಾಮಾಯಣೈಃ ಸಹಿತಭಾರತಪಂಚರಾತ್ರೈಃ ।**
**ಅನ್ಯೈಶ್ಚ ಶಾಸ್ತ್ರವಚನೈಃ ಸಹ ತತ್ವಸೂತ್ರೈಃ**
**ನಿರ್ಣೀಯತೇ ಸಹೃದಯಂ ಹರಿಣಾ ಸದೈವ ॥೨೨॥**

ಅರ್ಥ :—ಅಯಮೇವ = ಹಿಂದೆ ೧೦ ಶ್ಲೋಕಗಳಲ್ಲಿ ಹೇಳಿದ, ಅರ್ಥಃ = ಅಭಿಪ್ರಾಯವು, ನಿಖಿಲೈರಪಿ = ಸಮಸ್ತವಾದ, ವೇದವಾಕ್ಯೈಃ = ವೇದ ವಚನಗಳಿಂದಲೂ, ರಾಮಾಯಣೈಃ = ರಾಮಾಯಣದಿಂದಲೂ, ಸಹಿತ ಭಾರತ ಪಂಚರಾತ್ರೈಃ= ಭಾರತದಿಂದ ಕೂಡಿದ ಪಂಚರಾತ್ರ ವಚನಗಳಿಂದಲೂ, ಅನ್ಯೈಶ್ಚ= ಬೇರೆಯಾದ, ಶಾಸ್ತ್ರವಚನೈಃ= ಶಾಸ್ತ್ರಗಳಿಂದಲೂ, ತತ್ವಸೂತ್ರೈಃ = ತತ್ವ ನಿರ್ಣಾಯಕವಾದ, (ವೇದಾರ್ಥ ನಿರ್ಣಾಯಕವಾದ) ಬ್ರಹ್ಮಸೂತ್ರ ಗಳಿಂದಲೂ, ಸಹೈವ = ಸೇರಿಸಿ, ಸಹೃದಯಂ = ಸಾಭಿಪ್ರಾಯವಾಗಿ, ಹರಿಣೈವ = ವೇದವ್ಯಾಸ ದೇವರಿಂದಲೇ, ಸದೈವ = ಎಲ್ಲಾ ಕಾಲದಲ್ಲಿಯೂ, ನಿರ್ಣೀಯತೇ= ನಿರ್ಣಯ ಮಾಡಲ್ಪಟ್ಟಿರುತ್ತೆ.

ತಾತ್ಪರ್ಯ :—ಹಿಂದೆ ಹೇಳಿದ ಅಭಿಪ್ರಾಯಗಳು ಸ್ವಕಪೋಲಕಲ್ಪಿತಗಳಲ್ಲ. ಸಮಸ್ತ ವೇದ ವಾಕ್ಯಗಳಿಂದಲೂ, ಮೂಲ ರಾಮಾಯಣದಿಂದಲೂ, ಭಾರತ ದಿಂದ ಕೂಡಿದ ಪಂಚರಾತ್ರಾಗಮಗಳಿಂದಲೂ, ಇತರ ಉಪ ಪುರಾಣಗಳಿಂದಲೂ ತತ್ವನಿರ್ಣಯದ ಬ್ರಹ್ಮ ಸೂತ್ರಗಳಿಂದಲೂ, ಪ್ರತ್ಯಕ್ಷಾದಿ ಪ್ರಮಾಣಗಳಿಂದಲೂ, ವೇದವ್ಯಾಸ ದೇವರು ನಿರ್ಣಯಿಸಿರುತ್ತಾರೆ. ಅವನ್ನೆಲ್ಲಾ ಮುಂದಿನ ಶ್ಲೋಕ ಗಳಲ್ಲಿ ವ್ಯಕ್ತಪಡಿಸುತ್ತೇವೆ.

**ಶ್ಲೋಕ ॥ ೧ ನಾರಾಯಣಸ್ಯ ನ ಸಮಃ ೨ ಪುರುಷೋತ್ತಮೋಽಹಂ**
**೩ ಜೀವಾಕ್ಷರೇಹ್ಯಧಿಗತೋಽಸ್ಮಿ ತತೋಽನ್ಯದಾರ್ತಂ ।**
**೪ ಮುಕ್ತೋಪಸೃಪ್ಯ ೫ ಇಹ ನಾಸ್ತಿ ಕುತಶ್ಚ ಕಶ್ಚಿತ್**
**ನಾನೇವ ೬ ಧರ್ಮಪೃಥಗಾತ್ಮದೃಗೇತ್ಯಥೋಹಿ ॥೨೩॥**

ಅರ್ಥ :—ನಾರಾಯಣಸ್ಯ = ನಾರಾಯಣ ದೇವರಿಗೆ, ಸಮಃ = ಸದೃ

ಶನು, ನ= ಇಲ್ಲ. ಅಹಂ = ನಾನು; ಪುರುಷೋತ್ತಮಃ = ಪುರುಷ ಶ್ರೇಷ್ಠನು, ಜೀವಾಕ್ಷರೇ= ಜೀವ = ಜೀವರುಗಳನ್ನು, ಅಕ್ಷರ= ಲಕ್ಷ್ಮಿಯನ್ನು, ಅಧಿಗತಃ = ಅವರುಗಳಿಗಿಂತ ಅಧಿಕನಾಗಿ, ಅಸ್ಮಿ= ಹೊಂದಿರುವವನು, ತತಃ= ಆ ಭಗವಂತನಿಗಿಂತಲೂ, ಅನ್ಯತ್= ಬೇರೆಯಾದ ಸರ್ವ ಪ್ರಪಂಚವೂ, ಆರ್ತಂ= ಕ್ಲೇಶದಿಂದ ಕೂಡಿದ್ದು, ಮುಕ್ತೈಃ= ಹರಿಯು ಮುಕ್ತರುಗಳಿಂದ, ಉಪಸೃಪ್ಯಃ= ಹೊಂದಲಿಕ್ಕೆ ಅರ್ಹನು. ಇಹ = ಹರಿಯಲ್ಲಿ, ಕುತಶ್ಚ = ಅವಯವಾಯವ ವಿಭೇದವು ಮತ್ತು ಗುಣಿ ಗುಣಗಳ ಭೇದವು, ಕಶ್ಚಿತ್ = ಅವತಾರಾದಿಗಳ ಭೇದವು, ನಾಸ್ತಿ ಇಲ್ಲವೇ ಇಲ್ಲ. ನಾನೇವ = ಹೀಗಿದ್ದರೂ ಅಜ್ಞ ಜನಗಳಿಗೆ ಅವತಾರಾದಿಗಳ ಭೇದವಿರುವ ಹಾಗೆ ತೋರಿಸುತ್ತಾನೆ. ಧರ್ಮಪೃಥಗಾತ್ಮದೃಕ್ = ಭಗವಂತನ ಗುಣಗಳಿಗೂ ಭಗವಂತನಿಗೂ ಭೇದವನ್ನು ಎಣಿಸಿದವನು, ಅಧಃ = ಅಂಧಂತಮಸ್ಸನ್ನು, ಪತಿಹಿ= ಹೊಂದುತ್ತಾನೆ.

ತಾತ್ಪರ್ಯ :—೧ನೆ ವಾಕ್ಯದಿಂದ "ನ್ಯತಾದೃಶಃ" ಎಂಬ ೧೨ನೇ ಶ್ಲೋಕದಲ್ಲಿ ಹೇಳಿರುವ ಪ್ರಮೇಯವನ್ನು ಸಾಧಿಸುವ "ನಾಸ್ತಿ ನಾರಾಯಣ ಸಮಂ" ಎಂಬ ಶ್ರುತಿ ವಾಕ್ಯವು ಗ್ರಹಿಸಲ್ಪಟ್ಟಿದೆ. ೨ನೆ ವಾಕ್ಯದಿಂದ "ಪರಾತ್ಪರಮಸ್ಯ" ಎಂಬ ಪ್ರಮೇಯವನ್ನು ಸಾಧಿಸುವ "ತಸ್ಮಾತ್ಕ್ಷರಮತೀತೋಽಹಂ" ಇತ್ಯಾದಿ ಗೀತಾ ವಾಕ್ಯಗಳು ಗ್ರಹಿಸಲ್ಪಟ್ಟಿವೆ ೩ನೆ ವಾಕ್ಯದಿಂದ "ಬ್ರಹ್ಮೇಶಪೂರ್ವಕಮಿದಂ" ಎಂಬ ೧೩ನೇ ಶ್ಲೋಕವಲ್ಲಿ ಹೇಳಿರುವ ಪ್ರಮೇಯವನ್ನು ಸಾಧಿಸುವ "ಅನ್ಯದಾರ್ತಂ" ಎಂಬ ಶ್ರುತಿ ವಾಕ್ಯವು ಗ್ರಹಿಸಲ್ಪಟ್ಟಿದೆ. ೪ನೆ ವಾಕ್ಯದಿಂದ "ಸಾಮ್ಯಂ ನ ಚಾಸ್ಯ" ಎಂಬ ೨೧ನೇ ಶ್ಲೋಕದಲ್ಲಿ ಹೇಳಿರುವ ಪ್ರಮೇಯವನ್ನು ಸಾಧಿಸುವ "ಮುಕ್ತೋಪಸೃಪ್ಯ" ಇತ್ಯಾದಿ ಸೂತ್ರ ಗ್ರಹಿಸಲ್ಪಟ್ಟಿದೆ. ೫ನೆ ವಾಕ್ಯದಿಂದ "ಇಹ ನಾಸ್ತಿ ಕುತಶ್ಚ ಕಶ್ಚಿತ್" ಎಂಬ ಪ್ರಮೇಯವನ್ನು ಸ್ಥಾಪಿಸುವ "ನೇಹ ನಾನಾಸ್ತಿ ಕಶ್ಚನ" ಎಂಬ ಶ್ರುತಿಯು ಗ್ರಹಿಸಲ್ಪಟ್ಟಿದೆ. ೬ನೆ ವಾಕ್ಯದಿಂದ "ಸರ್ವತ್ರ ಚ ಸ್ವಗತಭೇದ" ಎಂಬ ೧೧ನೇ ಶ್ಲೋಕದಲ್ಲಿ ಹೇಳಿರುವ ಪ್ರಮೇಯವನ್ನು ಸಾಧಿಸುವ "ಯಥೋದಕಂ" ಇತ್ಯಾದಿ ಶ್ರುತಿವಾಕ್ಯ ಗ್ರಹಿಸಲ್ಪಟ್ಟಿದೆ.

**ಶ್ಲೋಕ ॥ ಆಭಾಸ ಏವ ಪೃಥಗೀಶತ ಏಷ ಜೀವೋ ಮುಕ್ತಸ್ಯ**
**ನಾಸ್ತಿ ಜಗತೋ ವಿಷಯೇ ತು ಶಕ್ತಿಃ ।**
**ಮಾತ್ರಾ ಪರೋಽಸಿ ನತು ತೇಽಶ್ನುವತೇ ಮಹಿತ್ವಂ**
**ಷಾಡ್ಗುಣ್ಯವಿಗ್ರಹ ಸುಪೂರ್ಣಗುಣೈಕದೇಹ ॥೨೪॥**

ಅರ್ಥ :—ಏಷಃ= ಈ, ಜೀವಃ= ಜೀವನು, ಈಶತಃ= ಪರಮಾತ್ಮನಿಗೆ, ಆಭಾಸಃ= ಪ್ರತಿಬಿಂಬನು, ಪೃಥಗೇವ= ಭಿನ್ನನೇವೆ, ಮುಕ್ತಸ್ಯ ತು= ಜೀವನು ಮುಕ್ತನಾದರೂ, ಜಗತಃ = ಜಗತ್ತಿನ, ವಿಷಯೇ = ಸೃಷ್ಟ್ಯಾದಿಗಳನ್ನು ಮಾಡುವ ವಿಷಯದಲ್ಲಿ, ಶಕ್ತಿಃ= ಸಾಮರ್ಥ್ಯವು, ನಾಸ್ತಿ = ಇಲ್ಲವೇ ಇಲ್ಲ. (ಹೇ ! ಭಗವಂತನೇ) ನೀನು, ಮಾತ್ರಾ = ಮಿತಿಗೆ, ಪರಃ= ಮೀರಿದವನು, ಅಸಿ= ಆಗಿದ್ದೀಯೆ (ಅಪರಿಮಿತಮಹಿಮೆಯುಳ್ಳವನು) ತೇ= ನಿನ್ನ, ಮಹಿತ್ವಂ= ಮಹಿಮೆಯನ್ನು ಇತರರು ಯಾರೂ, ನಾಶ್ನುವತೇ= ಹೊಂದಲಾರರು. ತ್ವಂ -ನೀನು) ಷಾಡ್ಗುಣ್ಯವಿಗ್ರಹ= ಐಶ್ವರ್ಯಾದಿ ಗುಣಗಳೇ ದೇಹವಾಗಿ ಉಳ್ಳವನು, ಸುಪೂರ್ಣ ಗುಣೈಕದೇಹ= ಸು= ಸತ್ವಾದಿ ಗುಣಗಳಿಂದ ರಹಿತವಾದ, ಪೂರ್ಣ = ನಾಶವಾಗದ, ಗುಣ= ಜ್ಞಾನಾನಂದಾದಿ ಗುಣಗಳೇ, ಏಕ= ಮುಖ್ಯವಾದ, ದೇಹ= ದೇಹವುಳ್ಳವನು.

ತಾತ್ಪರ್ಯ :—"ಆಭಾಸ ಏವ" ಎಂಬ ವಾಕ್ಯದಿಂದ "ಆಭಾಸಕೋಽಸ್ಯ ಪವನಃ" ಎಂಬ ಪ್ರಮೇಯವನ್ನು ಸಾಧಿಸುವ "ಭಿನ್ನಶ್ಚ" ಎಂಬ ಸೂತ್ರ ಗ್ರಹಿಸಲ್ಪಟ್ಟಿತು. "ಪೃಥಗೀಶತ ಏಷ ಜೀವಃ" ಎಂಬ ವಾಕ್ಯದಿಂದ "ಅಭಿದಾಕುತೋಽಸ್ಯ" ಎಂಬ ಪ್ರಮೇಯವನ್ನು ಸಾಧಿಸುವ "ಪೃಥಗುಪದೇಶಾತ್" "ಭಿನ್ನೋಽಚಿಂತ್ಯಃ" ಇತ್ಯಾದಿ ಪ್ರಮಾಣಗಳು ಗ್ರಹಿಸಲ್ಪಟ್ಟಿದೆ. "ಮುಕ್ತಸ್ಯ ನಾಸ್ತಿ" ಎಂಬ ವಾಕ್ಯದಿಂದ "ಸಾಮ್ಯಂ ನ ಚಾಸ್ಯ" ಎಂಬ ಪ್ರಮೇಯವನ್ನು ಸಾಧಿಸುವ "ಜಗದ್ವ್ಯಾಪಾರವರ್ಜಂ" ಎಂಬ ಸೂತ್ರವು ಗ್ರಹಿಸಲ್ಪಟ್ಟಿದೆ. "ಮಾತ್ರಾಪರೋಽಸಿ" ಎಂಬ ವಾಕ್ಯದಿಂದ "ಸಾಮ್ಯಂ ನಚಾಸ್ಯ" ಎಂಬ ಪ್ರಮೇಯವನ್ನು ಸಾಧಿಸುವ "ಪರೋಮಾತ್ರಯಾ" ಎಂಬ ಶ್ರುತಿಯು ಗ್ರಹಿಸಲ್ಪಟ್ಟಿದೆ. "ಷಾಡ್ಗುಣ್ಯವಿಗ್ರಹ ಸುಪೂರ್ಣ ಗುಣೈಕ ದೇಹ" ಎಂಬ ವಾಕ್ಯಗಳಿಂದ "ಈಶ್ವರತಮಃ ಸರ್ವಶಕ್ತಿಃ" ಇತ್ಯಾದಿ ಪ್ರಮೇಯಗಳನ್ನು ಸಾಧಿಸುವ "ಜಿತಂತೇ ಪುಂಡರೀಕಾಕ್ಷ ಸಚ್ಚಿದಾನಂದ ರೂಪಾಯ" ಇತ್ಯಾದಿ ಪಂಚರಾತ್ರ ವಾಕ್ಯಗಳು ಗ್ರಹಿಸಲ್ಪಟ್ಟಿದೆ.

ಶ್ಲೋಕ || ಮಾಹಾತ್ಮ್ಯದೇಹ ಸೃತಿಮುಕ್ತಿಗತೇಃಶಿವಶ್ಚ ಬ್ರಹ್ಮಾಚತದ್ಗುಣಗತಾ
ನಕಥಂಚನೇಶೌ || ನಶ್ರೀಃಕುತಸ್ತದಪರೇಸ್ಯ ಸುಖಸ್ಯಮಾತ್ರಾಮ
ಶ್ನಂತಿಮುಕ್ತಸುಗಣಾಶ್ಚ ಶತಾವರೇಣ ||೨೫||

ಅರ್ಥ.—ಮಾಹಾತ್ಮ್ಯದೇಹ=ಮಹಾತ್ಮ್ಯಯೇ ಶರೀರವಾಗಿ ಉಳ್ಳವನು, ಸೃತಿಮುಕ್ತಿಗತೆ=ಸೃತಿ=ಸಂಸಾರಕ್ಕೂ, ಮುಕ್ತಿ—ಮುಕ್ತಿಗೂ, ಗತೆ=ಇವುಗಳ ಪ್ರಾಪ್ತಿಗೆ ಕಾರಣನಾದವನು, ತದ್ಗುಣಗತಾ—ಪರಮಾತ್ಮನ ಗುಣಗಳನ್ನು ಸಮಗ್ರವಾಗಿ ತಿಳಿಯುವುದರಲ್ಲಿ, ಶಿವಶ್ಚ—ರುದ್ರನೂ, ಬ್ರಹ್ಮಾಚ=ಚತುರ್ಮುಖಬ್ರಹ್ಮನೂ ಕೂಡ, ಕಥಂಚ=ಯಾವ ರೀತಿಯಿಂದಲೂ, ನೇಶೌ ಶಕ್ತರಲ್ಲ, ಶ್ರೀಃ=ಲಕ್ಷ್ಮಿಯೂ ಕೂಡ, ನ=ಸಮರ್ಥಳಲ್ಲ. ತದಪರೆ=ಇವರುಗಳೇ ಹೀಗಿರುವಾಗ ಇವರಿಗಿಂತ ಅಧಮರಾದ ಇತರರು, ಕುತಃ—ಹ್ಯಾಗೆ ಶಕ್ತರಾಗುವರು, ಆಗುವದೇ ಇಲ್ಲ. ಮುಕ್ತಸುಗಣಾಃ = ಮುಕ್ತರಾದ ಬ್ರಹ್ಮಾದಿಗಳ ಗುಂಪುಗಳು, ಅಸ್ಯ—ಈ ಭಗವಂತನ, ಸುಖಸ್ಯ=ಸುಖದ, ಮಾತ್ರಾಂ—ಬಿಂಬರೂಪವಾದ ಅಂಶವನ್ನು, ಶತಾವರೇಣ—ನೂರುಭಾಗ ಕಡಿಮೆಯಾಗಿ ಶೃತಿಯಲ್ಲಿ ಹೇಳಿದ ಪ್ರಕಾರ, ಅಶ್ನವಂತಿ=ಅನುಭವಿಸುತ್ತಾರೆ.

ತಾತ್ಪರ್ಯ.—"ಮಾಹಾತ್ಮ್ಯದೇಹ" ಎಂಬ ವಾಕ್ಯವಿಂದ "ನಿರ್ದೋಷಪೂರ್ಣವಿಗ್ರಹ" ಎಂಬ ಪ್ರಮೇಯವನ್ನು ಸಾಧಿಸುವ "ಮಹಾವಿಭೂತೇಮಾಹಾತ್ಮ್ಯ' ಇತ್ಯಾದಿ ಮೋಕ್ಷ ಧರ್ಮವಾಕ್ಯ ಗ್ರಹಿಸಲ್ಪಟ್ಟಿತು. "ಶೃತಿಮುಕ್ತಿಗತೇ" ಎಂಬ ವಾಕ್ಯದಿಂದ "ಸಾಮ್ಯಂನಚಾಸ್ಯ' ಇತ್ಯಾದಿ ಪ್ರಮೇಯವನ್ನು ಸಾಧಿಸುವ "ಬಂಧಕೋಭವಪಾಶೇನ' ಎಂಬ ಪ್ರಮಾಣವು ಗ್ರಹಿಸಲ್ಪಟ್ಟಿದೆ. ಶಿವಶ್ಚ ಬ್ರಹ್ಮಾಚ ಇತ್ಯಾ ವಾಕ್ಯದಿಂದ "ಅಸ್ಯಗುಣವಿಸ್ತೃತಿರನ್ಯಗಾಕ್ವ' ಎಂಬ ಪ್ರಮೇಯವನ್ನು ಸಾಧಿಸುವ "ನಾಂತಂಗುಣಾನಾಂ ಅಗುಣಸ್ಯ' ಇತ್ಯಾದಿ ಭಾಗವತ ವಚನವು ಗ್ರಹಿಸಲ್ಪಟ್ಟಿದೆ. "ನಶ್ರೀಃಕುತಃತದಪರೆ' ಎಂಬ ವಾಕ್ಯದಿಂದ "ಅಸ್ಯಗುಣಸ್ತೃತಿರನ್ಯಗಾಕ್ವ" ಎಂಬ ಪ್ರಮೇಯವನ್ನ ಸಾಧಿಸುವ "ಪರೋದಿವಾ ಪರವಿನಾ" ಇತ್ಯಾದಿ ಶ್ರುತಿವಕ್ಯ ಗ್ರಹಿಸಲ್ಪಟ್ಟಿದೆ. "ಅಸ್ಯಸುಖಸ್ಯಮಾತ್ರಾಂ" ಎಂಬ ವಾಕ್ಯದಿಂದ "ಮುಕ್ತೇನಚ" ಇತ್ಯಾದಿ ಪ್ರಮೇಯವನ್ನು ಸಾಧಿಸುವ "ಏತಸ್ಯೈವ ಆನಂದಸ್ಯ" ಇತ್ಯಾಧಿ ಶೃತಿ ವಾಕ್ಯವು ಗ್ರಹಿಸಲ್ಪಟ್ಟಿದೆ.

**ಶ್ಲೋಕ ॥ ಆಭಾಸಕಾಭಾಸ ಪರಾವಭಾಸ ರೂಪಾಣ್ಯಜಸ್ರಾಣಿಚಚೇತನಾನಾಂ ವಿಷ್ಣೋಸ್ಸದೈವಾತಿವಶಾತ್ಕದಾಪಿ ಗಚ್ಛಂತಿ ಕೇಶಾದಿಗಣಾನಮುಕ್ತೌ ॥೨೬॥**

ಅರ್ಥ.— ಚೇತನಾನಾಂ–ಬ್ರಹ್ಮಾದಿಗಳಿಗೆ, ಅಭಾಸಕಾಭಾಸಪರಾವಭಾಸರೂಪಾಣಿ–ಆಭಾಸಕರು ಅಂದರೆ ಪ್ರತಿಬಿಂಬರು, ಆಭಾಸಕಃ=ವಾಯುದೇವರಿಗೆ ಆಭಾಸಕನಾದ ಋದ್ರನು, ತಸ್ಯ ಅವನಿಗೆ ಅಪರಃ=ಅನ್ಯನು ಆಭಾಸಕನು, ಇದೇ ರೀತಿಯಲ್ಲಿ ಇಂದ್ರನೇ ಮುಂತಾದವರುಗಳ, ರೂಪಾಣಿ ಸ್ವರೂಪಗಳು, ಅಜಸ್ರಾಣಿ–ನಿತ್ಯಗಳು, ಕೇಶಾಧಿಗಣಾಃ–ಕಃ–ಬ್ರಹ್ಮನು, ಈಶ=ರುದ್ರನು, ಇವರೇ ಮುಂತಾದ, ಗಣಾ = ಚೇತನ ಸಮೂಹಗಳು, ಮುಕ್ತೌ=ಮುಕ್ತಿಯಲ್ಲಿಯೂ, ಕದಾಪಿ–ಸಂಸಾರಾವಸ್ಥೆಯಲ್ಲಿಯೂ, ಸದೈವ=ಎಲ್ಲಾ ಕಾಲಗಳಲ್ಲಿಯೂ, ಪಿಷ್ಣೋಃ=ನಾರಾಯಣನ, ವಶಾತ್ – ವಶದಿಂದ, ನಗಚ್ಛಂತಿ=ಬಿಟ್ಟು ಹೋಗುವುದಿಲ್ಲ.

ತಾತ್ಪರ್ಯ.— ಪರಮಾತ್ಮನ ಪ್ರತಿಬಿಂಬರುಗಳಾದ ಬ್ರಹ್ಮ ಋದ್ರಾದಿ ಸಮಸ್ತ ಜೀವರುಗಳ ರೂಪಗಳು ನಿತ್ಯವಾದವುಗಳು. ಇವರುಗಳ ಪ್ರತಿಬಿಂಬ ರೂಪಗಳು ಮುಕ್ತಿಯನ್ನು ಹೊಂಧಿದಾಗಲೂ ಈಗಲೂ ಯಾವಾಗಲೂ ನಾರಾಯಣನ ವಶವನ್ನು ಬಿಟ್ಟು ಇರುವುದೇ ಇಲ್ಲ. "ಆಭಾಸಏವಚವೆಂಬ ಸೂತ್ರವು ಆಭಾಸಕೋಸ್ಯ ಪವನಃ ಎಂಬುವುದೂ, ಯಸ್ಯಾಜ್ಞಯಾ ರಹಿತವೆಂಬ ಶ್ರೀಮದಾಚಾರ್ಯರವರ ವಾಕ್ಯಕ್ಕೂ ಪ್ರಮಾಣಭೂತಗಳು.

**ಶ್ಲೋಕ ॥ ಯಸ್ಮಿನ್ ಪರೇನ್ಯೇಪ್ಯಜಜೀವಕೋಶಾ ನಾಹಂಪರಾಯುಃ ಸಮರೀಚ ಮುಖ್ಯಾಃ । ಜಾನಂತಿಯದ್ಗುಣಗಣಾನ್ ನರಮಾದಯೋಪಿ ನಿತ್ಯಸ್ವತಂತ್ರ ಉತಕೋಸ್ತಿತದನ್ಯ ಈಶಃ ॥೨೭॥**

ಅರ್ಥ ಮತ್ತು ತಾತ್ಪರ್ಯ.—ಯಾವ ಸರ್ವೋತ್ತಮನಾದ ಭಗವಂತನಲ್ಲಿ ಇತರವಾದ ಭೂತಭವಿಷ್ಯತ್ತುಗಳಾದ ಅನೇಕ ಬ್ರಹ್ಮಾಂಡಗಳಿದ್ದು ಮುಂದೆ ಇರುತ್ತವೆಯೋ ಯಾವ ಭಗವಂತನ ಗುಣಗಳನ್ನು ನಾನು (ಅಂದರೆ) ಋದ್ರದೇವರು ಎರಡು ಪರಾರ್ಧ ಆಯುಷ್ಯ ಉಳ್ಳ ಬ್ರಹ್ಮದೇವರು, ಮರೀಚಿ ಮೊದಲಾದ ಋಷಿಗಳು, ಲಕ್ಷ್ಮೀ ಮೊದಲಾದವರುಗಳು ತಿಳಿಯುವದಿಲ್ಲವೋ ಅಂಥಾ ನಿತ್ಯಸ್ವತಂತ್ರನಾದ ಭಗವಂತನಿಗಿಂತ ಅನ್ಯನಾದ ಈಶ್ವರನು ಯಾವನಿದ್ದಾನೆ? ಯಾರು ಇಲ್ಲವೆಂದರ್ಥ.

ಯಸ್ಮಿನ್ ಪರೇಸ್ಯೈ" ಎಂಬ ವಾಕ್ಯದಿಂದ "ಏತೈಸುರಾದಿಭಿಃ" ಎಂಬ ಪ್ರಮೇಯವನ್ನು ಸಾಧಿಸುವ "ವಯಂನತಾ ಪ್ರಭವಾಮ" ಎಂಬ ರುದ್ರದೇವರ ವಾಕ್ಯವು "ನಾಹಂಪರಃಯು" ಎಂಬ ವಾಕ್ಯದಿಂದ "ನಾಹಂ ಪರಾಯುರುಷಯೋ" ಎಂಬ ಭಾಗವತ ವಾಕ್ಯವು ಗ್ರಹಿಸಲ್ಪಟ್ಟಿದೆ.

**ಶ್ಲೋಕ ॥ ನೈವೇಕ ಏವಪುರುಷಃ ಪುರುಷೋತ್ತಮೋನಾ ನೇಕಃಕುತಸ್ಸ.ಪು ರುಷೋಯತಯೇವಜಾತ್ಯಾ ॥ ಅರ್ಥಾಚ್ಚ ತೇಶ್ಚ ಗುಣತೋ ನಿಜ ರೂಪತಶ್ಚ ನಿತ್ಯಾನ್ಯ ಏವಕಥಮಸ್ಮಿಸ ಇತ್ಯಪಿಸ್ಯಾತ್ ॥೨೮॥**

ಅರ್ಥ ಮತ್ತು ತಾತ್ಪರ್ಯ.—ಜೀವನು ಒಬ್ಬನೇ ಅಲ್ಲ, ಭಗವಂತನು ಪುರುಷ ಶ್ರೇಷ್ಟನು ಒಬ್ಬನೇ. ಜೀವನು ಯಾವ ಕಾರಣದಿಂದಲೂ ಭಗ ವಂತನಾಗಲಾರನು. ಭಗವಂತನಿಂದ ಉತ್ಪತ್ತಿ ಪಡೆಯುವದರಿಂದಲೂ ಆ ಭಗವಂತನು ಪ್ರಯೋಜನಾಪೇಕ್ಷೆ ಇಲ್ಲದವನಾದುದರಿಂದಲೂ ಜೀವನು ಪ್ರ ಯೋಜನಾಪೇಕ್ಷೆಯುಳ್ಳವನಾದ್ದರಿಂದಲೂ, ಜೀವನು ಅಲ್ಪಗುಣನಾಗಿಯೂ ಭಗವಂತನು ಅನಂತ ಗುಣ ಉಳ್ಳವನಾಗಿಯೂ ಇರುವುದರಿಂದ ಜೀವನು ಪರತಂತ್ರನು, ಭಗವಂತನು ಸ್ವತಂತ್ರನು, ಈ ಕಾರಣಗಳಿಂದ ಅನಾದ್ಯ ನಂತ ಕಾಲಕ್ಕೂ ಜೀವನು ಭಗವಂತನಿಂದ ಭಿನ್ನನು, ಹೀಗಿರಲು ನಾನೇ ಬ್ರಹ್ಮನೆಂಬುವದು ಹೇಗೆ ಕೂಡೀತು.

**ಶ್ಲೋಕ ॥ ಸರ್ವೋತ್ತಮೋ ಹರಿರಿದಂತು ತದಾಜ್ಞಯೈವ ಚೇತುಂಕ್ಷಮಂ ಸ ತುಹರಿಃ ಪರಮಸ್ವತಂತ್ರಃ ॥ ಪೂರ್ಣಾವ್ಯಯಾಗಣಿತ ನಿತ್ಯಗುಣಾ ರ್ಣವೋಸಾವಿತ್ಯೇವವೇದವಚನಾನಿ ಪರೋಕ್ಷ್ಯಯಶ್ಚ ॥೨೯॥**

ಅರ್ಥ— ಹರಿಃ=ನಾರಾಯಣನು, ಸರ್ವೋತ್ತಮಃ=ಸರ್ವೋತ್ತಮನು ಇದಂತು-ಈ ಜಗತ್ತು ಆದರೋ, ತದಾಜ್ಞಯೈವ=ತತ್=ಆ ಪರಮಾತ್ಮನ, ಆಜ್ಞಯೈವ-ಅಪ್ಪಣೆಯಿಂದಲೇ, ಚೇತುಂ = ಚೇಷ್ಟೆ ಮಾಡುವುದಕ್ಕೂ ಮತ್ತು ತಿಳಿಯುವದಕ್ಕೂ, ಕ್ಷಮಂ=ಸಮರ್ಥವಾಗುತ್ತದೆ, ಸತುಹರಿ=ಆ ನಾರಾಯಣನು, ಪರಮ ಸ್ವತಂತ್ರಃ-ಅನನ್ಯಾಧೀನನು, ಅಸೌ-ಈ ನಾರಾ ಯಣನು, ಪೂರ್ಣಾವ್ಯಯಾಗಣಿತ ನಿತ್ಯಗುಣಾರ್ಣವಃ-ಪೂರ್ಣ = ವ್ಯಾ

ಪ್ತವಾದ, ಅವ್ಯಯ=ಹ್ರಾಸರಹಿತವಾದ, ಅಗಣಿತ=ಅಸಂಖ್ಯಾತವಾದ, ನಿತ್ಯಾ=ಚತುರ್ವಿಧ ನಾಶರಹಿತವಾದ, ಗುಣ=ಜ್ಞಾನಾನಂದಾದಿ ಗುಣಗಳಿಗೆ ಅರ್ಣವಃ=ಸಮುದ್ರಪ್ರಾಯನಾದವನು, ಇತ್ಯೇವ=ಈ ಪ್ರಕಾರವಾಗಿ, ವೇದವಚನಾನಿ-ವೇದ ವಾಕ್ಯಗಳು, ಪರೋಕ್ತಯಶ್ಚ=ವೇದವ್ಯಾಸದೇವರ ವಚನವೂ ಕೂಡ ಪ್ರತಿಪಾದಿಸುತ್ತವೆ.

ತಾತ್ಪರ್ಯ.—ನಾರಾಯಣನು ಸರ್ವೋತ್ತಮನು, ಚೇತನಾಚೇತನವಾದ ಈ ಪ್ರಪಂಚವಾದರೋ ? ಅವನ ಆಜ್ಞೆಯಿಂದಲೇ ಚೇಷ್ಟೆ ಮಾಡುವುದಕ್ಕೂ ಪ್ರವೃತ್ತಿಯಾಗುವುದಕ್ಕೂ, ತಿಳಿಯುವದಕ್ಕೂ, ಸಮರ್ಥವಾಗುತ್ತದೆ ಆ ಸರ್ವೋತ್ತಮನಾದ ಪರಮಾತ್ಮನು ಅನನ್ಯಾಧೀನನು. ( ಸ್ವಾತಂತ್ರನು ) ಪೂರ್ಣವಾದ ನಾಶರಹಿತವಾದ ಎಣಿಸುವುದಕ್ಕೆ ಆಗದ ಜ್ಞಾನಾನಂದಾದಿ ಗುಣಗಳಿಗೆ ಸಮುದ್ರಪ್ರಾಯನೆಂಬರ್ಥವು ವೇದ ವಾಕ್ಯಗಳಿಂದಲೂ ವ್ಯಾಸರ ವಾಕ್ಯಗಳಿಂದಲೂ ತಿಳಿದು ಬಂಧಿದೆ. ಆದ್ದರಿಂದ ಹಿಂದೆ ನಾವು ಹೇಳಿದರ್ಥವೆಲ್ಲವೂ ಪ್ರಮಾಣವೆಂದು ಶ್ರೀಮದಾಚಾರ್ಯರು ಸಂಗ್ರಹರೂಪವಾಗಿ ಈ ಶ್ಲೋಕದಿಂದಲೂ ಹೇಳಿರುತ್ತಾರೆ.

**ಶ್ಲೋಕ ।। ಋಗಾದಯಶ್ಚ ಚತ್ವಾರಃ ಪಂಚರಾತ್ರಂಚಭಾರತಂ ।। ಮೂಲರಾಮಾಯಣಂ ಬ್ರಹ್ಮಸೂತ್ರಂಮಾನಂಸ್ವತಃಸ್ಮೃತಂ।।೩೦।।**

ಅರ್ಥ.—ಚತ್ವಾರಃ=ನಾಲ್ಕು ಆದ, ಋಗಾದಯಶ್ಚ = ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದಗಳು, ಪಂಚರಾತ್ರಂಚ= ಪಾಂಚರಾತ್ರಾಗಮವೂ, ಭಾರತಂ-ಭಾರತವು, ಮೂಲರಾಮಾಯಣಂ= ವೇದವ್ಯಾಸ ಪ್ರಣೀತವಾದ ಶತಕೋಟಿರಾಮಾಯಣವು, ಬ್ರಹ್ಮಸೂತ್ರಂ= ಬ್ರಹ್ಮಸೂತ್ರಗಳು, ಸ್ವತಃ-ಸ್ವತಂತ್ರವಾದ, ಮಾನಂ-ಪ್ರಮಾಣವೆಂದು, ಸ್ಮೃತಂ-ಹೇಳಿದೆ.

ತಾತ್ಪರ್ಯ.—ಹಿಂದಿನ ವಾಕ್ಯಗಳಿಂದ ವಿಷ್ಣುವಿಗೆ ಸರ್ವೋತ್ತಮತ್ವ ಪ್ರತಿಪಾದಕವಾಗುವುದಿಲ್ಲ. ಇವುಗಳಿಗೆ ಬೇರೆ ಅರ್ಥವನ್ನು ಕಲ್ಪನೆ ಮಾಡಬಹುದು, ಎಂದು ಆಕ್ಷೇಪ ಬಂದರೆ ಅದಕ್ಕೆ ಭವಿಷ್ಯೋತ್ತರ ಪುರಾಣದ ಶ್ಲೋಕಗಳನ್ನು ಹೇಳಿ ಸಮಾಧಾನ ಹೇಳುತ್ತಾರೆ- ಈ ಶ್ಲೋಕದಲ್ಲಿ ಹೇಳಿದ

ವೇದಗಳು, ಪಂಚರಾತ್ರಾಗಮವೂ, ಭಾರತವೂ, ವ್ಯಾಸಪ್ರಣೀತ (ನರ ನಾರಾಯಣ) ಪ್ರಣೀತವಾದ ಶತಕೋಟಿ ರಾಮಾಯಣವೇ ಮುಂತಾದವು ಬ್ರಹ್ಮಸೂತ್ರವೂ ಕೂಡ ಸ್ವತಃ ಪ್ರಮಾಣಗಳು, ಅಂದರೆ ಸಂವಾದ ನಿರಪೇಕ್ಷ ಪ್ರಮಾಣವು ಎಂದು ತಿಳಿಯಬೇಕು. ಈ ಸಂವಾದ ನಿರಪೇಕ್ಷವು ಎರಡು ಪ್ರಕಾರವಾಗಿರುತ್ತೆ. ಅಪೌರುಷೇಯದಿಂದಲೂ ಆಪತ್ವದಿಂದಲೂ, ವೇದ ಗಳು ಅಪೌರುಷೇಯ, ಉಳಿದವು ಆಪತ್ತಮರಾದ ವೇದವ್ಯಾಸರೇ ಮುಂತಾ ದವರಿಂದ ಮಾಡಿದವುಗಳು. ಆದುದರಿಂದ ಪರಮಾಪ್ತತಮನಾದವುಗಳು, ಇವುಗಳಿಂದಲೇ ಸರ್ವೋತ್ತಮತ್ವವು ವಿಷ್ಣುವಿಗೆ ಸ್ಥಾಪಿತವಾಗುತ್ತದೆ.

ಶ್ಲೋಕ || ಅವಿರುದ್ಧಂತು ಯಚ್ಛಾಸ್ಯ ಪ್ರಮಾಣಂ ತಚ್ಚ ನಾನ್ಯಥಾ || ಏತದ್ವಿ ರುದ್ಧಂಯತ್ತು ಸ್ಯಾನ್ನ ತನ್ಮಾನಂಕಥಂಚನ ||೩೧||

ಅರ್ಥ.—ಅಸ್ಯ=ಉಕ್ತ ಪ್ರಮಾಣಭೂತವಾದ ಋಗಾದಿ ಸಮೂಹಕ್ಕೆ ಯತ್-ಯಾವ ಗ್ರಂಥವು, ಅವಿರುದ್ಧ=ವಿರುದ್ಧವಾಗುವುದಿಲ್ಲವೋ, ತತು= ಅದು, ಪ್ರಮಾಣಂಚ=ಪ್ರಮಾಣವೆಂದು ತಿಳಿಯಬೇಕು. ತಚ್ಚ=ಅದಕ್ಕೆ, ಅನ್ಯತಾ=ಬೇರೆಯಾಗಿ, ನ=ಇಲ್ಲ, ಏತದ್ವಿರುದ್ಧಂ=ಈ ಋಗಾದಿಗಳಿಗೆ ವಿ ರುದ್ಧವಾದವು ಯಾವವೋ, ತತ್=ಅವು, ಕಥಂಚನ-ಯಾವರೀತಿಯಿಂದ ಲೂ, ಮಾನಂ=ಪ್ರಮಾಣವು, ನಸ್ಯಾತ್=ಆಗುವುದಿಲ್ಲ.

ತಾತ್ಪರ್ಯ.—ಋಗಾದಿಶಾಸ್ತ್ರಗಳಿಗೆ ಅವಿರುದ್ಧವಾದ ಇತರ ಗ್ರಂ ಥಗಳೆಲ್ಲವೂ ಪ್ರಮಾಣಗಳೆಂದು ತಿಳಿಯಬೇಕು. ಇವಕ್ಕೆ ವಿರುದ್ಧವಾಗಿರು ವುದು ಯಾವಕಾರಣದಿಂದಲೂ ಪ್ರಮಾಣವೆಂದು ಹೇಳಿಸಿಕೊಳ್ಳುವುದಿಲ್ಲ. ಪ್ರಮಾಣ ಎಂದರೆ ಯಥಾರ್ಥಜ್ಞಾನವೆಂದು ತಿಳಿಯಬೇಕು.

ಶ್ಲೋಕ || ವೈಷ್ಣವಾನಿ ಪುರಾಣಾನಿ ಪಂಚರಾತ್ರಾತ್ಮಕತ್ವತಃ || ಪ್ರಮಾಣಾನ್ಯೇ ವಮನ್ವಾದ್ಯಾಃ ಸ್ಮೃತಯೋಽಪ್ಯನುಕೂಲತಃ ||೩೨||

ಅರ್ಥ.—ವೈಷ್ಣವಾನಿ=ವಿಷ್ಣುವಿಗೆ ಸರ್ವೋತ್ತಮತ್ವವನ್ನು ಹೇಳುವ, ಪುರಾಣಾನಿ-ಪುರಾಣಗಳು, ಪಂಚರಾತ್ರಾತ್ಮಕತ್ವತಃ=ಪಂಚರಾತ್ರಾರ್ಥ ಪ್ರ

ತಿಪಾದಕವಾದ್ದರಿಂದ, ಪ್ರಮಾಣಾನ್ಯೇವ=ಪ್ರಮಾಣ ಭೂತಗಳೇ ಎಂದು ತಿಳಿಯಬೇಕು, ಮನ್ವಾದ್ಯಾಃ-ಮನುವೇ ಮುಂತಾದವರುಗಳಿಂದ, ರಚಿತವಾದ, ಸ್ಮೃತಯೋಽಪಿ=ಸ್ಮೃತಿಗಳೂ ಕೂಡ, ಅನುಕೂಲತಃ=ಪಂಚರಾತ್ರಾರ್ಥ ಪ್ರತಿಪಾದಕವಾಗಿದ್ದರೆ ಪ್ರಮಾಣಗಳು.

ತಾತ್ಪರ್ಯ.—ಇತಿಹಾಸದ ಜೊತೆಯಲ್ಲಿ ಪುರಾಣಗಳು ಪ್ರಮಾಣವೆಂದು ಶ್ರುತಿಯಲ್ಲಿ ಹೇಳಿರುತ್ತೆ. ಹೀಗಿರುವಾಗ ಹಿಂದಿನ ಶ್ಲೋಕಗಳಲ್ಲಿ ಶ್ರೀಮದಾಚಾರ್ಯರವರು ಸ್ವತಃ ಪ್ರಮಾಣ್ಯದ ಜೊತೆಯಲ್ಲಿ ಯಾಕೆ ಸೇರಿಸಲಿಲ್ಲವೆಂದರೆ ಪುರಾಣಗಳಲ್ಲಿ ವೈಷ್ಣವಪುರಾಣವೇ ಸಮಾಧಿಭಾಷಾತ್ಮಕವಾದ್ದರಿಂದಲೂ ಮತ್ತು ಪಾಂಚರಾತ್ರಾರ್ಥಪ್ರತಿಪಾದಕವಾದ್ದರಿಂದಲೂ ಅದೇ ಪ್ರಮಾಣವು, ಶೈವಾದಿ ಪುರಾಣಗಳೂ ಕೂಡ ವೈಷ್ಣವಪುರಾಣಕ್ಕೆ, ಅನುಕೂಲವಾದವುಗಳು ಆಗಿದ್ದರೆ ಅವೂ ಕೂಡ ಪ್ರಮಾಣಗಳು. ಮನ್ವಾದಿ ಸ್ಮೃತಿಗಳೂ ಕೂಡ ಈ ಸ್ವತಃ ಪ್ರಾಮಾಣ್ಯವಾದ ಋಗಾದಿಗಳಿಗೆ ಅನುಕೂಲವಾದ ಭಾಗವುಮಾತ್ರ ಪ್ರಮಾಣವು. ಇವಕ್ಕೆ ವಿರುದ್ಧವಾದ ಭಾಗವು ಅಪ್ರಮಾಣವೆಂದು ತಿಳಿಯುವುದಕ್ಕಾಗಿ ಪುರಾಣಗಳನ್ನು ಶ್ರೀಮದಾಚಾರ್ಯರು ಸ್ವತಃ ಪ್ರಾಮಾಣ್ಯದಲ್ಲಿ ಸೇರಿಸಲಿಲ್ಲ.

**ಶ್ಲೋಕ ॥ ಏತೇಷು ವಿಷ್ಣೋರಾಧಿಕ್ಯ ಮುಚ್ಯತೇನ್ಯಸ್ಯನಕ್ವಚಿತ್ ॥**
**ಅತಃತದೇವಮಂತವ್ಯಂ ನಾನ್ಯಥಾತು ಕಥಂಚನ ॥೩೩॥**

ಅರ್ಥ.—ಏತೇಷು=ಈ ಋಗಾದಿಗಳಲ್ಲಿ, ವಿಷ್ಣೋಃ=ನಾರಾಯಣನಿಗೆ ಆಧಿಕ್ಯಂ=ಸರ್ವೋತ್ತಮತ್ವವು, ಉಚ್ಯತೇ=ಹೇಳುತ್ತದೆ. ಅನ್ಯಸ್ಯ-ರುದ್ರಾದಿಗಳಿಗೆ, ನಕ್ವಚಿತ್=ಹೇಳುವುದಿಲ್ಲ, ಅತಃ-ಆದ್ದರಿಂದ (ಆಪತತಃ-ತೋರುವ ರುದ್ರಾದಿ ಶೃತಿಗಳೂ ಕೂಡ ಸರ್ವ ಶಬ್ದವಾಚ್ಯನಾದ ಹರಿಯಲ್ಲಿ ಸಮನ್ವಯಮಾಡೋಣದರಿಂದ) ತದೇವ=ಹರ್ಯಾಧಿಕ್ಯವನ್ನೆ, ಮಂತವ್ಯಂ=ತಿಳಿಯಬೇಕು. ಕಥಂಚನಃ=ಯಾವುದಾದರೊಂದುಪಾಯದಿಂದ, ಅನ್ಯಥಾ=ಪಾಶುಪತಾದಿ ಆಗಮಗಳಲ್ಲಿ ಹೇಳಿದ ಪಶುಪತಿ ಸರ್ವೋತ್ತಮತ್ವವನ್ನು, ನ ಮಂತವ್ಯಂ-ತಿಳಿಯತಕ್ಕದ್ದಲ್ಲ.

ತಾತ್ಪರ್ಯ.—ವೇದಾದಿಗಳಲ್ಲಿ ಹರಿಗೇನೇ ಸರ್ವೋತ್ತಮತ್ವವು ಹೇಳಿ

ರುತ್ತೆ. ಆ ಪಾತತಃ ಋದ್ರಾದಿಗಳಿಗೆ ಹೇಳುವ (ಏಕೋ ರುದ್ರೋನದಿತೀ ಯೋವತಸ್ಥೆ) ಎಂಬ ವೇದವಾಕ್ಯಗಳೂ ಸರ್ವಶಬ್ದವಾಚ್ಯನಾದ ಹರಿಯನ್ನೇ ಹೇಳುತ್ತವೆ. ಆದ್ದರಿಂದ ವೇದಾದಿಗಳಲ್ಲಿ ಹೇಳಿ ನಿರ್ಣಯಮಾಡಿದ್ದನ್ನೇ ಇಲ್ಲಿಯೂ ತಿಳಿಯಬೇಕು. ಬೇರೆ ರೀತಿಯಲ್ಲಿ ಪಾಶುಪತಾದಿ ಆಗಮಗಳಿಂದ ಹೇಳಿದ ಪಶುಪತಿ ಸರ್ವೋತ್ತಮತ್ವವನ್ನು ತಿಳಿಯಬಾರದು.

**ಶ್ಲೋಕ ॥ ಮೋಹಾರ್ಥಾನ್ಯನ್ಯ ಶಾಸ್ತ್ರಾಣಿ ಕೃತಾನ್ಯೇವಾಜ್ಞಯಾಹರೇಃ ॥**
**ಅತಸ್ತೇಷೂಕ್ತಮಗ್ರಾಹ್ಯಮಸುರಾಣಾಂ ತಮೋಗತೇಃ ॥೩೪॥**

ಅರ್ಥ.—ಅನ್ಯಶಾಸ್ತ್ರಾಣಿ=ಪಾಶುಪತಾದಿ ಶಾಸ್ತ್ರಗಳು, ಮೋಹಾರ್ಥಾನಿ=ಅಜ್ಞಾನೋತ್ಪಾದಕಗಳು (ಈ ಶಾಸ್ತ್ರಗಳು) ಹರೇಃ=ನಾರಾಯಣನ ಆಜ್ಞಯೈವ=ಅಪ್ಪಣೆಯಿಂದಲೇ, ಕೃತಾನಿ=ಮಾಡಲ್ಪಟ್ಟವು. ಅತಃ=ಆದ್ದರಿಂದ, ತೇಷು=ಅವುಗಳಲ್ಲಿ, ಉಕ್ತ-ವೇದಾದಿಗಳಿಗೆ ವಿರುದ್ಧವಾಗಿ ಹೇಳಿರುವ ಸಂಗತಿಗಳು, ಅಸುರಾಣಾಂ=ದೈತ್ಯರುಗಳಿಗೆ, ತಮೋಯೋಗತೇಃ-ತಮಃಪ್ರಾಪ್ತ್ಯರ್ಥವಾಗಿ, ಆದ್ದರಿಂದ, ಅಗ್ರಾಹ್ಯಾಣಿ-ಸಜ್ಜನರು ಸ್ವೀಕರಿಸಬಾರದು.

ತಾತ್ಪರ್ಯ.—ಋದ್ರಾದಿಗಳಿಂದ ಪ್ರಣೀತವಾದ ಪಾಶುಪತಾದಿ ಶಾಸ್ತ್ರಗಳು ದೈತ್ಯರ ಮೋಹಕ್ಕೆ ಹರಿಯ ಆಜ್ಞಾನುಸಾರವಾಗಿ ಮಾಡಲ್ಪಟ್ಟಿರುತ್ತವೆ. ಅವುಗಳು ಮೋಹಶಾಸ್ತ್ರಗಳು, ದೈತ್ಯರ ತಮಃಪ್ರಾಪ್ತಿಗಾಗಿ ಹೇಳಲ್ಪಟ್ಟವುಗಳು ಆದಕಾರಣ ಸಜ್ಜನರು ಸ್ವೀಕರಿಸತಕ್ಕವುಗಳಲ್ಲ.

**ಶ್ಲೋಕ ॥ ಯಸ್ಮಾತ್ಕೃತಾನಿತಾನೀಹ ವಿಷ್ಣುನೋಕ್ತ್ಯೈ ಶಿವಾದಿಭಿಃ ॥**
**ಏಷಾಂಯನ್ನ ವಿರೋಧಿಸ್ಯಾತ್ತತ್ಪ್ರೋಕ್ತಂ ತನ್ನವಾರ್ಯತೆ ॥೩೫॥**

ಅರ್ಥ.—ವಿಷ್ಣುನಾ-ಹರಿಯಿಂದ, ಉಕ್ತ್ಯೈಃ=ಆಜ್ಞಪ್ತರಾದ, ಶಿವಾದಿಭಿಃ=ರುದ್ರದೇವರೇ ಮುಂತಾದವರುಗಳಿಂದ, ತಾನಿ=ಅವುಗಳು, ಯಸ್ಮಾತ್-ಯಾವಕಾರಣದ ನಿಮಿತ್ತವಾಗಿ, ಉಕ್ತಾನಿ=ಹೇಳಲ್ಪಟ್ಟವೆಯೋ, ಆದ್ದರಿಂದ ಗ್ರಾಹ್ಯವಲ್ಲವೆಂದು ತಿಳಿಯಬೇಕು. ಏಷಾಂ=ವೇದಾದಿಗಳಿಗೆ, ಯತ್ – ಮೋಹಶಾಸ್ತ್ರದಲ್ಲಿ ಉಕ್ತವಾದವುಗಳಲ್ಲಿ ಯಾವುದು, ವಿರೋಧಿ=

ವಿರುದ್ಧವು, ನಸ್ಯಾತ್=ಆಗುವುದಿಲ್ಲವೋ, ತತ್ಪ್ರೋಕ್ತಂ = ಆ ಪಾಶುಪತಾ ದ್ಯಾಗಮಗಳಲ್ಲಿ ಹೇಳಿದ ವಿಷಯವು, ಇಹ=ಈ ಗ್ರಂಥದಲ್ಲಿ ( ನನ್ನಿವಾರ್ಯತೇ= ನನಷಿದ್ಯತೆ-ನಿಷೇಧಮಾಡುವುದಿಲ್ಲವು.

ತಾತ್ಪರ್ಯ.—ಹರಿಯಿಂದ ಆಜ್ಞಪ್ತರಾದ ರುದ್ರದೇವರೇ ಮುಂತಾ ದವರು ದೈತ್ಯರ ತಮಃಪ್ರಾಪ್ತ್ಯರ್ಥವಾಗಿ ಪಾಶುಪತಾದ್ಯಾಗಮಗಳನ್ನು ಮಾಡಿರುವರು. ಅವುಗಳಲ್ಲಿ ಹೇಳಿದ ವೇದಾದಿಗಳಿಗೆ ವಿರುದ್ಧವಾದ ಸಂಗ ತಿಗಳು ಗ್ರಾಹ್ಯವಲ್ಲವು. ಅವುಗಳಲ್ಲಿಯೂ ಈ ವೇದಾದಿಗಳಿಗೆ ವಿರುದ್ಧವ ಲ್ಲದ ಭಾಗವು ಗ್ರಾಹ್ಯವು, ಮತ್ತು ಪ್ರಮಾಣವೂ ಎಂದು ತಿಳಿಯಬೇಕು.

**ಶ್ಲೋಕ || ವಿಷ್ಣ್ವಾಧಿಕ್ಯ ವಿರೋಧೀನಿಯಾನಿ ವೇದವಚಾಂಸ್ಯಪಿ || ತಾನಿಯೋ ಜ್ಞಾನ್ಯಾನುಕೂಲ್ಯಾದ್ವಿಷ್ಣ್ವಾಧಿಕ್ಯಸ್ಯ ಸರ್ವಶಃ ||೩೬||**

ಅರ್ಥ.—ವಿಷ್ಣ್ವಾಧಿಕ್ಯವಿರೋಧೀನಿ – ವಿಷ್ಣು ಸರ್ವೋತ್ತಮತ್ವಕ್ಕೆ ವಿರುದ್ಧವಾಗಿ ತೋರುವ, ಯಾನಿ=ಯಾವ, ವೇದವಾಕ್ಯಾನಿ=ವೇದವಾಕ್ಯಗ ಳನ್ನೂ ಕೂಡ, ವಿಷ್ಣ್ವಾಧಿಕ್ಯಸ್ಯ=ವಿಷ್ಣುವಿನ ಸರ್ವೋತ್ತಮತ್ವಕ್ಕೆ, ಸರ್ವತಃ= ಎಲ್ಲಾಪ್ರಕಾರದಿಂದಲೂ, ಆನುಕೂಲ್ಯಾತ್=ಅನುಕೂಲತೆ ಇರುವುದರಿಂದ, ತಾನಿ=ಆ ವೇದವಾಕ್ಯಗಳನ್ನು, ಯೋಜ್ಯಾನಿ = ವಿಷ್ಣು ಸರ್ವೋತ್ತಮತ್ವಕ್ಕೆ ಅನುಕೂಲವಾಗಿ ಯೋಚಿಸಿ ಅರ್ಥಮಾಡಬೇಕು.

ತಾತ್ಪರ್ಯ.—ವಿಷ್ಣು ಸರ್ವೋತ್ತಮತ್ವಕ್ಕೆ ವಿರುದ್ಧವಾಗಿ ತೋರುತ್ತಿ ರುವ ವೇದವಾಕ್ಯಗಳಿಗೂ ಕೂಡ ವಿಷ್ಣುಸರ್ವೋತ್ತಮತ್ವಕ್ಕೆ ವಿರುದ್ಧಬಾರ ದಹಾಗೆ ಅನ್ವಯಮಾಡಿ ಅರ್ಥ ಹೇಳಲಿಕ್ಕೆ ಬರುತ್ತದೆ. ಆದ್ದರಿಂದ ವೇದ ಗಳವಾಕ್ಯಗಳಿಗೆ ಪೂರ್ವೋತ್ತರ ವಿರುದ್ಧವಿಲ್ಲದಹಾಗೆ ಅರ್ಥವನ್ನು ಹೇಳ ಲಿಕ್ಕೆ ಆಗುವುದೆಂದು ನಿರ್ಧರವಾಗಿ ತಿಳಿಯಬೇಕು.

**ಶ್ಲೋಕ || ಅವತಾರೇಷು ಯತ್ಕಿಂಚಿದ್ದರ್ಶಯೇನ್ನರವದ್ಧರಿಃ || ತಚ್ಚಾಸುರಾ ಣಾಂ ಮೋಹಾಯ ದೋಷಾವಿಷ್ಣೋರ್ನಹಿಕ್ವಚಿತ್ ||೩೭||**

ಅರ್ಥ.— ಹರಿಃ=ನಾರಾಯಣನು, ಅವತಾರೇಷು=ತನ್ನ ಅವತಾರಗ

ಕಲ್ಲಿ, ಸದಸತ್=ಮನುಷ್ಯರ ಹಾಗೆ, ಯತ್ಕಿಂಚಿತ್ = ಸ್ತ್ರೀ ವಿಯೋಗಾದಿ ದುಃಖಗಳನ್ನು, ದರ್ಶಯೇತ್-ತೋರಿಸುತ್ತಾನೋ, ತತ್-ಅದನ್ನು, ಅಸುರಾಣಾಂ=ದೈತ್ಯರುಗಳನ್ನು, ಮೋಹಾಯ = ಮೋಹಪಡಿಸುವುದಕ್ಕೆಂದು ತಿಳಿಯಬೇಕು. ವಿಷ್ಣೋಃ=ವಿಷ್ಣುವಿನಲ್ಲಿ, ಕ್ವಚಿತ್-ಸ್ವಲ್ಪವು, ದೋಷಾಃ-ದೋಷಗಳು, ನಹಿ-ಇಲ್ಲವೇ ಇಲ್ಲ.

ತಾತ್ಪರ್ಯ.—ಶ್ರೀಹರಿಯು ತಾನು ಮನುಷ್ಯನ ಹಾಗೆ ಮಾಡಿದಾಗ ಅವತಾರ ಮನುಷ್ಯನಂತೆಯೇ ಸ್ತ್ರೀವಿಯೋಗಾದಿ ದುಃಖಗಳನ್ನು ತೋರಿಸುತ್ತಾನೆ. ಅದು ಅಸುರಜನ ಮೋಹಕ್ಕೆ ಎಂದು ತಿಳಿಯಬೇಕು. ಆ ಭಗವಂತನಿಗೆ ಯಾವ ಕಾಲದಲ್ಲೂ ಯಾವ ಅವಸ್ಥೆಯಲ್ಲೂ ಯಾವ ಕಾರಣದಿಂದಲೂ ಯಾವ ದೋಷಗಳೂ ಇಲ್ಲವೆಂದು ತಿಳಿಯಬೇಕು.

ಶ್ಲೋಕ॥ ಅಜ್ಞತ್ವಂ ಪಾರವಶ್ಯಂವಾ ಛೇದಭೇದಾದಿಕಂತಥಾ । ತಥಾಪ್ರಾಕೃತದೇಹತ್ವಂ ದೇಹತ್ಯಾಗಾದಿಕಂ ತಥಾ ॥೩೮॥
ಅನೀಶತ್ವಂಚ ದುಃಖಿತ್ವಂ ಸಾಮ್ಯಮನ್ಯೈ ಶ್ಚಹೀನತಾಂ ॥ ಪ್ರದರ್ಶಯತಿಮೋಹಾಯ ದೈತ್ಯಾದೀನಾಂ ಹರಿಸ್ಸ್ವಯಂ ॥೩೯॥

ಅರ್ಥ.—ಅಜ್ಞತ್ವಂ-ಅಜ್ಞಾನ, ಪಾರವಶ್ಯಂವಾ-ಪರಾಧೀನತ್ವವನ್ನು ತಥಾ-ಹಾಗೆ, ಛೇದಭೇದಾದಿಕಂ-ಛೇದಾ=ಕೊಯ್ಯುವಿಕೆ, ಭೇದಾದಿಕಂ-ಮೈ ಸೀಳುವಿಕೆಯೇ ಮುಂತಾದವುಗಳನ್ನು, ತಥಾ=ಹಾಗೆ, ಪ್ರಾಕೃತದೇಹತ್ವಂ-ಪ್ರಕೃತಿ ಸಂಬಂಧವಾದ ದೇಹವನ್ನು ಉಳ್ಳವನಂತೆಯೂ, ತಥಾ=ಹಾಗೆ, ದೇಹತ್ಯಾಗಾಧಿಕಂ=ದೇಹ ಬಿಟ್ಟವನ ಹಾಗೆ ತೋರಿಸುವಿಕೆಯನ್ನು, ಅನೀಶತ್ವಂಚ=ಅಸ್ವತಂತ್ರವನ್ನು, ದುಃಖಿತ್ವಂ-ದುಃಖ ಉಳ್ಳ ಭಾವವನ್ನು ಅನ್ಯೈಃ-ರುದ್ರಾದಿಗಳಿಗೆ, ಸಾಮ್ಯಂ=ಸಮತ್ವವನ್ನು, ಚ=ಮತ್ತು, ಹೀನತಾಂ=ಕಡಿಮೆ ಎಂಬುವ ಭಾವವನ್ನು, ಹರಿಃ=ನಾರಾಯಣನು, ಸ್ವಯಂ-ತಾನೇ, ದೈತ್ಯಾನಾಂ=ದೈತ್ಯರುಗಳಿಗೆ, ಮೋಹಾಯ=ವಂಚನ ಪಡಿಸುವುದಕ್ಕಾಗಿ, ಪ್ರದರ್ಶಯತಿ=ತೋರಿಸುತ್ತಾನೆ.

ತಾತ್ಪರ್ಯ.—ಹರಿಯು ತಾನೇ ದೈತ್ಯರುಗಳಿಗೆ ಮೋಹ ಉಂಟು ಮಾಡುವುದಕ್ಕಾಗಿ ತಿಳಿಯದವನ ಹಾಗೂ ತಾನು ಮತ್ತೊಬ್ಬರಧೀನನಾದ

ಹಾಗೂ, ತನಗೆ ಸೋಲು ಆದಹಾಗೂ ತನ್ನ ದೇಹವು ಕತ್ತರಿಸಿದಹಾಗೂ, ಪ್ರಾಕೃತದೇಹ ಉಳ್ಳವನ ಹಾಗೂ ದೇಹಬಿಟ್ಟು ಹೋದಹಾಗೂ, ಸ್ವತಂತ್ರನಲ್ಲದ ಹಾಗೂ ದುಃಖ ಉಳ್ಳವನ ಹಾಗೂ ಮತ್ತು ರುದ್ರಾದಿಗಳಿಗೆ ತಾನು ಕಡಿಮೆಯಾದವನಹಾಗೂ, ರುದ್ರಾದಿಗಳಿಗೆ ತಾನು ಸಮನಾದವನ ಹಾಗೂ ತೋರಿಸುವವನೇ ಹೊರತು ಅವನಲ್ಲಿ ಈ ದೋಷಗಳು ನಿಜವಾಗಿಯೂ ಇಲ್ಲವೆಂದು ತಿಳಿಯಬೇಕು.

**ಶ್ಲೋಕ ॥ ನತಸ್ಯ ಕಶ್ಚಿದೋಷೋಸ್ತಿ ಪೂರ್ಣಾಖಿಲಗುಣೋಹ್ಯಸೌ । ಸರ್ವದೇಹಸ್ಥರೂಪೇಷು ಪ್ರಾದುರ್ಭಾವೇಷುಚೇಶ್ವರಃ ॥೪೦॥**

ಅರ್ಥ.— ಅಸೌ= ಈ ನಾರಾಯಣನು, ಪೂರ್ಣಾಖಿಲಗುಣ- ಪೂರ್ಣ =ದೇಶತಃ, ಕಾಲತಃ, ಗುಣತಃ ವ್ಯಾಪ್ತನಾದ, ಅಖಿಲ = ಸಮಗ್ರವಾದ, ಗುಣಃ- ಜ್ಞಾನಾನಂದಾದಿ ಕಲ್ಯಾಣ ಗುಣ ಉಳ್ಳವನಾದ್ದರಿಂದಲೇ, ತಸ್ಯ= ಆ ಹರಿಗೆ, ಕಶ್ಚಿತ್= ಯಾವ ವಿಧವಾದ, ದೋಷಃ= ದೋಷಗಳು, ನಾಸ್ತಿ= ಇಲ್ಲ. ಚ= ಮತ್ತು, ಸರ್ವದೇಹಸ್ಥರೂಪೇಷು= ಅಂತರ್ಯಾಮಿ ರೂಪಗಳಲ್ಲಿಯೂ, ಅವತಾರೇಷು- ಮತ್ಸ್ಯ ಕೂರ್ಮಾದಿ ಅವತಾರ ರೂಪಗಳಲ್ಲಿಯೂ, ಈಶ್ವರಃ= ಸರ್ವೇಶ್ವರನಾಗಿರುತ್ತಾನೆ.

ತಾತ್ಪರ್ಯ.— ಅಂತರ್ಯಾಮಿ ರೂಪಗಳಲ್ಲಿಯೂ ಪ್ರಾದುಭಾವರೂಪಗಳಲ್ಲಿಯೂ ಪೂರ್ಣಾಖಿಲ ಗುಣ ಉಳ್ಳವನಾದ್ದರಿಂದಲೂ ಮತ್ತೆ ಸರ್ವರಿಗೂ ನಿಯಾಮಕನಾದ್ದರಿಂದಲೂ ಆತನಿಗೆ ಯಾವ ದೋಷಗಳು ಯಾವ ಕಾಲದಲ್ಲಿಯೂ ಇಲ್ಲವು.

**ಶ್ಲೋಕ ॥ ಬ್ರಹ್ಮಾದ್ಯಭೇದಸಾಮ್ಯಂವಾ ಕುತಃಸ್ಯ ಮಹಾತ್ಮನಃ । ಯದೇವಂ ವಾಚಕಂಶಾಸ್ತ್ರಂತದ್ಧಿಶಾಸ್ತ್ರಂ ಪರಮತಂ ॥೪೧॥**

ಅರ್ಥ.— ಮಹಾತ್ಮನಃ= ಮಹಾತ್ಮನಾದ ಅಂದರೆ ಆತ್ಮರುಗಳಲ್ಲಿ ಅತ್ಯುತ್ತಮನಾಗಿಯೂ ಜೀವರುಗಳಲ್ಲಿದ್ದು ಮುಖ್ಯವಾಗಿ ಸಕಲ ವ್ಯಾಪಾರಗಳನ್ನು ನಡಿಸುವವನಾಗಿಯೂ ಸರ್ವದೋಷದೂರನಾಗಿಯೂ ಇರುವುದರಿಂದ

ಆತ್ಮಶಬ್ದದಿಂದ ಮುಖ್ಯವಾಚ್ಯನಾಗಿಯೂ, ಸರ್ವಜ್ಞನಾಗಿಯೂ ಇರುವ, ತಸ್ಯ-ಆ ಹರಿಗೆ, ಬ್ರಹ್ಮಾದ್ಯಭೇದಃ-ಬ್ರಹ್ಮಾದಿ-ಬ್ರಹ್ಮಾದಿಗಳಿಗೆ, ಅಭೇದಃ =ಭೇದವಿಲ್ಲದಿರುವಿಕೆಯೂ, ಸಾಮ್ಯಂವಾ-ಸಮತ್ವವೂ ಕೂಡ, ಕುತಃ=ಎಲ್ಲಿಂದ ಬಂದೀತು? ಬರುವುದೇ ಇಲ್ಲ. ಯದೇವಂ= ಈ ರೀತಿಯಾಗಿ, ವಾಚಕಂ-ಇಲ್ಲವೆಂದು ಹೇಳುವುದೇ, ಶಾಸ್ತ್ರಂ=ಶಾಸ್ತ್ರವು, ತದ್ಧಿ - ಅದೇ, ಪರಂ-ಉತ್ತಮವಾದ, ಶಾಸ್ತ್ರಂ=ಶಾಸ್ತ್ರವೆಂದು, ಮತಂ-ತಿಳಿಯಬೇಕು.

ತಾತ್ಪರ್ಯ.—ಮಹಾತ್ಮನಾದ ಈ ಹರಿಗೆ ಬ್ರಹ್ಮಾದಿ ಜೀವರುಗಳ ಅಭೇದವು ಅಥವಾ ಸಾಮ್ಯವು ಕೂಡ ಹೇಗೆ ಉಂಟಾದೀತು. ಉಂಟಾಗುವುದೇ ಇಲ್ಲ. ಈ ರೀತಿಯಾಗಿ ಭಗವಂತನಿಗೆ ಸರ್ವೋತ್ತಮತ್ವಾದಿಗಳನ್ನೂ ಅಸುರರ ಮೋಹನಾರ್ಥವಾಗಿ ಅಜ್ಞಾನಾದಿಗಳನ್ನೂ ತೋರ್ಪಡಿಸುವುದೆಂದು ಯಾವ ಶಾಸ್ತ್ರವು ಹೇಳುತ್ತದೋ ಅದನ್ನೇ ಉತ್ತಮವಾದ ಶಾಸ್ತ್ರವೆಂದು ಸ್ವೀಕರಿಸಬೇಕು.

**ಶ್ಲೋಕ ॥ ನಿರ್ಣಯಾಯೈವ ಯತ್ಪ್ರೋಕ್ತಂ ಬ್ರಹ್ಮಸೂತ್ರಂ ತು ವಿಷ್ಣುನಾ ॥**
**ವ್ಯಾಸರೂಪೇಣ ತದ್ಗ್ರಾಹ್ಯಂ ತತ್ರೋಕ್ತಾಃ ಸರ್ವನಿರ್ಣಯಾ ॥೬೨॥**

ಅರ್ಥ.— ವ್ಯಾಸರೂಪೇಣ=ವೇದವ್ಯಾಸಾವತಾರವಾಡಿದ, ವಿಷ್ಣುನಾ =ನಾರಾಯಣನಿಂದ, ಬ್ರಹ್ಮಸೂತ್ರಂತು=ಬ್ರಹ್ಮಸೂತ್ರವಾದರೋ, ನಿರ್ಣಯಾಯೈವ-ಈ ಅರ್ಥಗಳನ್ನು ನಿರ್ಣಯಮಾಡುವುದಕ್ಕೇನೆ, ಯತ್=ಯಾವ ಕಾರಣದಿಂದ, ಪ್ರೋಕ್ತಂ=ಹೇಳಲ್ಪಟ್ಟಿದೆಯೋ, ತತ್-ಅದನ್ನೇ, ಗ್ರಾಹ್ಯಂ=ಗ್ರಹಿಸತಕ್ಕದ್ದು. ತತ್ರ-ಆ ಸೂತ್ರಗಳಲ್ಲಿ, ಸರ್ವನಿರ್ಣಯಾಃ-ಸಮಸ್ತ ನಿರ್ಣಯಗಳೂ, ಪ್ರೋಕ್ತಾಃ=ಹೇಳಿವೆ.

ತಾತ್ಪರ್ಯ.—ವ್ಯಾಸರೂಪನಾದ ಶ್ರೀಹರಿಯಿಂದ ಈ ಅರ್ಥಗಳನ್ನೆಲ್ಲಾ ನಿರ್ಣಯಮಾಡುವುದಕ್ಕಾಗಿಯೇ ಬ್ರಹ್ಮಸೂತ್ರಗಳು ರಚಿಸಲ್ಪಟ್ಟವು. ಈ ಬ್ರಹ್ಮಸೂತ್ರವೇ ನಿರ್ಣಯ ಶಾಸ್ತ್ರವು. ಇದರಲ್ಲಿ ಹೇಳಿದ ಹಾಗೆಯೇ ತಿಳಿಯಬೇಕು.

**ಶ್ಲೋಕ ॥ ಯಥಾರ್ಥವಚನಾನಾಂಚ ಮೋಹಾರ್ಥನಾಂಚ ಸಂಶಯಃ ॥**
**ಅಪನೇತುಂಹಿ ಭಗವಾನ್ ಬ್ರಹ್ಮಸೂತ್ರಮಚೀಕ್ಲೃಪತ್ ॥೬೩॥**

ಅರ್ಥ.— ಯಥಾರ್ಥವಚನಾನಾಂ ಚ=ಯಥಾರ್ಥವಾಗಿ ಹೇಳುವ ಋಗಾದಿಗಳಿಗೂ, ಮೋಹಾರ್ಥಾನಾಂ ಚ–ಮೋಹಜನಕವಾದ ಪಾಶುಪತಾದ್ಯಾಗಮಗಳಿಗೂ, ( ವಿರುದ್ಧಾರ್ಥವಿರುವುದರಿಂದಲೇ ) ಸಂಶಯಃ=ಸಂಶಯವು ಜಾತಃ–ಹುಟ್ಟಿತು. ಇಂಥಾ ಸಂಶಯವನ್ನು, ಅಪನೇತುಂ ಹಿ–ಕಳೆಯುವುದಕ್ಕಾಗಿಯೇ, ಭಗವಾನ್=ನಾರಾಯಣಾವತಾರರಾದ ವೇದವ್ಯಾಸರು, ಬ್ರಹ್ಮಸೂತ್ರ–ಬ್ರಹ್ಮಸೂತ್ರವನ್ನು, ಅಚೀಕ್ಲೃಪತ್–ರಚಿಸಿದರು.

ತಾತ್ಪರ್ಯ·—ಸಜ್ಜನರಿಗೂ ಕೂಡ ಯಾವ ಸ್ಥಿತಾರ್ಥ ಬೋಧಕಗಳಾದ ಋಗಾದಿಗಳನ್ನು ಮತ್ತು ಮೋಹಾರ್ಥಪ್ರತಿಪಾದಕವಾದ ಪಾಶುಪತಾದ್ಯಾಗಮಗಳನ್ನೂ ಸಹ ಓದುವುದರಿಂದ ಸಂಶಯ ಜ್ಞಾನವು ಆಗಬಹುದು ಎಂದು ತಿಳಿದು ಅಂಥಾ ಸಂಶಯವನ್ನು ಹೋಗಲಾಡಿಸುವುದಕ್ಕಾಗಿ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚನೆಮಾಡಿದರೆಂದು ತಿಳಿಯಬೇಕು.

ಶ್ಲೋಕ || ತಸ್ಮಾತ್ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ | ಸ
ರ್ವದೋಷವಿಹೀನತ್ವಂ ಗುಣೈಃಸರ್ವೈರುದೀರ್ಣತಾ ||೪೪||
ಅಭೇದಃ ಸರ್ವರೂಪೇಷು ಜೀವಭೇದಃ ಸದೈವಹಿ | ವಿಷ್ಣೋರು
ಕ್ತಾನಿಸೂತ್ರೇಷು ಸರ್ವವೇದೇತ್ಯತಾತಥಾ ||೪೫||
ತಾರತಮ್ಯಂಚ ಮುಕ್ತಾನಾಂ ವಿಮುಕ್ತಿಃ ವಿದ್ಯಯಾತಥಾ | ತಸ್ಮಾದೇ
ತದ್ವಿರುದ್ಧಂಯನ್ಮೋಹಾರ್ಥಂ ತದುದಾಹೃತಂ ||೪೬||
ತಸ್ಮಾದ್ಯೇಽಪೀಗುಣಾವಿಷ್ಣೋಃ ಗ್ರಾಹ್ಯಾಸ್ತೇಸರ್ವ ಏವತು | ಇತ್ಯಾ
ದ್ಯುಕ್ತಂ ಭಗವತಾಭವಿಷ್ಯತ್ಪರ್ವಣಿಸ್ಫುಟಂ||೪೭||

ಅರ್ಥ.—ತಸ್ಮಾತ್=ಆದಕಾರಣದಿಂದ, ಸೂತ್ರಾರ್ಥಂ–ಸೂತ್ರಗಳ ಅರ್ಥವನ್ನು, ಆಗೃಹ್ಯ=ಚೆನ್ನಾಗಿ ಗ್ರಹಿಸಿ, ಸರ್ವನಿರ್ಣಯಃ=ಮುಂದೆ ಹೇಳುವ ಸಮಸ್ತ ನಿರ್ಣಯವೂ, ಕರ್ತವ್ಯಃ–ಮಾಡಬೇಕಾದದ್ದು, ( ಆ ನಿರ್ಣಯಗಳು ಯಾವುವೆಂದರೆ ) ಸರ್ವದೋಷವಿಹೀನತ್ವಂ = ಹರಿಗೆ ಸಮಸ್ತ ದೋಷರಾಹಿತ್ಯವು, ಸರ್ವೈಃ–ಸಮಸ್ತವಾದ, ಗುಣೈಃ=ಜ್ಞಾನಾನಂದಾದಿ ಗುಣಗಳಿಂದ, ಉದೀರ್ಣತಾ=ಕೂಡಿಂತಕ್ಕ, ಸರ್ವರೂಪಾಣಾಂ = ಹರಿಯ

ಸರ್ವರೂಪಗಳಿಗೂ, ಅಭೇದಃ=ಭೇದರಾಹಿತ್ಯವು, ಸದೈವಹಿ=ಸರ್ವಕಾಲಗಳಲ್ಲಿಯೂ, ಜೀವಭೇದಃ-ಜೀವರುಗಳಿಂದ ಭೇದವು, ತಥಾ=ಹಾಗೆಯೇ, ಸೂತ್ರೇಷು-ಬ್ರಹ್ಮಸೂತ್ರಗಳಲ್ಲಿ. ವಿಷ್ಣೋಃ=ಹರಿಗೆ, ಸರ್ವವೇದೇಡ್ಯತಾ=ಸರ್ವ ವೇದ ಪ್ರತಿಪಾದ್ಯತ್ವವು, ಮುಕ್ತಾನಾಂಚ=ಮುಕ್ತಿಯಲ್ಲಿಯೂ ಕೂಡ ತಾರತಮ್ಯಂ=ತಾರತಮ್ಯಭಾವವು, ತಥಾ-ಹಾಗೆ, ವಿದ್ಯಯಾ=ಜ್ಞಾನದಿಂದಲೇ, ವಿಮುಕ್ತಿಃ-ಮೋಕ್ಷವೂ ಕೂಡ ಆಗುತ್ತದೆಂದು ತಿಳಿಯಬೇಕು. ತಸ್ಮಾತ್=ಆದಕಾರಣದಿಂದ, ಏತತ್-ಈ ವಿಷಯಗಳಿಗೆ, ವಿರುದ್ಧಂ-ವಿರುದ್ಧವಾಗಿ ಹೇಳುವುದು, ಯತ್=ಯಾವುದೋ, ತತ್=ಅವುಗಳನ್ನು, ಮೋಹಾರ್ಥಂ-ಅಜ್ಞಜನರನ್ನು ಮೋಹಗೊಳಿಸುವುದಕ್ಕಾಗಿ, ಉದಾಹೃತಂ=ಇತರ ಪುರಾಣಗಳು ಮತ್ತು ಪಾಶುಪತಾದ್ಯಾಗಮಗಳೂ ಹೇಳಿವೆ. ತಸ್ಮಾತ್-ಆದ ಕಾರಣದಿಂದ, ಯೇಯೇ-ಯಾವಯಾವ, ಗುಣಾಃ=ಗುಣಗಳು, ಅಣುತ್ವ=ಮಹತ್ವಾದಿಗಳೂ, ವಿಷ್ಣೋಃ=ಹರಿಗೆ, ಉಕ್ತಾಃ=ವೇದಗಳಲ್ಲಿ ಹೇಳಿವೆಯೋ ಸರ್ವೇ-ಸಮಸ್ತವಾದ; ತೇವಿಸತು-ಅವುಗಳೇ, ಗ್ರಾಹ್ಯಾಃ=ಸ್ವೀಕಾರ್ಯಗಳು ಇತ್ಯಾದಿ=ಇವುಗಳೇ ಮೊದಲಾದ ಸಂಗತಿಗಳು, ಭಗವತಾ=ವ್ಯಾಸರೂಪನಾದ ಹರಿಯಿಂದ, ಭವಿಷ್ಯತ್ಪರ್ವಣಿ=ಭವಿಷ್ಯತ್ಪರ್ವವೆಂಬ ಗ್ರಂಥದಲ್ಲಿ, ಸ್ಪಷ್ಟಂ=ಚೆನ್ನಾಗಿ, ಉಕ್ತಂ=ಹೇಳಲ್ಪಟ್ಟಿರುತ್ತದೆ.

ತಾತ್ಪರ್ಯ.— ಬ್ರಹ್ಮಸೂತ್ರದಲ್ಲಿ ನಿರ್ಣಯವಾಗಿ ಹೇಳಿದೆ ಎಂಬುವ ಅರ್ಥವನ್ನು ಪೂರ್ತಿಮಾಡುತ್ತಾರೆ. ಆದಕಾರಣದಿಂದ ಸೂತ್ರಗಳ ಅರ್ಥವನ್ನೇ ಗ್ರಹಿಸಿ; ಸಮಸ್ತ ನಿರ್ಣಯವನ್ನು ಮಾಡಬೇಕು. ಆ ನಿರ್ಣಯಗಳು ಯಾವುವೆಂದರೆ.— ಹರಿಗೆ ಸರ್ವದೋಷ ವಿಹೀನತ್ವವು, ಈ ಸಂಗತಿಯು ಸೂತ್ರದ ಎರಡನೆಯ ಅಧ್ಯಾಯದಲ್ಲಿ ವ್ಯಕ್ತವಾಗುವುದು. ಸರ್ವಗುಣ ಪೂರ್ಣತ್ವವು ಪ್ರಥಮಾಧ್ಯಾಯದಿಂದ ವ್ಯಕ್ತವಾಗುವುದು. ಹರಿಗೆ ತನ್ನ ಸರ್ವ ರೂಪಗಳಲ್ಲೂ ಅಭೇದವು. "ನಸ್ಥಾನತೋಽಪಿ ಪರಸ್ಯೋಭಯ ಲಿಂಗಂ ಸರ್ವತ್ರಹೀ" ಎಂಬ ಸೂತ್ರದಲ್ಲಿ ಹೇಳಿರುತ್ತೆ. ಯಾವಾಗಲೂ ಜೀವರುಗಳಿಂದ ಭೇದವು ಬಹುಕಡೆಯಲ್ಲಿ ಹೇಳುತ್ತೆ. (೧) ಭೇದವ್ಯಪದೇಶಾಚ್ಚಾನ್ಯಃ (೨) ಶಾರೀರಶ್ಚೋಭಯೇಪಿಹಿ. (೩) ಭೇದೇನೈತಮುದೀಯತೇ. ಇವೇ ಮೊದಲಾದ ಸೂತ್ರಗಳು ಹೇಳುತ್ತವೆ. ಸರ್ವ ಸದಾಗಮಪ್ರತಿಪಾದ್ಯ

ಸ್ವವು.—(೧) ಶಾಸ್ತ್ರಯೋನಿತ್ವಾತ್. (೨) ತತ್ತು ಸಮನ್ವಯಾತ್ ಎಂಬ ಸೂತ್ರಗಳಲ್ಲಿ ಹೇಳುತ್ತದೆ. ಮುಕ್ತರ ತಾರತಮ್ಯವು.—೧. ಇಯದಾಮನನಾತ್. ೨. ತನ್ನ್ಯಸಃಪ್ರಾಣ ಉತ್ತರಾತ್ ಎಂಬ ಸೂತ್ರಗಳಲ್ಲಿ ಹೇಳಿದೆ. ವಿದ್ಯೆಯಿಂದಲೇ (ಜ್ಞಾನದಿಂದಲೇ) ವಿಮುಕ್ತಿಯು. ವಿದ್ಯೈವತು ನಿರ್ಧಾರಣಾತ್ ಎಂಬುವ ಸೂತ್ರದಲ್ಲಿ ಹೇಳಿರುತ್ತೆ. ಈ ಅರ್ಥಕ್ಕೆ ವಿರುದ್ಧವಾಗಿ ಹೇಳುವ ಶಾಸ್ತ್ರಗಳೆಲ್ಲಾ ಮೋಹಾರ್ಥವಾಗಿ ಹೇಳಿದ್ದೆಂದು ತಿಳಿಯಬೇಕು. ನಿಷ್ಕೃಷ್ಟಾರ್ಥವನ್ನು ಸಹಾ ಹೇಳುತ್ತಾರೆ. ಆದ್ದರಿಂದ ಹರಿಯಲ್ಲಿ ನಮ್ಮ ಬುದ್ಧಿಗೆ ವಿರುದ್ಧವಾಗಿ ತೋರುವ ಅಣುತ್ವ, ಮಹತ್ವಾದಿ ಗುಣಗಳನ್ನು ಗ್ರಹಿಸಲೇಬೇಕು. ಅವುಗಳು ಮಹಾಗುಣವಂತನಾದ ಪರಮಾತ್ಮನಿಗೆ ಯುಕ್ತವಾಗುತ್ತೆ. ಎಂಬುವ ಇವೇ ಮೊದಲಾದ ಸಂಗತಿಗಳನ್ನು ಹರಿಯರೂಪನಾದ ವ್ಯಾಸರೇ ಭವಿಷ್ಯತ್ಪರ್ವವೆಂಬ ಗ್ರಂಥದಲ್ಲಿ ಚೆನ್ನಾಗಿ ಸಜ್ಜನರಿಗೆ ತಿಳಿಸಿರುತ್ತಾರೆ.

ಶ್ಲೋಕ || ಏಷಮೋಹಂ ಸೃಜಾಮ್ಯಾಶು ಯೋಜನಾನ್ಮೋಹಯಿಷ್ಯತಿ ||
ತ್ವಂಚರುದ್ರ ಮಹಾಬಾಹೋ ಮೋಹಶಾಸ್ತ್ರಾಣಿಕಾರಯಾ ||೪೮||
ಅತಥ್ಯಾನಿ ವಿತಥ್ಯಾನಿ ದರ್ಶಯಸ್ವಮಹಾಭುಜ | ಪ್ರಕಾಶಂ ಕುರು ಚಾತ್ಮಾನಮಪ್ರಕಾಶಂಚ ಮಾಂಕುರು ||೪೯||
ಇತಿವಾರಾಹವಚನಂ ಬ್ರಹ್ಮಾಂಡೋಕ್ತಂ ತಥಾಪರಂ | ಅಮೋಹಾಯಗುಣಾವಿಷ್ಣೋರಾಕಾರಶ್ಚಿಚ್ಛರೀರತಾ ||೫೦||
ನಿರ್ದೋಷತ್ವಾ ತಾರತಮ್ಯಂ ಮುಕ್ತಾನಾಮಪಿಚೋಚ್ಯತೇ || ಏತದ್ವಿರುದ್ಧಂಯತ್ಸರ್ವಂತನ್ಮೋಹಾಯೇತಿ ನಿರ್ಣಯಃ ||೫೧||

ಅರ್ಥ.—ಏಷಃ=ವಿಷ್ಣುವಾದ ನಾನು, ಯಃ=ಯಾವ ಶಾಸ್ತ್ರವು, ಜನಾನ್-ಜನಗಳನ್ನು, ಮೋಹಯಿಷ್ಯತಿ=ಮೋಹಪಡಿಸುತ್ತದೆಯೋ ಅಂಥಾ, ಮೋಹಂ=ಮೋಹಶಾಸ್ತ್ರವನ್ನು, ಆಶು=ಜಾಗ್ರತೆಯಲ್ಲಿ, ಸೃಜಾಮಿ=ಸೃಷ್ಟಿಮಾಡುತ್ತೇನೆ, ಮಹಾಬಾಹೋ=ಮಹಾಬಾಹುಶಾಲಿಯಾದ, ಹೇ ರುದ್ರಾ-ರುದ್ರನೆ, ತ್ವಂಚ-ನೀನೂ ಕೂಡ, ಮೋಹಶಾಸ್ತ್ರಾಣಿ-ಮೋಹಶಾಸ್ತ್ರಗಳನ್ನೇ ಕಾರಯ-ಮಾಡು ಮತ್ತು ದಧೀಚಾದಿಗಳಿಂದಲೂ ನೀನು ಮಾಡಿಸು.

ಮಹಾಭುಜ-ಮಹಾಬಾಹು ಪರಾಕ್ರಮ ಉಳ್ಳವನೇ, ಅಥತ್ಯಾನಿ=ಅವಿದ್ಯ ಮಾನವಾದ ( ಲಿಂಗ ಮೂಲಮಾರ್ಗಣ, ಸಕ್ರಧ್ಭಸ್ಮಲಿಂಗಧಾರಣಾದಿ ದ ಕೈಲಾಸಪ್ರಾಪ್ತಿಯೇ ಮೊದಲಾದ, ವಿತಥ್ಯಾನಿ=ಶಾಸ್ತ್ರಗಳಿಗೆ ವಿರುದ್ಧವಾ ಗಿರುವ ವಿಷ್ಣುವಿನಲ್ಲಿರುವ ಸರ್ವಜ್ಞತ್ವಾದಿಗಳನ್ನು ಅನ್ಯರಲ್ಲಿ ) ದರ್ಶಯಸ್ವ=ತೋರಿಸು. ಆತ್ಮಾನಂಪ್ರತಿ=ನಿನ್ನನ್ನು, ಪ್ರಕಾಶಂ-ಪ್ರಸಿದ್ಧಿಯನ್ನು, ಅಪ್ರ ಕಾಶಂ-ಅಪ್ರಸಿದ್ಧಿಯನ್ನು, ಕುರು=ಮಾಡು. ಇತಿ=ಈ ಪ್ರಕಾರವಾಗಿ, ವ ರಾಹವಚನಂ-ವರಾಹಪುರಾಣದ ವಾಕ್ಯವು, ತಥಾ=ಇದರಂತೆ, ಪರಂ= ಬೇರೆಯಾದ, ಬ್ರಹ್ಮಾಂಡೋಕ್ತಂ-ಬ್ರಹ್ಮಾಂಡಪುರಾಣದ ವಾಕ್ಯವಿದೆ. ವಿ ಷ್ಣೋಃ-ವಿಷ್ಣುವಿನ, ಗುಣಾಃ=ಜ್ಞಾನಾನಂದಾದಿಗಳು, ಆಕಾರಃ-ಸಹಸ್ರಶೀ ರ್ಷಾಪುರುಷೇತಿ ಎಂಬುವ ಆಕಾರಗಳು, ಚಿಚ್ಛರೀರತಾ=ಶರೀರಕ್ಕೆ ಜ್ಞಾನಾ ತ್ಮಕತ್ವವೂ, ನಿರ್ದೋಷತ್ವಂ-ದೋಷರಾಹಿತ್ಯವು, ಮುಕ್ತಾನಾಂ=ಮುಕ್ತರು ಗಳ, ತಾರತಮ್ಯಂಪಿ-ತಾರತಮ್ಯಭಾವವೂ ಕೂಡ, ಅಮೋಹಾಯ=ಮೋಹ ಪರಿಹಾರಕ್ಕೋಸ್ಕರ ( ಸಮ್ಯಕ್ ಜ್ಞಾನಪ್ರಾಪ್ತಿಗಾಗಿ ) ಉಚ್ಯತೇಚ-ಹೇಳ ಲ್ಪಡುತ್ತೆ. ಏತದ್ವಿರುದ್ಧಂ-ಇವುಗಳಿಗೆ ವಿರುದ್ಧವಾದದ್ದು, ಯತ್=ಯಾವು ದೋ, ಸರ್ವಂ=ಸಮಸ್ತವಾದ ವಿಷಯಗಳೂ ಮೋಹಕ ಪುರಾಣಗಳಲ್ಲಿ ಹೇ ಳಿವೆ. ಯೇತತ್=ಆ ಸಂಗತಿಗಳೆಲ್ಲಾ, ಮೋಹಾಯೇತಿ=ದೈತ್ಯರುಗಳ ಅಜ್ಞಾನ ಪ್ರಾಪ್ತಿಗಾಗಿ ಹೇಳಿವೆ ಎಂಬುವುದೇ, ನಿರ್ಣಯಃ=ನಿರ್ಣಯವಾ ಗಿರುತ್ತದೆ.

ತಾತ್ಪರ್ಯ.—ಇದು ರುದ್ರದೇವರನ್ನು ಕುರಿತು ಹರಿಯು ಹೇಳಿದ ವಾಕ್ಯವು. ವ್ಯಾಸರೂಪಿಯಾದ ನಾನು ದೈತ್ಯರಿಗೆ ಮೋಹಜನಕವಾದ (ಅ ಜ್ಞಾನಪ್ರದವಾದ ) ಶಾಸ್ತ್ರಗಳನ್ನು ಜಾಗ್ರತೆಯಲ್ಲಿ ನಿರ್ಮಾಣಮಾಡುತ್ತೇನೆ. ನೀನೂ ಅಂಥಾ ಮೋಹಶಾಸ್ತ್ರಗಳನ್ನು ಮಾಡು ಮತ್ತು ದಧೀಚ್ಯಾದಿಋಷಿಗ ಳಿಂದಲೂ ಮಾಡಿಸು. ಯಾವ ಪುರಾಣಗಳಲ್ಲಿಯೂ ಇಲ್ಲದೇ ಇರುವ ಲಿಂಗ ಮೂಲಮಾರ್ಗಣ, ಮತ್ತು ಭಸ್ಮಧಾರಣ, ಲಿಂಗಧಾರಣ ಮಾತ್ರದಿಂದ ಕೈ ಲಾಸಪ್ರಾಪ್ತಿ ಇವೇ ಮೊದಲಾದ ಅತಥ್ಯಗಳು ನನ್ನಲ್ಲಿರುವ ಸರ್ವಜ್ಞತ್ವಾದಿ ಗಳನ್ನು ನಿನ್ನಲ್ಲಿ ಹೇಳಿಕೋ. ನಿನ್ನ ಪ್ರಸಿದ್ಧಿಯನ್ನು ಹೆಚ್ಚಿಸು. ನನ್ನ ಪ್ರಸಿ

ರ್ಣಯನ್ನು ಪ್ರಕಾಶಪಡಬೇಕು. ಹೀಗೆ ಮಾಡುವುದು ತ್ರಿವಿಧಜೀವರುಗಳ ಸೃಷ್ಟಿಗೆ ಅನುಕೂಲವಾಗುತ್ತೆ. ಇವೇ ಮೊದಲಾದ ವಿಷಯಗಳು ವರಾಹ ಪುರಾಣದಲ್ಲಿಯೂ, ಬ್ರಹ್ಮಾಂಡಪುರಾಣದಲ್ಲಿಯೂ ಹೇಳಿರುತ್ತೆ. ಹರಿಯ ಗುಣಗಳು ಆತನ ಸರ್ವತ್ರ ಶ್ರೀಪೂರ್ಣ ಪುರುಷೋತ್ತಮ ಆಕಾರಗಳೂ, ಆತನ ದೇಹವು ಚಿದಾನಂದಾತ್ಮಕವಾದದ್ದು ಮತ್ತು ನಿರ್ದೋಷವಾದದ್ದು ಎಂಬ ಸಂಗತಿಗಳೂ, ಮುಕ್ತಿಯಲ್ಲಿಯೂ ತಾರತಮ್ಯವು ಇದೆ ಎಂಬುವ ವಿಷಯವೂ ಮೋಹಪರಿಹಾರಾರ್ಥವಾಗಿ ಹೇಳಿದೆ ಎಂದು ತಿಳಿಯಬೇಕು.

**ಶ್ಲೋಕ** || ಸ್ಕಾಂದೇಪ್ಯುಕ್ತಂ ಶಿವೇನೈವ ಷಣ್ಮುಖಾಯೈವ ಸಾದರಂ | ಶಿವಶಾಸ್ತ್ರೇಪಿ ಗ್ರಾಹ್ಯಂ ಭಗವಚ್ಛಾಸ್ತ್ರಯೋಗಿ ಯತ್ ||೫೨||

ಪರಮೋ ವಿಷ್ಣುರೇವೈಕಸ್ತಜ್ಜ್ಞಾನಂ ಮುಕ್ತಿಸಾಧನಂ | ಶಾಸ್ತ್ರಾಣಾಂ ನಿರ್ಣಯಸ್ತ್ವೇಷಸ್ತದನ್ಯನ್ಮೋಹನಾಯ ಹಿ ||೫೩||

ಜ್ಞಾನಂ ವಿನಾ ತು ಯಾ ಮುಕ್ತಿಃ ಸಾಮ್ಯಂ ಚ ಮಮ ವಿಷ್ಣುನಾ | ತೀರ್ಥಾದಿಮಾತ್ರಾತ್ ಜ್ಞಾನಂ ಮಹಾಧಿಕ್ಯಂ ಚ ವಿಷ್ಣುತಃ ||೫೪||

ಅಭೇದಶ್ಚಾಸ್ಮದಾದೀನಾಂ ಮುಕ್ತಾನಾಂ ಹರಿಣಾ ತಥಾ | ಇತ್ಯಾದಿಸರ್ವಂ ಮೋಹಾಯ ಕಥ್ಯತೇ ಪುತ್ರ ನಾನ್ಯಥಾ ||೫೫||

ಅರ್ಥ. — ಸ್ಕಾಂದೇಪಿ=ಸ್ಕಾಂದಪುರಾಣದಲ್ಲಿಯೂ ಕೂಡ, ಶಿವೇನೈವ ತಂದೆಯಾದ ರುದ್ರನಿಂದಲೇ, ಷಣ್ಮುಖಾಯೈವ=ಜ್ಞಾನಕ್ಕೆ ಯೋಗ್ಯನಾದ ಮಗನಾದ ಷಣ್ಮುಖನಿಗೋಸ್ಕರ, ಸಾದರಂ=ವಿಶ್ವಾಸಪೂರ್ವಕವಾಗಿ (ಮೋಹವಿಲ್ಲದ ಹಾಗೆ) ಉಕ್ತಂ=ಹೇಳಿರುತ್ತೆ. ಶಿವಶಾಸ್ತ್ರೇಪಿ=ಶಿವಪುರಾಣದಲ್ಲಿ ಹೇಳಿದ, ಯತ್=ಯಾವ ವಿಷಯವು, ಭಗವಚ್ಛಾಸ್ತ್ರಯೋಗಿ=ಭಗವತ್-ನಾರಾಯಣನ, ಶಾಸ್ತ್ರ=ಪುರಾಣಾದಿಶಾಸ್ತ್ರಗಳಿಗೆ, ಯೋಗಿ-ಅನುಕೂಲವಿರುತ್ತೋ, ತತ್-ಅದನ್ನು, ಗ್ರಾಹ್ಯಂ-ಸ್ವೀಕಾರ್ಯವು, ಉಪದೇಶಕ್ರಮವೇನೆಂದರೆ. — ವಿಷ್ಣುಃ=ಹರಿಯು, ಏಕಏವ=ಒಬ್ಬನೇ, ಪರಮಃ-ಸರ್ವೋತ್ತಮನು, ತತ್-ಅವನ, ಜ್ಞಾನ=ತಿಳಿಯುವಿಕೆಯು, ಮುಕ್ತಿಸಾಧನ=ಮುಕ್ತಿಗೆ ಸಾಧನವು, ಏಷಃ = ಈ ಸಂಗತಿಯು, (ವಿಷಯವು) ಸರ್ವ ಶಾಸ್ತ್ರ

ಣಾಂ-ಸಕಲ ಶಾಸ್ತ್ರಗಳ, ನಿರ್ಣಯಃ=ನಿರ್ಣಯವು, ತದಸ್ಯತ್=ಇದಕ್ಕೆ ವಿರುದ್ಧವಾದದ್ದು, ಮೋಹನಾಯಹಿ – ಮೋಹಪಡಿಸುವುದಕ್ಕೆಂದು ತಿಳಿ, ಮತ್ತು ಜ್ಞಾನಂವಿನಾ=ಹರಿಯ ಜ್ಞಾನವಿಲ್ಲದೆ, ಯಾಮುಕ್ತಿಸ್ತು=ಯಾವ ಮುಕ್ತಿ ಹೇಳಿದೆಯೋ ಅದು, ಮಮಚ=ರುದ್ರನಾದ ನನಗೆ, ವಿಷ್ಣುನಾ=ಹರಿಯಿಂದ, ಸಾಮ್ಯಂಚ=ಸಮತ್ವವು, ತೀರ್ಥಾದಿನಾತ್ರತಃ-ತೀರ್ಥಗಳಲ್ಲಿ ವಾಸಮಾಡುವುದೇ ಮುಂತಾದವುಗಳಿಂದ, ಜ್ಞಾನಂ=ಜ್ಞಾನಪ್ರಾಪ್ತಿಯಾಗುತ್ತೆ ಎಂಬ ಸಂಗತಿಯೂ, ವಿಷ್ಣುತಃ=ವಿಷ್ಣುವಿಗಿಂತಲೂ, ಮಮಾಧಿಕ್ಯಂ=ನಾನೇ ದೊಡ್ಡವನು ಎಂಬ ಸಂಗತಿಯು, ಮುಕ್ತಾನಾಂ-ಮುಕ್ತರುಗಳಿಗೂ, ಅಸ್ಮದಾದೀನಾಂ=ನಾನೇ ಮೊದಲಾದ ಜೀವರುಗಳಿಗೂ, ಹರಿಣಾ=ನಾರಾಯಣನಿಂದ, ತಥಾ-ಹಾಗೆ, ಅಭೇದಃ=ಭೇದವಿಲ್ಲ ಎಂಬುವದು, ಇತ್ಯಾದಿ-ಇವೇ ಮುಂತಾದ, ಸರ್ವಂ=ಸಮಸ್ತವೂ, ಮೋಹಾಯ=ದೈತ್ಯರು ನಿತ್ಯ ಸಂಸಾರಿಗಳು ಮೋಹಪಡಿಸುವುದಕ್ಕಾಗಿ, ಕಥ್ಯತೇ-ಹೇಳಿರುತ್ತೇವೆ ಪುತ್ರ=ಎಲೈ ಮಗನೇ, ಅನ್ಯಥಾ=ಇದಕ್ಕೆ ಬೇರೆ ರೀತಿ, ನಾ=ಇಲ್ಲವು, ಎಂಬುದಾಗಿ ಮಗನಿಗೆ ತಂದೆಯಾದ ರುದ್ರದೇವರು ಉಪದೇಶಮಾಡಿರುವರು.

ತಾತ್ಪರ್ಯ.— ಹರಿಯೇ ಸರ್ವೋತ್ತಮನು, ರುದ್ರನೇ ಆಗಲೀ ಮುಕ್ತರುಗಳೇ ಆಗಲೀ ಭಗವಂತನಿಗೆ ಸಮರಲ್ಲ. ಇದಕ್ಕೆ ವಿರುದ್ಧವಾಗಿ ಹೇಳುವ ಶಾಸ್ತ್ರಗಳೆಲ್ಲವೂ ಮೋಹಕವೆಂದು ತಿಳಿಯಬೇಕು.

**ಶ್ಲೋಕ ॥ ಉಕ್ತಂ ಪದ್ಮಪುರಾಣೇಚ ಶೈವಏವ ಶಿವೇನಚ ॥ ಯದುಕ್ತಂಹರಿಣಾ ಪೂರ್ವಮುಮಾಯೈಪ್ರಾಹತದ್ಧರಃ ॥೫೬॥**

ಅರ್ಥ.— ಯತ್=ಯಾವ ವಿಷಯವು, ಹರಿಣಾ-ನಾರಾಯಣನಿಂದ ಪೂರ್ವಂ=ಪೂರ್ವದಲ್ಲಿ, ಉಕ್ತಂ=ರುದ್ರದೇವರಿಗೆ ಹೇಳಲ್ಪಟ್ಟಿತೋ, ತತ್ ಅದನ್ನು, ಹರಃ=ರುದ್ರದೇವರು, ಉಮಾಯೈ=ತನ್ನ ಹೆಂಡತಿಯಾದ ಪಾರ್ವತಿಗೆ, ಪ್ರಾಹ-ಹೇಳಿದರು. ಈ ಸಂಗತಿಯು ಪದ್ಮಪುರಾಣೇಚ=ಪದ್ಮ ಪುರಾಣದಲ್ಲಿಯೂ, ಶೈವಏವಚ=ಶೈವಪುರಾಣದಲ್ಲಿಯೂ, ಉಕ್ತ=ಹೇಳಿರುತ್ತೆಯಾಗಿ ಇದು ಸ್ವಕಪೋಲ ಕಲ್ಪಿತವಲ್ಲ.

**ಶ್ಲೋಕ || ತ್ವಾಮಾರಾಧ್ಯ ತಥಾಶಂಭೋ ಗ್ರಹೀಷ್ಯಾಮಿ ವರಂಸದಾ || ದ್ವಾಪರಾದೌಯುಗೇ ಭೂತ್ವಾ ಕಲಯಾಮಾನುಷಾದಿಷು ||೫೭||**

ಅರ್ಥ.— ಶಂಭೋ=ಎಲೈ ರುದ್ರನೇ, ದ್ವಾಪರಾದೌ-ದ್ವಾಪರಯುಗದ ವ್ಯತ್ಯಾಸದ ಆದಿಯಲ್ಲಿ ಅಂದರೆ ದ್ವಾಪರಾಂತ್ಯದಲ್ಲಿ, ಯುಗೇ=ಯುಗದಲ್ಲಿ ( ಕಲಿಯುಗದಲ್ಲಿಯೂ ) ಮಾನುಷಾದಿಷು = ಮಾನುಷರೂಪವಾಗಿ ಸ್ವರೂಪಾಂಶದಿಂದ, ಭೂತ್ವಾ=ಅವತಾರವನ್ನು ಮಾಡಿ, ನಾನು, ತ್ವಾಂ-ನಿನ್ನನ್ನು, ಆರಾಧ್ಯ-ಪೂಜಿಸಿ, ಸದಾ-ಬ್ರಹ್ಮನ ಪ್ರತಿ ದಿನದಲ್ಲಿಯೂ, ವರಂ-ವರವನ್ನು, ಗ್ರಹೀಷ್ಯಾಮಿ=ಸ್ವೀಕರಿಸುತ್ತೇನೆ.

ತಾತ್ಪರ್ಯ.— ಪದ್ಮಪುರಾಣದ ವಾಕ್ಯಗಳನ್ನು ಉದಾಹರಿಸುತ್ತಾರೆ. ನಾನು (ಶ್ರೀಹರಿಯು) ಬ್ರಹ್ಮದೇವರ ಪ್ರತಿ ದಿನಕಲ್ಪದಲ್ಲಿಯೂ, ದ್ವಾಪರ ಯುಗದ ಕಡೆಯಭಾಗದಲ್ಲಿ ಕೃಷ್ಣಾವತಾರ ಮಾಡಿ ನಿನ್ನನ್ನು ಭಜಿಸಿ ನಿನ್ನಿಂದ ವರವನ್ನು ಪಡೆಯುತ್ತೇನೆ. ಹನ್ನೆರಡುವರ್ಷ ತಪಸ್ಸುಮಾಡಿದವನಂತೆ ನಟಿಸಿ ಪ್ರದ್ಯುಮ್ನನೆಂಬ ಮಗನನ್ನುಪಡೆಯುತ್ತೇನೆ, ಅರ್ಜುನಗೆ ನೀನೇ ಸರ್ವೋತ್ತಮನೆಂದು ತಿಳಿಸುವುದಕ್ಕಾಗಿ ಹೀಗೆ ಮಾಡುತ್ತೇನೆಂದು ನಾರಾಯಣನು ರುದ್ರದೇವರಿಗೆ ಹೇಳಿರುತ್ತಾನೆ.

**ಶ್ಲೋಕ || ಸ್ವಾಗಮ್ಯೈಃ ಕಲ್ಪಿತೈಸ್ತ್ವಂಚ ಜನಾನ್ಮದ್ವಿಮುಖಾನ್ ಕುರು || ಮಾಂಚಗೋಪಾಯ ಯೇನಸ್ಯಾತ್ಸೃಷ್ಟಿರೇಷೋತ್ತರಾಧರಾ ||೫೮||**

ಅರ್ಥ.— ತ್ವಂ=ರುದ್ರನಾದ ನೀನು, ಕಲ್ಪಿತೈಃ-ಅಯತಾರ್ಥ (ನಿಜವಲ್ಲದ) ವಾದ, ಸ್ವಾಗಮ್ಯೈ=ನಿನಗೆ ಉತ್ತಮತ್ವವನ್ನು ಹೇಳುವ ಪಾಶುಪತಾದಿಗಳಿಂದ, ಜನಾನ್=ಸಾಮಾನ್ಯ ಜನಗಳನ್ನು, ಮದ್ವಿಮುಖಾನ್-ನನ್ನನ್ನು ಪೂಜಿಸಿದ ಹಾಗೆ, ಕುರು=ಮಾಡು, (ಇಷ್ಟೇ ಅಲ್ಲ ) ಮಾಂಚ-ನನ್ನನ್ನೂ, ಗೋಪಾಯ=ಗೋಪನಮಾಡು. ( ತಿಳಿಯದಹಾಗೆ ಮಾಡು ) ಯೇನ=ಹೀಗೆ ಗೋಪನಮಾಡುವುದರಿಂದ, ಉತ್ತರಾ=ಊರ್ಧ್ವ ಲೋಕಗಳ ಮನವಾದ ಮತ್ತು ಅಧರಾ-ನರಕಾದ್ಯಧೋಲೋಕ ಪ್ರಾಪ್ತಿ ರೂಪವಾದ, ಎರಡು ವಿಧವಾದ, ಸೃಷ್ಟೀಃ=ಸೃಷ್ಟಿ ವ್ಯಾಪಾರವು, ಸ್ಯಾತ್=ನಡೆಯುತ್ತದೆ.

ತಾತ್ಪರ್ಯ.—ನಾರಾಯಣನು ರುದ್ರದೇವರನ್ನು ಕುರಿತು ಹೇಳುತ್ತಾನೆ. ನೀನು ಯಥಾರ್ಥವನ್ನು ತಿಳಿಸದೆ ಇರುವ ಪಾಶುಪತಾದ್ಯಾಗಮಗಳನ್ನು ಮಾಡಿ ಸಾಮಾನ್ಯ ಜನರುಗಳು ನನ್ನಲ್ಲಿ ಭಕ್ತಿ ಮಾಡದೆ ನನ್ನನ್ನು ಪೂಜಿಸದಂತೆ ಮಾಡು. ನನಗೆ ಸರ್ವೋತ್ತಮತ್ವವನ್ನು ಹೇಳುವ ಪರತತ್ವಗಳನ್ನು ಗೋಪ್ಯಮಾಡು. ಹೀಗೆ ಮಾಡುವುದರಿಂದ ಕೃತಯುಗ ಮೊದಲಾದವುಗಳಲ್ಲಿ ಸದಾಚಾರಗಳಿಂದ ಉತ್ತಮ ಲೋಕಗಳನ್ನು ಹೊಂದಲು ಯತ್ನಮಾಡುತ್ತಿದ್ದ ಅಯೋಗ್ಯರು ತಮಗೆ ಯೋಗ್ಯವಾದ ನರಕಾದಿಗಳನ್ನು ಹೊಂದಲು ಸಾಧ್ಯವಾಗುವುದು. ಇದರಿಂದ ಜನರು ತಮ್ಮ ಯೋಗ್ಯತಾನುಸಾರವಾದ ಉತ್ತಮ ಲೋಕಗಮನವೂ ಮತ್ತೆ ನರಕಾದಿ ಅಧೋಲೋಕಗಮನ ರೂಪವಾದ ಸೃಷ್ಟಿಯೂ ಉಂಟಾಗುತ್ತದೆ. ಹೀಗೆ ಮಾಡುವುದು ನನಗೆ ಪ್ರೀತಿಕರವೆಂದು ಶ್ರೀಹರಿಯು ಹೇಳಿರುತ್ತಾನೆ.

**ಶ್ಲೋಕ ॥ ನಚವೈಷ್ಣವ ಶಾಸ್ತ್ರೇಷು ವೇದೇಷ್ವಪಿಹರೇಃಪರಃ । ಕ್ವಚಿದುಕ್ತೋ ನ್ಯಶಾಸ್ತ್ರೇಷು ಪರಮೋವಿಷ್ಣುರೀರಿತಃ ॥೫॥**

ಅರ್ಥ.—ವೈಷ್ಣವಶಾಸ್ತ್ರೇಷು=ವಿಷ್ಣೂತ್ಕರ್ಷ ಪ್ರತಿಪಾದಕವಾದ ಪಂಚರಾತ್ರಾದ್ಯಾಗಮಗಳಲ್ಲಿಯೂ, ವೇದೇಷ್ವಪಿ=ವೇದಗಳಲ್ಲಿಯೂ, ಹರೇಃ=ನಾರಾಯಣನಿಗಿಂತ, ಪರಃ-ಬೇರೆಯಾದ ಸರ್ವೋತ್ತಮನು, ನ=ಇದಾನೆಂದು ಹೇಳಲ್ಪಡಲಿಲ್ಲ. ಕ್ವಚಿತ್=ಕೆಲವು ಕಡೆಯಲ್ಲಿ, ಅನ್ಯಶಾಸ್ತ್ರೇಷು=ಶೈವಾಗಮಗಳಲ್ಲಿಯೂ ಕೂಡ, ವಿಷ್ಣುಃ=ನಾರಾಯಣನು, ಪರಮಃ=ಸರ್ವೋತ್ತಮನು ಎಂಬುದಾಗಿ, ಈರಿತಃ=ಹೇಳಿರುತ್ತೆ.

ತಾತ್ಪರ್ಯ.—ಈಗ ಆನಂದತೀರ್ಥರು ನಿಷ್ಕೃಷ್ಟಾರ್ಥವನ್ನು ಹೇಳುತ್ತಾರೆ.—ಪಾಂಚರಾತ್ರವೇ ಮೊದಲಾದ ವೈಷ್ಣವ ಶಾಸ್ತ್ರಗಳಲ್ಲಿಯೂ ಮತ್ತು ವೇದಗಳಲ್ಲಿಯೂ ಹರಿಯೇ ಸರ್ವೋತ್ತಮನೆಂದು ಹೇಳಲ್ಪಟ್ಟಿರುತ್ತೆ. ಮೋಹಕವಾದ ಶೈವಾಗಮಗಳಲ್ಲಿಯೂ ಕೂಡ ಕೆಲವು ಕಡೆಯಲ್ಲಿ ಹರಿಯೇ ಸರ್ವೋತ್ತಮನು ಎಂದು ಹೇಳಿರುತ್ತದೆ. ಆದ್ದರಿಂದ ಹರಿಯೇ ಸರ್ವೋತ್ತಮನೆಂದು ತಿಳಿಯಬೇಕು.

**ಶ್ಲೋಕ || ನಿರ್ದೋಷತ್ವಾಚ್ಚ ವೇದಾನಾಂ ವೇದೋಕ್ತಂಗ್ರಾಹ್ಯಮೇವಹಿ |**
**ವೇದೇಷ್ವಪಿಪರೋ ವಿಷ್ಣುಃ ಸರ್ವಸ್ಮಾದುಚ್ಯತೇ ಸದಾ ||೬೦||**

ಅರ್ಥ.— ವೇದಾನಾಂ=ವೇದಗಳು, ನಿರ್ದೋಷತ್ವಾಚ್ಚ=ಪುರುಷಕೃತಗಳಲ್ಲದ ಪ್ರಯುಕ್ತ ( ಪುರುಷ ದೋಷಗಳು ಇಲ್ಲದ ಪ್ರಯುಕ್ತ) ವೇದೋಕ್ತಂ-ವೇದದಲ್ಲಿ ಹೇಳಿದ ಸಂಗತಿಗಳು, ಗ್ರಾಹ್ಯಮೇವಹಿ=ಗ್ರಹಿಸಲೇಬೇಕಾದದ್ದು, ವೇದೇಷ್ವಪಿ - ವೇದಗಳಲ್ಲಿಯೂ, ಸದಾ-ಯಾವಾಗಲೂ, ವಿಷ್ಣುಃ ನಾರಾಯಣನು, ಸರ್ವಸ್ಮಾತ್-ಎಲ್ಲಾ ದೇವತೆಗಳಿಗಿಂತಲೂ, ಪರಃ = ಸರ್ವೋತ್ತಮನು ಎಂದು, ಉಚ್ಯತೇ-ಹೇಳಲ್ಪಡುತ್ತದೆ.

ತಾತ್ಪರ್ಯ.—ವೇದಗಳು ಪುರುಷ ದೋಷರೂಪವಾದ ಅಜ್ಞತ್ವ ಮೊದಲಾದ ದೋಷಗಳು ಇಲ್ಲದೆ ಸ್ವತಂತ್ರ ಪ್ರಮಾಣವಾದ್ದರಿಂದ ಅವುಗಳಲ್ಲಿ ಹೇಳಿದ ಪ್ರಮೇಯಗಳನ್ನೇ ಅಂಗೀಕರಿಸಬೇಕು. ವೇದಗಳಲ್ಲಿ ಎಲ್ಲಾ ದೇವತೆಗಳಿಗಿಂತ ಹರಿಯೇ ಸರ್ವೋತ್ತಮನೆಂದು ಹೇಳುವುದಲ್ಲದೆ ಸರ್ವ ದೇವತಾ ಪ್ರತಿಪಾದಕನು ಸರ್ವನಾಮಾಧಾರಕನು ಅವನೇ ಎಂದು ಹೇಳಿರುತ್ತೆ ಹೇಗೆ ವಿಚಾರಮಾಡಿದರೂ ಹರಿಯೇ ಸರ್ವೋತ್ತಮನು ಎಂದು ತಿಳಿಯಬರುತ್ತೆ.

**ಶ್ಲೋಕ || ಅಸ್ಯದೇವಸ್ಯಮೀಳ್ಹುಷೋ | ವಯಾವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ || ವಿದೇಹಿರುದ್ರೋರುದ್ರಿಯಂ ಮಹಿತ್ವಂಯಾಸಿಷ್ಟಂವರ್ತಿರಶ್ವಿನಾವಿರಾವತ್ ||೬೧||**

ಅರ್ಥ. —ದೇವಸ್ಯ=ಕ್ರೀಡಾದಿ ಗುಣ ವಿಶಿಷ್ಟನಾದ, ಮೀಳ್ಹುಷಃ=ಭಕ್ತರಿಗೆ ಅಪೇಕ್ಷಿತ ಪುರುಷಾರ್ಥವನ್ನು ಕೊಡುವ, ಏಷಸ್ಯ=ಇಚ್ಛಾರೂಪನಾದ, ಅಸ್ಯ=ಈ, ವಿಷ್ಣೋಃ=ನಾರಾಯಣನಿಗೆ, ಹವಿರ್ಭಿಃ=ಹವಿಸ್ಸೇ ಮುಂತಾದ, ಪ್ರಭೃಥೇ-ಪೂಜಾರೂಪವಾದ ತಪಸ್ಸೇ ಮುಂತಾದವುಗಳನ್ನು ಮಾಡಲಾಗಿ, ವಯಾಃ=ಬಂಧಕನಾದ, ರುದ್ರಃ=ರುದ್ರನು, ರುದ್ರೀಯಂ=ರುದ್ರಸಂಬಂಧವಾದ ಮಹಿಮೆಯನ್ನು (ರುದ್ರಪದವಿಯನ್ನು ) ವಿದೇಹಿ=ಹೊಂದಿದನು, ಹೇ ಅಶ್ವಿನೌ=ಎಲೈ ಅಶ್ವಿನೀ ದೇವತೆಗಳಿರಾ ( ಯುವಾಮಪಿ-ನೀವಿಬ್ಬರೂ ಕೂಡ) ಇರಾವತ್=ಅನ್ನದ ಹಾಗೆ ಭೋಗ್ಯವಾದ ಪದವಿಯನ್ನು ಯಾಸಿಷ್ಟಂ=ನನ್ನಿಂದ ಪಡೆದು ಇರುವಿರಿ ಎಂದನು.

ಕಾಣುವ) ಸಿಂಹದೋಪಾದಿಯಲ್ಲಿ ಭಯಂಕರನಾದ ಸರ್ವ ಸಂಹಾರಕರ್ತ ನಾದ ನೃಸಿಂಹದೇವರನ್ನು ಸ್ತೋತ್ರಮಾಡಿ ಶೇಷಪದವಿಯನ್ನು ಹೊಂದಿ ಮುಕ್ತನಾಗೆಂದು, ರುದ್ರಪದವಿಗೆ ಬರುವ ಜೀವರ ಸಮುದಾಯಕ್ಕೆ ಹೇಳಿದ ಮಾತು, ಯಂಕಾಮಯೇವಂ ಎಂಬುವುದು ಲಕ್ಷ್ಮೀಸೂಕ್ತ, ಇದು ಲಕ್ಷ್ಮೀದೇವಿಯರು ಹೇಳುವ ಮಾತು, ಇವರಲ್ಲಿ ತಮ್ಮ ಶಕ್ತಿಯನ್ನೂ ಮತ್ತು ಪರಮಾತ್ಮನ ಶಕ್ತಿಯನ್ನೂ ಹೇಳುತ್ತಾರೆ. ನಾನು ಯಾವ ಜೀವರನ್ನು ರುದ್ರದೇವರನ್ನಾಗಿ ಮಾಡಲು ಅಪೇಕ್ಷಿಸುವೆನೋ ಅವನನ್ನ ರುದ್ರಪದವಿಗೆ ತರಬಲ್ಲೆ. ಬ್ರಹ್ಮಪದವೀಗೆ ಬರುವ ವಾಯುದೇವರಿಗೆ ಬ್ರಹ್ಮಪದವಿಯನ್ನು ಕೊಡಬಲ್ಲೆ. ಮತ್ತು ಋಷಿಪದವಿಯನ್ನೂ ಕೊಡಬಲ್ಲೆ. ಒಳ್ಳೇ ಬುದ್ಧಿವಂತನನ್ನು ಮಾಡಬಲ್ಲೆ. ಇದು ನನ್ನ ಮಹಾತ್ಮ್ಯೆ, ನನ್ನ ಗಂಡನಾದ ಪರಮಾತ್ಮನ ಮಹಾತ್ಮ್ಯೆ ಅಪರಮಿತವಾದದು, ಅದನ್ನು ಹೇಳಲು ನನ್ನಿಂದ ಆಗಲಾರದೆಂದು ಲಕ್ಷ್ಮೀದೇವಿಯರು ಹೇಳಿದ್ದರಿಂದ ಹರಿಯೇ ಸರ್ವೋತ್ತಮನೆಂದು ತಿಳಿಯಬೇಕು.

**ಶ್ಲೋಕ || ಏಕೋನಾರಾಯಣಆಸೀನ್ನ ಬ್ರಹ್ಮಾನಚ ಶಂಕರಃ || ವಾಸುದೇವೋವಾ ಇದಮಗ್ರ ಆಸೀತ್ ನಬ್ರಹ್ಮನಚ ಶಂಕರಃ ||೬೩||**

ಅರ್ಥ ಮತ್ತು ತಾತ್ಪರ್ಯ:—ಅಗ್ರೇ ಎಂಬುವುದು ಅವ್ಯಯ ಮತ್ತು ಪ್ರಥಮಾವಿಭಕ್ತಿ ಎಂದು ತಿಳಿಯಬೇಕು. ಏಕಃ=ಸ್ವಗತಭೇದವರ್ಜಿತನಾದ ನಾರಾಯಣಃ-ದೋಷರಹಿತವಾದ ಗುಣಗಳಿಗೆ ಆಶ್ರಯನಾದ ಹರಿಯು, ಒಬ್ಬನೇ ಪ್ರಳಯದಲ್ಲಿ ಸ್ವತಂತ್ರನಾಗಿದ್ದನು, ಬ್ರಹ್ಮರುದ್ರರೇ ಮುಂತಾದವರು ದೇವರುದರದಲ್ಲಿದ್ದ ಪ್ರಯುಕ್ತ ಸ್ವತಂತ್ರರಾಗಿರಲಿಲ್ಲ, ಮತ್ತು ವೇದದಲ್ಲಿ, ಇನ್ನೊಂದುಕಡೆ (ಅಗ್ರೆ=ಅವ್ಯಯವಾದ್ದರಿಂದ) ಅಗ್ರಃ=ಗುಣಜ್ಯೇಷ್ಠನಾದ, ವಾಸುದೇವೋವ=ವಾಸುದೇವನೆ, ಆಸೀತ್=ಪ್ರಳಯದಲ್ಲಿ ಸ್ವತಂತ್ರನಾಗಿದ್ದು, ಬ್ರಹ್ಮರುದ್ರಾದಿಗಳು ಹಿಂದೆ ಹೇಳಿದ ರೀತಿಯಲ್ಲಿದ್ದರು, ಇದಂ=ರಮಾಬ್ರಹ್ಮಾದಿಗಳಿಗಿಂತಲೂ, ಗುಣಜ್ಯೇಷ್ಠನಾಗಿದ್ದನೆಂದು ತಿಳಿಯಬೇಕು. ಮತ್ತು ಬ್ರಹ್ಮರುದ್ರಾದಿಗಳು ಎಲ್ಲಾ ಕಾಲದಲ್ಲಿಯೂ ಅಸ್ವತಂತ್ರರೆಂದು ತಿಳಿಯಬೇಕು.

ಶ್ಲೋಕ ॥ ಯದಾಪಶ್ಯಃ ಪಶ್ಯತೇರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ॥ ತದಾ ವಿದ್ವಾನ್ ಪುಣ್ಯಪಾಪೇವಿಧೂಯನಿರಂಜನಃ ಪರಮಂಸಾಮ್ಯಮುಪೈತಿ ॥೬೪॥

ಅರ್ಥ.— ಯದಾ= ಯಾವಾಗ, ಪಶ್ಯಃ= ಜೀವನು (ಪಶ್ಯತೀಪಶ್ಯೋ ಜೀವಃ) ರುಕ್ಮವರ್ಣಂ= ಸುವರ್ಣದೋಪಾದಿಯಲ್ಲಿ ಕಾಂತಿಯುಳ್ಳ, ಕರ್ತಾರಂ= ಸರ್ವ ಪ್ರಪಂಚಕ್ಕೆ ಸೃಷ್ಟಿಕರ್ತನಾದ, ಈಶಂ = ನಿಯಾಮಕನಾದ, ಪುರುಷಂ= ಪೂರ್ಣಷಡ್ಗುಣನಾದ, ಬ್ರಹ್ಮಯೋನಿಂ= ಬ್ರಹ್ಮ- ಚತುರ್ಮುಖಬ್ರಹ್ಮನಿಗೆ, ಯೋನಿಂ= ಕಾರಣನಾದ ಪರಮಾತ್ಮನನ್ನು, ಪಶ್ಯತೇ= ಈ ಜೀವನು, ನೋಡುತ್ತಾನಯೋ, ತದಾ= ಆಗ, ವಿದ್ವಾನ್= ಅಪರೋಕ್ಷಜ್ಞಾನಿಯು, ಪುಣ್ಯಪಾಪೇ- ಪ್ರಾರಬ್ಧ ಹೊರತು ಮಿಕ್ಕ ಪುಣ್ಯಪಾಪಗಳನ್ನು, ವಿಧೂಯ= ಕಳೆದುಕೊಂಡು, ನಿರಂಜನಃ= ಲೇಪವಿಲ್ಲದವನಾಗಿ, ಪರಮಂಸಾಮ್ಯಂ- ನಿರ್ದುಃಖತ್ವಾದಿಗಳಿಂದ ಸಾಮ್ಯವನ್ನು, ಉಪೈತಿ= ಉಪ = ಪರಮಸಾಮ್ಯವನ್ನು, ಏತಿ= ಹೊಂದುತ್ತಾನೆ.

ತಾತ್ಪರ್ಯ.— ಪರಮಾತ್ಮನನ್ನು ನೋಡಲು ಯೋಗ್ಯನಾದ ಜೀವನು ಸುವರ್ಣದೋಪಾದಿಯಲ್ಲಿ ಕಾಂತಿಯುಳ್ಳ ಸರ್ವಕರ್ತನಾದ, ಸರ್ವನಿಯಾಮಕನಾದ, ಪೂರ್ಣಷಡ್ಗುಣನಾದ, ಬ್ರಹ್ಮದೇವರನ್ನೂ ಸೃಷ್ಟಿಸುವ ಪರಮಾತ್ಮನನ್ನು ಅಪರೋಕ್ಷದಿಂದ ನೋಡಿದಾಗಲೆ ಆ ಜ್ಞಾನಿಯು (ಅಪರೋಕ್ಷಜ್ಞಾನಿಯು) ಪ್ರಾರಬ್ಧವಲ್ಲದ ಪುಣ್ಯಪಾಪಗಳನ್ನು ಅಂದರೆ ಬಂಧಕವಾದ ಪುಣ್ಯಗಳನ್ನೂ ಪಾಪಗಳನ್ನೂ ಸಮಗ್ರವಾಗಿ ಕಳೆದುಕೊಂಡು, ಲೇಪರಹಿತವಾಗಿ (ಕರ್ಮಲೇಪವಿಲ್ಲದವನಾಗಿ) ನಿರ್ದುಃಖತ್ವಾದಿಗಳಿಂದ ಕಿಂಚಿತ್ ಸಾಮ್ಯವನ್ನೆ ಪರಮಾತ್ಮನ ಸಮೀಪದಲ್ಲಿ ಹೊಂದುತ್ತಾನೆಂದು ಹೇಳಿರುವುದರಿಂದ ಮುಕ್ತಿಯಲ್ಲಿಯೂ ಅಭೇದವಿಲ್ಲ. ತಾರತಮ್ಯವು ಇದ್ದೇ ಇರುತ್ತದೆಯೆಂದು ತಿಳಿಯಬೇಕು.

ಶ್ಲೋಕ ॥ ಯೋವೇದನಿಹಿತಂ ಗುಹಾಯಾಂ ಪರಮೇವ್ಯೋಮನ್ ॥ ಸೋಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾವಿಪಶ್ಚಿತಾ ॥೬೫॥

ಅರ್ಥ.— ಯಃ= ಯಾವ ಅಧಿಕಾರಿಯು, ಗುಹಾಯಾಂ – ಹೃದಯ ಗುಹಾ ಎಂಬ, ಪರಮೇವ್ಯೋಮನ್ = ಆಕಾಶದಲ್ಲಿ, ನಿಹಿತಂ = ಇರುವ

ಪರಮಾತ್ಮನನ್ನು, ವೇದ ಅಪರೋಕ್ಷದಿಂದ ನೋಡುತ್ತಾನೋ, ಸಃ=ಅವನು, ವಿಪಶ್ಚಿತಾ - ಜ್ಞಾನರೂಪನಾದ ಪರಮಾತ್ಮನನ್ನು, ಚತುರ್ಮುಖ ಬ್ರಹ್ಮದೇವರ ಉಪದೇಶದಿಂದ, ಸರ್ವಾನ್-ತನಗೆ ಯೋಗ್ಯವಾದ, ಕಾಮಾನ್-ಮೋಕ್ಷದ ಭೋಗಗಳನ್ನು, ಅಶ್ನುತೆ=ಅನುಭವಿಸುತ್ತಾನೆ.

ತಾತ್ಪರ್ಯ.—ಯಾವ ಅಧಿಕಾರಿಯು ತನ್ನ ಹೃದಯಾಕಾಶದಲ್ಲಿರುವ ಪರಮಾತ್ಮನನ್ನು (ನಾರಾಯಣನನ್ನು) ಅಪರೋಕ್ಷಜ್ಞಾನದಿಂದ ನೋಡುತ್ತಾನೋ ಅವನು ಚರಮದೇಹದಿಂದ ಉತ್ಕ್ರಮಣವನ್ನು ಹೊಂದಿ ಚತುರ್ಮುಖಬ್ರಹ್ಮದೇವರ ಸಂಗಡ ನಾರಾಯಣನ ಅನುಗ್ರಹದಿಂದ ಪ್ರಾಪ್ತವಾದ ತನಗೆ ಯೋಗ್ಯವಾದ ಮೋಕ್ಷಸುಖವನ್ನು ಹೊಂದುತ್ತಾನೆ. ಅಪರೋಕ್ಷಜ್ಞಾನದಲ್ಲಿಯೂ ತಾರತಮ್ಯವಿರುವುದರಿಂದ ಸುಖದಲ್ಲಿಯೂ ತಾರತಮ್ಯವು ಇದ್ದೇ ಇರುತ್ತೆ. (ಹರಿವಂಶದಲ್ಲಿ) ವಿದ್ಯುದ್ವಹ್ನ್ಯಗ್ನಿ ಸಾ ವಿದ್ಯುಃ ಸೂರ್ಯಮಂಡಲವತ್ಸುರಾಃ ॥ ಪ್ರತಿಬಿಂಬವಚ್ಚ ಗಿರೀಶೋ ಬ್ರಹ್ಮೈನಂ ಪಶ್ಯತಿಸ್ಫುಟಂ ॥ ಹರಿಯನ್ನು ಅಪರೋಕ್ಷದಲ್ಲಿ ಮನುಷ್ಯರು ಮಿಂಚಿನಂತೆ ನೋಡುತ್ತಾರೆ. ದೇವತೆಗಳು ಸೂರ್ಯನಂತೆ, ರುದ್ರನು ಪ್ರತಿಬಿಂಬನಂತೆ, ಬ್ರಹ್ಮದೇವರು ಪರಮಾತ್ಮನನ್ನು ಚೆನ್ನಾಗಿ ನೋಡುತ್ತಾರೆ. ಮೋಕ್ಷದಲ್ಲಿಯೂ ಆನಂದ ತಾರತಮ್ಯವು ತೈತ್ತಿರೀಯ ಶ್ರುತಿಯಲ್ಲಿ ಹೇಳಿದಂತೆ ಇದ್ದೇ ಇದೆ.

**ಶ್ಲೋಕ ॥ ಪ್ರಘಾನ್ವಸ್ಯ ಮಹತೋಮಹಾನಿ ಸತ್ಯಾ ಸತ್ಯಸ್ಯ ಕರಣಾನಿವೋಚಂ ॥ ಸತ್ಯಮೇನಮನು ವಿಶ್ವೇಮದಂತಿರಾತಿಂ ದೇವಸ್ಯಗೃಣತೋಮಘೋನಃ ॥೬೬॥**

ಅರ್ಥ.—ಮಹತಃ=ಸರ್ವೋತ್ತಮನಾದ, ಸತ್ಯಸ್ಯ=ಸತ್ಯ ವಚನವುಳ್ಳ, ಅಸ್ಯ-ಶ್ರೀಹರಿಯ, ಮಹಾನಿ=ಮಹತ್ತಾದ, ಕರಣಾನಿ=ಕರ್ಮಗಳು ಸತ್ಯಾಅನು-ಸತ್ಯವಾದದ್ದೆಂತ, ಪ್ರವೋಚಂ=ಹೇಳಿರುತ್ತೇನೆ, ಘ-ಇದು ಪ್ರಸಿದ್ಧವಾಗಿಯೇ ಇದೆ ( ಅವಧಾರಣೆ ಘ ಶಬ್ದಸ್ಯಾತ್ಪಾದಪೂರಣೇಂತು ಸಾರಘಂ ಎಂಬ ಕೋಶದ ರೀತಿ ) ಗೃಣತಃ=ಸ್ತೋತ್ರಮಾಡುವ, ದೇವಸ್ಯ=ದೇವತಾ ಸ್ವರೂಪಿಯಾದ, ಮಘೋನಃ=ಇಂದ್ರನಿಗೆ, ರಾತಿಂ=ಅಭೀಷ್ಟವನ್ನು ಕೊಡುವ, ಏವಮನು=ಈ ಪರಮಾತ್ಮನನ್ನು ಸ್ತೋತ್ರಮಾಡಿ, ವಿಶ್ವೇದೇವಾಃ=ಸಮಸ್ತ ದೇವತೆಗಳೂ, ಮದಂತಿ=ಹರ್ಷವನ್ನು ಹೊಂದುತ್ತಾರೆ.

ತಾತ್ಪರ್ಯ.—" ಸತ್ಯಮೇನ ಮಸ್ಯ " ಮುಂತಾದವುಗಳಿಂದ ವಿಷ್ಣು ಕೃತವಾದ ಸೃಷ್ಟ್ಯಾದಿ ವ್ಯಾಪಾರಗಳು ಸತ್ಯವೆಂದು ತಿಳಿಯಬೇಕು. ಪರಮಾತ್ಮನು ಸತ್ಯ, ಜಗತ್ತು ಸತ್ಯವೆಂದು ತಾತ್ಪರ್ಯ. ದೇವರು ಮಾಡುವ ಸಮಸ್ತ ಕರ್ಮಗಳು ಸತ್ಯಗಳಾಗಿಯೇ ಇವೆ. ಸತ್ಯರೂಪನಾದ ಪರಮಾತ್ಮನನ್ನು ಸ್ತೋತ್ರಮಾಡಿ ಇಂದ್ರನು ಇಷ್ಟಾರ್ಥವನ್ನು ಪಡೆದನು, ಪಡೆಯುತ್ತಾರೆಂದು ತಿಳಿಯಬೇಕು.

**ಶ್ಲೋಕ ॥ ಯಚ್ಚಿಕೇತ ಸತ್ಯಮಿತ್ತನ್ನಮೋಘಂ ವಸುಸ್ಪಾರ್ಹಮುತಜೇತೋತದಾತಾ ॥ ಸತ್ಯಸೋಃ ಅಸ್ಯಮಹಿಮಾಗೃಣೇಶವೋ ಯಜ್ಞೇಷು ವಿಪ್ರರಾಜ್ಯೇ ॥೬೭॥**

ಅರ್ಥ.—ಹರಿಃ-ನಾರಾಯಣನು, ಯತ್ ಚಿಕೇತ = ಯಾವುದನ್ನು ಸೃಷ್ಟಿಸಿದನೋ, ತತ್-ಅದು, ಸತ್ಯಮಿತ್ಯೇವ=ಸತ್ಯಭೂತವಾದದ್ದೆ, ಮೋಘಂ=ಮಿಥ್ಯಾಭೂತವಾದದ್ದು, ನ=ಅಲ್ಲ, ಸ್ಪಾರ್ಹಂ=ಸ್ಪೃಹಣೀಯವಾದ (ಅಪೇಕ್ಷಿತವಾದ) ವಸು=ವಸ್ತುವು, ಜೇತಾ=ಬಲ್ಯಾದಿಗಳಿಂದ ಯಾಚನೆ ಮುಂತಾದವುಗಳನ್ನು ಮಾಡಿ ಸಂಪಾದಿಸಿ, ಉತ=ಮತ್ತೆ, ದಾತಾ = ಇಂದ್ರಾದಿಗಳಿಗೆ ಕೊಡುತ್ತಾನೆ, ಅಸ್ಯ-ಈ ಪರಮಾತ್ಮನ, ಸಃ=ಶ್ರುತ್ಯಾದ್ಯುಕ್ತವಾದ ಜಗತ್ಸರ್ಜನಾದಿ ರೂಪವಾದ, ಮಹಿಮಾ=ಮಾಹಾತ್ಮ್ಯೆಯು, ಸತ್ಯಃ=ಯಥಾರ್ಥವಾದದ್ದು, ತಂ=ಅಂಥಾ ಮಾಹಾತ್ಮ್ಯಗಳನ್ನು, ವಿಪ್ರರಾಜೇ=ಬ್ರಾಹ್ಮಣ ಪ್ರಚುರವಾದ, ಯಜ್ಞೇಷು=ದೇವತೋದ್ದೇಶ್ಯ ಕರ್ಮಗಳಲ್ಲಿ, ಶವ=ತಮ್ಮಗಳ ಮೋಕ್ಷಾದಿ ಪ್ರಾಪ್ತಿಗೋಸುಗ, ಗೃಣೇ=ಸ್ತುತಿಸುವೆನು

ತಾತ್ಪರ್ಯ.—ಶ್ರೀಹರಿಯು ಯಾವಯಾವ ಸೃಷ್ಟಿಗಳನ್ನು ಮಾಡಿದ್ದಾನೆಯೋ ಅವುಗಳೆಲ್ಲಾ ಸತ್ಯಭೂತವಾದದ್ದು, ಸುಳ್ಳಲ್ಲ, ಇಂಥಾ ಸತ್ಯ ಜಗತ್ತನ್ನ ನಿರ್ಮಾಣಮಾಡಿದ ಹರಿಯ ಮಹಿಮೆಗಳೂ ಕೂಡ ಸತ್ಯಭೂತವಾದವುಗಳು ಸತ್ಯಭೂತನಾದ ಹರಿಯ ಮಾಹಾತ್ಮ್ಯೆಗಳನ್ನು ಬ್ರಾಹ್ಮಣರು ದೇವತೋದ್ದೇಶಕವಾದ ಕರ್ಮಗಳಲ್ಲಿಯೂ, ಮತ್ತು ಶ್ರವಣ ಮನನರೂಪವಾದ ಜ್ಞಾನಯಜ್ಞವಲ್ಲಿ ಜ್ಞಾನಿಗಳು ಮೋಕ್ಷಕ್ಕೂ ಮತ್ತು ಮೋಕ್ಷದಲ್ಲಿ ಹೆಚ್ಚು ಸುಖವಾಗುವದಕ್ಕೂ ಆಚರಿಸುವರು.

**ಶ್ಲೋಕ || ಸತ್ಯಾ ವಿಷ್ಣೋಃ ಗುಣಾಃ ಸರ್ವೇ ಸತ್ಯಾ ಜೀವೇಶಯೋರ್ಭಿದಾ ||**
**ಸತ್ಯೋ ಮಿಥೋ ಜೀವಭೇದಃ ಸತ್ಯಃ ಚ ಜಗದೀದೃಶಂ ||೬೮||**

ಅರ್ಥ.— ವಿಷ್ಣೋಃ–ವಿಷ್ಣುವಿನ, ಸರ್ವೇ–ಸಮಸ್ತವಾದ, ಗುಣಾಃ= ಜ್ಞಾನಾನಂದಾದಿ ಗುಣಗಳು, ಸತ್ಯಾಃ=ಸತ್ಯವಾದವುಗಳು, ಯಾವಾಗಲೂ ಇರುತ್ತವೆ, ಜೀವೇಶಯೋಃ–ಜೀವಪರಮಾತ್ಮರುಗಳ, ಭಿದಾ–ಭೇದವು, ಸತ್ಯಾ=ಯಥಾರ್ಥವಾದದ್ದು, ಮಿಥಃ=ಪರಸ್ಪರವಾಗಿ, ಜೀವಭೇದಃ=ಜೀವಜೀವರ ಭೇದವು, ಸತ್ಯಃ=ಸತ್ಯರೂಪವಾದದ್ದು, ಈದೃಶಂ–ಹೀಗೆ ಪ್ರತಿಪಾದ್ಯತ್ವಾದಿ ಅರ್ಥಕ್ರಿಯಾಕಾರಿಯಾದ, ಜಗತ್=ಜಗತ್ತೂ ಸಹ, ಸತ್ಯಂ =ಸತ್ಯಭೂತವು.

ತಾತ್ಪರ್ಯ.— ವಿಷ್ಣುವಿನ ಗುಣಗಳಿಗೆ ಸತ್ಯತ್ವ ಪ್ರತಿಪಾದಕವಾದ ವಾಕ್ಯವನ್ನು ಹೇಳುತ್ತಾರೆ.— ನಾರಾಯಣನ ಜ್ಞಾನಾನಂದಾದ್ಯನೇಕ ಗುಣಗಳೂ ಸತ್ಯ, ಜೀವಪರಮಾತ್ಮರ ಭೇದವೂ ಸತ್ಯವು, ಜೀವಜೀವರ ಭೇದವೂ ಸಹ ಸತ್ಯವು, ಜೀವರುಗಳ ಪ್ರಯೋಜನಕ್ಕಾಗಿ ಮಾಡಿದ ಜಗತ್ತೂ ಸತ್ಯವು, ಅಥವ ಸತ್ಯರೂಪನಾದವನಿಂದ ಸೃಷ್ಟವಾದ ಜಗತ್ತೂ ಸಹ ಸತ್ಯವೆಂದು ತಿಳಿ.

**ಶ್ಲೋಕ || ಅಸತ್ಯಃ ಸ್ವಗತೋ ಭೇದೋ ವಿಷ್ಣೋರ್ನಾನ್ಯದಸತ್ಯಕಂ || ಜಗತ್ಪ್ರವಾಹಃ ಸತ್ಯೋಯಂ ಪಂಚಭೇದ ಸಮನ್ವಿತಂ ||೬೯||**

ಅರ್ಥ.— ವಿಷ್ಣೋಃ=ವಿಷ್ಣುವಿನ, ಸ್ವಗತಃ = ಸ್ವರೂಪಭೂತವಾದ ಗುಣಗಳಿಗೂ, ಅವತಾರಗಳಿಗೂ, ಅವಯವಾವಯವಿಗಳಿಗೂ, ಭೇದ= ಭೇದ ಹೇಳುವುದು, ಅಸತ್ಯಃ=ಸುಳ್ಳು, ವಿಷ್ಣೋಃ=ವಿಷ್ಣುವಿಗಿಂತಲೂ, ಅನ್ಯತ್=ಬೇರೆಯಾದ ಜೀವರಾಶಿಗಳು ಮತ್ತು ಜಗತ್ತುಗಳು, ಅಸತ್ಯಕಂ = ಮಿಥ್ಯಾಭೂತವು, ನ=ಅಲ್ಲ, ಅಂದರೆ ಸತ್ಯವೇ, ಅಯಂ–ಈ, ಜಗತ್ಪ್ರವಾಹಃ ಜಗತ್ ಪರಂಪರೆಯು, ಸತ್ಯಃ–ಸತ್ಯವಾದದ್ದು, ಮತ್ತು ಪಂಚಭೇದಸಮನ್ವಿತಃ=ಪಂಚ–ಐದು ಆದ, ಭೇದ=ರಾಶಿಭೇದಗಳಿಂದ, ಸಮನ್ವಿತಃ–ಕೂಡಿರುವುದು.

ತಾತ್ಪರ್ಯ.— ನಾರಾಯಣನ ಸ್ವರೂಪಭೂತವಾದ ಗುಣಗಳಿಗೂ, ಅವತಾರಗಳಿಗೂ, ಅವಯವಾವಯವಿಗಳಿಗೂ ಭೇದವಿಲ್ಲ. ವಿಷ್ಣುವಿನಿಂದ

ಬಿನ್ನವಾದ ಜೀವರುಗಳು ಅಸತ್ಯವಲ್ಲ. ಜಗತ್ಪ್ರವಾಹವು ಸತ್ಯವು, ಭೇದಗಳು ಅನಂತವಾಗಿದ್ದರೂ ರಾಸ್ಯಾಪೇಕ್ಷೆಯಿಂದ ಪಂಚಭೇದವೆಂದು ಹೇಳುತ್ತಾರೆ.

**ಶ್ಲೋಕ || ಜೀವೇಶಯೋರ್ಭಿದಾ ಚೈವ ಜೀವಭೇದಃಪರಸ್ಪರಂ || ಜಡೇಶಯೋರ್ಜಡಾನಾಂಚ ಜಡಜೀವಭಿದಾತಥಾ ||೭೦||**

**ಶ್ಲೋಕ || ಪಂಚಭೇದಾ ಇಮೇನಿತ್ಯಾಃ ಸರ್ವಾವಸ್ಥಾಸು ಸರ್ವಶಃ || ಮುಕ್ತಾನಾಂಚನಹೀಯಂತೇ ತಾರತಮ್ಯಂಚ ಸರ್ವದಾ ||೭೧||**

ಅರ್ಥ.—ಜೀವೇಶಯೋಃ=ಜೀವಪರಮಾತ್ಮರುಗಳ, ಭಿದೈವ=ಭೇದವೇ, ಭೇದವೇ ಎಂದು ತಿಳಿಯುವುದಕ್ಕೆ, "ಏವ" ಕಾರವು, ಇದು ಎಲ್ಲಾದಕ್ಕೂ ಅನ್ವಯವಾಗುತ್ತೆ. ಜೀವಬೇಧಃ=ಜೀವರಬೇದವು, ಪರಸ್ಪರಂ–ಅನ್ಯೋನ್ಯವಾಗಿರುತ್ತೆ. ಜಡೇಶಯೋಃ – ಜಡಪರಮಾತ್ಮರಿಗೂ, ಜಡಾನಾಂಚ=ಜಡಜಡಗಳಿಗೂ, ತಥಾ=ಹಾಗೆ, ಜಡಜೀವಭಿದಾ = ಜಡಜೀವರಬೇಧವೂ, ಇಮೇ=ಈ, ಪಂಚಬೇಧಾಃ=ಪಂಚರಾಶಿಯು ಬೇಧಗಳು, ನಿತ್ಯಾಃ=ನಿತ್ಯವಾದವು, ಸರ್ವಾವಸ್ಥಾಸು–ಎಲ್ಲಾ ಅವಸ್ಥಾ ವಿಶೇಷಗಳಲ್ಲಿಯೂ, ಸರ್ವಶಃ=ಎಲ್ಲಾ ಕಾಲಗಳಲ್ಲಿಯೂ ( ಸಹಾನಿತ್ಯಾಃ ) ನಿತ್ಯವಾದವುಗಳು, ಮುನಾಂಚ=ಮುಕ್ತರುಗಳ, ತಾರತಮ್ಯಂಚ–ತಾರತಮ್ಯವೂಕೂಡ, ಸರ್ವದಾ–ಎಲ್ಲಾ ಕಾಲದೇಶಗಳಲ್ಲಿಯೂ, ನಹೀಯಂತೇ–ವ್ಯತ್ಯಾಸವಾಗುವುದಿಲ್ಲ.

ತಾತ್ಪರ್ಯ.—ಜೀವಪರಮಾತ್ಮರ ಬೇಧ, ಜೀವಜೀವರ ಭೇದ, ಜಡಪರಮಾತ್ಮರ ಬೇಧ, ಜಡಗಳ ಪರಸ್ಪರ ಬೇಧ, ಜಡಜೀವ ಬೇಧ, ಎಂಬ ಪಂಚರಾಶಿಬೇಧಗಳು ಮುಕ್ತಿಯಲ್ಲಿಯೂ, ಸಂಸಾರಾವಸ್ಥೆಯಲ್ಲಿಯೂ ಸೃಷ್ಟಿ, ಪ್ರಳಯ, ಪಾಲನಕಾಲಗಳಲ್ಲಿಯೂ, ನಿತ್ಯವಾದವುಗಳು, ಮುಕ್ತರಬೇಧ ವಿಚಾರದಲ್ಲಿ " ಸೋಽಯಂ ಸತ್ಯೋಽಹ್ಯನಾದಿಶ್ಚ " ಎಂಬ ಶ್ರುತಿ ಮತ್ತು " ಭೇದಸ್ತು ಸರ್ವವಸ್ತೂನಾಂ ಸ್ವರೂಪಂ ನೈಜಮವ್ಯಯಂ || ನಷ್ಟಾನಾಮಪಿ ವಸ್ತೂನಾಂ ಬೇಧೋನೈವ ವಿನಶ್ಯತಿ " ಎಂಬುವ ತೈತ್ತರೀಯ ಶ್ರುತಿಗಳೇ ಮುಂತಾದವು ಇರುತ್ತವೆ. ಪಂಚಬೇಧವು ಸರ್ವಕಾಲದಲ್ಲಿಯೂ ಸತ್ಯವೆಂದು ತಿಳಿಯಬೇಕು.

ಶ್ಲೋಕ ॥ ಕ್ಷಿತಿಪಾಮನುಷ್ಯಗಂಧರ್ವಾಃ ದೇವಾಶ್ಚ ಪಿತರಶ್ಚಿರಾಃ । ಆಜಾನಜಾಃ ಕರ್ಮಜಾಶ್ಚ ದೇವಾ ಇಂದ್ರಃ ಪುರಂದರಃ ॥೭೨॥
ರುದ್ರಃ ಸರಸ್ವತೀ ವಾಯುಃ ಮುಕ್ತಾಃ ಶತಗುಣೋತ್ತರಾಃ ॥ ಏಕೋ ಬ್ರಂಹಾಚ ವಾಯುಶ್ಚ ವೀಂದ್ರರುದ್ರ ಸಮಸ್ತಥಾ ॥೭೩॥
ಏಕೋರುದ್ರಸ್ತಥಾ ಶೇಷೋನಕಶ್ಚಿದ್ವಾಯುನಾಸಮ್ ॥ ಮುಕ್ತೇಷು ಶ್ರೀಃತಥಾವಾಯೋಃ ಸಹಸ್ರಗುಣಿತಾಗುಣೈಃ ॥೭೪॥

ಅರ್ಥ ಮತ್ತು ತಾತ್ಪರ್ಯ.— ಕ್ಷಿತಿಪಾಃ=ಮನುಷ್ಯೋತ್ತಮರು ಮತ್ತು ರಾಜರು, ಅನಂತರ ಮನುಷ್ಯಗಂಧರ್ವಾಃ=ಮನುಷ್ಯಗಂಧರ್ವರು, ಅನಂತರ ದೇವಾಃ=ದೇವಗಂಧರ್ವರು, ಅನಂತರ ಚಿರಾಃಪಿತರಃ - ಅನಂತರ ಚಿರರೆಂಬ ಪಿತೃಗಳು, ಆಜಾನಜಾಃ-ದೇವಕುಲದಲ್ಲಿ ಹುಟ್ಟಿ ಪ್ರಸಿದ್ಧರಲ್ಲದವರು, ಅನಂತರ ಕರ್ಮಜಾಃ=ಕರ್ಮದಿಂದ ದೇವತ್ವವನ್ನು ಹೊಂದಿದ ಬಲಿಯೇ ಮುಂತಾದವರು, ಅನಂತರ ದೇವಾಃ-ತಾತ್ವಿಕದೇವತೆಗಳು, ಅನಂತರ ಇಂದ್ರ=ದಕ್ಷಬ್ರಹ್ಮ, ಅನಂತರ ಪುರಂದರಃ=ಇಂದ್ರನು, (ತೇಭ್ಯೋ ದಕ್ಷಸ್ತ್ವಿಂದ್ರನಾಮಾಸಹೀಂದುಂರಾಪಯತ್ ಪುರಾ ಈ ಪ್ರಮಾಣದಿಂದ ಇಂದ್ರ ಎಂದರೆ ದಕ್ಷಬ್ರಹ್ಮನೆಂದು ತಿಳಿಯಬೇಕು) ಅನಂತರ ರುದ್ರಃ=ರುದ್ರನು, ಅನಂತರ ಸರಸ್ವತೀ=ಸರಸ್ವತಿಯು, ಅನಂತರ ವಾಯುಃ=ವಾಯುವು, ಮುಕ್ತಾಃ=ಮುಕ್ತರುಗಳು, ಶತಗುಣೋತ್ತರಾಃ=ನೂರು ಗುಣಗಳಿಂದ ಅಧಿಕರು, ಬ್ರಹ್ಮಾಚ=ಬ್ರಹ್ಮದೇವರು, ವಾಯುಃ=ಪ್ರಧಾನವಾಯುದೇವರು, ಏಕಃ=ಒಂದೇ ಸಮರೆಂದು ತಿಳಿಯಬೇಕು. ತಥಾ = ಹಾಗೆ, ವೀಂದ್ರ=ಗರುಡನು, ರುದ್ರ=ರುದ್ರನೂ, ಸಮಃ=ಸಮರೆಂದು ತಿಳಿಯಬೇಕು ಸರಸ್ವತೀ ಜೊತೆಯಲ್ಲಿ ಭಾರತಿಯನ್ನೂ, ಬ್ರಹ್ಮನ ಜೊತೆಯಲ್ಲಿ ವಾಯುವನ್ನೂ ಸಮರೆಂದು ತಿಳಿಯುವುದು.

ಏಕಃ=ಒಬ್ಬನಾದ, ರುದ್ರಃ-ರುದ್ರನು, ತಥಾ=ಹಾಗೆ, ಏಕಃ=ಒಬ್ಬನಾದ, ಶೇಷಃ=ಶೇಷದೇವರು, ಕಶ್ಚನ-ಮಿಕ್ಕ ಯಾರೂ ಕೂಡ, ವಾಯುನಾ=ವಾಯು ಬ್ರಹ್ಮರಿಗೆ, ಸಮಃ-ಸಮರು, ನ=ಅಲ್ಲ, ಅಧಿಕಾರಿಗಳಲ್ಲಿ ವಾಯುಬ್ರಹ್ಮರಿಗೆ ಸಮರು ಯಾರೂ ಇಲ್ಲ. ಮುಕ್ತೇಷು=ಮುಕ್ತರಲ್ಲಿಯೂ, ನ=ಇಲ್ಲ, ತಥಾ=ಹಾಗೆ, ಶ್ರೀಃ=ಲಕ್ಷ್ಮಿಯು, ವಾಯೋಃ=ವಾ

ಯು ದೇವರಿಗಿಂತ, ಗುಣೈಃ= ಗುಣಗಳಿಂದ, ಸಹಸ್ರಗುಣಿತಾ= ಕೋಟಿಗುಣ ಅಧಿಕಳು, (ಮುಕ್ತ ಬ್ರಹ್ಮರಿಂದ ಎಂದು ತಿಳಿಯಬೇಕು.) ಇಲ್ಲಿರುವ ಸಹಸ್ರ ಶಬ್ದವು ಅನಂತವಾಚಕವಾದ್ದರಿಂದ ಕೋಟಿ ಗುಣವೆಂದು ಪ್ರಮಾಣಾಂತರದಿಂದ ಹೇಳಿರುತ್ತೆ. ಇನ್ನು ಕೆಲವು ವಿಶೇಷಗಳು ಹೇಳಿರುತ್ತೆ—ದೇವ ಗಂಧರ್ವರುಗಳಲ್ಲಿ ನೂರೆಂಟು ಜನರನ್ನು ಬಿಟ್ಟು ಬಾಕಿ ಉಳಿದವರು ಪಿತೃಗಳಿಗಿಂತ ಅವರರು ಎಂದು ತಿಳಿಯಬೇಕು. ನೂರೆಂಟರಲ್ಲಿಯೂ ಎಂಟು ಜನ ದೇವ ಗಂಧರ್ವರು ಕರ್ಮ ದೇವತೆಗಳಿಗೆ ಸಮರು. ಬಾಕಿ ನೂರು ಜನರು ಅಜಾನಜ ದೇವತೆಗಳಿಗೆ ಸಮರೆಂದು ಬೃಹದ್ಭಾಷ್ಯದಲ್ಲಿ ಹೇಳಿರುತ್ತಾರೆ. ಹೀಗೆ ಪಿತೃಗಳಲ್ಲಿ ಎಂಟು ಜನರನ್ನು ಬಿಟ್ಟು ಬಾಕಿಯವರು ಅಜಾನಜರಿಗಿಂತ ಕಡಿಮೆ ಎಂದು ತಿಳಿಯಬೇಕು. ಎಂಟು ಜನರಲ್ಲಿ ಏಳು ಪಿತೃಗಳು ಕರ್ಮದೇವತೆಗಳಿಗೆ ಸಮರು. ಬಾಕಿ ಒಬ್ಬರು (ವಿಶ್ವಾಮಿತ್ರರು) ಬ್ರಹ್ಮ ಪುತ್ರರಿಗೆ ಸಮರು. ವಾಯು ದೇವರನ್ನು ಹೇಳಿದ ಸ್ಥಳದಲ್ಲಿ ಬ್ರಹ್ಮ ದೇವರನ್ನು ತೆಗೆದುಕೊಳ್ಳಬೇಕು. ರುದ್ರದೇವರನ್ನು ಹೇಳಿದ ಕಡೆ ಗರುಡ ಶೇಷರನ್ನು ತೆಗೆದುಕೊಳ್ಳಬೇಕು, ಇವರ ಹೆಂಡತಿಯರು ತಂತಮ್ಮ ಗಂಡಂದರಿಗಿಂತ ಕಡಮೆ ಎಂಬ ಸಂಗತಿಯನ್ನು ಹಿಂದೆ ತಿಳಿಸಿರುತ್ತೆ. ರಾಜರುಗಳಿಗಿಂತ ಮನುಷ್ಯೋತ್ತಮರು ಕಡಿಮೆ. ಇದಕ್ಕೆ ಪ್ರಮಾಣಗಳನ್ನೂ ಮತ್ತು ಉಳಿದ ಸಂಗತಿಗಳನ್ನೂ ಹೇಳಲು ಗ್ರಂಥ ಬಾಹುಳ್ಯ ಭಯದಿಂದ ಉಪರಮ ಮಾಡಿ ಸಾಮಾನ್ಯವಾದ ಸಂಗತಿ ತಿಳಿಸಿರುತ್ತೆ. ಇದಕ್ಕೆ ಬೇರೆ ತಾರತಮ್ಯ ಸ್ತೋತ್ರವೇ ಇರುತ್ತೆ. ಅದರ ಕ್ರಮಾನುಸಾರ ತಿಳಿಯಬೇಕು. ಶತ ಶಬ್ದವು ಹಿಂದೆ ಹೇಳಿದಂತೆ ಅಧಿಕವಾಚಕವು.

ಶ್ಲೋಕ॥ ತತೋಽನಂತಗುಣೋ ವಿಷ್ಣುರ್ನ ಕಶ್ಚಿತ್ತತ್ಸಮಃ ಸದಾ ॥
ಇತ್ಯಾದಿ ವೇದವಾಕ್ಯಂ ವಿಷ್ಣೋರುತ್ಕರ್ಷವೋಽವವಕ್ತ್ಯೃಚ್ಛೈಃ ॥
॥ ೭೫ ॥

ಅರ್ಥ—ತತಃ= ಲಕ್ಷ್ಮಿಗಿಂತಲು, ಸದಾ= ಯಾವಾಗಲೂ, ವಿಷ್ಣುಃ= ನಾರಾಯಣನು, ಅನಂತಗುಣಃ= ಅಪರಿಮಿತವಾದ ಗುಣಗಳುಳ್ಳವನು, ಕಶ್ಚಿತ್= ಯಾವನೂ, ತತ್= ಆ ನಾರಾಯಣನಿಗೆ, ಸಮಃ= ಸಮನು, ನ= ಇಲ್ಲವಾದ್ದರಿಂದ ಉತ್ತಮರೂ ಇಲ್ಲವೇ ಇಲ್ಲವೆಂದು ತಿಳಿಯಬೇಕು.

ಇತ್ಯಾದಿ= ಇವೇ ಮುಂತಾದ,ವೇದವಾಕ್ಯಂ= ವೇದವಾಕ್ಯಗಳು, ವಿಷ್ಣೋಃ- ನಾರಾಯಣನ, ಉತ್ಕರ್ಷಮೇವ= ಸರ್ವೋತ್ತಮತ್ವವನ್ನೇ, ಉಚ್ಚೈಃ= ತಾತ್ಪರ್ಯ ಪೂರ್ವಕವಾಗಿ, ವಕ್ತಿ= ಹೇಳುತ್ತವೆ ಎಂದು ತಿಳಿಯಬೇಕು.

ತಾತ್ಪರ್ಯ—ಹರಿಯು ಲಕ್ಷ್ಮೀದೇವಿಯರಿಗಿಂತ ಅನಂತ ಗುಣವುಳ್ಳವನು ಆತನ ಗುಣಗಳಿಗೆ ಪರಿಮಿತಿ ಇಲ್ಲ, ಎಲ್ಲಾ ಕಾಲವಲ್ಲಿಯೂ ಇವೇ ರೀತಿಯಲ್ಲಿ ಇರುತ್ತಾನೆ. ನಾರಾಯಣನಿಗೆ ಸಮರೇ ಇಲ್ಲದಿರುವಾಗ ಅಧಿಕರು ಎಲ್ಲಿಂದ ಬಂದಾರು. ಹಿಂದೆ ಸೂಚಿಸಿರುವ ವೇದವಾಕ್ಯಗಳು ವಿಷ್ಣುವಿನ ಉತ್ಕರ್ಷ ವನ್ನೇ ತಾತ್ಪರ್ಯ ಪೂರ್ವಕವಾಗಿ ತಿಳಿಸಿರುತ್ತವೆ.

**ಶ್ಲೋಕ|| ತಾತ್ಪರ್ಯಂ ಮಹದತ್ರೇತ್ಯುಕ್ತಂ ಯೋಮಾಮಿತಿಸ್ವಯಂತೇನ ||**
**ಭೂಮ್ನೋಜ್ಯಾಯಸ್ತ್ವಮಿತ್ಯುಕ್ತಂ ಸೂತ್ರೇಷುನಿರ್ಣಯಾತ್ತೇನ ||**
**|| ೭೬ ||**

ಅರ್ಥ—ಸ್ವಯಂತೇನ= ವ್ಯಾಸರೂಪನಾದ ಶ್ರೀಕೃಷ್ಣನಿಂದ, ಅತ್ರ= ವಿಷ್ಣುವಿನ ಗುಣೋತ್ಕರ್ಷಣದಲ್ಲಿ, ಮಹತ್= ಹೆಚ್ಚಾದ, ತಾತ್ಪರ್ಯಂ= ಮಹಾ ತಾತ್ಪರ್ಯವು, ಯೋಮಾಮಿತಿ = " ಯೋಮಾಮೇವಮಸಂಮೂಢೋ ಜಾನಾತಿಪುರುಷೋತ್ತಮಂ" ಇತ್ಯಾದಿ ಗೀತಾ ಶ್ಲೋಕದಲ್ಲಿ ಉಕ್ತಂ= ಹೇಳಲ್ಪಟ್ಟಿರುತ್ತೆ. ತೇನ= ವೇದವ್ಯಾಸರಿಂದ, ನಿರ್ಣಯಾತ್= ನಿರ್ಣಯ ಮಾಡಿ, ಸೂತ್ರೇಷು= ಬಹುಸೂತ್ರಾತ್ಮಕವಾದ 'ಭೂಮ್ನೋಜ್ಯಾಯಸ್ತ್ವಂ' ಇತ್ಯಾದಿ ಸೂತ್ರದಲ್ಲಿ ಗುಣೋತ್ಕರ್ಷಣ ವಿಷಯದಲ್ಲಿಯೇ ಎಲ್ಲಾ ಶಾಸ್ತ್ರಗಳು ಆಗಿರುತ್ತೆ ಎಂದು, ಉಕ್ತಂ= ಹೇಳಲ್ಪಟ್ಟಿದೆ.

ತಾತ್ಪರ್ಯ—ವಿಷ್ಣುವಿನ ಗುಣೋತ್ಕರ್ಷವೇ ಮುಖ್ಯವೆಂದು ವೇದ ವ್ಯಾಸರು ತಾವೇ ಕೃಷ್ಣರೂಪದಿಂದ 'ಯೊಮಾಮೇವ' ಎಂಬುವ ಗೀತಾ ಶ್ಲೋಕದಲ್ಲಿ ಹೇಳಿರುತ್ತಾರೆ. ಮತ್ತು ಅದೇ ವೇದವ್ಯಾಸರೆ ಸೂತ್ರಾತ್ಮಕ ವಾದ ಶಾಸ್ತ್ರದಲ್ಲಿಯೂ ಕೂಡ ವಿಷ್ಣುವಿನ ಗುಣೋತ್ಕರ್ಷ ಜ್ಞಾನವೇ ಮುಖ್ಯವೆಂದು 'ಭೂಮ್ನೋ ಜ್ಯಾಯಸ್ತ್ವಂ' ಎಂಬುವ ಸೂತ್ರದಲ್ಲಿಯೂ ಸಹ ಹೇಳಿರುತ್ತಾರೆ. ಆದ್ದರಿಂದ ಪರಮಾತ್ಮನ ಗುಣೋತ್ಕರ್ಷ ಜ್ಞಾನವೇ ಮುಕ್ತಿಗೆ ಪರಮಸಾಧನವೆಂದು ತಿಳಿಯಬೇಕು.

**ಶ್ಲೋಕ॥ ತತ್ಪ್ರೀತ್ಯೈವಚಮೋಕ್ಷಃ ಪ್ರಾಪ್ಯಸ್ತೇನೈವನಾನ್ಯೇನ ॥೭೭॥**

ಅರ್ಥ—ತತ್= ಆ ಪರಮಾತ್ಮನ, ಪ್ರೀತ್ಯೈವಚ= ಪ್ರೀತಿಯಿಂದಲೇ ಮೋಕ್ಷಃ= ಮೋಕ್ಷವು, ತೇನೈವ ಆ ಪ್ರೀತಿಯಿಂದಲೇ, ಪ್ರಾಪ್ಯಃ= ಹೊಂದಲ್ಪಡತಕ್ಕದ್ದು, ಅನ್ಯೇನ= ಬೇರೆ ಸಾಧನದಿಂದ, ನಪ್ರಾಪ್ಯಃ= ಪರಮಾತ್ಮನು ಹೊಂದಲ್ಪಡುವುದಿಲ್ಲ, ಎಂದು ತಿಳಿಯಬೇಕು.

ತಾತ್ಪರ್ಯ—ಮೋಕ್ಷವು ಪರಮಾತ್ಮನ ಪ್ರೀತಿಯಿಂದಲೇ ಆಗಬೇಕು. ಯಾರು ತನ್ನ ಗುಣಗಳ ಉತ್ಕೃಷ್ಟತೆಯನ್ನು ತಿಳಿಯುತ್ತಾರೆಯೋ ಅವರನ್ನ ಪರಮಾತ್ಮನು ಪ್ರೀತಿಸುತ್ತಾನೆ. ಸರ್ವಾಗಮುಗಳೂ ಪರಮಾತ್ಮನ ಗುಣೋತ್ಕರ್ಷವನ್ನು ಹೇಳುತ್ತವೆ. ಆದ್ದರಿಂದ ಪರಮಾತ್ಮನನ್ನು ಅವನ ಗುಣೋತ್ಕರ್ಷದಿಂದಲೇ ತಿಳಿಯಬೇಕು. ಬೇರೆ ದಾರಿಯಿಂದ ಆತನು ಪ್ರಾಪ್ಯನಾಗುವುದಿಲ್ಲ.

**ಶ್ಲೋಕ॥ ನಾಯಮಾತ್ಮಾ ಪ್ರವಚನೇನಲಭ್ಯೋ ನಮೇಧಯಾನಬಹುನಾ ಶ್ರುತೇನ ॥ ಯಮೇವೈಷ ವೃಣುತೇ ತೇನಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂಸ್ವಾಂ ॥೭೮॥**

ಅರ್ಥ—ಅಯಂ= ಈ, ಆತ್ಮಾ= ಗುಣಪೂರ್ಣನಾದ ಹರಿಯು, ಪ್ರವಚನೇನ= ವ್ಯಾಖ್ಯಾನ ಮಾಡುವುದರಿಂದಲೂ, ನಲಭ್ಯಃ= ಪ್ರಾಪ್ಯನಲ್ಲ, ಮೇದಯಾ= ಸಮಿಾಚೀನವಾದ ಬುದ್ಧಿಯಿಂದಲೂ, ಬಹುನಾ= ಬಹಳವಾಗಿ ಶ್ರುತೇನ= ಶಾಸ್ತ್ರ ಶ್ರವಣ ಮಾಡುವುದರಿಂದಲೂ, ನಲಭ್ಯಃ= ಪ್ರಾಪ್ಯನಲ್ಲ, ಏಷಃ= ಈ ಹರಿಯು, ಯಂ= ಯಾವ ಪುರುಷನನ್ನು, ವೃಣುತೇ= ಗುಣೋತ್ಕರ್ಷ ಜ್ಞಾನಿ ಎಂಬುದಾಗಿ ಸ್ವೀಕರಿಸುತ್ತಾನೆಯೋ (ತಿಳಿಯುತ್ತಾನೆಯೋ) ತೇನೈವ= ಅಂಥವನಿಂದಲೇ, ಲಭ್ಯಃ= ಪ್ರಾಪ್ಯನಾಗುತ್ತಾನೆ, ಏಷಃ= ಈ, ಆತ್ಮಾ= ಹರಿಯು, ತಸ್ಯ= ಅಂಥಾ ಗುಣೋತ್ಕರ್ಷ ಜ್ಞಾನಿಗೆ, ಸ್ವಾಂ= ಸ್ವಕೀಯವಾದ, ತನೂಂ= ಬಿಂಬ ರೂಪವನ್ನು, ವಿವೃಣತೇ= ವಿಶೇಷಾಕಾರವಾಗಿ ತೋರಿಸುತ್ತಾನೆ.

ತಾತ್ಪರ್ಯ—ಹರಿಯು ಗುಣೋತ್ಕರ್ಷ ಜ್ಞಾನದಿಂದಲೇ ಬಿಂಬ ದರ್ಶನವೆಂದು ಹೇಳುತ್ತಾರೆ. ಶ್ರೀ ಹರಿಯು ವ್ಯಾಖ್ಯಾನ ಮಾಡುವುದರಿಂದಲೂ

ಮತ್ತು ಕುಶಲ ಬುದ್ಧಿಯಿಂದಲೂ, ಹೆಚ್ಚಾದ ಶಾಸ್ತ್ರ ಶ್ರವಣ ಮಾತ್ರದಿಂದಲೂ ಲಭಿಸತಕ್ಕವನಲ್ಲ. ಯಾರು ತನ್ನ ಗುಣೋತ್ಕರ್ಷ ಜ್ಞಾನಿಗಳೆಂದು ತಿಳಿಯುತ್ತಾರೊ ಅವರಿಗೆ ಲಭ್ಯನು. ಅವರಿಗೇನೆ ಸ್ವಬಿಂಬವನ್ನು ತೋರಿಸುತ್ತಾನೆ. ಆದ್ದರಿಂದ ದೇವರ ಗುಣೋತ್ಕರ್ಷ ಜ್ಞಾನವನ್ನು ಸಂಪಾದಿಸಬೇಕು. ಸಮಸ್ತ ವೇದಗಳೂ ಪರಮಾತ್ಮನ ಗುಣೋತ್ಕರ್ಷದಲ್ಲಿಯೇ ತಾತ್ಪರ್ಯವುಳ್ಳವುಗಳೆಂದು ವಿಮರ್ಶೆ ಮಾಡಿದರೆ ದೇವರು ಪ್ರೀತನಾಗಿ ಸ್ವಯೋಗ್ಯ ಬಿಂಬ ದರ್ಶನ ದ್ವಾರ ಮೋಕ್ಷವನ್ನು ಕೊಡುತ್ತಾನೆಂದು ತಿಳಿಯಬೇಕು.

**ಶ್ಲೋಕ|| ವಿಷ್ಣುರ್ಹಿದಾತಾಮೋಕ್ಷಸ್ಯ ವಾಯುಶ್ಚ ತದನುಜ್ಞಯಾ ||**
**ಮೋಕ್ಷೋಜ್ಞಾನಂಚಕ್ರಮಶಃ ಮುಕ್ತಿಗೋಭೋಗಏವಚ ||೭೯||**
**ಶ್ಲೋಕ|| ಉತ್ತರೇಷಾಂಪ್ರಸಾದೇನ ನೀಚಾನಾಂನಾನ್ಯಥಾ ಭವೇತ್ ||**
**ಸರ್ವೇಷಾಂಚ ಹರಿರ್ನಿತ್ಯಂ ನಿಯಂತಾತದ್ವಶಾಃಪರೇ ||೮೦||**

ಅರ್ಥ—ವಿಷ್ಣುರ್ಹಿ= ನಾರಾಯಣನೇ, ಮೋಕ್ಷಸ್ಯ= ಮೋಕ್ಷವನ್ನು ದಾತಾ= ಕೊಡುವವನು, ವಾಯುಶ್ಚ= ವಾಯುದೇವರೂ ಕೂಡ, ತದನುಜ್ಞಯಾ= ಆ ಹರಿಯ ಆಜ್ಞೆಯಿಂದ ಕೊಡುವುದಕ್ಕೆ ಸಮರ್ಥರು, 'ಚ' ಶಬ್ದದಿಂದ ಲಕ್ಷ್ಮಿಯೂ ಸಮರ್ಥಳೆಂದು ತಿಳಿಯಬೇಕು. ಮೋಕ್ಷಃ= ಮೋಕ್ಷವು, ಜ್ಞಾನಂಚ= ಜ್ಞಾನವು ಮತ್ತು ಮುಕ್ತಿಗಃ= ಮುಕ್ತಿಯಲ್ಲಿ ಪ್ರಾಪ್ತವಾಗುವ, ಭೋಗಏವಚ= ಭೋಗವೂ ಕೂಡ, ಕ್ರಮಶಃ= ಕ್ರಮವಾಗಿ, ಉತ್ತಮಾನಾಂ= ಶ್ರೇಷ್ಠರಾದ ಸಮಸ್ತರ, ಪ್ರಸಾದೇನ= ಅನುಗ್ರಹದಿಂದ, ನೀಚಾನಾಂ= ಅಧಮರುಗಳಿಗೆ, ಭವೇತ್= ಉಂಟಾಗುವುದು, ಅನ್ಯಥಾ= ಇದಕ್ಕೆ ಬೇರೆ ರೀತಿಯಾಗಿ, ನ= ಇಲ್ಲವು. ಹರಿಃ= ನಾರಾಯಣನೂ, ಸರ್ವೇಷಾಂಚ= ಉತ್ತಮಾಧಮ ಮಧ್ಯಮರಿಗೆಲ್ಲಾ, ನಿತ್ಯಂ= ಯಾವಾಗಲೂ, ನಿಯಂತಾ= ನಿಯಾಮಕನು, ಪರೇ= ರಮಾ ಬ್ರಹ್ಮಾದಿಗಳೆಲ್ಲರೂ, ತದ್ವಶಾಃ= ಪರಮಾತ್ಮನ ವಶರೇ ಎಂದು ತಿಳಿ.

ತಾತ್ಪರ್ಯ—ವಿಷ್ಣುವೇ ಮೋಕ್ಷವನ್ನು ಕೊಡುವವನು ಎಂಬುವ ಅರ್ಥದಲ್ಲಿ ಭವಿಷ್ಯತ್ ಪರ್ವದ ವಾಕ್ಯವನ್ನು ಉದಾಹರಿಸುತ್ತಾರೆ. ಹರಿಯೇ ಮೋಕ್ಷಪ್ರದನು, ಹರಿಯ ಆಜ್ಞಾನುಸಾರವಾಗಿ ವಾಯು ದೇವರು ಮೋಕ್ಷವನ್ನು ಕೊಡುತ್ತಾರೆ. ಮತ್ತು ಲಕ್ಷ್ಮೀದೇವಿಯರೂ ಸಹ ಪರಮಾ

ತ್ಮನ ಆಜ್ಞಾನುಸಾರವಾಗಿ ಮೋಕ್ಷವನ್ನು ಕೊಡತಕ್ಕವರು. ಅಧಿಕಾರಿಗಳಿಗೆ, ಮೋಕ್ಷವು, ಜ್ಞಾನವು, ಮೋಕ್ಷ ಸುಖವೂ ಕೂಡ ತಾರತಮ್ಯಾನುಸಾರವಾಗಿ ಉತ್ತಮರ ಪ್ರಸಾದದಿಂದ ಪ್ರಾಪ್ತವಾಗುತ್ತದೆ. ಆದ್ದರಿಂದ ಅಧಿಕಾರಿಯು ತನ್ನ ಗುರುಗಳು ಮೊದಲು ಬ್ರಹ್ಮದೇವರ ಪರಿಯಂತ ಎಲ್ಲರ ಪ್ರಸಾದವನ್ನೂ ಪಡಿಯಬೇಕು. ಎಲ್ಲಾ ದೇವತೆಗಳನ್ನೂ ಹರಿಯಪರಿವಾರವೆಂದು ತಿಳಿದು ಪೂಜಿಸಬೇಕು. ಎಲ್ಲರೂ ಶ್ರೀಹರಿಯ ವಶರೇ, ಆ ಹರಿಯನ್ನು ಬಿಟ್ಟು ಯಾರೂ ಸ್ವತಂತ್ರರಲ್ಲ.

**ಶ್ಲೋಕ || ತಾರತಮ್ಯಂ ತತೋಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ || ಏತದ್ವಿನಾನಕಸ್ಯಾಪಿ ವಿಮುಕ್ತಿಃ ಸ್ಯಾತ್ಕಥಂಚನ ||೮೧||**

ಅರ್ಥ.— ತತಃ=ತಾರತಮ್ಯ ಜ್ಞಾನಕ್ಕಾಗಿ, ತಾರತಮ್ಯಂ=ತಾರತಮ್ಯವನ್ನು, ಜ್ಞೇಯಂ=ತಿಳಿಯಬೇಕು. ತಥಾ-ಹಾಗೆಯೇ, ಹರೇಃ=ಹರಿಗೆ, ಸರ್ವೋಚ್ಚತ್ವಂ=ಸರ್ವೋತ್ತಮತ್ವವನ್ನು ಕೂಡ, ಜ್ಞೇಯಂ=ತಿಳಿಯಬೇಕು. ಏತತ್=ಈ ತಾರತಮ್ಯ ಜ್ಞಾನವಿಲ್ಲದೆ, ಕಸ್ಯಾಪಿ=ಯಾರಿಗೂ, ವಿಮುಕ್ತಿಃ=ಮೋಕ್ಷವು, ಕಥಂಚನ=ಯಾವಪ್ರಕಾರದಿಂದಲೂ, ನಸ್ಯಾತ್=ಆಗುವುದೇ ಇಲ್ಲ.

ತಾತ್ಪರ್ಯ.—ತನಗಿಂತಲೂ ಉತ್ತಮರ ಪ್ರಸಾದವಾಗಬೇಕಾದದ್ದು ಅವಶ್ಯಕವಾದ್ದರಿಂದ ತಾರತಮ್ಯ ಜ್ಞಾನವೂ ಮತ್ತೆ ಹರಿಯು ಸರ್ವೋತ್ತಮನೆಂಬುವ ಜ್ಞಾನವೂ ಅವಶ್ಯಕ ಇರಬೇಕು. ಈ ತಿಳುವಳಿಕೆ ಇಲ್ಲದೆ ಯಾರಿಗೂ ಯಾವಕಾಲದಲ್ಲಿಯೂ ಮುಕ್ತಿಯು ಖಂಡಿತವಾಗಿ ಆಗುವುದಿಲ್ಲ.

**ಶ್ಲೋಕ || ಪಂಚಭೇದಾಂಶ್ಚ ವಿಜ್ಞಾಯ ವಿಷ್ಣೋಃಸ್ವಾಭೇದಮೇವಚ || ನಿರ್ದೋಷತ್ವಂ ಗುಣೋದ್ರೇಕಂ ಜ್ಞಾತ್ವಾಭಕ್ತಿರ್ನಚಾನ್ಯಥಾ ||೮೨||**

ಅರ್ಥ.— ಪಂಚಭೇದಾಶ್ಚ=ಪಂಚರಾಶಿ ಭೇದಗಳನ್ನು, ವಿಜ್ಞಾಯ=ತಿಳಿದು, ವಿಷ್ಣೋಃ=ವಿಷ್ಣುವಿನ, ಸ್ವಾಭೇದಮೇವಚ=ಸ್ವರೂಪಾಭೇದವನ್ನು ಮತ್ತು, ನಿರ್ದೋಷತ್ವಂ-ದೋಷರಾಹಿತ್ಯವನ್ನು, ಗುಣೋದ್ರೇಕಂಚ-ಗುಣಪೂರ್ಣತ್ವವನ್ನು, ಜ್ಞಾತ್ವಾ=ತಿಳಿದರೇನೆ, ಭಕ್ತಿಃ=ಹರಿಭಕ್ತಿಯುಂಟಾಗುವುದು, ಅನ್ಯಥಾ=ಬೇರೆ ರೀತಿಯಲ್ಲಿ, ನ=ಇಲ್ಲ, ಭಕ್ತಿ ಇಲ್ಲದೆ ಮುಕ್ತಿ ಇಲ್ಲ

ತಾತ್ಪರ್ಯ.— ಮುಕ್ತಿಯಾಗಬೇಕಾದರೆ ಪಂಚಭೇದ ಜ್ಞಾನವೂ, ಹರಿಯ ಸ್ವರೂಪಾವತಾರಗಳ ಅಭೇದ ಜ್ಞಾನವೂ, ಹರಿಯ ಸರ್ವೋತ್ತಮತ್ವ ಜ್ಞಾನವೂ, ಗುಣಪೂರ್ಣತ್ವ ಜ್ಞಾನವೂ ಹುಟ್ಟಬೇಕು. ಇದು ಹುಟ್ಟದ ಹೊರತು ಹರಿಯಲ್ಲಿ ಭಕ್ತಿ ಹುಟ್ಟುವುದಿಲ್ಲ, ಭಕ್ತಿ ಇಲ್ಲದೆ ಮುಕ್ತಿ ಇಲ್ಲವೆಂದು ತಿಳಿಯಬೇಕು.

**ಶ್ಲೋಕ || ಅವತಾರಾನ್ ಹರೇರ್ಜ್ಞಾತ್ವಾನಾವತಾರಾ ಹರೇಶ್ಚ ಯೇ || ತದಾವೇಶಾಂಸ್ತಥಾಸಮ್ಯಗ್ ಜ್ಞಾತ್ವಾ ಮುಕ್ತಿರ್ನಚಾನ್ಯಥಾ ||೮೩||**

ಅರ್ಥ.— ಹರೇಃ=ನಾರಾಯಣನ, ಅವತಾರಾನ್=ಅವತಾರಗಳನ್ನು, ಹರೇಃ=ಹರಿಯ, ಯೇ=ಯಾವವು, ನಾವತಾರಾಃ=ಅವತಾರಗಳು ಅಲ್ಲವೋ (ಆವೇಶಗಳೋ) ಅವುಗಳನ್ನು, (ಚೆನ್ನಾಗಿ) ಜ್ಞಾತ್ವಾ=ತಿಳಿದು, "ಚ" ಎಂಬುವದರಿಂದ ದೇವತೆಗಳ ಅವತಾರಾನವತಾರಗಳನ್ನು ತಿಳಿದು, ತಥಾ=ಹಾಗೆ, ತದಾವೇಶಾನ್-ಹರಿಯ ಆವೇಶಗಳನ್ನು, ಸಮ್ಯಕ್=ಚೆನ್ನಾಗಿ ಜ್ಞಾತ್ವಾ=ತಿಳಿದರೆ, ಮುಕ್ತಿ=ಮುಕ್ತಿಯು ಆಗುತ್ತೆ, ಅನ್ಯಥಾ ಇವುಗಳ ಜ್ಞಾನವಿಲ್ಲದೆ, ನಚ=ಮುಕ್ತಿ ಇಲ್ಲವು.

ತಾತ್ಪರ್ಯ.— ಹರಿಯ ಅವತಾರಗಳನ್ನು, ಅನವತಾರಗಳನ್ನು ಮತ್ತೆ ಆವೇಶಗಳನ್ನು, ಚೆನ್ನಾಗಿ ತಿಳಿಯುವುದಲ್ಲದೆ, ದೇವತೆಗಳ ಅವತಾರಾನವತಾರ ಮತ್ತು ಆವೇಶಗಳನ್ನೂ ತಿಳಿದರೆ ಮುಕ್ತಿಯೇ ಹೊರತು ಬೇರೆ ದಾರಿ ಇಲ್ಲವು.

**ಶ್ಲೋಕ || ಸೃಷ್ಟಿರಕ್ಷಾಹೃತಿಜ್ಞಾನ ನಿಯತ್ಯಜ್ಞಾನಬಂಧನಾತ್ || ಮೋಕ್ಷಂಚ ವಿಷ್ಣುತಸ್ತ್ವೇವ ಜ್ಞಾತ್ವಾಮುಕ್ತಿರ್ನಚಾನ್ಯಥಾ ||೮೪||**

ಅರ್ಥ.— ಸೃಷ್ಟಿರಕ್ಷಾಹೃತಿಜ್ಞಾನ ನಿಯತ್ಯಜ್ಞಾನಬಂಧನಾತ್= ಸೃಷ್ಟಿ=ಸೃಷ್ಟಿಯು, ರಕ್ಷಾ=ಪಾಲನೆ, ಹೃತಿ=ನಾಶ, ಜ್ಞಾನ=ಮಾಹಾತ್ಮ್ಯ ಜ್ಞಾನ. ನಿಯತಿ=ನಿಯಮನ, ಬಂಧನಾತ್ - ಬಂಧನವೇ ಮುಂತಾದ, ಮತ್ತು ಮುಕ್ತಿಶ್ಚ=ಮುಕ್ತಿಯೂ ಕೂಡ, ವಿಷ್ಣುತಸ್ತ್ವೇವ-ವಿಷ್ಣುವಿನಿಂದಲೇ ಆಗುತ್ತದೆಂದು, ಜ್ಞಾತ್ವಾ-ತಿಳಿದರೆ, ಮುಕ್ತಿಃ=ಮುಕ್ತಿ ಪ್ರಾಪ್ತಿಯು, ಅನ್ಯಥಾ=ಬೇರೆ, ನಚ-ಇಲ್ಲವು.

ತಾತ್ಪರ್ಯ.—ಹರಿಯಿಂದಲೇ ಸೃಷ್ಟಿಯು, ಸಂರಕ್ಷಣೆಯು, ಸಂಹಾರವು, ಜ್ಞಾನ ಪ್ರಾಪ್ತಿಯು, ನಿಯಮನವು, ಅಜ್ಞಾನವು, ಬಂಧನವು, ಮೋಕ್ಷವೂ ಕೂಡ ಆಗುತ್ತೆ ಎಂದು ಖಂಡಿತವಾಗಿ ತಿಳಿವ ಹೊರ್ತು ಮೋಕ್ಷವಿಲ್ಲವು. ಹರಿಯೇ ಸೃಷ್ಟ್ಯಾದಿ ಅಷ್ಟಕರ್ತೃವು. ಇತರರು ಹರಿಯ ಅಧೀನರೆಂದು ತಿಳಿದ ಹೊರ್ತು ಮುಕ್ತಿಯಾಗಲಾರದು.

**ಶ್ಲೋಕ ।। ವೇದಾಂಶ್ಚ ಪಂಚರಾತ್ರಾಣಿ ಸೇತಿಹಾಸ ಪುರಾಣಕಾನ್ ।। ಜ್ಞಾತ್ವಾವಿಷ್ಣುಪರಾನೇವ ಮುಚ್ಯತೇನಾನ್ಯಥಾಕ್ವಚಿತ್ ೮೫।।**

ಅರ್ಥ.—ವೇದಾನ್=ನಾಲ್ಕು ವೇದಗಳನ್ನೂ, ಪಂಚರಾತ್ರಾಣಿ=ಪಂಚರಾತ್ರಾಗಮಗಳನ್ನೂ, ಸೇತಿಹಾಸಪುರಾಣಕಾನ್=ಸೇತಿಹಾಸ - ಭಾರತ ರಾಮಾಯಣಗಳಿಂದ ಕೂಡಿದ, ಪುರಾಣಕಾನ್-ಪುರಾಣಗಳನ್ನೂ, ವಿಷ್ಣುಪರಾನೇವ-ಮುಖ್ಯತಃ ಹರಿ ಸರ್ವೋತ್ತಮತ್ವವನ್ನೇ ಹೇಳುತ್ತವೆಂದು, ಜ್ಞಾತ್ವಾ=ತಿಳಿದರೇನೆ, ಮುಚ್ಯತೇ=ಸಂಸಾರದಿಂದ ಬಿಡುಗಡೆ ಹೊಂದುವನು, ಅನ್ಯಥಾ=ಬೇರೆಯಾಗಿ, ಕ್ವಚಿತ್-ಯಾವಾಗಲೂ, ನ=ಇಲ್ಲವು.

ತಾತ್ಪರ್ಯ.—ಸಜ್ಜನರಿಗೆ ಸಕಲ ವೇದಗೂ ಪಂಚರಾತ್ರಾಗಮಗಳೂ ಮಹಾಭಾರತ ಮೂಲರಾಮಾಯಣ ಇತರ ಪುರಾಣಗಳೂ ಕೂಡ ಹರಿಯ ಗುಣಗಳನ್ನೇ ಮುಖ್ಯವೃತ್ತಿಯಿಂದ ಪ್ರತಿಪಾದಿಸುವುವು ಎಂದು ತಿಳಿದ ಹೊರ್ತು ಸಂಸಾರದಿಂದ ಮುಕ್ತಿ ಇಲ್ಲವು.

**ಶ್ಲೋಕ ।। ಮಾಹಾತ್ಮ್ಯಜ್ಞಾನ ಪೂರ್ವಸ್ತು ಸುದೃಢಃ ಸರ್ವತೋಧಿಕಃ ।। ಸ್ನೇಹೋಭಕ್ತಿರಿತಿಪ್ರೋಕ್ತಃ ತಯಾಮುಕ್ತಿರ್ನಚಾನ್ಯಥಾ ।।೮೬।।**

ಅರ್ಥ.—ಮಹಾತ್ಮ್ಯಜ್ಞಾನ ಪೂರ್ವಃ=ಮಾಹಾತ್ಮ್ಯ = ಜಗಸ್ಸೃಷ್ಟಿ ಮೊದಲಾದುವನ್ನು ಮಾಡುವುದು ಮತ್ತು ಸುಷುಪ್ತ್ಯಾದಿಗಳನ್ನ ಕೊಡುವದು ಇಂಥಾ ಜ್ಞಾನಪೂರ್ವಃ=ಈ ಜ್ಞಾನವೇ ಮೊದಲಾದ, ಸುದೃಢಃ-ಮರಣ ಪ್ರಾಪ್ತಿಯಾದರೂ ಬಿಡದೆ ಇರುವ, ಸರ್ವತೋಧಿಕಃ=ಪುತ್ರ ಮಿತ್ರ ಕಳತ್ರಾದಿಗಳಲ್ಲಿ ಇರುವುದಕ್ಕಿಂತ ಹೆಚ್ಚಾದ, ಸ್ನೇಹಂ=ಪ್ರೀತಿಯೇ, ಭಕ್ತಿರಿತಿ=ಭಕ್ತಿ ಎಂಬುದಾಗಿ, ಪ್ರೋಕ್ತಃ=ಹೇಳಿದೆ, ತಯಾ-ಆ ಭಕ್ತಿಯಿಂದಲೇ, ಮುಕ್ತಿಃ-ಮೋಕ್ಷ ಪ್ರಾಪ್ತಿಯು, ಅನ್ಯಥಾ = ಬೇರೆ ರೀತಿಯಲ್ಲಿ, ನ=ಇಲ್ಲವು.

ತಾತ್ಪರ್ಯ.—ಭಕ್ತಿಯ ಸ್ವರೂಪವನ್ನು ಹೇಳುತ್ತಾರೆ.—ಹರಿಯು ಸ್ವಪ್ನಾದಿ ಅವಸ್ಥಾಕರ್ತೃ, ಸುಷುಪ್ತ್ಯಾದಿ ಅವಸ್ಥಾಪ್ರವರ್ತಕನು ಎಂಬ ಜ್ಞಾನಪೂರ್ವಕವಾಗಿ ತನಗೆ ಮರಣ ಕಾಲ ಪ್ರಾಪ್ತವಾದರೂ ಇಂಥಾ ಜ್ಞಾನವನ್ನು ಬಿಡದೆ ಅತ್ಯಂತ ಸ್ಥಿರವಾಗಿ ತಾನು ತನ್ನ ಮಕ್ಕಳೇ ಮುಂತಾದವರಿಗಿಂತಲೂ ಹೆಚ್ಚಾಗಿ ಹರಿಯಲ್ಲಿ ಪ್ರೀತಿಯನ್ನು ಮಾಡುವುದೇ ಭಕ್ತಿ ಎನ್ನಿಸಿಕೊಳ್ಳುತ್ತದೆ ಇಂತಹ ಭಕ್ತಿ ಇಲ್ಲದೆ ಮುಕ್ತಿಯು ಇಲ್ಲವೆಂದು ತಿಳಿಯಬೇಕು.

ಶ್ಲೋಕ || ತ್ರಿವಿಧಾಜೀವಸಂಘಾಸ್ತು ದೇವಮಾನುಷ ದಾನವಾಃ || ತತ್ರ ದೇವಾಮುಕ್ತಿಯೋಗ್ಯಾ ಮಾನುಷೇಷೂತ್ತಮಾಸ್ತಥಾ ||೮೭||

ಮಧ್ಯಮಾಮಾನುಷಾಯೇತು ಸೃತಿಯೋಗ್ಯಾಃ ಸದೈವಹಿ || ಅಧಮಾನಿರಯಾಯ್ಯೈವ ದಾನವಾಸ್ತು ತಮೋಲಯಾಃ ||೮೮||

ಅರ್ಥ.—ದೇವಮಾನುಷದಾನವಾಃ=ದೇವತೆಗಳೂ, ಮನುಷ್ಯರೂ, ದಾನವರು, ಎಂಬ ಜೀವಸಂಘಾಃ=ಜೀವರ ಸಮೂಹವು, ತ್ರಿವಿಧಾಃ=ಮೂರು ವಿಧವಾಗಿರುತ್ತದೆ ( ಇದರಲ್ಲಿ ಇರುವ " ತು " ಶಬ್ದದಿಂದ ಮನುಷ್ಯರಲ್ಲಿಯೂ ಮೂರು ವಿಧವೆಂದು ತಿಳಿಯಬೇಕು ) ತತ್ರ=ಅವರುಗಳಲ್ಲಿ, ದೇವಾಃ=ದೇವತೆಗಳು, ಮುಕ್ತಿಯೋಗ್ಯಾಃ=ಮುಕ್ತಿಗೆ ಯೋಗ್ಯರು, ತಥಾ–ಹಾಗೆ, ಮಾನುಷೇಷು=ಮನುಷ್ಯರಲ್ಲಿ, ಉತ್ತಮಾಃ=ಉತ್ತಮರೂ ಕೂಡ, ಮುಕ್ತಿಯೋಗ್ಯಾಃ=ಮುಕ್ತಿಯೋಗ್ಯರು, ಯೇತು–ಯಾವ, ಮಧ್ಯಮಾಃ=ಮಧ್ಯಮರಾದ, ಮಾನುಷಾಃ=ಮನುಷ್ಯರು, ಸದೈವ=ಯಾವಕಾಲದಲ್ಲಿಯೂ, ಸೃತಿಯೋಗ್ಯಾಹಿ–ಸಂಸಾರಕ್ಕೆ ಯೋಗ್ಯರೆ ಆಗಿರುತ್ತಾರೆ. ಅಧಮಾಃ=ಅಧಮ ಮನುಷ್ಯರು, ನಿರಯಾಯ್ಯೈವ=ತಾಮಿಸ್ರವಾದ ನರಕವನ್ನೇ ಹೊಂದುತ್ತಾರೆ. ದಾನವಸ್ತು=ಅಸುರರಾದರೋ, ತಮೋಲಯಾಃ – ತಮಸ್ಸಿನಲ್ಲಿ ಲೀನರಾಗುತ್ತಾರೆ. ( ತಮಃ=ಅಂಧತಾಮಿಸ್ರವೇ, ಲಯಾಃ=ಆಲಯ ಉಳ್ಳವರಾಗಿರುತ್ತಾರೆ. )

ತಾತ್ಪರ್ಯ.—ಹಿಂದೆ ಹೇಳಿದ ಜ್ಞಾನ ಮಾತ್ರದಿಂದ ಎಲ್ಲರಿಗೂ ಮುಕ್ತಿಯಾಗುತ್ತೆ ಎಂದು ತಿಳಿಯಬಾರದು. ಇದರಲ್ಲಿ ಯೋಗ್ಯರಾದವರಿಗೇನೇ

ಸಾಧನ ಸಂಪತ್ತಿಯಿಂದ ಮುಕ್ತಿಯಾಗುತ್ತದೆ ಎಂಬುವದನ್ನು ತಿಳಿಸುವದಕ್ಕಾಗಿ ಯೋಗ್ಯರನ್ನೂ ಅಯೋಗ್ಯರನ್ನೂ ಸಹ ಹೇಳುತ್ತಾರೆ. ಜೀವರುಗಳಲ್ಲಿ ದೇವತೆಗಳು, ಮನುಷ್ಯರು, ದಾನವರು ಎಂದು ಮೂರು ವಿಧರುಂಟು. ಮತ್ತು ಮನುಷ್ಯರಲ್ಲಿಯೂ :—ಮುಕ್ತಿ ಯೋಗ್ಯರು, ನಿತ್ಯಸಂಸಾರಿಗಳು, ತಮೋಯೋಗ್ಯರೆಂದು ಮೂರು ಪ್ರಭೇದಗಳು ಇರುತ್ತವೆ; ದೇವತೆಗಳು ಮತ್ತು ಮನುಷ್ಯೋತ್ತಮರು, ಮುಕ್ತಿಯೋಗ್ಯರು. ಮಧ್ಯಮ ಮನುಷ್ಯರು ಎಲ್ಲಾ ಕಾಲದಲ್ಲಿಯೂ ಸಂಸಾರಿಗಳು (ನಿತ್ಯ ಸಂಸಾರಿಗಳು), ಮನುಷ್ಯಾಧಮರು ತಾಮಿಸ್ರಾಖ್ಯ ನರಕವನ್ನು ಹೊಂದುತ್ತಾರೆ. ಅಸುರರು–ಅಂಧಂತಮಸ್ಸನ್ನು ಹೊಂದುವರು. ಮುಕ್ತಿಯೋಗ್ಯರಾದ ದೇವತೆಗಳಲ್ಲಿಯೂ ಮನುಷ್ಯೋತ್ತಮರಲ್ಲಿಯೂ ತಾರತಮ್ಯಗಳು ಇರುತ್ತವೆ. ಅದರಂತೆ ಮುಕ್ತಿಯಾಗುತ್ತದೆ. ದಾನವರಲ್ಲಿ ಕಲಿ ಪರಿಯಂತ ತಾರತಮ್ಯಗಳು ಇರುತ್ತವೆ. ಅದರಂತೆ ಅವರು ತಮಸ್ಸನ್ನು ಹೊಂದುವರು. ದುಃಖಾನುಭವದಲ್ಲಿಯೂ ವಿಶೇಷವಿರುತ್ತೆ, ವಾಯು ದೇವರಿಗೆ ಸುಖ ಹೇಗೆ ಪೂರ್ತಿಯೋ ಹಾಗೆ ಕಲಿಗೆ ದುಃಖ ಪೂರ್ಣವೆಂದು ತಿಳಿಯಬೇಕು. ಇಬ್ಬರೂ ಅವರವರ ಸಾಧನಾ ಪೂರ್ತಿ ಆದಮೇಲೆ ಮುಕ್ತಿಯನ್ನೂ, ತಮಸ್ಸನ್ನೂ ಹೊಂದುವರು.

**ಶ್ಲೋಕ|| ಮುಕ್ತಿರ್ನಿತ್ಯಾತಮಶ್ಚೈವ ನಾವೃತ್ತಿಃ ಪುನರೇತಯೋಃ || ದೇವಾನಾಂನಿರಯೋನಾಸ್ತಿ ತಮಶ್ಚಾಪಿಕಥಂಚನ ||೮||**

ಅರ್ಥ.—ಮುಕ್ತಿಃ=ಮುಕ್ತಿಯು, ನಿತ್ಯಾ=ನಿತ್ಯವಾದದ್ದು, ತಮಶ್ಚೈವ=ತಮಸ್ಸು ಕೂಡ ನಿತ್ಯವಾದದ್ದು. ಏತಯೋಃ=ಮುಕ್ತಿ ತಮಸ್ಸುಗಳಿಂದ, ಪುನಃ=ತಿರಿಗಿ, ಆವೃತ್ತಿ=ಹಿಂತಿರುಗಿ ಬರುವಿಕೆಯು, ನ=ಇಲ್ಲವು. " ನಚ ಪುನರಾವರ್ತತೆ " ಎಂಬ ಶ್ರುತಿ ಇರೋಣವರಿಂದ ದೇವಾನಾಂ=ದೇವತೆಗಳಿಗೆ, ಕಥಂಚನ=ಮಹಾ ಪಾತಕದಿಂದಲೂ, ನಿರಯಃ=ನರಕವು, ನಾಸ್ತಿ=ಇಲ್ಲ. ತಮಶ್ಚಾಪಿ=ತಮಸ್ಸೂ ಕೂಡ ಇಲ್ಲವೇ ಇಲ್ಲ.

ತಾತ್ಪರ್ಯ.—ಮುಕ್ತಿಯೂ ತಮಸ್ಸೂ ನಿತ್ಯವಾದುವುಗಳು. ಇವುಗಳಿಂದ ಪುನರಾವರ್ತಿ ಇಲ್ಲ, ದೇವತೆಗಳಿಗೆ ನರಕವೇ ಇಲ್ಲದಿರುವಾಗ ತಮಸ್ಸು

ಎಲ್ಲಿಂದ ಬಂದೀತು. ದೇವತೆಗಳಿಗೆ ತಮಸ್ಸಿನ ಪ್ರಸಕ್ತಿಯೇ ಇಲ್ಲವೆಂದು ತಿಳಿಯಬೇಕು.

**ಶ್ಲೋಕ॥ ನಾಸುರಾಣಾಂತಥಾಮುಕ್ತಿಃ ಕದಾಚಿತ್ಕೇನಚಿತ್ಕ್ವಚಿತ್ ॥ ಮಾನುಷಾಣಾಂ ಮಧ್ಯಮಾನಾಂನೈವೇತದ್ವಯಮಾಪ್ಯತೇ ॥೯೦॥**

ಅರ್ಥ.—ಅಸುರಾಣಾಂ=ದೈತ್ಯರುಗಳಿಗೆ, ಕದಾಚಿತ್=ಯಾವ ಕಾಲದಲ್ಲಿಯೂ, ಕೇನಚಿತ್=ಯಾವ ಉಪಾಯಗಳಿಂದಲೂ, ಕ್ವಚಿತ್=ಯಾವ ದೇಶದಲ್ಲಿಯೂ, ಮುಕ್ತಿ=ಮುಕ್ತಿಯು, ನಭವತಿ = ಆಗುವುದಿಲ್ಲ. ಮಧ್ಯಮಾನಾಂ=ಮಧ್ಯಮರಾದ, ಮಾನುಷಾಣಾಂ=ಮನುಷ್ಯರುಗಳಿಂದ, ಏತದ್ವಯಂ=ಈ ಮುಕ್ತಿ ತಮಸ್ಸುಗಳು, ನಾಪ್ಯತೆ = ಹೊಂದಲ್ಪಡುವದಿಲ್ಲ. ಅಂದರೆ " ಸ್ವರ್ಗಭೂನಿರಯಗೋಚರರು " ಎಂದು ತಿಳಿಯಬೇಕು.

ತಾತ್ಪರ್ಯ.—ದೈತ್ಯರುಗಳಿಗೆ ಪುಣ್ಯ ಕರ್ಮಗಳಿಂದ ಸ್ವರ್ಗ ಪ್ರಾಪ್ತಿಯಾಗುತ್ತದೆಯೇ ಹೊರ್ತು ಮುಕ್ತಿಯು ಎಂದಿಗೂ ಆಗುವುದಿಲ್ಲ. ಯಾವ ಕಾಲದಲ್ಲಿಯೂ ಯಾವ ಉಪಾಯದಿಂದಲೂ, ಯಾವ ದೇಶದಲ್ಲಿಯೂ ಖಂಡಿತವಾಗಿ ಅವರಿಗೆ ಮುಕ್ತಿಯಾಗುವುದಿಲ್ಲ. ಮಧ್ಯಮ ಮನುಷ್ಯರಿಗೆ ಮುಕ್ತಿಯೂ ಇಲ್ಲ ತಮಸ್ಸೂ ಇಲ್ಲ. ಇವರು ಸ್ವರ್ಗ ನರಕ ಭೂಮಿಗಳಲ್ಲಿ ಸಂಚರಿಸುತ್ತಿರುತ್ತಾರೆ.

**ಶ್ಲೋಕ॥ ಅಸುರಾಣಾಂತಮಃಪ್ರಾಪ್ತಿ ಸ್ತದಾನಿಯಮತೋಭವೇತ್ ॥ ಯದಾತುಜ್ಞಾನಿಸದ್ಭಾವೇ ನೈವಗೃಹ್ಣಂತಿ ತತ್ಪರಂ ॥೯೧॥**

ಅರ್ಥ.—ಅಸುರಾಣಾಂ=ದೈತ್ಯರುಗಳಿಗೆ, ಯದಾತು = ಯಾವಾಗ ತಮಃಪ್ರಾಪ್ತಿಯಾಗುತ್ತದೆ ಅಂದರೆ, ಜ್ಞಾನಿಸದ್ಭಾವೇ=ಜ್ಞಾನಿ=ದ್ವಾತ್ರಿಂಶಲ್ಲಕ್ಷಣವೇ ಮೊದಲಾದ ಲಕ್ಷಣಗಳುಳ್ಳ ಉಪದೇಶಕರಾದ ಆನಂದತೀರ್ಥರು ಇರುವಾಗ, ಪರಂ=ಸರ್ವೋತ್ತಮನಾದ, ತತ್ = ಆ ನಾರಾಯಣನನ್ನು, ನಗೃಹ್ಣಂತಿ=ತಿಳಿಯುವುದಿಲ್ಲವೋ, ತದಾ=ಆಗ, ತಮಃ=ತಮಸ್ಸನ್ನು, ಪ್ರಾಪ್ತಿಃ=ಹೊಂದುವಿಕೆಯು, ನಿಯಮತಃ=ನಿಯಮವಾಗಿ, ಭವೇತ್=ಆಗುತ್ತೆ.

ತಾತ್ಪರ್ಯ.—ತತ್ವಾಭಿಮಾನಿಗಳೇ ಮೊದಲಾದ ದೈತ್ಯರುಗಳ ತಮಃಪ್ರಾಪ್ತಿ ನಿಯಮ ಕಾಲವನ್ನು ಹೇಳುತ್ತಾರೆ. ಇವರು ಮೂವತ್ತೆರಡು ಲಕ್ಷ

ಣಗಳಿಂದ ಲಕ್ಷಿತರಾದ ಆನಂದತೀರ್ಥರು ಇರುವಾಗ ಅವರಿಂದ ಪರಮಾತ್ಮನ ಜ್ಞಾನವನ್ನು ತಿಳಿಯದೆ ಬಿಡುತ್ತಾರೆಯೊ ಆಗ ಅವರಿಗೆ ತಮಃಪ್ರಾಪ್ತಿ ನಿಯಮವೆಂದು ತಿಳಿಯಬೇಕು. ಅಂದರೆ ಆಗ ಇವರಿಗೆ ಸಂಚಿತ ಆಗಾಮಿಗಳು ಇಲ್ಲ, ಕೇವಲ ಪ್ರಾರಬ್ಧವಿರುತ್ತೆಂದು ತಿಳಿಯಬೇಕು.

**ಶ್ಲೋಕ॥ ತದಾಮುಕ್ತಿರ್ಹಿದೇವಾನಾಂ ಯದಾಪ್ರತ್ಯಕ್ಷಗೋಹರಿಃ ॥ ಸ್ವಯೋಗ್ಯಯೋಪಾಸನಯಾ ತನ್ವಾ ತದ್ಯೋಗ್ಯಯಾತಥಾ॥೯॥**

ಅರ್ಥ.—ದೇವನಾಂ = ದೇವತೆಗಳಿಗಾದರೋ, ಸ್ವಯೋಗ್ಯಯೋಪಾಸನಯಾ=ಸ್ವಯೋಗ್ಯ=ತಮಗೆ ಯೋಗ್ಯವಾದ, ಉಪಾಸನಯಾ=ಉಪಾಸನೆ ಉಳ್ಳ, ತಥಾ=ಹಾಗೆ, ತದ್ಯೋಗ್ಯಯಾ=ತಮ್ಮ ಯೋಗ್ಯತಾನುಸಾರವಾಗಿ ಬಿಂಬ ದರ್ಶನ ಉಳ್ಳ, ತನ್ವಾ=ದೇಹದಿಂದ, ಯದಾ=ಯಾವಾಗ, ಹರಿಃ=ನಾರಾಯಣನು, ಪ್ರತ್ಯಕ್ಷಗಃ=ಪ್ರತ್ಯಕ್ಷನಾಗುತ್ತಾನೆಯೋ, ತದಾ=ಆಗ, ಮುಕ್ತಿಃ=ಮುಕ್ತಿಯು, ನಿಯಮತಃ=ನಿಯಮವಾಗಿ, ಭವೇತ್=ಆಗುವದು.

ತಾತ್ಪರ್ಯ.—ದೇವತೆಗಳಿಗೆ ಮುಕ್ತಿ ನಿಯಮವು ಯಾವಾಗ ಎಂದರೆ ಅದನ್ನು ಹೇಳುತ್ತಾರೆ:—ದೇವತೆಗಳಿಗೆ ತಮ್ಮ ಯೋಗ್ಯತೆಗೆ ಅನುಗುಣವಾದ ಉಪಾಸನೆಯಿಂದ ಬಿಂಬಾಪರೋಕ್ಷ ಯಾವಾಗ ಆಗುತ್ತದೊ ಆಗ, ಅಂದರೆ ತಮ್ಮ ಯೋಗ್ಯತಾನುಸಾರವಾಗಿ ಹೃದಯದಲ್ಲಿ ಹರಿ ದರ್ಶನವಾಗುತ್ತದೋ ಆಗ ಮುಕ್ತಿ ನಿಯಮವೆಂದು ತಿಳಿಯಬೇಕು. ಅನಂತರವೂ ಪ್ರಾರಬ್ಧ ಕರ್ಮಾನುಭವವುಂಟು. ಸಂಚಿತಾಗಾಮಿಗಳು ಮಾತ್ರ ನಶಿಸಿ ಹೋಗುವುವೆಂದು ತಿಳಿಯಬೇಕು.

**ಶ್ಲೋಕ॥ ಸರ್ವೈರ್ಗುಣೈರ್ಬ್ರಹ್ಮಣಾತು ಸಮುಪಾಸ್ಯೋಹರಿಃ ಸದಾ॥ ಆನಂದೋಜ್ಞಃಸದಾತ್ಮೇತಿ ಹ್ಯುಪಾಸ್ಯೋಮನುಷ್ಯೈಃರ್ಹರಿಃ॥೧೦॥**

ಅರ್ಥ.—ಉಪಾಸನಾ ತಾರತಮ್ಯವನ್ನು ಹೇಳುತ್ತಾರೆ :—ಬ್ರಹ್ಮಣಾತು=ಬ್ರಹ್ಮ ದೇವರಿಂದಲೇ, ಸರ್ವೈಃ = ವೇದೋಕ್ತವಾದ ಸಮಸ್ತ, ಗುಣೈಃ=ಗುಣಗಳಿಂದ, ಹರಿಃ=ನಾರಾಯಣನು, ಸದಾ=ಎಲ್ಲಾ ಕಾಲಗಳ

ಲ್ಲಿಯೂ, ಸಮುಪಾಸ್ಯಃ=ಚನ್ನಾಗಿ ಉಪಾಸನೆ ಮಾಡಲ್ಪಡುವಸು, ಮಾನುಷ್ಯೈಃ = ಮನುಷ್ಯೋತ್ತಮರಿಂದಲಾದರೊ, ಆನಂದಃ = ಆನಂದಪೂರ್ಣ, ಜ್ಞಃ=ಜ್ಞಾನಪೂರ್ಣ, ಸತ್=ಶಶ್ವದೇಕಪ್ರಕಾರ, ಆತ್ಮ=ಸ್ವಾಮಿ, ಇತಿ=ಹೀಗೆಂದು, ಉಪಾಸ್ಯಃ=ಉಪಾಸ್ಯನು.

ತಾತ್ಪರ್ಯ.—ಮುಕ್ತಿಯೋಗ್ಯ ಜೀವರುಗಳಲ್ಲಿ ಅತ್ಯುತ್ತಮ ಮತ್ತು ಅಧಮರ ಉಪಾಸನೆಯನ್ನು ಹೇಳುತ್ತಾರೆ :—ಚತುರ್ಮುಖ ಬ್ರಹ್ಮ ದೇವರು ವೇದೋಕ್ತವಾದ ಹರಿಯ ಸಮಸ್ತ ಗುಣಗಳನ್ನು ಯಾವಾಗಲೂ ಉಪಾಸನೆ ಮಾಡುತ್ತಿರುತ್ತಾರೆ. ಮಾನುಷೋತ್ತಮರು ಆನಂದ ಪೂರ್ಣ, ಜ್ಞಾನಪೂರ್ಣ, ಶಶ್ವದೇಕಪ್ರಕಾರ ನಮ್ಮ ಸ್ವಾಮಿ, ಸರ್ವಸ್ವಾಮಿ ಎಂದು ೪ ಗುಣಗಳನ್ನು ಉಪಾಸನೆ ಮಾಡುತ್ತಾರೆ. ಮುಕ್ತಿಯೋಗ್ಯರಾದ ಮನುಷ್ಯರೂ ಕೂಡ ಒಂದು ಗುಣ ಮೊದಲು ನಾಲ್ಕು ಗುಣ ಉಪಾಸನೆ ಮಾಡುತ್ತಾರೆ. ಹೀಗೆ ತಾರತಮ್ಯವಾಗಿ ಉಪಾಸನೆ ಮಾಡಿ ತದೋಗ್ಯವಾದ ಅಪರೋಕ್ಷ ಜ್ಞಾನವನ್ನು ಪಡೆಯುತ್ತಾರೆ.

**ಶ್ಲೋಕ॥ ಯಥಾಕ್ರಮಂ ಗುಣೋದ್ರೇಕಾತ್ತದನ್ಯೈರಾವಿರಿಂಚತಃ॥ ಬ್ರಹ್ಮತ್ವಯೋಗ್ಯಾ ಋಜವೋ ನಾಮದೇವಾಃಪೃಥಗ್ಗಣಾಃ ॥೯೪॥**

**ಶ್ಲೋಕ॥ ತೈರೇವಾಪ್ಯಂತತ್ಪದಂತು ನೈವಾನ್ಯೈಸ್ಸಾಧನೈರಪಿ ॥ ಏವಂಸರ್ವಪದಾನಾಂತುಯೋಗ್ಯಾಸ್ಸಂತಿಪೃಥಗ್ಗಣಾಃ ॥೯೫॥**

ಅರ್ಥ.—ತದನ್ಯೈಃ=ತತ್=ಮನುಷ್ಯೋತ್ತಮರಿಗಿಂತ, ಅನ್ಯೈಃ=ಬೇರೆಯಾದ ರಾಜರೇ ಮುಂತಾದವರುಗಳಿಂದ, ಆವಿರಿಂಚತಃ=ಬ್ರಹ್ಮ ದೇವರ ಪರಿಯಂತವಾಗಿ. ಗುಣೋದ್ರೇಕಾತ್ = ಗುಣಗಳ ಆಧಿಕ್ಯತೆಯಿಂದ, ನಾಲ್ಕು ಗುಣಗಳಿಗಿಂತ ಹೆಚ್ಚಾಗಿ, ಉಪಾಸ್ಯಾಃ=ಹರಿಯ ಉಪಾಸನೆಗೆ ಯೋಗ್ಯರು, ಬ್ರಹ್ಮತ್ವಯೋಗ್ಯಾಃ=ಬ್ರಹ್ಮ ಪದವಿಯನ್ನು ಹೊಂದಲಿಕ್ಕೆ ಯೋಗ್ಯರಾದ, ಋಜವೋನಾಮ=ಋಜುಗಳು ಎಂಬ ಹೆಸರಿನಿಂದ, ಪೃಥಗ್ಗಣಾಃ=ಬೇರೆ ಗಣಗಳಾದ, ದೇವಾಃ=ದೇವತೆಗಳು, ಸಂತಿ=ಇರುತ್ತಾರೆ. ತತ್ಪದಂತು=ತತ್=ಆ ಬ್ರಹ್ಮಪದವಿಯ, ಪದಂತು=ಪದವಾದರೊ, ತೈರೇವ=ಆ ಗಣಗಳಿಂದಲೇವೆ, ಆಪ್ಯಂ=ಹೊಂದತಕ್ಕದ್ದು, ಅನ್ಯೈಃ=ರುದ್ರಾದಿ ಪದಯೋಗ್ಯ

ರುಗಳಿಂದ, ಸಾಧನೈರಪಿ= ಎಷ್ಟು ಸಾಧನೆ ಮಾಡಿದರೂ, ನೈವಾಪ್ಯಃ= ಹೊಂದ ಬ್ಬಡುವುದಿಲ್ಲ. ಏವಂ = ಇದೇ ರೀತಿಯಾಗಿ, ಸರ್ವಪದಾನಾಂತು= ರುದ್ರಾದಿ ಸಮಸ್ತ ದೇವತಾ ಪದವಿಗಳಿಗೆ, ಯೋಗ್ಯಾಃ= ಯೋಗ್ಯರಾದ, ಪೃಥಗ್ಗಣಾಃ= ಬೇರೆಬೇರೆ ಗಣಗಳಾದ ಜೀವರಾಶಿಗಳು, ಸಂತಿ= ಇರುತ್ತಾರೆ.

ತಾತ್ಪರ್ಯ :—ಮನುಷ್ಯೋತ್ತಮರಿಗಿಂತ ಇತರರಾದ ಚಕ್ರವರ್ತಿಗಳು ಋಷಿಗಳು ಮೊದಲು ಮಾಡಿ ಬ್ರಹ್ಮದೇವರ ಪರ್ಯಂತರ ಯಥಾಕ್ರಮವಾಗಿ ನಾಲ್ಕು ಗುಣಗಳಿಗಿಂತ ಹೆಚ್ಚಾಗಿ ಉಪಾಸನೆ ಮಾಡಿದರೂ ತಮಗೆ ಅರ್ಹ ವಲ್ಲದ ಉತ್ತಮವಾದ ಪದವಿಯನ್ನು ಹೊಂದಲು ಎಂದಿಗೂ ಶಕ್ತರಾಗುವು ದಿಲ್ಲ. ಬ್ರಹ್ಮ ಪದವಿಗೆ ಬರುವ ಋಜುನಾಮಕ ದೇವತೆಗಳ ಗುಂಪುಗಳು ಪ್ರತ್ಯೇಕವಾಗಿರುತ್ತವೆ. ಅವರೇ ಆ ಪದವಿಗೆ ಸಾಧನೆಯಿಂದ ಬರುತ್ತಾರೆಯೇ ಹೊರತು ಬೇರೆಯವರು ಎಷ್ಟು ಸಾಧನೆ ಮಾಡಿದರೂ ಬರುವುದಿಲ್ಲ, ಇದು ನಿಯಮ. ಹಾಗೆಯೇ ರುದ್ರಾದಿ ಸಮಸ್ತ ಪದವಿಗಳಿಗೂ ಬೇರೆ ಬೇರೆ ಯಾದ ಜೀವರಾಶಿಗಳ ಗುಂಪುಗಳು ಇರುತ್ತವೆ. ಆ ಗುಂಪುಗಳೇ ಸಾಧನೆಯಿಂದ ಆ ಪದವಿಗಳನ್ನು ಹೊಂದುವರು, ಬೇರೆ ಗುಣಗಳು ಹೊಂದುವುದೇ ಇಲ್ಲ ವೆಂದು ತಿಳಿಯಬೇಕು.

**ಶ್ಲೋಕ ||  ತಸ್ಮಾದನಾದ್ಯನಂತಂ ಹಿ ತಾರತಮ್ಯಂ ಚಿದಾತ್ಮನಾಂ |**
**ತಚ್ಚನೈವಾನ್ಯಥಾ ಕರ್ತುಂ ಶಕ್ಯಂ ಕೇನಾಪಿ ಕುತ್ರಚಿತ್ ||೯೬||**

**ಶ್ಲೋಕ ||  ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ |**
**ತಸ್ಮಾದ್ಯೋಗ್ಯಾನುಸಾರೇಣ ಸೇವ್ಯೋ ವಿಷ್ಣುಃ ಸದೈವ ಹಿ ||೯೭||**

ಅರ್ಥ :—ತಸ್ಮಾತ್ = ಆದಕಾರಣದಿಂದ, ಚಿದಾತ್ಮನಾಂ = ಚಿದ್ರೂಪ ರಾದ ಜೀವರುಗಳ, ತಾರತಮ್ಯಂ= ತರತಮ ಭಾವವು, ಅನಾದ್ಯನಂತಂಹಿ= ಅನಾದ್ಯನಂತವಾಗಿಯೇ ಇರುತ್ತೆ. ತಚ್ಚ= ಅದನ್ನು, ಅನ್ಯಥಾಕರ್ತುಂ= ಬೇರೆ ರೀತಿ ಮಾಡುವುದಕ್ಕೆ, ಕೇನಾಪಿ= ಯಾರಿಂದಲೂ, ಕುತ್ರಚಿತ್= ಯಾವ ದೇಶದಲ್ಲಿಯೂ, ನಶಕ್ಯಂ= ಸಾಧ್ಯವಾಗುವದೇ ಇಲ್ಲ.

ಅರ್ಥ :—ಅಯೋಗ್ಯಂ= ತನ್ನ ಯೋಗ್ಯತೆಗೆ ಮೀರಿದ ಪದವಿಯನ್ನು, ಇಚ್ಛನ್ =ಅಪೇಕ್ಷಿಸುವ, ಪುರುಷಃ= ಮನುಷ್ಯನು, ಪತತ್ಯೇವ= ಕೆಳಗೆ ಬೀಳುತ್ತಾನೆ, ನ ಸಂಶಯಃ= ಈ ವಿಷಯದಲ್ಲಿ ಸಂಶಯವಿಲ್ಲ. ತಸ್ಮಾತ್= ಆದ ಕಾರಣದಿಂದ, ಯೋಗ್ಯಾನುಸಾರೇಣ= ತಮ್ಮ ಯೋಗ್ಯತೆಗೆ ಅನುಸಾರವಾಗಿ, ವಿಷ್ಣುಃ= ನಾರಾಯಣನು, ಸದೈವಹಿ= ಸರ್ವ ಕಾಲದಲ್ಲಿಯೂ, ಸೇವ್ಯಃ= ಸೇವಿಸಲ್ಪಡಬೇಕು.

ತಾತ್ಪರ್ಯ :—ಚಿದ್ರೂಪರಾದ ಜೀವರುಗಳು ತರತಮ ಭಾವದಿಂದ ಅನಾದ್ಯನಂತ ಕಾಲದಿಂದಲೂ ಇರುತ್ತಾರೆ. ಈ ತರತಮ ಭಾವವನ್ನು ಬೇರೆಯಾಗಿ ಮಾಡುವುದಕ್ಕೆ ಯಾವನಿಂದಲೂ ಯಾವ ಕಾಲದಲ್ಲಿಯೂ ಆಗುವುದಿಲ್ಲ. ತನಗೆ ಯೋಗ್ಯವಲ್ಲದ ಪದವಿಯನ್ನು ಅಪೇಕ್ಷಿಸಿ ಉಪಾಸನೆ ಮಾಡುವವನು ತನ್ನ ಪದವಿಗಿಂತ ಕೆಳಗೆ ಬೀಳುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ, ಆದ್ದರಿಂದ ತಮ್ಮ ಯೋಗ್ಯತಾನುಸಾರವಾಗಿ ನಾರಾಯಣನನ್ನು ಎಲ್ಲಾ ಕಾಲದಲ್ಲಿಯೂ ಉಪಾಸನೆ ಮಾಡುತ್ತಿರಬೇಕು.

**ಶ್ಲೋಕ ॥ ಅಚ್ಛಿದ್ರಸೇವನಾಚ್ಚೈವ ನಿಷ್ಕಾಮತ್ವಾಚ್ಚ ಯೋಗ್ಯತಃ ।**
**ದ್ರಷ್ಟುಂ ಶಕ್ಯೋ ಹರಿಃ ಸರ್ವೈರ್ನಾನ್ಯಥಾ ತು ಕಥಂಚನ॥೯೮॥**

ಅರ್ಥ :—ಅಚ್ಛಿದ್ರಸೇವನಾತ್ = ಚ = ನಿರಂತರ ಉಪಾಸನೆಯಿಂದಲೂ, ನಿಷ್ಕಾಮತ್ವಾಚ್ಚ= ಇತರ ಫಲಾಪೇಕ್ಷೆ ಇಲ್ಲದೆ ಅನುಷ್ಠಿತ ಕರ್ಮದಿಂದಲೂ, ಯೋಗ್ಯತಃ = ಯೋಗ್ಯತೆಯಿಂದಲೂ (ಯೋಗ್ಯರೆಲ್ಲರೂ), ಸರ್ವೈರೇವ= ಈ ಮೂರು ಉಪಾಯಗಳಿಂದಲೇ, ಹರಿಃ= ನಾರಾಯಣನು, ದ್ರಷ್ಟುಂ= ನೋಡಲು, ಶಕ್ಯಃ= ಸಾಧ್ಯನು, ಅನ್ಯಥಾ ತು= ಇದಕ್ಕೆ ಬೇರೆಯಾಗಿ,ಭಗವಂತನನ್ನು ನೋಡಲು, ಕಥಂಚನ= ಯಾವ ವಿಧದಲ್ಲಿಯೂ, ನ= ಸಾಧ್ಯವಲ್ಲವು.

ತಾತ್ಪರ್ಯ :—ಅವರವರ ಯೋಗ್ಯತಾನುಸಾರ ಫಲವು ಬರುವುದಾದರೆ ಹರಿಯ ಸೇವೆಯು ವ್ಯರ್ಥವೆಂತೆಂದರೆ ಅದಕ್ಕೆ ಹೇಳುತ್ತಾರೆ :—ನಿರಂತರನಾದ ಉಪಾಸನೆಯಿಂದಲೂ, ಫಲಾಪೇಕ್ಷೆ ಇಲ್ಲದೆ ಅನುಷ್ಠಿಸುವ ಕರ್ಮಗಳಿಂದಲೂ, ಯೋಗ್ಯತೆಯಿಂದಲೂ, ಯೋಗ್ಯರೆಲ್ಲರೂ ಭಗವಂತನನ್ನು ನೋಡಲು ಸಾಧ್ಯ. ಇದಕ್ಕೆ ಬೇರೆ ವಿಧವಾಗಿ ಹರಿಯನ್ನು ನೋಡಲು ಸಾಧ್ಯವಿಲ್ಲ.

**ಶ್ಲೋಕ ॥ ನಿಯಮೋಽಯಂ ಹರೇರ್ಯಸ್ಮಾನ್ನೋಲ್ಲಂಘ್ಯಃ ಸರ್ವಚೇತನೈಃ।**
**ಸತ್ಯಸಂಕಲ್ಪತೋ ವಿಷ್ಣುರ್ನಾನ್ಯಥಾ ತು ಕರಿಷ್ಯತಿ ॥೯೯॥**

ಅರ್ಥ :—ಹರೇಃ= ಭಗವಂತನ, ಅಯಂ ನಿಯಮಃ= ಈ ನಿಯಮವು, ಸರ್ವಚೇತನೈಃ= ಸಮಸ್ತ ಪ್ರಾಣಿಗಳಿಂದಲೂ, ಯಸ್ಮಾತ್= ಯಾವ ಕಾರಣದಿಂದಲೂ, ನೋಲ್ಲಂಘ್ಯಃ = ಅತಿಕ್ರಮಿಸುವುದಕ್ಕೆ ಸಾಧ್ಯವಲ್ಲ. ವಿಷ್ಣುಃ= ನಾರಾಯಣನು, ಸತ್ಯಸಂಕಲ್ಪತಃ = ಸತ್ಯಸಂಕಲ್ಪನಾದಕಾರಣ, ಅನ್ಯಥಾ ತು= ಈಗ ಹೇಳಿದ ವ್ಯವಸ್ಥೆಗೆ ಬೇರೆಯಾಗಿ, ನ ಕರಿಷ್ಯತಿ= ಮಾಡುವುದಿಲ್ಲ.

ತಾತ್ಪರ್ಯ :—ಈಗ ಹೇಳಿದ ನಿಯಮಕ್ಕೆ ವ್ಯತ್ಯಾಸ ಯಾಕೆ ಆಗಬಾರದೆಂದರೆ ಹೇಳುತ್ತಾರೆ :—ಹರಿಯ ನಿಯಮವು ಯಾವ ಚೇತನರುಗಳಿಂದಲೂ ಅತಿಕ್ರಮಿಸುವುದಕ್ಕೆ ಸಾಧ್ಯವಿಲ್ಲ. (ಇತರರಿಂದ ಈ ನಿಯಮವು ವ್ಯತ್ಯಾಸ ಮಾಡಲು ಸಾಧ್ಯವಾಗದಿದ್ದರೂ, ಹರಿಯೇ ಏಕೆ ವ್ಯತ್ಯಾಸ ಮಾಡಬಾರದೆಂದರೆ ಅದಕ್ಕೆ ಹೇಳುತ್ತಾರೆ) :—ಭಗವಂತನು ಸತ್ಯಸಂಕಲ್ಪನಾದ ಕಾರಣ ಈ ವ್ಯವಸ್ಥೆಯನ್ನು ವ್ಯತ್ಯಾಸ ಮಾಡುವುದಿಲ್ಲ.

**ಶ್ಲೋಕ ॥ ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಽಪಿ ಸರ್ವದಾ।**
**ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ**
**॥೧೦೦॥**

ಅರ್ಥ :—ದಾನತೀರ್ಥತಪೋಯಜ್ಞಪೂರ್ವಾಃ = ದಾನ, ತೀರ್ಥಯಾತ್ರೆ, ತಪಸ್ಸು, ಯಜ್ಞವೇ ಮೊದಲಾದ, ಸರ್ವೇಽಪಿ= ಸಮಸ್ತ ಕರ್ಮಗಳೂ, ಸರ್ವದಾ = ಯಾವಾಗಲೂ, ಹರಿಸೇವಾಯಾಂ = ಹರಿಯ ಸೇವೆಯ ವಿಷಯದಲ್ಲಿ, ಅಂಗಾನಿ= ಅಂಗಗಳು, ಏಕಾ= ಒಂದಾದ, ಭಕ್ತಿಸ್ತು= ಜ್ಞಾನಪೂರ್ವಕವಾದ ಭಕ್ತಿಯೇ, ವಿಮುಕ್ತಯೇ= ಮೋಕ್ಷಕ್ಕೆ ಮುಖ್ಯ ಸಾಧನವು.

ತಾತ್ಪರ್ಯ :—ದಾನ ಮೊದಲಾದವುಗಳಿಂದ ಮೋಕ್ಷವಾಗುತ್ತದೆಯಷ್ಟೆ? ಹೀಗಿರಲು ಭಕ್ತಿಯಿಂದ ಏನು ಪ್ರಯೋಜನವೆಂದರೆ :—ದಾನ, ತೀರ್ಥಯಾತ್ರೆ, ತಪಸ್ಸು, ಯಜ್ಞ ಮೊದಲಾದ ಸರ್ವ ಸತ್ಕರ್ಮಗಳು ಭಗವಂತನ ಸೇವೆಗೆ ಅಂಗಗಳು, ಜ್ಞಾನದಿಂದ ಕೂಡಿದ ಭಕ್ತಿಯೊಂದೇ ಮೋಕ್ಷಕ್ಕೆ ಮುಖ್ಯ ಸಾಧನೆಯು. ಆದ್ದರಿಂದ ವಿಹಿತ ಸತ್ಕರ್ಮಾನುಷ್ಠಾನದಿಂದ ಹರಿಯ

ಸೇವೆ ಮಾಡಿ ಜ್ಞಾನ ರೂಪವಾದ ಭಕ್ತಿಯು ಅಧಿಕವಾಗಿ ಅದರಿಂದ ಮೋಕ್ಷಪ್ರಾಪ್ತಿ ಯಾಗಬೇಕು.

**ಶ್ಲೋಕ ॥ ಭವಿಷ್ಯತ್ಪರ್ವವಚನಮಿತ್ಯೇತದಖಿಲಂ ಪರಂ** ॥೧೦೧॥

ಅರ್ಥ :— ಇತ್ಯೇತತ್ = ಈ ರೀತಿಯಾದ, ಅಖಿಲಂ = ಸಮಸ್ತವಾದ. ಪರಂ= ಸರ್ವೋತ್ತಮವಾದ ವಚನಗಳು, ಭವಿಷ್ಯತ್ಪರ್ವವಚನಂ = ಭವಿಷ್ಯತ್ ಪುರಾಣದ ವಾಕ್ಯಗಳು.

ತಾತ್ಪರ್ಯ :— ಈ ಪ್ರಮಾಣವು ಯಾವ ಗ್ರಂಥದಲ್ಲಿ ಇದೆ ಎಂತೆಂದರೆ ಹೇಳುತ್ತಾರೆ :— ಈಗ ಹೇಳಿರುವ ಅರ್ಥವನ್ನು ತಿಳಿಸುವುದಾಗಿಯೂ ಹರಿಯ ಸರ್ವೋತ್ತಮತ್ವವನ್ನು ತಿಳಿಸುವುದರಿಂದ ಉತ್ತಮವಾಗಿಯೂ ಇರುವ ಭವಿಷ್ಯತ್ಪುರಾಣ ವಾಕ್ಯವಿದು. ಪರಂ— ಎಂಬುವದಕ್ಕೆ ಪೂರ್ವದಲ್ಲಿ ಉದಾಹರಿಸಿದ ಪ್ರಮಾಣಕ್ಕಿಂತಲೂ ಇದು ಎರಡನೆಯ ಪ್ರಮಾಣವೆಂದು ಅರ್ಥ. ಅಥವಾ ಹೇಳಿದ್ದು ಭವಿಷ್ಯತ್ಪರ್ವ ವಾಕ್ಯವು. ಏತತ್ — ಮುಂದೆ ಹೇಳತಕ್ಕಂಥಾದ್ದಾಗಿಯು ಅಪೌರುಷೇಯವಾದ ಪ್ರಯುಕ್ತ ನಿರ್ದೋಷವಾಗಿಯೂ ಖಿಲವಲ್ಲದೆ ಇರುವಂಥಾದ್ದಾಗಿಯೂ (ಅಂದರೆ ವರ್ತಮಾನ ಶ್ರುತಿಗಳಲ್ಲಿರುವುದಾಗಿಯೂ) ಇರುವ ವೇದ ವಾಕ್ಯವು. ಕೆಳಗೆ ಹೇಳುವ ಪ್ರಕಾರ ದೇವತೆಗಳು ಮುಕ್ತಿಯೋಗ್ಯರು, ಅಸುರರು = ತಮೋಯೋಗ್ಯರು, ಮಧ್ಯಮ ಪುರುಷರು= ನಿತ್ಯಸಂಸಾರಿಗಳು. ಈ ನಿಯಮವನ್ನು ಬಿಟ್ಟು ತಮಗೆ ಬರದವಲ್ಲದ್ದನ್ನು ಅಪೇಕ್ಷಿಸಿದರೆ ಅಧಃಪತನ ವಾಗುವದೆಂಬ ಅರ್ಥವನ್ನು ಹೇಳುತ್ತಾರೆ.

**ಶ್ಲೋಕ ॥ ಕೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯ**
**ಮನ್ಯಮತಿನೇನೀಯಮಾನಃ ।**
**ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ**
**ವಿಶ ವಿಶ ಇಂದ್ರೋ ಮನುಷ್ಯಾನ್** ॥೧೦೨॥

ಅರ್ಥ :— ವೀರಃ = ಓಡಿಸ ಕೆಲಸವನ್ನು ಮುಗಿಸುವ, ಇಂದ್ರಃ = ಪರಮೇಶ್ವರನಾದ ಹರಿಯು, ಉಗ್ರಮುಗ್ರಂ= ಕ್ರೂರ ಸ್ವಭಾವ ವುಳ್ಳ ದೈತ್ಯರ ಸಮೂಹವನ್ನು, ದಮಯನ್ = ಅಂಧತಮಸ್ಸಿನಲ್ಲಿ ಶಿಕ್ಷಿಸುವವನಾಗಿ, ಅನ್ಯಮನ್ಯಂ = ಉಗ್ರಸ್ವಭಾವವಲ್ಲದೆ ಬೇರೆ ಸ್ವಭಾವ ವುಳ್ಳ ಸಾತ್ವಿಕರಾದ ದೇವತೆಗಳೇ ಮುಂತಾದವರನ್ನು, ಅತಿನೇನೀಯಮಾನಃ = ಸಂಸಾರದಿಂದ ದಾಟಿಸಿ

ಉತ್ತಮವಾದ ವೈಕುಂಠಾದಿ ಸ್ಥಾನವನ್ನು ಹೊಂದಿಸುವವನಾಗಿ, ವಿಧವಾನದ್ವಿಟ್=ವಿಧವಾನ=ಸ್ವಯೋಗ್ಯತೆಗೆ ವಿರುದ್ಧ ಸಾಧನವನ್ನು ಮಾಡುವವನನ್ನು, ದ್ವಿಟ್=ತಗ್ಗಿಸುವ (ದ್ವೇಷಿಸುವ) ನೆಂಬುದಾಗಿ, ಶ್ರುತ್ಯೈಃ=ಶ್ರುತಿಗಳಿಂದ ತಿಳಿಯಲ್ಪಡುತ್ತಾರೆ. ಉಭಯಸ್ಯ=ದೇವಾಸುರರಿಗೆ, ರಾಜಾ=ಅಧಿಪತಿಯು, ವಿಶಃ-ಪ್ರಜಾರೂಪವಾದ, ಮನುಷ್ಯಾನ್=ಮನುಷ್ಯರನ್ನು, ಚೋಷ್ಕೂಯತಿ-ಸಂಸಾರದಲ್ಲಿಯೇ ಇಡುತ್ತಾನೆ.

ತಾತ್ಪರ್ಯ.—ಈ ಅರ್ಥವನ್ನು ಹೇಳುವ ಶ್ರುತಿಯನ್ನು ಹೇಳುತ್ತಾರೆ.- ಸರ್ವಾರ್ಥಿಸಲ್ಪಡುವ ಬಲವನ್ನು [illegible] ರಮಣನಾದ ಪುರುಷೋತ್ತಮನ ಪ್ರಯುಕ್ತ ಇಂದ್ರಶಬ್ದವಾಚ್ಯನಾದ ಹರಿಯು ಕ್ರೂರ ಸ್ವಭಾವವಿಲ್ಲದ ಒಳ್ಳೇ ಸ್ವಭಾವ ಉಳ್ಳ ದೇವತೆಗಳನ್ನು ಸಾಧನ ಮಾಡಿಸಿ ಉತ್ತಮ ಸ್ಥಾನವನ್ನು ಹೊಂದಿಸುತ್ತಾ, ತನ್ನ ಯೋಗ್ಯತೆಗಿಂತಲೂ, ಹೆಚ್ಚಾಗಿ ಸಾಧನಮಾಡುವವರಲ್ಲಿ ದ್ವೇಷಮಾಡುತ್ತ ತಗ್ಗಿಸುವವನಾಗಿ ಶ್ರುತಿಗಳಿಂದ ತಿಳಿಯಲ್ಪಡುತ್ತಾನೆ. ಪ್ರಜಾರೂಪರಾದ ಮನುಷ್ಯರನ್ನು ಸಂಸಾರದಲ್ಲಿಯೇ ಸ್ತುತಿಸುತ್ತಾರೆ. ದೇವಾಸುರವರ್ಗಕ್ಕೆ ಯಜಮಾನನಾದ ಪ್ರಯುಕ್ತ ಹರಿಯು ಹೀಗೆ ಮಾಡುತ್ತಾನೆ.

**ಶ್ಲೋಕ ॥ ಪರಾಪೂರ್ವೇಷಾಂ ಸಖ್ಯಾವೃಣಕ್ತಿ ವಿತರ್ತುರಾಣೋ ಅಪರೇಭಿರೇತಿ ॥ ಅನಾನುಭೂತೀರವಧೂನ್ವಾನಃ ಪೂರ್ವೀರಿಂದ್ರಃ ಶರದಸ್ತರ್ತರೀತಿ ॥೧೦॥**

ಅರ್ಥ.—ವಿತರ್ತುರಾಣಃ=ಯಾವ ಕಾರ್ಯದಲ್ಲಿಯೂ ತ್ವರಾ ಉಳ್ಳವನಾದ, ಇಂದ್ರಃ=ಹರಿಯು, ಪೂರ್ವೇಷಾಂ=ಹಿಂದಿನ ಸೃಷ್ಟಿಯಲ್ಲಿ ಮೊದಲು ಹೇಳಿರುವ ದೈತ್ಯರುಗಳ, ಸಖ್ಯಾ=ಸ್ನೇಹದಿಂದ, ಪರಾವೃಣಕ್ತಿ=ಬಿಡುತ್ತಾನೆ, ಅಪರೇಭಿಃ=ಅವರಿಂದ ಇತರರಾದ ಸಾಧುಗಳ ಸಂಗಡ ಅಂದರೆ ದೇವತೆಗಳಲ್ಲಿ ಸ್ನೇಹವನ್ನು, ಏತಿ=ಹೊಂದುತ್ತಾನೆ, ಅನಾನುಭೂತೀಃ=ಯಥಾರ್ಥಜ್ಞಾನವಿಲ್ಲದ ನಿತ್ಯ ಸಂಸಾರಿಗಳನ್ನು, ಅವಧೂನ್ವಾನಃ=ಸಂಸಾರದಲ್ಲಿಯೇ ಪರಿವರ್ತಿಸುವ ( ಅಥವಾ ದೈತ್ಯರುಗಳನ್ನು ಅಂಧಂತಮಸ್ಸಿನಲ್ಲಿ

ಹಾಕುವವನಾಗಿ ) ಪೂರ್ವೀಃ=ಅತೀತವಾದ (ಕಳೆದ) ಶರದಃ=ವರ್ಷಗಳನ್ನು (ಅತರತ್=ಕಳೆದನು, ಇದಾನೀಂ=ವರ್ತಮಾನಕಾಲದಲ್ಲಿ) ತರ್ತರೀತಿ-ಅತಿಶಯದಿಂದ ದಾಟುತ್ತಾನೆ. (ಅಗಾಮಿಶರದಃತರಿಷ್ಯತೀ=ದಾಟಿಸುವನಾಗುತ್ತಾನೆ) ಹೀಗೆ ವಿವೇಕದಿಂದ ಅರ್ಥಮಾಡಬೇಕು.

ತಾತ್ಪರ್ಯ.—ಅಸುರರುಗಳಲ್ಲಿ ದ್ವೇಷವೂ, ದೇವತೆಗಳಲ್ಲಿ ಪ್ರೀತಿಯೂ ಭಗವಂತನಿಗೆ ಯಾವಾಗಲೂ ನಾಶವಾಗುವುದಿಲ್ಲವೆಂತ ತಿಳಿಸುವ ಶೃತಿಯನ್ನು ಹೇಳುತ್ತಾರೆ.—ಯಾವ ಕಾರ್ಯದಲ್ಲಿಯೂ ತ್ವರಾ ಉಳ್ಳವನಾದ ಐಶ್ವರ್ಯ ಉಳ್ಳವನಾದ ಭಗವಂತನು ಹಿಂದಿನ ಶೃತಿಯಲ್ಲಿ ಮೊದಲು ಹೇಳಲ್ಪಟ್ಟರುವರಾದ ದೈತ್ಯರುಗಳ ಸಂಗಡ ಸ್ನೇಹವನ್ನು ಬಿಡುತ್ತಾನೆ. ಅವರಿಗಿಂತಲೂ ಇತರರಾದ ಸಾಧುಗಳ ಸಂಗಡ ಸ್ನೇಹವನ್ನು ಹೊಂದುತ್ತಾನೆ. (ಇಷ್ಟುಮಾತ್ರವೇ ಅಲ್ಲ. ಸರಿಯಾಗಿ ಯಥಾರ್ಥ ಜ್ಞಾನವಿಲ್ಲದವರಾದ ಅಥವಾ ಅನ್ಯೈಶ್ವರ್ಯರೂಪನೆಂದು ಉಪಾಸನೆಮಾಡುವವರಾದ ದೈತ್ಯರುಗಳನ್ನು ನರಕದಲ್ಲಿ ಹಾಕುತ್ತಾ ಅಥವಾ ದುಃಖದಿಂದ ನಡುಗುವ ಹಾಗೆ ಮಾಡುತ್ತಾ ಹಿಂದಿನ ವರ್ಷಗಳನ್ನು ದಾಟಿದನು, ಈ ವರ್ಷಗಳನ್ನು ದಾಟುತ್ತಿದ್ದಾನೆ, ಮುಂದಿನ ವರ್ಷಗಳನ್ನು ದಾಟಿಹೋಗುತ್ತಾನೆ. )

**ಶ್ಲೋಕ || ತಮೇವಂ ವಿದ್ವಾನಮೃತ ಇಹಭವತಿನಾನ್ಯಃ ಪಂಥಾ ಅಯನಾಯ ವಿದ್ಯತೇ || ತಮೇವಂವಿದಿತ್ವಾತಿ ಮೃತ್ಯುಮೇತಿ ನಾನ್ಯಃಪಂಥಾ ಅಯನಾಯವಿದ್ಯತೇ ||೧೦೪||**

ಅರ್ಥ.—ತಂ=ಪುರುಷನಾಮ ಪರಮಾತ್ಮನನ್ನು, ಏವಂ-ಸಹಸ್ರಶೀರ್ಷೇತ್ಯಾದಿ ಪ್ರಕಾರದಿಂದ, ಇಹ-ಈ ದೇಹದಲ್ಲಿ, ವಿದ್ವಾನ್=ತಿಳಿಯುತ್ತಾನೆಯೋ, ಸಃ-ಅವನು, ಅಮೃತಃ=ಮುಕ್ತನು, ಭವತಿ=ಆಗುತ್ತಾನೆ. ಅಯನಾಯ=ಮೋಕ್ಷಕ್ಕೆ, ಅನ್ಯಃ=ಜ್ಞಾನ ವ್ಯತಿರಿಕ್ತವಾದ, ಪಂಥಾಃ=ಸಾಧನೆಯು, ನವಿದ್ಯತೆ=ಇಲ್ಲವು. ತಂ=ಆ ಪುರುಷನಾಮಕಪರಮಾತ್ಮನನ್ನು, ಏವಂ=ಹಿಂದೆ ಹೇಳಿದ ಪ್ರಕಾರದಿಂದ, ವಿದಿತ್ವಾ=ತಿಳಿದು, ಮೃತ್ಯು-ಜನನಮರಣ ರೂಪವಾದ ಮೃತ್ಯುವನ್ನು, ಅತ್ಯೇತಿ = ಅತಿಕ್ರಮಿಸುತ್ತಾನೆ, ಅಯನಾಯ=ಮೋಕ್ಷಕ್ಕೆ, ಅನ್ಯಃ=ಜ್ಞಾನವ್ಯತಿರಿಕ್ತವಾದ, ಪಂಥಾಃ=ಸಾಧನೆಯು, ನವಿದ್ಯತೇ=ಇಲ್ಲವು.

ತಾತ್ಪರ್ಯ.—ಜ್ಞಾನದಿಂದಲೇ ಮೋಕ್ಷವಾಗಬೇಕೆಂದು ತಿಳಿಸುವ ಶ್ರುತಿಯನ್ನು ಉದಾಹರಿಸುತ್ತಾರೆ. ಈ ಅಧಿಕಾರಿ ವರ್ಗಕ್ಕೆ ಸೇರಿದ ಯಾವನು ಆ ಪುರುಷನಾಮಕ ಭಗವಂತನನ್ನು ಮೇಲೆ ಹೇಳಿದ ಸಹಸ್ರ ಶಿರಸ್ಸುಳ್ಳವನು ಇತ್ಯಾದಿ ಮಾಹಾತ್ಮ್ಯೆಯುಳ್ಳವನನ್ನಾಗಿ ತಿಳಿಯುತ್ತಾನೆಯೋ, ಅವನು ಮುಕ್ತನಾಗುತ್ತಾನೆ. ಮೋಕ್ಷಕ್ಕೆ ಜ್ಞಾನ ವ್ಯತಿರಿಕ್ತವಾದ ಸಾಧನೆಯು ಇಲ್ಲ. ಇದೇ ಅರ್ಥವನ್ನು ಹೇಳುವ ಮತ್ತೊಂದು ಶ್ರುತಿಯನ್ನು ಹೇಳುತ್ತಾರೆ.— ಆ ಹರಿಯನ್ನು ಈ ಪ್ರಕಾರ ತಿಳಿದು ಸಂಸಾರವನ್ನು ಅತಿಕ್ರಮಿಸುತ್ತೇನೆ. ಮೋಕ್ಷಕ್ಕೆ ಜ್ಞಾನ ವ್ಯತಿರಿಕ್ತವಾದ ಸಾಧನೆ ಇಲ್ಲ. "ಭಕ್ತಿರ್ಮೋಕ್ಷಾಯ ಕೇವಲಾ" ಭಕ್ತಿಯೇ ಮೋಕ್ಷಕ್ಕೆ ಮುಖ್ಯ ಸಾಧನವೆಂದು ಹೇಳಲ್ಪಟ್ಟಿದರೂ ಜ್ಞಾನವು ಆ ಭಕ್ತಿಯಲ್ಲಿ ಒಂದು ಭಾಗವಾದ್ದರಿಂದ ಜ್ಞಾನಧಿಂದಲೇ ಮೋಕ್ಷವೆಂದು ಹೇಳಿದ್ದು ಸರಿಯೆಂದು ತಿಳಿಯಬೇಕು.

**ಶ್ಲೋಕ || ಯಸ್ಯದೇವೇಪರಾಭಕ್ತಿಃ ಯಥಾದೇವೇ ತಥಾಗುರೌ || ತಸ್ಯೈತೇಕಥಿತಾಹ್ಯರ್ಥಾಃ ಪ್ರಕಾಶಂ ತೇ ಮಹಾತ್ಮನಃ ||೧೫||**

ಅರ್ಥ.—ಯಸ್ಯ-ಯಾವನಿಗೆ, ದೇವೇ=ಕ್ರೀಡಾದಿ ಗುಣವಿಶಿಷ್ಟನಾದ ಪರಮಾತ್ಮನಲ್ಲಿ, ಪರಾ-ಸರ್ವೋತ್ಕೃಷ್ಟವಾದ, ಭಕ್ತಿಃ=ಭಕ್ತಿ ಇರುವುದೋ ತಥಾ=ಯೋಗ್ಯತಾನುಸಾರವಾಗಿ, ದೇವೇ=ದೇವತೆಗಳಲ್ಲಿಯೂ, ತಥಾ= ಯೋಗ್ಯತಾನುಸಾರವಾಗಿ, ಗುರೌ-ಸ್ವೋತ್ತಮರಾದ ಗುರುಗಳಲ್ಲಿಯೂ, ಭಕ್ತಿ ಇರುವುದೋ, ತಸ್ಯ=ಆ, ಮಹಾತ್ಮನಃ=ಮಹಾಜ್ಞಾನಿಗೆ, ಎತೇ=ಈ ಕಥಿತಾಃ-ಹೇಳಿದ, ಅರ್ಥಾಃ-ಶಮದಮಾದಿಗಳು, ಪ್ರಕಾಶಂತೇ=ಪ್ರಕಾಶಿಸುತ್ತವೆ.

ತಾತ್ಪರ್ಯ.—ಮೋಕ್ಷಕ್ಕೆ ಭಕ್ತಿಯು ಸಾಧನೆಯೆಂದು ತಿಳಿಸುವ ಶ್ರುತಿಯನ್ನು ಹೇಳುತ್ತಾರೆ. ಯಾವನಿಗೆ ಕ್ರೀಡಾದಿ ಗುಣವಿಶಿಷ್ಟನಾದ ಪರಮಾತ್ಮನಲ್ಲಿ ಸರ್ವೋತ್ಕೃಷ್ಟವಾದ ಭಕ್ತಿ ಇರುತ್ತದೆಯೋ ಹಾಗೆಯೇ ಯೋಗ್ಯತಾನುಸಾರ ದೇವತೆಗಳಲ್ಲಿಯೂ ಮತ್ತು ಸ್ವೋತ್ತಮರಾದ ಗುರುವೇ ಮುಂತಾದವರುಗಳಲ್ಲಿಯೂ ಯೋಗ್ಯತಾನುಸಾರ ಭಕ್ತಿ ಇರುವದೋ ಆ ಮಹಾಜ್ಞಾನಿಗೆ ಶ್ರುತಿಯಲ್ಲಿ ಹೇಳಲ್ಪಟ್ಟ ಶಮದಮಾದಿಗಳು ಉಂಟಾಗುತ್ತವೆ.

**ಶ್ಲೋಕ ॥ ಭಕ್ತ್ಯರ್ಥಾನ್ಯಖಿಲಾನ್ಯೇವ ಭಕ್ತಿರ್ಮೋಕ್ಷಾಯ ಕೇವಲಾ । ಮುಕ್ತಾನಾಮಪಿ ಭಕ್ತಿರ್ಹಿ ನಿತ್ಯಾನಂದಸ್ವರೂಪಿಣೀ ॥೧೦೬॥**

ನಿಖಿಲಾನಿ=ದಾನ ಮೊದಲಾದ ಸಮಸ್ತ ಸಾಧನಗಳೂ, ಭಕ್ತ್ಯರ್ಥಾನ್ಯೇವ=ಭಕ್ತಿಗೋಸ್ಕರವೆ, ಕೇವಲಾ=ಕೇವಲವಾದ, ಭಕ್ತಿರೇವ=ಭಕ್ತಿಯೇ ಸಾಕ್ಷಾತ್ತಾಗಿ, ಮೋಕ್ಷಾಯ=ಮೋಕ್ಷಕ್ಕೆ ಸಾಧನವಾಗುತ್ತದೆ. ಮುಕ್ತಾನಾಮಪಿ=ಮುಕ್ತರುಗಳಿಗೂ ಕೂಡ, ಭಕ್ತಿಃ-ಆ ಭಕ್ತಿಯು, ನಿತ್ಯಾನಂದಸ್ವರೂಪಿಣೀ=ನಿತ್ಯಾನಂದರೂಪವಾಗಿಯೇ ಇದ್ದೇ ಇರುತ್ತೆ.

ತಾತ್ಪರ್ಯ.—ದಾನ ತೀರ್ಥಯಾತ್ರೆಗಳೆಲ್ಲವೂ ಜ್ಞಾನದ್ವಾರಾ ಭಕ್ತಿಗೆ ಕಾರಣಗಳು. ಭಕ್ತಿಯೇ ಮೋಕ್ಷಕ್ಕೆ ಮುಖ್ಯಸಾಧನವೆಂಬ ಪ್ರಕ್ರಿಯೆಯನ್ನು ಉದಾಹರಿಸುತ್ತಾರೆ.—ದಾನ ಮೊದಲಾದ ಸಮಸ್ತ ಸಾಧನಗಳೂ ಭಕ್ತಿಗೋಸ್ಕರವೇ ಆಗುತ್ತವೆ. [illegible] ಭಕ್ತಿಯೇ ಸಾಕ್ಷಾತ್ತಾಗಿ ಮೋಕ್ಷಕ್ಕೆ ಸಾಧನವಾಗುತ್ತದೆ. ಮೋಕ್ಷ [illegible] ತಾವೇ ಭಕ್ತಿಮಾಡಿದರೆ ಸಾಕೆ? ಎಂದರೆ ಹೇಳುತ್ತಾರೆ. ಮುಕ್ತರುಗಳಿಗೂ ಆ ಭಕ್ತಿಯು ನಿತ್ಯಾನಂದರೂಪವಾಗಿದ್ದೇ ಇರುತ್ತದೆ.

**ಶ್ಲೋಕ ॥ ಜ್ಞಾನಪೂರ್ವಃ ಪರಃ ಸ್ನೇಹೋ ನಿತ್ಯೋ ಭಕ್ತಿರಿತೀರ್ಯತೇ ॥ ಇತ್ಯಾದಿ ವೇದವಚನಂ ಸಾಧನಪ್ರವಿಧಾಯಕಂ ॥೧೦೭॥**

ಅರ್ಥ.—ಜ್ಞಾನಪೂರ್ವಃ=ಮಾಹಾತ್ಮ್ಯ ಜ್ಞಾನ ಪೂರ್ವಕವಾಗಿಯೂ ಪರಃ=ಭಾರ್ಯಾಪುತ್ರಾದಿಗಳಲ್ಲಿ ಇರುವುದಕ್ಕಿಂತ ಅಧಿಕವಾಗಿಯೂ, ತನ್ನ ದೇಹಕ್ಕಿಂತಲೂ ಹೆಚ್ಚಾಗಿ, ನಿತ್ಯಃ=ಅತಿ ಸುದೃಢವಾಗಿರುವ, ಸ್ನೇಹಃ=ಹರಿಯಲ್ಲಿ ಮಾಡುವ ವಿಶ್ವಾಸವೇ, ಭಕ್ತಿರಿತಿ=ಭಕ್ತಿಯೆಂದು, ಈರ್ಯತೇ=ಹೇಳಲ್ಪಡುತ್ತದೆ. ಇತ್ಯಾದಿ=ಕೆಳಗೆ ಹೇಳುವ, ವೇದವಚನಂ="ತಮೇವಂ ವಿದ್ವಾನ್" ಇತ್ಯಾದಿ ವೇದವಾಕ್ಯವು, ಸಾಧನಪ್ರವಿಧಾಯಕಂ=ಸಾಧನ=ಸಾಧನೆಗಳನ್ನು, ಪ್ರವಿಧಾಯಕಂ=ಉಂಟುಮಾಡುವುದಾಗಿರುತ್ತದೆ.

ತಾತ್ಪರ್ಯ.—ಭಕ್ತಿಯ ಲಕ್ಷಣವನ್ನು ಹೇಳುತ್ತಾರೆ.—ಹರಿಯ ಮಾಹಾತ್ಮ್ಯ ಜ್ಞಾನಪೂರ್ವಕವಾಗಿಯೂ ಹೆಂಡತಿ, ಪುತ್ರ ತನ್ನ ದೇಹವೇ ಮುಂ

ತಾದವುಗಳಿಗಿಂತಲು ಅತಿ ಸುದೃಢವಾಗಿಯೂ ಹರಿಯಲ್ಲಿ ಮಾಡುವ ವಿಶ್ವಾಸವೇ ಭಕ್ತಿಯೆಂದು ಹೇಳಲ್ಪಡುತ್ತದೆ. ಹಿಂದೆ ಹೇಳಿದ "ತಮೇವಂವಿದ್ವಾನಮೃತಇಪಭವತಿ" ಮುಂತಾದ ವೇದವಾಕ್ಯಗಳು ಈ ಭಕ್ತಿಯ ಸ್ವರೂಪವನ್ನು ಸಾಧಿಸುವ ಪ್ರಮಾಣಗಳಾಗಿರುತ್ತವೆ.

**ಶ್ಲೋಕ॥ ನಿಶ್ಶೇಷಧರ್ಮಕರ್ತಾಪ್ಯ ಭಕ್ತಸ್ತೇನರಕೇಹರೇ ॥**
**ಸದಾತಿಷ್ಠತಿ ಭಕ್ತಶ್ಚೇ ದ್ಬ್ರಹ್ಮಹಾಪಿ ವಿಮುಚ್ಯತೇ ॥೧೦೪॥**

ಅರ್ಥ—ಹೇಹರೇ= ಎಲೈ ಪರಮಾತ್ಮನೆ, ಯಃ= ಯಾವನು, ಅಭಕ್ತಃ= ನಿನ್ನಲ್ಲಿ ಭಕ್ತಿ ಇಲ್ಲದವನೋ, ಸಃ= ಅವನು, ನಿಶ್ಶೇಷಧರ್ಮಕರ್ತಾಪಿ= ಸಂಪೂರ್ಣ ಧರ್ಮಗಳನ್ನು ಮಾಡಿದರೂ, ನರಕೇ= ನರಕದಲ್ಲಿ, ಸದಾ= ಯಾವಾಗಲೂ, ತಿಷ್ಠತಿ= ಇರುತ್ತಾನೆ. ಯಃ= ಯಾವನು, ತೇ= ನಿನ್ನ, ಭಕ್ತಶ್ಚೇತ್= ಭಕ್ತನಾದ ಪಕ್ಷದಲ್ಲಿ, ಸಃ= ಅವನು, ಬ್ರಹ್ಮಹಾಪಿ= ಬ್ರಹ್ಮಹತ್ಯಾದಿ ಪಾಪಗಳನ್ನು ಮಾಡಿದರೂ, ವಿಮುಚ್ಯತೇ= ಮುಕ್ತನಾಗುತ್ತಾನೆ.

ತಾತ್ಪರ್ಯ—ಈಗ ಪೂರ್ವೋಕ್ತ ಅರ್ಥಗಳನ್ನು ತಿಳಿಸುವ ಪುರಾಣವಾಕ್ಯಗಳನ್ನು ಹೇಳುತ್ತಾರೆ:–ಎಲೈ ನಾರಾಯಣನೇ ನಿನ್ನಲ್ಲಿ ಭಕ್ತಿ ಇಲ್ಲದವನು ಪೂರ್ಣವಾದ ಧರ್ಮಗಳನ್ನು ಆಚರಿಸಿದರೂ ನರಕದಲ್ಲಿಯೇ ಬೀಳುತ್ತಾನೆ. ನಿನ್ನಲ್ಲಿ ಭಕ್ತನಾದವನು ಬ್ರಹ್ಮಹತ್ಯಾದಿ ಪಾತಕಗಳನ್ನು (ಅಕಸ್ಮಾತ್ತಾಗಿ) ಮಾಡಿದರೂ ಮುಕ್ತನಾಗುತ್ತಾನೆ.

**ಶ್ಲೋಕ॥ ಧರ್ಮೋಭವತ್ಯಧರ್ಮೋಪಿ ಕೃತೋಭಕ್ತೈಸ್ತವಾಚ್ಯುತ ॥**
**ಪಾಪಂಭವತಿಧರ್ಮೋಪಿ ಯೋನಭಕ್ತೈಃ ಕೃತೋಹರೇ ॥೧೦೫॥**

ಅರ್ಥ—ಹೇಅಚ್ಯುತ= ಅಸಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತಾ ಎಂಬ ಚತುರ್ವಿಧ ನಾಶರಹಿತನಾದ ಹರಿಯೇ, ತವ= ನಿನ್ನ, ಭಕ್ತೈಃ= ಭಕ್ತರುಗಳಿಂದ (ಆಚರಿಸಿದ), ಅಧರ್ಮೋಽಪಿ= ಅಧರ್ಮಗಳೂ ಕೂಡ, ಧರ್ಮಃ= ಧರ್ಮವಾಗಿ, ಭವತಿ= ಆಗುತ್ತೆ, ಹೇಹರೇ= ಪಾಪಪರಿಹಾರಕನಾದ ಭಗವಂತನೆ, ನಭಕ್ತೈ= ಭಕ್ತರಲ್ಲದವರಿಂದ, ಕೃತಃ= ಮಾಡಲ್ಪಟ್ಟ, ಧರ್ಮೋಽಪಿ= ಧರ್ಮವೂ ಕೂಡ, ಪಾಪಂ= ಪಾಪಫಲಪ್ರದವು, ಭವತಿ= ಆಗುತ್ತೆ.

ತಾತ್ಪರ್ಯ—ಈ ಅರ್ಥವನ್ನು ಹೇಳುವ ಮತ್ತೊಂದು ಪುರಾಣದ ವಾಕ್ಯವನ್ನು ಹೇಳುತ್ತಾರೆ:-ಚತುರ್ವಿಧ ನಾಶರಹಿತನಾದ ಹರಿಯೆ! ನಿನ್ನ ಭಕ್ತರು ಅಧರ್ಮವನ್ನು ಮಾಡಿದರೂ (ಜನರಿಗೆ ಅಧರ್ಮವೆಂದು ತೋರುವ ಕಾರ್ಯಗಳನ್ನು ಮಾಡಿದರೂ) ಅವು ಧರ್ಮದ ಫಲವನ್ನೆ ಕೊಡುತ್ತವೆ. ಪಾಪ ಪರಿಹಾರಕನೇ! ನಿನ್ನಲ್ಲಿ ಭಕ್ತಿ ಇಲ್ಲದವರು ಮಾಡುವ ಧರ್ಮವೂ ಕೂಡ ಪಾಪ ಫಲವನ್ನೇ ಕೊಡುತ್ತವೆ. (ಈರೀತಿಯಾಗಿ ಭಕ್ತಿಯೇ ಮುಕ್ತಿಗೆ ಮುಖ್ಯ ಸಾಧಕವೆಂದು ಹೇಳಿದಂತಾಯಿತು.)

**ಶ್ಲೋಕ|| ಭಕ್ತ್ಯಾತ್ವನನ್ಯಯಾಶಕ್ಯಃ ಅಹಮೇವಂ ವಿಧೋಽರ್ಜುನ ||**
**ಜ್ಞಾತುಂದ್ರಷ್ಟುಂ ಚತತ್ವೇನ ಪ್ರವೇಷ್ಟುಂಚಪರಂತಪ ||೧೧೦||**

ಅರ್ಥ—ಪರಂತಪ= ಶತ್ರುಗಳನ್ನು ತಪಿಸುವ, ಹೇ ಅರ್ಜುನ= ಎಲೈ ಅರ್ಜುನನೆ, ಏವಂವಿಧಃ= ವಿಶ್ವರೂಪವುಳ್ಳ, ಅಹಂ= ನಾನು, ಅನನ್ಯಯಾ= ಸರ್ವೋತ್ತಮವಾದ, ಭಕ್ತ್ಯಾ= ಭಕ್ತಿಯಿಂದ, ತತ್ವೇನ= ಯಥಾರ್ಥವಾಗಿ, ಜ್ಞಾತುಂ= ಪರೋಕ್ಷದಿಂದ ತಿಳಿಯುವುದಕ್ಕೂ, ದ್ರಷ್ಟುಂ= ಅಪರೋಕ್ಷದಿಂದ ನೋಡುವುದಕ್ಕೂ, ಪ್ರವೇಷ್ಟುಂ= ಮುಕ್ತಿಯಲ್ಲಿ, ನನ್ನಲ್ಲಿ ಪ್ರವೇಶ ಮಾಡುವದಕ್ಕೂ, ಶಕ್ಯಃ= ಶಕ್ಯನು.

ತಾತ್ಪರ್ಯ—ಈ ಅರ್ಥವನ್ನು ಹೇಳುವ ಗೀತಾ ವಚನವನ್ನು ಹೇಳುತ್ತಾರೆ:-ಶತ್ರು ತಾಪಕನಾದ ಎಲೈ ಅರ್ಜುನನೇ ಹೀಗೆ ವಿಶ್ವರೂಪದಿಂದ ಯುಕ್ತನಾದ ನನ್ನಲ್ಲಿ ಯಥಾರ್ಥವಾಗಿ ತಿಳಿದುಕೊಳ್ಳುವುದಕ್ಕೂ, ಪ್ರತ್ಯಕ್ಷವಾಗಿ ನೋಡುವುದಕ್ಕೂ, ನನ್ನಲ್ಲಿ ಪ್ರವೇಶ ಮಾಡುವುದಕ್ಕೂ, ಜ್ಞಾನರೂಪವಾದ ಭಕ್ತಿಯಿಂದಲೇ ಸಾಧ್ಯವು. ಆ ಭಕ್ತಿಯು ರಮಾ ಬ್ರಹ್ಮಾದಿಗಳಿಗಿಂತಲೂ ಅಧಿಕವಾಗಿರಬೇಕು.

**ಶ್ಲೋಕ|| ಅನಾದಿದ್ವೇಷಿಣೋದೈತ್ಯಾ ವಿಷ್ಣೌದ್ವೇಷೋ ವಿವರ್ಧಿತಃ ||**
**ತಮಸ್ಯಂಧೇ ಪಾತಯತಿ ದೈತ್ಯಾನಾಂ ತೇವಿನಿಶ್ಚಯಾತ್ ||೧೧೧||**

ಅರ್ಥ—ಅನಾದಿದ್ವೇಷಿಣಃ= ಅನಾದಿ ದ್ವೇಷಿಗಳು, ದೈತ್ಯಾಃ= ದೈತ್ಯರುಗಳು, ವಿಷ್ಣೌ= ಹರಿಯಲ್ಲಿ, ದ್ವೇಷಃ= ದ್ವೇಷವು, ವಿವರ್ಧಿತಃ= ಹೆಚ್ಚು

ತ್ವಾಬಂದು, ಅಂತೇ= ದ್ವೇಷರೂಪವಾದ ಸಾಧನವು ಪೂರ್ತಿಯಾದಾಗ, ವಿನಿಶ್ಚಯಾತ್= ಖಂಡಿತವಾಗಿ, ದೈತ್ಯಾ೯= ರಾಕ್ಷಸರನ್ನು, ಅಂಧೇತಮಸಿ= ಅಂಧಂತಮಸ್ಸಿನಲ್ಲಿ, ಪಾತಯತಿ= ಬೀಳಿಸುತ್ತದೆ.

ತಾತ್ಪರ್ಯ— ಹೀಗೆ ಮೋಕ್ಷಕ್ಕೆ ಸಾಧನವಾದ ಭಕ್ತಿಯನ್ನು ತಿಳಿಸಿದ ನಂತರ ತಮಸ್ಸಿಗೆ ಸಾಧನವನ್ನು ತಿಳಿಸುತ್ತಾರೆ. ದೈತ್ಯರು ಅನಾದಿ ದ್ವೇಷಿಗಳು. ಅವರಿಗೆ ವಿಷ್ಣುವಿನಲ್ಲಿ ದ್ವೇಷವು ಕ್ರಮವಾಗಿ ಅಭಿವೃದ್ಧಿಯಾಗಿ, ದ್ವೇಷರೂಪವಾದ ಸಾಧನೆಯು ಪೂರ್ತಿಯಾದಾಗ ಅಂಧಂತಮಸ್ಸಿನಲ್ಲಿ ಅವರನ್ನು ನಿಶ್ಚಯವಾಗಿ ಹಾಕುತ್ತದೆ.

**ಶ್ಲೋಕ|| ಪೂರ್ಣದುಃಖಾತ್ಮಕೋದ್ವೇಷಃ ಸೋನಂತೊಹ್ಯವತಿಷ್ಠತೇ ||**
**ಪತಿತಾನಾಂತಮಸ್ಯಂಧೇ ನಿಶ್ಶೇಷಸುಖವರ್ಜಿತೇ ||೧೧೨||**

ಅರ್ಥ—ನಿಶ್ಶೇಷಸುಖವರ್ಜಿತೇ= ಸುಖದ ಗಂಧವೇ ಇಲ್ಲದಿರುವ, ತಮಸ್ಯಂಧೇ= ಅಂಧಂತಮಸ್ಸಿನಲ್ಲಿ, ಪತಿತಾನಾಂ= ಬಿದ್ದವರಿಗೆ, ಸಃದ್ವೇಷಃ= ಆ ದ್ವೇಷವು, ಪೂರ್ಣದುಃಖಾತ್ಮಕಃ= ಸಂಪೂರ್ಣ ದುಃಖ ರೂಪವಾಗಿಯೂ, ಅನಂತಃ= ಅನಂತವಾಗಿಯೂ, ಅವತಿಷ್ಠತೇ= ಇರುತ್ತದೆ, ಹಿ= ಪ್ರಸಿದ್ಧವು.

ತಾತ್ಪರ್ಯ—ದ್ವೇಷ ರೂಪವಾದ ಸಾಧನೆಯು ಅಂಧಂತಮಸ್ಸು ಆಗುವವರಿಗೆ ಇರುತ್ತದೆಯೋ? ಅನಂತರವೂ ಇರುತ್ತದೆಯೋ? ಅಥವಾ ಇರುವುದಿಲ್ಲವೇ ಎಂದರೆ, ಆ ವಿಷಯವಾಗಿ ಹೇಳುತ್ತಾರೆ:—ಸುಖದ ಗಂಧವೇ ಇಲ್ಲದಿರುವ ಅಂಧಂತಮಸ್ಸಿನಲ್ಲಿ ಬಿದ್ದ ದೈತ್ಯರುಗಳಿಗೆ ದ್ವೇಷವು ಪೂರ್ಣದುಃಖ ರೂಪವಾಗಿಯೂ ಅನಂತವಾಗಿಯೂ ಇರುತ್ತದೆ. ಇದು ಪ್ರಮಾಣ ಪ್ರಸಿದ್ಧವು.

**ಶ್ಲೋಕ|| ಜೀವಾಭೇದೋನಿರ್ಗುಣತ್ವ ಮಪೂರ್ಣಗುಣತಾತಥಾ ||**
**ಸಾಮ್ಯಾಧಿಕ್ಯೇತದನ್ಯೇಷಾಂ ಭೇದಸ್ತದ್ಗತಏವಚ ||೧೧೩||**

**ಶ್ಲೋಕ|| ಪ್ರಾದುರ್ಭಾವವಿಪರ್ಯಾಸಃ ತದ್ಭಕ್ತದ್ವೇಷಏವಚ ||**
**ತತ್ಪ್ರಮಾಣಸ್ಯನಿಂದಾಚ ದ್ವೇಷಾಏತೇಽಖಿಲಾಮತಾಃ ||೧೧೪||**

ಅರ್ಥ—ಜೀವಾಭೇದಃ= ಜೀವರುಗಳ ಅಭೇದ ಜ್ಞಾನವು, ನಿರ್ಗುಣತ್ವಂ= ಹರಿಗೆ ನಿರ್ಗುಣತ್ವ ಜ್ಞಾನವು, ಅಪೂರ್ಣಗುಣತಾ= ಗುಣಪೂರ್ಣ

ತ್ವವಿಲ್ಲವೆಂಬ ಜ್ಞಾನವು, ತಥಾ= ಹಾಗೆ, ತದನ್ಯೇಷಾಂ= ಭಗವಂತನಿಗೂ, ಇತರರಿಗೂ, ಸಾಮ್ಯಾಧಿಕ್ಯೇ= ಸಾಮ್ಯಾಧಿಕ್ಯಗಳನ್ನ ತಿಳಿಯೋಣವು, ತದ್ಗತ ಏವಚ= ತತ್= ಆ ಹರಿಯಲ್ಲಿ, ಗತಏವಚ = ಇರುವ, ಗುಣಕ್ರಿಯಾ ಅವ ಯುವಗಳಿಗೆ, ಭೇದಃ= ಭೇದಜ್ಞಾನವು, ಪ್ರಾದುರ್ಭಾವ ವಿಪರ್ಯಾಸಃ= ಅವ ತಾರಗಳ ವ್ಯತ್ಯಾಸ ಜ್ಞಾನವು, ತದ್ಭಕ್ತದ್ವೇಷಏವಚ= ಭಗವದ್ಭಕ್ತರುಗಳಲ್ಲಿ ದ್ವೇಷ ಮಾಡುವದೂ ಕೂಡ, ತತ್ಪ್ರಮಾಣಸ್ಯ= ಹರಿಗೆ ಉತ್ತಮತ್ವವನ್ನು ಪ್ರತಿಪಾದನೆ ಮಾಡತಕ್ಕ ಪ್ರಮಾಣಗಳ, ನಿಂದಾಚ= ದೂಷಿಸುವುದು, ಅಖಿಲಾಃ= ಸಮಸ್ತವಾದ, ಏತೇ= ಇವುಗಳು, ದ್ವೇಷಾಃ= ದ್ವೇಷಗಳೆಂದು, ಮತಾಃ ಸಜ್ಜನರ ಅಭಿಪ್ರಾಯವು.

ತಾತ್ಪರ್ಯ—ದ್ವೇಷ ಸ್ವರೂಪವನ್ನು ಹೇಳುತ್ತಾರೆ :– (೧) ಈಶ ಜೀವ ರುಗಳ ಅಭೇದ ಜ್ಞಾನವು, (೨) ಹರಿಗೆ ನಿರ್ಗುಣತ್ವ ಜ್ಞಾನವು, (೩) ಹರಿಗೆ ಗುಣಪೂರ್ಣತ್ವವಿಲ್ಲವೆಂಬ ಜ್ಞಾನವು, (೪) ಹರಿಗೂ ಇತರರಿಗೂ ಸಾಮ್ಯ ವನ್ನೂ ಅಧಿಕ್ಯತೆಯನ್ನೂ ತಿಳಿಯೋಣವು, (೫) ಹರಿಯ ಸ್ವಗತ ಗುಣ ಕ್ರಿಯಾ ಅವಯುವಗಳಿಗೆ ಭೇದವನ್ನು ತಿಳಿಯೋಣವು, (೬) ಅವತಾರಗಳ ವ್ಯತ್ಯಾಸ ಜ್ಞಾನವು, (ಭಗವಂತನ ಅವತಾರವಲ್ಲ ಅವತಾರವೆಂದು ತಿಳಿಯು ವದು ಮತ್ತು ಅವತಾರಗಳನ್ನು ಅವತಾರವಲ್ಲವೆಂದು ತಿಳಿಯುವದು) (೭) ಭಗವದ್ಭಕ್ತರನ್ನು ದೂಷಿಸುವುದು ಇವೇ ಮುಂತಾದವುಗಳು ದ್ವೇಷ ಗಳೆಂದು ಪ್ರಾಮಾಣಿಕರಾದ ಸಜ್ಜನರ ಅಭಿಪ್ರಾಯವು.

**ಶ್ಲೋಕ॥ ಏತೈರ್ವಿಹೀನಾಯಾಭಕ್ತಿ ಸಾಭಕ್ತಿರಿತಿನಿಶ್ಚಿತಾ ॥**
**ಅನಾದಿಭಕ್ತಿರ್ದೇವಾನಾಂ ಕ್ರಮಾದ್ವೃದ್ಧಿಂಗತೈವಸಾ ॥೧೧೫॥**

**ಶ್ಲೋಕ॥ ಅಪರೋಕ್ಷದೃಶೇರ್ಹೇತು ರ್ಮುಕ್ತಿಹೇತುಶ್ಚಸಾಪು ನಃ ॥**
**ಸ್ವಾನಂದಸ್ವರೂಪೇಣ ನಿತ್ಯಾಮುಕ್ತೇಷುತಿಷ್ಠತಿ ॥೧೧೬॥**

ಅರ್ಥ—ಏತೈಃ= ಪೂರ್ವೋಕ್ತ ದೋಷಗಳಿಂದ,ವಿಹೀನಾ= ಬಿಟ್ಟಿರುವ, ಯಾ= ಯಾವ, ಭಕ್ತಿಃ= ಮಾಹಾತ್ಮ್ಯಜ್ಞಾನ ಪೂರ್ವಕ ಸುದೃಢಸ್ನೇಹವೋ ಸಾ= ಅದು,ಭಕ್ತಿರಿತಿ= ಭಕ್ತಿ ಎಂಬುದಾಗಿ, ನಿಶ್ಚಿತಾ= ನಿಶ್ಚಯಿಸಲ್ಪಟ್ಟದೆ.

ದೇವಾನಾಂ-ದೇವತೆಗಳಿಗೆ, ಭಕ್ತಿಃ-ಭಕ್ತಿಯು, ಅನಾದಿಃ = ಅನಾದಿಕಾಲದಿಂದಲೂ ಇರುವದು. ಸಾ-ಆ ಭಕ್ತಿಯೇ, ಕ್ರಮಾತ್-ಕ್ರಮೇಣದಿಂದ, ವೃದ್ಧಿಗತೇವ-ಅಭಿವೃದ್ಧಿಯಾಗಿಯೇ, ಅಪರೋಕ್ಷದೃಶೇ=ದೇವರ ಅಪರೋಕ್ಷದೃಶೇ=ದೇವರ ಅಪರೋಕ್ಷ ಜ್ಞಾನಕ್ಕೆ, ಹೇತುಃ = ಕಾರಣವಾಗುತ್ತದೆ. ಸಾ-ಆ ಭಕ್ತಿಯೇ, ಪುನಃ-ತಿರುಗಿ, ಮುಕ್ತಿಹೇತುಶ್ಚ=ಮುಕ್ತಿಗೆ ಕಾರಣವೂ ಆಗುತ್ತೆ. ಸೈವ=ಆ ಭಕ್ತಿಯೇ, ಮುಕ್ತೇಷು=ಮುಕ್ತರುಗಳಲ್ಲಿ, ಆನಂದ ಸ್ವರೂಪೇಣ-ಆನಂದ ರೂಪದಿಂದ, ನಿತ್ಯಾ-ನಿತ್ಯವಾಗಿ, ತಿಷ್ಠತಿ=ಇರುತ್ತೆ.

ತಾತ್ಪರ್ಯ.—ಭಕ್ತಿಯಲ್ಲಿ ವಿಶೇಷವನ್ನು ಹೇಳುತ್ತಾರೆ.—ಹಿಂದೆ ಹೇಳಿದ ದೋಷಗಳಿಂದ ಬಿಡಲ್ಪಟ್ಟ ಭಕ್ತಿಯೇ ಭಕ್ತಿ ಎಂದು ನಿಶ್ಚಯಿಸಲ್ಪಟ್ಟಿದೆ. ದೇವತೆಗಳ ಭಕ್ತಿಯು ಅನಾದಿ, ಅದು ಕ್ರಮಕ್ರಮವಾಗಿ ಅಭಿವೃದ್ಧಿಯಾಗಿ ಹರಿಯ ಅಪರೋಕ್ಷ ಜ್ಞಾನಕ್ಕೆ ಕಾರಣವಾಗುತ್ತದೆ. ಅದೇ ಮುಕ್ತಿಗೂ ಹೇತುವಾಗುವದು. ಇದೇ ಭಕ್ತಿಯು ಮುಕ್ತರಲ್ಲಿ ಆನಂದ ಸ್ವರೂಪವಾಗಿ ಪರಿಣಮಿಸುವದು. (ನಿತ್ಯವಾಗಿ ಮುಕ್ತರಲ್ಲಿರುತ್ತದೆ)

**ಶ್ಲೋಕ ॥ ಯಥಾಶೌಕ್ಲ್ಯಾದಿಕಂ ರೂಪಂಗೋರ್ಭವತ್ಯೇವ ಸರ್ವದಾ ॥ ಸುಖಜ್ಞಾನಾದಿಕಂ ರೂಪಮೇವಂ ಭಕ್ತೇರ್ನಚಾನ್ಯಥಾ ॥೧೧೭॥**

**ಭಕ್ತ್ಯೈವತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನಕೇನಚಿತ್ ॥ ಸಏವಮುಕ್ತಿದಾತಾಚ ಭಕ್ತಿಸ್ತತ್ರೈವಕಾರಣಂ ॥೧೧೮॥**

**ಬ್ರಹ್ಮಾದೀನಾಂಚ ಮುಕ್ತಾನಾಂ ತಾರತಮ್ಯೇಕಕಾರಣಂ ॥ ತಾರತಮ್ಯಸ್ಥಿತಾನಾದಿನಿತ್ಯಾ ಭಕ್ತಿರ್ನಚೇತರತ್ ॥೧೧೯॥**

ಅರ್ಥ.—ಗೋಃ=ಹಸುವಿಗೆ, ಶೌಕ್ಲ್ಯಾದಿಕಂ=ಶುಕ್ಲವರ್ಣವೇ ಮೊದಲಾದ, ರೂಪಂ=ರೂಪವು, ಯಥಾ=ಹೇಗೆ, ಸರ್ವದೈವ=ಎಲ್ಲಾ ಕಾಲದಲ್ಲಿಯೂ, ಭವತಿ=ಇರುತ್ತದೆಯೋ, ಏವಂ=ಹಾಗೆ, ಭಕ್ತೇಃ-ಭಕ್ತಿಗೆ, ಸುಖಜ್ಞಾನಾದಿಕಂ-ಸುಖ ಜ್ಞಾನಾದಿಗಳ, ರೂಪಂ=ರೂಪವು, ಭವತಿ=ಆಗುತ್ತೆ. ಅನ್ಯಥಾ-ಬೇರೆ ರೀತಿಯಾಗಿ, ನ=ಇಲ್ಲವು. ವಿಷ್ಣುಃ=ನಾರಾಯಣನು, ಭಕ್ತ್ಯೈವ=ಭಕ್ತಿಯಿಂದಲೇ, ತುಷ್ಟಿಂ-ಸಂತೋಷವನ್ನು, ಅಭ್ಯೇತಿ-ಹೊಂದುತ್ತಾನೆ. ಅನ್ಯೇನ ಬೇರೆಯಾದ; ಕೇನಚಿತ್=ಯಾವ ಸಾಧನಗಳಿಂದಲೂ

ನ-ಇಲ್ಲವು. ಕಪಿಲ=ಆ ಜೀವಿಯೇ, ಮುಕ್ತಿದಾತಾಚ=ಮುಕ್ತಿ ಕೊಡತಕ್ಕವರು, ತತ್ರೈವ=ಮೋಕ್ಷವನ್ನು ಕೊಡುವುದರಲ್ಲಿ, ಭಕ್ತಿಃ=ಭಕ್ತಿಯೇ, ಕಾರಣಂ=ಸಾಧನೆಯು, ತಾರತಮ್ಯಸ್ಥಿತಾ-ತಾರತಮ್ಯರೂಪವಾಗಿರುವ, ಅನಾದಿನಿತ್ಯಾ=ಅನಾದಿ ನಿತ್ಯವಾದ, ಭಕ್ತಿಃ=ಭಕ್ತಿಯು, ಬ್ರಹ್ಮಾದೀನಾಂ=ಬ್ರಹ್ಮಾದಿಗಳ, ಚ-ಮತ್ತು, ಮುಕ್ತಾನಾಂ-ಮುಕ್ತರುಗಳ, ತಾರತಮ್ಯೇಷು=ತಾರತಮ್ಯಕ್ಕೆ, ಕಾರಣಂ-ಕಾರಣಭೂತವು, ಇತರತ್=ಬೇರೆಯಾದ ಕಾರಣವು, ನಚ=ಇಲ್ಲವು.

ತಾತ್ಪರ್ಯ.—( ಭಕ್ತಿಯು ಆನಂದರೂಪವಾಗಿರುವುದೆಂದು ಹೇಳಿದ್ದರಿಂದ ಭಕ್ತಿಗೂ ಆನಂದಾದಿಗಳಿಗೂ ಭೇದವಿದೆ ಎಂಬುವುದನ್ನು ದೃಷ್ಟಾಂತವನ್ನು ಹೇಳಿ ಪರಿಹರಿಸುತ್ತಾರೆ. ) ಗೋವಿಗೆ ಶುಕ್ಲಾದಿ ವರ್ಣಗಳು ಯಾವಾಗಲೂ ಅದರ ಸಂಗಡಲೇ ಹೇಗೆ ಇರುತ್ತವೆಯೋ ಹಾಗೆ ಭಕ್ತಿಗೂ ಸುಖಜ್ಞಾನಾದಿಗಳು ಯಾವಾಗಲೂ ಇರುತ್ತವೆ. ಇದಕ್ಕೆ ವ್ಯತ್ಯಾಸವಿಲ್ಲ. ( ಭಕ್ತಿಯೇ ಜ್ಞಾನ ಮೋಕ್ಷಗಳಿಗೆ ಕಾರಣವೆಂದು ಹಿಂದೆ ಹೇಳಿದ್ದನ್ನು ದೃಢಪಡಿಸುತ್ತಾರೆ ) ಭಗವಂತನು ಭಕ್ತಿಯಿಂದಲೇ ತುಷ್ಟನಾಗುತ್ತಾನೆ. ಬೇರೆ ಯಾವ ಸಾಧನೆಗಳಿಂದಲೂ ತುಷ್ಟನಾಗುವುದಿಲ್ಲ. ಭಕ್ತಿಯಿಂದ ತುಷ್ಟನಾದ ಭಗವಂತನೇ ಮೋಕ್ಷವನ್ನು ಕೊಡತಕ್ಕವನು. ಆ ಹರಿಯು ಸಂತುಷ್ಟನಾಗಿ ಮೋಕ್ಷ ಕೊಡಲು ಭಕ್ತಿಯೇ ಕಾರಣವು. ಬ್ರಹ್ಮಾದಿ ದೇವತೆಗಳ ತಾರತಮ್ಯಕ್ಕೂ ಈ ಭಕ್ತಿಯೇ ನಿಮಿತ್ತವೆಂದು ಹೇಳುತ್ತಾರೆ. ತಾರತಮ್ಯದಿಂದ ಅನಾದಿಯಾಗಿಯೂ ನಿತ್ಯವಾಗಿಯೂ ಇರುವ ಭಕ್ತಿಯೇ ಬ್ರಹ್ಮಾದಿ ದೇವತೆಗಳು ಮುಕ್ತರಾದ ಕಾಲದಲ್ಲಿಯೂ ಅವರಿಗೆ ತಾರತಮ್ಯಕ್ಕೆ ಕಾರಣವು. ಭಕ್ತಿ ಇಲ್ಲದೆ ಬೇರೆ ಯಾವದೂ ಕಾರಣವಾಗುವುದಿಲ್ಲ.

**ಶ್ಲೋಕ ॥ ಮಾನುಷೇಷ್ವಧಮಾಃ ಚಿದ್ವೇಷಯುಕ್ತಾಃ ಸದಾಹತಾಃ ॥ ದುಃಖನಿಷ್ಠಾಸ್ತತಸ್ತೇಽಪಿ ನಿತ್ಯಮೇವನ ಸಂಶಯಃ ॥೧೨೦॥**

ಅರ್ಥ.— ಹರೌ=ನಾರಾಯಣನಲ್ಲಿ, ಸದಾ=ಯಾವಾಗಲೂ; ಕಿಂಚಿತ್=ಸ್ವಲ್ಪ, ದ್ವೇಷಯುಕ್ತಾಃ-ದ್ವೇಷದಿಂದ ಕೂಡಿದವರು, ಮಾನುಷೇಷು=ಮನುಷ್ಯರುಗಳಲ್ಲಿ, ಅಧಮಾಃ-ಅಧಮರು, ತತಃ=ದ್ವೇಷಯುಕ್ತರಾದ್ದರಿಂದಲೇ, ನಿತ್ಯಮೇವ = ನಿರಂತರವಾಗಿ, ತೇಽಪಿ = ಅವರೂ ಕೂಡ, ದುಃಖ

ನಿವಾತ್- ದುಃಖವನ್ನೇ ಅನುಭವಿಸುತ್ತಾನೆ, ನಸಂಶಯಃ=ಈ ವಿಚಾರದಲ್ಲಿ ಸಂಶಯವಿಲ್ಲವು.

ತಾತ್ಪರ್ಯ.— ಮನುಷ್ಯಾಧಮರು ಹರಿಯಲ್ಲಿ ಯಾವಾಗಲೂ ಸ್ವಲ್ಪ ದ್ವೇಷವನ್ನು ಮಾಡುವರು. ಈ ರೀತಿ ಹರಿಯಲ್ಲಿ ದ್ವೇಷಾಯುಕ್ತರಾದ ಪ್ರಯುಕ್ತ ಅವರು ನಿಯತವಾಗಿ ದುಃಖ ನಿಷ್ಠವಾದ ತಮಸ್ಸನ್ನು ಹೊಂದುವರು. ಈ ವಿಚಾರದಲ್ಲಿ ಸಂಶಯವಿಲ್ಲ. ಸದಾ ಹರಿಯಲ್ಲಿ ಸ್ವಲ್ಪ ದ್ವೇಷ ಉಳ್ಳವರಿಗೂ ತಮಃ ಪ್ರಾಪ್ತಿಯೆಂದು ತಿಳಿಯಬೇಕು.

ಶ್ಲೋಕ ॥ ಮಧ್ಯಮಾ ಮಿಶ್ರಭೂತತ್ವಾ ನಿತ್ಯಂ ಮಿಶ್ರಫಲಾಃಸ್ಮೃತಾಃ ॥ ಕಿಂಚಿದ್ಭಕ್ತಿಯುತಾ ನಿತ್ಯಮುತ್ತಮಾಸ್ತೇನಮೋಕ್ಷಿಣಃ ॥೧೨॥

ಅರ್ಥ.— ಮಧ್ಯಮಾಃ=ಮನುಷ್ಯರಲ್ಲಿ ಮಧ್ಯಮರು, ಮಿಶ್ರಭೂತತ್ವಾತ್=ಮಿಶ್ರ ಜ್ಞಾನ ಉಳ್ಳವರಾದ್ದರಿಂದಲೇ, ಮಿಶ್ರಫಲಾಃ-ಮಿಶ್ರ ಫಲ ಉಳ್ಳವರೆಂಬುದಾಗಿ, ಸ್ಮೃತಾಃ-ಹೇಳಲ್ಪಟ್ಟಿರುತ್ತಾರೆ. ಉತ್ತಮಾಃ=ಮನುಷ್ಯೋತ್ತಮರು (ಭಗವಂತನಲ್ಲಿ) ನಿತ್ಯಂ=ನಿರಂತರದಲ್ಲಿಯೂ, ಕಿಂಚಿತ್=ಸ್ವಲ್ಪ, ಭಕ್ತಿಯುತಾಃ-ಭಕ್ತಿಯಿಂದಲೇ, ಮೋಕ್ಷಿಣಃ-ಮೋಕ್ಷವನ್ನು ಹೊಂದುತ್ತಾರೆ.

ತಾತ್ಪರ್ಯ.— ಮನುಷ್ಯರುಗಳಲ್ಲಿ ಮಧ್ಯಮರು ಮಿಶ್ರಜ್ಞಾನ ಉಳ್ಳವರು. ಅದ್ದರಿಂದ ಮಿಶ್ರ ಫಲವನ್ನು ಹೊಂದುತ್ತಾರೆ. (ಅಂದರೆ ಸ್ವರ್ಗ, ನರಕ, ಭೂಲೋಕ ಪ್ರಾಪ್ತಿರೂಪವಾದ ಫಲವನ್ನೇ ಹೊಂದುತ್ತಾರೆ) ಉತ್ತಮರು ಭಗವಂತನಲ್ಲಿ ನಿರಂತರ ಸ್ವಲ್ಪ ಭಕ್ತಿಯುಳ್ಳವರಾಗಿರುತ್ತಾರೆ. ಆ ಭಕ್ತಿಯಿಂದಲೇ ಅವರು ಮೋಕ್ಷವನ್ನು ಹೊಂದುತ್ತಾರೆ.

ವಿಶೇಷಾರ್ಥ.— ಮಿಶ್ರಜ್ಞಾನವೆಂದರೆ.— ಹರಿಯ ಸರ್ವೋತ್ತಮತ್ವ ವಿಚಾರದಲ್ಲಿ ಸಂದೇಹವಿರುವಿಕೆ. ಸಂದೇಹದಲ್ಲಿ ಎರಡು ಭಾಗ, ಹರಿಯ ಸರ್ವೋತ್ತಮತ್ವದಲ್ಲಿ ಸಂದೇಹ ಅಥವಾ ಮಾಹಾತ್ಮ್ಯ ಜ್ಞಾನದಲ್ಲಿ ಸಂದೇಹ ಇಂತಹ ಸಂದೇಹದಿಂದ ಕೂಡಿದ ಭಕ್ತಿಗೆ ಮಿಶ್ರ ಭಕ್ತಿ ಎಂದೂ ಹೆಸರು. ಮಿಶ್ರಭೂತವೆಂಬುದಕ್ಕೆ ಇತರರು ಉತ್ತಮರಿಲ್ಲವೆಂಬ ಜ್ಞಾನದಿಂದ ಸಹಿ

ತರಾಗಿ ವಿಷ್ಣುವೇ ಸರ್ವೋತ್ತಮನೆಂಬ ಜ್ಞಾನದಲ್ಲಿ ಸಂದೇಹವಿರೋಧವೆಂಬರ್ಥ. ದೋಷದಿಂದ ಕಾಮಿದೋಷವೆಂದು ಅರ್ಥವಲ್ಲ. ರಾಜಸನಾದ ಅಜ್ಞಾನಿಗೂ ತಾಮಸನಾದ ಅಜ್ಞಾನಿಗೂ ದ್ವೇಷವಿಲ್ಲವೆಂದು ಗೀತಾ ತಾತ್ಪರ್ಯದಲ್ಲಿ ಹೇಳಿದೆ. “ತ್ರ್ಯವಿದ್ಯಮಾತ್ರಾವಿಷ್ಣೋರ್ಯೇಸರ್ವಾಧಿಕ್ಯೇನಸಂಶಯಾಃ || ಅಸ್ಮಾಧಿಕ್ಯಂ ನಮನ್ಯಂತೇ ಶ್ರೀಶಾದ್ರಾಜಸರಾಜಸಾಃ | ಅಜ್ಞಾಃ ವಿಷ್ಣೋಃ ದ್ವೇಷಹೀನಾಃ ಸರ್ವೇ ರಾಜಸತಾಮಸಾಃ ||

**ಶ್ಲೋಕ || ಬ್ರಹ್ಮಣಃ ಪರಮಾಭಕ್ತಿಃ ಸರ್ವೇಭ್ಯಃ ಪರಮಸ್ತತಃ | ಇತ್ಯಾದೀನಿ ಚವಾಕ್ಯಾನಿ ಪುರಾಣೇಷು ಪೃಥಕ್ ಪೃಥಕ್ ||೧೨೨||**

ಅರ್ಥ.— ಬ್ರಹ್ಮಣ=ಬ್ರಹ್ಮದೇವರಿಗೆ, ಪರಮಾ = ಸರ್ವರಿಗಿಂತಲೂ ಅಧಿಕವಾದ, ಭಕ್ತಿಃ= ಭಕ್ತಿಯು, ಅಸ್ತಿ=ಇರುತ್ತದೆ. ತತಃ=ಆಭಕ್ತಿಯುಕ್ತದಿಂದಲೇ, ಸರ್ವೇಭ್ಯಃ=ಎಲ್ಲಾ ದೇವತೆಗಳಿಗಿಂತಲೂ, ಪರಮಃ=ಉತ್ತಮರು, ಇತ್ಯಾದೀನಿ= ಇದೇ ಮೊದಲಾದ, ವಾಕ್ಯಾನಿ=ವಾಕ್ಯಗಳು, ಪುರಾಣೇಷು-ಪುರಾಣಗಳಲ್ಲಿ, ಪೃಥಕ್‌ಪೃಥಕ್- ಪ್ರತ್ಯೇಕ ಪ್ರತ್ಯೇಕವಾಗಿವೆ.

ತಾತ್ಪರ್ಯ.— ಬ್ರಹ್ಮ, ವಾಯುದೇವರುಗಳಿಗೆ ಎಲ್ಲರಿಗಿಂತಲೂ ಅಧಿಕವಾದ ಭಕ್ತಿ ಇರುತ್ತದೆ. ಆದ್ದರಿಂದ ಅವರು ಸರ್ವರಿಗಿಂತಲೂ ಉತ್ತಮಾಧಿಕಾರಿಗಳು. ಹೀಗೆ ಹೇಳುವ ಅನೇಕ ವಾಕ್ಯಗಳು ಅನೇಕ ಪುರಾಣಗಳಲ್ಲಿ ಬೇರೆಬೇರೆಯಾಗಿ ಇರೋಣದರಿಂದ ಬ್ರಹ್ಮದೇವರು ಅಧಿಕಾರಿಗಳಲ್ಲಿ ಉತ್ತಮರೆಂದು ತಿಳಿಯಬೇಕು.

**ಷಣ್ಣವತ್ಯಂಗುಲೋಯುಸ್ತು ನ್ಯಗ್ರೋಧಪರಿಮಂಡಲಃ || ಸಪ್ತಪಾದ ಶ್ಚತುರ್ಹಸ್ತೋ ದ್ವಾತ್ರಿಂಶ ಲಕ್ಷಣೈರ್ಯುತಃ ||೧೨೪||**

**ಅಸಂಶಯಃ ಸಂಶಯಚ್ಛಿದ್ಗುರುರುಕ್ತೋ ಮನೀಷಿಭಿಃ || ತಸ್ಮಾದ್ಬ್ರಹ್ಮಾ ಗುರುಮುಖ್ಯಃ ಸರ್ವೇಷಾಮೇವ ಸರ್ವದಾ ||೧೨೫||**

ಅರ್ಥ.— ಷಣ್ಣವತ್ಯಂಗುಲಃ-೯೬ ಅಂಗುಲ ಎತ್ತರವಾಗಿಯೂ, ನ್ಯಗ್ರೋಧಪರಿಮಂಡಲಃ=ಒಂದುಬಾರು ಔನ್ನತ್ಯ ಉಳ್ಳವರಾಗಿಯೂ, ಸಪ್ತಪಾದಃ-೭ ಹೆಜ್ಜೆ ಔನ್ನತ್ಯ ಉಳ್ಳವರಾಗಿಯೂ, ಚತುರ್ಹಸ್ತಃ=ನಾಲ್ಕುಮೊಳ

ಉನ್ನತರಾಗಿಯೂ, ದ್ವಾತ್ರಿಂಶಲ್ಲಕ್ಷಣೈಃ=೩೨ ಲಕ್ಷಣಗಳಿಂದ, ಯುಕ್ತಾಃ= ಕೂಡಿದವರಾಗಿಯೂ, ಅಸಂಶಯಾಃ=ಸಂಶಯಗಳಿಲ್ಲದವರಾಗಿಯೂ ಇರತಕ್ಕವರು, ಗುರವಃ=ಗುರುಗಳು ಎಂಬುದಾಗಿ, ಮನೀಷಿಭಿಃ=ಜ್ಞಾನಿಗಳಿಂದ, ಉಕ್ತಾಃ=ಹೇಳಿಸಿಕೊಳ್ಳುತ್ತಾರೆ ತಸ್ಮಾತ್=ಇವುಗಳು ಗುರುಗಳ ಲಕ್ಷಣವಾದ್ದರಿಂದಲೂ ಮತ್ತು ಬ್ರಹ್ಮದೇವನಲ್ಲಿರುವುದರಿಂದಲೂ, ಬ್ರಹ್ಮ=ಚತುರ್ಮುಖಬ್ರಹ್ಮದೇವನು, ಸರ್ವೇಷಾಂ-ಮನುಷ್ಯಯೋಗ್ಯಜೀವರುಗಳಿಗೂ ಸರ್ವದಾ=ಎಲ್ಲಾಕಾಲದಲ್ಲಿಯೂ, ಮುಖ್ಯಃ=ಮುಖ್ಯರಾದ, ಗುರುಃ=ಗುರುಗಳು ಆಗಿರುತ್ತಾರೆ.

ತಾತ್ಪರ್ಯ.—ದೇವರಲ್ಲಿ ಭಕ್ತಿಮಾಡುವಹಾಗೆ ಯೋಗ್ಯತಾನುಸಾರ ಗುರುಗಳಲ್ಲಿಯೂ ಭಕ್ತಿಮಾಡಬೇಕೆಂದು ಗುರುಗಳ ಲಕ್ಷಣಗಳನ್ನು ಹೇಳುತ್ತಾರೆ. ೯೬ ಅಂಗುಲ ಉನ್ನತರಾಗಿಯೂ, ೧೨೦ರು ಉನ್ನತರಾಗಿಯೂ ೪ಮೊಳ ಉನ್ನತರಾಗಿಯೂ, ೭ಹೆಜ್ಜೆ ಉನ್ನತರಾಗಿಯೂ, ೩೨ ಲಕ್ಷಣಗಳಿಂದ ಯುಕ್ತರಾಗಿಯೂ, ಸಂಶಯಗಳಿಲ್ಲದವರಾಗಿಯೂ, ಇತರರ ಸಂಶಯಗಳನ್ನು ಪರಿಹರಿಸುವವರಾಗಿಯೂ, ಇರುವವರನ್ನು ಜ್ಞಾನಿಗಳು ಗುರುಗಳೆಂದು ಹೇಳುತ್ತಾರೆ. ಈ ಲಕ್ಷಣಗಳು ಜೀವರುಗಳೊಳಗೆ ಬ್ರಹ್ಮವಾಯುಗಳಿಗೆ ಮಾತ್ರ ಇರುವುದರಿಂದ ಅವರೇ ಸರ್ವಯೋಗ್ಯ ಜೀವರುಗಳಿಗೂ ಮುಖ್ಯಗುರುಗಳು ಎಂದು ತಿಳಿಯಬೇಕು.

### ೩೨ ಸುಲಕ್ಷಣಗಳು ಯಾವುವೆಂದರೆ.

ದೀರ್ಘಪಂಚಃ—(೧) ಭುಜ (೨) ನೇತ್ರ (೩) ಕೆನ್ನೆ (೪) ಕಿವಿ (೫) ಮೂಗು.

ಸೂಕ್ಷ್ಮಪಂಚಃ—(೧) ಚರ್ಮ (೨) ಕೂದಲು (೩) ಉಗುರು (೪) ಬೆರಳು. (೫) ಕೈಬೆರಳಿನ ಗಿಣ್ಣು.

ಸಪ್ತರಕ್ತಃ—(೧) ಅಂಗಾಲುಗಳು ಎರಡು (೨) ಕೊನೆಕಣ್ಣು (೩) ಅಂಗಳು (೪) ನಾಲಿಗೆ (೫) ಕೆಳತುಟಿ (೬) ಉಗುರು.

ಷಡುನ್ನತಿಃ—[೧] ವಕ್ಷಸ್ಥಳ [೨] ಕಿಬ್ಬೊಟ್ಟೆ [೩] ಹಣೆ [೪] ಹೆಗಲು. [೫] ಮುಂಗೈ [೬] ಮುಂಗಾಲು.

ತ್ರಿಪೃಥು (ವಿಸ್ತಾರ) :— (೧) ಲಲಾಟ (ಹಣೆಯ ಮೇಲ್ಭಾಗ) (೨) ಸೊಂಟ (೩) ವಕ್ಷ (ಎದೆ)

ತ್ರಿಹ್ರಸ್ವ (ಸೂಕ್ಷ್ಮ) :— (೧) ನಡುವು (೨) ಕುತ್ತಿಗೆ (೩) ನಡುವಿನ ಹಿಂಭಾಗ (ಪಿರ್ರಿ)

ತ್ರಿಗಂಭೀರ:— (೧) ಹೊಕ್ಕಳು (೨) ಹೃದಯ (೩) ಗುಹ್ಯಪ್ರದೇಶ.

(ಪಂಚದೀರ್ಘಃ ಸಪ್ತರಕ್ತಃ ಪಂಚಸೂಕ್ಷ್ಮಃ ಷಡುನ್ನತಿಃ ॥ ತ್ರಿಲಘುಃ ತ್ರಿಪೃಥುರ್ಗಂಭೀರೋದ್ವಾತ್ರಿಂಶಲ್ಲಕ್ಷಣಾನಿತು ॥ )

**ಶ್ಲೋಕ ॥ ಅನ್ಯೇಽಪಿ ಸ್ವಾತ್ಮನೋ ಮುಖ್ಯಾಃ ಕ್ರಮಾದ್ಗುರವ ಈರಿತಾಃ । ಕ್ರಮಾಲ್ಲಕ್ಷಣಹೀನಾಶ್ಚ ಲಕ್ಷಣಾಲಕ್ಷಣೈಸ್ಸಮಾಃ ॥೧೨೫॥**
**ಮಾನುಷಾಮಧ್ಯಮಾಃ ಸಮ್ಯಗ್ದುರ್ಲಕ್ಷಣಯುತಃ ಕಲಿಃ ॥ ಸಮ್ಯಗ್ಲಕ್ಷಣ ಸಂಪನ್ನೋಽಯದ್ಧದ್ಯಾತ್ಸು ಪ್ರಸನ್ನಧೀಃ ॥೧೨೬॥**

ಅರ್ಥ.— ಬ್ರಹ್ಮದೇವರು ಮುಖ್ಯಗುರುಗಳೆಂದು ಹೇಳಿದ್ದರಿಂದ ಇತರ ಸಾಮಾನ್ಯ ಗುರುಗಳು ಇದ್ದಾರೆಂದು ಸೂಚಿಸಿದಂತಾಯಿತು. ಸ್ವಾತ್ಮನಃ=ತನಗಿಂತಲೂ, ಮುಖ್ಯಾಃ-ಶ್ರೇಷ್ಠರಾದ, ಅನ್ಯೇಽಪಿ-ಇತರರೂ ಕೂಡ, ಕ್ರಮಾತ್=ತಾರತಮ್ಯಾನುಸಾರವಾಗಿ, ಗುರವಃ=ಗುರುಗಳು ಎಂದು ಈರಿತಾಃ=ಹೇಳಲ್ಪಟ್ಟಿದ್ದಾರೆ, ಕ್ರಮಾತ್=ಇವರುಗಳು ಕ್ರಮವಾಗಿ, ಲಕ್ಷಣಹೀನಾಃ-ಲಕ್ಷಣಗಳಲ್ಲಿ ಕಡಿಮೆಯಾಗಿಯೂ ಇರುತ್ತಾರೆ. ಮಧ್ಯಮಾಃ=ನಿತ್ಯಸಂಸಾರಿಗಳಾದ, ಮಾನುಷಾಃ-ಮನುಷ್ಯರು, ಲಕ್ಷಣಾಲಕ್ಷಣೈಃ=ಸುಲಕ್ಷಣ ಅವಲಕ್ಷಣಗಳಿಂದ, ಸಮಾಃ=ಸಮರಾಗಿರುತ್ತಾರೆ. ಕಲಿಃ=ಕಲಿಪುರುಷನು, ಸಮ್ಯಕ್-ಚೆನ್ನಾಗಿ, ದುರ್ಲಕ್ಷಣಯುತಃ = ದುರ್ಲಕ್ಷಣಗಳಿಂದಲೇ ಕೂಡಿರುತ್ತಾನೆ.

ತಾತ್ಪರ್ಯ.— ಬ್ರಹ್ಮದೇವರು ಮುಖ್ಯಗುರುಗಳೆಂದು ಹೇಳಿದ್ದರಿಂದ ಇತರ ಗುರುಗಳಿರುವರೆಂದು ಸೂಚಿಸಿದೆ. ಆದ್ದರಿಂದ ಆ ಗುರುಗಳ ಲಕ್ಷಣವನ್ನು ತಿಳಿಸುತ್ತಾರೆ.— ತನಗಿಂತ ತಾರತಮ್ಯದಲ್ಲಿ ಶ್ರೇಷ್ಠರಾದವರು, ಕ್ರಮಾನುಸಾರವಾಗಿ ತನಗೆ ಗುರುಗಳೆಂತ ಹೇಳಿರುತ್ತೆ. (ತಾರತಮ್ಯಕ್ಕೆ ನಿಮಿತ್ತವನ್ನೇ ಹೇಳುತ್ತಾರೆ.) ಇಂದ್ರದೇವರು ಮೊದಲು ಎಲ್ಲರೂ ಕ್ರಮವಾಗಿ ಸಲ್ಲಕ್ಷಣಗಳಲ್ಲಿ ಕಡಿಮೆಯಾಗಿರುತ್ತಾರೆ. ಇಷ್ಟೇ ಅಲ್ಲ. ಅವರಿಗೆ ದುರ್ಲಕ್ಷಣಗಳೂ ಇರುತ್ತವೆ. ಮನುಷ್ಯೋತ್ತಮರಿಗಿಂತ ಕಡಿಮೆಯಾದವರಿಗೆ

ಮೋಕ್ಷವಾಗದೇ ಇರುವದಕ್ಕೆ ಕಾರಣ ಹೇಳುತ್ತಾರೆ.— ಮಧ್ಯಮ ಮನುಷ್ಯರು ದುರ್ಲಕ್ಷಣಗಳಿಂದಲೂ, ಸಲ್ಲಕ್ಷಣಗಳಿಂದಲೂ ಕೂಡಿರುತ್ತಾರೆ. ಆದ್ದರಿಂದ ಅವರಿಗೆ ಮೋಕ್ಷವಿಲ್ಲವು. ಕಲಿಯು ಪೂರ್ತಿಯಾಗಿ ದುರ್ಲಕ್ಷಣಗಳಿಂದಲೇ ಕೂಡಿರುತ್ತಾನೆ.

ವಿಶೇಷಾರ್ಥ.— ವಾಯುಪದಕ್ಕೆ ಅರ್ಹರಾದವರು ೩೨ ಸಲ್ಲಕ್ಷಣಗಳಿಂದ ಚೆನ್ನಾಗಿ ಕೂಡಿರುವವರಾಗಿರುತ್ತಾರೆ. ಭಗವಂತನ ಅವತಾರಗಳು ಅನಂತಸಲ್ಲಕ್ಷಣಯುತವಾದರೂ [illegible] ೩೨ ಸಲ್ಲಕ್ಷಣಗಳಿಂದ ತಪ್ಪದೆ ವಿಶೇಷವಾಗಿ ಕೂಡಿರುವವುಗಳಾಗಿರುತ್ತವೆ. ಆ ಭಗವದವತಾರಗಳು ಬಲಗೈಗಳಲ್ಲಿ ಸಹಸ್ರ ಅರಗಳಿಂದ ಯುಕ್ತವಾದ ಚಕ್ರದಿಂದಲೂ ಎಂಟು ಪಟ್ಟಿಗಳುಳ್ಳ ಗದೆಯಿಂದಲೂ, ಎಡಗೈಗಳು ನೂರು ನೆರಿಗಳಿಂದ ಯುಕ್ತವಾದ ಶಂಖದಿಂದಲೂ, ಸಹಸ್ರ ದಳಗಳಿಂದ ಯುಕ್ತವಾದ ಕಮಲದಿಂದಲೂ ಕೂಡಿರುತ್ತವೆ. ರುದ್ರಪದಕ್ಕೆ ಅರ್ಹರಾದವರು ೨೮ ಲಕ್ಷಣಗಳಿಂದ ಕೂಡಿರುತ್ತಾರೆ. ೨೪ ಮೊದಲು ೧೬ ಸಂಖ್ಯೆಯುಳ್ಳ ಲಕ್ಷಣಗಳು ದೇವತೆಗಳಿಗಿರುತ್ತವೆ. ೮ ಲಕ್ಷಣಗಳು [illegible] ಋಷಿಗಳಿಗಿರುತ್ತವೆ. ಚಕ್ರವರ್ತಿಗಳಿಗೆ [illegible] ಲಕ್ಷಣಗಳು ಇರುತ್ತವೆ. (ಅಶ್ವತ್ಥಾಮಾದಿಗಳಿಗೆ ದುರ್ಲಕ್ಷಣಗಳು [illegible] ದೇಹ [illegible] ದಿಂದ ರುದ್ರಾದಿಗಳಿಗೂ ಮೋಕ್ಷ ಯೋಗ್ಯ ದುರ್ಲಕ್ಷಣಗಳು [illegible] ವಾಗಿ ಇವೆ ಎಂದು ತಿಳಿಯಬೇಕು.) ಮಧ್ಯಮ ಮನುಷ್ಯರಿಗೆ ಸಲ್ಲಕ್ಷಣಗಳೂ ದುರ್ಲಕ್ಷಣಗಳೂ ಸಮವಾಗಿರೋಣದರಿಂದ [illegible] ಭಕ್ತಿಯೂ ಸಮವಾಗಿರುತ್ತವೆ. ಆದರಿಂದ ಅವರಿಗೆ ಮೋಕ್ಷವಾಗುವುದಿಲ್ಲ. ಕಲಿಗೆ ಒಂದು ಸಲ್ಲಕ್ಷಣ ಸಹ ಇಲ್ಲದೆ ಯಾವತ್ತೂ ದುರ್ಲಕ್ಷಣವಿರುವುದರಿಂದ "ಸಮ್ಯಗ್ದುರ್ಲಕ್ಷಣಯುತಃ" ಎಂದು ಹೇಳಿಸಿಕೊಂಡಿದ್ದಾನೆ. ಆದ್ದರಿಂದ ಅವನು ಹರಿಯಲ್ಲಿ ಸಂಪೂರ್ಣ ದ್ವೇಷವನ್ನೂ [illegible] ಮಾಡುತ್ತಾನೆ. ಆದರಿಂದಲೇ ಅವನಿಗೆ ಅಂಧಂತಮಸ್ಸು ಪ್ರಾಪ್ತಿಯಾಗುತ್ತೆ. (ಇದಕ್ಕೆ ಪ್ರಮಾಣ) ದ್ವಾತ್ರಿಂಶಲ್ಲಕ್ಷಣೈಸ್ಸಮ್ಯಗ್ಯುಕ್ತಾ ವಾಯುಪದಯೋಗ್ಯಕಾಃ ॥ ನಿಯಮೇನೈವ ಏಷ್ವೇಸ್ತು ಪ್ರಾದುರ್ಭಾವ ವಿಶೇಷತಃ । ಸಹಸ್ರಾರೇಣ ಚಕ್ರೇಣ ಚಿಹ್ನಿತಾ ದಕ್ಷಿಣೇ ಕರೇ ಗದಯಾಷ್ಟಾಸ್ರಯಾ ಚೈವ ಶತಾವರ್ತೇನ ಕಂಬುನಾ ॥ ವಾಮೇ ಕರೇ ತಥಾಬ್ಜೇನ ಸಹಸ್ರದಳಶೋಭಿನಾ॥ ಅಷ್ಟಾವಿಂಶಲ್ಲಕ್ಷಣೈಶ್ಚ ಗಿರೀಶಪದಯೋ

ಗಿನಃ ॥ ಚತುರ್ವಿಂಶತಿಮಾರಭ್ಯ ಷೋಡಶಾದಾಸುರಾಮತಾಃ ॥ ಅಷ್ಟಕಾ ದೃಷಯಃ ಪ್ರೋಕ್ತಾಃ ತದೂನಾಶ್ಚಕ್ರವರ್ತಿನಃ ॥ ಇತಿ ಬೃಹದ್ಭಾಷ್ಯೇ ॥

**ಶ್ಲೋಕ ॥ ಶಿಷ್ಯಾಯ ಸತ್ಯಂಭವತಿತತ್ಸರ್ವಂ ನಾತ್ರಸಂಶಯಃ ॥**
**ಅಗಮ್ಯತ್ವಾದ್ಧರಿಸ್ತಸ್ಮಿನ್ನಾವಿಷ್ಟೋಮುಕ್ತಿದೋಭವೇತ್ ॥೧೨೪॥**

ಅರ್ಥ.—ಸಮ್ಯಗ್ಲಕ್ಷಣ ಸಂಪನ್ನಃ-ಸರಿಯಾದ ಲಕ್ಷಣಗಳಿಂದ ಕೂಡಿದ ಗುರುಗಳು, ಸುಪ್ರಸನ್ನ=ಚೆನ್ನಾಗಿ ಪ್ರಸನ್ನರಾಗಿ, ಯತ್=ಯಾವವರವನ್ನು, ಶಿಷ್ಯಾಯ=ಶಿಷ್ಯನಿಗೆ, ದದ್ಯಾತ್=ಕೊಡುತ್ತಾರೋ, ತತ್ಸರ್ವಂ=ಅವೆಲ್ಲವೂ, ಸತ್ಯ=ನಿಜವಾಗಿ, ಭವತಿ=ಆಗುತ್ತವೆ. ನಸಂಶಯಃ=ಈ ವಿಷಯದಲ್ಲಿ ಸಂಶಯವಿಲ್ಲ. ಹರಿಃ=ನಾರಾಯಣನು, ಅಗಮ್ಯತ್ವಾತ್=ನಮ್ಮಿಂದ ಹೊಂದಲು ಅಶಕ್ತನಾದ ಪ್ರಯುಕ್ತ, ತಸ್ಮಿನ್=ಆ ಗುರುಗಳಲ್ಲಿ, ಆವಿಷ್ಟಃ=ಪ್ರವಿಷ್ಟನಾಗಿದ್ದು ಅವರದ್ವಾರ, ಮುಕ್ತಿದಃ=ಮುಕ್ತಿಯನ್ನು ಕೊಡತಕ್ಕವರು, ಭವೇತ್=ಆಗುತ್ತಾರೆ.

ತಾತ್ಪರ್ಯ.—ಹೀಗೆ ಗುರುಗಳ ಲಕ್ಷಣಗಳನ್ನು ಹೇಳಿ ಆ ಗುರುಗಳಿಂದ ಆಗತಕ್ಕ ಪ್ರಯೋಜನವನ್ನು ಹೇಳುತ್ತಾರೆ. ಸರಿಯಾದ ಲಕ್ಷಣಗಳಿಂದಕೂಡಿದ ಗುರುಗಳು ಪ್ರಸನ್ನರಾಗಿ ಯಾವಯಾವ ವರಗಳನ್ನು ಶಿಷ್ಯರಿಗೆ ಕೊಡುತ್ತಾರೋ ಅವೆಲ್ಲವೂ ನಿಜವಾಗಿ ಲಭಿಸುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ. ಗುರುಗಳೇ ಮೋಕ್ಷವನ್ನು ಕೊಡುವುದಾದರೆ ಹರಿಯ ಪ್ರೀತಿಯಿಂದಲೇ ಮೋಕ್ಷವಾಗುತ್ತದೆಂದು ಹಿಂದೆ ಹೇಳಿದ್ದಕ್ಕೆ ವಿರುದ್ಧವಾಗುತ್ತದೆಂದರೆ ಅದಕ್ಕೆ ಹೇಳುತ್ತಾರೆ.—ಹರಿಯು ನಮ್ಮಿಂದ ಹೊಂದಲು ಅಶಕ್ಯನಾದಪ್ರಯುಕ್ತ ಗುರುಗಳಲ್ಲಿ ಆವಿಷ್ಟನಾಗಿದ್ದು ಅವರ ದ್ವಾರ ಮುಕ್ತಿಕೊಡುತ್ತಾನೆ. ಹೀಗೆ ಗುರುದ್ವಾರ ಕೊಡೋಣದರಿಂದ ಹಿಂದೆ ಹೇಳಿದ್ದಕ್ಕೆ ವಿರೋಧವಿಲ್ಲವು.

**ಶ್ಲೋಕ ॥ ನಾತಿಪ್ರಸನ್ನ ಹೃದಯೋ ಯದ್ಧದ್ಯಾದ್ಗುರುರಪ್ಯಸೌ ॥**
**ನತತ್ಸತ್ಯಂಭವೇತ್ತಸ್ಮಾದರ್ಚನೀತೋಗುರುಸ್ಸದಾ ॥೧೨೫॥**

ಅರ್ಥ.—ನಾತಿಪ್ರಸನ್ನ ಹೃದಯಃ = ಪ್ರಸನ್ನರಾಗದೇ ಇರತಕ್ಕ, ಅಸೌ=ಸಲಕ್ಷಣಯುಕ್ತರಾದ, ಗುರುರಪಿ=ಗುರುಗಳೂ ಕೂಡ, ಯತ್=ಯಾವುದನ್ನು, ದದ್ಯಾತ್-ಶಿಷ್ಯನಿಗೆ ಕೊಡುತ್ತಾರೋ ಅದು, ಸತ್ಯಂ=ಯಥಾ

ಥವಾಗಿ. ನಭವೇತ್=ಆಗುವುದಿಲ್ಲ. ತಸ್ಮಾತ್=ಆದಕಾರಣದಿಂದ, ಸ ದಾ=ಯಾವಾಗಲೂ, ಗುರುಃ=ಗುರುಗಳು, ಆರಾಧ್ಯನೀಯಃ-ಪೂಜಾರ್ಹರು

ತಾತ್ಪರ್ಯ.—ಗುರುಗಳು ಸಲ್ಲಕ್ಷಣಗಳಿಂದ ಕೂಡಿದವರಾದರೆ ಸಾಲದು. ಅವರು ಪ್ರಸನ್ನರಾಗಿಯೂ ಇರಬೇಕೆಂದು ಹೇಳುತ್ತಾರೆ. ಗುರುಗಳು ಸಲ್ಲಕ್ಷಣಗಳಿಂದ ಯುಕ್ತರಾದವರು ಅವರು ಪ್ರಸನ್ನರಾಗದೆ ಶಿಷ್ಯರಿಗೆ ಏನು ವರವನ್ನು ಕೊಟ್ಟರೂ ಅದು ನಿಜವಾಗುವುದಿಲ್ಲ. ಆದ್ದರಿಂದ ಗುರುಗಳನ್ನು ಎಲ್ಲಾ ಕಾಲದಲ್ಲಿಯೂ ಪೂಜಿಸುತ್ತಿರಬೇಕು. ಅವರ ಪ್ರಸಾದವನ್ನು ಸಂಪಾದಿಸಬೇಕು.

ಶ್ಲೋಕ ॥ ಸ್ವಾವರಾಣಾಂಗುರುತ್ವಂತು ಭವೇತ್ಕಾರಣತಃ ಕ್ವಚಿತ್ ॥ ಮರ್ಯಾದಾರ್ಥಂ ತೇಷು ಪೂಜ್ಯಾ ನತು ಮುಖ್ಯತತ್ಪರೋಗುರುಃ ॥೧೨॥
ಇತ್ಯೇತತ್ಪಂಚರಾತ್ರೋಕ್ತಂ ಪುರಾಣೇಷ್ವನುವರ್ಣಿತಂ ॥
ಯಥಾಮುಕ್ತಿ ಪ್ರದಾನಾಯ ಸ್ಯಯೋಗ್ಯಂಪಶ್ಯತಿಧ್ರುವಂ ॥೧೩॥
ರೂಪಂ ಹರೇಸ್ತದಾತಸ್ಯ ಸರ್ವಪಾಪಾನಿ ಭಸ್ಮಸಾತ್ ।
ಯಾಂತಿಪೂರ್ವಾರ್ಜಿತ್ಯುತ್ತರಾಣಿ ನಶ್ಲೇಷಂಯಾಂತಿಕಾನಿಚಿತ್ ॥೧೪॥

ಅರ್ಥ.—ಕ್ವಚಿತ್=ಒಂದು ಕಾಲದಲ್ಲಿ, ಕಾರಣತಃ=ಯಾವುದೋ ಒಂದು ಕಾರಣದಿಂದ, ಸ್ವಾವರಾಣಾಂ=ತನಗಿಂತಲೂ ಕಡಿಮೆಯಾದವರು, ಗುರುತ್ವಂ-ಗುರುಗಳಾಗಿ, ಭವೇತ್=ಆಗುವುದುಂಟು. ತೇಷಿ=ಅವರುಗಳನ್ನು, ಮರ್ಯಾದಾರ್ಥಂ-ಮರ್ಯಾದೆಗೋಸುಗ, ಪೂಜ್ಯಾಃ-ಪೂಜಿಸಬೇಕು. ಪರಃ=ಉತ್ತಮರಾದ, ಗುರುಗಳನ್ನು (ಮುಖ್ಯ ಗುರುಗಳನ್ನು) ಯಥೋಕ್ತ ಹೇಗೆ ಪೂಜಿಸುತ್ತೇವೆಯೋ ಹಾಗೆ, ನತು=ಪೂಜಿಸಬೇಕಾದ್ದಿಲ್ಲ.

ತಾತ್ಪರ್ಯ.—ತನಗಿಂತಲೂ ತಾರತಮ್ಯದಲ್ಲಿ ಕಡಿಮೆಯಾದವರು ಯಾವುದೋ ಒಂದು ನಿಮಿತ್ತದಿಂದ ತನಗೆ ಗುರುಗಳು ಆಗುವರಷ್ಟೆ. ಅಂತಹ ಸಂದರ್ಭದಲ್ಲಿ ಅವರನ್ನು ಹೇಗೆ ಪೂಜಿಸಬೇಕೆಂದರೆ ಹೇಳುತ್ತಾರೆ.— ಯಾವದೋ ಒಂದುಕಾಲದಲ್ಲಿ ಯಾವುದೋ ಒಂದು ಕಾರಣದಿಂದ ತನಗಿಂತ ಕಡಿಮೆಯಾದವರು ತನಗೆ ಗುರುಗಳಾದರೆ ಅಂತಹ ಗುರುಗಳನ್ನು ಮರ್ಯಾದೆಗೋಸುಗ ಪೂಜಿಸಬೇಕು. ತಮ್ಮ ಮುಖ್ಯ ಗುರುಗಳನ್ನು ಹೇಗೆ ಪೂಜಿಸುವರೋ ಹಾಗೆ ಪೂಜಿಸಬೇಕಾಗಿಲ್ಲ.

ಅರ್ಥ.— ಇತ್ಯೇತತ್= ಈಗ ಹೇಳಿದ ಅರ್ಥವು, ಪಂಚರಾತ್ರೋಕ್ತಂ =ಪಂಚರಾತ್ರಾಗಮದಲ್ಲಿ ಹೇಳಲ್ಪಟ್ಟಿದೆ, ಪುರಾಣೇಷು=ಪುರಾಣಗಳಲ್ಲಿ, ಅನುಮೋದಿತಂ=ಸಮ್ಮತಿ ರೂಪದಿಂದ ಅನುಮೋದಿಸಲ್ಪಟ್ಟಿರುತ್ತೆ. ಯದಾ=ಯಾವಾಗ, ಮುಕ್ತಿಪ್ರದಾನಾಯ-ಮುಕ್ತಿಯನ್ನು ಕೊಡುವುದಕ್ಕೆ, ಸ್ವಯೋಗ್ಯಂ-ತನಗೆ ಅರ್ಹವಾದ, ಹರೇಃ=ನಾರಾಯಣನು, ರೂಪಂ-ರೂಪವನ್ನು ಪಶ್ಯತಿ=ಪ್ರತ್ಯಕ್ಷವಾಗಿ ನೋಡುತ್ತಾನೋ, ತದಾ=ಆಗ, ತಸ್ಯ=ಅವನಿಗೆ, ಸರ್ವಾಣಿಪಾಪಾನಿ=ಪೂರ್ವ ಪಾಪಗಳೆಲ್ಲವೂ, ಧ್ರುವಂ=ನಿಶ್ಚಯವಾಗಿ, ಭಸ್ಮಸಾತ್=ಭಸ್ಮವಾಗಿ, ಯಾಂತಿ=ಆಗುತ್ತದೆ, ಉತ್ತರಾಣಿ-ಅಪರೋಕ್ಷ ಜ್ಞಾನಾನಂತರದಲ್ಲಿ ಸಂಭವಿಸಿದ, ಪಾಪಾನಿ=ಪಾಪಗಳು, ಕಾನಿಚಿತ್-ಕೆಲವು ಸಂಭವಿಸಿದರೆ, ಶ್ಲೇಷಂ-ಸಂಬಂಧವನ್ನು, ನಯಾಂತಿ-ಹೊಂದುವುದಿಲ್ಲ. ಸಂಬಂಧವೂ ಆಗುವುದಿಲ್ಲ. ( ಪಾಪ ಲೇಪವಾಗುವುದಿಲ್ಲ. )

ತಾತ್ಪರ್ಯ.— ಈಗ ಹೇಳಿದ ಅರ್ಥವು ಪಂಚರಾತ್ರದಲ್ಲಿ ಹೇಳಲ್ಪಟ್ಟಿದೆ. ಪುರಾಣಗಳಲ್ಲೂ ಅನುಮೋದಿಸಲ್ಪಟ್ಟಿದೆ. ಪರಮಾತ್ಮನ ಅಪರೋಕ್ಷಜ್ಞಾನದಿಂದ ಮುಕ್ತಿಯಾಗುವ ಪಕ್ಷದಲ್ಲಿ ದೈತ್ಯ, ರಾಕ್ಷಸಾದಿಗಳಿಗೂ ರಾಮ ಕೃಷ್ಣಾದಿ ಭಗವದ್ರೂಪಗಳ ಅಪರೋಕ್ಷ ಜ್ಞಾನವಾದರೂ, ಏಕೆ ಮೋಕ್ಷವಾಗಲಿಲ್ಲ? ಪಾಪಗಳು ಏಕೆ ಹೋಗಲಿಲ್ಲ. ಎಂದರೆ ಹೇಳುತ್ತಾರೆ.— ಮುಕ್ತಿಯೋಗ್ಯನಾದ ಜೀವನು ತನಗೆ ಮುಕ್ತಿಯನ್ನು ಕೊಡುವುದಕ್ಕೆ ಅರ್ಹವಾದ ಭಗವದ್ರೂಪವನ್ನು ಸ್ವಯೋಗ್ಯ ಗುರುಗಳಿಂದ ಉಪದಿಷ್ಟನಾಗಿ ಭಗವದ್ರೂಪವನ್ನು ನೋಡೋಣದರಿಂದ ಮುಕ್ತಿಯಾಗುತ್ತದೆ. ದೈತ್ಯರು ಹಾಗಲ್ಲ. ಅಪರೋಕ್ಷವಾದಕೂಡಲೇ ಪೂರ್ವ ಪಾಪಗಳು ನಿಶ್ಚಯವಾಗಿ ಭಸ್ಮವಾಗುತ್ತವೆ. ಅಪರೋಕ್ಷ ಜ್ಞಾನಾನಂತರದಲ್ಲಿ ಸಂಭವಿಸಿದ ಪಾಪಗಳು ಸಂಬಂಧವಾಗುವುದಿಲ್ಲ.

ವಿಶೇಷಾರ್ಥ.— ಅಪರೋಕ್ಷ ಜ್ಞಾನಿಗಳಿಗೆ ಪಾಪಗಳು ಮಾತ್ರ ಭಸ್ಮವಾಗುತ್ತದೆಯೆಂತಲ್ಲ. ರಾಜಸವಾದ, ಮಿಶ್ರವಾದ ( ಅಂದರೆ ಪುಣ್ಯ ಮಿಶ್ರವಾದ ಪಾಪವೂ ಅದರಂತೆ ಅನಿಷ್ಟವಾದ ಪುಣ್ಯವೂ) ಭಸ್ಮವಾಗುತ್ತದೆ. ಇಷ್ಟವಾದ ಪುಣ್ಯವು— ಕಾಮ್ಯ— ಅಕಾಮ್ಯವೆಂದು, ಎರಡು ವಿಧ, ಕಾಮ್ಯ ಪುಣ್ಯದಲ್ಲಿಯೂ ಪ್ರಾರಬ್ಧವಲ್ಲದೇ ಇರುವುದನ್ನು ಅವನ ಸ್ನೇಹಿತರೂ ಮಕ್ಕಳೂ ಹೊಂದುತ್ತಾರೆ. ರಾಜಸ-ಮಿಶ್ರವಾದ ಪಾಪವನ್ನು ಉದಾಸೀನ ಜನ

ಜಗದು ನೋಡುತ್ತಾನೆ. ಅಕಾಮ್ಯವಾದ ಅಗ್ನಿಹೋತ್ರಾದಿಗಳಿಂದ ಉಂಟಾದ ಪುಣ್ಯವು ಅಪರೋಕ್ಷ ಜ್ಞಾನಕ್ಕೆ ಸಾಧನವಾದ್ದರಿಂದ ಅದು ನಾಶವಾಗುವುದಿಲ್ಲ. ಅಪರೋಕ್ಷ ಜ್ಞಾನಾನಂತರ ಸಂಭವಿಸಿದ ಕೆಲವು ಪಾಪಗಳು ಸಂಬಂಧಪಡುವುದಿಲ್ಲ. (ಅಂದರೆ ನರಕಾದಿ ಭೋಗ ಕೊಡುವುದಕ್ಕೆ ಸಮರ್ಥವಾಗುವುದಿಲ್ಲ ) ಉತ್ತಮಾಪರಾಧ ರೂಪವಾದ ಕೆಲವು ಪಾಪಗಳು ಅಪರೋಕ್ಷ ಜ್ಞಾನಿಗಳಿಗೆ ಸಂಬಂಧಪಟ್ಟಿದ್ದರೂ ಅವರಿಗೆ ಅಶುಚಿತ್ವ, ಅಪ್ರಾಜ್ಯತ್ವ, ನರಕದುಃಖ ಇವುಗಳನ್ನು ಉಂಟುಮಾಡುವುದಿಲ್ಲ. ಅಕಾಮ್ಯಗಳಾದ ಪುಣ್ಯಗಳು ಅಧಿಕ ಸುಖಾಭಿವ್ಯಕ್ತಿಗೆ ಕಾರಣಗಳಾಗಿ ಸಂಬಂಧಪಟ್ಟಿರುತ್ತವೆ. ಪ್ರಾರಬ್ಧವು ಭೋಗದಿಂದಲೇ ಪರಿಹಾರವು. ಪ್ರಾರಬ್ಧದಲ್ಲೂ ಕೆಲವು ಭಾಗಕ್ಕೆ ಭಗವದನುಗ್ರಹ ವಿಶೇಷದಿಂದ ನಾಶವೂ ಉಂಟು. ಹೀಗೆಯೇ ಭಗವಂತನನ್ನು ಹೀನನೆಂದು ತಿಳಿಯುವ ದ್ವೇಷ್ಯರುಗಳಿಗೆ, ತಿರುಗಿ ಪೇಲಕ್ಷ್ಯವು ಬರೋಣವಿಲ್ಲದ ಸಮಸ್ತವಸ್ತು ವಿಶೇಷವು ಸಮೂಹವಾದ ಕಾಲದಲ್ಲಿ ಇವರ ಪೂರ್ವ ಪುಣ್ಯ ಸಮಸ್ತವೂ ನಾಶವಾಗುತ್ತದೆ. ಅನಂತರ ಮಾಡಿದ ಪುಣ್ಯಕ್ಕೆ ಸಂಬಂಧವಾಗುವುದಿಲ್ಲ. ಇದಕ್ಕೆ ಪ್ರಮಾಣಗಳು.— ತಥೋಪಾಸ್ಯಂ ಜನಾದೃಷ್ಟಂ ಬ್ರಹ್ಮಾಪಂಚ ಭಸ್ಮಸಾತ್ || ಕರೋತಿನಿಖಿಲಂಪೂರ್ವಂಪಾಪಕ್ಷಾತ್ರಸ್ಯ ಸಂಗತಂ || ಕರೋತಿತದ್ವಿನಶ್ಯೈವ ಪುಣ್ಯನಾಶೋಪ್ಯಸಂಗತೇಃ || ಅನುವ್ಯಾಖ್ಯಾನ || ಅಶುಚಿತ್ವಾದಿಕಂಚಾಸ್ಯ ನಭವೇದಿತಿತತ್ಕ್ವಚಿತ್ || ಅನಭೀಷ್ಟಸುನಾರಬ್ಧಂ ಪುಣ್ಯಂತಸ್ಯವಿನಶ್ಯತಿ || ಕಿಮು ಪಾಪಪರಂ ಬ್ರಹ್ಮಜ್ಞಾನಿನೋನಾಸ್ತಿ ಸಂಶಯಃ || ಇತಿಪಾದ್ಮೆ | ಯತ್ವನಾರಬ್ಧಪಾಪಂಸ್ಯಾತ್ತದ್ವಿನಶ್ಯತಿನಿಶ್ಚಯಾತ್ || ಪಶ್ಯತೋಬ್ರಹ್ಮನಿರ್ದಗ್ಧಂ ಹೀನಂಚ ಬ್ರಹ್ಮಸಸ್ಯತಃ || ದ್ವಿಷತೋವಾ ಭವೇತ್ ಪುಣ್ಯ ನಾಶೋನಾಸ್ತ್ಯತ್ರ ಸಂಶಯಃ— ತಸ್ಯಾಪ್ರಾರಬ್ಧಕಾರ್ಯಸ್ಯನ ವಿನಾಶೋಸ್ತಿಕುತ್ರಚಿತ್ | ಆರಬ್ಧಯೋಶ್ಚನಾಶಸ್ಯಾದಲ್ಪಯೋಃ ಪುಣ್ಯಪಾಪಯೋರಿತಿ— ಯಥಾ ಶ್ಲೇಷೋಪನಾಶಶ್ಚಮುಕ್ತಸ್ಯತು ವಿಕರ್ಮಣಃ ಏವಂಸುಕರ್ಮಣಶ್ಚಾಪಿಪತತತ್ತ್ವಸುಸಿಧ್ಯತಂ ಇತಿ ಆಗ್ನೇಯೆ || ತಸ್ಯಪುತ್ರಾಃ ದಾಯಮುಪಯಂತಿ ಸುಹೃದಃ || ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ || ಇತಿಶ್ರುತಿಃ ಕೃಷ್ಣೋಪ್ಯಾಸ್ತಿಮುಕುಪ್ಪತಃ || ಜ್ಞಾನಿನೋಪಿಯತೋಽಪಾರ್ಗಃ || ಶುಭಕರ್ಮಭಿರಾಧಿಕ್ಯಂ ವಿಪರೀತೇವಿಪರ್ಯಯಃ || ನಾಭುಕ್ತಂಕ್ಷೀಯತೇಕರ್ಮ | ಇತ್ಯಾದಿ ಭಾಗವತ ತಾತ್ಪರ್ಯ ನವ್ಯಜ

ನೋಜಾತುಃಕಥಂಚನಾವ್ರಜೇತ್ ಮುಕುಂದಸೇವ್ಯನ್ಯವದಂಗ ಸಂಸ್ಕೃತಿಮಿತಿ ಚ | ಭಾಗವತೇ ಪ್ರಣ್ಯಂಪಾಪಂ ಮಿಶ್ರಮಿತ್ಯೇವ ಪಾಶಾನ್ಯಥಾ ಯೋಗ್ಯಂಸ್ವ ಧರ್ಮಾನ್ಯೇಷು ದತ್ವಾ ಸತ್ವಂ ತ್ರಿಗುಣ ಪಾಶಾನ್ಮೋಸುಮುಗ್ಧಿಚ್ಚಿಂಧಿ ಪಾಂ ಚಖಾ ||

**ಶ್ಲೋಕ ॥ ಮೋಕ್ಷಶ್ಚನಿಯತಸ್ತಸ್ಮಾತ್ಸ್ವಯೋಗ್ಯ ಹರಿದರ್ಶನೇ |**

**ಭವಿಷ್ಯತ್ಪರ್ವವಚನಮಿತ್ಯೇತತ್ಸೂತ್ರಗಂತಥಾ ॥೧೩೨॥**

**ಶ್ರುತಿಶ್ಚ ತತ್ಪರಾ ತದ್ವತ್ತದ್ಯಥೇತ್ಯವದತ್ಸ್ಫುಟಂ ॥೧೩೩॥**

ಅರ್ಥ.— ಸ್ವಯೋಗ್ಯಹರಿದರ್ಶನೇ=ಸ್ವ=ತನಗೆ, ಯೋಗ್ಯ=ಉಪಾಸನಾ ಮಾಡುವುದಕ್ಕೆ ಯೋಗ್ಯವಾದ, ಹರಿದರ್ಶನೆ-ಭಗವದ್ರೂಪದ ಅಪರೋಕ್ಷ ಜ್ಞಾನ ಉಂಟಾಗುವಾಗ, ತಸ್ಮಾತ್-ಆ ಹರಿಯಿಂದ, ಮೋಕ್ಷಶ್ಚ=ಮೋಕ್ಷವೂ ಕೂಡ, ನಿಯತಃ=ಉಂಟಾಗುತ್ತದೆ. ಇತ್ಯೇತತ್=ಈ ಪ್ರಮೇಯಗಳು, ಭವಿಷ್ಯತ್ಪರ್ವ ವಚನಂ=ಭವಿಷ್ಯತ್ ಪುರಾಣದ ವಾಕ್ಯಗಳು, ತಥಾ-ಹಾಗೆ, ಸೂತ್ರಗಂ=ಬ್ರಹ್ಮಸೂತ್ರದಲ್ಲಿಯೂ ಹೇಳಲ್ಪಟ್ಟಿದೆ. ತದ್ವತ್-ಈ ಅರ್ಥದಲ್ಲೇ ತಾತ್ಪರ್ಯವುಳ್ಳ, ತದ್‌ಯಥಾ=ಎಂಬ ಇತ್ಯಾದಿ, ಶ್ರುತಿಶ್ಚ=ಶ್ರುತಿಯೂ ಕೂಡ, ತತ್‌ಪರಾ=ಈ ಅರ್ಥವನ್ನೇ, ಸ್ಫುಟಂ-ಚೆನ್ನಾಗಿ ಅವದತ್=ಹೇಳುತ್ತದೆ.

ತಾತ್ಪರ್ಯ.—ತನಗೆ ಉಪಾಸನೆ ಮಾಡುವುದಕ್ಕೆ ಯೋಗ್ಯವಾದ ಹರಿಯರೂಪದ ಅಪರೋಕ್ಷ ಜ್ಞಾನವಾಗುವಾಗ ಆ ಹರಿಯಿಂದಲೇ ಮೋಕ್ಷವು ತಪ್ಪದೆ ಉಂಟಾಗುತ್ತದೆ. ಈ ಹೇಳಿದ ಪ್ರಮೇಯಗಳು ಭವಿಷ್ಯತ್ಪರ್ವದಲ್ಲಿಯೂ ಬ್ರಹ್ಮಸೂತ್ರಗಳಲ್ಲಿಯೂ ಹೇಳಲ್ಪಟ್ಟಿವೆ. ಆ ಪರಬ್ರಹ್ಮನ ಅಪರೋಕ್ಷ ಜ್ಞಾನ ಉಂಟಾದನಂತರ ಮಾಡುವ ಪಾಪಗಳ ಸಂಬಂಧವಿಲ್ಲದೇ ಇರೋಣವೂ ಹಿಂದೆ ಮಾಡಿದ ಪಾಪಗಳ ನಾಶವೂ ಆಗುತ್ತದೆ. ಈ ಅರ್ಥವನ್ನು ಹೇಳುವ ಸೂತ್ರವು ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷ ವಿನಾಶೌ ಈ ಅರ್ಥದಲ್ಲೇ ತಾತ್ಪರ್ಯ ಉಳ್ಳದ್ದಾದ "ತದ್ಯಥಾ" ಪುಷ್ಕರಪಲಾಶ ಆಪೋನಶ್ಲಿಷ್ಯಂತಏವಮೇವಂ ವಿದಿಪಾಪಂಕರ್ಮನ ಶ್ಲಿಷ್ಯತೇ ॥ ತದ್ಯಥೈಷೀಕಾತೂಲಮಗ್ನೌ ಪ್ರೋತಂಪ್ರದೂಯತೇ ಯೇವಂಹ್ಯಸ್ಯಸರ್ವೇಪಾಪ್ಮಾನಃ ಪ್ರದೂಯಂತೇ ॥ ಈ ಶ್ರುತಿಗಳರ್ಥ.—ಹೇಗೆ ತಾವರೆ ಎಲೆಗಳ ಮೇಲೆ ನೀರಿದ್ದರೂ ಅದಕ್ಕೆ ಸಂಬಂಧಪಡುವುದಿಲ್ಲವೋ ಹಾಗೆ ಬ್ರ

ಬ್ರಹ್ಮಾಪರೋಕ್ಷ ಜ್ಞಾನಿಯಾದವನಿಗೆ ಪಾಪ ಕರ್ಮಗಳು ಸಂಬಂಧಪಡುವುದಿಲ್ಲ. ಊಬು, ಹತ್ತಿ, ಇವುಗಳನ್ನು ಬೆಂಕಿಯಲ್ಲಿ ಹಾಕಿದರೆ ಹೇಗೆ ತಕ್ಷಣದಲ್ಲಿ ಭಸ್ಮವಾಗುತ್ತವೋ ಹಾಗೆ ಬ್ರಹ್ಮಾಪರೋಕ್ಷ ಜ್ಞಾನದಲ್ಲಿ ಸರ್ವ ಪಾಪಗಳು ಭಸ್ಮವಾಗುತ್ತವೆ. ||೧೩೭|| ೧೩೮||

**ಶ್ಲೋಕ || ಮುಕ್ತಾಸ್ತು ಮಾನುಷಾದೇವಾನ್ ದೇವಾ ಇಂದ್ರಂಸಶಂಕರಂ ||**
**ಸಬ್ರಹ್ಮಾಣಂ ಕ್ರಮೇಣೈವ ತೇನಯಾಂತ್ಯಖಿಲಾಹರಿಂ ||**
**ಉತ್ತರೋತ್ತರವಶ್ಯಾಶ್ಚ ಮುಕ್ತಾರುದ್ರ ಪುರಸ್ಸರಾಃ ||೧೩೯||**

ಅರ್ಥ.— ಮುಕ್ತಾಃ=ಮುಕ್ತರಾದ, ಮಾನುಷಾಃ=ಮನುಷ್ಯರುಗಳು, ದೇವಾನ್= ದೇವತೆಗಳನ್ನು, ದೇವಾಃ=ದೇವತೆಗಳು, ಇಂದ್ರಂ=ಇಂದ್ರನನ್ನು, ಸಃ=ಆ ಇಂದ್ರನು, ಶಂಕರಂ=ರುದ್ರದೇವರನ್ನು, ಸಃ=ಆ ರುದ್ರನು, ಬ್ರಹ್ಮಾಣಂ= ಬ್ರಹ್ಮದೇವರನ್ನು, ಕ್ರಮೇಣೈವ=ಕ್ರಮವಾಗಿಯೇ, ತೇನ=ಆ ಬ್ರಹ್ಮದೇವರಿಂದ ಕೂಡಿ, ಅಖಿಲಾಃ=ಸರ್ವರೂ, ಹರಿಂ = ನಾರಾಯಣನನ್ನು, ಯಾಂತಿ=ಹೊಂದುತ್ತಾರೆ. ಮುಕ್ತಾಃ=ಮುಕ್ತರಾದ, ರುದ್ರಪುರಸ್ಸರಾಃ— ರುದ್ರದೇವರೇ ಮೊದಲಾದ ದೇವತೆಗಳು, ಉತ್ತರೋತ್ತರವಶ್ಯಾಶ್ಚ=ತಮತಮಗೆ ಉತ್ತಮರಾದವರಿಗೆ ಅಧೀನರಾಗಿರುತ್ತಾರೆ.

ತಾತ್ಪರ್ಯ.—ಅಪರೋಕ್ಷ ಜ್ಞಾನಿಗಳ ಮುಕ್ತಿ ಪ್ರಕಾರವನ್ನು ಹೇಳುತ್ತಾರೆ.—ಮುಕ್ತರಾದ ಮನುಷ್ಯರು ದೇವತೆಗಳನ್ನೂ ಆ ದೇವತೆಗಳು ಇಂದ್ರದೇವರನ್ನೂ, ಆ ಇಂದ್ರದೇವರು ರುದ್ರದೇವರನ್ನೂ, ರುದ್ರದೇವರು ಬ್ರಹ್ಮದೇವರನ್ನೂ, ಆ ಬ್ರಹ್ಮದೇವರಿಂದ ಸಹಿತರಾಗಿ ಸರ್ವರೂ, ಪರಮಾತ್ಮನನ್ನು ಹೊಂದುತ್ತಾರೆ. ಮುಕ್ತರಾದ ದೇವತೆಗಳೆಲ್ಲರೂ, ತಮಗಿಂತ ಉತ್ತಮರಾದವರಿಗೆ ಅಧೀನರಾಗಿರುತ್ತಾರೆ.

ವಿಶೇಷಾರ್ಥ.—ಮುಕ್ತರಾಗುವ ಮನುಷ್ಯರು ಪ್ರಥಮತಃ ಧರ್ಮದೇವರನ್ನೂ, ಅವರ ದ್ವಾರ ತಮಗೆ ಮಾರ್ಗಭೂತರಾದ ದೇವತೆಗಳನ್ನೂ, ಹೊಂದುತ್ತಾರೆ. ಶೇಷಮಾರ್ಗ, ಗರುಡಮಾರ್ಗವೆಂದು ಎರಡು ಮಾರ್ಗಗಳುಂಟು. ಇಂದ್ರದೇವರು—ರುದ್ರದೇವರಲ್ಲಿ ಪ್ರವೇಶಮಾಡುತ್ತಾರೆಂದು ಹೇಳುವ ಪ್ರಕರಣದಲ್ಲಿ ರುದ್ರ ಎಂಬ ಪದಕ್ಕೆ ಗರುಡದೇವರು ಎಂದು ಅರ್ಥವನ್ನೂ, ಮನ್ಮಥ ರುದ್ರನಲ್ಲಿ ಪ್ರವೇಶ ಮಾಡುತ್ತಾನೆ ಎಂದು ಹೇಳುವ ಪ್ರಕರಣದಲ್ಲಿ ರುದ್ರ ಶಬ್ದಕ್ಕೆ ಶೇಷದೇವರು ಎಂದೂ ಅರ್ಥವನ್ನು ತಿಳಿದು

ಕೊಳ್ಳಬೇಕು. ಇಂದ್ರದೇವರು ಸೌಪರ್ಣೀ ದ್ವಾರ ಗರುಡದೇವರಲ್ಲಿಯೂ, ಮನ್ಮಥನು ವಾರುಣೀ ದ್ವಾರ ಶೇಷದೇವರಲ್ಲಿಯೂ ಪ್ರವೇಶಮಾಡುತ್ತಾರೆ. ಸೂರ್ಯದೇವರು ಅಗ್ನಿದೇವರಿಂದ ಸಹಿತರಾಗಿ ಬೃಹಸ್ಪತಿಯನ್ನು ಹೊಂದಿ ಅವರಿಂದ ಕೂಡಿ ಇಂದ್ರದೇವರಲ್ಲಿ ಪ್ರವೇಶಮಾಡುತ್ತಾರೆ. ಗರುಡದೇವರು ಶೇಷದೇವರು ಸರಸ್ವತೀ ದ್ವಾರ ಬ್ರಹ್ಮದೇವರಲ್ಲಿ ಪ್ರವೇಶಮಾಡುತ್ತಾರೆ.

**ಶ್ಲೋಕ || ನಿರ್ದೋಷಾನಿತ್ಯಸುಖಿನಃ ಪುನರಾವರ್ತಿವರ್ಜಿತಾಃ ||**
**ಸ್ವೇಚ್ಛಯೈವರಮಂತೇತ್ರ ನಾನಿಷ್ಟಂತೇಷುಕಿಂಚನ ||೧೩೫||**

ಅರ್ಥ.—( ಮುಕ್ತಾಃ=ಮುಕ್ತರುಗಳು-ಅಧ್ಯಾಹಾರ ) ನಿರ್ದೋಷಾಃ =ಯಾವ ದೋಷಗಳು ಇಲ್ಲದವರಾಗಿಯೂ, ನಿತ್ಯಸುಖಿನಃ=ನಿತ್ಯಸುಖ ಉಳ್ಳವರಾಗಿಯೂ, ಪುನರಾವರ್ತಿವರ್ಜಿತಾಃ=ಪುನರಾವರ್ತಿ – ಪುನರುತ್ಪತ್ತಿಯಿಂದ, ವರ್ಜಿತಾಃ-ಬಿಡಲ್ಪಟ್ಟವರಾಗಿಯೂ, ಸ್ವೇಚ್ಛಯೈವ-ತಮ್ಮ ಇಚ್ಛಾನುಸಾರವಾಗಿ, ಅತ್ರ=ವೈಕುಂಠಾದಿ ಲೋಕಗಳಲ್ಲಿ, ರಮಂತೇ=ಕ್ರೀಡಿಸುತ್ತಾರೆ, ತೇಷು=ಆ ಮುಕ್ತರುಗಳಲ್ಲಿ, ಕಿಂಚನ-ಯಾವ ವಿಧವಾದ, ಅನಿಷ್ಟಂ=ಅನಿಷ್ಟವು, ನ=ಇಲ್ಲ.

ತಾತ್ಪರ್ಯ.—ಆ ಮುಕ್ತರುಗಳು ಯಾವ ದೋಷಗಳೂ ಇಲ್ಲದವರಾಗಿಯೂ, ನಿತ್ಯ ಸುಖ ಉಳ್ಳವರಾಗಿಯೂ, ಪುನಃ ಭೂಮಿಯಲ್ಲಿ ಹುಟ್ಟದವರಾಗಿಯೂ, ಮತ್ತು ತಮ್ಮ ಇಚ್ಛಾನುಸಾರವಾಗಿ ವೈಕುಂಠಾದಿ ಲೋಕಗಳಲ್ಲಿ ಕ್ರೀಡಿಸುತ್ತಿರುತ್ತಾರೆ. ಈ ಮುಕ್ತರುಗಳಲ್ಲಿ ಯಾವ ವಿಧವಾದ ಅನಿಷ್ಟವು ಸ್ವಲ್ಪವೂ ಇರುವುದಿಲ್ಲ.

**ಶ್ಲೋಕ || ಅಸುರಾಃ ಕಲಿಪರ್ಯಂತಾಃ ಏವಂದುಃಖೋತ್ತರೋತ್ತರಾಃ |**
**ಕಲಿರ್ದುಃಖಾಧಿಕಸ್ತೇಷು ತೇಷ್ವೇವಂಬ್ರಹ್ಮವದ್ಗಣಾಃ ||೧೩೬||**

**ತಥಾನ್ಯೇಷ್ವಸುರಾಸ್ಸರ್ವೇ ಗಣಾಯೋಗ್ಯತಯಾಸದಾ |**
**ಬ್ರಹ್ಮೈವಸರ್ವಜೀವೇಭ್ಯಃ ಸದಾಸರ್ವಗುಣಾಧಿಕಃ ||೧೩೭||**

ಅರ್ಥ.—ಕಲಿಪರ್ಯಂತಾಃ=ಮನುಷ್ಯಾಧಮರು ಮೊದಲು ಮಾಡಿ ಕಲಿ ಪರಿಯಂತವಾದ, ಅಸುರಾಃ=ದೈತ್ಯರುಗಳೂ, ಏವಂ=ದೇವತೆಗಳು ಹೇಗೆ ಸಂತೋಷಯುಕ್ತರೋ ಹಾಗೆ, ದುಃಖೋತ್ತರೋತ್ತರಾಃ=ಒಬ್ಬರಿಗಿಂತ ಮು

ತ್ತೊಬ್ಬರು ಹೆಚ್ಚು ದುಃಖ ಉಳ್ಳವರು, ತೇಷು=ಅವರುಗಳಲ್ಲಿ, ಕಲಿಃ=ಕಲಿಯು, ದುಃಖಾಧಿಕಃ=ಹೆಚ್ಚಾದ ದುಃಖ ಉಳ್ಳವನು. ತೇಪಿ = ಅಸುರರೂ ಕೂಡ, ಏವಂ=ಋದ್ರಾದಿಗಳ ಗಣಗಳ ಹಾಗೂ, ಬ್ರಹ್ಮವತ್-ಬ್ರಹ್ಮಪದವಿಗೆ ಬರುವ ಋಜುಗಣಗಳ ಹಾಗೂ, ಗಣಾಃ=ಕಲಿ ಪುರುಷನಾಗುವ ಜೀವಗಣಗಳು ಅನಂತವಾಗಿವೆ. ತಥಾ=ಹಾಗೆ, ಅನ್ಯೇ ಪಿ=ಬೇರೆಯಾದ, ಸರ್ವೇ =ಸಮಸ್ತರಾದ, ಅಸುರಾಃ=ದೈತ್ಯರುಗಳು, ಯೋಗ್ಯತಯಾ=ತಮ್ಮ ತಮ್ಮ ಯೋಗ್ಯತೆಯನ್ನು ಅನುಸರಿಸಿ, ಗಣಾಃ=ಜೀವಗಣಗಳು, ಸದಾ=ಯಾವಾಗಲೂ, ಸಂತಿ=ಇರುತ್ತವೆ.

ತಾತ್ಪರ್ಯ. — ದೇವತೆಗಳಿಗೆ ಈ ರೀತಿಯಾಗಿ ಮುಕ್ತಿಯನ್ನು ಹೇಳಿ ದೈತ್ಯರಿಗೆ ತಮಸ್ಸಿನಲ್ಲಿ ಆಗುವ ದುಃಖ ಪ್ರಕಾರವನ್ನು ಹೇಳುತ್ತಾರೆ. — ಮನುಷ್ಯಾಧಮರ ಮೊದಲು ಕಲಿ ಪರ್ಯಂತರದವರು ಇದೇ ರೀತಿಯಲ್ಲಿಯೇ ಉತ್ತರೋತ್ತರ ಅಧಿಕ ದುಃಖ ಉಳ್ಳವರು. ಎಲ್ಲಾ ದೈತ್ಯರುಗಳಿಗಿಂತಲೂ ಕಲಿಯು ಅಧಿಕ ದುಃಖದಿಂದ ಯುಕ್ತನಾದವನು. ಬ್ರಹ್ಮಪದವಿಗೆ ಅರ್ಹರಾದ ಋಜುಗಣಗಳು ಹೇಗೆ ಅನಂತವಾಗಿರುತ್ತವೋ ಹಾಗೆ ಕಲಿಯಾಗುವ ದೈತ್ಯರುಗಳ ಗಣಗಳೂ ಅನಂತವಾಗಿ ಇರುತ್ತವೆ. ಕಲಿಗಿಂತಲೂ ಕಡಿಮೆಯಾದ ಇತರ ದೈತ್ಯರುಗಳೆಲ್ಲರೂ ಋದ್ರಾದಿ ಪದಯೋಗ್ಯರಾದ ದೇವತೆಗಳ ಗಣದ ಹಾಗೆ ಗಣಗಳಾಗಿಯೂ ಅನಂತವಾಗಿಯೂ ಆಯಾ ಕಾರ್ಯಗಳಿಗೆ ಯೋಗ್ಯರಾಗಿ ಯಾವಾಗಲೂ ಇರುತ್ತಾರೆ.

**ಶ್ಲೋಕ || ಮುಕ್ತೋಽಪಿ ಸರ್ವಮುಕ್ತಾನಾಂ ಆಧಿಪತ್ಯೇಸ್ಥಿತಃಸದಾ |**
**ಆಶ್ರಯಃ ತಸ್ಯಭಗವಾನ್ ಸದಾನಾರಾಯಣಃ ಪ್ರಭುಃ ||೧೩||**

**ಅರ್ಥ. — ಸರ್ವಜೀವೇಭ್ಯಃ=ಸಮಸ್ತ ಜೀವರುಗಳಿಗಿಂತಲೂ, ಸದಾ=ಯಾವಾಗಲೂ, ಸರ್ವಗುಣಾಧಿಕಃ=ಸರ್ವ ಗುಣಗಳಿಂದಧಿಕರು, ಬ್ರಹ್ಮೈವ ಬ್ರಹ್ಮದೇವರೇ, ಮುಕ್ತೋಽಪಿ = ಈ ಬ್ರಹ್ಮರು ಮುಕ್ತರಾಗಿರುವಾಗಲೂ, ಸರ್ವಮುಕ್ತಾನಾಂ=ಸಮಸ್ತ ಮುಕ್ತರುಗಳಿಗೂ, ಆಧಿಪತ್ಯೇ=ಆಧಿಪತ್ಯದಲ್ಲಿ, ಸದಾ=ಯಾವಾಗಲೂ, ಸ್ಥಿತಃ=ಇರುತ್ತಾರೆ. ತಸ್ಯ=ಆ ಬ್ರಹ್ಮದೇವರಿಗೆ, ಪ್ರಭುಃ=ಸರ್ವಸ್ವಾಮಿಯಾದ, ಭಗವಾನ್=ಅವ್ಯಾಹತ ಷಡ್ಗುಣೈಶ್ವರ್ಯನಾದ, ನಾರಾಯಣಃ-ನಾರಾಯಣನು, ಸದಾ-ಎಲ್ಲಾ ಕಾಲಗಳಲ್ಲಿಯೂ, ಆಶ್ರಯಃ-ಆಶ್ರಯನು.**

ತಾತ್ಪರ್ಯ.—ಎಲ್ಲಾ ಜೀವರುಗಳಿಗಿಂತಲೂ ಯಾವಾಗಲೂ ಸರ್ವ ಗುಣಾಧಿಕರು ಬ್ರಹ್ಮದೇವರು. ಈ ಬ್ರಹ್ಮದೇವರು ಮುಕ್ತರಾಗಿರುವಾಗಲೂ ಮುಕ್ತರುಗಳಿಗೆಲ್ಲಾ ಅಧಿಪತಿಗಳಾಗಿರುತ್ತಾರೆ. ಮುಕ್ತರೆಲ್ಲರಿಗೂ ಇವರು ಅಧಿಪತಿಗಳಾದರೆ ಇವರಿಗೆ ಯಾರಾದರೂ ಅಧಿಪತಿಗಳು ಇರುತ್ತಾರೆಯೋ ಎಂದರೆ ಹೇಳುತ್ತಾರೆ.—ಬ್ರಹ್ಮದೇವರಿಗೆ ಸರ್ವ ಗುಣ ಪೂರ್ಣನಾದ ನಾರಾಯಣನು ಯಾವಾಗಲೂ ಪ್ರಭುವಾಗಿ ಆಶ್ರಯನಾಗಿರುತ್ತಾನೆ. ಆ ನಾರಾಯಣನು ಪ್ರಭುವಾದ್ದರಿಂದಲೇ ಅವನು ಯಾರ ಆಶ್ರಯದಲ್ಲಿಯೂ ಇಲ್ಲ.

ಶ್ಲೋಕ ॥ ಇತಿಋಗ್ಯಜುಸಾಮಾಥರ್ವ ಪಂಚರಾತ್ರೇತಿಹಾಸತಃ ॥ ಪುರಾಣೇ
ಭ್ಯಸ್ತಥಾನ್ಯೇಭ್ಯಃ ಶಾಸ್ತ್ರೇಭ್ಯೋ ನಿರ್ಣಯಃಕೃತಃ ॥೧೩೯॥
ವಿಷ್ಣ್ವಾಜ್ಞಯೈವವಿದುಷಾ ತತ್ಪ್ರಸಾದಬಲೋನ್ನತೇಃ ॥ ಆನಂದತೀ
ರ್ಥಮುನಿನಾ ಪೂರ್ಣಪ್ರಜ್ಞಾಭಿಧಾಯುಜಾ ॥೧೪೦॥
ತಾತ್ಪರ್ಯಂ ಶಾಸ್ತ್ರಾಣಾಂ ಸರ್ವೇಷಾಮುತ್ತಮಂ ಮಯಾಪ್ರೋಕ್ತಂ॥
ಪ್ರಾಪ್ಯಾನುಜ್ಞಾಂ ವಿಷ್ಣೋರೇತದ್ವ್ಯಾತ್ವೈವ ವಿಷ್ಣುರಾಪ್ಯೋ ಸೌ
॥೧೪೦॥

ಅರ್ಥ.—ಋಗ್ಯಜುಸಾಮಾಥರ್ವ ಪಂಚರಾತ್ರೇತಿಹಾಸತಃ = ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಪಂಚರಾತ್ರಾಗಮ ಭಾರತಗಳಿಂದಲೂ, ಪುರಾಣೇಭ್ಯಃ=ಪುರಾಣಗಳಿಂದಲೂ, ತಥಾ = ಹಾಗೆಯೇ, ಅನ್ಯೇಭ್ಯಃ = ಇತರವಾದ, ಶಾಸ್ತ್ರೇಭ್ಯಃ = ಶಾಸ್ತ್ರಗಳಿಂದಲೂ, ಇತಿ= ಈ ಪೂರ್ವೋಕ್ತ ಪ್ರಕಾರವಾಗಿ ಹೇಳಿದ ಪ್ರಮೇಯಗಳ, ನಿರ್ಣಯಃ- ನಿರ್ಣಯವು, ಕೃತಃ=ಮಾಡಲ್ಪಟ್ಟಿದೆ. ವಿಷ್ಣ್ವಾಜ್ಞಯೈವ - ನಾರಾಯಣನ ಆಜ್ಞೆಯಿಂದಲೇ, ವಿದುಷಾ=ಜ್ಞಾನಿಯಾದ, ತತ್ಪ್ರಸಾದಬಲೋನ್ನತೇಃ = ಆ ಹರಿಯ ಅನುಗ್ರಹ ಬಲ ಇರುವದರಿಂದ ಪೂರ್ಣಪ್ರಜ್ಞಾಭಿದಾಯುಜಾ- ಪೂರ್ಣಪ್ರಜ್ಞರೆಂತಲೂ ಹೆಸರುಳ್ಳ, ಆನಂದತೀರ್ಥಮುನಿನಾ=ಆನಂದತೀರ್ಥ ಮುನಿಗಳಿಂದ, ಮಯಾ = ನಮ್ಮಿಂದ, ಸರ್ವೇಷಾಂ - ಸಮಸ್ತವಾದ, ಶಾಸ್ತ್ರಾಣಾಂ-ವೇದಾದಿಗಳ, ಉತ್ತಮಂ-ಉತ್ತಮವಾದ, ತಾತ್ಪರ್ಯಂ= ತಾತ್ಪರ್ಯವನ್ನು, ವಿಷ್ಣೋಃ = ಹರಿಯ, ಅನುಜ್ಞಾಂ = ಅಪ್ಪಣೆಯನ್ನು, ಪ್ರಾಪ್ಯ=ಹೊಂದಿ, ಪ್ರೋಕ್ತಂ = ಹೇಳಲ್ಪಟ್ಟಿತು. ಅಸೌ = ಈ ಅಧಿಕಾ

ರಿಯು, ತಜ್ಜ್ಞಾತ್ವೈವ = ಈ ನಿರ್ಣಯವನ್ನು ತಿಳಿದರೇನೆ, ವಿಷ್ಣುಃ = ನಾರಾಯಣನು, ಆಪ್ಯಃ = ಪ್ರಾಪ್ಯನಾಗುತ್ತಾನೆ.

ತಾತ್ಪರ್ಯ — ಅಥೋಽಯಮೇವ ಎಂಬ ೨೨ನೇ ಶ್ಲೋಕದಲ್ಲಿ ಹೇಳುವುದಕ್ಕೆ ಪ್ರಾರಂಭಿಸಿದ ಪ್ರಮೇಯವನ್ನು ಉಪಪಾದನೆ ಮಾಡಿ ಈಗ ಅದನ್ನು ಪೂರ್ತಿಮಾಡುತ್ತಾರೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಪಂಚರಾತ್ರ, ಇತಿಹಾಸ, ಪುರಾಣಗಳು, ಇತರ ಶಾಸ್ತ್ರಗಳು ಇವುಗಳಿಂದ ಮೇಲೆ ಹೇಳಿದ ಪ್ರಮೇಯಗಳ ನಿರ್ಣಯವು ಮಾಡಲ್ಪಟ್ಟಿದೆ.

ಶ್ರೀಮದಾಚಾರ್ಯರು ತಾವು ಹೇಳಿದ ನಿರ್ಣಯಕ್ಕೆ ಪ್ರಾಮಾಣ್ಯವನ್ನು ಮತ್ತು ಪ್ರಯೋಜನವನ್ನೂ ಸಹ ತಿಳಿಸುತ್ತಾರೆ. ಪರಮಾತ್ಮನ ಆಜ್ಞೆಯಿಂದಲೂ ಅವನ ಅನುಗ್ರಹ ಬಲ ಉಳ್ಳವನಾಗಿಯೂ ಆನಂದತೀರ್ಥ, ಪೂರ್ಣಪ್ರಜ್ಞ ಎಂಬ ನಾಮಗಳುಳ್ಳವನಾದ ನಾನು ಸರ್ವ ವೇದಾದಿ ಶಾಸ್ತ್ರಗಳ ಉತ್ತಮವಾದ ತಾತ್ಪರ್ಯವನ್ನು ವೇದವ್ಯಾಸದೇವರ ಅಪ್ಪಣೆಯನ್ನು ಪಡೆದು ಹೇಳಿದ್ದೇನೆ. ಈ ನಿರ್ಣಯವನ್ನು ತಿಳಿದರೇನೆ ಭಗವಂತನ ಪ್ರಾಪ್ತಿಯು ಆಗುವುದೇ ಹೊರತು ಬೇರೆ ಮಾರ್ಗದಿಂದ ಆಗುವುದಿಲ್ಲ.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ
ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ,
ಸರ್ವಶಾಸ್ತ್ರನಿರ್ಣಯೋನಾಮ
॥ ಪ್ರಥಮೋಽಧ್ಯಾಯಃ ॥



## ಎರಡನೆಯ ಅಧ್ಯಾಯ ಪ್ರಾರಂಭ.



ಅವತಾರಿಕಾ.— ಶ್ರೀಹರಿಯು ಸರ್ವೋತ್ತಮನೆಂಬುವುದು ಸರ್ವ ವೇದಾದಿ ಸದಾಗಮಗಳಲ್ಲಿ ಹೇಳಲ್ಪಟ್ಟಿದೆ ಎಂಬ ವಿಷಯವನ್ನು " ಭಾರತಸ್ಯಾಪದೇಶೇನ ಹ್ಯಾವಮ್ನಾಯಾರ್ಥಃ ಪ್ರದರ್ಶಿತಃ " ಎಂಬ ವಚನಾನುಸಾರವಾಗಿ ಕೇವಲ ವೇದಾರ್ಥ ರೂಪವಾದ, ಭಾರತದಲ್ಲಿರುವ ವಾಕ್ಯಗಳಿಂದ ಪ್ರತಿಪಾದನೆ ಮಾಡತಕ್ಕವರಾಗಿ ಪ್ರಾರಂಭದಲ್ಲಿ ಹರಿಯನ್ನು ಭಾರತ ಪ್ರಥಮ ಶ್ಲೋಕದಲ್ಲಿ ಹೇಳಿರುವ ಗುಣ ಉಳ್ಳವನನ್ನಾಗಿ ಈ ಪ್ರಥಮ ಶ್ಲೋಕದಿಂದ ಸ್ತೋತ್ರ ಮಾಡುತ್ತಾರೆ.

**ಶ್ಲೋಕ ||** **ಜಯತಿಹರಿರಚಿಂತ್ಯಃ ಸರ್ವದೇವೈಕವಂದ್ಯಃ ಪರಮಗುರುರಭೀಷ್ಟಾವಾಪ್ತಿದಃ ಸಜ್ಜನಾನಾಂ || ನಿಖಿಲಗುಣಗಣಾರ್ಣೋನಿತ್ಯನಿರ್ಮುಕ್ತದೋಷಃ ಸರಸಿಜನಯನೋಸೌ ಶ್ರೀಪತಿರ್ಮಾನದೋನಃ** ||೧||

ಅರ್ಥ.— ಸರ್ವದೇವೈಕವಂದ್ಯಃ=ಸರ್ವ=ಸಮಸ್ತರಾದ, ದೇವ-ದೇವತೆಗಳಿಂದ, ಏಕ=ಮುಖ್ಯವಾಗಿ, ವಂದ್ಯಃ=ನಮಸ್ಕರಿಸಲ್ಪಡುವುದಕ್ಕೆ ಅರ್ಹನಾಗಿಯೂ, ಪರಮಗುರುಃ=ಪರಮ=ಉತ್ತಮರಾದ ದೇವತೆಗಳಿಗೂ, ಗುರುಃ = ಗುರುವಾಗಿಯೂ, ಸಜ್ಜನಾನಾಂ – ಮುಕ್ತಿಯೋಗ್ಯ ಸಜ್ಜನರಿಗೆ, ಅಭೀಷ್ಟಾವಾಪ್ತಿದಃ – ಅಭೀಷ್ಟ – ಇಷ್ಟಾರ್ಥವಾದ ಮೋಕ್ಷಾದಿಗಳ, ಅವಾಪ್ತಿ = ಪ್ರಾಪ್ತಿಯನ್ನು, ದಃ = ಕೊಡುವವನಾಗಿಯೂ, ನಿಖಿಲಗುಣಗಣಾರ್ಣಃ–ನಿಖಿಲ–ಸಮಸ್ತವಾದ, ಗುಣಗಣ–ಗುಣಗಣಗಳಿಗೆ, ಅರ್ಣಃ=ಸಮುದ್ರ ಪ್ರಾಯನಾಗಿಯೂ ( ಪೂರ್ಣ; ) ನಿತ್ಯನಿರ್ಮುಕ್ತದೋಷಃ=ನಿತ್ಯ=ನಿರಂತರದಲ್ಲಿಯೂ, ನಿರ್ಮುಕ್ತ=ಚೆನ್ನಾಗಿ ಬಿಟ್ಟಿರುವ, ದೋಷಃ–ಅಜ್ಞಾನಾದಿ ದೋಷಗಳುಳ್ಳವನಾಗಿಯೂ, ಸರಸಿಜನಯನಃ=ಕಮಲದೋಪಾದಿಯಲ್ಲಿ ನೇತ್ರವುಳ್ಳವನಾಗಿಯೂ, ನಃ=ಬ್ರಹ್ಮಾದಿಗಳಿಗೆ, ಮಾನದಃ=ಜ್ಞಾನಪ್ರದನಾದ,

ಅಕ್ಷೀ=ಕ್ಷ, ಶ್ರೀಪತಿಃ=ಲಕ್ಷ್ಮೀಪತಿಯಾದ, ಅಚಿಂತ್ಯಃ = ಬ್ರಹ್ಮಾದಿಗಳಿಂದ ಸಾಕಲ್ಯವಾಗಿ ತಿಳಿಯಲು ಸಾಧ್ಯನಲ್ಲದ, ಹರಿಃ ನಾರಾಯಣನು, ಜಯತಿ-ಸರ್ವೋತ್ಕೃಷ್ಟನಾಗಿರುತ್ತಾನೆ.

ತಾತ್ಪರ್ಯ ಮತ್ತು ವಿಶೇಷಾರ್ಥ.—" ನಾರಾಯಣಂ ಸುರಗುರುಂ ಜಗದೇಕನಾಥಂ ಭಕ್ತಪ್ರಿಯಂ ಸಕಲಲೋಕ ನಮಸ್ಕೃತಂ ಚ ॥ ತ್ರೈಗುಣ್ಯವರ್ಜಿತಮಜಂವಿಭುಮಾದ್ಯಮೀಶಂ ವಂದೇ ಭವಘ್ನಮಮರಾಸುರಸಿದ್ಧವಂದ್ಯಂ " ಎಂಬುವ ಭಾರತ ಮೊದಲನೆಯ ಶ್ಲೋಕದಲ್ಲಿರುವ ಪದಗಳಿಗೆ ಜಯತಿ ಎಂಬ ಶ್ಲೋಕದಲ್ಲಿರುವ ಪದಗಳಿಂದ ಅರ್ಥವನ್ನು ಹೇಳುತ್ತಾರೆ. ೧. ವಂದೇ. ೨. ವಿಭುಂ. ೩. ಈಶಂ. ೪. ಸಕಲಲೋಕ ನಮಸ್ಕೃತಂ, ಅಮರಾಸುರಸಿದ್ಧವಂದ್ಯಂ. ೫. ಸುರಗುರುಂ. ೬. ಭಕ್ತಪ್ರಿಯಂ, ಭವಘ್ನಂ. ೭. ನಾರಾಯಣಂ. ೮. ತ್ರೈಗುಣ್ಯವರ್ಜಿತಂ. ೯. ಅಜಂ. ೧೦. ಜಗದೇಕನಾಥಂ. ಆದ್ಯಂ ಈ ಹನ್ನೊಂದು ವಿಷಯಗಳ ಅರ್ಥವನ್ನು ತೋರಿಸುವ.— ೧. ಜಯತಿ. ೨. ಹರಿಃ. ೩. ಅಚಿಂತ್ಯಃ. ೪. ಸರ್ವದೇವೈಕ ವಂದ್ಯಃ. ೫. ಪರಮಗುರುಃ. ೬. ಸಜ್ಜನಾನಾಂ ಅಭೀಷ್ಟಾವಾಪ್ತಿದಃ. ೭. ನಿಖಿಲಗುಣಗಣಾರ್ಣಃ. ೮. ನಿತ್ಯಮುಕ್ತದೋಷಃ. ೯. ಸರಸಿಜನಯನಃ. ಶ್ರೀಪತಿಃ. ಮಾನದಃ ಅಥವಾ ಎರಡನೆಯ ಅಧ್ಯಾಯದ ಪ್ರಕರಣವು ಮೊದಲನೆಯ ಅಧ್ಯಾಯದ ಪ್ರಕರಣದಿಂದ ಬೇರೆಯಾದ್ದರಿಂದ ಈ ಎರಡನೆಯ ಅಧ್ಯಾಯದ ಪ್ರಕರಣಾರಂಭದಲ್ಲಿಯೂ ಹರಿಯ ಸ್ತೋತ್ರ ರೂಪವಾದ ಮಂಗಳಾಚರಣೆಯನ್ನು ಮಾಡುತ್ತಾರೆ.

" ಜಯತೀತಿ " ಎಂಬುವ ಶ್ಲೋಕದಿಂದ ಸಕಲ ಪಾಪಾದಿ ಪ್ರತಿಬಂಧಕಗಳನ್ನ ಪರಿಹಾರ ಮಾಡುವುದರಿಂದ " ಹರಿ " ನಾಮಕನಾದ ಭಗವಂತನು ಸರ್ವೋತ್ಕೃಷ್ಟನಾಗಿದ್ದಾನೆಂದು ಅನ್ವಯವು. ಆ ಸರ್ವೋತ್ಕೃಷ್ಟತ್ವವನ್ನೇ ಈ ವಿಶೇಷಣಗಳು ತಿಳಿಸುತ್ತವೆ. ಸಮಸ್ತ ದೇವತೆಗಳಿಂದ ಮುಖ್ಯವಾಗಿ ನಮಸ್ಕರಿಸಲ್ಪಡುವುದಕ್ಕೆ ಅರ್ಹನಾದವನು. ಬ್ರಹ್ಮದೇವರಿಗೆ ಜ್ಞಾನೋಪದೇಶಕನಾದವನು. ಸಜ್ಜನರಿಗೆ ಇಷ್ಟಪ್ರಾಪ್ತಿಯನ್ನು ಕೊಡತಕ್ಕವನು ಸಕಲ ಗುಣಗಳಿಗೆ ಸಮುದ್ರದಂತೆ ಇರುವವನು. ಸರ್ವದೋಷದೂರನು. ಕಮಲದ ಹಾಗೆ ನೇತ್ರ ಉಳ್ಳವನು. ( ಅಂದರೆ ಪ್ರಸನ್ನ ಮುಖ ಉಳ್ಳವನು) ಸಚ್ಛಾಸ್ತ್ರಗಳನ್ನುಪದೇಶ ಮಾಡತಕ್ಕವನು. ವಾಗ್ದೇವಿಯಾಗಿಯೂ, ಬ್ರಹ್ಮಾದ್ಯುತ್ತಮಳಾಗಿಯೂ ಇರುವ ಲಕ್ಷ್ಮೀದೇವಿಗೆ ಪತಿಯಾದವನು.

ಈ ಶ್ಲೋಕದಲ್ಲಿರುವ " ನಿಖಿಲಗುಣಗಣಾರ್ಣಃ ನಿತ್ಯನಿರ್ಮುಕ್ತದೋಷಃ, ಪರಮಗುರುಃ, ಅಭೀಷ್ಟಾವಾಪ್ತಿದಃ, " ಎಂಬ ನಾಲ್ಕು ಪದಗಳಿಂದ ಸರ್ವಗುಣಪೂರ್ಣ, ಸರ್ವದೋಷದೂರ, ಜ್ಞಾನಾದಿ ಸಾಧನೆಗಳಿಂದ ಜ್ಞೇಯ, ಮೋಕ್ಷವನ್ನು ಕೊಡತಕ್ಕವನು ಎಂಬ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳರ್ಥವನ್ನು ಸಂಗ್ರಹವಾಗಿ ತಿಳಿಸಿರುತ್ತಾರೆ. ಅಥವಾ

ಸರ್ವದೇವೈಕವಂದ್ಯಃ, ಎಂಬ ಪದದಿಂದ ಸರ್ವೋತ್ತಮತ್ವವನ್ನು, ಸಂಸಿಜನಯನಃ, ಶ್ರೀಪತಿಃ, ಮಾನದಃ, ಅಭೀಷ್ಟಾವಾಪ್ತಿದಃ, ಈ ಪದಗಳಿಂದ ಇಷ್ಟತ್ವವನ್ನು ಮತ್ತು ಇಷ್ಟಪ್ರದತ್ವವನ್ನು, ಹರಿಃ ಅಚಿಂತ್ಯಃ ಎಂಬ ಪದಗಳಿಂದ ಈ ಗ್ರಂಥಪ್ರತಿಪಾದ್ಯತ್ವವನ್ನು ತಿಳಿಸುತ್ತಾರೆ. ಅಥವಾ ಪೂರ್ವಾರ್ಧದಲ್ಲಿರುವ ವಿಶೇಷಣಗಳ ಅರ್ಥವನ್ನೇ ಉತ್ತರಾರ್ಧ ಪದಗಳು ಪ್ರತಿಪಾದನೆ ಮಾಡುತ್ತವೆ. ಹೇಗೆಂದರೆ.— ಸರ್ವಗುಣಪೂರ್ಣನಾದ ಪ್ರಯುಕ್ತ ಅಚಿಂತ್ಯನು, ಸರ್ವದೋಷದೂರನಾದ ಪ್ರಯುಕ್ತ ಭಕ್ತರುಗಳ ದೋಷಗಳನ್ನು ಪರಿಹರಿಸುವವನು, ಪ್ರಸನ್ನದೃಷ್ಟಿ ಉಳ್ಳವನಾದ್ದರಿಂದ ಸರ್ವರಿಂದಲೂ ವಂದ್ಯನು, ಜ್ಞಾನವನ್ನು ಕೊಡುವವನಾದ ಪ್ರಯುಕ್ತ ಪರಮಗುರುವು, ಲಕ್ಷ್ಮೀಪತಿಯಾದ ಪ್ರಯುಕ್ತ ಅಭೀಷ್ಟಗಳನ್ನು ಕೊಡತಕ್ಕವನೆಂದು ಶ್ರೀಮದಾಚಾರ್ಯರು ತಿಳಿಸಿದ್ದಾರೆ.

**ಶ್ಲೋಕ ॥ ಉಕ್ತಃ ಪೂರ್ವಾಧ್ಯಾಯೇ ಶಾಸ್ತ್ರಾಣಾಂ ನಿರ್ಣಯಃ ಪರೋದಿವ್ಯಃ ।**
**ಅಥಭಾರತವಾಕ್ಯೈಸ್ತೈರ್ದೇವಾಧ್ಯವಸ್ಯಂತೇ ॥೨॥**

ಅರ್ಥ.— ಪೂರ್ವಾಧ್ಯಾಯೇ- ಹಿಂದಿನ ಅಧ್ಯಾಯದಲ್ಲಿ, ದಿವ್ಯಃ=ದೇವತೆಗಳಿಗೆ ಯೋಗ್ಯನಾದ, ಪರಃ-ಸರ್ವೋತ್ತಮವಾಗಿರುವ, ಶಾಸ್ತ್ರಾಣಾಂ ಸಕಲ ಶಾಸ್ತ್ರಗಳ, ನಿರ್ಣಯಃ=ಅರ್ಥ ನಿರ್ಣಯವು, ಉಕ್ತಃ=ಹೇಳಲ್ಪಟ್ಟಿತು, ಅಥ=ಈಗ, ಭಾರತವಾಕ್ಯಾನಿ=ಭಾರತದಲ್ಲಿರುವ ವಾಕ್ಯಗಳು, ಏತೈರೇವ-ಭಾರತದಲ್ಲಿರುವ ವಾಕ್ಯಗಳಿಂದಲೇ, ಅಧ್ಯವಸ್ಯಂತೇ=ನಿರ್ಣಯಿಸಲ್ಪಡುತ್ತವೆ.

ತಾತ್ಪರ್ಯ.--ಹಿಂದಿನ ಅಧ್ಯಾಯದ ಅರ್ಥಾನುವಾದಪೂರ್ವಕವಾಗಿ ಈ ಅಧ್ಯಾಯದ ಸಂಬಂಧವನ್ನು ಹೇಳುತ್ತಾರೆ.-ಪೂರ್ವಾಧ್ಯಾಯದಲ್ಲಿ ಹರಿಗೆ ಸರ್ವೋತ್ತಮ ಪ್ರತಿಪಾದನೆಮಾಡುವುದಾಗಿ, ದೇವತೆಗಳಿಗೆ ಯೋಗ್ಯನಾ

ಗಿರುವ ಸಕಲ ಶಾಸ್ತ್ರಾರ್ಥನಿರ್ಣಯವು ಹೇಳಲ್ಪಟ್ಟಿತು. ಈಗ ಭಾರತದಲ್ಲಿರುವ ವಾಕ್ಯಗಳು ಆ ಹರಿಯ ಸರ್ವೋತ್ತಮತ್ವವನ್ನು ಹೇಳುವುದಾಗಿ ಆ ಭಾರತದ ವಾಕ್ಯಗಳಿಂದಲೇ ನಿರ್ಣಯಿಸಲ್ಪಡುತ್ತದೆ.

ಶ್ಲೋಕ ॥ ಕ್ವಚಿದ್ಗ್ರಂಥಾನ್ಪ್ರಕ್ಷಿಪಂತಿ ಕ್ವಚಿದಂತರಿತಾನಪಿ । ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ಕ್ವಚಿದನ್ಯಥಾ ॥೩॥

ಅರ್ಥ.—(ಭಾರತದಲ್ಲಿ) ಕ್ವಚಿತ್=ಕೆಲವು ಸ್ಥಳಗಳಲ್ಲಿ, ಗ್ರಂಥಾನ್=ಹೊಸದಾಗಿ ಕೆಲವು ಶ್ಲೋಕಗಳನ್ನು, ಪ್ರಕ್ಷಿಪಂತಿ=ಸೇರಿಸಿರುತ್ತಾರೆ, ಕ್ವಚಿತ್=ಕೆಲವು ಕಡೆ, ಅಂತರಿತಾನ್=ಇದ್ದ ಶ್ಲೋಕಗಳನ್ನು ತೆಗೆದುಹಾಕಿರುತ್ತಾರೆ, ಮತ್ತು ಕ್ವಚಿಚ್ಚ=ಕೆಲವು ಕಡೆಯಲ್ಲಿ, ವ್ಯತ್ಯಾಸಂ=ಹಿಂದೆ ಇರಬೇಕಾದ್ದನ್ನು ಮುಂದೆಯೂ, ಮುಂದೆ ಇರಬೇಕಾದ್ದನ್ನು ಹಿಂದೆಯೂ, ಕುರ್ಯುಃ=ಮಾಡಿರುತ್ತಾರೆ. ಪ್ರಮಾದಾತ್=ಅಜಾಗ್ರತೆಯಿಂದ, ಕ್ವಚಿತ್=ಕೆಲವು ಕಡೆಗಳಲ್ಲಿ, ಅನ್ಯಥಾ=ಪಾಠಾಂತರವನ್ನು, ಕುರ್ಯುಃ-ಮಾಡಿರುತ್ತಾರೆ.

ಶ್ಲೋಕ ॥ ಅನುತ್ಸನ್ನಾ ಅಪಿಗ್ರಂಥಾ ವ್ಯಾಕುಲಾ ಇತಿ ಸರ್ವಶಃ । ಉತ್ಸನ್ನಾಃ ಪ್ರಾಯಶಃ ಸರ್ವೇ ಕೋಟ್ಯಂಶೋಽಪಿ ನವಿದ್ಯತೇ ॥೪॥

ಅರ್ಥ.—ಗ್ರಂಥಾಃ-ಗ್ರಂಥಗಳು, ಅನುತ್ಸನ್ನಾಪಿ=ನಾಶವಿಲ್ಲದೆ ಇರುವುದಾಗಿದ್ದರೂ, ಸರ್ವಶಃ=ಸರ್ವ ಪ್ರಕಾರದಿಂದಲೂ, ವ್ಯಾಕುಲಾಇತಿ-ವ್ಯತ್ಯಾಸವಾಗಿರುತ್ತವೆ. ಪ್ರಾಯಶಃ=ಪ್ರಾಯಕವಾಗಿ, ಸರ್ವೇ-ಸಮಸ್ತ ಗ್ರಂಥಗಳು, ಉತ್ಸನ್ನಾಃ=ನಾಶವಾದಂತೆ ತಿಳಿಯಬೇಕು. ಕೋಟ್ಯಂಶೋಽಪಿ-ಕೋಟಿಯಲ್ಲಿ ಒಂದು ಭಾಗವೂ ಕೂಡ, ನವಿದ್ಯತೆ- ಇಲ್ಲವು.

ತಾತ್ಪರ್ಯ.—ಈ ಪ್ರಕಾರ ವ್ಯತ್ಯಾಸವಾಗಿರುವುದರಿಂದ ಈಗ ಪ್ರಚಾರದಲ್ಲಿರುವ ಭಾರತಾದಿ ಗ್ರಂಥಗಳು ಪ್ರಾಯಶಃ ವ್ಯತ್ಯಾಸವಾಗಿಯೇ ಇರುತ್ತವೆ. ಹಾಗಾದಪಕ್ಷದಲ್ಲಿ ವಿಚಾರಮಾಡಿದರೆ ಅರ್ಥನಿರ್ಣಯವಾಗಬಹುದ

ಲ್ಲವೆ ? ಎಂದರೆ ಹೇಳುತ್ತಾರೆ.— ಶತಕೋಟಿ ಗ್ರಂಥವಿಸ್ತಾರವಾದ ಮೂಲ ರಾಮಾಯಣವು ಐವತ್ತು ಕೋಟಿ ವಿಸ್ತಾರವಾದ ಪಂಚರಾತ್ರವು, ಅರವತ್ತು ಲಕ್ಷ ವಿಸ್ತಾರವುಳ್ಳ ಭಾರತವು, ನಾಲ್ಕು ಲಕ್ಷ ವಿಸ್ತಾರವುಳ್ಳ ಪುರಾಣಗಳು ಇವುಗಳೆಲ್ಲವೂ ಪ್ರಾಯಶಃ ಅಸಪಾಠಾದಿಗಳಿಂದ ಉಪ್ತವಾಗಿವೆ, ಅವುಗಳ ಪೈಕಿ ಕೋಟಿಯಲ್ಲಿ ಒಂದು ಭಾಗವೂ ಈಗ ಇಲ್ಲವು.

ಶ್ಲೋಕ || ಗ್ರಂಥೋಽಪ್ಯೇವಂವಿಲುಲಿತಃ ಕಿಮ್ವರ್ಥೋ ದೇವದುರ್ಗಮಃ | ಕ ಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ ||೫||

ಹರಿಣಾನಿರ್ಣಯಾನ್ವಕ್ಷ್ಯೆ ವಿಜಾನಂ ತತ್ಪ್ರಸಾದತಃ ||೬||

ಶಾಸ್ತ್ರಾಂತರಾಣಿ ಸಂಜಾನಂ ವೇದಾಂಶ್ಚಾಸ್ಯ ಪ್ರಸಾದತಃ | ದೇಶೇದೇ ಶೇತಥಾ ಗ್ರಂಥಾನ್ ದೃಷ್ಟ್ವಾ ಚೈವಪೃಥಗ್ವಿಧಾನ್ ||೭||

ಯಥಾ ಸಭಗವಾನ್ ವ್ಯಾಸಃ ಸಾಕ್ಷಾನ್ನಾರಾಯಣಃ ಪ್ರಭುಃ | ಜ ಗಾದ ಭಾರತಾದ್ಯೇಷು ತಥಾವಕ್ಷ್ಯೇತ ದೀಕ್ಷಯಾ ||೮|

ಅರ್ಥ. — ಏವಂ=ಈ ಪ್ರಕಾರ, ಗ್ರಂಥೋಽಪಿ=ಗ್ರಂಥವೇ, ವಿಲುಲಿತಃ=ವ್ಯತ್ಯಾಸವಾಗಿರುವಾಗ, ದೇವದುರ್ಗಮಃ=ದೇವತೆಗಳಿಂದಲೂ ತಿಳಿಯಲು ಅಶಕ್ಯವಾದ, ಅರ್ಥಃ=ಅರ್ಥಗಳು, ಕಿಮು-ವ್ಯತ್ಯಾಸವಾಗಿದೆ ಎಂದು, ಕಲೌ=ಕಲಿಯುಗದಲ್ಲಿ, ವ್ಯಾಕುಲಿತೇ=ವ್ಯಾಕುಲವಾಗಿರುವಾಗ ( ಗ್ರಂಥ ವ್ಯತ್ಯಾಸವೂ ಅರ್ಥ ವ್ಯತ್ಯಾಸವೂ ಉಂಟಾಗಿ ) ನಿರ್ಣಯಾಯ=ನಿರ್ಣಯವನ್ನು ಮಾಡುವುದಕ್ಕೆ, ಹರಿಣಾ-ನಾರಾಯಣನಿಂದ, ಪ್ರಚೋದಿತಃ=ಪ್ರೇರಿತನಾಗಿಯೂ, ತತ್ಪ್ರಸಾದತಃ-ತತ್-ಆ ವೇದವ್ಯಾಸರ, ಪ್ರಸಾದತಃ=ತತ್=ಆ ವೇದವ್ಯಾಸರ, ಪ್ರಸಾದತಃ=ಅನುಗ್ರಹದಿಂದಲೂ, ವಿಜಾನನ್=ತಿಳಿದವನಾಗಿ, ಅಸ್ಯ=ಈ ಭಗವಂತನ, ಪ್ರಸಾದತಃ-ಅನುಗ್ರಹದಿಂದ, ಶಾಸ್ತ್ರಾಂತರಾಣಿ=ಇತರ ಶಾಸ್ತ್ರಗಳನ್ನೂ, ವೇದಾಂಶ್ಚ=ವೇದಗಳನ್ನೂ, ಜಾನನ್=

ತಿಳಿದವನಾಗಿ, ನಿರ್ಣಯಾನ್= ನಿರ್ಣಯಗಳನ್ನು, ವಚ್ಮಿ=ಹೇಳುತ್ತೇನೆ, ದೇಶೆದೇಶೆ=ಪ್ರತಿಯೊಂದು ದೇಶದಲ್ಲೂ, ಪೃಥಗ್ವಿಧಾನ್=ಪ್ರತ್ಯೇಕಪ್ರತ್ಯೇಕವಾಗಿರುವ, ಗ್ರಂಥಾನ್=ಗ್ರಂಥಗಳನ್ನು, ತಥಾ=ಹಾಗೆ, ದೃಷ್ಟ್ವಾ=ನೋಡಿ, ಸಾಕ್ಷಾನ್ನಾರಾಯಣಃ=ಸಾಕ್ಷಾನ್ನಾರಾಯಣಾವತಾರನಾದ, ಪ್ರಭುಃ=ಸರ್ವಜ್ಞನಾದ, ಭಗವಾನ್=ಅವ್ಯಾಹತಷಡ್ಗುಣೈಶ್ವರ್ಯಸಂಪನ್ನನಾದ, ವ್ಯಾಸಃ-ವೇದವ್ಯಾಸದೇವರು, ಭಾರತಾದ್ಯೇಷು-ಭಾರತಾದಿಗ್ರಂಥಗಳಲ್ಲಿ, ಯಥಾ=ಯಾವರೀತಿಯಾಗಿ, ಜಗಾದ=ಹೇಳಿದ್ದಾರೋ, ತದೀಕ್ಷಯಾ-ಅವರ ಕೃಪಾಕಟಾಕ್ಷದಿಂದ, ತಥಾ-ಅದೇ ಪ್ರಕಾರ, ವಕ್ಷ್ಯೆ=ಹೇಳುತ್ತೇನೆ.

ತಾತ್ಪರ್ಯ.-ಲೋಕದಲ್ಲಿ ಗ್ರಂಥವೇ ಹೀಗೆ ವ್ಯತ್ಯಾಸವಾಗಿರುವಾಗ ಅರ್ಥವ್ಯತ್ಯಾಸವಾಗಿದೆ ಎಂದು ಹೇಳತಕ್ಕದ್ದೇನಿದೆ ಎಂದು ಹೇಳುತ್ತಾರೆ. ಈ ಪ್ರಕಾರ ಗ್ರಂಥವೂ ವ್ಯತ್ಯಾಸವಾಗಿದೆ. ಹೀಗಿರಲು ದೇವತೆಗಳಿಂದಲೂ ಸಂಪೂರ್ಣವಾಗಿ ತಿಳಿಯುಲು ಅಶಕ್ಯವಾದ ಅರ್ಥಗಳು ವ್ಯತ್ಯಾಸವಾಗಿವೆ ಎಂದು ಹೇಳಬೇಕಾಗಿಲ್ಲ. ಕಲಿಯುಗದಲ್ಲಿ ಈ ರೀತಿಯಾಗಿ ಭಾರತಾದಿ ಶಾಸ್ತ್ರಗಳಿಗೆ ಗ್ರಂಥವ್ಯತ್ಯಾಸವೂ ಅರ್ಥವ್ಯತ್ಯಾಸವೂ ಇರುವುದರಿಂದ ನಿರ್ಣಯವನ್ನು ಮಾಡುವುದಕ್ಕೆ ಹರಿಯಿಂದ ಪ್ರೇರಿತರಾಗಿಯೂ, ಆ ಹರಿಯನುಗ್ರಹದಿಂದಲೂ ಭಾರತಾದಿ ಶಾಸ್ತ್ರಗಳನ್ನು ತಿಳಿದವನಾಗಿಯೂ ಮತ್ತು ಇತರ ಶಾಸ್ತ್ರಗಳನ್ನು, ಸರ್ವವೇದಗಳನೂ ಇವರನುಗ್ರಹದಿಂದ ಚೆನ್ನಾಗಿ ತಿಳಿದವನಾದ ನಾನು ಈ ನಿರ್ಣಯವನ್ನು ಹೇಳುತ್ತೇನೆ. ಮತ್ತು ಪ್ರತಿದೇಶದಲ್ಲಿಯೂ ಭಿನ್ನಭಿನ್ನವಾಗಿರುವ ಗ್ರಂಥಗಳನ್ನು ನೋಡಿದ್ದರಿಂದ ಈ ನಿರ್ಣಯವನ್ನು ಹೇಳುತ್ತೇನೆ. ಹರಿಯವತಾರನಾದ ಸರ್ವಜ್ಞನಾದ ಷಡ್ಗುಣೈಶ್ವರ್ಯ ಪೂರ್ಣನಾದ ಆ ವೇದವ್ಯಾಸದೇವರು ಭಾರತಾದಿ ಶಾಸ್ತ್ರಗಳಲ್ಲಿ ಯಾವ ರೀತಿಯಾಗಿ ಹೇಳಿದ್ದಾರೆಯೋ ಆ ಪ್ರಕಾರ ಇವರ ಕೃಪಾಕಟಾಕ್ಷದಿಂದ ಹೇಳುತ್ತೇನೆ.

ವಿಶೇಷಾರ್ಥ.-ವೇದವ್ಯಾಸದೇವರ ಸಾಕ್ಷಾದುಪದೇಶದಿಂದ ಜ್ಞಾನವನ್ನು ಹೊಂದಿ ಇವರ ಪ್ರೇರಣೆಯಿಂದಲೂ ಎಲ್ಲಾ ದೇಶಗಳಲ್ಲಿರುವ ಗ್ರಂಥಗಳಪರಾಮರ್ಶದಿಂದಲೂ ಈ ನಿರ್ಣಯವನ್ನು ರಚನೆಮಾಡಿರುತ್ತೇನೆ ಎಂದು ಹೇಳುವುದರಿಂದ ಈ ನಿರ್ಣಯವು ಮುಖ್ಯವಾಗಿ ಗ್ರಂಥಕರ್ತೃಗಳಾದ ವೇದ

ವ್ಯಾಸದೇವರ ಅಭಿಪ್ರಾಯವನ್ನೇ ತಿಳಿಸುವದು. ಆದ್ದರಿಂದ ಇದು ಅತ್ಯಂತ ಪ್ರಮಾಣವೆಂದು ತಿಳಿಯಬೇಕು.

ಶ್ಲೋಕ || ಸಂಕ್ಷೇಪಾತ್ಸರ್ವಶಾಸ್ತ್ರಾರ್ಥಂ ಭಾರತಾರ್ಥಾನುಸಾರತಃ | ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂಪರಿಕೀರ್ತಿತಂ ||೯||

ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ | ದೇವೈಃ ಬ್ರಹ್ಮಾದಿಭಿಃ ಸರ್ವೈಃ ಋಷಿಭಿಶ್ಚ ಸಮನ್ವಿತೈಃ | ವ್ಯಾಸಸ್ಯೈವಾಜ್ಞಯಾ ತತ್ರತ್ವತ್ಯರಿಚ್ಯತ ಭಾರತಂ ||೧೦||

ಮಹತ್ವಾದ್ಭಾರವತ್ವಾಚ್ಚ ಮಹಾಭಾರತಮುಚ್ಯತೇ | ನಿರುಕ್ತಮಸ್ಯ ಯೋವೇದ ಸರ್ವಪಾಪೈಃ ಪ್ರಮುಚ್ಯತೇ ||೧೧||

ಅರ್ಥ.—ಭಾರತಂ=ಭಾರತವು, ಸರ್ವಶಾಸ್ತ್ರಾಣಾಂ ಸಮಸ್ತ ಶಾಸ್ತ್ರಗಳ, ನಿರ್ಣಯಃ=ಅರ್ಥವನ್ನು ವ್ಯಕ್ತಪಡಿಸುವುದೆಂದು, ಪರಿಕೀರ್ತಿತಂ= ಹೇಳಲ್ಪಟ್ಟಿದೆ. ಆದ್ದರಿಂದ ಭಾರತಾರ್ಥಾನುಸಾರತಃ=ಆ ಭಾರತದ ಅರ್ಥವನ್ನೇ ಅನುಸರಿಸಿ, ಸಂಕ್ಷೇಪಾತ್=ಸಂಕ್ಷೇಪವಾಗಿ, ಸರ್ವಶಾಸ್ತ್ರಾರ್ಥಂ= ಸರ್ವ ಶಾಸ್ತ್ರವನ್ನೂ (ಹೇಳುತ್ತೇನೆ) ಪುರಾ=ಪೂರ್ವದಲ್ಲಿ, ಬ್ರಹ್ಮಾದಿಭಿಃ- ಬ್ರಹ್ಮದೇವರೇ ಮುಂತಾದ, ದೇವೈಃ=ದೇವತೆಗಳಿಂದಲೂ, ಋಷಿಭಿಶ್ಚ= ಋಷಿಗಳಿಂದಲೂ, ಸಮನ್ವಿತೈಃ=ಎಲ್ಲರೂ ಕೂಡಿ, ವ್ಯಾಸಸ್ಯ=ವೇದವ್ಯಾಸ ದೇವರ, ಆಜ್ಞಯೈವ=ಅಪ್ಪಣೆಯಪ್ರಕಾರ, ತುಲಾಂ=ತಕ್ಕಡಿಯನ್ನು (ತಕ್ಕಡಿಯಲ್ಲಿ) ಭಾರತಂ-ಭಾರತವು (ಒಂದು ತಟ್ಟೆಯಲ್ಲೂ) ಸರ್ವ ವೇದಾಶ್ಚ ಸಮಸ್ತ ವೇದಗಳೂ (ಮತ್ತೊಂದು ತಟ್ಟೆಯಲ್ಲೂ) ಆರೋಪಿತಃ=ಇಡಲ್ಪಟ್ಟವು. ತತ್ರತು=ಅಲ್ಲಿಯಾದರೋ, ಭಾರತಂ-ಭಾರತವು, ಅತ್ಯರಿಚ್ಯತ= ಅಧಿಕ ಭಾರವಾಯಿತು, ಹೀಗೆ, ಮಹತ್ವಾತ್=ಶ್ರೇಷ್ಠತ್ವದಿಂದ, ಭಾರವತ್ವಾಚ್ಚ=ಹೆಚ್ಚು ಭಾರ ಉಳ್ಳದ್ದಾಗಿರುವುದರಿಂದ, ಮಹಾಭಾರತಂ-ಮಹಾಭಾರತವೆಂಬುದಾಗಿ, ಉಚ್ಯತೇ=ಹೇಳಲ್ಪಡುತ್ತದೆ. ಅಸ್ಯ=ಈ ಭಾರತದ. ನಿರುಕ್ತಿಂ-ನಿರ್ವಚನವನ್ನು, ಯಃ-ಯಾವ ಪುರುಷನು, ವೇದ-ತಿಳಿಯುತ್ತಾನೆಯೋ, ಸಃ-ಆತನು, ಸರ್ವಪಾಪೈಃ-ಸಮಸ್ತ ಪಾಪಗಳಿಂದ, ಪ್ರಮುಚ್ಯತೇ=ಬಿಡಲ್ಪಡುತ್ತಾನೆ.

ತಾತ್ಪರ್ಯ.—ಭಾರತವು ಸರ್ವ ಶಾಸ್ತ್ರಾರ್ಥ ನಿರ್ಣಯವೆಂದು ಹೇಳಲ್ಪಟ್ಟಿರುವುದರಿಂದ ಆ ಭಾರತಾರ್ಥವನ್ನೇ ಅನುಸರಿಸಿ, ಸರ್ವಶಾಸ್ತ್ರಾರ್ಥ

ವನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಭಾರತವು ಶ್ರೇಷ್ಠವೆಂತಲೂ, ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕವೆಂತಲೂ, ದೃಷ್ಟಾಂತಪೂರ್ವಕವಾಗಿ ತಿಳಿಸುವ ಬ್ರಹ್ಮಾಂಡಪುರಾಣದ ವಾಕ್ಯಗಳನ್ನು ಹೇಳುತ್ತಾರೆ.—ಬ್ರಹ್ಮಾದಿ ದೇವತೆಗಳೂ ಋಷಿಗಳೂ ಕೂಡಿ ವ್ಯಾಸರ ಆಜ್ಞಾಪ್ರಕಾರ, ಸಮಸ್ತ ವೇದಗಳನ್ನೂ ತಕ್ಕಡಿಯ ಒಂದು ತಟ್ಟೆಯಲ್ಲಿಯೂ, ಭಾರತವನ್ನು ಮತ್ತೊಂದು ತಟ್ಟೆಯಲ್ಲಿಯೂ, (ಅಂದರೆ ಈ ಎರಡರ ಪ್ರತಿನಿಧಿಯಾಗಿ ಎರಡು ಸಮವಾದ ತೂಕವುಳ್ಳ ರತ್ನಗಳನ್ನು ತರಿಸಿಟ್ಟರು. ಆಗ ಭಾರತವೆಂದು ಸಂಕೇತಿತವಾದ ಮಣಿಯು ಭಾರದಿಂದ ಕೆಳಗೆ ಇಳಿಯಿತು. ಹೀಗೆ ಶ್ರೇಷ್ಠತ್ವದಿಂದ ಹೆಚ್ಚು ಭಾರ ಉಳ್ಳದ್ದಾಗಿರುವುದರಿಂದ ಈ ಗ್ರಂಥವು ಮಹಾಭಾರತವೆಂದು ಕರೆಯಲ್ಪಟ್ಟಿದೆ. ಮಹಾಭಾರತವೆಂಬುದಕ್ಕೆ ಈಗ ಹೇಳಿದ ಅರ್ಥದ ವಿವರಣೆಯನ್ನು ಯಾವನು ತಿಳಿಯುತ್ತಾನೆಯೋ ಆತನ ಸರ್ವ ಪಾಪಗಳೂ ನಾಶನಾಗುತ್ತವೆ.

ಶ್ಲೋಕ ॥ ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೌ ಹಿ ಭಾರತೇ । ಕೃ
ತೌ ವಿಷ್ಣುವಶತ್ವಂ ಹಿ ಬ್ರಹ್ಮಾದಿನಾಂ ಪ್ರಕಾಶಿತಂ ॥೧೨॥
ಯತಃ ಕೃಷ್ಣವಶೇ ಸರ್ವೇ ಭೀಮಾದ್ಯಾಃ ಸಮ್ಯಗಿಂತಾಃ । ಸರ್ವೇಷಾಂ
ಜ್ಞಾನದೋ ವಿಷ್ಣುರ್ಯಶೋದಾತೇತಿ ಚೋದಿತಃ ॥೧೩॥
ಯಸ್ಮಾದ್ವ್ಯಾಸಾತ್ಮನಾ ತೇಷಾಂ ಭಾರತೇ ಯಶ ಊಚಿವಾನ್ ಜ್ಞಾನದ
ಶ್ಚ ಶುಕಾದೀನಾಂ ಬ್ರಹ್ಮರುದ್ರಾದಿ ರೂಪಿಣಾಂ ॥೧೪॥
ಬ್ರಹ್ಮಾಧಿಕಶ್ಚ ದೇವೇಭ್ಯಃ ಶೇಷಾದ್ರುದ್ರಾದಪಿ ರಿತಃ । ಪ್ರಿಯಶ್ಚ ವಿ
ಷ್ಣೋಃ ಸರ್ವೇಭ್ಯ ಇತಿಭಿರ್ಮುನಿದರ್ಶನಾತ್ ॥೧೫॥

ಅರ್ಥ.—ಸರ್ವಶಾಸ್ತ್ರಾಣಾಂ=ಸರ್ವ ಶಾಸ್ತ್ರಾರ್ಥಗಳ, ನಿರ್ಣಯಃ=ನಿರ್ಣಯವು, ಭಾರತೇ=ಭಾರತದಲ್ಲಿ, ಸದೃಷ್ಟಾಂತಃ=ದೃಷ್ಟಾಂತಪೂರ್ವಕವಾಗಿ ಕೃತೋ ಹಿ=ಹೇಳಲ್ಪಟ್ಟಿದೆ. ಯತಃ-ಯಾವ ಕಾರಣದಿಂದ, ಭೀಮಾದ್ಯಾಃ=ಭೀಮಾರ್ಜುನಾದಿಗಳಿಂದ, ಸರ್ವೇ=ಸಮಸ್ತರೂ, ಕೃಷ್ಣವಶೇ=ಕೃಷ್ಣದೇವರಿಗೆ ಅಧೀನರೆಂದು, ಸಮ್ಯಕ್-ಚೆನ್ನಾಗಿ, ಈರಿತಾಃ=ಹೇಳಿರುತ್ತಾರೋ (ಅದೇ ಕಾರಣದಿಂದ) ಬ್ರಹ್ಮಾದೀನಾಂ=ಬ್ರಹ್ಮ ರುದ್ರಾದಿಗಳಿಗೆ, ವಿಷ್ಣುವಶತ್ವಂ=ವಿಷ್ಣುವಿನ ಅಧೀನತೆಯು, ಪ್ರಕಾಶಿತಂ ಹಿ=ಸ್ಪಷ್ಟವಾಗಿ ತಿಳಿಸಿರುತ್ತದೆಯಷ್ಟೆ. ಯಸ್ಮಾತ್-ವ್ಯಾಸಾವತಾರದಿಂದ ಬ್ರಹ್ಮ ರುದ್ರಾದಿರೂಪಿ

ಣಾಂ=ಬ್ರಹ್ಮ ರುದ್ರಾದಿಗಳ ಅಂಶರೂ ಅವತಾರರೂ ಆಗಿರುವ ಭೀಮಾರ್ಜುನಾದಿಗಳ, ಶುಕಾದೀನಾಂ=ಶುಕ ವೈಶಂಪಾಯನ ಮುಂತಾದವರುಗಳಿಗೆ, ಜ್ಞಾನದಃ-ಜ್ಞಾನವನ್ನು ಕೊಡತಕ್ಕವನಾದ, ಮತ್ತು ವ್ಯಾಸಾತ್ಮನಾ=ವೇದವ್ಯಾಸಾವತಾರದಿಂದ, ತೇಷಾಂ-ಭೀಮಾರ್ಜುನಾದಿಗಳ, ಯಶಃ-ಯಶಸ್ಸನ್ನು, ಭಾರತೇ-ಭಾರತದಲ್ಲಿ, ಊಚಿವಾನ್-ಹೇಳಿದಪ್ರಯುಕ್ತ, ವಿಷ್ಣುಃ-ನಾರಾಯಣನು, ಸರ್ವೇಷಾಂ=ಬ್ರಹ್ಮ ರುದ್ರಾದಿಗಳಿಗೆ, ಜ್ಞಾನದಃ=ಜ್ಞಾನೋಪದೇಶಕನೂ ಮತ್ತು, ಯಶಃ=ಯಶಸ್ಸನ್ನು, ದಾತಾ=ಕೊಡತಕ್ಕವನು ಇತಿಚ=ಈ ರೀತಿಯಾಗಿ, ಉದಿತಃ=ಹೇಳಿಸಿಕೊಂಡಿರುತ್ತಾನೆ. ಬ್ರಹ್ಮಾ-ಬ್ರಹ್ಮದೇವರು, ದೇವೇಭ್ಯಃ-ದೇವತೆಗಳಿಗಿಂತಲೂ, ಶೇಷಾತ್=ಶೇಷದೇವರಿಗಿಂತಲೂ, ರುದ್ರಾತ್=ರುದ್ರದೇವರಿಗಿಂತಲೂ, ಅಧಿಕಃ-ಅಧಿಕನು (ಎಂಬುದನ್ನೂ) ಸರ್ವೇಭ್ಯಃ=ಸಮಸ್ತ ದೇವತೆಗಳಿಗಿಂತಲೂ, ಪ್ರಿಯಃ-ಪರಮಾತ್ಮನಿಗೆ ಪ್ರೀತಿಪಾತ್ರನೆಂಬುದನ್ನೂ, ಭೀಮನಿದರ್ಶನಾತ್=ಭೀಮಸೇನನ ದೃಷ್ಟಾಂತದಿಂದ, ಇತಿ=ಹೀಗೆ, ಭಾರತದಲ್ಲಿ ಹೇಳಲ್ಪಟ್ಟಿರುತ್ತದೆ.

ತಾತ್ಪರ್ಯ.— ಸರ್ವಶಾಸ್ತ್ರಾರ್ಥ ನಿರ್ಣಯವೂ ಭಾರತದಲ್ಲಿ ದೃಷ್ಟಾಂತಪೂರ್ವಕವಾಗಿ ಹೇಳಲ್ಪಟ್ಟಿವೆ ಎಂಬುವುದನ್ನು ವಿಶದಪಡಿಸುತ್ತಾರೆ.—ಭೀಮಾರ್ಜುನಾದಿಗಳು ಶ್ರೀಕೃಷ್ಣನಿಗೆ ಅಧೀನರೆಂದು ತಿಳಿಸಿರುತ್ತೆ. ವೇದವ್ಯಾಸರೂಪದಿಂದ ಆ ಭೀಮಾರ್ಜುನಾದಿಗಳ ಕೀರ್ತಿಯನ್ನು ಭಾರತದಲ್ಲಿ ಹೇಳಿರುವುದರಿಂದ ಬ್ರಹ್ಮರುದ್ರಾದಿಗಳ ಅಂಶರೂ ಅವತಾರರೂ ಆಗಿರುವ ವೈಶಂಪಾಯನ ಶುಕಾಚಾರ್ಯ ಪ್ರಭೃತಿಗಳಿಗೆ ಜ್ಞಾನವನ್ನೇ ಉಪದೇಶಮಾಡಿರುವುದರಿಂದ, ಬ್ರಹ್ಮಾದಿಗಳಿಗೆ ಜ್ಞಾನೋಪದೇಶಕನೂ, ಕೀರ್ತಿಯನ್ನು ಕೊಡತಕ್ಕವನೂ ಎಂತಲೂ ಹೇಳಿದಂತಾಯಿತು. ತಾರತಮ್ಯವು ಭಾರತದಲ್ಲಿ ದೃಷ್ಟಾಂತಪೂರ್ವಕವಾಗಿ ಹೇಳಿರುವುದನ್ನು ತಿಳಿಸುತ್ತಾರೆ.—ಭೀಮಸೇನದೇವರ ದೃಷ್ಟಾಂತದಿಂದ ಬ್ರಹ್ಮದೇವರು ಶೇಷರುದ್ರಾದಿಗಳಿಗಿಂತ ಉತ್ತಮರೆಂತಲೂ ಹರಿಗೆ ಸರ್ವರಿಗಿಂತಲೂ ಹೆಚ್ಚು ಪ್ರೀತಿಪಾತ್ರರೆಂತಲೂ ತಿಳಿಸಿರುತ್ತಾರೆ.

ವಿಶೇಷಾರ್ಥ.—ಗರುಡದೇವರಿಗೆ ಮನುಷ್ಯರಲ್ಲಿ ಅವತಾರವಿಲ್ಲದಪ್ರಯುಕ್ತ ಶೇಷಾತ್, ರುದ್ರಾತ್ ಎಂದು ಹೇಳಿರುವರು.

ಶ್ಲೋಕ ॥ ಭೂಭಾರಹರಣೇ ವಿಷ್ಣೋಃ ಪ್ರಧಾನಾಂಗಂ ಹಿ ಮಾರುತಿಃ । ಮಾಗಧಾದಿವಧಾದೇವ ದುರ್ಯೋಧನ ವಧಾದಪಿ ॥೧೩॥

ಯೋಯ ಏವಬಲಜ್ಯೇಷ್ಠಃ ಕ್ಷತ್ರಿಯೇಷು ಸ ಉತ್ತಮಃ । ಅಂಗಂ ಚೇದ್ವಿಷ್ಣು ಕಾರ್ಯೇಷು ತದ್ಭಕ್ತ್ಯೈವಚ ನಾನ್ಯಥಾ ॥೧೪॥

ಬಲಂ ಸ್ವೈಸರ್ಗಿಕಂ ತಚ್ಛೈದ್ಯರಾಜಸ್ಯಾದೇಸ್ತದನ್ಯಥಾ । ಅನ್ಯಾವೇಶನಿಮಿತ್ತಂ ತದ್ಬಲಮನ್ಯಾತ್ಮಕಂ ಹಿ ತತ್ ॥೧೫॥

ದೇವೇಷು ಬಲಿನಾಮೇವ ಭಕ್ತಿಜ್ಞಾನೇನ ಚಾನ್ಯಥಾ । ಸ ಏವ ಚ ಪ್ರಿಯೋ ವಿಷ್ಣೋರ್ನಾನ್ಯಥಾ ತು ಕಥಂಚನ ॥೧೬॥

ಅರ್ಥ.— ವಿಷ್ಣೋಃ=ನಾರಾಯಣನ, ಭೂಭಾರಹರಣೇ=ಭೂಭಾರ ಪರಿಹಾರ ಮಾಡುವ ವಿಷಯದಲ್ಲಿ, ಮಾರುತಿಃ=ಭೀಮಸೇನದೇವರು, ಮಗಧಾದಿವಧಾತ್ ಏವ=ಜರಾಸಂಧಾದಿಗಳನ್ನು ಸಂಹಾರ ಮಾಡುವುದರಿಂದಲೂ, ದುರ್ಯೋಧನವಧಾದಪಿ=ದುರ್ಯೋಧನನನ್ನು ಸಂಹಾರಮಾಡುವುದರಿಂದಲೂ, ಪ್ರಧಾನಾಂಗಂ=ಮುಖ್ಯ ಅಂಗಭೂತರು.

ತಾತ್ಪರ್ಯ.— ಭೀಮಸೇನದೇವರು ಎಲ್ಲರಿಗಿಂತಲೂ ಹೆಚ್ಚಾಗಿ ಏಕೆ ಶ್ರೀಹರಿಗೆ ಪ್ರಿಯರಾದವರೆಂದರೆ ಹೇಳುತ್ತಾರೆ. ಭಗವಂತನ ಭೂಭಾರಪರಿಹಾರಮಾಡುವ ವಿಷಯದಲ್ಲಿ ಭೀಮಸೇನದೇವರು ಜರಾಸಂಧಾದಿಗಳನ್ನು ಸಂಹಾರಮಾಡಿದ್ದರಿಂದಲೂ ದುರ್ಯೋಧನಾದಿಗಳನ್ನು ಸಂಹಾರಮಾಡಿದ್ದರಿಂದಲೂ ಮುಖ್ಯ ಅಂಗಭೂತರು.

ವಿಶೇಷಾರ್ಥ.— ಲೋಕದಲ್ಲಿ ಯಾವನು ಯಾವನ ಕಾರ್ಯದಲ್ಲಿ ಪ್ರಧಾನಾಂಗನಾಗಿರುತ್ತಾನೋ ಅವನು ಅವನಿಗೆ ಪ್ರಿಯನೆಂಬುವುದು ಪ್ರಸಿದ್ಧವು. ಆದ್ದರಿಂದ ಭೀಮಸೇನದೇವರು ಭಗವಂತನಿಗೆ ಪ್ರಿಯರು. ಇದಲ್ಲದೆ ಮಹಾಬಲಿಷ್ಠರಾದ ಜರಾಸಂಧ, ಕೀಚಕ, ದುರ್ಯೋಧನ ಮೊದಲಾದವರನ್ನು ಸಂಹಾರ ಮಾಡಿದ್ದರಿಂದ ಮಹಾಬಲಶಾಲಿಗಳು ಎಂದು ಪ್ರಸಿದ್ಧರಾದರು.

ಅರ್ಥ.— ಕ್ಷತ್ರಿಯೇಷು-ಕ್ಷತ್ರಿಯರುಗಳಲ್ಲಿ, ಯಃ-ಯಾವನು, ತತ್ ಭಕ್ತ್ಯೈವ=ಹರಿಯಲ್ಲಿ ಭಕ್ತಿಯಿಂದಲೇ, ವಿಷ್ಣುಕಾರ್ಯೇಷು=ವಿಷ್ಣು=ನಾರಾಯಣನ, ಕಾರ್ಯೇಷು=ಕಾರ್ಯಗಳಲ್ಲಿ, ಅಂಗಚೇತ್=ಅಂಗನಾಗಿರುತ್ತಾನೋ ಮತ್ತು ಯೋಯಏವ = ಯಾವನು, ಬಲಜೇಷ್ಠಃ = ಬಲದಿಂದಲೂ

ಜ್ಯೇಷ್ಠನಾಗಿರುತ್ತಾನೊ (ಹೆಚ್ಚು ಬಲವುಳ್ಳವನೊ), ಸಃ=ಅವನು, ಉತ್ತಮಃ=ಉತ್ತಮನು, ಅನ್ಯಥಾ=ಭಕ್ತಿ ಇಲ್ಲದೆ ಭಗವತ್ ಕಾರ್ಯಕ್ಕೆ ಅಂಗನಾಗಿರತಕ್ಕವನು, ನಚ=ಉತ್ತಮನಲ್ಲ.

ತಾತ್ಪರ್ಯ.—ಬಲದಲ್ಲಿ ಅಧಿಕರಾಗಿರುವ ಮಾತ್ರದಿಂದ ಉತ್ತಮತ್ವ ಹ್ಯಾಗೆ ಬರುತ್ತದೆ ಎಂದರೆ, ಅನುಮಾನ ಪ್ರಮಾಣದಿಂದ ಸಮರ್ಥನೆ ಮಾಡುವುದಕ್ಕೋಸ್ಕರ ವ್ಯಾಪ್ತಿಯನ್ನು ಹೇಳುತ್ತಾರೆ :—ಕ್ಷತ್ರಿಯರುಗಳಲ್ಲಿ ಯಾವನು ಹರಿಯಲ್ಲಿ ಭಕ್ತಿಯನ್ನಿಟ್ಟು ಭಗವತ್ ಕಾರ್ಯಗಳಲ್ಲಿ ಅಂಗನಾಗಿರುತ್ತಾನೊ ಮತ್ತು ಬಲದಿಂದ ಶ್ರೇಷ್ಠನಾಗಿರುತ್ತಾನೊ ಅವನು ಶ್ರೇಷ್ಠನು. ಭಕ್ತಿ ಇಲ್ಲದೆ ಹರಿಯ ಕಾರ್ಯಕ್ಕೆ ಅಂಗನಾಗಿರುವನು ಉತ್ತಮನಲ್ಲ.

ಅರ್ಥ.—ಬಲಂ=ಆ ಬಲವು, ನೈಸರ್ಗಿಕಂ = ಸ್ವಭಾವಸಿದ್ಧವಾಗಿರಬೇಕು, ಅನ್ಯಥಾ=ಹಾಗಲ್ಲದೆ, ವರಾಸ್ತ್ರಾದೇಃ=ವರ=ವರದ ಬಲದಿಂದಲಾದರೂ, ಅಸ್ತ್ರಾದೇಃ=ಅಸ್ತ್ರಾದಿಗಳಿಂದಲಾದರೂ, ತತ್ ಚೇತ್=ಅದು ಆದರೆ (ಅವು ಉತ್ತಮನಲ್ಲ). ಅನ್ಯಾವೇಶನಿಮಿತ್ತಂ=ಅನ್ಯ=ಇತರರ, ಅವೇಶ ನಿಮಿತ್ತಂ = ಆವೇಶದಿಂದುಂಟಾದ, ಬಲಂಚೇತ್ = ಬಲಾಧಿಕ್ಯವಾದರೆ, ತತ್=ಆ ಬಲವು, ಅನ್ಯಾತ್ಮಕಂ=ಆ ಅನ್ಯರದೆ, ಹಿ=ಪ್ರಸಿದ್ಧವು.

ತಾತ್ಪರ್ಯ.—ಬಲವು ಸ್ವಭಾವಸಿದ್ಧವಾಗಿರಬೇಕು. ಹಾಗಲ್ಲದೆ ವರಬಲದಿಂದಲಾದರೂ, ಅಸ್ತ್ರ ಬಲದಿಂದಲಾದರೂ ಇದ್ದರೆ ಅದು ಉತ್ತಮವೆನ್ನಿಸಿಕೊಳ್ಳಲಾರದು. ಇತರರ ಆವೇಶದಿಂದ ಬಲಾಧಿಕ್ಯವಿದ್ದರೆ ಅದನ್ನ ಉತ್ತಮವೆಂದು ತಿಳಿಯಬಾರದು. ಯಾರ ಆವೇಶದಿಂದ ಬಲವು ಅಧಿಕವಾಗಿರುತ್ತದೊ ಅವರಿಗೇ ಆ ಬಲಾಧಿಕ್ಯವನ್ನೂ ಉತ್ತಮತ್ವವನ್ನೂ ತಿಳಿಸುತ್ತದೆ. ಆವೇಶಕ್ಕೆ ಸ್ಥಾನನಾದ ಪುರುಷನಿಗೆ ಉತ್ತಮತ್ವವನ್ನ ತಿಳಿಸಲಾರದು.

ಅರ್ಥ.—ದೇವೇಷು=ದೇವತೆಗಳಲ್ಲಿ, ಬಲಿನಾಮೇವ = ಬಲಿಷ್ಠರಿಗೇ ಭಕ್ತಿಜ್ಞಾನೇ=ಭಕ್ತಿಯೂ ಮತ್ತು ಜ್ಞಾನವೂ (ಇರುತ್ತದೆ), ಅನ್ಯಥಾ=ಇದಕ್ಕೆ ವ್ಯತ್ಯಾಸವು, ನಚ=ಇಲ್ಲವು, ಸಪುಮಾ = ಅಂತಹ ಭಕ್ತಿ ಜ್ಞಾನವುಳ್ಳ ಪುರುಷನೆ, ವಿಷ್ಣೋಃ=ಹರಿಗೆ, ಪ್ರಿಯಃ=ಪ್ರೀತಿಪಾತ್ರನು, ಕಥಂಚನ=ಯಾವ ಕಾರಣದಿಂದಲೂ, ಅನ್ಯಥಾ=ಇದಕ್ಕೆ ಬದಲು, ನ=ಇಲ್ಲವು.

ತಾತ್ಪರ್ಯ.—ಕ್ಷತ್ರಿಯರುಗಳಲ್ಲಿ ಎಂದು ಹೇಳಿದ್ದರಿಂದ ದೇವತೆಗಳಲ್ಲಿ ಶ್ರೇಷ್ಠರಾದ ಬ್ರಹ್ಮ ದೇವರಿಗೆ ಉತ್ತಮತ್ವ ಸಿದ್ಧಿಸಲಿಲ್ಲವಲ್ಲಾ ಅಂದರೆ ಹೇಳುತ್ತಾರೆ:—ದೇವತೆಗಳಲ್ಲಿ ಯಾರು ಬಲಿಷ್ಠರೋ ಅವರಿಗೇ ಭಕ್ತಿ ಜ್ಞಾನವೂ ಇರುತ್ತದೆ. ಇದಕ್ಕೆ ಅನ್ಯಥಾ ಇಲ್ಲ. ಯಾವಾತನಿಗೆ ಎಲ್ಲರಿಗಿಂತ ಅಧಿಕವಾದ ಬಲ ಭಕ್ತಿ ಜ್ಞಾನಗಳಿರುತ್ತವೆಯೋ ಆತನೇ ಹರಿಗೆ ಅತ್ಯಂತ ಪ್ರಿಯನು, ಯಾವ ಕಾರಣದಿಂದಲೂ ಇದಕ್ಕೆ ಅನ್ಯಥಾ ಆಗುವುದಿಲ್ಲ.

ವಿಶೇಷಾರ್ಥ.—ಇಲ್ಲಿ ಭಕ್ತಿ, ಜ್ಞಾನವೆಂದು ಎರಡನ್ನು ಹೇಳಿರುವುದರಿಂದ ಭಕ್ತಿ ಎಂಬುವದಕ್ಕೆ ಮಹಾತ್ಮ್ಯ ಜ್ಞಾನಪೂರ್ವಕ ಸುದೃಢ ಸ್ನೇಹವೆಂಬ ಅರ್ಥವನ್ನು ಗ್ರಹಿಸಬೇಕು. ಭಕ್ತಿ ಜ್ಞಾನವು ದ್ವಂದ್ವ ರೂಪವೆಂದು ತಿಳಿಯಬೇಕು.

**ಶ್ಲೋಕ॥ ತಸ್ಮಾದ್ಯೋಯೋಬಲಜ್ಯೇಷ್ಠಃ ಸಗುಣ ಜ್ಯೇಷ್ಠ ಏವಚ ॥**
**ಬಲಂಹಿಕ್ಷತ್ರಿಯೇವ್ಯಕ್ತಂ ಜ್ಞಾಯತೇ ಸ್ಥೂಲದೃಷ್ಟಿಭಿಃ॥೨೦॥**

**ಶ್ಲೋಕ॥ ಜ್ಞಾನಾದಯೋಗುಣಾಯಸ್ಮಾತ್ ಜ್ಞಾಯಂತೇಸೂಕ್ಷ್ಮದೃಷ್ಟಿಭಿಃ॥**
**ತಸ್ಮಾದ್ಯತ್ರ ಬಲಂತತ್ರ ವಿಜ್ಞಾತವ್ಯಾಗುಣಾಃ ಪರೇ ॥೨೧॥**

ಅರ್ಥ.—ತಸ್ಮಾತ್=ಆದಕಾರಣದಿಂದ, ಯಃ, ಯಃ = ಯಾವನು ಯಾವನು, ಬಲಜ್ಯೇಷ್ಠಃ—ಬಲದಲ್ಲಿ ಅಧಿಕನೋ, ಸಃ=ಅವನವನು, ಗುಣ ಜ್ಯೇಷ್ಠಏವಚ = ಗುಣದಲ್ಲಿಯೂ ಅಧಿಕನೇ, ಕ್ಷತ್ರಿಯೇ = ಕ್ಷತ್ರಿಯರಲ್ಲಿ, ಬಲಂ=ಬಲವು, ಸ್ಥೂಲದೃಷ್ಟಿಭಿಃ = ಸ್ಥೂಲ ದೃಷ್ಟಿ ಉಳ್ಳವರಿಂದಲೂ, ವ್ಯಕ್ತಂ=ಸ್ಪಷ್ಟವಾಗಿ, ಜ್ಞಾಯತೇ=ಕಾಣಲ್ಪಡುತ್ತದೆ.

ತಾತ್ಪರ್ಯ.—ಕ್ಷತ್ರಿಯರುಗಳಲ್ಲಿ ಯಾವನು ಬಲದಿಂದಧಿಕನೋ ಅವನು ಗುಣಗಳಿಂದಲೂ ಅಧಿಕನೇ. ಕ್ಷತ್ರಿಯರುಗಳಲ್ಲಿ ಬಲವು ಸ್ಥೂಲ ದೃಷ್ಟಿಗಳಿಂದಲೂ ಸ್ಪಷ್ಟವಾಗಿ ಕಾಣಲ್ಪಡುತ್ತದೆಯಷ್ಟೆ?

ವಿಶೇಷಾರ್ಥ.—ಈ ಶ್ಲೋಕದ ಪೂರ್ವಾರ್ಧದಿಂದ "ಯೋಯ ಏವ" ಎಂಬ ೧೭ನೇ ಶ್ಲೋಕದ ಪೂರ್ವಾರ್ಧದಲ್ಲಿ ಸಿದ್ಧವಾದ ವ್ಯಾಪ್ತಿಯನ್ನು ಮತ್ತೂ ಅನುವಾದ ಮಾಡಿದ್ದಾರೆ. ಈ ವ್ಯಾಪ್ತಿಯಲ್ಲಿ ಕ್ಷತ್ರಿಯರೊಳಗೆ ಎಂಬ ಅಂಶವನ್ನ ಸೇರಿಸದೆ ಯಾರು ಯಾರು ಬಲಜ್ಯೇಷ್ಠರೋ

ಅವರು ಗುಣಜ್ಯೇಷ್ಠರೆಂದು ಹೇಳಬಹುದಷ್ಟೆ? ಹೀಗೆ ಹೇಳಿದರೆ ದೇವತೆಗಳಲ್ಲಿಯೂ ಈ ವ್ಯಾಪ್ತಿಯು ಉಂಟಾಗಿ ಗುಣಜ್ಯೇಷ್ಠತ್ವವು ಸಿದ್ಧವಾಗುವುದಲ್ಲವೆ, ಎಂವರೆ, ಕ್ಷತ್ರಿಯರಲ್ಲಿ ಸ್ಪಷ್ಟವಾಗಿ ಬಲವು ಎಲ್ಲರಿಗೂ ತಿಳಿಯಬರುವುದರಿಂದ ವ್ಯಾಪ್ತಿಜ್ಞಾನವು ಸುಲಭವಾಗಿ ಆಗುತ್ತದೆ ಎಂದು "ಕ್ಷತ್ರಿಯರಲ್ಲಿ" ಎಂಬ ಪದವನ್ನು ಸೇರಿಸಿರುವರು.

ಅರ್ಥ.—ಯಸ್ಮಾತ್=ಯಾವ ಕಾರಣದಿಂದ, ಸೂಕ್ಷ್ಮದೃಷ್ಟಿಭಿಃ=ಸೂಕ್ಷ್ಮದೃಷ್ಟಿಯುಳ್ಳ ಜ್ಞಾನಿಗಳಿಂದ, ಜ್ಞಾನಾದಯಃ=ಜ್ಞಾನ ಭಕ್ತ್ಯಾದಿಗಳು, ಗುಣಾಃ=ಗುಣಗಳು, ಜ್ಞಾಯಂತೇ=ತಿಳಿಯಲ್ಪಡುತ್ತವೆಯೋ, ತಸ್ಮಾತ್=ಆ ಕಾರಣದಿಂದ, ಯತ್ರ=ದೇವತೆಗಳಲ್ಲಿ, ಬಲಂ=ಬಲವು (ಇರುತ್ತೊ) ತತ್ರ=ಅವರಲ್ಲಿ, ಪರೇ=ಬೇರೆಯಾದ ಜ್ಞಾನ ಭಕ್ತ್ಯಾದಿ, ಗುಣಾಃ=ಗುಣಗಳು ಜ್ಞಾತವ್ಯಾಃ=ತಿಳಿಯಲ್ಪಡತಕ್ಕುವು.

ತಾತ್ಪರ್ಯ.—ಇತರ ಗುಣಗಳು ಇರುತ್ತವೆ ಎಂಬುವುದಕ್ಕೆ ಏನು ಪ್ರಮಾಣವೆಂದರೆ ಹೇಳುತ್ತಾರೆ :—ಜ್ಞಾನಾದಿಗಳು ಸೂಕ್ಷ್ಮದೃಷ್ಟಿಯುಳ್ಳ ಜ್ಞಾನಿಗಳಿಂದ ತಿಳಿಯಲ್ಪಡುತ್ತವೆ. (ಈಗ ವ್ಯಾಪ್ತಿಯನ್ನು ಪೂರ್ತಿ ಮಾಡುತ್ತಾರೆ), ಆದ ಪ್ರಯುಕ್ತ ದೇವತೆಗಳೊಳಗೆ ಯಾರಲ್ಲಿ ಅಧಿಕ ಬಲವಿರುತ್ತದೆಯೋ ಅವರಲ್ಲಿ ಜ್ಞಾನಭಕ್ತ್ಯಾದಿಗಳೂ ಇರುತ್ತವೆ ಎಂದು ತಿಳಿಯಬೇಕು

ಶ್ಲೋಕ॥ ದೇವೇಷ್ವೇವನಚಾನ್ಯೇಷು ವಾಸುದೇವಪ್ರತೀಪತಃ ॥
ಕ್ಷತ್ರಾದನ್ಯೇಷ್ವಪಿಬಲಂ ಪ್ರಮಾಣಂಯತ್ರಕೇಶವಃ ॥೨೨॥

ಶ್ಲೋಕ॥ ಪ್ರವೃತ್ತೋದುಷ್ಟನಿಧನೇ ಜ್ಞಾನಕಾರ್ಯೇತಥೈವಚ॥೨೩॥

ಶ್ಲೋಕ॥ ಅನ್ಯತ್ರಬ್ರಾಹ್ಮಣಾನಾಂತು ಪ್ರಮಾಣಂ ಜ್ಞಾನಮೇವಹಿ॥
ಕ್ಷತ್ರಿಯಾಣಾಂ ಬಲಂಚೈವ ಸರ್ವೇಷಾಂವಿಷ್ಣುಕಾರ್ಯತಾ ॥೨೪॥

ಅರ್ಥ.—ದೇವೇಷ್ವೇವ=ದೇವತೆಗಳಲ್ಲಿಯೇ (ಈ ವ್ಯಾಪ್ತಿ ಇರುತ್ತೆ) ಅನ್ಯೇಷು=ಇತರರುಗಳಲ್ಲಿ, ವಾಸುದೇವಪ್ರತೀಪತಃ=ವಾಸುದೇವ=ಹರಿಗೆ, ಪ್ರತೀಪತಃ = ವಿರುದ್ಧರಾದ್ದರಿಂದ, ನಚ = ಈ ವ್ಯಾಪ್ತಿ ಇರುವುದಿಲ್ಲ. ಯತ್ರ=ಯಾವದೇಶ ಕಾಲಗಳಲ್ಲಿ, ಕೇಶವಃ=ಹರಿಯು, ದುಷ್ಟನಿಧನೇ=ದುಷ್ಟರ ಸಂಹಾರ ವಿಷಯದಲ್ಲಿ, ಪ್ರವೃತ್ತಃ = ಪ್ರವೃತ್ತಿಸುತ್ತಾನೋ, ತದಾ=ಆಗ, ಕ್ಷತ್ರಾತ್=ಕ್ಷತ್ರಿಯರಿಗಿಂತಲೂ, ಅನ್ಯೇಷ್ವಪಿ = ಇತರರಾದ

ಬ್ರಾಹ್ಮಣಾದಿಗಳಲ್ಲಿಯೂ, ಬಲಂ = ಬಲವು, ಪ್ರಮಾಣಂ = ಜ್ಞಾಪಕವು, ತಥೈವ=ಹಾಗೆಯೇ, ಜ್ಞಾನಕಾರ್ಯೇಷು=ಜ್ಞಾನಕಾರ್ಯದಲ್ಲಿ ಪ್ರವೃತ್ತನಾದರೆ, ಆಗ ಕ್ಷಾತ್ರಿಯಾದಿಗಳಲ್ಲಿ ಜ್ಞಾನವೂ ಪ್ರಮಾಣವೆಂತ ತಿಳಿಯಬೇಕು. ಅನ್ಯತ್ರ=ಹರಿಯು ದುಷ್ಟರನ್ನು ಸಂಹಾರ ಮಾಡದೇ ಇರುವ ಕಾಲದಲ್ಲಿ, ಬ್ರಾಹ್ಮಣಾನಾಂ=ಬ್ರಾಹ್ಮಣರುಗಳಿಗೆ, ಜ್ಞಾನಮೇವಹಿ=ಜ್ಞಾನವೇ ಶ್ರೇಷ್ಠತ್ವಕ್ಕೆ ಕಾರಣವು. ತು=(ಇದು) ಪ್ರಸಿದ್ಧವು, ಕ್ಷತ್ರಿಯಾಣಾಂ=ಕ್ಷತ್ರಿಯರುಗಳಿಗೆ, ಬಲಮೇವಚ=ಬಲವೇ ಮುಖ್ಯ ಜ್ಞಾಪಕ, ಸರ್ವೇಷಾಂಚ=ಬ್ರಾಹ್ಮಣಾದಿ ಸರ್ವ ವರ್ಣದವರಿಗೂ, ವಿಷ್ಣುಕಾರ್ಯತಾ = ವಿಷ್ಣುವಿನ ಇಚ್ಛೆಯಂತೆ ಕೆಲಸ ಮಾಡುವುದು ಅವಶ್ಯಕವೆಂದು ತಿಳಿಯಬೇಕು.

ತಾತ್ಪರ್ಯ.—ದೇವ ವ್ಯತಿರಿಕ್ತರುಗಳಲ್ಲಿ ವಿಷ್ಣು ದ್ವೇಷ ಇರುವುದರಿಂದ ಈ ವ್ಯಾಪ್ತಿಗೆ ಅವಕಾಶವಿಲ್ಲ (ಹೀಗಾದರೆ ದ್ರೋಣ, ಅಶ್ವತ್ಥಾಮಾದಿಗಳಲ್ಲಿರುವ ಬಲವು ಅವರುಗಳು ಕ್ಷತ್ರಿಯರು ಅಲ್ಲದಿರುವ ಪ್ರಯುಕ್ತ ಅವರಿಗೆ ಉತ್ತಮತ್ವ ಸಾಧಕವಾಗಲಾರದಷ್ಟೆ? ಎಂದರೆ ಹೇಳುತ್ತಾರೆ) ಪರಮಾತ್ಮನು ಯಾವ ಯಾವ ಅವತಾರಗಳಲ್ಲಿ ದುಷ್ಟನಿಗ್ರಹಕ್ಕೆ ಪ್ರವರ್ತಿಸುತ್ತಾನೋ ಆ ಕಾಲಗಳಲ್ಲಿ ಕ್ಷತ್ರಿಯ ವ್ಯತಿರಿಕ್ತರಲ್ಲಿಯೂ ಇರುವ ಬಲವು ಅವರ ಉತ್ತಮತ್ವಕ್ಕೆ ಸಾಧಕವಾಗುವುದು. ಹೀಗೆಯೇ ಯಾವ ಅವತಾರದಲ್ಲಿ ಜ್ಞಾನೋಪದೇಶರೂಪ ಕಾರ್ಯದಲ್ಲಿ ಹರಿಯು ಪ್ರವರ್ತಿಸುವನೋ ಆಗ ಆ ಕಾರ್ಯಕ್ಕೆ ಅನುಕೂಲರಾಗಿದ್ದ ಕ್ಷತ್ರಿಯರ ಜ್ಞಾನವೂ ಅವರುಗಳ ಉತ್ತಮತ್ವಕ್ಕೆ ಸಾಧಕವಾಗುವುದು. (೨೩) (ಹೀಗಾದರೆ ಬ್ರಾಹ್ಮಣರಿಗೆ ಜ್ಞಾನವೇ ಕ್ಷತ್ರಿಯರಿಗೆ ಬಲವೇ ಅವರವರ ಉತ್ತಮತ್ವಕ್ಕೆ ಜ್ಞಾಪಕವೆಂಬ ವ್ಯವಸ್ಥೆಗೆ ಏನು ಗತಿಯೆಂದರೆ ಹೇಳುತ್ತಾರೆ) ಭಗವಂತನು ದುಷ್ಟ ನಿಗ್ರಹ ರೂಪ ಕಾರ್ಯದಲ್ಲಿ ಪ್ರವೃತ್ತಿಸದೇ ಇರುವ ಸಮಯದಲ್ಲಿ ಬ್ರಾಹ್ಮಣರುಗಳಿಗೆ ಜ್ಞಾನವೇ ಉತ್ತಮತ್ವಕ್ಕೆ ಜ್ಞಾಪಕವು, ಹೀಗೆ ಹರಿಯು ಜ್ಞಾನ ಕಾರ್ಯದಲ್ಲಿ ಪ್ರವೃತ್ತಿಸದೇ ಇರುವಾಗ ಕ್ಷತ್ರಿಯರುಗಳಿಗೆ ಬಲವೇ ಉತ್ತಮತ್ವಕ್ಕೆ ಸಾಧಕವು ಎಂದು ತಿಳಿಯಬೇಕು. ಬ್ರಾಹ್ಮಣ ಕ್ಷತ್ರಿಯಾದಿಗಳೆಲ್ಲರಿಗೂ ಜ್ಞಾನ ಬಲಾದಿಗಳು ಹರಿಯ ಕಾರ್ಯಕ್ಕೆ ಅನುಕೂಲವಾಗಿದ್ದರೇನೇ ಉತ್ತಮತ್ವ ಜ್ಞಾಪಕವೆಂದು ತಿಳಿಯಬೇಕು.

ಶ್ಲೋಕ॥ ಕೃಷ್ಣರಾಮಾದಿರೂಪೇಷು ಬಲಕಾರ್ಯೋ ಜನಾರ್ದನಃ ॥
ದತ್ತವ್ಯಾಸಾದಿರೂಪೇಷು ಜ್ಞಾನಕಾರ್ಯಸ್ತಥಾ ಪ್ರಭುಃ ॥೨೫॥

ಶ್ಲೋಕ॥ ಮತ್ಸ್ಯ ಕೂರ್ಮವರಾಹಾಶ್ಚ ಸಿಂಹವಾಮನಭಾರ್ಗವಾಃ ॥
ರಾಘವಃ ಕೃಷ್ಣಬುದ್ಧೌ ಚ ಕೃಷ್ಣದ್ವೈಪಾಯನಸ್ತಥಾ ॥೨೬॥

ಶ್ಲೋಕ॥ ಕಪಿಲೋ ದತ್ತಋಷಭೌ ಶಿಂಶುಮಾರೋ ರುಚೇಸ್ಸುತಃ ॥
ನಾರಾಯಣೋ ಹರಿಃ ಕೃಷ್ಣಃ ತಾಪಸೋ ಮನುರೇವ ಚ ॥೨೭॥

ಶ್ಲೋಕ॥ ಮಹಿದಾಸಸ್ತಥಾಹಂಸಃ ಸ್ತ್ರೀರೂಪೋ ಹಯಶೀರ್ಷವಾನ್ ॥
ತಥೈವ ಬಡಬಾವಕ್ತ್ರಃ ಕಲ್ಕೀ ಧನ್ವಂತರಿಃ ಪ್ರಭುಃ ॥೨೮॥

ಶ್ಲೋಕ॥ ಇತ್ಯಾದ್ಯಾಃ ಕೇವಲೋ ವಿಷ್ಣುಃ ನೈಷಾಂ ಭೇದಃ ಕಥಂಚನ ॥
ನ ವಿಶೇಷೋ ಗುಣೈಸ್ಸರ್ವೈಃ ಬಲಜ್ಞಾನಾದಿಭಿಃ ಕ್ವಚಿತ್ ॥೨೯॥

ಅರ್ಥ.—ಜನಾರ್ದನಃ=ಸರ್ವಜಗತ್ಸಂಹಾರಕನಾದ (ಜನ್ಮಾದಿ ಕ್ಲೇಶ ರಹಿತನಾದ) ಹರಿಯು, ಕೃಷ್ಣರಾಮಾದಿರೂಪೇಷು=ಕೃಷ್ಣ ರಾಮಾದಿ ಅವತಾರಗಳಲ್ಲಿ, ಬಲಕಾರ್ಯಃ=ಬಲ ಪ್ರದರ್ಶಕನೂ, ಪ್ರಭುಃ=ಸ್ವಾಮಿಯಾದ ಹರಿಯು, ತಥಾ=ಹಾಗೆಯೇ, ದತ್ತವ್ಯಾಸಾದಿರೂಪೇಷು=ದತ್ತ ವ್ಯಾಸಾದಿ ರೂಪಗಳಲ್ಲಿ, ಜ್ಞಾನಕಾರ್ಯಃ=ಜ್ಞಾನ ಪ್ರದರ್ಶಕನೂ, ಮತ್ಸ್ಯಕೂರ್ಮವರಾಹಾಶ್ಚ=ಮತ್ಸ್ಯ, ಕೂರ್ಮ, ವರಾಹ ರೂಪಗಳೂ, ಸಿಂಹವಾಮನ ಭಾರ್ಗವಾಃ=ನೃಸಿಂಹ, ವಾಮನ, ಪರಶುರಾಮ, ರಾಘವಃ=ಶ್ರೀರಾಮ, ಕೃಷ್ಣಬುದ್ಧೌಚ=ಕೃಷ್ಣ ಬುದ್ಧಾವತಾರಗಳು, ತಥಾ=ಹಾಗೆ, ಕೃಷ್ಣದ್ವೈಪಾಯನಃ=ವ್ಯಾಸ, ಕಪಿಲಃ=ದೇವಹೂತಿಯಲ್ಲಿ ಅವತರಿಸಿದ ಕಪಿಲ, ದತ್ತಋಷಭೌ=ದತ್ತಾತ್ರೇಯ, ಋಷಭ, ಶಿಂಶುಮಾರಃ=ಶಿಂಶುಮಾರಾವತಾರವು, ರುಚೇಃ=ರುಚಿ ಪ್ರಜೇಶ್ವರನ, ಸುತಃ=ಮಕ್ಕಳಾದ ಯಜ್ಞನಾಮಕ, ನಾರಾಯಣಃ=ನಾರಾಯಣನು, ಹರಿಃ=ಹರಿಯು, ಕೃಷ್ಣಃ=ಕೃಷ್ಣ, ತಥೈವ=ಹಾಗೆಯೇ, ತಾಪಸೋ ಮನುಃ=ತಾಪಸನಾಮಕ ಅವತಾರವು, ಮಹಿದಾಸಃ=ಮಹಿದಾಸಾವತಾರವು, ಹಂಸಃ=ಹಂಸಾವತಾರವು, ಸ್ತ್ರೀರೂಪಃ=ಮೋಹಿನೀ ರೂಪವು, ಹಯಶೀರ್ಷವಾನ್=ಹಯಗ್ರೀವಾವತಾರ, ತಥೈವ=ಹಾಗೆಯೇ, ಬಡಬಾವಕ್ತ್ರಃ=ಬಡಬಾಗ್ನಿ ಅವತಾರವು, ಕಲ್ಕೀ=ಕಲ್ಕ್ಯವತಾರವು,

ಪ್ರಭುಃ=ಸ್ವಾಮಿಯಾದ, ಧನ್ವಂತರಿಃ=ಧನ್ವಂತರ್ಯವತಾರವು, ಇತ್ಯಾದ್ಯಾಃ=ಇವೇ ಮೊದಲಾದುವುಗಳು, ಕೇವಲಃ=ಸ್ವಲ್ಪವೂ ಭೇದವಿಲ್ಲದ, ವಿಷ್ಣೋಃ=ವಿಷ್ಣುವಿನ ಅವತಾರಗಳು, ಏಷಾಂ=ಇವುಗಳಿಗೆ, ಕಥಂಚನ=ಯಾವ ರೀತಿಯಲ್ಲಿಯೂ, ಭೇದಃ=ವ್ಯತ್ಯಾಸವು, ನ=ಇಲ್ಲ, ಬಲಜ್ಞಾನಾದಿಭಿಃ=ಬಲಜ್ಞಾನಾದಿ, ಸರ್ವೈಃ=ಸಮಸ್ತವಾದ, ಗುಣೈಃ=ಗುಣಗಳಿಂದ, ಕ್ವಚಿತ್=ಸ್ವಲ್ಪವೂ, ವಿಶೇಷಃ=ಭೇದವು, ನ=ಇಲ್ಲ.

ತಾತ್ಪರ್ಯ—ಪರಮಾತ್ಮನ ಜ್ಞಾನ ಕಾರ್ಯ ಅವತಾರಗಳನ್ನೂ, ಬಲಕಾರ್ಯ ಅವತಾರಗಳನ್ನೂ ಹೇಳುತ್ತಾರೆ—ಸರ್ವ ಜಗತ್ಸಂಹಾರಕನಾದ ಅಥವಾ ಜನ್ಮಾದಿ ಕ್ಲೇಶರಹಿತನಾದ ಹರಿಯು ಕೃಷ್ಣ ರಾಮಾದಿ ಅವತಾರಗಳಲ್ಲಿ ಬಲಕಾರ್ಯ ಪ್ರದರ್ಶಕನೂ ಆ ಪ್ರಭುವಾದ ಹರಿಯು ಹಾಗೆಯೇ ದತ್ತಾತ್ರೇಯ ಮಹಿದಾಸಾದಿ ಅವತಾರಗಳಲ್ಲಿ ಜ್ಞಾನಕಾರ್ಯ ಪ್ರವರ್ತಕನೂ (ಈ ಕೃಷ್ಣ ರಾಮಾದಿ ರೂಪಗಳು ಹರಿಯ ಅವತಾರವೆಂದು ಹೇಳುತ್ತಾರೆ.) ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭಾರ್ಗವ, ರಾಮ, ಕೃಷ್ಣ, ಬುದ್ಧ, ವೇದವ್ಯಾಸ, ಕಪಿಲ, ದತ್ತಾತ್ರೇಯ, ಋಷಭ, ಶಿಂಶುಮಾರ, ರುಚಿ ಪ್ರಜೇಶ್ವರನ ಪುತ್ರ ಯಜ್ಞ, ಧರ್ಮ ಪ್ರಜೇಶ್ವರನ ಪುತ್ರರಾದ ನಾರಾಯಣ, ಹರಿ, ಕೃಷ್ಣ ಎಂಬ ಅವತಾರಗಳು ಮತ್ತು ಗಜೇಂದ್ರ ವರದನಾದ ತಾಪಸನಾಮಕ ಅವತಾರವು, ಮಹಿದಾಸ, ಹಂಸ, ಮೋಹಿನೀ, ಹಯಗ್ರೀವ, (ಈ ಹಯಗ್ರೀವ ರೂಪವೂ ಸ್ತ್ರೀ ರೂಪವೆಂದು ಹೇಳುವರು) ಬಡಬಾಗ್ನಿ, ಕಲ್ಕಿ, ಧನ್ವಂತರಿ, ಇವೇ ಮೊದಲಾದ ಅವತಾರಗಳು ಕೇವಲ ಹರಿಯೇ. ಈ ಅವತಾರಗಳಿಗೂ ಮೂಲರೂಪಿ ನಾರಾಯಣನಿಗೂ ಸರ್ವಥಾ ಭೇದವಿಲ್ಲ, ಬಲ ಜ್ಞಾನಾದಿ ಸರ್ವ ಗುಣಗಳಿಂದಲೂ ಯಾವ ದೇಶ ಕಾಲಗಳಲ್ಲಿಯೂ ಈ ಅವತಾರಗಳಿಗೆ ಪರಸ್ಪರ ಭೇದವು ಸರ್ವಥಾ ಇಲ್ಲವೇ ಇಲ್ಲ.

**ಶ್ಲೋಕ|| ಶ್ರೀಬ್ರಹ್ಮರುದ್ರಶೇಷಾಂಶ್ಚ ವೀಂದ್ರೇಂದ್ರೌ ಕಾಮ ಏವ ಚ ||**
**ಕಾಮಪುತ್ರೋಽನಿರುದ್ಧಶ್ಚ ಸೂರ್ಯಚಂದ್ರೌ ಬೃಹಸ್ಪತಿಃ ||೩೦||**

**ಶ್ಲೋಕ|| ಧರ್ಮ ಏಷಾಂ ತಥಾ ಭಾರ್ಯಾ ದಕ್ಷಾದ್ಯಾ ಮನವಸ್ತಥಾ ||**
**ಮನುಪುತ್ರಾಶ್ಚ ಋಷಯೋ ನಾರದಃ ಪರ್ವತಸ್ತಥಾ ||೩೧||**

ಶ್ಲೋಕ|| ಕಶ್ಯಪಃ ಸನಕಾದ್ಯಾಶ್ಚ ವನ್ಹ್ಯಾದ್ಯಾಶ್ಚೈವ ದೇವತಾಃ ||
ಭರತಃ ಕಾರ್ತವೀರ್ಯಶ್ಚ ವೈನ್ಯಾದ್ಯಾಶ್ಚಕ್ರವರ್ತಿನಃ ||೩೨||

ಶ್ಲೋಕ|| ಗಯಶ್ಚ ಲಕ್ಷ್ಮಣಾದ್ಯಾಶ್ಚ ತ್ರಯೋ ರೋಹಿಣಿನಂದನಃ ||
ಪ್ರದ್ಯುಮ್ನೋ ರೌಕ್ಮಿಣೇಯಶ್ಚ ತತ್ಪುತ್ರಶ್ಚಾನಿರುದ್ಧಕಃ ||೩೩||

ಶ್ಲೋಕ|| ನರಃ ಫಲ್ಗುನ ಇತ್ಯಾದ್ಯಾ ವಿಶೇಷಾವೇಶಿನೋ ಹರೇಃ ||
ವಾಲಿಸಾಂಬಾದಯಶ್ಚೈವ ಕಿಂಚಿದಾವೇಶಿನೋ ಹರೇಃ ||೩೪||

ಅರ್ಥ, ತಾತ್ಪರ್ಯ ಮತ್ತು ಅವತಾರಿಕೆ—ಲಕ್ಷ್ಮೀ ಬ್ರಹ್ಮ ರುದ್ರಾದಿಗಳು ಹರಿಯ ಅವತಾರವೆಂದು ಕೆಲವು ಪುರಾಣಾದಿಗಳಲ್ಲಿ ಹೇಳಿದೆ, ಈ ವಿಷಯವು ಇಲ್ಲಿ ಯಾಕೆ ಹೇಳಿಲ್ಲವೆಂದರೆ ಅವರ ಅಭಿಪ್ರಾಯವನ್ನು ತಿಳಿಸುತ್ತಾರೆ. ಲಕ್ಷ್ಮೀ, ಬ್ರಹ್ಮ, ರುದ್ರ, ಶೇಷ, ಗರುಡ, ಇಂದ್ರ, ಮನ್ಮಥ, ಮನ್ಮಥನ ಪುತ್ರನಾದ ಅನಿರುದ್ಧ, ಸೂರ್ಯ, ಚಂದ್ರ, ಬೃಹಸ್ಪತಿ, ಯಮಧರ್ಮರಾಯ ಇವರುಗಳ ಹೆಂಡತಿಯರು, ದಕ್ಷ ಮೊದಲಾದ ಪ್ರಜೇಶ್ವರರು, ಸ್ವಾಯಂಭುವಾದಿ ಮನುಗಳು ಹಾಗೆಯೇ ಅವರ ಪುತ್ರರಾದ ಪ್ರಿಯವ್ರತಾದಿಗಳು ಋಷಿಗಳೂ, ನಾರದರು, ಪರ್ವತಋಷಿ, ಕಶ್ಯಪರು, ಸನಕಾದಿಗಳು, ಅಗ್ನಿ ಮೊದಲಾದ ದೇವತೆಗಳು, ಭರತರಾಜ, ಕಾರ್ತವೀರ್ಯ, ಪೃಥುರಾಜ, ಮೊದಲಾದ ಚಕ್ರವರ್ತಿಗಳು, ಗಯ, ಲಕ್ಷ್ಮಣ, ಭರತ, ಶತ್ರುಘ್ನ (ಇವರೇ ತ್ರಯರು) ಬಲರಾಮ, ರುಕ್ಮಿಣೀ ಪುತ್ರ ಪ್ರದ್ಯುಮ್ನ, ಈ ಪ್ರದ್ಯುಮ್ನ ಪುತ್ರ ಅನಿರುದ್ಧ, ನರ, ಅರ್ಜುನ, ಇವರುಗಳೇ ಮೊದಲಾದವರು ಹರಿಯ ವಿಶೇಷ ಆವೇಶ ಉಳ್ಳವರು, ಈ ಆವೇಶ ಅಭಿಪ್ರಾಯದಿಂದ ಪುರಾಣಾದಿಗಳಲ್ಲಿ ಹರಿ ಎಂದು ಹೇಳಿರುತ್ತಾರೆ. ಇವರುಗಳೆಲ್ಲಾ ಬೇರೆ ಜೀವರೆಂದು ಹಿಂದೆ ತಿಳಿಸಿರುತ್ತೆ. (ಮೇಲೆ ಹೇಳಿದವರು ಹರಿಯ ವಿಶೇಷಾವೇಶಿಗಳಾದರೆ ಕಿಂಚಿದಾವೇಶಿಗಳು ಯಾರೆಂದರೆ ಅದನ್ನು ಹೇಳುತ್ತಾರೆ) ವಾಲಿ, ಸಾಂಬನೇ ಮೊದಲಾದವರು ಹರಿಯ ಸ್ವಲ್ಪ ಮಾತ್ರ ಆವೇಶ ಉಳ್ಳವರು.

ಶ್ಲೋಕ|| ತಸ್ಮಾದ್ವಲಪ್ರವೃತ್ತಸ್ಯ ರಾಮಕೃಷ್ಣಾತ್ಮನೋ ಹರೇಃ ||
ಅಂತರಂಗಂ ಹನೂಮಾಂಶ್ಚ ಭೀಮಸ್ತತ್ಕಾರ್ಯಸಾಧಕಃ ||೩೫||

ಶ್ಲೋಕ|| ಬ್ರಹ್ಮಾತ್ಮಕೋ ಯತೋ ವಾಯುಃ ಪದಂ ಬ್ರಾಹ್ಮಮಗಾತ್ಪರಾ||
ವಾಯೋರನ್ಯಸ್ಯ ನ ಬ್ರಹ್ಮಪದಂ ತಸ್ಮಾತ್ಸ ಏವ ಸಃ ||೩೬||

ಅರ್ಥ—ಬಲಪ್ರವೃತ್ತಸ್ಯ=ಬಲ ಕಾರ್ಯದಲ್ಲಿ ಪ್ರವೃತ್ತಿಸಿದ, ರಾಮ ಕೃಷ್ಣಾತ್ಮನಃ=ರಾಮ ಕೃಷ್ಣಾದಿ ರೂಪನಾದ, ಹರೇಃ=ನಾರಾಯಣನಿಗೆ, ಹನೂಮಾನ್=ಹನುಮಂತದೇವರು, ಭೀಮಃ=ಭೀಮಸೇನ ದೇವರು, ಅಂತ ರಂಗಂ=ಮುಖ್ಯ ಸಾಧಕರು, ತತ್ಕಾರ್ಯ ಸಾಧಕಶ್ಚ=ತತ್=ಆ ಹರಿಯ, ಕಾರ್ಯ=ಕಾರ್ಯಕ್ಕೆ, ಸಾಧಕಃ ಸಾಧಕರು, ಪುರಾ=ಪೂರ್ವಕಲ್ಪದ, ವಾಯುಃ=ವಾಯುದೇವರೇ, ಬ್ರಹ್ಮಂ=ಬ್ರಹ್ಮ ಸಂಬಂಧವಾದ, ಪದಂ= ಪದವಿಯನ್ನು, ಅಗಾತ್ ಹೊಂದಿದರೊ, ಯತಃ=ಆ ಕಾರಣದಿಂದ (ವಾಯು ದೇವರೇ) ಬ್ರಹ್ಮಾತ್ಮಕಃ = ಚತುರ್ಮುಖ ಬ್ರಹ್ಮದೇವರು, ವಾಯೋಃ = ವಾಯುದೇವರಿಗಿಂತಲೂ, ಅನ್ಯಸ್ಯ ಇತರರಿಗೆ, ಬ್ರಹ್ಮಪದಂ = ಬ್ರಹ್ಮ ಪದವಿಯು, ನ = ಆಗುವದೇ ಇಲ್ಲ, ತಸ್ಮಾತ್ = ಆದಕಾರಣದಿಂದ ಸ ಏವ = ಆ ವಾಯುದೇವರೇ, ಸಃ = ಬ್ರಹ್ಮದೇವರು.

ತಾತ್ಪರ್ಯ—(ವಾಯುದೇವರು ಹರಿಯ ಕಾರ್ಯಕ್ಕೆ ಪ್ರಧಾನಾಂಗ ಭೂತರೆಂದು ಪೂರ್ವದಲ್ಲಿ ಹೇಳಿದ್ದನ್ನು ಈಗ ಉಪಸಂಹಾರಮಾಡಿ ತಿಳಿಸು ತ್ತಾರೆ.) ಬಲಕಾರ್ಯದಲ್ಲಿ ಪ್ರವರ್ತಿಸಿದ ರಾಮಕೃಷ್ಣಾದಿ ರೂಪನಾದ ಹರಿಗೆ ಹನುಮಂತದೇವರು ಮತ್ತು ಭೀಮಸೇನ ದೇವರು ಮುಖ್ಯ ಅಂಗ ಭೂತರು. ಹರಿಯ ಕಾರ್ಯಕ್ಕೆ ಸಾಧಕರಾದ ಪ್ರಯುಕ್ತ ದೇವೋತ್ತಮರು (ವಾಯುದೇವರಿಗೆ ಹೇಳಿದ ಪ್ರಧಾನಾಂಗಭೂತತ್ವವು ಬ್ರಹ್ಮದೇವರಿಗೆ ಹೇಗೆ ಪ್ರಾಪ್ತವಾಗುವುದು ಅಂದರೆ ಹೇಳುತ್ತಾರೆ) ಪೂರ್ವಕಲ್ಪದ ವಾಯುದೇವರೇ ಈ ಕಲ್ಪವಲ್ಲಿ ಯಾವ ಕಾರಣದಿಂದ ಬ್ರಹ್ಮಪದವಿಯನ್ನು ಹೊಂದಿದರೋ ಆ ಕಾರಣದಿಂದಲೇ ವಾಯುದೇವರೇ ಚತುರ್ಮುಖ ಬ್ರಹ್ಮ ದೇವರು. ಆದ್ದರಿಂದ ವಾಯುದೇವರಿಗೆ ದೇವತೆಗಳಲ್ಲಿ ಉತ್ತಮತ್ವ ಹೇಳುವುದರಿಂದ ಬ್ರಹ್ಮದೇವರಿಗೂ ಆ ಉತ್ತಮತ್ವವು ಸಿದ್ಧವಾಗು ತ್ತದೆ. (ವಾಯು ವ್ಯತಿರಿಕ್ತರಿಗೆ ಬ್ರಹ್ಮಪದ ಬರುವುದೇ? ಎಂದರೆ ಹೇಳು ತ್ತಾರೆ.) ವಾಯು ವ್ಯತಿರಿಕ್ತರಿಗೆ ಸರ್ವಥಾ ಬ್ರಹ್ಮಪದ ಪ್ರಾಪ್ತವಾಗು ವುದೇ ಇಲ್ಲ. ಆದ್ದರಿಂದ ವಾಯುದೇವರೇ ಬ್ರಹ್ಮದೇವರು.

**ಶ್ಲೋಕ|| ಯತ್ರ ರೂಪಂ ತತ್ರ ಗುಣಾ ಭಕ್ತ್ಯಾದ್ಯಾಸ್ತ್ರೀಷು ನಿತ್ಯಶಃ ||**
**ರೂಪಂ ಹಿ ಸ್ಥೂಲದೃಷ್ಟೀನಾಂ ದೃಶ್ಯಂ ವ್ಯಕ್ತಂ ತತೋ ಹಿ ತತ್ ||**

ಅರ್ಥ—ಸ್ತ್ರೀಷು= ಹೆಂಗಸರುಗಳಲ್ಲಿ, ಯತ್ರ=ಯಾವ ಸ್ತ್ರೀಯರಲ್ಲಿ, ರೂಪಂ=ರೂಪವು (ಇರುತ್ತದೆಯೋ) ತತ್ರ=ಅವರಲ್ಲಿ, ನಿತ್ಯಶಃ=ಯಾವಾಗಲೂ, ಭಕ್ತ್ಯಾದ್ಯಾಃ=ಭಕ್ತಿ ಜ್ಞಾನವೇ ಮೊದಲಾದ, ಗುಣಾಃ=ಗುಣಗಳು, (ಇರುತ್ತವೆ), ರೂಪಂ=ಸೌಂದರ್ಯವು, ದೃಷ್ಟೀನಾಂ ಹಿ=ಜ್ಞಾನವುಳ್ಳ ಅಲ್ಪರಿಗೂ, ವ್ಯಕ್ತಂ= ಚೆನ್ನಾಗಿ, ದೃಶ್ಯಂ= ಕಾಣುವುದಲ್ಲವೆ? ತತಃ= ರೂಪವೇ ಚೆನ್ನಾಗಿ ತಿಳಿಯುವುದರಿಂದ, ತತ್=ಆ ರೂಪವೇ, ಹಿ=ಉತ್ತಮತ್ವ ಸೂಚಕವಾದ ಭಕ್ತ್ಯಾದಿಗಳು ಇರುತ್ತವೆ ಎಂದು ಜ್ಞಾಪಕವು.

ತಾತ್ಪರ್ಯ—ಹೆಂಗಸರುಗಳಲ್ಲಿ ಬಲ ಜ್ಞಾನಗಳು ಕಾಣಿಸದಿರುವುದರಿಂದ ಉತ್ತಮತ್ವವನ್ನು ಹೇಗೆ ತಿಳಿಯಬೇಕು ಎಂದರೆ ಹೇಳುತ್ತಾರೆ:— ಯಾವ ಹೆಂಗಸರಲ್ಲಿ ರೂಪ ಇರುತ್ತದೆಯೋ ಅವರಲ್ಲಿ ಯಾವಾಗಲೂ ಭಕ್ತಿ ಜ್ಞಾನಾದಿಗಳು ಇರುತ್ತವೆ ಎಂದು ತಿಳಿಯಬೇಕು. ರೂಪವು ಅಲ್ಪ ಜ್ಞಾನಿಗಳಿಗೂ ಚೆನ್ನಾಗಿ ಕಾಣುವುದರಿಂದ ಅದೇ ಅವರಿಗೆ ಉತ್ತಮತ್ವ ಜ್ಞಾಪಕವಾದ ಜ್ಞಾನ ಭಕ್ತ್ಯಾದಿಗಳಿಗೆ ಸೂಚಕವೆಂದು ತಿಳಿಯತಕ್ಕದ್ದು.

**ಶ್ಲೋಕ|| ಪ್ರಾಯೋ ವೇತ್ತುಂ ನ ಶಕ್ಯಂತೇ ಭಕ್ತ್ಯಾದ್ಯಾಃ ಸ್ತ್ರೀಷು ಯತ್ನತಃ||**
**ಯಾಸಾಂ ರೂಪಂ ಗುಣಾಸ್ತಾಸಾಂ ಭಕ್ತ್ಯಾದ್ಯಾ ಇತಿ ನಿಶ್ಚಯಃ ||**

**ಶ್ಲೋಕ|| ತಚ್ಚ ನೈಸರ್ಗಿಕಂ ರೂಪಂ ದ್ವಾತ್ರಿಂಶಲ್ಲಕ್ಷಣೈರ್ಯುತಂ ||**
**ನಾಲಕ್ಷಣಂ ವಪುರ್ಮಾತ್ರಂ ಗುಣಹೇತುಃ ಕಥಂಚನ ||೩೯||**

ಅರ್ಥ— ಸ್ತ್ರೀಷು = ಸ್ತ್ರೀಯರುಗಳಲ್ಲಿ, ಭಕ್ತ್ಯಾದ್ಯಾಃ = ಭಕ್ತಿಯೇ ಮೊದಲಾದ ಗುಣಗಳು, ಯತ್ನತಃ=ಯತ್ನಮಾಡುವುದರಿಂದಲೂ, ಪ್ರಾಯಃ= ಪ್ರಾಯಕವಾಗಿ, ವೇತ್ತುಂ=ತಿಳಿಯುವುದಕ್ಕೆ, ನ ಶಕ್ಯಂತೇ=ಸಾಧ್ಯವಾಗುವುದಿಲ್ಲ (ಆದ್ದರಿಂದ), ಯಾಸಾಂ=ಯಾರಿಗೆ, ರೂಪಂ=ಸುಲಕ್ಷಣವಾದ ರೂಪವು ಇರುತ್ತದೆಯೋ, ತಾಸಾಂ=ಅವರುಗಳಲ್ಲಿ, ಭಕ್ತ್ಯಾದ್ಯಾಃ=ಭಕ್ತಿಯೇ ಮೊದಲಾದ, ಗುಣಾಃ=ಗುಣಗಳು (ಇರುತ್ತವೆ), ಇತಿ=ಹೀಗೆಂದು, ನಿಶ್ಚಯಃ= ನಿಶ್ಚಯವು.

ತಾತ್ಪರ್ಯ—(ಹಿಂದೆ ಹೇಳಿದ್ದನ್ನೇ ಪ್ರತಿಪಾದನೆ ಮಾಡುತ್ತಾರೆ) ಹೆಂಗಸರಲ್ಲಿ ಭಕ್ತ್ಯಾದಿ ಗುಣಗಳು ಪ್ರಯತ್ನಪಟ್ಟರೂ ಕೂಡ ಪ್ರಾಯಕವಾಗಿ

ತಿಳಿಯುವುದಕ್ಕೆ ಸಾಧ್ಯವಾಗುವುದಿಲ್ಲ. ಆದುದರಿಂದ ಹೆಂಗಸರಲ್ಲಿ ಯಾರಿಗೆ ಸುಲಕ್ಷಣವಾದ ರೂಪವಿರುತ್ತದೆಯೋ ಅವರಲ್ಲಿ ಭಕ್ತ್ಯಾದಿಗಳು ಇರುತ್ತವೆ ಎಂದು ನಿಶ್ಚಯಿಸಬೇಕು.

ಅರ್ಥ—ತಚ್ಚ ರೂಪಂ=ಯಾವ ರೂಪವು, ನೈಸರ್ಗಿಕಂ=ಸ್ವಭಾವ ಸಿದ್ಧವೋ, ದ್ವಾತ್ರಿಂಶಲ್ಲಕ್ಷಣೈಃ=೩೨ ಲಕ್ಷಣಗಳಿಂದ, ಯುಕ್ತಂ=ಕೂಡಿರುವುದೋ, ಆ ರೂಪವೇ ಭಕ್ತಿ ಜ್ಞಾನಗಳಿಗೆ ಜ್ಞಾಪಕವು, ಅಲಕ್ಷಣಂ=ಸಲ್ಲಕ್ಷಣಗಳಿಲ್ಲದ, ವಪುರ್ಮಾತ್ರಂ=ಸುರೂಪವಾದ ಶರೀರ ಮಾತ್ರ, ಕಥಂಚನ= ಯಾವ ವಿಧದಿಂದಲೂ, ಗುಣಹೇತುಃ=ಗುಣ=ಭಕ್ತ್ಯಾದಿಗಳಿಗೆ, ಹೇತುಃ= ಕಾರಣವು, ನ=ಆಗುವುದಿಲ್ಲ.

ತಾತ್ಪರ್ಯ—(ಭಕ್ತಿ ಇಲ್ಲದ ಸ್ತ್ರೀಯರಲ್ಲಿ ರೂಪ ಕಂಡು ಬಂದಿರುವುದರಿಂದ ಹಿಂದೆ ಹೇಳಿದ ನಿಯಮವು ಹೇಗೆ ಕೂಡುವುದು ಅಂದರೆ ಹೇಳುತ್ತಾರೆ) ಯಾವ ಸ್ತ್ರೀಯರಲ್ಲಿ ಇರುವ ರೂಪವು ಸ್ವಭಾವಸಿದ್ಧವೋ ಮತ್ತು ೩೨ ಲಕ್ಷಣಗಳಿಂದ ಯುಕ್ತವಾದದ್ದೋ ಆ ರೂಪವೇ ಭಕ್ತಿ ಜ್ಞಾನಗಳಿಗೆ ಜ್ಞಾಪಕವು. ಸಮೀಚೀನವಾದ ಲಕ್ಷಣಗಳಿಲ್ಲದಿರುವ ಸುರೂಪವಾದ ಶರೀರವು ಯಾವ ವಿಧದಿಂದಲೂ ಭಕ್ತ್ಯಾದಿ ಗುಣಗಳಿಗೆ ಕಾರಣವಾಗಲಾರದು.

**ಶ್ಲೋಕ|| ಆಸುರೀಣಾಂ ವರಾದೇಸ್ತು ವಪುರ್ಮಾತ್ರಂ ಭವಿಷ್ಯತಿ ||**
**ನ ಲಕ್ಷಣಾನ್ಯತಸ್ತಾಸಾಂ ನೈವ ಭಕ್ತಿಃ ಕಥಂಚನ ||೪೦||**

ಅರ್ಥ—ಆಸುರೀಣಾಂ=ಅಸುರ ಜಾತಿಯ ಸ್ತ್ರೀಯರುಗಳಿಗೆ, ವರಾದೇಃ=ವರಾದಿಗಳಿಂದ, ವಪುರ್ಮಾತ್ರಂ ತು=ಸುರೂಪ ಮಾತ್ರ, ಭವಿಷ್ಯತಿ= ಇರುತ್ತದೆ, ಲಕ್ಷಣಾನಿ=ಸಲ್ಲಕ್ಷಣಗಳು ನ=ಇರುವುದಿಲ್ಲ, ಅತಃ=ಆದ್ದರಿಂದ, ತಾಸಾಂ= ಅವರುಗಳಿಗೆ, ಕಥಂಚನ= ಯಾವ ರೀತಿಯಿಂದಲೂ, ಭಕ್ತಿಃ= ಭಕ್ತಿಯು, ನೈವ= ಇರುವುದಿಲ್ಲ.

ತಾತ್ಪರ್ಯ—(ಹಿಂದೆ ಹೇಳಿದ ಅರ್ಥವನ್ನೇ ತಿರಿಗಿ ಹೇಳುತ್ತಾರೆ.) ಅಸುರ ಜಾತಿಯ ಹೆಂಗಸರುಗಳಿಗೆ ವರಾದಿಗಳಿಂದ ಸುರೂಪ ಮಾತ್ರ ಇರುತ್ತದೆ. ಸಮೀಚೀನವಾದ ಲಕ್ಷಣಗಳಿರುವುದಿಲ್ಲ. ಆದ್ದರಿಂದ ಅವರುಗಳಲ್ಲಿ ಸರ್ವ ಪ್ರಕಾರದಿಂದಲೂ ಹರಿ ಗುರುಗಳ ಭಕ್ತಿ ಇರುವುದಿಲ್ಲ.

ಶ್ಲೋಕ|| ತಸ್ಮಾದ್ರೂಪಗುಣೋದಾರಾ ಜಾನಕೀ ರುಕ್ಮಿಣೀ ತಥಾ ||
ಸತ್ಯಭಾಮೇತ್ಯಾದಿರೂಪಾ ಶ್ರೀಃ ಸರ್ವಪರಮಾ ಮತಾ ||೪೧||

ಅರ್ಥ—ತಸ್ಮಾತ್ = ಆದಕಾರಣದಿಂದ, ರೂಪಗುಣೋದಾರಾ = ರೂಪ= ರೂಪವೇನು, ಗುಣಾ= ಜ್ಞಾನ ಭಕ್ತ್ಯಾದಿಗಳೇನು ಇವುಗಳಿಂದ, ಉದಾರಾ=ಉತ್ಕೃಷ್ಟಳಾದ, ಜಾನಕೀ=ಸೀತೆಯು, ತಥಾ=ಹಾಗೆ, ರುಕ್ಮಿಣೀ= ರುಕ್ಮಿಣಿ, ಸತ್ಯಭಾಮಾ=ಸತ್ಯಭಾಮಾ ದೇವಿಯು, ಇತ್ಯಾದಿ ರೂಪಾ=ಇವೇ ಮೊದಲಾದ ರೂಪಗಳಾದ, ಶ್ರೀಃ= ಲಕ್ಷ್ಮೀದೇವಿಯು, ಸರ್ವಪರಮಾ= ಸರ್ವಶ್ರೇಷ್ಠಳು, ಮತಾ=ಇದು ಪ್ರಮಾಣ ಪ್ರಸಿದ್ಧವು.

ತಾತ್ಪರ್ಯ—(೩೨ ಲಕ್ಷಣಗಳಿಂದ ಕೂಡಿದವರಾಗಿಯೂ ಸ್ವಭಾವ ವಾದ ರೂಪ ಉಳ್ಳವರಾಗಿಯೂ ಭಕ್ತ್ಯಾದಿ ಗುಣಗಳಿಂದ ಕೂಡಿದವ ರಾಗಿಯೂ ಇರುವವರು ಯಾರು ಎಂದರೆ ಆಕೆಯನ್ನು ಹೇಳುತ್ತಾರೆ.) ಸ್ವಾಭಾ ವಿಕವಾಗಿಯೂ, ಸುಲಕ್ಷಣಯುಕ್ತವಾಗಿಯೂ, ಇರುವ ರೂಪವಾಗಿರುವುದ ರಿಂದ ಸೀತಾ, ರುಕ್ಮಿಣೀ, ಸತ್ಯಭಾಮೆ ಇವೇ ಮೊದಲಾದ ರೂಪಳಾದ ಲಕ್ಷ್ಮೀಯು ಭಕ್ತ್ಯಾದಿ ಗುಣಗಳಿಂದ ಎಲ್ಲರಿಗಿಂತಲೂ ಅತ್ಯುತ್ತಮಳು. ಇದು ಪ್ರಮಾಣ ಪ್ರಸಿದ್ಧವು.

ಶ್ಲೋಕ|| ತತಃ ಪಶ್ಚಾದ್ದ್ರೌಪದೀ ಚ ಸರ್ವಾಭ್ಯೋ ರೂಪತೋ ವರಾ ||
ಭೂಭಾರಹರಣೇ ಸಾಕ್ಷಾದಂಗಂ ಭೀಮವದೀಶಿತುಃ ||೪೨||

ಅರ್ಥ—ತತಃ= ಲಕ್ಷ್ಮೀಗೆ, ಪಶ್ಚಾತ್=ಅನಂತರದಲ್ಲಿ, ದ್ರೌಪದೀ ಚ= ದ್ರೌಪದೀ ದೇವಿಯು ಕೂಡ, ಸರ್ವಾಭ್ಯಃ=ಇತರ ಎಲ್ಲಾ ಸ್ತ್ರೀಯರಿಗಿಂತಲೂ, ರೂಪತಃ= ರೂಪದಲ್ಲಿ, ವರಾ= ಶ್ರೇಷ್ಠಳು, ಭೀಮವತ್= ಭೀಮಸೇನದೇವರ ಹಾಗೆ, ಈಶಿತುಃ = ಹರಿಯ, ಭೂಭಾರಹರಣೆ = ಭೂಭಾರಪರಿಹಾರ ಮಾಡುವ ಕಾರ್ಯದಲ್ಲಿ, ಸಾಕ್ಷಾತ್= ಮುಖ್ಯವಾದ, ಅಂಗಂ= ಸಾಧಕಳು.

ತಾತ್ಪರ್ಯ—ಲಕ್ಷ್ಮೀದೇವಿಯರ ನಂತರ ದ್ರೌಪದೀ ದೇವಿಯು ಇತರ ಎಲ್ಲಾ ಸ್ತ್ರೀಯರಿಗಿಂತಲೂ ರೂಪದಲ್ಲಿ ಶ್ರೇಷ್ಠಳು, ಮತ್ತು ಭೀಮ ಸೇನದೇವರು ಭಗವಂತನ ಭೂಭಾರ ಪರಿಹಾರ ರೂಪವಾದ ಕಾರ್ಯದಲ್ಲಿ ಹೇಗೆ ಮುಖ್ಯ ಸಾಧಕರೋ ಹಾಗೆ ದ್ರೌಪದಿಯು ಮುಖ್ಯ ಸಾಧಕಳು.

**ಶ್ಲೋಕ|| ಹಂತಾ ಚ ವೈರಹೇತುಶ್ಚ ಭೀಮಃ ಪಾಪಜನಸ್ಯ ತು ||**
**ದ್ರೌಪದೀ ವೈರಹೇತುಃ ಸ್ಯಾತ್ತಸ್ಮಾದ್ಭೀಮಾದನಂತರಾ ||೪೩||**

ಅರ್ಥ—ಭೀಮಃ = ಭೀಮಸೇನದೇವರು, ಪಾಪಜನಸ್ಯ = ಪಾಪಿಷ್ಠ ಜನರಿಗೆ, ತು= ಆದರೋ, ವೈರಹೇತುಶ್ಚ= ವಿಷ್ಣು ವೈಷ್ಣವರಲ್ಲಿ ದ್ವೇಷವನ್ನು ಹುಟ್ಟಿಸುವರು, ಚ= ಮತ್ತು ಹಂತಾ= ಅವರನ್ನು ಸಂಹಾರಮಾಡುತ್ತಾರೆ, ಸಾ= ಆ, ದ್ರೌಪದೀ= ದ್ರೌಪದೀ ದೇವಿಯು, ವೈರಹೇತುಃ= ವಿಷ್ಣು ವೈಷ್ಣವರ ದ್ವೇಷಕ್ಕೆ ಕಾರಣಳು, ತಸ್ಮಾತ್= ಆ ಕಾರಣದಿಂದ, ಭೀಮಾತ್= ಭೀಮಸೇನ ದೇವರಿಗಿಂತಲೂ, ಅನಂತರಾ= ಕಡಿಮೆಯಾದವಳು.

ತಾತ್ಪರ್ಯ— ಭೀಮಸೇನ ದೇವರಿಗೆ ದ್ರೌಪದಿಯು ಸಮಳೆಂದು ಶಂಕೆ ಬಂದರೆ ಅದಕ್ಕೆ ಹೇಳುತ್ತಾರೆ:— ಭೀಮಸೇನನು ಪಾಪಿ ಜನರಿಗೆ ವಿಷ್ಣು ವೈಷ್ಣವರಲ್ಲಿ ದ್ವೇಷವನ್ನು ಹುಟ್ಟಿಸಿ ಅವರನ್ನು ಸಂಹರಿಸುತ್ತಾನೆ. ದ್ರೌಪದಿಯು ಆ ಪಾಪಿಗಳಿಗೆ ವಿಷ್ಣು ವೈಷ್ಣವರಲ್ಲಿ ದ್ವೇಷವನ್ನು ಹುಟ್ಟಿಸುವುದಕ್ಕೆ ಮಾತ್ರಕಾರಣಭೂತಳು. ಆದ ಪ್ರಯುಕ್ತ ಭೀಮನಿಗಿಂತಲೂ ಕಡಿಮೆಯಾಗಿ ಭಗವತ್ಕಾರ್ಯಕ್ಕೆ ಸಾಧಕಳು.

**ಶ್ಲೋಕ|| ಬಲದೇವಸ್ತತಃ ಪಶ್ಚಾತ್ತತಃ ಪಶ್ಚಾಚ್ಚ ಫಲ್ಗುನಃ ||**
**ನರಾವೇಶಾದನ್ಯಥಾ ತು ದ್ರೌಣಿಃ ಪಶ್ಚಾತ್ತತೋ ಪರೇ ||೪೪||**
**ಶ್ಲೋಕ|| ರಾಮವಜ್ಜಾಂಬವತ್ಯಾದ್ಯಾಃ ಷಟ್ ತತೋ ರೇವತೀ ತಥಾ ||**
**ಲಕ್ಷ್ಮಣೋ ಹನುಮತ್ಪಶ್ಚಾತ್ತತೋ ಭರತವಾಲಿನೌ ||೪೫||**

ಅರ್ಥ—ತತಃ= ದ್ರೌಪದಿಯು, ಪಶ್ಚಾತ್= ಅನಂತರ, ಬಲದೇವ= ಬಲರಾಮನು, ತತಃ = ಬಲರಾಮನಿಗಿಂತಲೂ, ಪಶ್ಚಾತ್ = ಅನಂತರ, ಫಲ್ಗುಣಃ= ಅರ್ಜುನನು, ನರಾವೇಶಾತ್= ಪರಮಾತ್ಮನ ನರಾವೇಶದ ದೆಸೆಯಿಂದ, ಅನ್ಯಥಾ= ಆವೇಶವಿಲ್ಲದ ಕಾಲದಲ್ಲಿ, ದ್ರೌಣಿಃ= ಅಶ್ವತ್ಥಾಮಾಚಾರ್ಯರು, ಬಲರಾಮನಿಗಿಂತ ಕಡಿಮೆ, ತತಃಪಶ್ಚಾತ್= ಅಶ್ವತ್ಥಾಮಾಚಾರ್ಯರ ಅನಂತರ ಅರ್ಜುನ, ಪರೇ= ಪ್ರದ್ಯುಮ್ನ, ಅನಿರುದ್ಧಾದಿಗಳು (ಭಗವತ್ ಕಾರ್ಯಾಂಗಭೂತರು.)

ತಾತ್ಪರ್ಯ.—ದ್ರೌಪದೀ ಅನಂತರ ತಾರತಮ್ಯದಲ್ಲಿ ಬಲರಾಮ ದೇವರು ಉತ್ತಮರು. ಅರ್ಜುನನು ನರನಾಮಕ ಪರಮಾತ್ಮನ ಆವೇಶಕ್ಕೆ ಬಾಧ್ಯನಾದಾಗ ಅಶ್ವತ್ಥಾಮಾಚಾರ್ಯರಿಗಿಂತಲೂ ಉತ್ತಮನು. ಆವೇಶವಿಲ್ಲದ ಕಾಲದಲ್ಲಿ ಬಲರಾಮನನಂತರ ಅಶ್ವತ್ಥಾಮರು. ಅವರನಂತರ ಅರ್ಜುನನು ಬಲರಾಮನಲ್ಲಿ ಶುಕ್ಲಕೇಶಾವೇಶವಿರುವದ್ದರಿಂದಲೂ ಪರಮಾತ್ಮನಾವೇಶಕ್ಕೆ ಪರಸ್ಪರ ಬೇಧವಿಲ್ಲದ್ದರಿಂದ ಬಲರಾಮಾಪೇಕ್ಷಯಾ ಅರ್ಜುನನು ಆವೇಶಕಾಲದಲ್ಲಿಯೂ ಇತರ ಕಾಲದಲ್ಲಿಯೂ ಸಹ ಕಡಿಮೆಯೆಂದು ತಿಳಿಯಬೇಕು.

ವಿಶೇಷಾರ್ಥ.—ಈ ಶ್ಲೋಕದಲ್ಲಿ ಅರ್ಜುನನ ಆಧಿಕ್ಯಕ್ಕೆ ಕಾರಣವು ನರಾವೇಶವೆಂದು ಹೇಳಿದೆ. ಈ ಆವೇಶವು ಲೋಕದಲ್ಲಿರುವ ದುಷ್ಟನಿಗ್ರಹ ಶಿಷ್ಟಪರಿಪಾಲನ ಕಾರ್ಯಕ್ಕೆ ಅವತರಿಸಿದ ನರ ಮತ್ತು ನಾರಾಯಣರೂಪಗಳು. ಆದ್ದರಿಂದ ಇದಕ್ಕೆ ಆಧಿಕ್ಯ ಹೇಳಬೇಕಾಗಿದೆ. ಆದರೆ ಲೋಕಸಂಹಾರ ಕಾರಣವಾದ ಸಂಕರುಷಣ ರೂಪ ಬಲರಾಮ ಉಪಾಶ್ಯವಾದ್ದರಿಂದಲೂ ಮತ್ತು ಶುಕ್ಲಕೇಶಾವೇಶವಿರುವದರಿಂದಲೂ, ಅರ್ಜುನನಿಗಿಂತಲೂ ಬಲರಾಮದೇವರು ಸರ್ವ ಅವಸ್ಥೆಗಳಲ್ಲಿಯೂ ಉತ್ತಮರು. ಋುದ್ರಾವತಾರರಾದ ಅಶ್ವತ್ಥಾಮಾಚಾರ್ಯರಿಗಿಂತಲೂ ಬಲರಾಮನ ಆಧಿಕ್ಯಕ್ಕೆ ಕಾರಣವೇನೆಂದರೆ ಯದ್ಯಪಿ ಋುದ್ರ ಶೇಷರು ಸಮರಾದರೂ, ಪದಾದಿಕ್ಯ ಆವೇಶಾದಿಕ್ಯದಿಂದ ಉತ್ತಮತ್ವ ಸೂಚಿತವಾಗಿದೆ. ಮತ್ತು ಭರತ ವಾಲಿಗಳಲ್ಲಿ ಭರತ ಕಾಮಾವತಾರ, ವಾಲಿ ಇಂದ್ರಾವತಾರ, ಆದರೂ ಭರತನಲ್ಲಿ ಚಕ್ರಾಭಿಮಾನ್ಯಮಾನ ಪ್ರದ್ಯುಮ್ನ ರೂಪದ ಆವೇಶದಿಂದ ರಾಮಾವತಾರದಲ್ಲಿ ಭರತನಿಗೆ ಆಧಿಕ್ಯ ಹೇಳಿದೆಯೆಂದು ತಿಳಿಯಬೇಕು.

ಪ್ರಮಾಣ.—(ಬ್ರಹ್ಮಸೂತ್ರಭಾಷ್ಯದಲ್ಲಿ) ಕ್ಷಿತಿಪಾ ಮನುಷ್ಯ ಗಂಧರ್ವಾ ದೇವಾಶ್ಚ ಪಿತರಶ್ಚಿರಾಃ ‖ ಆಜಾನಜಾಃ ಕರ್ಮಜಾಶ್ಚ । ತಾತ್ವಿಕಾಶ್ಚ ಶಚೀಪತಿಃ ಋುದ್ರೋ ಬ್ರಹ್ಮೇತಿ ಕ್ರಮಶಃ ‖ ತೇಷು ಚೈವೋತ್ತರಾಃ ನಿತ್ಯಾನಂದೇಚ ಭೋಗೇಚ ಜ್ಞಾನೈಶ್ವರ್ಯ ಗುಣೇಷುಚ । ಸರ್ವೇಶತ ಗುಣೋದ್ರಿಕ್ತಾಃ ಪೂರ್ವೇಸ್ಮಾದುತ್ತರೋತ್ತರಂ ‖

ಅರ್ಥ.—ಷಟ್-ಆರು ಮಂದಿಯರಾದ, ಜಾಂಬವತ್ಯಾದ್ಯಾಃ-ಜಾಂಬವತೀ ಮುಂತಾದವರು, ರಾಮವತ್=ಬಲರಾಮದೇವರಂತೆ, ಅಂಗಭೂತರು. ತತಃ=ಷಣ್ಮಹಿಷಿಯರ ದೆಶೆಯಿಂದ, ರೇವತೀ=ರೇವತೀದೇವಿಯು, ಯಥಾ-ಹೇಗೋ, ತಥಾ=ಹಾಗೆ ರಾಮಾವತಾರದಲ್ಲಿಯೂ, ಹನುಮತ್-ಹನುಮಂತದೇವರ, ಪಶ್ಚಾತ್=ಅನಂತರ, ಲಕ್ಷ್ಮಣಃ=ಲಕ್ಷ್ಮಣದೇವರು ತತಃ=ಅನಂತರ, ಭರತವಾಲಿನೌ=ಭರತ ವಾಲಿಗಳು, ತತಃ=ಭರತವಾಲಿಗಳ ದೆಶೆಯಿಂದ, ಪಶ್ಚಾತ್-ಅನಂತರ, ಶತ್ರುಘ್ನಶ್ಚ=ಶತ್ರುಘ್ನನು, ತತಃ=ಶತ್ರುಘ್ನನ ದೆಶೆಯಿಂದ, ಸುಗ್ರೀವಾದ್ಯಾಃ=ಸುಗ್ರೀವಾದಿಗಳು, ಅವರಾ=ಕಡಿಮೆಯಾದವರು.

ತಾತ್ಪರ್ಯ.—ಷಣ್ಮಹಿಷಿಯರು ಬಲರಾಮದೇವರಿಗೆ ಸಮರಾದರೂ ಜಾಂಬವತಿಯು ಪ್ರಧಾನಳು. ಹೀಗೆಯೇ ವಾಯು, ಭಾರತಿ, ಗರುಡ, ಶೇಷ, ಋದ್ರಾಧಿಗಳ ತಾರತಮ್ಯ ಉಂಟು. ಕೃಷ್ಣಾವತಾರದಲ್ಲಿ ಹೇಗೆ ದೇವತಾ ತಾರತಮ್ಯವಿದೆಯೋ ಹಾಗೆ ರಾಮಾವತಾರದಲ್ಲಿಯೂ ಹನುಮಂತ, ಲಕ್ಷ್ಮಣದೇವರು ಇವರುಗಳ ತಾರತಮ್ಯ ಉಂಟೆಂದು ತಿಳಿಯಬೇಕು.

ವಿಶೇಷಾರ್ಥ.—ಜಾಂಬವತಿಯು ಸಾಕ್ಷಾತ್ತಾಗಿ ಗೃಹೀತಳಾದ್ದರಿಂದ ಬಲರಾಮನಂತೆ ಭಗವತ್ ಕಾರ್ಯಕ್ಕೆ ಅಂಗಭೂತಳು. ಅನಂತರ ರೇವತಿದೇವಿಯರು. ಈ ಶ್ಲೋಕದಲ್ಲಿ ತಾರತಮ್ಯವನ್ನು ವಾಯುದೇವರು ಮೊದಲುಮಾಡಿ ಸುಗ್ರೀವಾದಿಗಳ ಪರ್ಯಂತರ ಸೂಚಿಸಿದ್ದರಿಂದ ಮೋಕ್ಷಸಾಧನೆಗೆ ತಾರತಮ್ಯವು ಅತ್ಯಾವಶ್ಯಕವೆಂದು ತಿಳಿಯಬೇಕು. ಪುರುಷರಲ್ಲಿ ಅಂದರೆ ದೇವತೆಗಳಲ್ಲಿ ಮಟ್ಟಿಗೆ ತಾರತಮ್ಯವಲ್ಲ, ದೇವಸ್ತ್ರೀಯರುಗಳಲ್ಲಿಯೂ ತಾರತಮ್ಯ ಉಂಟೆಂದು ತಿಳಿಸುವುದಕ್ಕಾಗಿ ಜಾಂಬವತೀ ಮುಂತಾದವರ ತಾರತಮ್ಯವನ್ನು ಹೇಳಿದ್ದಾರೆ. ಜಾಂಬವತಿಗೆ ಪ್ರಧಾನ್ಯವನ್ನು ಹೇಳಿದ್ದರಿಂದ ಮಿಕ್ಕ ಐದು ಜನಗಳು ಆವರಿಗಿಂತಲೂ ಸ್ವಲ್ಪ ಕಡಿಮೆ.

ಈ ವಿಷಯದಲ್ಲಿ ಪ್ರಮಾಣಗಳು.—

೧. ಯದಾವೇಶೋ ಬಹುಳಶ್ಚ್ಯಾದ್ರಮಾಯಾಃ ||

೨. ರಾಮೇಣ ತುಲ್ಯಾ ಜಾಂಬವತೀ ಪ್ರಿಯತ್ವೆ। ಕೃಷ್ಣಶ್ಯಾನ್ಯಾಃ ಕಿಂಚಿದೂನಾಃಶ್ಚತಸ್ಯಾಃ ||

೩. ಯದಾವೇಶೋ ಹ್ರಾಸಮುಪ್ರತಿತತ್ರ ಪ್ರದ್ಯುಮ್ನತೋ ವಿಂಶಗುಣಾಧಿಕಾಶ್ಯಃ ||

೪. ಛಾಂದೋಗಭಾಷ್ಯ ಸರ್ವೇತ್ಸೇತೆ ದಶೋತ್ತರಾಃ ಎಂಬುವ ಸ್ಥಳದಲ್ಲಿ ಇಂದ್ರ ಕಾಮಾಪೇಕ್ಷಯಾ ಉಮಾದಿಗಳು ಹತ್ತು ಗುಣ ಹೆಚ್ಚು ಉಮಾಪೇಕ್ಷಯಾ ಖುದ್ರಾದಿಗಳು ಹತ್ತು ಗುಣಗಳು ಉತ್ತಮರು.

ಅವತಾರಿಕೆ.—ಅವತಾರಗಳಲ್ಲಿ ಹರಿಯ ದುಷ್ಟವಧಾದಿಗಳಿಗೆ ಅಂಗಭೂತರಾದ ವಾಲಿಯೇ ಮುಂತಾದವರು ರಾಮಾವತಾರದಲ್ಲಿ ಸೇವೆಮಾಡದೇ ಇದ್ದುದರಿಂದ ಕಡಿಮೆಯಾದಂತೆಯೂ, ಸುಗ್ರೀವಾದಿಗಳು ಸೇವೆಮಾಡಿದ್ದರಿಂದ ಉತ್ತಮರಂತೆಯೂ, ಹಾಗೆಯೇ ಕರ್ಣಾದಿಗಳು ಸೇವೆಮಾಡದೆ ಇದ್ದದ್ದರಿಂದ ಅವರರಾದಂತೆಯೂ, ವಿವಿದಾದಿಗಳಿಗೆ ಉತ್ತಮತ್ವವೂ ಸೂಚಿಸುತ್ತದೆ. ಆದರೆ ಇದರಿಂದ ಸ್ವರೂಪ ನಿರ್ಣಯವಲ್ಲವೆಂದು ತಿಳಿಸುವುದಕ್ಕಾಗಿ ಈ ಶ್ಲೋಕವು ಪ್ರವೃತ್ತವಾಗಿದೆ.

ಶ್ಲೋಕ || ರಾಮಕಾರ್ಯಂತು ಯೈಸಮ್ಯಕ್ಸ್ವಯೋಗ್ಯಂ ನಕೃತಂ ಪುರಾ। ತೈಃ
ಪೂರಿತಂತು ಕೃಷ್ಣಾಯ ಭೀಭತ್ಸಾದ್ಯೈಃ ಸಮಂತತಃ ||೪೬||
ಅಧಿಕಂ ಯೈಃ ಕೃತಂತತ್ರ। ತೈರೂನಂಕೃತಮುತ್ರತತ್ ಕರ್ಣಾದ್ಯೈಃ
ಅಧಿಕಂ ಯೈಸ್ತು ಪ್ರಾದುರ್ಭಾವದ್ವಯೋಃಕೃತಂ ||೪೭||

ಅರ್ಥ.—ಪುರಾ=ಪೂರ್ವದಲ್ಲಿ, ಯೈಃ=ಯಾರಿಂದ, ರಾಮಕಾರ್ಯಂ=ರಾಮದೇವರ ಸೇವೆಯು, ಸಮ್ಯಗ್-ಚೆನ್ನಾಗಿ, ಸ್ವಯೋಗ್ಯ=ಯೋಗ್ಯತಾನುಸಾರ, ನಕೃತಂ=ಮಾಡಲ್ಪಡಲಿಲ್ಲವೋ, ತೈಃ=ಅಂಥ, ಭೀಭತ್ಸಾದ್ಯೈಃ=ಅರ್ಜುನಾದಿಗಳಿಂದ, ಸಮಂತತಃ-ಸರ್ವ ವಿಷಯದಲ್ಲಿಯೂ, ಕೃಷ್ಣಾಯ-ಕೃಷ್ಣರೂಪನಾದ ಶ್ರೀಹರಿಗೋಸ್ಕರ, ಪೂರಿತಂತು=ಪೂರ್ಣವಾಯಿತಷ್ಟೆ

ತತ್ರ=ರಾಮಾವತಾರದಲ್ಲಿ, ಯೈಃ=ಯಾರಿಂದ, ಅಧಿಕಂ=ಹೆಚ್ಚಾಗಿ, ಕೃತಂ=ಮಾಡಲ್ಪಟ್ಟಿತೋ, ತೈಃ=ಅವರುಗಳಿಂದ, ಅತ್ರ=ಕೃಷ್ಣಾವತಾರದಲ್ಲಿ ತತ್=ಆ ಪರಮಾತ್ಮನ ಸೇವೆಯು, ಊನಂ=ಕಡಿಮೆಯಾಗಿ, ಕೃತಂ=ಮಾಡಲ್ಪಟ್ಟಿತು. ಯೈಃ=ಯಾವ ಕರ್ಣಾದ್ಯೈಃಸ್ತು-ಕರ್ಣನೇ ಮೊದಲಾದವರುಗಳಿಂದಲಾದರೂ, ಪ್ರಾದುರ್ಭಾವದ್ವಯೇ=ಎರಡು ಅವತಾರಗಳಲ್ಲಿಯು ಕೃತಂ=ಮಾಡಲ್ಪಟ್ಟಿತು.

ತಾತ್ಪರ್ಯ.—ಪರಮಾತ್ಮನು ರಾಮಾವತಾರಮಾಡಿದ ಕಾಲದಲ್ಲಿ ಯಾವ ದೇವತೆಗಳು ಕಪಿ, ಮತ್ತು ಮಾನುಷರೂಪದಿಂದ ಅವತರಿಸಿ ಸೇವೆಯನ್ನು ಹೆಚ್ಚಾಗಿಮಾಡಿದರೋ ಅವರು ಕೃಷ್ಣಾವತಾರದಲ್ಲಿ ಕಡಿಮೆಯಾಗಿಯೂ, ರಾಮಾವತಾರದಲ್ಲಿ ಕಡಿಮೆಯಾಗಿ ಮಾಡಿದವರು ಕೃಷ್ಣಾವತಾರದಲ್ಲಿ ಹೆಚ್ಚಾಗಿಯೂ ಮಾಡಿರುವರು. ಮುಖ್ಯವಾಗಿ ತಮ್ಮ ಯೋಗ್ಯತಾನುಸಾರ, ಆ ಅವತಾರದಲ್ಲಿ ಸೇವೆಮಾಡದೇ ಇರುವವರು ಯಾರೋ ಅವರು ಕೃಷ್ಣಾವತಾರದಲ್ಲಿ ಪೂರ್ತಿಮಾಡಿ ಕೃತಾರ್ಥರಾದರೆಂದು, ತಿಳಿಯಬೇಕು.

ವಿಶೇಷಾರ್ಥ.--ದೇವರು ತನ್ನ ಸೇವಾಕ್ಕೆ ಅರ್ಹರಾದ ಬ್ರಹ್ಮ, ರುದ್ರಾದಿ ದೇವತೆಗಳಲ್ಲಿ ಉತ್ತಮತ್ವ ನೀಚತ್ವವನ್ನು ತಿಳಿಸುವದಕ್ಕೋಸ್ಕರ ತನ್ನ ಅವತಾರಕಾಲಗಳಲ್ಲಿ ಆ ದೇವತೆಗಳಿಗೂ ಅವತಾರಮಾಡುವಂತೆ ಆಜ್ಞೆಮಾಡಿ ಅವರುಗಳ ಸೇವಾವನ್ನ ಸ್ವೀಕರಿಸಿ, ಸ್ವರೂಪಾನುಗುಣವಾದ ಮೋಕ್ಷವನ್ನು ಕೊಡುತ್ತಾನೆಂದು ತಿಳಿಯಬೇಕು.

ಅವತಾರಿಕೆ.--ಜೀವರ ಸಾಧನೆಯು ದ್ವೇಷ, ಭಕ್ತಿ ಮತ್ತು ಉದಾಸೀನವೆಂದು ಮೂರು ವಿಧ, ಈ ವಿಧ ಸಾಧನೆಯು ಕೃಷ್ಣ, ರಾಮ, ಈ ಎರಡು ಅವತಾರಗಳ ಹೊರ್ತು ಮಿಕ್ಕ ಅವತಾರಗಳಲ್ಲಿ ಇಲ್ಲವೆಂಬುವುದನ್ನು ಮತ್ತು ಈ ಅವತಾರಗಳಲ್ಲಿ ದ್ವೇಷಮಾಡಿದವರಾರೆಂಬುದನ್ನು ತಿಳಿಸುತಾರೆ.--

ಶ್ಲೋಕ|| ವಿವಿದಾದ್ಯೈರ್ಹಿತೈಃ ಪಶ್ಚಾ ದ್ವಿಪ್ರತೀಪಂ ಕೃತಂಹರೇಃ||
ಪ್ರಾದುರ್ಭಾವದ್ವಯೋಃಹ್ಯಸ್ಮಿ ಸರ್ವೇಷಾಂ ನಿರ್ಣಯಃಕೃತಃ ||೪೮||

ಅರ್ಥ:—ಪಶ್ಚಾತ್-ರಾಮಾವತಾರವಾದನಂತರ (ಕೃಷ್ಣಾವತಾರದಲ್ಲಿ,) ತೈಃ-ಆ, ವಿವಿದಾದ್ಯೈಃ-ವಿವಿದ ಮುಂತಾದವರಿಂದ, ಹರೇಃ-ಶ್ರೀ ಪರಮಾತ್ಮನ, ವಿಪ್ರತೀಪಂ ವಿರೋಧವು, ಕೃತಂಹಿ-ಮಾಡಲ್ಪಟ್ಟಿತಷ್ಟೆ, ಅಸ್ಮಿ-ಪ್ರಾದುರ್ಭಾವ ದ್ವಯೋಃ-ಈರಾಮ ಕೃಷ್ಣ ಎರಡು ಅವತಾರಗಳಲ್ಲಿ, ಸರ್ವೇಷಾಂ-ಬ್ರಹ್ಮಾದಿ ಅಶೇಷ ಚೇತನರುಗಳ ನಿರ್ಣಯಃ-(ಸೇವಾ ಮಾಡುವುದರಿಂದ ಉತ್ತಮತ್ವ ನೀಚತ್ವ ನಿರ್ಣಯವು, ಕೃತಃ-ಮಾಡಲ್ಪಟ್ಟಿತು.

ತಾತ್ಪರ್ಯ:—ರಾಮಾವತಾರದಲ್ಲಿ ಅಧಿಕವಾಗಿ ಸೇವಾ ಮಾಡಿದ ವಿವಿದ ನ್ಯೆಂದರು ಪುಣ್ಯಹ್ರಾಸಕ್ಕಾಗಿ ರಾಮಾವತಾರ ಮಾಡಿದ ಶ್ರೀಹರಿಗೆ ವಿರೋಧವನ್ನು ಮಾಡಿದರು. ಅಷ್ಟೇ ಹೊರ್ತು ದ್ವೇಷವೆಂದು ತಿಳಿಯಬಾರದು. ಒಂದು ಅವ ತಾರದಲ್ಲಿ ಹೆಚ್ಚಾಗಿ ಸೇವೆ ಮಾಡಿದವರು ಇನ್ನೊಂದು ಅವತಾರದಲ್ಲಿ ಕಡಿಮೆಯಾಗಿ ಮಾಡಿರುವರು ಈ ರೀತಿ ಎರಡು ಅವತಾರಗಳಲ್ಲಿಯೂ ಭಗವತ್ಸೇವಾದಿಗಳಿಂದ ಸರ್ವರಿಗೂ ಉತ್ತಮತ್ವಾದಿಗಳನ್ನು ನಿರ್ಣಯಿಸಬೇಕು.

ವಿಶೇಷಾರ್ಥ:—ಈ ವಿವಿದ ನ್ಯೆಂದರು ಸ್ವರೂಪದಲ್ಲಿ ಅಶ್ವಿನೀ ದೇವತೆಗಳು. ಇವರು ಈ ಅವತಾರದಲ್ಲಿ ಅಸುರಾವೇಶದಿಂದ ಯುಕ್ತರಾದ್ದರಿಂದ ಶ್ರೀಹರಿಯಲ್ಲಿ ವಿರೋಧ ಮಾಡಿದರು. ಇವರಿಗೆ ಪಾಪವಿರುತ್ತೆ. ಮುಂದೆ ಈ ವಿಷಯವನ್ನು ವ್ಯಕ್ತಪಡಿಸುತ್ತಾರೆ.

ಅವತಾರಿಕೆ:—ದೇವರ ಅನೇಕ ಅವತಾರಗಳು ಇರಲು, ಈ ಎರಡು ರಾಮ ಕೃಷ್ಣಾವತಾರಗಳಲ್ಲಿಯೇ ಅಶೇಷ ಚೇತನರ ತಾರತಮ್ಯವನ್ನು ನಿಶ್ಚಯಿಸುವುದು ಏಕೆ? ವರಾಹಾದ್ಯವತಾರಗಳಲ್ಲಿಯೂ ಸೇವಾದಿಗಳು ಉಂಟೇ? ಎಂಬುವ ಸಂಶಯ ವನ್ನು ಪರಿಹರಿಸುತ್ತಾರೆ:—

ಶ್ಲೋಕ|| ನೈತಯೋರಕೃತಂಕಿಂಚಿ ಚ್ಛುಭಂವಾಽಪಿವಾಽಶುಭಂ||
ಅನ್ಯತ್ರಪೂರ್ಯತೇಕ್ವಾಪಿ ತಸ್ಮಾದತ್ರೈವ ನಿರ್ಣಯಃ ||೪೯||

ಅರ್ಥ:—ಏತಯೋಃ-ಈ ಎರಡು ಅವತಾರಗಳಲ್ಲಿ, ಕಿಂಚಿತ್-ಸ್ವಲ್ಪವಾದ, ಶುಭಂವಾ-ಪುಣ್ಯಸಾಧನವಾಗಲೀ, ಅಶುಭಂವಾ-ಪಾಪ ಸಾಧನವಾಗಲೀ, ಅಕೃತಂ

ಯದಿ-ಪೂರ್ತಿಮಾಡಲ್ಪಡದೇ ಇದ್ದಪಕ್ಷದಲ್ಲಿ (ಅಂತಹ ಅಪೂರ್ತಿ ಸಾಧನೆಯು,) ಅನ್ಯತ್ರ-ಮಹಾದ್ಯವತಾರಗಳಲ್ಲಿ, ನಪೂರ್ಯತೇ-ಪೂರ್ಣವಾಗುವುದಿಲ್ಲ ತಸ್ಮಾತ್-ಆಕಾರಣದಿಂದ, ಅತ್ರೈವ-ಈ ಎರಡು ಅವತಾರಗಳಲ್ಲಿಯೇ, ನಿರ್ಣಯಃ-ಅವರ ನೀಚೋತ್ತಮತ್ವಾದಿಗಳ ನಿರ್ಣಯವು ಮಾಡತಕ್ಕದ್ದು.

ತಾತ್ಪರ್ಯ:—ರಾಮ ಕೃಷ್ಣಾವತಾರಗಳಲ್ಲಿ ಯಾರು ಶುಭ ಸಾಧನವನ್ನಾದರೂ ಅಶುಭ ಸಾಧನವನ್ನಾದರೂ ಪೂರ್ತಿ ಮಾಡಲಿಲ್ಲವೋ ಅಂತಹ ಸಾಧನೆಗಳು ಈ ಈ ಎರಡು ಅವತಾರಗಳಲ್ಲಿ ಪೂರ್ತಿ ಮಾಡಲು ಸಾಧ್ಯವಿಲ್ಲ. ಅದುದರಿಂದ ಈ ಎರಡು ಅವತಾರಗಳಲ್ಲಿಯೇ ಅವರ ಉತ್ತಮತ್ವ, ನೀಚತ್ವಗಳನ್ನ ನಿರ್ಣಯಿಸಬೇಕಾಗಿದೆ.

ವಿಶೇಷಾರ್ಥ:—ಯಾವ ಸೇವೆಯಾದರೂ ಜಾ ವಿಲ್ಲದೇ ಮಾಡಲಾಗುವುದಿಲ್ಲ. ರಾಮ ಕೃಷ್ಣ ಈ ಎರಡು ರೂಪಗಳು ಭೂಮಿಯಲ್ಲಿ ಧರ್ಮಸಂಸ್ಥಾಪನ ಮತ್ತು ದುಷ್ಟ ನಿಗ್ರಹಕ್ಕಾಗಿ ಮಾಡಿದ ಅವತಾರಗಳು. ಆ ಭಗವತ್ಕಾರ್ಯಗಳಿಗೆ ಸಹಾಯ ಅಥವಾ ಪ್ರತಿಕೂಲ ಮಾಡೋಣವು ಈತನಲ್ಲಿ ಮಾಡುವ ಭಕ್ತಿ ಅಥವಾ ದ್ವೇಷಗಳ ಸ್ವರೂಪ ಸಂಬಂಧವೆಂದು ಸೂಚಿಸಿ, ಅದರಿಂದ ಸ್ವರೂಪ ನಿರ್ಣಯ ಮಾಡಿರುತ್ತಾರೆ.

ಅವತಾರಿಕೆ:—ಕೃಷ್ಣಾವತಾರವು ರಾಮಾವತಾರವಾದ ನಂತರವಾದುದು. ಈ ಕೃಷ್ಣಾವತಾರವನ್ನನುಸರಿಸಿ ಭಾರತವನ್ನು ರಚಿಸಿದ್ದಾರೆ ಇದರಲ್ಲಿ ಶ್ರೀರಾಮ ದೇವರ ಕಥೆಗೆ ಅವಕಾಶವಿಲ್ಲ. ಎಂದರೆ ಭಾರತದಲ್ಲಿ ಅವತಾರಗಳ ಸಂಬಂಧ ಮತ್ತು ನಿರ್ಣಯಕ್ಕೆ ಕಾರಣವನ್ನು ಹೇಳುತ್ತಾರೆ:—

ಶ್ಲೋಕ|| ಪರಾತ್ತನತ್ವಾತ್ಕೃಷ್ಣಸ್ಯ ವೈಶೇಷ್ಯಾತ್ತತ್ರನಿರ್ಣಯಃ||
ಪ್ರಾದಭಾವಮಿಮಂತಸ್ಮಾದ್ಗೃಹೀತ್ವಾಭಾರತಂಕೃತಂ||
ಉಕ್ತಾರಾಮಕಥಾಹ್ಯಸ್ಮಿನ್ಮಾರ್ಕಂಡೇಯಸಮಾಖ್ಯಯಾ||

ಅರ್ಥ:—ಕೃಷ್ಣಸ್ಯ-ಕೃಷ್ಣನ (ಅವತಾರವು.) ಪಶ್ಚಾತ್ತನತ್ವಾತ್—ರಾಮಾವತಾರಾನಂತರವಾದ್ದರಿಂದ, ತತ್ರ-ಆ ಕೃಷ್ಣಾವತಾರದಲ್ಲಿ ವೈಶೇಷ್ಯಾತ್-ವಿಶೇಷಕಾ

ರದಿಂದ, ನಿರ್ಣಯಃಕೃತಃ-ನಿಶ್ಚಯಿಸಲ್ಪಟ್ಟಿತು, ಇಮಂ-ಇಂಥಾ, ಪ್ರಾದುರ್ಭಾವಂ-ಕೃಷ್ಣಾವತಾರವತಾರವನ್ನ, ಗೃಹೀತ್ವಾ-ವಿಷಯವನ್ನಾಗಿ ಆಶ್ರಯಿಸಿ, ಭಾರತಂ-ಭಾರತವು, ಕೃತಂ-ಮಾಡಲ್ಪಟ್ಟಿತು, ಅಸ್ಮಿ-ಈ ಭಾರತದಲ್ಲಿ, ಮಾರ್ಕಂಡೇಯ ಸಮಾಖ್ಯಾಯಾ-ಮಾರ್ಕಂಡೇಯರ ಸಂವಾದದಿಂದ, ರಾಮಕಥಾ-ಶ್ರೀರಾಮ ಚರಿತ್ರೆಯು, ಉಕ್ತಾ-ಹೇಳಲ್ಪಟ್ಟಿದೆ.

ತಾತ್ಪರ್ಯ:—ರಾಮ ಕೃಷ್ಣಾದಿ ಎರಡು ಅವತಾರಗಳಲ್ಲಿ ಕೃಷ್ಣಾವತಾರಕ್ಕೆ ಮಹಿಮೆಯನ್ನ ವಿಶೇಷವಾಗಿ ಹೇಳುತ್ತಾರೆ. ಕೃಷ್ಣಾವತಾರವು ರಾಮಾವತಾರವಾದ ನಂತರವಾದ್ದರಿಂದ, ಇದರಲ್ಲಿ ಬ್ರಹ್ಮಾದಿ ಚೇತನರ ಉತ್ತಮತ್ವಾದಿಗಳನ್ನು ನಿರ್ಣಯಮಾಡಲು, ಅವಕಾಶವುಂಟು ಅದು ಹೇಗೆಂದರೆ:—ಶ್ರೀಕೃಷ್ಣಾವತಾರವನ್ನ ಸುಸರಿಸಿಯೇ ಭಾರತವು ರಚಿಸಲ್ಪಟ್ಟಿದೆ. ಇದರಲ್ಲಿ ರಾಮಕಥೆಯು ಮಾರ್ಕಂಡೇಯ ಧರ್ಮರಾಜರ ರೂಪದಿಂದ ಹೇಳಿದೆ. ಆದುದರಿಂದ ಎರಡು ಅವತಾರಗಳ ಕಥೆಯನ್ನು ತಿಳಿದುಕೊಂಡು ತಾರತಮ್ಯವನ್ನು ನಿರ್ಣಯಮಾಡಲು ಅವಕಾಶ ಉಂಟಾಯಿತು

ವಿಶೇಷಾರ್ಥ:—ಶ್ರೀಮನ್ಮಹಾಭಾರತವು ಸರ್ವ ಶಾಸ್ತ್ರಗಳನ್ನನುಸರಿಸಿ, ವೇದಾರ್ಥಗಳನ್ನು ಪ್ರತಿಪಾದನ ಮಾಡುವುದರಿಂದ ಇದಕ್ಕೆ ಐದನೇ ವೇದವೆಂದು ಹೇರು. ಇದರಲ್ಲಿ ರಾಮಾಯಣ ಕಥೆ ಮತ್ತು ಭಾಗವತ ಕಥೆ ಪ್ರತಿಪಾದಿತವಾಗಿವೆ ಆದುದರಿಂದ ಭಾರತದಲ್ಲಿ ಪ್ರಾದುರ್ಭಾವದ್ವಯವೂ ನಿರೂಪಿತವಾದಂತಾಯಿತು

ಅವತಾರಿಕೆ:—ಭಾರತವು ಉತ್ತಮ ಗ್ರಂಥವೆಂದು ತಿಳಿಸುವ ಪ್ರಮಾಣಗಳನ್ನು ಹೇಳುತ್ತಾರೆ:—

ಶ್ಲೋಕ|| ತಸ್ಮಾದ್ಯದ್ಭಾರತೇ ನೋಕ್ತಂ ತದ್ವಿನೈವಾಸ್ತಿ ಕುತ್ರಚಿತ್||

ಅತ್ರೋಕ್ತಂಸರ್ವ ಶಾಸ್ತ್ರೇಷು ನಹಿ ಸಮ್ಯಗುದಾಹೃತಂ||೫೧||

ಅರ್ಥ:—ತಸ್ಮಾತ್-ಆದಕಾರಣದಿಂದ, ಯತ್-ಯಾವ ಅರ್ಥವು, ಭಾರತೇ-ಭಾರತದಲ್ಲಿ, ನೋಕ್ತಂ-ಹೇಳಲ್ಪಡಲಿಲ್ಲವೋ, ತತ್-ಆ ಅರ್ಥವು, ಕುತ್ರಚಿತ್-ಇನ್ನು ಯಾವವೇದಾದಿಗಳಲ್ಲಿಯೂ, ನೈವಾಸ್ತಿ-ಹೇಳಲ್ಪಟ್ಟಿಲ್ಲ, ಅತ್ರ-ಈ ಭಾರತದಲ್ಲಿ, ಉಕ್ತಂ-ಯಾವುದು ಹೇಳಲ್ಪಟ್ಟಿದೆಯೋ ಅದು

ಸರ್ವಶಾಸ್ತ್ರೇಷು-ಇತರ ವೇದಾದಿ ಶಾಸ್ತ್ರಗಳಲ್ಲಿಯೂ, ಸಮ್ಯಕ್-ವಿಶದವಾಗಿ, ನೋದಾಹೃತಂ-ಹೇಳಲ್ಪಟ್ಟಿರುವುದಿಲ್ಲ. ಹಿ-ಪ್ರಸಿದ್ಧವು.

ತಾತ್ಪರ್ಯ.—ಭಾರತದಲ್ಲಿ ಹೇಳದೇ ಇರುವ ಪ್ರಮೇಯ ಮತ್ತು ಪ್ರಮಾಣ ಪೂರ್ವಕವಾದ ಅರ್ಥಗಳು ಇನ್ಯಾವ ವೇದ ಪುರಾಣಾದಿ ಗ್ರಂಥಗಳಲ್ಲಿಯೂ ಹೇಳಿರುವುದಿಲ್ಲ. ಈ ಗ್ರಂಥದಲ್ಲಿ ವಿಸ್ತಾರವಾಗಿ ಹೇಳಿದ ಹಾಗೆ ಇನ್ಯಾವ ಶಾಸ್ತ್ರದಲ್ಲಿಯೂ ವಿಸ್ತಾರವಾಗಿ ಹೇಳಲಿಲ್ಲ. ಆದ್ದರಿಂದ ಭಾರತಕ್ಕೆ ಸಮಾನವಾದ ಗ್ರಂಥವೇ ಇಲ್ಲವೆಂದು ನಿಶ್ಚಯ ಮಾಡಿದ್ದಾರೆ.

ವಿಶೇಷಾರ್ಥ.—ವೇದಾಧ್ಯಯನ ಮಾಡುವುದಕ್ಕೆ ಅಧಿಕಾರವಿಲ್ಲದವರಿಗಾಗಿ ಸಕಲ ವೇದಗಳು ಸರ್ವಶಾಸ್ತ್ರಗಳ ರಹಸ್ಯಗಳನ್ನು ತೆಗೆದು ಶ್ಲೋಕ ರೂಪವಾಗಿ ಶ್ರೀ ವೇದವ್ಯಾಸರೇ ಭಾರತವನ್ನು ರಚಿಸಿದ್ದಾರೆ. ಆದ್ದರಿಂದ ಇದಕ್ಕೆ ಐದನೇ ವೇದವೆಂದು ಹೆಸರುಬಂದಿದೆ

ಅವತಾರಿಕೆ —ಶ್ರೀಮದಾಚಾರ್ಯರು ಅಧಿಕಾರಿಗಳ ನಂಬಿಗೆ ಮತ್ತು ಭಕ್ತಿ, ಇವುಗಳಿಗೋಸ್ಕರವಾಗಿಯೂ ಶ್ರೀವಿಷ್ಣುವಿನ ಅವತಾರವಾದ ವೇದವ್ಯಾಸರಿಂದಲೇ ಭಾರತದ ಉತ್ತಮತ್ವವು ಪುರಾಣಾಂತರಗಳಲ್ಲಿ ಹೇಳಿದೆ ಎಂದು ಹೇಳುತ್ತಾರೆ.—

ಶ್ಲೋಕ|| ಇತ್ಯಾದಿಕಥಿತಂಸರ್ವಂ ಬ್ರಹ್ಮಾಂಡೇ ಹರಿಣಾಸ್ವಯಂ||

ಶ್ಲೋಕ|| ಇತ್ಯಾದಿಕಥಿತಂಸರ್ವಂ ಬ್ರಹ್ಮಾಂಡೇ ಹರಿಣಾಸ್ವಯಂ ||
ಮಾರ್ಕಂಡೇಯೋಽಪಿಕಥಿತಂ ಭಾರತಸ್ಯ ಪ್ರಶಂಸನಂ||೫೨||

ಅರ್ಥ.—ಇತ್ಯಾದಿ-ಇವೇ ಮೊದಲಾದ, ಸರ್ವಂ-ಸಮಸ್ತವಾದ ಅರ್ಥಗಳು, ಹರಿಣಾ-ವ್ಯಾಸರೂಪನಾದ ಶ್ರೀಹರಿಯಿಂದ ಸ್ವಯಂ-ತನ್ನಿಂದಲೇ ಬ್ರಹ್ಮಾಂಡೇ-ಬ್ರಹ್ಮಾಂಡ ಪುರಾಣದಲ್ಲಿ, ಕಥಿತಂ-ಹೇಳಲ್ಪಟ್ಟಿದೆ, ಮಾರ್ಕಂಡೇಯ ಪುರಾಣದಲ್ಲಿಯೂ, ಭಾರತಸ್ಯ-ಭಾರತದ, ಪ್ರಶಂಸನಂ-ಸ್ತೋತ್ರವು, ಕಥಿತಂ ಮಾಡಲ್ಪಟ್ಟಿರುತ್ತೆ

ತಾತ್ಪರ್ಯ—ಶ್ರೀಮದಾಚಾರ್ಯರು ಭಾರತ ಪ್ರಶಂಸೆ ಮಾಡಿದ ವಚನಗಳು ಸ್ವಕಪೋಲಕಲ್ಪಿತಗಳಲ್ಲ ಶ್ರೀ ವೇದವ್ಯಾಸದೇವರಿಂದ ಮಾಡಲ್ಪಟ್ಟ ಬ್ರಹ್ಮಾಂಡ ಪುರಾಣ ಮತ್ತು ಮಾರ್ಕಂಡೇಯ ಪುರಾಣ ಇವುಗಳಲ್ಲಿ ಹೇಳಿರುವ ವಚನಗಳು ಎಂದು ಹೇಳುತ್ತಾರೆ

ಅವತಾರಿಕೆ.—ಭಾರತವು ಸರ್ವ ಶಾಸ್ತ್ರಾರ್ಥ ನಿರ್ಣಾಯಕವೆಂಬು ವುದನ್ನು ಉಪಸಂಹಾರಮಾಡುತ್ತಾರೆ.—

**ಶ್ಲೋಕ ॥ ದೇವತಾನಾಂ ಯಥಾವ್ಯಾಸೋ ದ್ವಿಪದಾಂಬ್ರಾಹ್ಮಣೋವರಃ । ಆ ಯುಧಾನಾಂ ಯಥಾವಜ್ರ ಮೋಷಧೀನಾಂ ಯಥಾಯವಾಃ ॥೩೩॥ ತಥೈವ ಸರ್ವಶಾಸ್ತ್ರಾಣಾಂ ಮಹಾಭಾರತಮುತ್ತಮಂ ॥೩೪॥**

ಅರ್ಥ.—ದೇವತಾನಾಂ=ದೇವತೆಗಳಲ್ಲಿ, ಯಥಾ=ಹ್ಯಾಗೆ, ವ್ಯಾಸಃ ವೇದವ್ಯಾಸದೇವರು, ಪರಃ=ಉತ್ತಮರೋ, ದ್ವಿಪದಾಂ-ಬ್ರಾಹ್ಮಣ, ಕ್ಷ ತ್ರಿಯ, ವೈಶ್ಯ, ಶೂದ್ರ, ಈ ವರ್ಣಗಳಲ್ಲಿ, ಬ್ರಾಹ್ಮಣಃ - ಬ್ರಾಹ್ಮಣನು, ವರಃ=ಹೇಗೆ ಉತ್ತಮನೋ, ಆಯುಧಾನಾಂ-ಆಯುಧಗಳಲ್ಲಿ, ವಜ್ರಂ-ವ ಜ್ರಾಯುಧವು, ಯಥಾ=ಹ್ಯಾಗೆ, ವರಃ=ಉತ್ತಮವೋ, ಓಷಧೀನಾಂ= ಧಾನ್ಯಗಳಲ್ಲಿ, ಯವಾಃ=ಯವವೆಂಬ ಧಾನ್ಯವು, ಯಥಾ-ಹ್ಯಾಗೆ, ವರಃ- ಉತ್ತಮವೋ, ತಥೈವ-ಹಾಗೆಯೇ, ಸರ್ವಶಾಸ್ತ್ರಾಣಾಂ=ಸಕಲ ಶಾಸ್ತ್ರಗ ಳಲ್ಲಿಯೂ; ಮಹಾಭಾರತಂ=ಮಹಾಭಾರತವು, ಉತ್ತಮಂ-ಶ್ರೇಷ್ಠವಾದ್ದು.

ತಾತ್ಪರ್ಯ.—ದೇವತೆಗಳಲ್ಲಿ ವ್ಯಾಸರು, ನಾಲ್ಕು ವರ್ಣಗಳಲ್ಲಿ ಬ್ರಾ ಹ್ಮಣ ವರ್ಣವು, ಆಯುಧಗಳಲ್ಲಿ ವಜ್ರಾಯುಧವು, ಧಾನ್ಯಗಳಲ್ಲಿ ಯವ ಧಾನ್ಯವು ಹೇಗೆ ಉತ್ತಮವೋ ಹಾಗೆ ಸರ್ವ ಶಾಸ್ತ್ರಗಳಲ್ಲಿಯೂ ಮಹಾ ಭಾರತವು ಉತ್ತಮವು.

ವಿಶೇಷಾರ್ಥ.—ಆಯುಧಗಳಲ್ಲಿ ವಜ್ರಾಯುಧವು ಉತ್ತಮವೆಂದರೆ ಶ್ರೀಹರಿಯ ಆಯುಧ ರೂಪವಾದ ಚಕ್ರಾಯುಧ ಹೊರ್ತು ಮಿಕ್ಕ ಆಯು ಧಗಳಲ್ಲಿ ವಜ್ರಾಯುಧವು ಉತ್ತಮವೆಂದು ತಿಳಿಯುವುದು.

ಅವತಾರಿಕೆ.—ವಾಯುಪುರಾಣದಲ್ಲಿ ಶ್ರೀಮನ್ಮಹಾಭಾರತಕ್ಕೆ ಶ್ರೇ ಷ್ಠತ್ವವೂ ಮತ್ತು ಶ್ರೀವೇದವ್ಯಾಸದೇವರಿಗೆ ವಿಷ್ಣುತ್ವವೂ ಸೂಚಿತವಾಗಿದೆ ಎಂದು ಹೇಳುತ್ತಾರೆ.

**ಶ್ಲೋಕ ॥ ವಾಯುಪ್ರೋಕ್ತೇಪಿತತ್ಪ್ರೋಕ್ತಂ ಭಾರತಸ್ಯ ಪ್ರಶಂಸನಂ । ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿನಾರಾಯಣಂ ಪ್ರಭುಂ ॥೩೫॥**

ಅರ್ಥ.—ವಾಯುಪ್ರೋಕ್ತೇಪಿ=ವಾಯು ಪುರಾಣದಲ್ಲಿಯೂ, ತತ್- ಆ, ಭಾರತಸ್ಯ=ಭಾರತದ, ಪ್ರಶಂಸನಂ=ಸ್ತೋತ್ರವು ( ಮಹಿಮಾ ಪ್ರತಿ

ಪಾದಕ ವಾಕ್ಯಗಳು, ಪ್ರೋಕ್ತಂ=ಹೇಳಲ್ಪಟ್ಟಿರುತ್ತವೆ. ಮತ್ತು ವ್ಯಾಸಂ =ವೇದವಿಭಾಗ ಮಾಡಿದಂಥ, ಕೃಷ್ಣದ್ವೈಪಾಯನಂ-ಕೃಷ್ಣದ್ವೈಪಾಯನ ರನ್ನ, ಪ್ರಭುಂ=ಸ್ವಾಮಿಯಾದ, ನಾರಾಯಣಂ=ನಾರಾಯಣದೇವರನ್ನಾಗಿ, ವಿದ್ಧಿ=ತಿಳಿ.

ತಾತ್ಪರ್ಯ.—ವಾಯುಪುರಾಣದಲ್ಲಿಯೂ ಶ್ರೀಮನ್ಮಹಾಭಾರತ ವನ್ನು ಸ್ತೋತ್ರಮಾಡಿರುತ್ತಾರೆ, ಮತ್ತು ವೇದವ್ಯಾಸದೇವರನ್ನು ವಿಷ್ಣು ವೆಂತಲೂ, ವ್ಯಾಪ್ತನಾದ ನಾರಾಯಣನವತಾರವೆಂತಲೂ ಹೇಳಿದ್ದಾರೆ.

ವಿಶೇಷಾರ್ಥ.—ಕೆಲವುಪುರಾಣಗಳಲ್ಲಿ ವೇದವ್ಯಾಸರನ್ನು ಯಾವನೋ ಒಬ್ಬ ಋಷಿ ಎಂತಲೂ, ವೇದವಿಭಾಗ ಮಾಡಿದ್ದರಿಂದ ಇವರಂತೆ ಕೆಲವರು ವ್ಯಾಸರು ಇದ್ದಾರೆಂತಲೂ ವಚನಗಳಿವೆ. ಇವರು ಇದರಂತೆ ವೇದಗಳನ್ನು ವಿಭಾಗಮಾಡಿದವರಲ್ಲ. ಸಾಕ್ಷಾತ್ ಲಕ್ಷ್ಮೀಪತಿಯಾದ ನಾರಾಯಣನವ ತಾರರೇ ಹೊರ್ತು ಬೇರೆ ಅಲ್ಲ.

ಅವತಾರಿಕೆ.—ವೇದವ್ಯಾಸಾವತಾರನಾದ ನಾರಾಯಣನಿಗೆ ಯಾವ ಲಕ್ಷಣಗಳಿವೆಯೋ ಅವನ್ನೆಲ್ಲಾ ಹೇಳಿ, ಈತನೇ ನಾರಾಯಣನೆಂದು ನಿರ್ಧಾ ರಿಸಿರುತ್ತಾರೆ. ವಾಯು, ಬ್ರಹ್ಮಾಂಡ, ಮಾರ್ಕಂಡೇಯ, ಈ ಮೂರು ಪು ರಾಣಗಳಲ್ಲಿಯೇ ಅಲ್ಲದೆ ಸರ್ವ ಶಾಸ್ತ್ರದಲ್ಲಿಯೂ ಹೇಳಿದ್ದಾರೆ.—

ಶ್ಲೋಕ ॥ ಕೋಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ।
ಏವಂಹಿ ಸರ್ವಶಾಸ್ತ್ರೇಷು ಪೃಥಕ್ಪೃಥಗುದೀರಿತಂ ॥೫೬॥

ಅರ್ಥ---ಪುಂಡರೀಕಾಕ್ಷಾತ್ - ಕಮಲದಳಗಳಂತೆ ನೇತ್ರಗಳಿಂದ ಯುಕ್ತನಾದ ನಾರಾಯಣನಿಂದ, ಅನ್ಯಃ-ಬೇರೆಯಾದವನು, ಕೋಹಿ=ಯಾ ವನುತಾನೆ, ಮಹಾಭಾರತಕೃತ್-ಮಹಾಭಾರತವನ್ನು ಮಾಡುವವನು, ಭ ವೇತ್-ಆದಾನು ? ಅನ್ಯರಾರೂ ಆಗಲಾರರು, ಏವಂಹಿ=ಹೀಗೆಯೇ, ಸರ್ವ ಶಾಸ್ತ್ರೇಷು=ಸರ್ವ ಶಾಸ್ತ್ರಗಳಲ್ಲಿಯೂ, ಪೃಥುಕ್ ಪೃಥುಕ್=ಪ್ರತ್ಯೇಕ ಪ್ರ ತ್ಯೇಕವಾಗಿ, ಉದೀರಿತಂ=ಹೇಳಲ್ಪಟ್ಟಿದೆ.

ತಾತ್ಪರ್ಯ.—ಮಹಾಭಾರತ ರಚನಮಾಡೋಣವು ಕಮಲದಳದಂತೆ ವಿಕಸಿತವಾದ ನೇತ್ರವುಳ್ಳ ನಾರಾಯಣನ ಹೊರ್ತು ಮತ್ತೊಬ್ಬ ಪುರುಷ

ನಿಂದ ಸಾಧ್ಯವಲ್ಲ. ಈ ರೀತಿ ಮಹಾಭಾರತದ ಮಹಿಮೆ ಮತ್ತು ನಾರಾಯಣನ ಮಹಿಮೆಯೂ ಕೂಡ ಪ್ರತ್ಯೇಕ ಪ್ರತ್ಯೇಕವಾಗಿ ಸರ್ವ ಶಾಸ್ತ್ರಗಳಲ್ಲಿಯೂ ತಿಳಿಸಲ್ಪಟ್ಟಿದೆ.

ವಿಶೇಷಾರ್ಥ.—ಶ್ರೀವ್ಯಾಸರು ಶ್ರೀಮನ್ಮಹಾಭಾರತ ಗ್ರಂಥವನ್ನು ಅರವತ್ತು ಲಕ್ಷ ಗ್ರಂಥ ರಚನೆ ಮಾಡಿ, ಅದರಲ್ಲಿ ಮೂವತ್ತು ಲಕ್ಷ ಗ್ರಂಥವನ್ನು ಸ್ವರ್ಗದಲ್ಲಿ ಇಂದ್ರನಿಗೆ ಕೊಟ್ಟು, ಹದಿನಾಲ್ಕು ಲಕ್ಷ ಗ್ರಂಥವನ್ನು ಯಕ್ಷರಾಕ್ಷಸರಿಗೆ ಕೊಟ್ಟು, ಬ್ರಹ್ಮದೇವರಿಗೆ ಹದಿನೈದು ಲಕ್ಷಗ್ರಂಥವನ್ನು ಕೊಟ್ಟು, ಮಾನವರಿಗೆ ಭೂಲೋಕದಲ್ಲಿ ಒಂದು ಲಕ್ಷ ಗ್ರಂಥವನ್ನು ಮಾತ್ರ ಇಟ್ಟಿದ್ದಾರೆ. ಇಂತಹ ಗ್ರಂಥ ರಚನಾ ಶಕ್ತಿ ಜಗಜ್ಜನ್ಮಾದಿ ಕಾರಣನಾದ ನಾರಾಯಣನಿಗೆ ಹೊರ್ತು ಇನ್ಯಾರಿಗೆ ತಾನೇ ಬಂದೀತು !

ಅವತಾರಿಕೆ.--ಸರ್ವ ಶಾಸ್ತ್ರಗಳಲ್ಲಿ ಮಾತ್ರ ಭಾರತಕ್ಕೆ ಉತ್ತಮತ್ವ ಹೇಳಲ್ಪಟ್ಟಿದೆಯೆಂದಲ್ಲ. ಈ ನಿರ್ಣಯವೂ ಆ ಸರ್ವ ಶಾಸ್ತ್ರಗಳಲ್ಲಿಯೂ ಪ್ರತಿಪಾದನ ಮಾಡಲ್ಪಟ್ಟಿದೆ. ಮತ್ತು ನಿರ್ಣಯದಲ್ಲಿ ಹೇಳಿರುವ ಅರ್ಥ ಮತ್ತು ಪ್ರಮಾಣಗಳನ್ನು ವ್ಯಾಸರು ಭಾರತದಲ್ಲಿ ಹೇಗೆ ಹೇಳಿದ್ದಾರೆಯೋ ಹಾಗೆ ಆ ಭಾರತ ವಾಕ್ಯಗಳಿಂದಲೇ ವಿಶದವಾಗಿ ತಿಳಿಸಲ್ಪಡುತ್ತದೆ.

**ಶ್ಲೋಕ ॥ ಉಕ್ತೋರ್ಥಃ ಸರ್ವಏವಾಯಂ ಮಹಾತ್ಮ್ಯಕ್ರಮಪೂರ್ವಕಃ**
**ಭಾರತೇಪಿಯಥಾಪ್ರೋಕ್ತೋನಿರ್ಣಯೋಽಯಂ ಕ್ರಮೇಣತು ।**
**ತಥಾಪ್ರದರ್ಶಯಿಷ್ಯಾಮ ಸ್ತದ್ವಾಕ್ಯೈರೇವ ಸರ್ವಶಃ ॥೫೭॥**

ಅರ್ಥ.--ಅಯಂ=ಇಂಥ, ಸರ್ವಏವ=ಸಮಸ್ತವಾದ, ಉಕ್ತೋರ್ಥಂ=ಹೇಳಲ್ಪಟ್ಟ ಅರ್ಥವು, ಮಹಾತ್ಮ್ಯಕ್ರಮಪೂರ್ವಕಃ=ಭಗವನ್ಮಹಿಮ ಮತ್ತು ತಾರತಮ್ಯಪೂರ್ವಕವಾದದ್ದು, ಅಯಂ=ಇಂಥ, ನಿರ್ಣಯಃ=ನಿರ್ಣಯವು, ಕ್ರಮೇಣತು=ಯಾವ ಕ್ರಮದಿಂದ, ಭಾರತೇಪಿ=ಭಾರತದಲ್ಲಿ, ಯಥಾ=ಹ್ಯಾಗೆ, ಪ್ರೋಕ್ತಃ=ಹೇಳಲ್ಪಟ್ಟಿದೆಯೋ, ತಥಾ=ಹಾಗೆ, ತದ್ವಾಕ್ಯೈರೇವ=ಆ ಭಾರತದ ವಚನಗಳಿಂದಲೇ, ಸರ್ವಶಃ=ಸಮಸ್ತ ವಿಷಯಗಳಲ್ಲಿಯು ಪ್ರದರ್ಶಯಿಷ್ಯಾಮಃ=ತೋರಿಸುತ್ತೇವೆ.

ತಾತ್ಪರ್ಯ.--ಸರ್ವ ಶಾಸ್ತ್ರಪ್ರಮಾಣಗಳಲ್ಲಿ ಹೇಳಿದ ಮಹಿಮೆಯನ್ನು ಹಿಂದಿನ ಪ್ರಮಾಣಗಳಲ್ಲಿ ಹೇಳಿ, ಈಗ ಭಾರತ ವಚನಗಳಿಂದಲೇ ತಾರತಮ್ಯ ಮತ್ತು ಭಗವನ್ಮಹಿಮೆ ಇವು ತಿಳಿಸಲ್ಪಡುತ್ತವೆ.

ವಿಶೇಷಾರ್ಥ.—ಹರಿ ಸರ್ವೋತ್ತಮತ್ವ ಜ್ಞಾನ ಮತ್ತು ತಾರತಮ್ಯ ಜ್ಞಾನ ಇವುಗಳು ಅನಾದಿಯಾಗಿ ಶಾಸ್ತ್ರಗಳಲ್ಲಿ ಸೂಚಿತವಾಗಿದೆಯೇ ಹೊರತು ಕೇವಲ ಆಚಾರ್ಯರ ವಚನಗಳೇ ಅಲ್ಲ. ಶ್ರೀವೇದವ್ಯಾಸರ ವಚನವೂ ವಿಷ್ಣು ವಚನವಾದ್ದರಿಂದ ಭಾರತದಲ್ಲಿಯೂ, ತಾರತಮ್ಯ ಸೂಚಿತವಾಗಿದೆ ಎಂದು ಆ ಭಾರತ ವಾಕ್ಯದಿಂದಲೇ ತೋರಿಸಲ್ಪಡುತ್ತದೆ.

ಅವತಾರಿಕೆ.—ಹಿಂದಿನ ಶ್ಲೋಕದಲ್ಲಿ ಭಾರತದ ವಚನಗಳಿಂದಲೇ ಹರಿ ಸರ್ವೋತ್ತಮತ್ವ ಮತ್ತು ತಾರತಮ್ಯ ಇವುಗಳನ್ನು ಪ್ರತಿಪಾದನಮಾಡುತ್ತೇವೆಂದು ಹೇಳಿದರು. ಅದರಂತೆ ಈಗ ಭಾರತ ಶ್ಲೋಕವನ್ನು ಉದಾಹರಿಸುತ್ತಾರೆ.—

**ಶ್ಲೋಕ ॥ ನಾರಾಯಣಂ ಸುರಗುರುಂ ಜಗದೇಕನಾಥಂ ಭಕ್ತಪ್ರಿಯಂ ಸಕಲ**
**ಲೋಕ ನಮಸ್ಕೃತಂಚ ॥ ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯ**
**ಮೀಶಂ ವಂದೇ ಭವಘ್ನಮಮರಾಸುರಸಿದ್ಧವಂದ್ಯಂ ॥೫೮॥**

ಅರ್ಥ.—ಅಹಂ=ನಾನು, ಸುರಗುರುಂ=ಸುರ=ದೇವತೆಗಳಿಗೆ, ಗುರುಂ-ಜ್ಞಾನೋಪದೇಶಕನಾದ, ಜಗದೇಕನಾಥಂ=ಜಗತ್=ಜಗತ್ತಿಗೆ, ಏಕನಾಥಂ-ಮುಖ್ಯ ಸ್ವಾಮಿಯಾದ, ಭಕ್ತಪ್ರಿಯಂ=ಭಕ್ತ-ಭಕ್ತರುಗಳಿಗೆ, ಪ್ರಿಯಂ-ಇಷ್ಟನಾದ, ಸಕಲಲೋಕ=ಸರ್ವಚೇತನರುಗಳಿಂದ, ನಮಸ್ಕೃತಂ ಚ=ನಮಸ್ಕಾರ ಮಾಡಿಸಿಕೊಳ್ಳಲ್ಪಡುವವನಾದ, ತ್ರೈಗುಣ್ಯವರ್ಜಿತಂ=ಸತ್ವಾದಿಗುಣ ಸಂಬಂಧವಿಲ್ಲದವನಾದ, ಅಜಂ=ಉತ್ಪತ್ತಿ ರಹಿತನಾದ, ವಿಭುಂ ಸರ್ವತ್ರ ಪ್ರಾಪ್ತನಾದ, ಆದ್ಯ=ಸೃಷ್ಟಿಗೆ ಪೂರ್ವದಲ್ಲಿಯೂ ಇದ್ದ, ಈಶಂ-ಐಶ್ವರ್ಯಪೂರ್ಣನಾದ, ಭವಘ್ನಂ=ಸಂಸಾರ ದುಃಖ ಮೋಚಕನಾದ, ಅಮರಾಸುರಸಿದ್ಧವಂದ್ಯಂ=ಬ್ರಹ್ಮಾದಿಗಳೂ ಪ್ರಹ್ಲಾದಾದಿಗಳೂ ಸಿದ್ದರೆ ಮೊದಲಾದ ಮುಕ್ತರು ಇವರುಗಳಿಂದ ನಮಸ್ಕರಿಸಿಕೊಳ್ಳಲ್ಪಡುವ, ನಾರಾಯಣಂ ನಾರಾಯಣದೇವರನ್ನು, ವಂದೇ=ನಮಸ್ಕಾರ ಮಾಡುತ್ತೇನೆ.

ತಾತ್ಪರ್ಯ.—ಶ್ರೀಮದಾಚಾರ್ಯರು ಭಾರತದಲ್ಲಿ ಹೇಳಿದ ಶ್ಲೋಕದಿಂದಲೇ ತಮಗೂ ಮತ್ತು ತಮಗಿಂತಲೂ ಕಡಿಮೆಯಾದವರಿಗೂ ಜ್ಞಾನಪ್ರದನಾದ, ಜಗತ್ತನ್ನು ಸೃಷ್ಟಿಮಾಡಿದ ಭಕ್ತಿಯಿಂದಲೇ ಪ್ರಸನ್ನನಾಗುವ, ಸರ್ವ ಜೀವರುಗಳಿಂದ ಅಭಿವಂದಿತನಾದ, ಗುಣಶೂನ್ಯನಾದ, ನಾಶರಹಿತ

ನಾದ, ಜಡಚೇತನರುಗಳಲ್ಲಿ ವ್ಯಾಪ್ತನಾದ, ಸ್ವಯಂ ಜನನಮರಣರಹಿತ ನಾದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದ, ಷಡ್ಗುಣೈಶ್ವರ್ಯ ಪೂರ್ಣನಾದ ಅಜ್ಞಾನಾದ ಬಂಧಕನಾಶಕನಾದ, ಅಶೇಷ ಚೇತನರುಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುವ ನಾರಾಯಣದೇವರಿಗೆ ನಾನು ನಮಸ್ಕಾರ ಮಾಡುತ್ತೇನೆ ಎಂದು ಭಾರತ ಶ್ಲೋಕದಲ್ಲಿ ವ್ಯಾಸರು ನಿರ್ದೇಶಮಾಡಿದ ಗುಣಗಣಗಳಿಂದಲೇ ತಾವು ಸ್ತೋತ್ರ ಮಾಡಿ, ತಮ್ಮ ನಿರ್ಣಯದಲ್ಲಿಯೂ ಅಧಿಕಾರಿಗಳ ಶಿಕ್ಷಾರ್ಥವಾಗಿ ನಿಬಂಧನ ಮಾಡುತ್ತಾರೆ.

ವಿಶೇಷಾರ್ಥ.—ಈ ಶ್ಲೋಕದಲ್ಲಿ ಹೇಳಿದ ಗುಣಗಳು ನಾರಾಯಣನಲ್ಲಿ ಹೊರತು ಮಿಕ್ಕ ಇನ್ಯಾರಲ್ಲಿಯೂ ಇಲ್ಲ. ನಾರಾಯಣನಿಂದ ಭಿನ್ನರಾದ ಸರ್ವ ಚೇತನರೂ ಪರತಂತ್ರರು- ಮತ್ತು ಆ ನಾರಾಯಣನ ಅನುಗ್ರಹಕ್ಕೆ ಪಾತ್ರರು. ಆ ನಾರಾಯಣನ ಗುಣಗಳನ್ನು ಭಾರತದಲ್ಲಿ ಸ್ತೋತ್ರಮಾಡಿದ್ದಾರೆ. ಅದನ್ನೇ ಶ್ರೀಮದಾಚಾರ್ಯರು ತಾತ್ಪರ್ಯದಲ್ಲಿ ಉದಾಹರಿಸಿದ್ದಾರೆ.

ಅವತಾರಿಕೆ.—ಹಿಂದಿನ ಶ್ಲೋಕದಲ್ಲಿ ಹೇಳಿದ ನಾರಾಯಣನಿಗೆ ನಮಸ್ಕಾರ ಮತ್ತು ಸ್ತೋತ್ರ ಇವುಗಳನ್ನು ಮಾಡುವುದಕ್ಕೆ ಅವನಲ್ಲಿ ಯಾವ ಗುಣಗಳಲ್ಲಿ ಹೇಳಿವೆಯೋ ಅವುಗಳ ಪ್ರಯೋಜನವನ್ನು ಹೇಳುತ್ತಾರೆ—

**ಶ್ಲೋಕ ॥ ಜ್ಞಾನಪ್ರದಃ ಸಭಗವಾನ್ಕಮಲಾ ವಿರಿಂಚಿ ಶರ್ವಾದಿ ಪೂರ್ವಜಗತೋನಿಖಿಲಾದ್ವರಿಷ್ಠಃ । ಭಕ್ತ್ಯೈವತುಷ್ಯತಿ ಹರಿಪ್ರವಣತ್ವಮೇವ ಸರ್ವಸ್ಯ ಧರ್ಮ ಇತಿ ಪೂರ್ವ ವಿಭಾಗಸಂಸ್ಥಃ ॥೫॥**

ಅರ್ಥ.—ಸಃ=ಅಂಥ, ಭಗವಾನ್=ಅವಾಹತ ಸಮಗ್ರ ಷಡ್ಗುಣೈಶ್ವರ್ಯ ಸಂಪನ್ನನಾದ ನಾರಾಯಣನು, ಜ್ಞಾನಪ್ರದಃ-ಸಕಲ ಪ್ರಪಂಚಕ್ಕೂ ಜ್ಞಾನಕೊಡತಕ್ಕವನು, ( ರಮಾ ಬ್ರಹ್ಮಾದಿಗಳಿಗೂ ) ಕಮಲಾವಿರಿಂಚ ಶರ್ವಾದಿ ಪೂರ್ವಜಗತಃ=ರಮಾ, ಬ್ರಹ್ಮ, ರುದ್ರಾದಿ ಸಕಲ ಚೇತನರುಗಳಿಗಿಂತಲೂ, ನಿಖಿಲಾತ್=ಸಕಲ ಗುಣಗಳಿಂದಲೂ, ವರಿಷ್ಠಃ=ಶ್ರೇಷ್ಠನಾದವನು, ಹರಿಃ-ಶ್ರೀನಾರಾಯಣನು, ಭಕ್ತ್ಯೈವ=ಭಕ್ತಿಯಿಂದಲೇ, ತುಷ್ಯತಿ= ಸಂತುಷ್ಟನಾಗುತ್ತಾನೆ, ಅತಃ-ಆದಕಾರಣದಿಂದ, ಸರ್ವಸ್ಯ=ಸಕಲ ಪ್ರಪಂಚಕ್ಕೆ, ಪ್ರವಣತ್ವಮೇವ = ವಿನೀತವಾಗಿರುವುದೇ, ಧರ್ಮಇತಿ -

ವಿಹಿತವೆಂದು, ಪೂರ್ವವಿಭಾಗ=ಪೂರ್ವಾರ್ಧ ತಾತ್ಪರ್ಯದಲ್ಲಿ, ಸಂಸ್ಥಃ= ಉಕ್ತವಾಗಿರುತ್ತೆ.

ತಾತ್ಪರ್ಯ.—ಹಿಂದಿನ ಶ್ಲೋಕದಲ್ಲಿ ಹೇಳಿದ "ಸುರಗುರು" ಎಂಬುವ ಶಬ್ದಾರ್ಥವು ಈ ಶ್ಲೋಕದಲ್ಲಿನ "ಜ್ಞಾನಪ್ರದ" ಎಂಬುವುದರಿಂದ ಸೂಚಿಸಲ್ಪಟ್ಟಿದೆ. ಹೀಗೆ ದೇವರು ಭಕ್ತಿಯಿಂದ ಲಭ್ಯವೇ ಹೊರತು ಬೇರೆ ಯಾವುದರಿಂದಲೂ ಅಲ್ಲ. ಹೀಗಿರುವುದರಿಂದಲೇ ಸ್ವಾಮಿಯು ಸರ್ವ ಪ್ರಪಂಚಕ್ಕೂ ಉತ್ತಮನು. ಸರ್ವ ಪ್ರಪಂಚಧಾರಕನು. ಆದ ಪ್ರಯುಕ್ತ ಸರ್ವ ಚೇತನರಿಂದ ನಮಸ್ಕಾರಾರ್ಹನಾಗಿರುತ್ತಾನೆ.

ವಿಶೇಷಾರ್ಥ.—ಈ ಶ್ಲೋಕದಲ್ಲಿ ರಮಾ ಬ್ರಹ್ಮಾದಿ ಅಶೇಷ ಜಗತ್ತಿಗೆ ಜ್ಞಾನ ಕೊಡುತ್ತಾನೆಂಬುದಾಗಿ ಹೇಳಿದೆ. ಜ್ಞಾನವೇ ಅಲ್ಲ. ಜ್ಞಾನಾದಿ ಸ್ಫುರಣೆಯೂ ನಾರಾಯಣನ ಅಧೀನವೆಂದು ಈಶಾವಾಸ್ಯಭಾಷ್ಯದಲ್ಲಿ ಹೇಳಿದೆ ಅಷ್ಟೇ ಅಲ್ಲದೆ ದೇವರಿಂದ ಹೇಳಲ್ಪಟ್ಟ ಅರ್ಥವನ್ನು ತಿಳಿದು ಮುಂದೆ ಹೆಚ್ಚು ಅರ್ಥಗಳನ್ನು ತಿಳಿದುಕೊಳ್ಳಬೇಕೆಂಬ ಬುದ್ಧಿ ಹುಟ್ಟೋಣವೂ ಕೂಡ ನಾರಾಯಣನ ಅಧೀನವೆಂದು ಐಯಿತರೇಯಭಾಷ್ಯದಲ್ಲಿ ಹೇಳಿದೆ.

ಪ್ರಮಾಣಗಳು :— ಈಶಾವಾಸ್ಯಭಾಷ್ಯ:— ಯಸ್ಮಾದ್ಬ್ರಹ್ಮೇಂದ್ರ ರುದ್ರಾದಿ ದೇವತಾನಾಂ ಶ್ರಿಯೋಪಿಚ ಜ್ಞಾನಸ್ಫೂರ್ತಿಸ್ಸದಾತಸ್ಮೈಹರಯೇ ಗುರುವೇನಮಃ || ಐಯಿತರೇಯಭಾಷ್ಯ :— ಜಾನಂತ್ಯಾಪಿ ದೇವ್ಯಾಲೋಕಾನುಗ್ರಹಾರ್ಥಂ ವಿಶೇಷಜ್ಞಾನಾರ್ಥಂಚ | ಕೋಯಮಾತ್ಮೇತಿಪೃಷ್ಟಃ ಸ ಭಗವಾನ್ ಆಹ | ಕತರಜ್ಞ ಆತ್ಮೇತಿ ಕತರ ಆನಂದತಮ ಇತಿ

ಅವತಾರಿಕೆ.—ಹಿಂದಿನ ಶ್ಲೋಕದಲ್ಲಿ ಸರ್ವ ದೇವತೆಗಳಿಗೂ ಈಶನ ಅನುಗ್ರಹವನ್ನು ಸಂಪಾದಿಸುವುದಕ್ಕೆ ಬೇಕಾದ ಸಾಧನವನ್ನು ಹೇಳಿದರು. ಅದರಲ್ಲಿ ನಮಸ್ಕಾರಾದಿಗಳು ಅತ್ಯಾವಶ್ಯಕವೆಂದು ಸೂಚಿಸಿರುತ್ತಾರೆ. ಕೋಪ ಮೊದಲಾದ ದೋಷಗಳಿದ್ದವನಿಗ ನಮಸ್ಕಾರ ಮಾಡುವುದು ಯುಕ್ತವಲ್ಲ. ಅಂತಹ ದೋಷಗಳು ನಾರಾಯಣನಲ್ಲಿಲ್ಲವೆಂದು ತಿಳಿಸುತ್ತಾರೆ.—

**ಶ್ಲೋಕ || ನಿರ್ದೋಷಕಃ ಸ್ಮೃತಿವಿಹೀನ ಉದಾರಪೂರ್ಣ ಸಂವಿದ್ಗುಣಃ ಪ್ರಥಮಕೃತ್ಸಕಲಾತ್ಮಶಕ್ತಿಃ | ಮೋಕ್ಷೈಕಹೇತುರಸುರೂಪ ಸುರೈಕ್ಷವಮುಕೆರ್ವಂದ್ಯಃ ಸಏಕ ಇತಿಚೋಕ್ತ ಮಥೋತ್ತರಾರ್ಧೇ ||**

ಅರ್ಥ.—ನಿರ್ದೋಷಕಃ=ದೋಷಶೂನ್ಯನಾದ, ಸೃತಿವಿಹೀನಃ=ಸಂಸಾರ ಸಂಬಂಧರಹಿತವಾದ, ಉದಾರಪೂರ್ಣಸಂವಿದ್ಗುಣಃ=ಉದಾರ=ಉತ್ಕೃಷ್ಟವಾದ, ಪೂರ್ಣ=ಪರಿಪೂರ್ಣವಾದ, ಸಂವಿದ್ಗುಣಃ=ಜ್ಞಾನಾದಿ ಗುಣಗಳುಳ್ಳಂಥ, ಪ್ರಥಮಕೃತ್=ಪ್ರಪಂಚಕ್ಕೆ ಆದಿ ಸೃಷ್ಟಿ ಕರ್ತೃವಾದಂಥ, ಸಕಲಾತ್ಮಶಕ್ತಿಃ=ಸಕಲ ಪದಾರ್ಥಗಳಲ್ಲಿ ಉಳ್ಳ ಸ್ವರೂಪ ಶಕ್ತಿಯು ತಾನೇ ಆದ, ಮೋಕ್ಷೈಕಹೇತುಃ=ಮೋಕ್ಷಕ್ಕೆ ಮುಖ್ಯ ಕಾರಣನಾದ, ಮುಕ್ತೈಃ=ಮುಕ್ತರಿಂದಲೂ, ಅಸುರೂಪಸುಗೈಶ್ಚ—ಅಸುರೂಪ=ದೈತ್ಯರೂಪ ಧಾರಣ ಮಾಡಿದಂಥ, ಸುರೈ=ಕರ್ಮಜ ದೇವತೆಗಳಾದ ಪ್ರಹ್ಲಾದನೇ ಮುಂತಾದ ಭಕ್ತರಿಂದಲೂ, ವಂದ್ಯಃ=ಅಭಿವಂದಿತನಾದಂಥ, ಸಃ—ಆ ನಾರಾಯಣನು, ಏಕಇತಿ=ಒಬ್ಬನೇ ಎಂಬರ್ಥವು. ("ನಾರಾಯಣಂ" ಎಂಬ ಭಾರತ ಶ್ಲೋಕದ) ಅಥೋತ್ತರಾರ್ಧೇ=ಉತ್ತರಾರ್ಧಗ್ರಂಥದಲ್ಲಿ, ಉಕ್ತ—ಹೇಳಲ್ಪಡುತ್ತೆ.

ತಾತ್ಪರ್ಯ.—ಹಿಂದೆ ನಾರಾಯಣದೇವರಿಗೆ ನಮಸ್ಕಾರ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿದರು. ಆ ದೇವರು ಎಂಥಾವನೆಂದರೆ ಅದನ್ನೂ ಹೇಳುತ್ತಾರೆ. ದೋಷದೂರ, ಸಂಸಾರ ರಹಿತ, ಗುಣಪೂರ್ಣ ಸರ್ವ ಪ್ರಪಂಚಕ್ಕೂ ಶಕ್ತಿಪ್ರದ, ಸೃಷ್ಟಿಕರ್ತೃ, ಮೋಕ್ಷದಾತ, ದೇವತೆಗಳಿಂದ ವಂದ್ಯ, ಇಂತಹ ನಾರಾಯಣನಿಗೆ ನಮಸ್ಕಾರ ಮಾಡುತ್ತೇನೆಂದು ಹೇಳುತ್ತಾರೆ

ವಿಶೇಷಾರ್ಥ.—ನಾರಾಯಣನೇ ಮೋಕ್ಷ ಕೊಡಬೇಕೆಂದು ಪ್ರಾರ್ಥಿಸುವ ಚೇತನರುಗಳಿಗೆ ಅತ್ಯಾವಶ್ಯಕವಾಗಿ ಗುಣಪೂರ್ಣತ್ವ ರೂಪವಾದ (ಸತ್) ದೋಷದೂರತ್ವ ರೂಪವಾದ (ಚಿತ್) ಮೋಕ್ಷದತೃತ್ವ ರೂಪವಾದ (ಆನಂದ) ಸಕಲಾತ್ಮಶಕ್ತಿಃ, ಅನ್ನುವುದರಿಂದ (ಆತ್ಮ) ಈ ಗುಣಗಳು ಅತ್ಯಾವಶ್ಯಕವಾಗಿ ಧ್ಯಾನಮಾಡತಕ್ಕದ್ದೆಂದು ಸೂಚಿಸಿದೆ.

ಅವತಾರಿಕೆ.—ಅಮರಾಸುರಸಿದ್ಧವಂದ್ಯಂ ಎಂದು ಹಿಂದೆ ಹೇಳಿದರು ಅದರಲ್ಲಿ ಅಸುರವಂದ್ಯತ್ವ ಹೇಗೆಂದು ವಿಚಾರಮಾಡಲು ಅಸುರ ವಂಶದಲ್ಲಿ ಅವತರಿಸಿದ ಪ್ರಹ್ಲಾದರೇ ಮುಂತಾದ ಮುಕ್ತರಿಂದ ವಂದ್ಯನೆಂದು ಹೇಳಿ ಮುಕ್ತಾವಸ್ಥಾ, ಸಂಸಾರಾವಸ್ಥಾ, ಎರಡರಲ್ಲಿಯೂ, ದೇವರಿಗೆ ನಮಸ್ಕಾರ

ಮಾಡುತ್ತಾರೆ. ಆದ್ದರಿಂದ ಗುಣಪೂರ್ಣನೆಂತಲೂ ಪುನರುಕ್ತ ದೋಷವಿಲ್ಲ ವೆಂತಲೂ ತಿಳಿಸುತ್ತಾರೆ.

**ಶ್ಲೋಕ ॥ ನಮ್ಯತ್ವ ಮುಕ್ತಮುಭಯತ್ರಯತಸ್ತತೋಽಸ್ಯ ಮುಕ್ತೈರಮುಕ್ತ**
**ಕಗೃಕ್ಷ ವಿನಮ್ಯತೋಕ್ತಾ । ಇತ್ಥಂಹಿ ಸರ್ವಗುಣಪೂರ್ತಿರಮುಷ್ಯ**
**ವಿಷ್ಣೋಃ ಪ್ರಸ್ತಾವಿತಾಪ್ರಥಮತಃ ಪ್ರತಿಜಾನತೈವ ॥೬೧॥**

ಅರ್ಥ.—ಯತಃ-ಯಾವಕಾರಣದಿಂದ, ಉಭಯತ್ರ=ಪೂರ್ವಾರ್ಧ ಉತ್ತರಾರ್ಧಗಳಲ್ಲಿ, ಅಸ್ಯ=ಈ ನಾರಾಯಣನಿಗೆ, ನಮ್ಯತ್ವಂ=ನಮಸ್ಕಾರ್ಯ ತೆಯು, ಉಕ್ತಂ-ಹೇಳಲ್ಪಟ್ಟಿತೋ, ತತಂ=ಆ ಕಾರಣದಿಂದಲೇ, ಮು ಕ್ತೈ=ಮುಕ್ತರಿಂದಲೂ, ಅಮುಕ್ತಕಗಣೈಶ್ಚ=ಅಮುಕ್ತರಿಂದಲೂ, ವಿನಮ್ಯ ತಾ=ವಿಶೇಷಾಕಾರನಮನತ್ವವು, ಉಕ್ತಾ=ಹೇಳಲ್ಪಟ್ಟಿತು. ಅಮುಷ್ಯ=ಈ ವಿಷ್ಣೋಃ=ಶ್ರೀನಾರಾಯಣನಿಗೆ, ಇತ್ಥಂ=ಈ ರೀತಿಯಾಗಿ, ಸರ್ವ ಗುಣ ಪೂರ್ತಿಃ=ಸಕಲ ಗುಣಪೂರ್ಣತ್ವವು, ಪ್ರಥಮತಃ=ಆದಿಯಲ್ಲಿ, ಪ್ರತಿಜಾ ನತೈವ=ಪ್ರತಿಜ್ಞೆ ಮಾಡಿದ ವ್ಯಾಸರಿಂದಲೇ, ಪ್ರಸ್ತಾವಿತಾ=ಸೂಚಿತವಾಯ್ತು

ತಾತ್ಪರ್ಯ.—ಶ್ರೀಮದಾಚಾರ್ಯರು ಹರಿಯ ಗುಣಗಳನ್ನು ಹೇಳುವ ಪ್ರ ಮಾಣಗಳನ್ನು ನಿರ್ಣಯದಲ್ಲಿ ಉದಾಹರಿಸಿರುತ್ತಾರೆ. ಈ ಪ್ರಮಾಣಗಳು ನಾವು ಹೇಳಿದ್ದಲ್ಲ. ಭಾರತವನ್ನು ರಚಿಸಿದ ವೇದವ್ಯಾಸದೇವರೇ ಸರ್ವ ಗುಣವಿಶಿಷ್ಟನಾದ ನಾರಾಯಣನೇ ಮೋಕ್ಷದಾತೃ ಮತ್ತು ಇವನೇ ಸರ್ವೋ ತ್ತಮನೆಂದು ಹೇಳಿದ್ದಾರೆಂಬುದಾಗಿ ಅನುವಾದ ಮಾಡುತ್ತಾರೆ.

ವಿಶೇಷಾರ್ಥ.—ವೇದೇರಾಮಾಯಣೇಚೈವ ಪುರಾಣೇ ಭಾರತೇ ತಥಾ ಅದಾವಂತೇಚವಧ್ಯೇಚ ವಿಷ್ಣುಃ ಸರ್ವತ್ರಗೀಯತೇ ॥ ಎಂಬುವ ಪ್ರಮಾಣ ರೀತ್ಯಾ ಭಾರತದಲ್ಲಿ ಶ್ರೀನಾರಾಯಣನೇ ಸರ್ವೋತ್ತಮನೆಂಬುವುದನ್ನು ನಿರ್ಧಾರ ಮಾಡಿರುತ್ತಾರೆ. ಇದನ್ನು ಯಾವುದರಿಂದ ನಿರ್ಧಾರಮಾಡಬ ಹುದೆಂದರೆ ಭಾರತವನ್ನು ರಚಿಸಿದ ವ್ಯಾಸರ ಪ್ರತಿಜ್ಞೆಯಿಂದಲೇ ನಿಶ್ಚಯಿಸ ಬಹುದು.

ಅವತಾರಿಕೆ.—ಶ್ರೀಮನ್ಮಹಾಭಾರತಕ್ಕೆ ತಾತ್ಪರ್ಯವನ್ನು ರಚಿಸುವ ಆಚಾರ್ಯರು ಭಾರತ ವಚನಗಳನ್ನು ಅದೇ ಭಾರತದ ವಚನಗಳಿಂದಲೇ ನಿರ್ಣ ಯಮಾಡಿ ತೋರಿಸಿರುತ್ತಾರೆ.

**ಶ್ಲೋಕ ॥ ಕೃಷ್ಣೋಯಜ್ಞೈರಿಜ್ಯತೇ ಸೋಮಪೂತೈಃ ಕೃಷ್ಣೋ ವೀರ್ಯೈರಿಜ್ಯತೇ ವಿಕ್ರಮದ್ಭಿಃ ॥ ಕೃಷ್ಣೋವನ್ಯೈರಿಜ್ಯತೇ ಸಂವೃಶಾನ್ಯೈಃ ಕೃಷ್ಣೋ ಮುಕ್ತೈರಿಜ್ಯತೇವೀತಮೋಹೈಃ ॥೬೨॥**

ಅರ್ಥ.— ಕೃಷ್ಣಃ=ಶ್ರೀನಾರಾಯಣದೇವರು, ಸೋಮಪೂತೈಃ=ಸೋಮಪಾನದಿಂದ ಶುದ್ಧರಾದವರಿಂದ, ಯಜ್ಞೈಃ=ದೇವತೋದ್ದೇಶ್ಯಕ ದ್ರವ್ಯತ್ಯಾಗರೂಪ ಯಾಗದಿಂದ, ಇಜ್ಯತೇ=ಪೂಜಿಸಲ್ಪಡುತ್ತಾನೆ, ಕೃಷ್ಣಃ=ಶ್ರೀನಾರಾಯಣದೇವರು, ವಿಕ್ರಮದ್ಭಿಃ-ಪರಾಕ್ರಮಶಾಲಿಗಳಿಂದ, ವೀರ್ಯೈಃ-ವೀರ್ಯ ಕಾರ್ಯಗಳಿಂದ, ಇಜ್ಯತೇ=ಪೂಜಿಸಲ್ಪಡುತ್ತಾನೆ, ಕೃಷ್ಣಃ=ಶ್ರೀಕೃಷ್ಣನು ವನ್ಯೈಃ=ಅರಣ್ಯವಾಸಿಗಳಿಂದ (ವಾನಪ್ರಸ್ಥರಿಂದ) ಸಂವೃಶಾನ್ಯೈಃ=ಚೆನ್ನಾಗಿ ವಿಚಾರಪರವಾದ ಶಾಸ್ತ್ರ ವಚನಗಳಿಂದ, ಇಜ್ಯತೇ-ಸ್ತೋತ್ರರೂಪದಿಂದ ಪೂಜಿಸಲ್ಪಡುತ್ತಾನೆ. ಕೃಷ್ಣಃ-ನಾರಾಯಣದೇವರು, ಮುಕ್ತೈಃ=ಮುಕ್ತರುಗಳಿಂದ, ವೀತಮೋಹೈಃ=ಅಜ್ಞಾನಾದಿ ದೋಷಶೂನ್ಯವಾದ ಸ್ವರೂಪ ಭಾವನೆಯಿಂದ, ಇಜ್ಯತೇ=ಸ್ವರೂಪಾನಂದಾಭಿವ್ಯಕ್ತಿ ರೂಪ ಪ್ರಾಪ್ತಿಯಿಂದ ಪೂಜಿಸಿಕೊಳ್ಳಲ್ಪಡುತ್ತಾನೆ.

ತಾತ್ಪರ್ಯ.— ದೇವರು ಕೇವಲ ಮುಕ್ತಾ ಅಮುಕ್ತ ಸೇವ್ಯನೆಂದಷ್ಟೇ ಅಲ್ಲ. ಸರ್ವ ಯಜ್ಞ ಭೋಕ್ತೃವೂ ಆಗಿರುವನು. ಮತ್ತು ಸಕಲ ಕ್ಷತ್ರಿಯಾದವರ ನಿತ್ಯಕರ್ಮರೂಪ ಪೂಜೆಯನ್ನೂ ಸ್ವೀಕರಿಸುವನೆಂದು ಹೇಳಿದ್ದಾರೆ

ವಿಶೇಷಾರ್ಥ.—ಗೀತಾ—ಅಧ್ಯಾಯ ೪, ಶ್ಲೋಕ ೨೮. ದ್ರವ್ಯಯಜ್ಞಾಸ್ತಪೋಯಜ್ಞಾ, ಯೋಗಯಜ್ಞಾಸ್ತಥಾಪರೇ । ಸ್ವಾಧ್ಯಾಯಜ್ಞಾನಯಜ್ಞಾಶ್ಚಯತಯಃ ಶಂಸಿತವ್ರತಾಃ ॥ ಈ ಪ್ರಮಾಣಾನುಸಾರವಾಗಿ ಶ್ರೀನಾರಾಯಣದೇವರನ್ನು ಸರ್ವರೂ ಪೂಜಿಸುತ್ತಾರೆ.

ಅವತಾರಿಕೆ.— ಹಿಂದೆ "ಭವಘ್ನಂ" ಎಂದು ದೇವರಿಗೆ ಸಂಸಾರ ಮೋಚಕನೆಂದು ಹೇಳಿದರು. ಕೇವಲ ಸಂಸಾರ ಮೋಚಕನೇ ಅಲ್ಲ. ಲಯ ಮಾಡುವವನೂ ಅವನೇ ಎಂದು ಹೇಳುತ್ತಾರೆ.—

**ಶ್ಲೋಕ ॥ ಕೃಷ್ಣಾದ್ಬ್ರಹ್ಮಾದಯೋದೇವಾಃ ನಿಹತಾಯೇನದಾನವಾಃ । ತಸ್ಮೈ ದೇವಾದಿದೇವಾಯ ನಮಸ್ತೇಶಾರ್ಙ್ಗಧಾರಿಣೇ ॥೬೩॥**

ಅರ್ಥ.— ಯೇನ=ಯಾವ ನಾರಾಯಣನಿಂದ, ಬ್ರಹ್ಮಾದಯೋದೇವಾಃ=ಬ್ರಹ್ಮದೇವರೇ ಮೊದಲಾದ ದೇವತೆಗಳು, ಸೃಷ್ಟಾಃ = ಸೃಷ್ಟಿರೂಪ ದೇಹವುಳ್ಳವರಾದರೋ, ಯೇನ-ಯಾವ ನಾರಾಯಣನಿಂದ, ದಾನವಾಃ-ದೈತ್ಯರು, ನಿಹತಾಃ=ಸಂಹೃತರಾದರೋ, ತಸ್ಮೈ=ಅಂಥ, ಶಾರ್ಙ್ಗಧಾರಿಣೇ - ಶಾರ್ಙ್ಗಧನುರ್ಧಾರಿಯಾದಂಥ, ದೇವಾದಿದೇವಾಯ=ಅಶೇಷ ದೇವತೆಗಳಿಗೆ ಸ್ವಾಮಿಯಾದ ನಾರಾಯಣನಿಗೆ, ನಮಃ=ನಮಸ್ಕಾರಮಾಡುತ್ತೇನೆ.

ತಾತ್ಪರ್ಯ.— ಹಿಂದೆ ಜಗದೇಕನಾಥಂ ಎಂಬುವ ವಿಶೇಷಣ ಹೇಳಿದ್ದನ್ನ ವಿಸ್ತಾರಪಡಿಸುವುದಕ್ಕಾಗಿ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಕರ್ತೃವಾದರಿಂದ ಸ್ವಾಮಿ. ಅಂಥ ಸರ್ವಸ್ವಾಮಿಯಾದ ದೇವರಿಗೆ ನಮಸ್ಕಾರ ಮಾಡುತ್ತೇನೆಂದು ಹೇಳುತ್ತಾರೆ.

ವಿಶೇಷಾರ್ಥ.— ಮೋಕ್ಷಾಪೇಕ್ಷೆಯುಳ್ಳ ಜೀವರಿಗೆ ಹಿಂದೆ ಹೇಳಿದ ಪರಮಾತ್ಮನ ಸತ್, ಚಿತ್, ಆನಂದ, ಆತ್ಮ ಎಂಬ ಉಪಾಸನೆ ಹೇಗೆ ಮೋಕ್ಷಸಾಧಕವೋ ಹಾಗೆಯೇ ಸೃಷ್ಟ್ಯಾದ್ಯಷ್ಟಕತೃತ್ವ ಜ್ಞಾನವೂ ಅತ್ಯಾವಶ್ಯಕವು. ಮತ್ತು ಶ್ರೀನಾರಾಯಣನೇ ಸೃಷ್ಟಿಕರ್ತನೆಂತಲೂ ತಿಳಿಯಬೇಕೆಂದು ಹೇಳಿರುತ್ತಾರೆ.

ಅವತಾರಿಕೆ.— ಈ ಶ್ಲೋಕದಲ್ಲಿ ಹೇಳಿರುವ ಸೃಷ್ಟಿ ಮಾಡೋಣ ಸಂಹಾರ ಮಾಡೋಣ ಈ ಎರಡೂ ದೇಹಯೋಗ, ದೇಹವಿಯೋಗ ಪರವು ಅಲ್ಲವು. ವಿಶೇಷಾರ್ಥವುಳ್ಳವುಗಳೆಂದು ವ್ಯಾಖ್ಯಾನ ಮಾಡುತ್ತಾರೆ.—

**ಶ್ಲೋಕ ॥ ಸ್ರಷ್ಟೃತ್ವಂದೇವಾನಾಂ ಮುಕ್ತಿಸ್ರಷ್ಟೃತ್ವಮುಚ್ಯತೇನಾನ್ಯತ್ ॥ ಉತ್ಪತ್ತಿರ್ದೈತ್ಯಾನಾಮಪಿಯಸ್ಮಾತ್ ಸಂಮಿತಾ ವಿಶೇಷೋಯಂ ॥೬೪॥**

ಅರ್ಥ.— ದೇವಾನಾಂ-ದೇವತೆಗಳನ್ನು, ಸೃಷ್ಟೃತ್ವಂ-ಸೃಷ್ಟಿಮಾಡುವುದು, ಮುಕ್ತಿಸ್ರಷ್ಟೃತ್ವಂ=ಸ್ವರೂಪಾನಂದಾ ವಿರ್ಭಾವ ರೂಪ ಮೋಕ್ಷವನ್ನುಂಟುಮಾಡುವುದು. ( ಎಂದು) ಉಚ್ಯತೇ-ಹೇಳಲ್ಪಡುತ್ತದೆ. ಅನ್ಯತ್=ಬೇರೆಯಾದ ದೇಹ ಸಂಬಂಧ ರೂಪ ಉತ್ಪತ್ತಿಯು, ನ-ಅಲ್ಲ. ಯ

ಸ್ಮಾತ್ ಯಾವ ಕಾರಣದಿಂದ, ದೈತ್ಯಾನಾಮಪಿ-ದೈತ್ಯರನ್ನೂ, ಉತ್ಪತ್ತಿಃ ದೇಹಯೋಗ ರೂಪವಾದ ಉತ್ಪತ್ತಿಯು, ಸಂಮಿತಾ = ದೇವತೆಗಳಂತೆ ಸಮಾನವಾದುದು. ಅಯಂ=ಇದು, ವಿಶೇಷಃ=ಭೇದಕವು.

ತಾತ್ಪರ್ಯ.—ದೇವತೆಗಳಿಗೂ ದೈತ್ಯರಿಗೂ ದೇವರು ಶರೀರ ಸಂಬಂಧರೂಪವಾದ ಉತ್ಪತ್ತಿಯನ್ನುಂಟು ಮಾಡುವುದು ಸಮಾನವಾಗಿದೆ. ಹೀಗಿರಲು ಹಿಂದಿನ ಶ್ಲೋಕದಲ್ಲಿ ದೇವತೆಗಳ ಸ್ರಷ್ಟೃತ್ವ ರೂಪ ವಿಶೇಷ ಧರ್ಮವನ್ನು ದೇವರಲ್ಲಿ ಹೇಳಿರುವುದರಭಿಪ್ರಾಯವೇನೆಂದರೆ, ದೇವತೆಗಳಿಗೆ ಸ್ವರೂಪ ಸಂದಾವಿರ್ಭಾವರೂಪ ಮೋಕ್ಷವನ್ನು ಕೊಡುವುದೇ ಶ್ರೀಪರಮಾತ್ಮನಲ್ಲಿರುವ ದೇವಕರ್ತೃಕ ಸ್ರಷ್ಟೃತ್ವ ರೂಪ ಧರ್ಮವು.

ಅವತಾರಿಕೆ.—ದೇವತೆಗಳಿಗೆ ಸೃಷ್ಟಿ ಎಂದರೆ ಮುಕ್ತಿ ಕೊಡುವುದೆಂದರ್ಥ ಹೇಳಿದರು. ಈಗ ದೈತ್ಯರ ನಾಶನವೂ ಕೂಡ ದೇಹವಿಯೋಗರೂಪ ಸಂಹಾರವಲ್ಲ. ಆದರೆ ತಮಃ ಪ್ರಾಪ್ತಿ ರೂಪವು ಎಂದು ಈ ಶ್ಲೋಕದಲ್ಲಿ ನಿರೂಪಿಸುತ್ತಾರೆ —

**ಶ್ಲೋಕ ॥ ಅಥಚದೈತ್ಯಹತಿಸ್ತಮಸಿಸ್ಥಿರಾ ನಿಯತಿಸಂಸ್ಥಿತಿರೇವನಚಾನ್ಯಥಾ ।**
**ತನುವಿಭಾಗಕೃತಿಃ ಸಕಲೇಷ್ವಿಯಂನಹಿವಿಶೇಷಕೃತಾ ಸುರದೈತ್ಯಗಾ ॥**

ಅರ್ಥ.—ಅಥ-ದೇವ ಸ್ರಷ್ಟೃತ್ವವು ಅವರಿಗೆ ಮೋಕ್ಷಕೊಡುವುದೆಂದರ್ಥ ಹೇಳಿದನಂತರದಲ್ಲಿ, ತಮಸಿ=ತಮಸ್ಸಿನಲ್ಲಿ, ಸ್ಥಿರಾ=ಸ್ಥಿರವಾಗಿ, ನಿಯತಿಸಂಸ್ಥಿತಿರೇವ=ಹಿಂದಕ್ಕೆ ಬಾರದೆ ಸರ್ವದಾ ವಾಸಿಸುವಂತೆ ಮಾಡುವುದೇ, ದೈತ್ಯಹತಿಃ – ದೈತ್ಯರ ಸಂಹಾರವೆಂಬುವುದು, ಅನ್ಯಥಾ = ದೇಹವಿಯೋಗ ರೂಪ ಸಂಹಾರವೆಂಬ ಬೇರೆ ಅರ್ಥವು, ನ=ಅಲ್ಲ. ಇಯಂ=ಇಂಥ, ತನುವಿಭಾಗಕೃತಿಃ = ದೇಹ ವಿಯೋಗವನ್ನುಂಟುಮಾಡುವುದು, ಸಕಲೇಷು–ಸರ್ವ ದೇವದೈತ್ಯ ಮಾನವರಲ್ಲಿಯೂ, ವರ್ತತೇಹಿ–ಇರುವುದಷ್ಟೆ, ಸುರದೈತ್ಯಗಾ–ದೇವದೈತ್ಯರುಗಳಲ್ಲಿ ಇರುವ ಪ್ರೀತಿ, ಇಯಂ=ಈ ಹನನವು, ವಿಶೇಷಕೃತಾ=ಪ್ರೀತಿ ದ್ವೇಷರೂಪವಾದ ವಿಶೇಷಕಾರಣವುಳ್ಳದ್ದು. ನಭವತಿ-ಆಗುವುದಿಲ್ಲ, ಆದುದರಿಂದ ದೇವಸೃತಿಯೆಂದರೆ ದೇವತೆಗಳಿಗೆ ಮೊ

ಷ್ಟ ಕೊಡುವುದೆಂತಲೂ ದೈತ್ಯಹತಿಯೆಂದರೆ ದೈತ್ಯರನ್ನು ಸರ್ವದಾ ಅಂಧಂತಮಸ್ಸಿನಲ್ಲಿ ವಾಸಿಸುವಂತೆ ಮಾಡುವುದೆಂತಲೂ ಅರ್ಥವೆಂದು ತಿಳಿಯತಕ್ಕವುದು.

ತಾತ್ಪರ್ಯ.— ಈಶನಿಂದ ಸೃಷ್ಟರಾದ ದೇವ ದೈತ್ಯರುಗಳಿಗೆ ಮೋಕ್ಷ ಮತ್ತು ತಮಸ್ಸು ಈಶನಿಂದಲೇ ನಿಯಮಿಸಲ್ಪಟ್ಟಿದೆ. ಇವರುಗಳು ಅಂದರೆ ದೇವತೆಗಳು, ದೈತ್ಯರು ಮತ್ತು ಮಾನವರು ದ್ವೇಷ ಮಾಡಿದರೂ ಅಥವಾ ಮಹಾ ಪ್ರೀತಿ ಮಾಡಿದರೂ ಬೇರೆಬೇರೆ ಅಂದರೆ ದೇವತೆಗಳಿಗೆ ತಮಸ್ಸು, ದೈತ್ಯರಿಗೆ ಮೋಕ್ಷ ಈ ರೀತಿಯಾದ ಬದಲಾವಣೆ ಎಂದಿಗೂ ಆಗುವುದಿಲ್ಲ.

ವಿಶೇಷಾರ್ಥ.— ಪ್ರಮಾಣಗಳು.— ಶ್ಲೋಕ || ದೇವಾನಾಂನಿರಯೋ ನಾಸ್ತಿ ತಮಶ್ಚಾಪಿಕಥಂಚನ || ಮಾನುಷಾಣಾಂ ಮಧ್ಯಮಾನಾಂ ನೈವೈತದ್ವ್ಯುತ್ಕ್ರಾಮ್ಯತೇ || ಈ ರೀತಿಯಾಗಿ ಸತ್ಯಸಂಕಲ್ಪನಾದ ದೇವರ ನಿಯಮವಿರುವದು. ಎಂದಿಗೂ ಇದು ವ್ಯತ್ಯಾಸವಾಗುವುದಿಲ್ಲ.

ಅವತಾರಿಕೆ.— ಹಿಂದಿನ ಶ್ಲೋಕದಲ್ಲಿ ಸೃಷ್ಟಿ, ಹೃತಿ ಈ ಎರಡು ಶಬ್ದಗಳಿಗೆ ಮುಕ್ತಿ ಮತ್ತು ತಮಸ್ಸಿನ ಪರವಾಗಿ ಅರ್ಥ ಮಾಡಿದ್ದು ನಮ್ಮ ವ್ಯಾಖ್ಯಾನದಿಂದಲೂ, ಯುಕ್ತಿಯಿಂದಲೂ ಸಿದ್ಧವಾಯಿತೆಂದಲ್ಲ. ಭಾರತ ಕಥಾದಿಂದಲೇ ದೇವದೈತ್ಯರ ಇಷ್ಟ ಮತ್ತು ಅನಿಷ್ಟ ಸಾಧನದ ಫಲರೂಪವೆಂಬ ಅರ್ಥವು ಸಿದ್ಧವಾಗಿದೆ ಎಂದು ಈ ಶ್ಲೋಕದಿಂದ ತಿಳಿಸುತ್ತಾರೆ.—

**ಶ್ಲೋಕ || ತಮಿಮಮೇವಸುರಾಸುರ ಸಂಚಯೇ ಹರಿಕೃತಂಪ್ರವಿಶೇಷಮು ದೀಕ್ಷಿತುಂ || ಪ್ರತಿವಿಭಜ್ಯಚಭೀಮಸುಯೋಧನೌ ಸ್ವಪರಪಕ್ಷಭಿದಾ ಕಥಿತಾಕಥಾ ||೬೬||**

ಅರ್ಥ.– ಸುರಾಸುರಸಂಚಯೇ= ಸುರಾಸುರ=ದೇವ ದೈತ್ಯರುಗಳ, ಸಂಚಯೇ–ಸಮೂಹದಲ್ಲಿ, ಹರಿಕೃತಂ=ಹರಿ–ನಾರಾಯಣನಿಂದ, ಕೃತಂ–ಮಾಡಲ್ಪಟ್ಟ, ತಂ=ಅಂಥ, ಇಮಂ=ಪೂರ್ವೋಕ್ತವಾದ, ಪ್ರವಿಶೇಷಂ= ವಿಶೇಷವನ್ನು ಅಂದರೆ ತಮಃಪ್ರಾಪ್ತಿ ಮತ್ತು ಮೋಕ್ಷಪ್ರಾಪ್ತಿ ರೂಪವಾದ ಸಾಧನವನ್ನು, ಉದೀಕ್ಷಿತುಂ–ತಿಳಿಸುವುದಕ್ಕಾಗಿ, ಭೀಮಸುಯೋಧನೌ= ಭೀಮಸೇನ ಮತ್ತು ದುರ್ಯೋಧನರನ್ನ ಪ್ರತಿವಿಭಜ್ಯಚ–ಸ್ವಪಕ್ಷ ಪರಪಕ್ಷ

ದವರೆಂಬ ವಿಭಾಗವನ್ನು ಮಾಡಿ, ಸ್ವಪರಪಕ್ಷಭಿದಾ=ಸ್ವ=ಸ್ವಕೀಯ, ಪರಕೀಯ ಪಕ್ಷಗಳೆಂಬ, ಭಿದಾ=ಭೇದದಿಂದ, ಕಥಾ=ಕಥೆಯು, ಕಥಿತಾ-ಹೇಳಲ್ಪಟ್ಟದೆ.

ತಾತ್ಪರ್ಯ.—ಅನಾದಿಕಾಲದಿಂದಲೂ ದೇವದೈತ್ಯರ ವಿಭಾಗ ಮತ್ತು ಅವರ ಸಾಧನಗಳು ಸ್ವರೂಪ ಸಿದ್ಧವಾಗಿ ಏರ್ಪಟ್ಟಿರುವವು. ಶ್ರೀಮದಾಚಾರ್ಯರು ವ್ಯಾಸರಿಂದ ನಿರ್ಮಿತವಾದ ಶ್ರೀಮನ್ಮಹಾಭಾರತಕ್ಕೆ ಆ ಹರಿಯಿಂದಲೇ ಅದೇ ಗ್ರಂಥದಲ್ಲಿ ಸೂಚಿತವಾದ ತಾರತಮ್ಯಾನುಗುಣವಾಗಿ ಅರ್ಥ ಮಾಡಿರುವರು. ಅಷ್ಟೇ ಅಲ್ಲದೆ ಭಾರತ ಕಥೆಯಿಂದಲೇ ದೇವಪಕ್ಷ ದೈತ್ಯ ಪಕ್ಷಗಳೆಂಬ ಎರಡನ್ನು ಭೀಮಸೇನದೇವರು ಮತ್ತು ದುರ್ಯೋಧನ ಇವರಿಬ್ಬರ ಪಕ್ಷಗಳಿಂದ ವಿಭಾಗಮಾಡಿ ವ್ಯಾಸರು ತೋರಿಸಿದ್ದಾರೆಂದು ಹೇಳಿದ್ದಾರೆ

ವಿಶೇಷಾರ್ಥ.—ಮೂರು ಅರ್ಥವುಳ್ಳವುಗಳು. ಭಾರತಕ್ಕೆ ಅರ್ಥಗಳು ಇವೆಯಾದ್ದರಿಂದ ಭಾರತಕ್ಕೆ ಅರ್ಥ ಹೇಳುವುದು ಭಗವತ್ಪರವಾಗಿ ಅರ್ಥಮಾಡುವುದಕ್ಕೂ ಮತ್ತು ಕೇವಲ ಪಾಂಡವರ ಪರ ಅರ್ಥ ಮಾಡುವದಕ್ಕೆ ಮತ್ತೆ ವೇದಗಳು ಹೇಳುವ ಅರ್ಥಗಳನ್ನು ತಿಳಿಸುವುದಕ್ಕೆ ಕೂಡ ಸಮಾಧಿ ದರ್ಶನ ಗುಹ್ಯವೆನ್ನುವ ಮೂರು ಭಾಷ್ಯಾನುಸಾರ ಹೇಳಬೇಕು. ಅದ್ದರಿಂದ ಸರ್ವವೇದಗಳಿಂದಲೂ ಭೇದ. ತಾರತಮ್ಯ ಸಾಧನ ವೈಚಿತ್ರ್ಯ ಇವುಗಳು ಹೇಳುವುದರಿಂದ ಭಾರತಃ ಪಂಚಮೋವೇದಃ ಎಂಬುವ ಪ್ರಮಾಣಕ್ಕೆ ಅನುಸಾರವಾಗಿ ಹೇಳುತ್ತಾರೆ.

ಅವತಾರಿಕೆ.—ವೈಶಂಪಾಯನಾಚಾರ್ಯರು ಹಿಂದೆ "ನಾರಾಯಣಂ ಸುರಗುರುಂ" ಎಂಬುವ ಶ್ಲೋಕದಲ್ಲಿ ಶ್ರೀನಾರಾಯಣದೇವರನ್ನ ಸ್ತೋತ್ರ ಮಾಡಿದ ವಿಶೇಷಗಳು. ಶ್ರೀವೇದವ್ಯಾಸರೇ ನಾರಾಯಣನು ಎಂಬುವುದನ್ನು ತೋರಿಸುವುದಕ್ಕಾಗಿ ಶ್ರೀವೇದವ್ಯಾಸದೇವರನ್ನೂ ನಮಸ್ಕಾರಮಾಡಿ ಶ್ರೀಭಾರತಕಥಾ ಹೇಳುತ್ತೇನೆಂದು ಪ್ರತಿಜ್ಞೆಮಾಡುತ್ತಾರೆ.—

**ಶ್ಲೋಕ || ನಮೋಭಗವತೇತಸ್ಮೈ ವ್ಯಾಸಾಯ ಅಮಿತತೇಜಸೇ ಯಸ್ಯಪ್ರಸಾದಾದ್ವಕ್ಷ್ಯಾಮಿ ನಾರಾಯಣಕಥಾಮಿಮಾಂ ||೬೭||**

ಅರ್ಥ.—ಯಸ್ಯ=ಯಾವ ವೇದವ್ಯಾಸದೇವರ, ಪ್ರಸಾದಾತ್-ಅನುಗ್ರಹದಿಂದ, ಇಮಾಂ-ಇಂಥಾ, ನಾರಾಯಣಕಥಾಂ=ನಾರಾಯಣನ ಕಥೆಯನ್ನು, ವಕ್ಷ್ಯಾಮಿ=ಹೇಳುತ್ತೇನೋ, ತಸ್ಮೈ=ಅಂಥಾ, ಭಗವತೇ=ಷಡ್ಗುಣೈಶ್ವರ್ಯ ಸಂಪನ್ನನಾದಂಥಾ, ಅಮಿತತೇಜಸೆ=ಅಪಾರ ತೇಜಸ್ವಿಯಾದಂಥ, ವ್ಯಾಸಾಯ=ವೇದವ್ಯಾಸದೇವರಿಗೆ, ನಮಃ-ನಮಸ್ಕಾರ ಮಾಡುತ್ತೇನೆ.

ತಾತ್ಪರ್ಯ.—ಯಾವ ಶ್ರೀಪರಮಾತ್ಮನ ಅನುಗ್ರಹದಿಂದ ಶ್ರೀನಾರಾಯಣನ ಕಥೆ ಹೇಳುವ ಶಕ್ತಿ ಉಂಟಾಗುತ್ತದೆಯೋ ಅಂಥ ಪರಮಾತ್ಮನೇ ಗುಣಪೂರ್ಣನಾದ ಮಹಾ ತೇಜಃಪುಂಜನಾದ ಶ್ರೀವೇದವ್ಯಾಸದೇವರಾದ್ದರಿಂದ ಅಂಥ ವೇದವ್ಯಾಸದೇವರಿಗೆ ನಮಸ್ಕಾರಮಾಡಿ ನಿರ್ವಿಘ್ನವಾಗಿ ಕಥಾಕಾಲಕ್ಷೇಪ, ಮತ್ತು ಸಮಾಪ್ತಿಯಾಗಬೇಕೆಂದು ಪ್ರಾರ್ಥನಾರೂಪ ನಮಸ್ಕಾರಮಾಡುತ್ತೇನೆಂದು ಹೇಳುತ್ತಾರೆ.

ವಿಶೇಷಾರ್ಥ.—ವಾಗಾದಿಂದ್ರಿಯಗಳಿಗೆ ಅಭಿಮಾನಿಗಳಾದ, ಉಮಾ ಮತ್ತು ವಹ್ನಿ ಈ ದೇವತೆಗಳು ಕೂಡ ಶ್ರೀಹರಿಯ ಅಧೀನರು. ಆದುದರಿಂದ ಶ್ರೀವೇದವ್ಯಾಸದೇವರಿಗೆ ನಮಸ್ಕಾರ ಮತ್ತು ಪ್ರಾರ್ಥನೆಯನ್ನು ಮಾಡಿ ಅವರೇ ನಿಂತು ಕಥೆಯನ್ನು ಸಾಂಗವಾಗಿ ನಡಿಸಲಿ ಎಂದು ಪ್ರಾರ್ಥಿಸುತ್ತಾರೆ.

ಅವತಾರಿಕೆ.—ಭಾರತದಲ್ಲಿ ಪ್ರತಿಪಾದ್ಯನಾದವನು ಶ್ರೀವಾಸುದೇವರೂಪನಾದ ನಾರಾಯಣನೇ ಹೊರ್ತು ಬೇರೆಯಲ್ಲ. ಸರ್ವ ಭಾರತಕಥೆಯಿಂದಲೂ ಶ್ರೀವಾಸುದೇವನೇ ಪ್ರತಿಪಾದ್ಯನೆಂಬುವುದನ್ನು ಭಾರತ ಶ್ಲೋಕದಿಂದಲೇ ತಿಳಿಸುತ್ತಾರೆ.

**ಶ್ಲೋಕ || ವಾಸುದೇವಸ್ತು ಭಗವಾನ್ ಕೀರ್ತ್ಯತೇತ್ರ ಸನಾತನಃ || ಪ್ರತಿಬಿಂಬಮಿವಾದರ್ಶೆ ಯಂಪಶ್ಯಂತಾತ್ಮನೆಸ್ಥಿತಂ ||೬೮||**

ಅರ್ಥ.—ಖುಷಯಃ-ಖುಷಿಗಳು, ಆತ್ಮನ=ಜೀವನಲ್ಲಿ, ಸ್ಥಿತಂ=ನಿಯಾಮಕನಾಗಿರುವಂಥ, ಯಂ-ಯಾವ ವಾಸುದೇವನನ್ನ, ಅದರ್ಶೆ-ಕನ್ನಡಿಯಲ್ಲಿ, ಪ್ರತಿಬಿಂಬಮಿವ-ತನ್ನ ರೂಪದೋಪಾದಿಯಲ್ಲಿ, ಪಶ್ಯಂತಿ-

ನೋಡುತ್ತಾರೋ, ಸಃ=ಅಂಥ, ಸನಾತನಃ-ಅನಾದಿ ನಿತ್ಯನಾದಂಥ, ಭಗವಾನ್-ಗುಣಪೂರ್ಣನಾದ, ವಾಸುದೇವಸ್ತು=ವಾಸುದೇವ ಶಬ್ದ ವಾಚ್ಯನಾದ ನಾರಾಯಣನೇ, ಅತ್ರ=ಈ ಭಾರತದಲ್ಲಿ, ಕೀರ್ತ್ಯತೇ=ಹೇಳಿಸಿಕೊಳ್ಳುತ್ತಾನೆ.

ತಾತ್ಪರ್ಯ.—ಯಾವ ಋಷಿಗಳು ಜ್ಞಾನ ನೇತ್ರದಿಂದ ಬಿಂಬವನ್ನು ಕನ್ನಡಿಯಲ್ಲಿ ತಮ್ಮ ರೂಪ ನೋಡಿದಂತೆ ನೋಡುತ್ತಾರೋ ಅದೇ ವಾಸುದೇವನೇ ಭಾರತದಲ್ಲಿ ಪ್ರತಿಪಾದ್ಯನಾಗಿ ಶ್ರವಣ ಮನನಾದಿಗಳಿಂದ ಜ್ಞಾನ ದ್ವಾರ ಮೋಕ್ಷ ಕೊಡುವದಕ್ಕೋಸ್ಕರ ಹೇಳಿಸಿಕೊಳ್ಳಲ್ಪಡುತ್ತಾನೆ.

ವಿಶೇಷಾರ್ಥ.—ಈ ಶ್ಲೋಕದಲ್ಲಿ “ ವಾಸುದೇವಸ್ತು ’ ಎಂಬುವುದರಿಂದ ಸರ್ವತ್ರ ವಾಸಮಾಡುವ ಭಗವದ್ರೂಪಕ್ಕೆ ವಾಸುದೇವ ಎಂದು ಹೆಸರು. ಭಾರತ, ಪ್ರತಿಪಾದ್ಯನೂ ವಾಸುದೇವನೇ, ಬಿಂಬದಲ್ಲಿ ಸನ್ನಿಹಿತವಾದ ಭಗವದ್ರೂಪವೂ ವಾಸುದೇವರೂಪವು- ಭಾರತ ಕಥಾನುಸಾರ ಪರಮಾತ್ಮನನ್ನು ಉಪಾಸನಾ ಮಾಡುವವರಿಗೆ ಬಿಂಬಾಪರೋಕ್ಷವೂ ಆಗುತ್ತದೆಂದು ತಿಳಿಸುತ್ತಾರೆ.

ಅವತಾರಿಕೆ.—ವಿಷ್ಣು ಸರ್ವೋತ್ತಮತ್ವ ಜ್ಞಾನವೇ ಮೋಕ್ಷಸಾಧಕವಾದದ್ದು ಮತ್ತು ಸಕಲ ಪುರುಷಾರ್ಥಕ್ಕೂ ಸಾಧಕವೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ.—

**ಶ್ಲೋಕ ॥ ನಾಸ್ತಿನಾರಾಯಣ ಸಮಂ ನಭೂತಂವ ಭವಿಷ್ಯತಿ ॥ ಏತೇನಸತ್ಯ ವಾಕ್ಯೇನ ಸರ್ವಾರ್ಥಾನ್‌ಸಾಧಯಾಮ್ಯಹಂ ॥೬॥**

ಅರ್ಥ.—ಅಹಂ=ನಾನು, ( ಭಾರತವನ್ನು ರಚಿಸಿದ ವೇದವ್ಯಾಸದೇವರು ) ನಾರಾಯಣಸಮಂ = ನಾರಾಯಣ, ನಾರಾಯಣದೇವರಿಗೆ, ಸಮಂ=ಸರಿಯಾದವರು, ನಾಸ್ತಿ = ಇಲ್ಲವು. ಭೂತಂ=ಭೂತಕಾಲದಲ್ಲಿ, ನ=ಇಲ್ಲ, ಭವಿಷ್ಯತಿ=ಭವಿಷ್ಯತ್‌ಕಾಲದಲ್ಲಿ, ನ=ಇಲ್ಲ, ಏತೇನ=ಇಂಥಾ ಸತ್ಯವಾಕ್ಯೇನ=ಸತ್ಯ ವಚನದಿಂದ, ಸರ್ವಥಾನ್=ಸಕಲ ಪುರುಷಾರ್ಥಗಳನ್ನೂ, ಸಾಧಯಾಮಿ=ಸಾಧನೆ ಮಾಡುತ್ತೇನೆ.

ತಾತ್ಪರ್ಯ.—ಜಗನ್ನಿಯಾಮಕನಾದ ಲಕ್ಷ್ಮೀಪತಿಯಾದ ಶ್ರೀನಾರಾ

ಯಣದೇವರಿಗೆ ಸಮರಾದವರು ಇಲ್ಲವೆಂದು ಹರಿ ಸರ್ವೋತ್ತಮತ್ವ ಜ್ಞಾನ ದಿಂದಲೇ ಸಕಲ ಪುರುಷಾರ್ಥಗಳನ್ನು ಸಾಧನಮಾಡುತ್ತೇನೆ. ಈ ದೇವ ರಿಗೆ ಸಮರಾದವರು ಭೂತ ಭವಿಷತ್ ಕಾಲಗಳಲ್ಲಿ ಇಲ್ಲವೆಂದು ಸರ್ವ ಶಾ ಸ್ತ್ರಾರ್ಥಗಳಿಂದಲೂ ನಿರ್ಧಾರಮಾಡುತ್ತೇನೆ.

ವಿಶೇಷಾರ್ಥ—ಅತೀತ ಅನಾಗತ ಬ್ರಹ್ಮಾಂಡಗಳನ್ನು ನಿರ್ಮಾಣ ಮಾಡುವ ಮಹಾ ಸಾಮರ್ಥ್ಯವುಳ್ಳ ಶ್ರೀಹರಿಗೆ ಸಮರಾದವರು ಇಲ್ಲವೆಂಬು ವುದು ಏಕೆಂದರೆ—ಈಶನಿಂದ ಸೃಷ್ಟರಾದ ಚೇತನರಾಶಿಗಳಿಗೆ ಸಂಚಿತ ಪ್ರಾ ರಬ್ಧ ಆಗಮ್ಯಾದಿ ಕರ್ಮತ್ರಯಗಳಿಗೆ ಅನುಗುಣವಾದ ಸೃಷ್ಟಿಯನ್ನು ಮಾಡು ವ ಸ್ವಾಮಿಗೆ ಸರ್ವ ಚೇತನವಿಷಯಕ ಸರ್ವಜ್ಞತ್ವವು ನಿಶ್ಚಯವು. ಮತ್ತು ಸರ್ವಚೇತನರಿಗೆ ಕಾಲಾನುಗುಣವಾದ ಸಾಧನ ಸಾಮಗ್ರಿಗಳನ್ನು ಒದಗಿಸಿ ಅವರವರ ಸಾಧನಾನುಸಾರ ವೈಷಮ್ಯ ನೈರ್ಘೃಣ್ಯಗಳಿಲ್ಲದ ಸಮವಾದ ಫಲ ಗಳನ್ನು ಕೊಡುವ ಮಹಾ ಸಾಮರ್ಥ್ಯವುಳ್ಳವನಾದ್ದರಿಂದ ಇವನಿಗೆ ಸಮ ರಿಲ್ಲವೆಂದು ನಿರ್ಧರಿಸಿ ಈ ಸ್ವಾಮಿಯ ಸರ್ವೋತ್ತಮತ್ವ ಜ್ಞಾನದಿಂದಲೇ ಸರ್ವಾರ್ಥಗಳನ್ನು ಸಾಧಿಸುತ್ತೇನೆಂದು ಹೇಳುತ್ತಾರೆ.

ಅವತಾರಿಕೆ.—ಭಾರತವನ್ನು ರಚಿಸಿದ ಶ್ರೀವೇದವ್ಯಾಸದೇವರೇ ಶ್ರೀ ನಾರಾಯಣನಿಗೆ ಸಮರಾದವರಿಲ್ಲವೆಂದು ಭಾರತದಲ್ಲಿಯೇ ಹೇಳಿದ್ದಾರೆ. ಮತ್ತು ಭಾರತದಲ್ಲಿ ಮೊದಲು, ಮಧ್ಯ, ಕೊನೆ, ಈ ರೀತಿಯಾಗಿ ಸರ್ವ ಗ್ರಂಥದಲ್ಲಿಯೂ ನಾರಾಯಣನೇ ಪ್ರತಿಪಾದ್ಯನೆಂಬುವುದನ್ನ ತಿಳಿಸುತ್ತಾರೆ.—

**ಶ್ಲೋಕ॥ ಆದ್ಯಂತಯೋರಿತ್ಸವದಸ್ಸಯಸ್ಮಾ ದ್ವ್ಯಾಸಾತ್ಮಕೋ ವಿಷ್ಣುರುದಾರ ಶಕ್ತಿಃ॥ ತಸ್ಮಾತ್ಸಮಸ್ತಾ ಹರಿಸದ್ಗುಣಾಸಾಂ ನಿರ್ಣೀಯತೇ ಭಾರತ ಗಾಸಥೃಷಾ ॥೭೦॥**

ಅರ್ಥ.—ಸಃ=ಅಂಥ, ವ್ಯಾಸಾತ್ಮಕಃ=ವೇದವ್ಯಾಸರೂಪನಾದಂಥ, ಉದಾರಶಕ್ತಿಃ=ಉತ್ಕೃಷ್ಟವಾದ ಶಕ್ತಿವುಳ್ಳ, ವಿಷ್ಣುಃ – ಶ್ರೀನಾರಾಯಣ ದೇವರು, ಯಸ್ಮಾತ್=ಯಾವ ಕಾರಣದಿಂದ, ಆದ್ಯಂತಯೋಃ=ಮೊದಲು

ಮತ್ತು ಕೊನೆಗಳಲ್ಲಿ, ಇತಿ=ಶ್ರೀಹರಿಗೆ ಕಾಲತ್ರಯದಲ್ಲಿ ಸಮರು ಅಥವ ಉತ್ತಮರು ಇಲ್ಲವೆಂದು, ಅನದತ್-ಹೇಳಿದ್ದಾರೆಯೋ, ತಸ್ಮಾತ್=ಆ ಕಾರಣದಿಂದ, ಸಮಸ್ತಾ-ಸರ್ವ ವಿಷಯುಕವಾದ, ಭಾರತಗಾ - ಭಾರತದಲ್ಲಿರುವ, ಏಷಾ-ಇಂಥಾ, ಕಥಾ-ಕಥೆಯು, ಹರಿಸದ್ಗುಣಾನಾಂ=ಶ್ರೀಹರಿಯ ಜ್ಞಾನಾನಂದಾದಿ ಗುಣಗಳನ್ನು, ನಿರ್ಣೀಯತೆ=ನಿರ್ಣಯವಾಡಲ್ಪಡುತ್ತದೆ.

ತಾತ್ಪರ್ಯ.—ಶ್ರೀವೇದವ್ಯಾಸದೇವರು ಭಾರತಗ್ರಂಥದಲ್ಲಿ ಮೊದಲಿನಲ್ಲಿಯೂ, ಕೊನೆಯಲ್ಲಿಯೂ ಕೂಡ ಶ್ರೀವಿಷ್ಣುವಿನ ಜ್ಞಾನಾನಂದಾದಿ ಗುಣಗಳನ್ನು ಯಾವ ರೀತಿ ಹೇಳಿದ್ದಾರೆಯೋ ಅದೇ ವಚನಗಳಿಂದ ಶ್ರೀಮದಾಚಾರ್ಯರು ಶ್ರೀಹರಿಸರ್ವೋತ್ತಮತ್ವ ಜ್ಞಾನಾರ್ಥಿಗಳಾದ ಅಧಿಕಾರಿಗಳಿಗಾಗಿ ನಿರ್ಣಯ ಮಾಡುತ್ತೇವೆಂದು ಹೇಳುತ್ತಾರೆ.

ವಿಶೇಷಾರ್ಥ.—ನಿರ್ಣಯ, ನಿರ್ಣಯಕ ಈ ಎರಡರಲ್ಲಿ ನಿರ್ಣಯವೇ ಪ್ರಧಾನವಾದದ್ದು. ಸಮಸ್ತ ಭಾರತ ಕಥೆಯು ಶ್ರೀಹರಿಯ ಸರ್ವೋತ್ತಮತ್ವ ಸ[illegible] ಕವಾಗಿಯೇ ಇದೆ. ಈ ರೀತಿ ಶ್ರೀವೇದವ್ಯಾಸದೇವರೇ ತಿಳಿಸಿದ್ದ[illegible] ಆಚಾರ್ಯರು ನಿರ್ಣಯಮಾಡಿದ್ದಾರೆ, ಶ್ರೀಮದಾಚಾರ್ಯರು ತಾವು ಕೇವಲ ಸ್ವಬುದ್ಧಿಪೂರ್ವಕ ವಚನಗಳನ್ನು ಉಪಯೋಗಿಸಿದ್ದಾರೆಂದು ಅಧಿಕಾರಿಗಳು ತಿಳಿಯಬೇಕಾದ್ದಿಲ್ಲ. ಕಿಂತು ಭಾರತದಲ್ಲಿನ ವೇದವ್ಯಾಸರ ವಚನಗಳನ್ನೇ ಉದಾಹರಿಸಿ, ಶ್ರೀಹರಿಗೆ ತಮ್ಮಿಂದ ಮಾಡಲ್ಪಟ್ಟ ನಿರ್ಣಯಗ್ರಂಥದ ಕರ್ತೃತ್ವವನ್ನು ಅರ್ಪಣ ಮಾಡಿರುತ್ತಾರೆ.

ಅವತಾರಿಕೆ.—ಹಿಂದೆ ಭಾರತದ ಆದಿಯಲ್ಲಿ ನಿರೂಪಣ ಮಾಡಿದ ವಚನಗಳನ್ನು ತಿಳಿಸಿದರು. ಈಗ ಭಾರತದ ಮಧ್ಯಭಾಗದಲ್ಲಿಯೂ, ಶ್ರೀಹರಿಯ ಸರ್ವೋತ್ತಮತ್ವವನ್ನು ತಿಳಿಸುವ ವಚನಗಳಿವೆ ಎಂದು ಅನುವಾದ ಮಾಡಿ ಅವುಗಳನ್ನು ಉದಾಹರಿಸುತ್ತಾರೆ—

**ಶ್ಲೋಕ ॥ ಸತ್ಯಂಸತ್ಯಂ ಪುನಃಸತ್ಯ ಮುದ್ಧೃತ್ಯಭುಜಮುಚ್ಯತೇ । ವೇದಶಾಸ್ತ್ರಾತ್ಪರಂನಾಸ್ತಿ ನದೈವಂ ಕೇಶವಾತ್ಪರಂ ॥೬೦॥**

ಅರ್ಥ.—ವೇದಶಾಸ್ತ್ರಾತ್=ವೇದಾಂತ ಶಾಸ್ತ್ರಕ್ಕಿಂತಲೂ, ಪರಂ-ಉತ್ತಮವಾದ ಶಾಸ್ತ್ರವು, ನಾಸ್ತಿ=ಇಲ್ಲಾ, ಕೇಶವಾತ್=ಬ್ರಹ್ಮ ರುದ್ರಪದ

ಪ್ರವರ್ತಕನಾದ ನಾರಾಯಣನಿಗಿಂತಲೂ, ಪರಂ=ಉತ್ತಮನಾದ, ದೈವಂ ದೇವತೆಯು, ನ=ಇಲ್ಲ, ಇತಿ–ಹೀಗೆಂದು, ಮಯಾ=ನನ್ನಿಂದ, ಭುಜಂ–ಭುಜವನ್ನು, ಉದ್ಧೃತ್ಯ=ಮೇಲಕ್ಕೆತ್ತಿ. ಸತ್ಯಂಸತ್ಯಂ=ಸತ್ಯವು, ಪುನಃ=ಮತ್ತೆ, ಸತ್ಯಂ=ಸತ್ಯವೆಂದು, ಉಚ್ಯತೇ–ಹೇಳಿಸಿಕೊಳ್ಳಲ್ಪಡುತ್ತದೆ.

ತಾತ್ಪರ್ಯ.—ವೇದಶಾಸ್ತ್ರಕ್ಕಿಂತಲೂ ಉತ್ತಮವಾದ ಶಾಸ್ತ್ರವಿಲ್ಲ. ನಾರಾಯಣದೇವರಿಗಿಂತಲೂ ಉತ್ತಮನಾದ ದೇವರಿಲ್ಲ. ಈ ರೀತಿಯಾಗಿ ನಾನು ಭುಜಗಳನ್ನು ಮೇಲಕ್ಕೆತ್ತಿಕೊಂಡು ಮೂರಾವರ್ತಿ ಸತ್ಯವೆಂದು ಪ್ರಮಾಣ ಮಾಡುತ್ತೇನೆ.

ವಿಶೇಷಾರ್ಥ.—ಧಾರಾಢ್ಯರ್ಥವಾಗಿ ಮೂರಾವರ್ತಿ ಸತ್ಯ ಶಬ್ಧ ಪ್ರಯೋಗಮಾಡಿರುತ್ತಾರೆ. ವೇದಶಾಸ್ತ್ರಾತ್ ಎಂಬುವುದರಿಂದ, ಋಗಾದಿ ವೇದಗಳು ಮತ್ತು ಶಾಸ್ತ್ರ, ಬ್ರಹ್ಮಮೀಮಾಂಸಶಾಸ್ತ್ರ ಇವುಗಳೆಂದು ಅಭಿಪ್ರಾಯ, ಮತ್ತು ಪ್ರತಿಪಾದ್ಯ ಪ್ರತಿಪಾದಕ ಎರಡು ಸಿದ್ಧವಾಯಿತು. ಪ್ರತಿಪಾದಕವಾದ ಶಾಸ್ತ್ರ ವಚನಗಳು, ವೇದಗಳು ಇವಕ್ಕೆ ಸಮವಲ್ಲ. ಪ್ರತಿಪಾದ್ಯವಸ್ತುಗಳಲ್ಲಿ ಕೇಶವನಿಗೆ ಸಮರಾದವರಿಲ್ಲವೆಂದು ತಿಳಿಸುತ್ತಾರೆ.

ಅವತಾರಿಕೆ.—ಶ್ರೀಹರಿಯೇ ಸರ್ವೋತ್ತಮನೆಂಬ ವಿಚಾರದಲ್ಲಿಯೂ ಮತ್ತು ಶ್ರೀಹರಿಯೇ ಧ್ಯೇಯನೆಂಬ ವಿಚಾರದಲ್ಲಿಯೂ ಭಾರತದಲ್ಲಿ ಶ್ರೀವೇದವ್ಯಾಸರಿಂದ ಸೂಚಿತವಾದ ವಚನಗಳನ್ನು ತಿಳಿಸುತ್ತಾರೆ.—

**ಶ್ಲೋಕ ॥ ಆಲೋಡ್ಯ ಸರ್ವಶಾಸ್ತ್ರಾಣಿ । ವಿಚಾರ್ಯ ಚ ಪುನಃಪುನಃ ॥ ಇದಮೇಕಂ ಸುನಿಷ್ಪನ್ನಂ । ಧ್ಯೇಯೋ ನಾರಾಯಣಃ ಸದಾ ॥೭೨॥**

ಅರ್ಥ.—ಮಯಾ=ನನ್ನಿಂದ, ಸರ್ವಶಾಸ್ತ್ರಾಣಿ=ಸಕಲ ಶಾಸ್ತ್ರಗಳು, ಆಲೋಡ್ಯ–ಚೆನ್ನಾಗಿ ನೋಡಲ್ಪಟ್ಟು, ಪುನಃಪುನಃ–ಮತ್ತೆ ಮತ್ತೆ, ವಿಚಾರ್ಯ ಚ=ವಿಚಾರ ಮಾಡಿದ್ದರಲ್ಲಿ, ಸದಾ=ಸರ್ವಕಾಲದಲ್ಲಿಯೂ, ನಾರಾಯಣಃ=ನಾರಾಯಣನು, ಧ್ಯೇಯಃ=ಧ್ಯಾನಾರ್ಹನು ಎಂಬ, ಇದಂ=ಈ ಬಗೆಯಾದ, ಏಕಂ=ಒಂದು ವಿಷಯವು, ಸುನಿಷ್ಪನ್ನಂ=ಚೆನ್ನಾಗಿ ನಿಶ್ಚಯವಾಯಿತು.

ತಾತ್ಪರ್ಯ.—ಶ್ರೀವೇದವ್ಯಾಸದೇವರು, ನಾನು ಸರ್ವ ಶಾಸ್ತ್ರಗಳನ್ನು ಶೋಧಿಸಿ ನೋಡಿದೆ, ಮತ್ತು ಆ ಶಾಸ್ತ್ರಗಳನ್ನು ವಿಚಾರ ಮಾಡಿದೆ,

ಹೀಗೆ ನೋಡಿದ್ದರಲ್ಲಿ ಸರ್ವ ಶಾಸ್ತ್ರಗಳಿಂದಲೂ ಸಕಲ ಅರ್ಥಗಳಿಂದಲೂ ಶ್ರೀಲಕ್ಷ್ಮೀಪತಿಯಾದ ನಾರಾಯಣನೇ ಧ್ಯಾನಾರ್ಹನಾದವನೆಂದು ಸಿದ್ಧವಾಯಿತೆಂದು ಭಾರತದಲ್ಲಿ ಹೇಳಿದ್ದಾರೆ. ಇದರಿಂದ, ವಿಷ್ಣು ಸರ್ವೋತ್ತಮನೆಂದು ನಿಶ್ಚಯವಾಯಿತೆಂದು ತಾತ್ಪರ್ಯಾಚಾರ್ಯರು ತಿಳಿಸುತ್ತಾರೆ.

ವಿಶೇಷಾರ್ಥ.—ವೇದೈಕದೇಶವಾದ, ಅಂಭೃಣೀಸೂಕ್ತದಲ್ಲಿಯೂ, ಮತ್ತು ಪುರುಷಸೂಕ್ತದಲ್ಲಿಯೂ, ಶ್ರೀನಾರಾಯಣನೇ ಸರ್ವೋತ್ತಮನೆಂದು ವೇದದಿಂದಲೇ ಸಿದ್ಧವಾಗಿರುವ ಅರ್ಥವನ್ನು, ವೇದ ಅನಾಧಿಕಾರಿಗಳಿಗಾಗಿ ಶ್ರೀವ್ಯಾಸರು ಶ್ಲೋಕರೂಪವಾಗಿ ಭಾರತವನ್ನು ರಚಿಸಿದರು. ಆದ್ದರಿಂದ ಭಾರತವು ಐದನೆಯ ವೇದವೆಂಬುದು ಸಿದ್ಧವಾಯಿತು, ಮತ್ತು ತಾತ್ಪರ್ಯಗಾರರು, ವೇದಾರ್ಥಗಳಿಂದ ನಿಶ್ಚಯ ಮಾಡಿದ್ದನ್ನೇ ಪುನಃ ಭಾರತ ವಚನಗಳನ್ನು ಉದಾಹರಿಸಿ ಸ್ಥಾಪನೆ ಮಾಡುತ್ತಾರೆಯೇ ಹೊರ್ತು ಬೇರೆಯಲ್ಲ.

ಪ್ರಮಾಣ.—ಅಂಭೃಣೀಸೂಕ್ತ.—"ಯಂಕಾಮಯೇ ತಂತಮುಗ್ರಂ ಕೃಣೋಮಿ || ಮಮಯೋನಿರಪ್ಸ್ವ" ಮತ್ತು ಏಕೋನಾರಾಯಣ ಆಸಿತ್ ಈ ವಚನಗಳಿಂದ ರಮಾದೇವಿಯರೇ ಪರಾಧೀನರೆಂದು ಹೇಳಿಕೊಂಡದ್ದರಿಂದ, ತತ್ಪತಿಯಾದ ಸ್ವಾಮಿಯೇ ಸರ್ವೋತ್ತಮನೆಂದು ಸಿದ್ಧವಾಯಿತು.

ಅವತಾರಿಕೆ.—ಪೂರ್ವ ಶ್ಲೋಕದಲ್ಲಿ ಧ್ಯಾನಾರ್ಹನಾದವನು ನಾರಾಯಣನೆಂದು ಹೇಳಿದರು. ಈ ಶ್ಲೋಕದಲ್ಲಿ ಸರ್ವಕಾಲದಲ್ಲಿಯೂ ಆವನು ಸ್ಮರಣೀಯನೆಂಬುವುದನ್ನು ಹೇಳುವ ಭಾರತದ ವಚನವನ್ನು ಉದಾಹರಿಸಿ ವಿಷ್ಣು ಸರ್ವೋತ್ತಮತ್ವವೇ ಸಿದ್ಧವೆಂಬುವುದಕ್ಕೆ ಪ್ರಮಾಣವನ್ನು ಸೂಚಿಸುತ್ತಾರೆ.

**ಶ್ಲೋಕ || ಸ್ಮರ್ತವ್ಯಃ ಸತತಂ ವಿಷ್ಣು | ವಿಸ್ಮರ್ತವ್ಯೋನಜಾತುಚಿತ್ || ಸರ್ವೇ ವಿಧಿನಿಷೇಧಾಃಸ್ಯು | ರೇತಯೋರೇವಕಿಂಕರಾಃ ||೭೩||**

ಅರ್ಥ.—ಸತತಂ=ಸರ್ವರಿಂದಲೂ, ಸರ್ವಕಾಲ, ದೇಶಗಳಲ್ಲಿಯೂ ವಿಷ್ಣುಃ=ನಾರಾಯಣದೇವರು, ಸ್ಮರ್ತವ್ಯಃ=ಸ್ಮರಣೆ ಮಾಡಲು ಅರ್ಹನು. ಜಾತುಚಿತ್=ಯಾವಾಗಲೂ, ನವಿಸ್ಮರ್ತವ್ಯಃ=ಮರೆಯುವವನಲ್ಲ, ಸರ್ವೇ—ಸಮಸ್ತವಾದ, ವಿಧಿನಿಷೇಧಾಃ—ವಿಧಿವಚನಗಳು, ಮತ್ತೆ, ನಿಷೇಧ ವಚನ

ಗಳು, ವಿತಯೇಃ=ಶ್ರೀಹರಿಯ ಸ್ಮರಣೆ ಮಾಡಬೇಕು. ಮಾಡದೇ ಇರ ಬಾರದೆಂಬ ವಚನಗಳಿಗೆ, ಕಿಂಕರಾವಿವ-ದಾಸರುಗಳು.

ತಾತ್ಪರ್ಯ.—ಶ್ರೀಪರಮಾತ್ಮನ ಸ್ಮರಣೆಯು ಅತ್ಯಾವಶ್ಯಕವೇ ಹೊ ರತು ಬೇರೆ ಸಾಧನಗಳೆಲ್ಲವೂ ಇದಕ್ಕಿಂತ ಕಡಿಮೆಯಾದವುಗಳು. ಆದ್ದ ರಿಂದ ಯಾವಾಗಲೂ ಹರಿಯನ್ನು ಮರೆಯಬಾರದು. ಆದರೆ ವಿಹಿತ ಕಾ ರ್ಯಗಳನ್ನ ಮಾಡು. ಅವಿಹಿತಗಳನ್ನು ಆಚರಿಸಬೇಡೆಂಬುವ ಪ್ರಮಾಣಗಳು ಮತ್ತು ಅವುಗಳ ಆಚರಣೆಯೂ ಶ್ರೀಹರಿಸ್ಮರಣೆಗಿಂತಲೂ ಕಡಿಮೆ. ಆದ್ದ ರಿಂದಲೇ ಕಿಂಕರರಂತೆ ಎಂದು ಹೇಳಿರುತ್ತಾರೆ. ದಾಸರುಗಳಿಗೆ ರಾಜನಲ್ಲಿ ಹೇಗೆ ಪ್ರಾಧಾನ್ಯವಿಲ್ಲವೋ ಹಾಗೆಂದು ತಿಳಿಯಬೇಕು.

ವಿಶೇಷಾರ್ಥ.—ಅಹರಹಃಸಂಧ್ಯಾಮುಪಾಶೀತ, ನಪಾಲಾಂಡುಂ, ಭಕ್ಷಯೀತ, ನಪರದಾರಾನ್ಗಚ್ಛೇತ್, ಇವುಗಳನ್ನು ತಿಳಿದು, ಆಚರಿಸುವ ವೇಳೆ ಆಚರಿಸದೇ ಇರುವ ವೇಳೆಗಳಲ್ಲಿ ಅಂದರೆ, ಸಂಧ್ಯಾವಂದನೆಮಾಡಿ ದರೆ ಹರಿಸ್ಮರಣೆ ಇಲ್ಲದ ಸಂಧ್ಯಾವಂದನ ವ್ಯರ್ಥವೆಂತಲೂ, ಮತ್ತು ದುಷ್ಟ ಪದಾರ್ಥಗಳನ್ನು ಭಕ್ಷಿಸದೇ ಬಿಡುವುದೇ ಶ್ರೇಷ್ಠವೆಂತಲ್ಲ. ಭಕ್ಷಿಸದೇ ಬಿ ಟ್ಟು, ಶ್ರೀಹರಿಯ ಪ್ರೀತ್ಯರ್ಥವೆಂದು ತಿಳಿಯಬೇಕೆಂತಲೂ, ಮತ್ತು ಪರ ಸ್ತ್ರೀಗಮನ ಮಾಡದೇ ಇರುವುದೂ ಕೂಡ, ಶ್ರೀಹರಿಪೂಜಾರೂಪ ಬ್ರಹ್ಮ ಚರ್ಯವೆಂದು ತಿಳಿಯಬೇಕೆಂದು ಸೂಚಿಸುತ್ತಾರೆ.

ಅವತಾರಿಕೆ.—ಈ ಬಗೆಯಾದ ಶ್ರೀನಾರಾಯಣನ, ಜ್ಞಾನಾನಂದಾದಿ ಗುಣಗಳನ್ನು ನಿರೂಪಿಸುವ ಪ್ರಮಾಣಗಳನ್ನು ಉದಾಹರಣಮಾಡಿ, ಇಂಥಾ ಪೂರ್ಣನಾದ ನಾರಾಯಣನನ್ನು ತಿಳಿದವರು, ಬ್ರಹ್ಮಾದಿ ಅಶೇಷ ಜೀವರಾ ಶಿಗಳಲ್ಲಿ ಯಾರಾದರೂ ಇರುತ್ತಾರೆಯೇ, ಎಂದು ಶಂಕಾ ಮಾಡಿಕೊಂಡು, ಯಾರಿಂದಲೂ ಪೂರ್ತಿ ತಿಳಿಯಲು ಸಾಧ್ಯನಲ್ಲವೆಂದು ಹೇಳುವ ಭಾರತ ವಚ ನವನ್ನು ತಿಳಿಸುತ್ತಾರೆ.

**ಶ್ಲೋಕ ॥ ಕೋಹಿತಂ ವೇದಿತುಂ ಶಕ್ತೋಯೋನಸ್ಯಾತ್ತದ್ವಿಧೋಪರಃ । ತ ದ್ವಿಧಃಶ್ಚಾಪರೋನಾಸ್ತಿ ತಸ್ಮಾತ್ತಂ ವೇದಸಸ್ವಯಂ ॥೭೪॥**

ಅರ್ಥ.—ಕಃ=ಯಾರು, ತಂ = ಪೂರ್ವೋಕ್ತ ಗುಣವಿಶಿಷ್ಟನಾದ ಹರಿಯನ್ನು, ವೇದಿತುಂ = ತಿಳಿಯುವುದಕ್ಕೆ, ಶಕ್ತಃ – ಶಕ್ತನಾದನು,

ತದ್ವಿದಃ=ಅವನನ್ನು ತಿಳಿಯುವುದರಲ್ಲಿ ಅವನಿಗೆ ಸಮನಾದವನು, ಅಪರಃ=ಮತ್ತೊಬ್ಬನು ನಸ್ತ್ಯಾತ್=ಇಲ್ಲವೋ, ತದ್ವಿದಃ=ಅವನಿಗೆ ಸದೃಶನಾದವನೂ, ನಾಸ್ತಿ=ಇಲ್ಲ, ತಸ್ಮಾತ್=ಆದಕಾರಣದಿಂದ, ತಂ=ಆ ಪರಮಾತ್ಮನನ್ನು, ಸ್ವಯಂ=ತಾನೇ, ವೇದ=ತಿಳಿದಿರುತ್ತಾನೆ, ಮತ್ಯಾರೂ ತಿಳಿದವರು ಇಲ್ಲ.

ತಾತ್ಪರ್ಯ.—ಬ್ರಹ್ಮಾದಿ ದೇವತೆಗಳು ಶ್ರೀ ನಾರಾಯಣನಿಗೆ ಸಮರಲ್ಲ. ಅಂಥಾ ಬ್ರಹ್ಮಾದಿಗಳೂ ಕೂಡ ಈ ಪೂರ್ಣನಾದ ನಾರಾಯಣನನ್ನ ತಿಳಿಯಲು ಹೇಗೆ ಶಕ್ತರಾದಾರು, ಸರ್ವಥಾ ಶಕ್ತರಲ್ಲ. ಅವನಿಗೆ ಸಮರಾದವರು ಇನ್ಯಾರೂ ಇಲ್ಲ. ಆ ದೇವರ ಗುಣಗಣಗಳನ್ನ ಆ ಹರಿಯೇ ತಿಳಿದಿರತಕ್ಕವನೇ ಹೊರ್ತು ಮತ್ಯಾರೂ ಇಲ್ಲ.

ವಿಶೇಷಾರ್ಥ.—ಪುರುಷೋತ್ತಮನಾದ ನಾರಾಯಣನನ್ನ ತಿಳಿಯುವ ಶಕ್ತಿ ರಮಾ ಬ್ರಹ್ಮಾದಿಗಳಿಗೂ ಇಲ್ಲ. ಕ್ಷರ ಪುರುಷರು ಬ್ರಹ್ಮಾದಿಗಳು, ಅಕ್ಷರ ಶಬ್ದ ವಾಚ್ಯರು ರಮಾ, ಇವರು ಯಾರಿಂದಲೂ ಸಾಕಲ್ಯೇನ ತಿಳಿಯಲು ಸಾಧ್ಯನಲ್ಲ ಎಂದು ಹೇಳಿದ್ದರಿಂದ ಶ್ರೀ ಹರಿಯೇ ಸ್ವತಂತ್ರ ಗುಣಪೂರ್ಣ. ರಮಾದಿ ಅಶೇಷ ಪ್ರಪಂಚವೂ ಅಸ್ವತಂತ್ರರು ಎಂದು ತಿಳಿಯಬೇಕೆಂದು ಸೂಚಿಸಿದಂತಾಯಿತು.

**ಅವತಾರಿಕೆ.**—ಶ್ರೀ ನಾರಾಯಣನನ್ನ ಪೂರ್ಣನಾಗಿ ತಿಳಿಯುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲವೆಂಬ ವಿಷಯದಲ್ಲಿ ಭಾರತ ಶ್ಲೋಕವನ್ನ ಉದಾಹರಿಸುತ್ತಾರೆ:—

**ಶ್ಲೋಕ|| ಕೋಹ್ಯನಂತಂ ವೇದಿತುಂ ಶಕ್ತೋ ನಾರಾಯಣಮನಾಮಯಂ |**
**ಋತೇ ಸತ್ಯವತೀಸೂನೋಃ ಕೃಷ್ಣಾದ್ವಾ ದೇವಕೀಸುತಾತ್||೭೫**

ಅರ್ಥ. ಅನಾಮಯಂ=ದೋಷದೂರನಾದಂಥ, ನಾರಾಯಣಂ=ನಾರಾಯಣ ದೇವರನ್ನ. ವೇದಿತುಂ=ತಿಳಿಯುವುದಕ್ಕೆ, ಶಕ್ತಃ=ಶಕ್ತಿಯುಳ್ಳವನು, ಕೋಹಿ=ಯಾವ ಆವಾರು, ನಕೋಽಪಿ=ಯಾರೂ ಶಕ್ತರಾಗಲಾರರು, ಸತ್ಯವತೀಸೂನೋಃ=ಸತ್ಯವತೀ ದೇವಿಯರ ಮಕ್ಕಳಾದ ವೇದವ್ಯಾಸದೇವರಿಂದಲೂ ಮತ್ತು ದೇವಕೀಸುತಾತ್=ದೇವಕೀ ಪುತ್ರನಾದ, ಕೃಷ್ಣಾದ್ವಾ=ಶ್ರೀಕೃಷ್ಣನಿಂದಲೂ, ಋತೇ=ಹೊರ್ತು, ಕೋಹಿ=ಯಾರು ಶಕ್ತರು,

ಅಂದರೆ ಆ ಪರಬ್ರಹ್ಮನ ಗುಣಗಣಗಳನ್ನ ತಿಳಿಯಲು ಅವನು ಶಕ್ತನೇ ಹೊರ್ತು ಮತ್ಯಾರೂ ಅಲ್ಲವೆಂದು ಅರ್ಥ.

ತಾತ್ಪರ್ಯ.—ಜಗತ್ತಿನಲ್ಲಿ ನಾರಾಯಣನಿಂದ ಭಿನ್ನರಾದ ಚೇತನ ರಾಶಿಗಳಲ್ಲಿ ಜಗಜ್ಜನ್ಮಾದಿ ಕಾರಣನಾದ ನಾರಾಯಣನ ಗುಣಗಳನ್ನ ತಿಳಿಯಲು ಯಾರೂ ಶಕ್ತರಲ್ಲ. ಆ ದೇವರೇ ಶಕ್ತನು, ಆ ಪರಬ್ರಹ್ಮನ ಎಲ್ಲಾ ಅವತಾರಗಳು ಪೂರ್ಣವಾದವುಗಳು, ಅವುಗಳನ್ನ ದೇವಕೀ ಪುತ್ರನಾದ ಶ್ರೀಕೃಷ್ಣನು ಸತ್ಯವತೀ ಪುತ್ರರಾದ ಶ್ರೀ ವೇದವ್ಯಾಸದೇವರು ತಿಳಿದವರೇ ಹೊರ್ತು ಮತ್ಯಾರೂ ತಿಳಿಯಲಾರರು.

ವಿಶೇಷಾರ್ಥ.—ರಮಾದೇವಿಯರು ನಿತ್ಯ ಮುಕ್ತರು, ಯಾವ ಕಾಲದಲ್ಲಿಯೂ ಪರಮಾತ್ಮನನ್ನ ಅರಘಳಿಗೆ ಬಿಟ್ಟಿರತಕ್ಕವರಲ್ಲ. ಅವರೂ ಕೂಡ ಶ್ರೀ ನಾರಾಯಣನ ಜ್ಞಾನಾನಂದಾದಿ ಗುಣಗಳನ್ನ ಸಾಕಲ್ಯೇನ ಅರಿಯರು, ಅನಂತಾನಂತ ಕಾಲದಿಂದಲೂ ಶ್ರೀಹರಿಯ ಕಿರುಬೆರಳಿನಲ್ಲಿರುವ ಗುಣಗಳನ್ನ ಹೊಸ ಹೊಸದಾಗಿ ಕಾಣುತ್ತಿರುವರೇ ಹೊರ್ತು ಕೊನೆಗಾಣರು. ಹೀಗಿರುವಾಗ ಬ್ರಹ್ಮಾದಿ ಚೇತನರಾಶಿಗಳ ಪಾಡೇನು ? ಪೂರ್ಣನಾದ ಪರಬ್ರಹ್ಮನ ಶಕ್ತಿ, ಕ್ರಿಯ ಇವುಗಳನ್ನ ಆ ಸ್ವಾಮಿ ಒಬ್ಬನೇ ಹೊರ್ತು ಇನ್ಯಾರಿಂದಲೂ ಸಾಧ್ಯವಲ್ಲ.

**ಅವತಾರಿಕೆ.**—ಶ್ರೀನಾರಾಯಣದೇವರಿಗೆ ಜ್ಞಾನಪೂರ್ಣತ್ವ ವಿಚಾರವನ್ನ ಹಿಂದಿನ ಶ್ಲೋಕಗಳಲ್ಲಿ ನಿರೂಪಿಸಿದರು. ಈಗ ಆ ಪರಮಾತ್ಮನ ಸ್ವಾತಂತ್ರ್ಯಾದಿ ವಿಷಯವನ್ನ ಹೇಳುವ ಶ್ಲೋಕವನ್ನ ಉದಾಹರಿಸುತ್ತಾರೆ:—

**ಶ್ಲೋಕ|| ಅಪ್ರಮೇಯೋಽನಿಯೋಜ್ಯಶ್ಚ ಸ್ವಯಂಕಾಮಗಮೋವಶೀ||**
**ಮೋದತ್ಯೇಷಃ ಸದಾಭೂತೈಃ ಬಾಲಕ್ರೀಡನಕೈರಿವ ||೭೬||**

ಅರ್ಥ.—ಏಷಃ=ಆನಾರಾಯಣನು, ಅಪ್ರಮೇಯಃ=ಯಾರಿಂದಲೂ, ಪೂರ್ತಿಯಾಗಿ ತಿಳಕೊಳ್ಳಲಿಕ್ಕೆ ಸಾಧ್ಯನಲ್ಲದವನು, ಅನಿಯೋಜ್ಯಃ= ಇತರರಿಂದ ಪ್ರೇರಿಸಲ್ಪಡುವುದಕ್ಕೆ ಸಾಧ್ಯನಲ್ಲದವನು, ಸ್ವಯಂ=ತಾನೇ, ಕಾಮಗಮಃ=ಸ್ವೇಚ್ಛಾನುಸಾರ ಗಮನ ಮಾಡುವವನು, ವಶೀ=ಸರ್ವೇಂದ್ರಿಯ

ಆಟವಾಡುವ ಪದಾರ್ಥಗಳಿಂದ ಹೇಗೆ ಆಡುತ್ತಾನೋ ಹಾಗೆ, ಸದಾ=ಸರ್ವ ಕಾಲವಲ್ಲಿಯೂ, ಭೂತ್ಯೈಃ=ಸಕಲ ಚೇತನ ರಾಶಿಗಳಿಂದ, ಮೋದತಿ = ಆಡಿ ಸಂತೋಷ ಪಡುತ್ತಾನೆ.

ತಾತ್ಪರ್ಯ.—ಪೂರ್ಣ ಗುಣವಂತನಾದ ಪ್ರಯುಕ್ತ ಅನ್ಯರಿಂದ ತಿಳಿಯಲು ಅಶಕ್ಯನು, ಅನ್ಯರ ಆಜ್ಞಾಧರಿಸುವನಲ್ಲದ್ದರಿಂದ ಸ್ವತಂತ್ರ, ಸ್ವತಂತ್ರನಾದ್ದರಿಂದ ಪೂರ್ಣ, ಇಂದ್ರಿಯ ನಿಗ್ರಹವುಳ್ಳವನಾದ್ದರಿಂದ ಸ್ವಾಮಿ, ಈ ರೀತಿ ಯಾವ ಗುಣಪೂರ್ಣನಾದುದರಿಂದ ಜಗನ್ನಿಯಾಮಕನೆಂದು ತಾತ್ಪರ್ಯ.

ವಿಶೇಷಾರ್ಥ.—ದೇವರಲ್ಲಿ ಜಗತ್ಸೃಷ್ಟ್ಯಾದಿ ಗುಣಗಳು ಇದ್ದರೇನೆ ಜಗಸ್ವಾಮಿಯಾಗುತ್ತಾನೆ. ಸ್ವತಂತ್ರತ್ವ ಸಂತೋಷ ಸೂಚಕ, ಸಂತೋಷ ಮೋಕ್ಷಲಕ್ಷಣ ಸ್ವಾಮಿ ನಿತ್ಯ ಮುಕ್ತರಾದ ರಮಾ ದೇವಿಯರಿಗೆ ಪತಿ ಆನಂದಪೂರ್ಣನಾದುದರಿಂದ ಮುಕ್ತರಿಗೆ ಆನಂದವನ್ನು ಕೊಟ್ಟು ಉದ್ಧಾರ ಮಾಡತಕ್ಕವನು.

**ಅವತಾರಿಕೆ.**—ಶ್ರೀಹರಿಯು ಇತರರಿಂದ ತಿಳಿಯಲು ಸಾಧ್ಯನಲ್ಲ, ಎಂಬುವದಕ್ಕೆ ಭಾರತದಲ್ಲಿ ಹೇಳಿದ ಪ್ರಮಾಣವನ್ನು ಆಚಾರ್ಯರು ನಿರೂಪಣ ಮಾಡುತ್ತಾರೆ:—

**ಶ್ಲೋಕ॥ ನಪ್ರಮಾತುಂಮಹಾಬಾಹುಃ ಶಕ್ಯೋಯಂಮಧುಸೂದನಃ ॥**
**ಪರಮಾತ್ಪರಮೇತಸ್ಮಾದ್ವಿಶ್ವರೂಪಾನ್ನವಿದ್ಯತೆ ॥೭೭॥**

ಅರ್ಥ.—ಮಧುಸೂದನಃ=ಮಧುನಾಮಕ ದೈತ್ಯನನ್ನ ಸಂಹರಿಸಿದ, ಅಯಂ=ಶ್ರೀನಾರಾಯಣನು, ಮಹಾಬಾಹುಃ=ಮಹಾ ಬಲಿಷ್ಠನಾದ್ದರಿಂದ, ಪ್ರಮಾತುಂ=ತಿಳಿಯುವುದಕ್ಕೆ, ಶಕ್ಯಃ=ಶಕ್ಯನು (ಸಾಧ್ಯನು), ನ = ಅಲ್ಲಾ, ತಸ್ಮಾತ್=ಅಂಥಾ, ಪರಮಾತ್=ಸರ್ವೋತ್ತಮನಾಗಿಯೂ, ವಿಶ್ವರೂಪಾತ್=ವಿಶ್ವರೂಪನಾಗಿಯೂ ಇರುವ ಪರಮಾತ್ಮನಿಗಿಂತಲೂ, ಪರಮೇ = ಉತ್ತಮರಾದವರು, ನವಿದ್ಯತೇ=ಬೇರೆ ಯಾರೂ ಇರುವುದಿಲ್ಲ.

ತಾತ್ಪರ್ಯ.—ದಿವ್ಯ ವಿಶ್ವರೂಪಧಾರಿಯಾದ್ದರಿಂದ ಇವನ ರೂಪ ಗುಣ ಶಕ್ತಿ ಇವುಗಳನ್ನ ತಿಳಿಯಲು ಸಾಧ್ಯವಲ್ಲ. ಸರ್ವ ರೂಪಕ್ಕಿಂತಲೂ ವಿಶ್ವರೂಪವು ಸರ್ವಶ್ರೇಷ್ಠವಾದ್ದರಿಂದ ಇವನನ್ನು ತಿಳಿಯಲು ಸಾಧ್ಯವಲ್ಲವೆಂದು ತಿಳಿಯಬೇಕು.

ವಿಶೇಷಾರ್ಥ.—ವಿಶ್ವರೂಪವು ಅಶೇಷ ಜೀವರಾಶಿಗಳಿಗೆ ಆಧಾರವಾ ದದ್ದು, ಮತ್ತು ಸರ್ವ ದೇವತೆಗಳಲ್ಲಿ ಇರುವ ಐಶ್ವರ್ಯ ಮೊದಲಾದುದಕ್ಕೆ ಆಶ್ರಯವಾದದ್ದು. ಐಶ್ವರ್ಯಪೂರ್ಣ, ದೋಷದೂರನೆಂದು ತಿಳಿದು ಉಪಾ ಸನಾ ಮಾಡುವ ಅಧಿಕಾರಿಗಳಿಗೆ ಅವರ ಯೋಗ್ಯತಾನುಸಾರ ಅನುಗ್ರಹ ಮಾಡುವನೆಂದು ತಿಳಿಯಬೇಕು.

**ಅವತಾರಿಕೆ.**—ಪರಮಾತ್ಮನಿಗೆ ಜನನ ಮರಣಾದಿಗಳು ಕಂಡು ಬಂ ದಿರುವುದರಿಂದ ಜನನ ಮರಣ ರಹಿತನೆಂದು ಹೇಳುವುದು ಹೇಗೆಂಬುವ ದನ್ನ ಹೇಳುತ್ತಾರೆ :—

**ಶ್ಲೋಕ॥ ವಸುದೇವಸುತೋನಾಯಂ ನಾಯಂಗರ್ಭೇವಸತ್ಪ್ರಭುಃ ॥**
**ನಾಯಂದಶರಥಾಜ್ಜಾತೋ ನಚಾಪಿಜಮದಗ್ನಿತಃ ॥೭೮॥**

ಅರ್ಥ.— ಅಯಂ=ಶ್ರೀಕೃಷ್ಣನು, ವಸುದೇವಸುತಃ= ವಸುದೇವನ ಮಗನು, ನ=ಅಲ್ಲ, ಅಯಂ=ಶ್ರೀ ನಾರಾಯಣನು, ಗರ್ಭೇ = ಗರ್ಭದಲ್ಲಿ ನವಸತ್=ವಾಸಿಸುವವನಲ್ಲ, ಅಯಂ=ಶ್ರೀರಾಮನು, ದಶರಥಾತ್=ದಶರಥ ರಾಯನ ದೆಶೆಯಿಂದ, ಜಾತಃ = ಹುಟ್ಟಿದವನು, ನ = ಅಲ್ಲ, ಜಮದಗ್ನಿ ತೋಪಿ=ಜಮದಗ್ನಿ ಋಷಿಗಳಿಂದಲೂ, ನಚ=ಹುಟ್ಟಿದವನಲ್ಲ.

ತಾತ್ಪರ್ಯ.—ಕೃಷ್ಣಾವತಾರ ಮಾಡಿದ ಶ್ರೀನಾರಾಯಣನು ದೇವಕೀ ದೇವಿಯ ಗರ್ಭದಲ್ಲಿ ನವಮಾಸವಿದ್ದಂತೆ ಭಾಗವತ ಹೇಳುತ್ತದೆ. ಆದರಿಂದ ಅಧಿಕಾರಿಗಳು ಸರ್ವಥಾ ದೇವರಿಗೆ ಗರ್ಭವಾಸ ಉಂಟೆಂದು ತಿಳಿಯಬಾ ರದು. ವಸುದೇವನ ಮಗನೂ ಅಲ್ಲ. ಗರ್ಭವಾಸವೂ ಇಲ್ಲ. ಹೇಗೆ ಕೃಷ್ಣಾ ವತಾರದಲ್ಲಿ ಗರ್ಭವಾಸವಿಲ್ಲವೋ ಹಾಗೆ ರಾಮಾವತಾರದಲ್ಲಿಯೂ ಗರ್ಭ ವಾಸವಿಲ್ಲ. ಪರಶುರಾಮಾವತಾರದಲ್ಲಿಯೂ ಗರ್ಭವಾಸವಿಲ್ಲವೆಂದು ಹೇಳು ತ್ತಾರೆ.

ವಿಶೇಷಾರ್ಥ.—ಗರ್ಭವಾಸದಲ್ಲಿ ಇದ್ದಂತೆಯೂ, ಹುಟ್ಟಿದಂತೆಯೂ ಹೇಳುತ್ತವಲ್ಲಾ ಅಂದರೆ ಅಜ್ಞ ಜನಗಳ ಮೋಹಕ್ಕಾಗಿ ಹೇಳುತ್ತದೆ ಯೋ ಹೊರತು ಬೇರೆ ಅಲ್ಲ. ಮತ್ತು ಭಕ್ತನಾದ ಪ್ರಹ್ಲಾದರಾಯನ ತಂದೆ ಬಹಳ ಕೋಪದಿಂದ ನಿನ್ನ ಹರಿಯು ಎಲ್ಲಿ ಇರುತ್ತಾನೆ ಎಂದು ಕೇಳಿದಾಗ

ಸರ್ವತ್ರ ವ್ಯಾಪ್ತನೆಂದು ಪ್ರಹ್ಲಾದನು ಉತ್ತರ ಕೊಟ್ಟನು. ಹಾಗಾದರೆ ಈ ಕಂಭದಲ್ಲಿ ತೋರಿಸೆಂದು ಹಿರಣ್ಯಕಶಿಪು ಕೇಳಿದಾಗ ಕಂಭದಲ್ಲೂ ಇದ್ದಾನೆಂದು ಪ್ರಹ್ಲಾದ ಹೇಳಲು ಆತನ ವಾಕ್ಯವನ್ನೂ ಬ್ರಹ್ಮದೇವರ ವರವನ್ನೂ ಎರಡನ್ನೂ ಸಾರ್ಥಕ ಮಾಡುವುದಕ್ಕಾಗಿ ಕಂಭದಿಂದಲೇ ಆವಿರ್ಭವಿಸಿದನು. ಅದೇ ರೀತಿಯಾಗಿ ಉದರದಿಂದ ಬಂದವನೇ ಹೊರ್ತು ಗರ್ಭಯಾತನಾದಿಗಳು ಪರಮಾತ್ಮನಿಗೆ ಇಲ್ಲವೆಂದು ತಿಳಿಯಬೇಕು.

**ಅವತಾರಿಕೆ.**—ಹಿಂದಿನ ಶ್ಲೋಕದಲ್ಲಿ ಪರಮಾತ್ಮನಿಗೆ ಗರ್ಭವಾಸ ದುಃಖ ಇಲ್ಲವೆಂದು ಹೇಳಿ, ಈಗ ಗರ್ಭ ವಾಸವೇ ಅಲ್ಲ ಜನನ ಮರಣವೂ ಇಲ್ಲವೆಂದು ಹೇಳುತ್ತಾರೆ:—

**ಶ್ಲೋಕ|| ಜಾಯತೇನೈವಕುತ್ರಾಪಿ ಮ್ರಿಯತೇಕುತಏವತತ್ ||**
**ನವಧ್ಯೋಮುಹ್ಯತೇನಾಯಂ ಬಧ್ಯತೆನೈವಕೇನಚಿತ್ ||೭೯||**

ಅರ್ಥ.—ಕುತ್ರಾಪಿ=ಯಾವ ಸ್ಥಳದಲ್ಲಿಯೂ, ನೈವಜಾಯತೇ=ಹುಟ್ಟುವವನಲ್ಲ, ಕುತಃ=ಯಾವ ಕಾರಣದಿಂದಲೂ, ನೈವಮ್ರಿಯತೆ=ಮರಣ ಹೊಂದುವವನಲ್ಲ, ತತ್=ಆ ನಾರಾಯಣನು, ನವಧ್ಯಃ=ಸಂಹರಿಸುವದಕ್ಕೆ ಸಾಧ್ಯನಲ್ಲ, ಅಯಂ=ಶ್ರೀ ಹರಿಯು, ನಮುಹ್ಯತೆ=ಮೋಹ ಪಡುವವನಲ್ಲ, ಕೇನಚಿತ್=ಯಾರಿಂದಲು, ನೈವಬಧ್ಯತೆ=ಬಂಧನ ಮಾಡಿಸಿಕೊಳ್ಳುವವನಲ್ಲ.

ತಾತ್ಪರ್ಯ.—ಪರಬ್ರಹ್ಮನಾದ ನಾರಾಯಣನು ಯಾವ ಅವತಾರಗಳನ್ನ ಎತ್ತಿದರೂ ಅವನು ಹುಟ್ಟುವವನಲ್ಲ, ಬೆಳಿಯುವವನಲ್ಲ, ಸಾಯುವವನೂ ಅಲ್ಲ, ಬಂಧನ ಮೋಹ ಇತ್ಯಾದಿ ದುರವಸ್ಥೆಗಳೂ ಅವನಿಗೆ ಇಲ್ಲ, ಇತರರಿಂದ ಬಂಧಿತನಲ್ಲವೆಂದು ಹೇಳುತ್ತಾರೆ.

ವಿಶೇಷಾರ್ಥ.—ದೋಷವರ್ಜನಾದ ನಾರಾಯಣನಿಗೆ ಸರ್ವತಂತ್ರ ಸ್ವತಂತ್ರತ್ವವೇ ಮೊದಲಾದ ಗುಣಗಳನ್ನ ಹೇಳಿ ಆ ಗುಣಗಳು ದೋಷರಹಿತವಾದವುಗಳು ಎಂದು ತಿಳಿದು ಆ ಪರಮಾತ್ಮನನ್ನ ಸರ್ವಜ್ಞನೆಂದು ತಿಳಿದು ಉಪಾಸನೆ ಮಾಡಬೇಕು. ಅವತಾರ ರೂಪಕ್ಕೂ ಮತ್ತು ಮೂಲ ರೂಪಕ್ಕೂ ಭೇದವಿಲ್ಲ. ಎಲ್ಲಿ ಮೋಹ ಅಜ್ಞಾನಾದಿಗಳು ಹೇಳಿವೆಯೋ ಅಲ್ಲಿ ಸರ್ವ ಕರ್ತೃತ್ವ ಕೂಡುವುದಿಲ್ಲ. ಆದ್ದರಿಂದಲೇ ಶ್ರೀ ಹರಿಯು ಜನನ ಮರಣಾದಿಗಳಿಂದ ಶೂನ್ಯನೆಂದು ಅವಶ್ಯಕವಾಗಿ ತಿಳಿಯಬೇಕೆಂದು ತಾತ್ಪರ್ಯ.

**ಅವತಾರಿಕೆ.**—ಪರಮಾತ್ಮನಿಗೆ ಅವತಾರ ರೂಪಗಳಲ್ಲಿ ದುಃಖಾದಿ ದೋಷಗಳು ಕಂಡುಬಂದಿವೆ. ಅದು ಅನ್ಯಥಾ ಸಿದ್ಧವೆಂದು ತಿಳಿಯಬೇಕು. ಎಂದು ಸೂಚಿಸಿ ಪರಮಾತ್ಮನಿಗೆ ದುಃಖಾದಿ ದೋಷಗಳಿಲ್ಲವೆಂಬುವಕ್ಕೆ ಪ್ರಮಾಣವನ್ನ ಹೇಳುತ್ತಾರೆ :—

**ಶ್ಲೋಕ|| ಕುತೋದುಃಖಂಸ್ವತಂತ್ರಸ್ಯ ನಿತ್ಯಾನಂದೈಕರೂಪಿಣಃ ||೮೦||**

**ಶ್ಲೋಕ|| ಈಶನ್ನಪಿಹಿದೇವೇಶಃ ಸರ್ವಸ್ಯಜಗತೋಹರಿಃ || ಕರ್ಮಾಣಿ ಕುರುತೇನಿತ್ಯಂ ಕೀನಾಶಇವದುರ್ಬಲಃ ||೮೧||**

ಅರ್ಥ.—ನಿತ್ಯಾನಂದೈಕರೂಪಿಣಃ=ನಿರಂತರ್ಯವಾಗಿ ಚಿದಾನಂದ ರೂಪಿಯಾದ, ಸ್ವತಂತ್ರಸ್ಯ=ಸ್ವತಂತ್ರನಾದ ಶ್ರೀ ನಾರಾಯಣನಿಗೆ, ದುಃಖಂ= ದುಃಖವು, ಕುತಃ–ಯಾವ ಕಾರಣದಿಂದ ಉಂಟಾದೀತು ? ಸರ್ವಸ್ಯ= ಸಮಸ್ತವಾದ, ಜಗತಃ=ಜಗತ್ತಿಗೆ, ದೇವೇಶಃ=ಈಶ್ವರನಾದ, ಹರಿಃ = ನಾರಾಯಣನು, ಈಶನ್ನಪಿ=ಸ್ವಾಮಿಯಾದರೂ, ದುರ್ಬಲಃ = ಬಲಹೀನನ ಹಾಗೂ, ಕೀನಾಶಇವ=ಕ್ಷುದ್ರ ಮಾನವನೋಪಾದಿಯಲ್ಲಿಯೂ, ಕರ್ಮಾಣಿ= ವ್ಯಾಪಾರವನ್ನ, ನಿತ್ಯಂ=ನಿರಂತರ, ಕುರುತೆ=ಮಾಡುತ್ತಾನೆ.

ತಾತ್ಪರ್ಯ.—ಜಗನ್ನಿಯಾಮಕನಾದ ಸರ್ವ ದೇವಾಧಿಪತಿಯಾದ ನಿತ್ಯಾನಂದ ಸ್ವರೂಪಿಯಾದ ಶ್ರೀ ಹರಿಯು ಮಾನವನಂತೆ ಅವತಾರ ಮಾಡಿದಾಗ ದುರ್ಬಲನಾದ ಮನುಷ್ಯನು ಹೇಗೆ ಅಜ್ಞಾನಾದಿಗಳಿಂದ ವ್ಯಾಪಾರ ಮಾಡುತ್ತಾನೋ ಹಾಗೆ ಲೋಕಾನುಸಾರವಾದ ಕರ್ಮ ಮಾಡುತ್ತಾನೆ. ಸ್ವಾಮಿ ದುಃಖ ಎಲ್ಲಿಂದಾ ಬಂತು, ಸರ್ವಥಾ ಇಲ್ಲ.

ವಿಶೇಷಾರ್ಥ.—ಅರ್ಜುನನಿಗೆ ದೇವರು ಲೋಕ ಸಂಗ್ರಹಕ್ಕಾಗಿ ಕರ್ಮ ಮಾಡಬೇಕೆಂದು ಗೀತಾದಲ್ಲಿ ಉಪದೇಶಿಸಿದ್ದಾನೆ. ತಾನು ಕರ್ಮ ಸಂಬಂಧ ಶೂನ್ಯನಾದರೂ ಸರ್ವ ಚೇತನರ ಶಿಕ್ಷಾನೇ ಅವತಾರಗಳ ಪ್ರಯೋಜನವಾದ್ದರಿಂದ ಅವರಿಗಾಗಿ ಅನುಷ್ಠಾನ ಮಾಡುತ್ತೇನೆ ಎಂದು ಹೇಳಿದ್ದಾನೆ.

ಪ್ರಮಾಣ.—ಮರ್ತ್ಯಾವತಾರ ಸ್ತ್ವಿಹಮರ್ತ್ಯಶಿಕ್ಷಣಂ| ರಕ್ಷೋವಧಾಯೆವನಕೇವಲಂವಿಭೋ, ಎಂತಲೂ ಮತ್ತು ಲೋಕಸಂಗ್ರಹವೇವಾಪಿಕರ್ಮ ಕರ್ತುಮಿಹಾರ್ಹಸಿ, ಗೀತಾ.—

ಶ್ರೀ ಪರಮಾತ್ಮನು ತಾನು ಕರ್ಮಕ್ಕೆ ಒಳಪಟ್ಟವನಲ್ಲದಿದ್ದರೂ ಅಧಿಕಾರಿಗಳ ಶಿಕ್ಷೆಗೋಸ್ಕರ ತಾನು ಅನುಷ್ಠಾನ ಮಾಡುತ್ತಾನೆ.

**ಅವತಾರಿಕೆ.**—ಹಿಂದಿನ ಶ್ಲೋಕದಲ್ಲಿ ಪರಮಾತ್ಮನು ಸಾಧಾರಣನಾದ ಮಾನವನಂತೆ ತಾನು ನಟಿಸಿದ್ದಾನೆಂದು ಹೇಳಿದರು. ಅದು ಯಾವಾಗ ಎಂಬುದನ್ನೂ ಹಾಗೆ ಮಾಡಿದ್ದು ಅಸುರ ಮೋಹಕ್ಕಾಗಿ ಎಂಬುದನ್ನೂ ತಿಳಿಸುತ್ತಾರೆ :—

**ಶ್ಲೋಕ॥ ನಾತ್ಮಾನಂವೇದಮುಗ್ಧೋಽಯಂ ದುಃಖೀಸೀತಾಂಚಮಾರ್ಗತೇ।**
**ಬದ್ಧಃಶಕ್ರಜಿತೇತ್ಯಾದಿ ಲೀಲೈಷಾಸುರಮೋಹಿನೀ ॥೮೨॥**

ಅರ್ಥ.—ಅಯಂ=ಇಂಥಹ, ಮುಗ್ಧಃ=ಮೋಹಯುಕ್ತನಾದವನು, ಆತ್ಮಾನಂ=ತನ್ನನ್ನು ತಾನು, ನವೇದ = ತಿಳಿಯಲಾರನು, ಅಯಂ=ಶ್ರೀರಾಮನು, ದುಃಖೀ = ದುಃಖ ಉಳ್ಳವನು, ಶೀತಾಂಚ ಸೀತಾದೇವಿಯನ್ನು, ಮಾರ್ಗತೆ=ಹುಡುಕುತ್ತಾನೆ, ಶಕ್ರಜಿತಾ=ಇಂದ್ರಜಿತ್ತಿನಿಂದ, ಬದ್ಧಃ=ಕಟ್ಟಿಸಿಕೊಳ್ಳಲ್ಪಟ್ಟನು. ಇತ್ಯಾದಿ=ಇವೇ ಮೊದಲಾದ, ಏಷಾ=ಇಂಥಾವುಗಳು, ಲೀಲಾ=(ಆಟವು) ಭಗವಂತನ ವ್ಯಾಪಾರವು, ಅಸುರ ಮೋಹಿನೀ=ಅಸುರರ ಮೋಹಕ್ಕಾಗಿ ಎಂದು ತಿಳಿಯಬೇಕು.

ತಾತ್ಪರ್ಯ.—ಶ್ರೀ ನಾರಾಯಣನು ಶ್ರೀರಾಮಾವತಾರ ಮಾಡಿದ ಕಾಲದಲ್ಲಿ ತಾನು ಮೋಹಯುಕ್ತನಾದಂತೆಯೂ, ಜ್ಞಾನವಿಲ್ಲದವನಂತೆಯೂ, ಬಲಹೀನನಂತೆಯೂ, ತೋರಿಸಿರುತ್ತಾನೆ. ಅದು ದೈತ್ಯ ಜನರ ಮೋಹಕ್ಕಾಗಿ. ಅದು ಯಾವಾಗ ಅಂದರೆ ಅರಣ್ಯ ಕಾಂಡದಲ್ಲಿ ಹೂವಿನಿಂದ ಯುಕ್ತವಾದ ಮುತ್ತುಕದ ವೃಕ್ಷವನ್ನ ನೋಡಿದ ಕಾಲದಲ್ಲಿ, ಶೀತೆಯು ತುರುಬಿನಲ್ಲಿ ಮುಡದಿದ್ದ ಹೂವಿನಂತೆ ಇದೆ ಎಂದು ಮೋಹಗೊಂಡವನಂತೆ ನಟಿಸಿದನು. ರಾವಣನಿಂದ ಅಪಹೃತಳಾದವಳು ಮಾಯಾ ಸೀತೆ ಎಂದು ತಿಳಿದಿದ್ದರೂ ತಿಳಿಯದೇ ಇದ್ದವನಂತೆ ಪ್ರಲಾಪಿಸಿದನು. ನಾಗಾಸ್ತ್ರದಿಂದ ಬಂಧಿತನಾದಂತೆ ತೋರ್ಪಡಿಸಿದನು.

ವಿಶೇಷಾರ್ಥ.—ಅಜ್ಞಾನ, ರೋಗ, ಭಯ, ದುಃಖ ಇವುಗಳು ಪ್ರಾಕೃತ. ಅಪ್ರಾಕೃತನಾದ ನಾರಾಯಣನಲ್ಲಿ ಇವುಗಳು ಕೂಡುವುದಿಲ್ಲ.

ಆದರೆ ಲೋಕದಲ್ಲಿ ಸ್ತ್ರೀವಿಯೋಗದಿಂದ ಕೂಡಿದ ಪುರುಷನು ಇಂಥಾ ದುರವಸ್ಥೆಗೆ ಬಾಧ್ಯನಾಗುತ್ತಾನೆಂದು ತೋರಿಸುವುದಕ್ಕಾಗಿ ಈರೀತಿ ಮಾಡಿದನು. ಸ್ವರಮಣನಾದ ಶ್ರೀಹರಿಗೆ ಯಾವಾಗಲೂ ನಿಜಪತ್ನಿಯಾದ ರಮಾ ದೇವಿಯ ವಿಯೋಗವಿಲ್ಲವೆಂತಲೂ ಮತ್ತು ಪೂರ್ಣನಾದದ್ದರಿಂದ ಮೋಹವಿಲ್ಲವೆಂತಲೂ ತಿಳಿಯಬೇಕು.

**ಅವತಾರಿಕೆ.**—ಹಿಂದಿನ ಶ್ಲೋಕದಲ್ಲಿ ನಿರೂಪಿಸಿದಂತೆ ಇನ್ನು ಕೆಲವು ಮೋಹಕ ಕಾರ್ಯಗಳನ್ನ ಪರಮಾತ್ಮನು ನಟಿಸಿದ್ದಾನೆಂದು ಹೇಳುತ್ತಾರೆ:—

**ಶ್ಲೋಕ॥ ಮುಹ್ಯತೇಶಸ್ತ್ರಪಾತೇನ ಭಿನ್ನತ್ವಗ್ರುಧಿರಸ್ರವಃ ॥ ಅಜಾನನ್**
**ಪೃಚ್ಛತಿಸ್ಮಾನ್ಯಾಂ ತನುಂತ್ಯಕ್ತ್ವಾದಿವಂಗತಃ ॥೮೩॥**

ಅರ್ಥ.—ಶಸ್ತ್ರಪಾತೇನ=ಬಾಣದ ಪೆಟ್ಟಿನಿಂದ, ಮುಹ್ಯತೇ = ಮೂರ್ಛೆಯನ್ನ ಹೊಂದುತ್ತಾನೆ, ಭಿನ್ನತ್ವಕ್ = ಮೇಲಿನ ಚರ್ಮವು ಭೇದಿಸಲ್ಪಟ್ಟಂತೆ ತೋರಿಸಿ ಇರುತ್ತಾನೆ, ರುಧಿರಸ್ರವಃ=ರಕ್ತ ಸುರಿಯುವಂತೆ ತೋರಿಸಿದ್ದಾನೆ, ಅನ್ಯಾನ್=ಇತರರನ್ನ, ಅಜಾನನ್=ತಾನು ಏನೂ ತಿಳಿಯದವನಂತೆ, ಪೃಚ್ಛತಿ=ಪ್ರಶ್ನೆ ಮಾಡುತ್ತಾನೆ. ತನುಂ=ಶರೀರವನ್ನು, ತ್ಯಕ್ತ್ವಾ= ಬಿಟ್ಟು, ದಿವಂ = ಲೋಕಾಂತರವನ್ನ ಕುರಿತು, ಗತಃ = ಹೋದವನಂತೆ ತೋರಿಸಿದ್ದಾನೆ, ಸ್ಮ=ಪ್ರಸಿದ್ಧವು.

ತಾತ್ಪರ್ಯ.—ಅಸ್ತ್ರ ಶಸ್ತ್ರಗಳಿಂದ ಘಾಯಪಟ್ಟವನಂತೆಯೂ, ಮೂರ್ಛೆಹೋದವನಂತೆಯೂ, ರಕ್ತ ಸ್ರವಿಸುವಂತೆಯೂ, ತನಗೆ ತಿಳಿಯದೆ ಮತ್ತೊಬ್ಬರನ್ನ ಕೇಳಿ ತಿಳಿದುಕೊಳ್ಳುವವನಂತೆಯೂ, ಶರೀರವನ್ನು ಬಿಟ್ಟು ಸ್ವರ್ಗ ಲೋಕಕ್ಕೆ ಹೋದಂತೆಯೂ ತೋರಿಸಿರುತ್ತಾನೆ.

ವಿಶೇಷಾರ್ಥ.—(ಪ್ರಮಾಣ) ಭವಿಷ್ಯೋತ್ತರ ಪುರಾಣದಲ್ಲಿ–ವಜ್ರಾದಷ್ಟಗುಣಂವಿದ್ಧಿ ಮತ್ಶರೀರಂಕಠೋರಕಂ" ಎಂದು ಶ್ರೀ ನಾರಾಯಣನು ಭೃಗು ಋಷಿಗಳಿಗೆ ಹೇಳಿರುತ್ತಾನೆ, ಹೀಗಿರುವ ವೇಳೆ ಇತರರ ಬಾಣಗಳಿಂದ ಶ್ರೀ ಹರಿಯ ದೇಹದಿಂದ ರಕ್ತ ಉಂಟಾದಂತೆ ಕಂಡು ಬರುವದು ಮೋಹಕವೆಂತಲೇ ತಿಳಿಯಬೇಕು. ತನಗೆ ತಿಳಿಯದೆ ಮತ್ತೊಬ್ಬರನ್ನ ಕೇಳಿ ತಿಳಿದುಕೊಂಡನೆಂಬುವುದು ಜಗತ್ತನ್ನ ಸೃಷ್ಟಿಸಿದ ಪರಬ್ರಹ್ಮನು

ಅಶೇಷ ಚೇತನರ ಕರ್ಮ ಮತ್ತು ಸಾಧನ ಈ ವಿಷಯಗಳನ್ನ ತಿಳಿದು ದೇಹಾದಿ ಗಳನ್ನ ಕೊಟ್ಟು ಅವರವರ ಗತಿಗಳನ್ನ ಕೊಡುವವನಾಗಿರಲಿಕ್ಕೆ ಎರಡನೆಯವರನ್ನು ಕೇಳುವದು ಮೋಹಕವೆಂದು ತಿಳಿಯಬೇಕು. ಮೂಲ ರೂಪದಲ್ಲಿ ಈ ರೀತಿ ಇರಬಹುದು, ಅವತಾರ ರೂಪದಲ್ಲಿ ಯಾಕೆ ಇರಬಾರದೆಂದು ಶಂಕಿಸಬಹುದು. ಶ್ರೀ ಹರಿಯ ಮೂಲ ರೂಪಕ್ಕೂ ಮತ್ತು ಅವತಾರ ರೂಪಗಳಿಗೂ ಭೇದವಿಲ್ಲ, ಸರ್ವ ರೂಪಗಳೂ ಪೂರ್ಣವೆಂದು ತಿಳಿಯಬೇಕು.

**ಅವತಾರಿಕೆ.**—ಹಿಂದಿನ ಶ್ಲೋಕದಲ್ಲಿ ಸೂಚಿಸಿದ ಶ್ರೀಹರಿಯ ವ್ಯಾಪಾರಗಳನ್ನ ಅಸುರರ ಮೋಹಕ್ಕಾಗಿ ಎಂದು ತಿಳಿಯಬೇಕೆಂದು ಹೇಳುತ್ತಾರೆ:-

**ಶ್ಲೋಕ||** **ಇತ್ಯಾದ್ಯಸುರಮೋಹಾಯ ದರ್ಶಯಾಮಾಸನಾಟ್ಯವತ್ ||**
**ಅವಿದ್ಯಮಾನಮೇವೇಶಃ ಕುಹಕಂತದ್ವಿದುಃಸುರಾಃ ||೮೪||**

ಅರ್ಥ.—ಇತ್ಯಾದಿ=ಹಿಂದಿನ ಶ್ಲೋಕದಲ್ಲಿ ಸೂಚಿಸಿದ ಪರಮಾತ್ಮನ ಕರ್ಮಗಳನ್ನ. ಈಶಃ=ಸ್ವಾಮಿಯಾದ ನಾರಾಯಣನು, ಅಸುರಮೋಹಾಯ=ದೈತ್ಯರ ಮೋಹಕ್ಕೋಸ್ಕರ, ಅವಿದ್ಯಮಾನಮೇವ=ಇಲ್ಲದೇ ಇರುವದನ್ನೇ, ನಾಟ್ಯವತ್=ನಟನೆ ಮಾಡುವವನೋಪಾದಿಯಲ್ಲಿ. ದರ್ಶಯಾಮಾಸ=ತೋರಿಸುತ್ತಾನೆ. ಸುರಾಃ=ದೇವತೆಗಳು, ತತ್=(ಅದನ್ನು) ಪರಮಾತ್ಮನಿಂದ ನಡಿಸಲ್ಪಟ್ಟ ವ್ಯಾಪಾರವನ್ನ, ಕುಹಕಂ=ಕಪಟವೆಂದು, ವಿದುಃ = ತಿಳಿಯುತ್ತಾರೆ.

ತಾತ್ಪರ್ಯ.—ಮನುಷ್ಯನು ತನ್ನಲ್ಲಿ ಇಲ್ಲದೇ ಇರುವ ಧರ್ಮವನ್ನು ಇದ್ದಂತೆ ಹೇಗೆ ತೋರಿಸುತ್ತಾನೋ ಹಾಗೆ ಶ್ರೀಹರಿಯೂ ಸಹ ತನ್ನಲ್ಲಿ ಇಲ್ಲವ ಪ್ರಾಕೃತ ಧರ್ಮಗಳನ್ನ ಇದ್ದಂತೆ ತೋರಿಸುತ್ತಾನೆ. ದೇವತೆಗಳು ಈ ವ್ಯಾಪಾರವನ್ನ ಕಾಪಟ್ಯವೆಂದು ತಿಳಿಯುತ್ತಾರೆ.

ವಿಶೇಷಾರ್ಥ.—ಮಹಿಮಾಪೂರ್ವಕವಾದ ದಾರ್ಢ್ಯವುಳ್ಳ ದೇವತೆಗಳು ಪರಮಾತ್ಮನ ವ್ಯಾಪಾರವನ್ನು ಎಂದಿಗೂ ಅನ್ಯಥಾ ತಿಳಿಯುವುದಿಲ್ಲ. ಅಂದರೆ, ಬ್ರಹ್ಮ ರುದ್ರಾದಿಗಳಿಗೆ ಪದ ಕೊಟ್ಟು ಉದ್ಧರಿಸುವ ಶಕ್ತಿ ಉಳ್ಳರವಾ ಪತಿಯಾದ ದೇವರಲ್ಲಿ ಪ್ರಾಕೃತ ದೋಷಗಳಿಲ್ಲ. ಇಲ್ಲದಿದ್ದರೂ ಇದ್ದಂತೆ ತೋರಿಸುವದು ದೈತ್ಯರ ಮೋಹಕ್ಕಾಗಿಯೇ ಹೊರ್ತು ಬೇರೆ ಅಲ್ಲ.

**ಅವತಾರಿಕೆ**—ಪರಮಾತ್ಮನ ರೂಪಗಳು ಪ್ರಾಕೃತವೇ ಅಥವಾ ಅಪ್ರಾಕೃತವೇ ಎಂದು ಶಂಕಿಸಿ ಅದಕ್ಕೆ ಸಮಾಧಾನ ಹೇಳುತ್ತಾರೆ :—

**ಶ್ಲೋಕ|| ಪ್ರಾದುರ್ಭಾವಾಹರೇಃ ಸರ್ವೇ ನೈವಪ್ರಾಕೃತದೇಹಿನಃ ||**
**ನಿರ್ದೋಷಗುಣಸಂಪೂರ್ಣಾ ದರ್ಶಯಂತ್ಯನ್ಯಥೈವತು ||೮೫||**

ಅರ್ಥ.—ಹರೇಃ=ಶ್ರೀ ಪರಮಾತ್ಮನ, ಸರ್ವೇ=ಸಮಸ್ತವಾದ, ಪ್ರಾದುರ್ಭಾವಾಃ=ಅವತಾರ ರೂಪಗಳು, ಪ್ರಾಕೃತದೇಹಿನಃ=ಪ್ರಕೃತಿ ಸಂಬಂಧವುಳ್ಳ ದೇಹಗಳು, ನೈವ=ಅಲ್ಲ, ಕಿಂತು=ಮತ್ತೇನೆಂದರೆ? ನಿರ್ದೋಷ ಗುಣ ಸಂಪೂರ್ಣಾ=ದೋಷರಹಿತವಾದವುಗಳಾಗಿಯೂ, ಜ್ಞಾನಾನಂದಾದಿ ಗುಣಗಳಿಂದ ಪೂರ್ಣಗಳಾಗಿಯೂ, ಇರುತ್ತವೆ. ಹೀಗಿದ್ದರೂನೂ ಅನ್ಯದೈವತು = ಪ್ರಾಕೃತ ದೇಹಗಳಂತೆಯೂ, ದೋಷಯುಕ್ತವಾದವುಗಳಂತೆಯೂ, ದರ್ಶಯಂತಿ=ತೋರುತ್ತವೆ.

ತಾತ್ಪರ್ಯ.—ಶ್ರೀಹರಿಯ ಅವತಾರ ರೂಪಗಳೂ ಯಾವಾಗಲೂ ದೇಶ, ಕಾಲ, ಮತ್ತು ಗುಣಗಳಿಂದ ಪೂರ್ಣಗಳೇ ಹೊರ್ತು ಬೇರೆ ಅಲ್ಲ. ಪ್ರಕೃತಿ ಸಮ್ಮಂಧವಾದ ದೇಹಗಳಲ್ಲ. ಆದರೂ ಶ್ರೀಹರಿಯು ಅವತಾರಗಳಲ್ಲಿ ದೋಷಿಯಂತೆಯೂ ಪರಾಧೀನನಂತೆಯೂ ತೋರಿಸಿರುತ್ತಾನೆ.

ವಿಶೇಷಾರ್ಥ.—"ನೈಷಾಂಭೇದಃ ಕಥಂಚನ" ಎಂಬುವ ಪ್ರಮಾಣಾನುಸಾರ ಉಪಾಸನೆ ಮಾಡುವ ಅಧಿಕಾರಿಗಳು ದೇವರನ್ನ ದೋಷದೂರ ಗುಣಪೂರ್ಣ ಸರ್ವತ್ರ ವ್ಯಾಪ್ತನೆಂದೂ ಆನಂದಪೂರ್ಣನೆಂಬ ಚತುರ್ಗುಣ ಉಪಾಸನೆ ಅವಶ್ಯಕವಾಗಿ ಮಾಡಬೇಕು. ಈ ನಿಯಮಕ್ಕೆ ಪ್ರತಿಬಂಧಕ ಬಂದೀತೆಂಬ ಭಯದಿಂದ ಗುಣಪೂರ್ಣತ್ವವನ್ನ ತಿಳಿಸಿರುತ್ತಾರೆ.

**ಅವತಾರಿಕೆ**—ಗುಣಪೂರ್ಣನಾದ ಶ್ರೀ ನಾರಾಯಣನು ದೋಷದೂರನಾದರೂ ತಾನು ದೋಷ ಉಳ್ಳವನಂತೆ ತೋರಿಸಿಕೊಳ್ಳಲು ಕಾರಣವೇನೆಂದರೆ, ಅದನ್ನ ತಿಳಿಸುತ್ತಾರೆ :—

**ಶ್ಲೋಕ|| ದುಷ್ಟಾನಾಂವಮೋಹನಾರ್ಥಾಯ ಸತಾಮಪಿಚಕುತ್ರಚಿತ್ ||**
**ಯಥಾಯೋಗ್ಯಫಲಪ್ರಾಪ್ತ್ಯೈ ಲೀಲೈಷಾಪರಮಾತ್ಮನಃ ||೮೬**

ಅರ್ಥ.—ಪರಮಾತ್ಮನಃ=ಶ್ರೀ ನಾರಾಯಣನ, ಏಷಾಂ = ಇಂಥಾ,

ಲೀಲಾಃ=ಪ್ರಾಕೃತದೇಹಿ ಎಂತೆಯೂ, ದೋಷಯುಕ್ತನಂತೆಯೂ ತೋರಿಸಿ ಕೊಳ್ಳುವ ಆಟಗಳ್ಳ, ದುಷ್ಟಾನಾಂ=ದುರ್ಜನರುಗಳಿಗೆ, ಮೋಹನಾರ್ಥಾಯ= ಮಿಥ್ಯಾಜ್ಞಾನ ಉಂಟಾಗುವುದಕ್ಕೂ, ಕುತ್ರಚಿತ್=ಕೆಲವು ಸಂದರ್ಭಗಳಲ್ಲಿ, ಸತಾಮಪಿ=ಸಜ್ಜನರುಗಳಿಗೂ ಕೂಡ, ಯಥಾಯೋಗ್ಯ ಫಲಪ್ರಾಪ್ತ್ಯೈ= ತಮ್ಮ ಯೋಗ್ಯತೆಗೆ ಮೀರಿದ ಪುಣ್ಯವನ್ನ ಕಳೆದು ಯೋಗ್ಯತಾನುಸಾರವಾದ ಫಲ ಪ್ರಾಪ್ತಿಯಾಗುವುದಕ್ಕೂ ಪ್ರಕಟ ಪಡುತ್ತವೆ.

ತಾತ್ಪರ್ಯ.--ಅವತಾರ ರೂಪಗಳಲ್ಲಿ ದೇವರು ತೋರಿಸುವ ಮೋಹ ಮತ್ತು ಅಜ್ಞಾನ ಕಾರ್ಯಗಳು ದುರ್ಜನರ ಅಜ್ಞಾನಾಭಿವೃದ್ಧಿಗೂ ಮತ್ತು ಸಜ್ಜನರ ಅಧಿಕ ಪುಣ್ಯ ಕಳಿಯುವುದಕ್ಕಾಗಿಯೂ ಎಂದು ತಿಳಿಯಬೇಕು.

ವಿಶೇಷಾರ್ಥ.--ತ್ರಿವಿಧಚೇತನರ ಸಾಧನವು-ಭಕ್ತಿ, ದ್ವೇಷ,ಉದಾ ಸೀನ ಎಂದು ಮೂರು ಪ್ರಕಾರ. ಶ್ರೀ ಹರಿಯ ವ್ಯಾಪಾರವು ತ್ರಿವಿಧ ಸಾಧ ನೆಗೂ ಅನುಗುಣವಾಗಿರುವುದೆಂದು ತಿಳಿಯಬೇಕು. ಹೇಗೆಂದರೆ, ಶ್ರೀವತ್ಸ ಲಾಂಛನನಾದ ಶ್ರೀ ನಾರಾಯಣನಿಗೆ ರಮಾ ರೂಪದ ವಿಯೋಗವಿಲ್ಲದಿದ್ದ ರೂ ರಾಮಾವತಾರದಲ್ಲಿ ಸೀತಾ ವಿಯೋಗವನ್ನ ತೋರಿಸಿದ್ದಾನೆ. ನಿತ್ಯಾವಿ ಯೋಗಿತ್ವೇನ ಉಪಾಸಿಸುವವರಿಗೆ ಭಕ್ತಿ ಅಭಿವೃದ್ಧಿಯೂ ಶ್ರೀರಾಮನನ್ನ ಮನುಷ್ಯನಂತೆ ತಿಳಿವವರಿಗೆ ಮಿಥ್ಯಾಜ್ಞಾನವೂ ಉದಾಸೀನರಿಗೆ ಸಂಸಾರ ಸಾಧನ ರೂಪ ಮಿಶ್ರ ಫಲವೂ ಉಂಟಾಗುವುದು.

**ಅವತಾರಿಕೆ.**--ಇದುವರಿವಿಗೂ ತಿಳಿಸಿದ ಪ್ರಮಾಣಗಳಿಂದ ನಿರ್ಧಾರ ವಾಗಿ ತಿಳಿದುಕೊಳ್ಳಬೇಕಾದ ಜ್ಞಾನ ಭಾಗವು ಯಾವುದಂದರೆ, "ಹರಿ ಸರ್ವೋತ್ತಮನು" ಎಂಬುವದು. ಅದು ಭಾರತದಲ್ಲಿ ಯಾವ ಪ್ರಕರಣ ದಲ್ಲಿ ಹೇಳಲ್ಪಟ್ಟಿದೆ ಎಂದರೆ ಸರ್ವಸಾರಭೂತವಾದ ಗೀತಾದಲ್ಲಿ. ಭಗವಂ ತನು ಸರ್ವೋತ್ತಮನು ಎಂಬುವ ವಿಷಯದಲ್ಲಿ "ಜ್ಞಾನಂತೇಹಂಸವಿಜ್ಞಾ ನಂ" ಎಂಬ ವಾಕ್ಯಗಳನ್ನ ಉದಾಹರಿಸುತ್ತಾರೆ:--

**ಶ್ಲೋ॥ ಜ್ಞಾನಂತೇಹಂಸವಿಜ್ಞಾನಂ ಇದಂವಕ್ಷ್ಯಾಮ್ಯಶೇಷತಃ ॥**
**ಯಜ್ಞಾತ್ವಾನೇಹಭೂಯೋನ್ಯಜ್ಞಾತವ್ಯಮವಶಿಷ್ಯತೇ॥೮೭॥**

ಅರ್ಥ.--ಹೇ! ಅರ್ಜುನನೆ! ಅಹಂ=ನಾನು, ತೇ=ನಿನಗೆ, ಇದಂ= ಪ್ರಾಕೃತ ಅಪ್ರಾಕೃತ ಸಮ್ಮಂಧವಾದ, ಸವಿಜ್ಞಾನಂ=ಅಪರೋಕ್ಷಕ್ಕೆ ಸಾಧ

ನವಾದ, ಜ್ಞಾನಂ=ಜ್ಞಾನವನ್ನು, ಅಶೇಷತಃ=ತಿಳಿಯಬೇಕಾದ ಸರ್ವಾರ್ಥ ಗಳನ್ನು, ವಕ್ಷ್ಯಾಮಿ=ತಿಳಿಸುತ್ತೇನೆ. ಯತ್=ಈಗ ನನ್ನಿಂದ ಹೇಳಲ್ಪಡುವ, ಜ್ಞಾನವನ್ನು, ಜ್ಞಾತ್ವಾ=ತಿಳಿದ ನಂತರ, ಇಹ=ಇಲ್ಲಿ, ಭೂಯಃ=ತಿರುಗಿ, ಅನ್ಯತ್=ಮತ್ತು ಬೇರೆ, ಜ್ಞಾತವ್ಯಂ=ತಿಳಿಯಬೇಕಾದದ್ದು, ನಾವಶಿಷ್ಯತೇ= ಉಳಿಯುವುದಿಲ್ಲ, ಅಥವಾ ಉಳಿದಿರುವುದಿಲ್ಲ.

**ತಾತ್ಪರ್ಯ.**—ಹೇ ಅರ್ಜುನನೇ ನಾನು ನಿನಗೆ ಅಪರೋಕ್ಷಕ್ಕೆ ಬೇಕಾದ ಜ್ಞಾನ ಭಾಗವನ್ನ ತಿಳಿಸುತ್ತೇನೆ. ಇದನ್ನು ತಿಳಿದ ನಂತರ ನೀನು ತಿಳಿಯ ಬೇಕಾದ ಬೇರೆ ಯಾವ ಪ್ರಮೇಯವೂ ಇರುವುದಿಲ್ಲ. ನಿನಗೆ ಎಷ್ಟು ಭಾಗ ತಿಳುವಳಿಕೆಗೆ ಬೇಕೋ ಅಷ್ಟೂ ಪೂರ್ತಿಯಾಗಿ ತಿಳಿಸುತ್ತೇನೆಂದು ಹೇಳು ತ್ತಾನೆ.

ವಿಶೇಷಾರ್ಥ.—ಚೇತನರಿಗೆ ಮುಖ್ಯವಾಗಿ ಬೇಕಾದದ್ದು ಬ್ರಹ್ಮಾಪ ರೋಕ್ಷ. ಅದಕ್ಕೆ ಜ್ಞಾನ ಸಮ್ಬಂಧವಾದ ಸಾಧನವು ಅತ್ಯಾವಶ್ಯಕ. ಇದನ್ನ ಪರಮಾತ್ಮನು ತಾನೇ ಅರ್ಜುನನಿಗೆ ಅವನ ಯೋಗ್ಯತಾನುಸಾರ ತಿಳಿಸು ತ್ತೇನೆಂದು ಹೇಳಿದ್ದರಿಂದ ಜ್ಞಾನ ದಾತೃತ್ವವು ಈಶ ನಿಷ್ಠವೆಂದು ತಿಳಿಯ ಬೇಕು.

**ಅವತಾರಿಕೆ.**—ಹಿಂದಿನ ಶ್ಲೋಕದಲ್ಲಿ ಉಪದೇಶ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿದ ಆ ವಿಜ್ಞಾನ ಭಾಗವನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ.

**ಶ್ಲೋಕ॥ ಅಹಂಕೃತ್ಸ್ನಸ್ಯಜಗತಃ ಪ್ರಭವಃಪ್ರಲಯಸ್ತಥಾ ॥ ಮತ್ತಃಪರ ತರಂನಾನ್ಯತ್ಕಿಂಚದಸ್ತಿಧನಂಜಯ ॥೬೬॥**

ಅರ್ಥ.—ಹೇ! ಧನಂಜಯ=ಎಲೋ ಅರ್ಜುನನೆ, ಅಹಂ=ನಾನು ಕೃತ್ಸ್ನಸ್ಯ=ಸಮಸ್ತವಾದ, ಜಗತಃ=ಪ್ರಪಂಚಕ್ಕೂ, ಪ್ರಭವಃ=ಸೃಷ್ಟಿಕರ್ತ ತಥಾ=ಹಾಗೆ, ಪ್ರಳಯಃ=ಸಂಹಾರಕರ್ತನು, ಮತ್ತಃ = ನನಗಿಂತಲೂ, ಪರತರಃ=ಉತ್ತಮ ವಸ್ತುವು, ಕಿಂಚಿತ್=ಯಾವದೂ, ಅನ್ಯಃ = ಬೇರೆ, ನಾಸ್ತಿ=ಇಲ್ಲ.

ತಾತ್ಪರ್ಯ.—ಅರ್ಜುನನನ್ನ ಕುರಿತು ಶ್ರೀಕೃಷ್ಣನು ಗೀತೆಯಲ್ಲಿ ಉಪ ದೇಶ ಮಾಡಿದುದನ್ನ ದೃಷ್ಟಾಂತತ್ವೇನ ತಾತ್ಪರ್ಯಾಚಾರ್ಯರು ಇಲ್ಲಿ ತಿಳಿಸು

ಕರ್ತಾರೆ, ಏನೆಂದರೆ, ಲೋಕವನ್ನು ಸೃಷ್ಟಿಸುವವನು, ಸಂಹರಿಸುವವನು ನಾನು ಬಿಟ್ಟು ಬೇರೆ ಯಾರೂ ಇಲ್ಲ. ನನ್ನನ್ನು ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಇವೇ ಮೊದಲಾದವುಗಳಿಗೆ ಕರ್ತನೆಂದು ತಿಳಿ. ಈ ರೀತಿ ತಿಳಿದವನಿಗೆ ಇನ್ನು ತಿಳಿಯಬೇಕಾದ ಉತ್ತಮ ವಿಷಯವೇ ಇಲ್ಲ. ಉತ್ತಮ ವಸ್ತುವೇ ಇಲ್ಲದಿರುವಾಗ ಅತ್ಯುತ್ತಮ ವಸ್ತುವು ಎಲ್ಲಿಂದ ಬಂತು ? ಇದೇ ವಿಜ್ಞಾನವು

ವಿಶೇಷಾರ್ಥ.—ಶ್ರೀನಾರಾಯಣನನ್ನ ತಿಳಿಯಬೇಕಾದರೆ ಜಗಜ್ಜನ್ಮಾದಿ ಕಾರಣ ಲಕ್ಷಣತ್ವೇನ ತಿಳಿಯಬೇಕು. ಇದಕ್ಕಾಗಿ ಸೂತ್ರಕಾರರು ಬ್ರಹ್ಮ ಜಿಜ್ಞಾಸ ಮಾಡಬೇಕೆಂದು ಹೇಳಿ ಉತ್ತರ ಸೂತ್ರದಲ್ಲಿ ಪರಮಾತ್ಮನು ಜಗಜ್ಜನ್ಮಾದಿ ಕಾರಣನೆಂಬ ಲಕ್ಷಣವನ್ನು ತಿಳಿಸಿದ್ದಾರೆ. ಅದನ್ನ ಅರ್ಜುನನಿಗೆ ಶ್ರೀಕೃಷ್ಣನು ಉಪದೇಶ ಮಾಡಿದಾಗ ಪರಬ್ರಹ್ಮ ಸ್ವರೂಪಿಯಾದ ತನ್ನ ಹೊರತು ಇನ್ನೊಂದು ವಸ್ತುವನ್ನು ಶ್ರೇಷ್ಠತ್ವೇನ ತಿಳಿಯಬೇಕಾದುದಿಲ್ಲ. ಕೃಷ್ಣರೂಪವೇ ಜಗತ್ಸೃಷ್ಟ್ಯಾದಿ ವ್ಯಾಪಾರವನ್ನು ಮಾಡುತ್ತದೆ ಎಂತಲೂ ಮೂಲರೂಪಕ್ಕೂ ಅವತಾರ ರೂಪಕ್ಕೂ ವ್ಯತ್ಯಾಸವಿಲ್ಲವೆಂತಲೂ ತಿಳಿಯಬೇಕು. ಮತ್ತು ಮೋಕ್ಷಾಧಿಕಾರಿಗಳಿಗೆ ಸೃಷ್ಟಿಕರ್ತೃತ್ವೇನ ಪರಬ್ರಹ್ಮನ ಜ್ಞಾನವೂ, ಜಗತ್ತಿಗೆ ಅಸ್ವತಂತ್ರ ಜ್ಞಾನವೂ ಅತ್ಯಾವಶ್ಯಕವೆಂತಲೂ ಹೇಳಿರುವನು. ಈ ರೀತಿಯಾದ ಪರಾಪರ ತತ್ವ ಜ್ಞಾನವೇ ಭಕ್ತಿಗೆ ಸಾಧಕವಾಗಿ ತದ್ದ್ವಾರ ಮೋಕ್ಷ ಸಾಧ್ಯವೆಂದು ತಿಳಿಯಬೇಕು.

ಅವತಾರಿಕೆ.—ಅರ್ಜುನನಿಗೆ ಶ್ರೀಕೃಷ್ಣನು ತಾನೇ ಜಗತ್ಸೃಷ್ಟಿಕರ್ತನೆಂದು ಹೇಳಿದನಂತರ ಅರ್ಜುನನು ಶ್ರೀಕೃಷ್ಣನನ್ನು ಕುರಿತು ಸ್ವಾಮಿಾ ನೀನು ಜಗತ್ಸೃಷ್ಟಿಕರ್ತನಾದರೆ ನಿನ್ನನ್ನು ಕೆಲವರು ಏಕೆ ಅನ್ಯಥಾ ತಿಳಿದು ಅನಾದರಮಾಡುತ್ತಾರೆ ? ಹಾಗೆ ಅನಾದರ ಮಾಡಿದವರಿಗೆ ಏನು ಗತಿ ಇದನ್ನು ಹೇಳೆಂದು ಕೇಳಿದ್ದಕ್ಕೆ ಅನಾದರ ಮಾಡಿದವರಿಗಾಗುವ ಗತಿಯನ್ನು ಹೇಳುತ್ತಾನೆ

**ಶ್ಲೋಕ || ಅವಜಾನಂತಿಮಾಂ ಮೂಢಾಃ ಮಾನುಷೀಂತನುಮಾಶ್ರಿತಂ |**
**ಪರಂಭಾವಮಜಾನಂತೋ ಮಮಭೂತಮಹೇಶ್ವರಂ || ಮೋಘಾಶಾಮೋಘಕರ್ಮಾಣೋ ಮೋಘಜ್ಞಾನಾವಿಚೇತಸಃ | ರಾಕ್ಷಸೀಮಾಸುರೀಂಚೈವ ಪ್ರಕೃತಿಂಮೋಹಿನೀಂಶ್ರಿತಾ ||೬೧||**

ಅರ್ಥ.— ಮೂಢಾಃ=ಅಜ್ಞಾನಿಗಳು, ಮಾನುಷೀಂತನುಂ=ಮನುಷ್ಯ ಶರೀರವನ್ನು, ಆಶ್ರಿತಂ-ಹೊಂದಿರತಕ್ಕ, ಮಾಂ=ನನ್ನನ್ನು, ಅವಜಾನಂತಿ =ಅನಾದರ ಮಾಡುತ್ತಾರೆ, ಮೋಘಾಶಾ-ಮೋಹಕರವಾದ, ಮೋಘಕರ್ಮಾಣಃ-ರಾಕ್ಷಸ ಕರ್ಮ ಉಳ್ಳವರಾಗಿಯೂ, ದೋಘಜ್ಞಾನಾಃ=ವ್ಯರ್ಥವಾದ ಜ್ಞಾನ ಅಂದರೆ ಬ್ರಹ್ಮ ರುದ್ರಾದಿ ಭಕ್ತಿ ಜ್ಞಾನ ಉಳ್ಳವರಾಗಿಯೂ, ವಿಚೇತಸಃ=ವಿರುದ್ಧ ಮನಸ್ಕರಾಗಿ, ಮೋಹಿನೀಂ=ಮೋಹಜನಕವಾದ, ರಾಕ್ಷಸೀಂ=ರಾಕ್ಷಸ ಸಬಂಧವಾದ, ಮತ್ತು ಆಸುರೀಂ=ಅಸುರ ಸಂಬಂಧವಾದ, ಪ್ರಕೃತೀ=ಸ್ವಭಾವವನ್ನು, ಶ್ರಿತಾಃ=ಹೊಂದಿದವರಾಗಿ, ಮಮ-ನನ್ನ, ಭೂತಮಹೇಶ್ವರಂ-ಸರ್ವ ಭೂತಗಳ ಸ್ವಾಮಿತ್ವರೂಪವಾದ, ಪರಂಭಾವಂ= ಶ್ರೇಷ್ಠವಾದ ಮಹಿಮೆಯನ್ನು, ಅಜಾನಂತಃ=ತಿಳಿಯದೇ ಇರುತ್ತಾರೆ.

ತಾತ್ಪರ್ಯ.— ಶ್ರೀಹರಿಯಲ್ಲಿ ಅನಾದರ ಮತ್ತು ದ್ವೇಷವನ್ನು ಮಾಡತಕ್ಕವರು ರಾಕ್ಷಸ ಅಥವಾ ದೈತ್ಯ ಸ್ವಭಾವ ಉಳ್ಳವರೇ ಹೊರ್ತು ಬೇರೆಯಲ್ಲ ಅಂತಹವರು ನನ್ನ ಜಗತ್ಸೃಷ್ಟಿ ಕರ್ತೃತ್ವರೂಪವಾದ ಮಹಿಮೆಯನ್ನು ಯಾವಾಗಲೂ ತಿಳಿದವರಲ್ಲ. ಅವರು ಮಾಡುವ ಮನೋರಥಗಳೆಲ್ಲವೂ ವ್ಯರ್ಥವಾದವುಗಳು. ಅವರು ಸಂಪಾದಿಸುವ ಜ್ಞಾನವೂಕೂಡ ಮಿಥ್ಯಾ ಜ್ಞಾನವೇ ಹೊರ್ತು ಬೇರೆ ಅಲ್ಲ.

ವಿಶೇಷಾರ್ಥ.— ವಿಷ್ಣು ವೈಷ್ಣವ ದ್ವೇಷವು ತಮಸ್ಸಾಧನೆಯು, ಈ ವಿಧವಾದ ಸಾಧನೆಮಾಡುವವರು ಯಾವಾಗಲೂ ಭಕ್ತಿ ಮಾಡತಕ್ಕವರಲ್ಲ. ಒಂದು ವೇಳೆ ಇವರು ಭಕ್ತರ ಸಂಬಂಧದಿಂದ ಸತ್ಕರ್ಮಗಳನ್ನು ಮಾಡಿದರೂ ಅವು ರಾಜಸ, ತಾಮಸ ಫಲವನ್ನೇ ಕೊಡುತ್ತವೆ. ಆದುದರಿಂದ ಈ ಎರಡು ವಿಧವಾದ ಚೇತನರು ಪರಮಾತ್ಮನ ಮಹಿಮೆಯನ್ನು ಎಂದಿಗೂ ತಿಳಿದವರಲ್ಲ. ಭಗವದ್ದ್ವೇಷ ಉಳ್ಳವರು ಆಚರಿಸುವ ಪಾರತ್ರಿಕ ಸಾಧನೆಗಳೆಲ್ಲವೂ ನಿಷ್ಫಲವೇ ಹೊರ್ತು ಸಾರ್ಥಕವಲ್ಲ. "ಮೋಘಕರ್ಮಾಣಃ" ಎಂಬುವ ಸ್ಥಳದಲ್ಲಿ ಯುದ್ಧಾದಿ ಕರ್ಮಗಳನ್ನು ಮಾಡಿ ಜಯಶೀಲರಾದರೂ ಅನಂತರ ಅನುಷ್ಠಾನ ಮಾಡುವ ಯಜ್ಞಾದಿ ಕರ್ಮಗಳೂಸಹ ಸಾರ್ಥಕವಲ್ಲ. "ಮೋಘಜ್ಞಾನಾಃ" ಈ ವಿಷಯದಲ್ಲಿ ಹರಿ ಸರ್ವೋತ್ತಮತ್ವ ಜ್ಞಾನವಿಲ್ಲದೆ ಬ್ರಹ್ಮರುದ್ರಾದಿ ದೇವತೆಗಳಲ್ಲಿ ಉತ್ತಮತ್ವ ಬುದ್ಧಿಯಿಂದ ವರಾದಿಗಳನ್ನು ಪಡೆದರೂ ಅವರು ಕೊಡುವ ವರವೂ ನಶ್ವರವೇ ಹೊರ್ತು ಬೇರೆ ಅಲ್ಲ.

ಅವತಾರಿಕೆ. — ಹಿಂದಿನ ಶ್ಲೋಕದಲ್ಲಿ ರಾಕ್ಷಸರೂ ಮತ್ತು ದೈತ್ಯರೂ ಪರಮಾತ್ಮನಲ್ಲಿ ದ್ವೇಷಮಾಡುತ್ತಾರೆಂದು ಹೇಳಿದ್ದರಿಂದ ಪರಮಾತ್ಮನಲ್ಲಿ ದೋಷವಿರುವದರಿಂದಲೇ ಅವರು ದ್ವೇಷಿಸುತ್ತಾರೆಂದು ಏಕೆ ಹೇಳಬಾರದು ಅಂದರೆ ಹೇಳುತ್ತಾಗೆ, ದೋಷವಿದ್ದರೆ ಸರ್ವರೂ ದ್ವೇಷ ಮಾಡುತ್ತಿದ್ದರು. ಹಾಗೆ ದೋಷಿ ಅಲ್ಲದ್ದರಿಂದಲೇ ಸಾತ್ವಿಕರು ಭಜಿಸುತ್ತಾರೆಂದು ಹೇಳುತ್ತಾರೆ

**ಶ್ಲೋಕ ॥ ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ॥**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ ॥೧೩॥**

ಅರ್ಥ. — ಹೇ ಪಾರ್ಥ=ಎಲೈ ಅರ್ಜುನನೇ, ಅನನ್ಯಮನಸಃ=ಅನ್ಯ ಮನಸ್ಕರಲ್ಲದೆ ಇರುವ, ದೈವೀಂ=ದೇವತಾ ಸಂಬಂಧವಾದ, ಪ್ರಕೃತಿಂ= ಸ್ವಭಾವವನು, ಆಶ್ರಿತಾಃ=ಹೊಂದದ, ಮಹಾತ್ಮಾನಸ್ತು=ದೊಡ್ಡವರು, ಮಾಂ-ನನ್ನನ್ನು, ಭೂತಾದಿಂ=ಸರ್ವ ಜಗತ್ ಸೃಷ್ಟಿಕರ್ತನನ್ನಾಗಿಯೂ, ಅವ್ಯಯಂ=ನಾಶರಹಿತನನ್ನಾಗಿಯೂ, ಜ್ಞಾತ್ವಾ=ತಿಳಿದು, ಭಜಂತಿ-ಸೇವಿಸುತ್ತಾರೆ.

ತಾತ್ಪರ್ಯ.-ಇತರ ಚೇತನರಲ್ಲಿರುವ ಅಸ್ವತಂತ್ರವನ್ನೂ ಶ್ರೀಹರಿಯ ಸ್ವತಂತ್ರವನ್ನೂ ತಿಳಿದು, ಇತರರನ್ನು ಭಜಿಸದೆ, ಶ್ರೀಹರಿಯನ್ನೇ ಭಜನೆ ಮಾಡುವವರು ಸಾತ್ವಿಕ ಚೇತನರು. ಸುಮ್ಮನೆ ಭಜನೆ ಮಾತ್ರವಲ್ಲ, ಸರ್ವ ಶ್ರೇಷ್ಠತ್ವೇನ ತಿಳಿದು ಭಜಿಸುತ್ತಾರೆ.

ವಿಶೇಷಾರ್ಥ.-" ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃಪುನಃ ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ' ಎಂಬುವ ಪ್ರಮಾಣಾನುಸಾರ ನಿಶ್ಚಿತ ತತ್ವರಾದವರಿಂದ ಧ್ಯಾನ ಅರ್ಹನೇ ಹೊರ್ತು ಬೇರೆಯಲ್ಲ- ಮತ್ತು ಚೇತನ ಸ್ವಭಾವವೇ ಸರ್ವಕ್ಕೂ ಕಾರಣನೆಂದು ಹೇಳುತ್ತಾರೆ

ಅವತಾರಿಕೆ.-ಪರಮಾತ್ಮನು ಸರ್ವೋತ್ತಮನು ಎಂಬುವ ವಿಚಾರದಲ್ಲಿ ಮತ್ತೊಂದು ಪ್ರಮಾಣವನ್ನು ಹೇಳುತ್ತಾರೆ.

**ಶ್ಲೋಕ ॥ ಪಿತಾಸಿಲೋಕಸ್ಯ ಚರಾಚರಸ್ಯತ್ವಮಸ್ಯ ಪೂಜಶ್ಯಗುರುರ್ಗರೀಯಾನ್ ನತ್ವತ್ಸಮೋಸ್ತ್ಯಭ್ಯಧಿಕಃ ಕುತೋನ್ಯೋ ಲೋಕತ್ರಯೋಪ್ಯಪ್ರತಿಮಪ್ರಭಾವ ॥೪೩॥**

ಅರ್ಥ.— ಹೇ ! ದೇವ (ಅಧ್ಯಾಹಾರ) ಓ ಸ್ವಾಮಿಯೇ, ಚರಾಚರಸ್ಯ=ಚೇತನಾಚೇತನವಾದ, ಲೋಕಸ್ಯ=ಪ್ರಪಂಚಕ್ಕೆ, ತ್ವಂ=ನೀನು, ಪಿತಾ=ತಂದೆಯು, ಅಸಿ=ಆಗಿದ್ದೀ, ಅಸ್ಯ-ಈ ಪ್ರಪಂಚಕ್ಕೆ, ಗರೀಯಾನ್=ಶ್ರೇಷ್ಠನಾದ, ಗುರುಃ=ಗುರುವಾಗಿದ್ದಿ, ಪೂಜ್ಯಸ್ಯ=ಪೂಜ್ಯನೂ ಆಗಿದ್ದೀ, ತ್ವತ್ಸಮಃ=ನಿನಗೆ ಸಮಾನರಾದವರು, ನಾಸ್ತಿ=ಇಲ್ಲ. ಅನ್ಯಃ=ಮತ್ತೊಬ್ಬನು, ಅಭ್ಯಧಿಕಃ=ಶ್ರೇಷ್ಠನಾದವನು, ಕುತಃ = ಎಲ್ಲಿರುತ್ತಾನೆ, ಲೋಕತ್ರಯೇಽಪಿ=ಮೂರು ಲೋಕದಲ್ಲಿಯೂ, ಅಪ್ರತಿಮಸ್ವಭಾವ-ಅಸದೃಶ ಸ್ವರೂಪ ಉಳ್ಳವನೇ.

ತಾತ್ಪರ್ಯ.— ಅಪಾರವಾದ ಸಾಮರ್ಥ್ಯವುಳ್ಳ ನಾರಾಯಣನೇ ನೀನು ಜಗತ್ತಿಗೆ ತಂದೆ ಮತ್ತು ಪೂಜ್ಯನಾದ ಗುರುವು. ನಿನಗೆ ಸಮರಾದವರಿಲ್ಲ. ಇನ್ನು ಉತ್ತಮರು ಇಲ್ಲವೆಂದು ಹೇಳತಕ್ಕದ್ದೇನು. ಈ ಲೋಕದಲ್ಲಿ ಮಾತ್ರವಿಲ್ಲವೆಂದು ಹೇಳತಕ್ಕದ್ದಲ್ಲ. ಮೂರು ಲೋಕದಲ್ಲಿಯೂ ಇಲ್ಲ.

ವಿಶೇಷಾರ್ಥ.— ಅತಿ ಶ್ರೇಷ್ಠನಾದ ಗುರುವು ಎಂಬುವುದರಿಂದ "ಅಸಂಶಯಃ ಸಂಶಯಛಿತ್ ಗುರುರುಕ್ತೋ ಮನೀಷಿಭಿಃ । ತಸ್ಮಾತ್ ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವಸರ್ವದಾ" ಎಂಬುವ ಪ್ರಮಾಣಾನುಸಾರ, ಬ್ರಹ್ಮದೇವರಿಗೆ ಜ್ಞಾನೋಪದೇಶಮಾಡಿದ್ದರಿಂದ ಶ್ರೇಷ್ಠನಾದ ಗುರುವು ಎಂದು ತಿಳಿಯಬೇಕು. ಬ್ರಹ್ಮದೇವರು ಸರ್ವ ವಿಷಯದಲ್ಲಿಯೂ ಸಂದೇಹರಹಿತರು ಮತ್ತು ಸರ್ವರಿಗೂ ಜ್ಞಾನೋಪದೇಶಕರು. ಇಂಥಾ ಬ್ರಹ್ಮದೇವರಿಗೆ ಗುರುವಾದ್ದರಿಂದ ಶ್ರೇಷ್ಠನಾದ ಗುರುವೆಂದು ತಿಳಿಯಬೇಕು.

ಅವತಾರಿಕೆ.— ಲೋಕದಲ್ಲಿ ಅಧಿಕಾರಿಗಳು ತಿಳಿಯಬೇಕಾದ ಜ್ಞಾನದ ಪೈಕಿ ಪ್ರಕೃತಿ ಪುರುಷ, ಇವುಗಳ ಜ್ಞಾನವು ಅತ್ಯಾವಶ್ಯಕವಾದದ್ದು. ಪ್ರಕೃತಿಗಿಂತಲೂ ಪುರುಷನು ಉತ್ತಮನೆಂಬ ವಿಷಯದಲ್ಲಿ ಪ್ರಮಾಣವನ್ನು ಉದಾಹರಿಸುತ್ತಾರೆ.—

**ಶ್ಲೋಕ ॥ ಪರಂಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ ॥**
**ಯಜ್ಞಾತ್ವಾಮುನಯಃಸರ್ವೇ ಪರಾಂಸಿದ್ಧಿಮಿತೋಗತಾಃ ॥೯೨॥**

ಅರ್ಥ.—ಜ್ಞಾನಾನಾಂ=ತಿಳಿಯಬೇಕಾದ ವಿಷಯಗಳ ಪೈಕಿ, ಉತ್ತಮಂ=ಶ್ರೇಷ್ಠವಾದವುಗಳಲ್ಲಿ, ಪರಂ=ಅತ್ಯುತ್ತಮವಾದ, ಜ್ಞಾನಂ=ಪ್ರಮೇಯವನ್ನ, ಭೂಯ=ತಿರುಗಿ, ಪ್ರವಕ್ಷ್ಯಾಮಿ=ಹೇಳುತ್ತೇನೆ, ಯತ್=ಯಾವ ವಸ್ತುವಿನ ಜ್ಞಾನವನ್ನ. ಜ್ಞಾತ್ವಾ=ತಿಳಿದುಕೊಂಡು, ಸರ್ವೆ=ಸಮಸ್ತರಾದ, ಮುನಯಃ=ಜ್ಞಾನಿಗಳು, ಇತಂ=ಈ ಲೋಕಕ್ಕಿಂತ, ಪರಾಂ=ಶ್ರೇಷ್ಠವಾದ ಸಿದ್ಧಿಂ=ಜ್ಞಾನ ಫಲವನ್ನ, ಗತಾಃ=ಹೊಂದಿದರೋ.

ತಾತ್ಪರ್ಯ.—ಸಂಸಾರ ಬಂಧನವನ್ನ ಬಿಡಿಸಿಕೊಳ್ಳುವುದಕ್ಕೆ ಜ್ಞಾನ ಹೊರ್ತು ಬೇರೆ ಸಾಧನವಿಲ್ಲ. ಆದ್ದರಿಂದ ಋಷಿಗಳು ಯಾವ ಜ್ಞಾನವನ್ನು ಸಂಪಾದಿಸಿ ಈ ಸಂಸಾರವನ್ನು ದಾಟುವರೋ ಅಂತಃ ಜ್ಞಾನವನ್ನು ನಿನಗೋಸ್ಕರ ತಿರಿಗೀ ಹೇಳುತ್ತೇನೆ. ನಿನಗೆ ನಾನು ಉಪದೇಶಿಸುವ ಜ್ಞಾನವು ಸರ್ವ ವಿಷಯಕ ಜ್ಞಾನವಲ್ಲಿಯೂ ಶ್ರೇಷ್ಠವಾದದ್ದು

ವಿಶೇಷಾರ್ಥ.—ಗೀತಾಪಲ್ಲಿ "ನಹಿಜ್ಞಾನೇನಸದೃಶಂ ಪವಿತ್ರಮಿಹ ವಿದ್ಯತೆ" ಎಂಬುವ ಪ್ರಮಾಣಾನುಸಾರ ಶ್ರೀಹರಿಯ ಅನುಗ್ರಹವನ್ನು ಪಡಿಯುವುದಕ್ಕೆ ಜ್ಞಾನ ಹೊರ್ತು ಬೇರೆ ಸಾಧನವಿಲ್ಲ. ಅಂಥಾ ಜ್ಞಾನ ಯಾವುದೆಂದರೆ, ಪ್ರಕೃತಿ ಪುರುಷ ವಿವೇಕ ಜ್ಞಾನ ಇದು ಸಾಧನಕ್ಕೆ ಆತ್ಯಾವಶ್ಯಕವೆಂದು ಭಗವಂತನು ಹೇಳುತ್ತಾನೆ.

ಅವತಾರಿಕೆ.—ಪ್ರಕೃತಿಗಿಂತ ಭಗವಂತನು ಶ್ರೇಷ್ಠನೆಂಬುವುದನ್ನ ಪ್ರಮಾಣ ಮೂಲಕವಾಗಿ ತಿಳಿಸುತ್ತಾರೆ.—

**ಶ್ಲೋಕ॥ ಮಮಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂದಧಾಮ್ಯಹಂ ॥**
**ಸಂಭವಃಸರ್ವಭೂತಾನಾಂ ತತೋಭವತಿಭಾರತ ॥೩॥**

ಅರ್ಥ.—ಹೇಭಾರತ=ಎಲೋ! ಅರ್ಜುನನೆ, ಮಹದ್ಬ್ರಹ್ಮ=ಮಹತ್ತಾದ ಬ್ರಹ್ಮವೆಂದು ಹೇಳಿಸಿಕೊಳ್ಳಲ್ಪಡುವ ಪ್ರಕೃತಿಯು, ಮಮ=ನನಗೆ, ಅಥವಾ ನನ್ನಿಂದ ನಡಿಯುವ ಸೃಷ್ಟಿಗೆ, ಯೋನಿಃ=ಪತ್ನಿ (ಕಾರಣಳು,) ತಸ್ಮಿನ್=ಆ ಪ್ರಕೃತಿಯಲ್ಲಿ, ಅಹಂ=ನಾನು, ಗರ್ಭಂ=ಗರ್ಭವನ್ನು ಅಥವಾ ಚೇತನ ರಾಶಿಯನ್ನ, ದಧಾಮಿ=ಧಾರಣ ಮಾಡುತ್ತೇನೆ (ಇಡುತ್ತೇನೆ) ತತಃ

ಹೀಗೆ ಇಡೋಣಪರಿಂದ, ಸರ್ವಭೂತಾನಾಂ=ಸಕಲ ಚೇತನ ರಾಶಿಗಳ, ಸಂಭವಃ=ದೇಹೋಪಾಧಿಕೃತ ಉತ್ಪತ್ತಿಯು, ಭವತಿ-ಆಗುತ್ತದೆ.

ತಾತ್ಪರ್ಯ,—ಅರ್ಜುನನನ್ನು ಕುರಿತು ಶ್ರೀಹರಿಯು ಹೇಳುತ್ತಾನೆ. ಜಗತ್ಸೃಷ್ಟಿಗೆ ನಾನು ಪ್ರಕೃತಿಯನ್ನು ಕಾರಣಳನ್ನಾಗಿ ಮಾಡಿಕೊಂಡು ಆಕೆಯ ಮೂಲಕ ಪ್ರಪಂಚವನ್ನು ಸೃಷ್ಟಿಸುತ್ತೇನೆ.

ವಿಶೇಷಾರ್ಥ.—ಸರ್ವ ಜಗನ್ನಿಯಾಮಕನಾದ ನಾರಾಯಣನು ತಾನೆ ಸ್ವತಂತ್ರನಾಗಿ ಸರ್ವ ಸೃಷ್ಟಿ ಮಾಡುವ ಶಕ್ತಿ ಉಳ್ಳವನಾದರೂ ಪ್ರಕೃತಿ ನಿಯಾಮಕಳಾದ ರಮಾ ದೇವಿಯನ್ನನುಗ್ರಹಿಸುವುದಕ್ಕಾಗಿ ಆಕೆಯ ಮೂಲಕ ಸೃಷ್ಟಿ ಮಾಡುತ್ತಾನೆ. ಈ ರೀತಿ ಹೇಳಿದ್ದರಿಂದ ಪ್ರಕೃತಿ ನಿಯಾಮಕಳಾದ ದೇವಿಯೂ ಕೂಡ ಪರಾಧೀನಳೆಂದು ತಿಳಿಯಬೇಕು. ಶ್ರೀಹರಿಯೇ ಸರ್ವೋತ್ತಮನೆಂದು ಅಭಿಪ್ರಾಯ.

ಅವತಾರಿಕೆ.—ವಿಷ್ಣು ಸರ್ವೋತ್ತಮತ್ವವನ್ನ ಸ್ಥಾಪನೆ ಮಾಡುವುದಕ್ಕಾಗಿ ಭಾರತದ ಮತ್ತೊಂದು ಶ್ಲೋಕವನ್ನ ಪ್ರಮಾಣವನ್ನಾಗಿ ಸೂಚಿಸುತ್ತಾರೆ.—

**ಶ್ಲೋಕ॥ ದ್ವಾವಿಮೌಪುರುಷೌಲೋಕೇ ಕ್ಷರಶ್ಚಾಕ್ಷರಏವಚ ॥ ಕ್ಷರಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರಉಚ್ಯತೇ ॥೯೪॥**

ಅರ್ಥ.—ಲೋಕೇ=ಪ್ರಪಂಚದಲ್ಲಿ ಅಥವಾ ಇಮೌ=ಪ್ರಸಿದ್ಧರಾದ, ಪುರುಷೌ-ಚೇತನರುಗಳಲ್ಲಿ, ಕ್ಷರಃ=ಶರೀರ ನಾಶ ಉಳ್ಳ ಬ್ರಹ್ಮಾದಿಗಳು, ಅಕ್ಷರಶ್ಚ=ಶರೀರ ನಾಶವಿಲ್ಲದ ರಮಾ ದೇವಿಯರೆಂಬ, ದ್ವಾವೇವ=ಇಬ್ಬರೇ. ಸರ್ವಾಣಿ ಭೂತಾನಿ=ಸಕಲ ಬ್ರಹ್ಮಾದಿ ಚೇತನರುಗಳು, ಕ್ಷರಃ=ನಾಶವಾಗತಕ್ಕ ದೇಹ ಉಳ್ಳವರು, ಅಕ್ಷರಃ=ನಾಶರಹಿತವಾದ ದೇಹ ಉಳ್ಳವರಾದ್ದರಿಂದ, ಕೂಟಸ್ಥಃ=ವಿಕಾರ ಶೂನ್ಯರಾದ ರಮಾದೇವಿಯರು. ಅಕ್ಷರಃ=ನಾಶವಿಲ್ಲದ ದೇಹ ಉಳ್ಳವರಾದದ್ದರಿಂದ, ಅಕ್ಷರ ಶಬ್ದ ವಾಚ್ಯರೆಂದು, **ಉಚ್ಯತೇ=ಹೇಳಿಸಿಕೊಳ್ಳುತ್ತಾರೆ.**

ತಾತ್ಪರ್ಯ—ಲೋಕದಲ್ಲಿ ಕ್ಷರ ಪುರುಷರು ಅಕ್ಷರ **ಪುರುಷರೆಂದ**

ಎರಡು ವಿಧ. ಬ್ರಹ್ಮಾದಿ ಅಶೇಷ ಚೇತನರುಗಳು ಶರೀರನಾಶ ಉಳ್ಳವ ರಾದ್ದರಿಂದ ಕ್ಷರ ಪುರುಷರೆಂದು ಹೇಳಿಸಿಕೊಳ್ಳುತ್ತಾರೆ. ರಮಾದೇವಿಯು ರಾಪರೋ ನಿತ್ಯ ಶರೀರಗಳಾದ್ದರಿಂದ ಅಕ್ಷರ ಪುರುಷರೆಂದು ಹೇಳಿಸಿಕೊಳ್ಳುತ್ತಾರೆ.

ವಿಶೇಷಾರ್ಥ.—ಜಗತ್ತನ್ನು ಸೃಷ್ಟಿಸುವ ನಾರಾಯಣನಿಗೆ ಅಕ್ಷರ ಶಬ್ದವಾಚ್ಯಳಾದ ರಮಾದೇವಿಯು ಸಹಚಾರಿಣಿಯಾದ್ದರಿಂದಲೂ ನಿತ್ಯಾ ವಿಯೋಗಿನಿಯಾಗಿ ಕಾಲ ದೇಶದಲ್ಲಿ ವ್ಯಾಪ್ತಳಾದ್ದರಿಂದಲೂ ಶ್ರೀವತ್ಸನೆಂಬ ಬಿರುದುಳ್ಳ ಪರಬ್ರಹ್ಮನಿಗೆ ಗುಣಗಳಿಂದ ಅಪೂರ್ಣಳಾದ ಪ್ರಯುಕ್ತ ಅಕ್ಷರ ಶಬ್ದವಾಚ್ಯಳೆಂದು ಹೇಳಿಸಿಕೊಳ್ಳುತ್ತಾಳೆ.

ಅವತಾರಿಕೆ.—ಪೂರ್ವ ಶ್ಲೋಕದಲ್ಲಿ ಕ್ಷರ ಪುರುಷರು, ಅಕ್ಷರ ಪುರುಷರನ್ನ ನಿರೂಪಿಸಿ ಇವರಿಂದ ಭಿನ್ನನಾದ ಪುರುಷೋತ್ತಮನ ಜ್ಞಾನವು ಆತ್ಮಾನಂದಕಾದ್ದರಿಂದ ಆ ಪುರುಷೋತ್ತಮನ ಲಕ್ಷಣವನ್ನು ತಿಳಿಸುತ್ತಾರೆ.

**ಶ್ಲೋ|| ಉತ್ತಮಃಪುರುಷ ಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ||**
**ಯೋಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ||೧೫||**

ಅರ್ಥ.—ಅನ್ಯಃ=ಕ್ಷರಾಕ್ಷರ ಪುರುಷರುಗಳಿಂದ ಭಿನ್ನನಾದ, ಪುರುಷಃ=ಪುರುಷನು; ಉತ್ತಮಃ=ಶ್ರೇಷ್ಠನು, ಯಃ=ಯಾವ ಪುರುಷನು, ಅವ್ಯಯಃ=ನಾಶರಹಿತನೋ, ಈಶ್ವರಃ=ಐಶ್ವರ್ಯ ಪೂರ್ಣನೋ, ಲೋಕತ್ರಯಂ=ಮೂರು ಲೋಕವನ್ನ, ಆವಿಶ್ಯ=ಪ್ರವೇಶಮಾಡಿ, ಬಿಭರ್ತಿ=ಧಾರಣೆ ಮಾಡಿದ್ದಾನೋ, ಸಃ=ಅಂತಃ ಪುರುಷನು, ಪರಮಾತ್ಮೇತಿ=ಪರಮಾತ್ಮನೆಂದು, ಉದಾಹೃತಃ=ಹೇಳಿಸಿಕೊಳ್ಳಲ್ಪಡುತ್ತಾನೆ.

ತಾತ್ಪರ್ಯ.—ಕ್ಷರಾಕ್ಷರ ಪುರುಷರುಗಳಿಗಿಂತ ಉತ್ತಮನಾದ, ಮೂರು ಲೋಕವನ್ನ ಆವರಿಸಿದ ಐಶ್ವರ್ಯ ಪೂರ್ಣನಾದ, ನಾಶರಹಿತನಾದ ಪುರುಷನು ಪರಮಾತ್ಮನೆಂದು ಹೇಳಿಸಿಕೊಳ್ಳುತ್ತಾನೆ.

ವಿಶೇಷಾರ್ಥ.—"ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಶ್ರುತಿಯಲ್ಲಿ ಹೇಳಿದ ಜಗತ್ಪ್ರವಿಷ್ಟ ರೂಪಿಯಾದ ಪರಬ್ರಹ್ಮನು ಸರ್ವ ದೇಹಗಳಲ್ಲಿ

ಪ್ರವಿಷ್ಟನಾದ್ದರಿಂದ ಪುರುಷ ಶಬ್ದ ವಾಚ್ಯನು. ಇಂಥಾ ಪುರುಷ ಶಬ್ದ ವಾಚ್ಯನಾಗಿ ಇಂದ್ರಾದಿಗಳಿಗೆ ಐಶ್ವರ್ಯ ಕೊಟ್ಟು ಶಸ್ವದೇಕ ಪ್ರಕಾರನಾಗಿ ಜ್ಞಾನೋ ಅವನೇ ಪರಬ್ರಹ್ಮನೆಂದು ಶೃತಿಗಳಲ್ಲಿಯೂ, ಸ್ಮೃತಿಗಳಲ್ಲಿಯೂ, ಉದಾಹರಿಸಲ್ಪಟ್ಟಿದ್ದಾನೆ.

**ಅವತಾರಿಕೆ.**—ಹಿಂದಿನ ಶ್ಲೋಕದಲ್ಲಿ ನಿರೂಪಿಸಿದ ಉತ್ತಮ ಪುರುಷನು ಯಾರು' ಅಂದರೆ ಅರ್ಜುನನಿಗೆ ಉಪದೇಶಿಸುತ್ತಿರುವ ಶ್ರೀಕೃಷ್ಣನು ತಾನೆ ಎಂದು ತಿಳಿಸುತ್ತಾನೆ.—

**ಶ್ಲೋಕ॥ ಯಸ್ಮಾತ್ಕ್ಷರಮತೀತೋಹಮಕ್ಷರಾದಪಿಚೋತ್ತಮಃ ।**
**ಅತೋಸ್ಮಿಲೋಕೇವೇದೇಚ ಪ್ರಥಿತಃಪುರುಷೋತ್ತಮಃ ॥೧೮॥**

ಅರ್ಥ.—ಅಹಂ=ನಾನು, ಯಸ್ಮಾತ್=ಯಾವ ಕಾರಣದಿಂದ, ಕ್ಷರಂ=ಬ್ರಹ್ಮಾದಿಗಳನ್ನು, ಅಕ್ಷರಾದಪಿ=ರಮಾದೇವಿಯರನ್ನು, ಅತೀತಃ—ಮೀರಿದ, ಉತ್ತಮಃ=ಶ್ರೇಷ್ಟನೊ, ಅತಃ=ಆ ಕಾರಣದಿಂದ, ಲೋಕೆ=ಪ್ರಪಂಚದಲ್ಲಿ; ವೇದೇಚ=ವೇದದಲ್ಲಿಯೂ, ಪ್ರಥಿತಃ=ಪ್ರಸಿದ್ಧನಾದ, ಪುರುಷೋತ್ತಮಃ=ಕ್ಷರಾಕ್ಷರ ಪುರುಷರುಗಳಿಂದ ಉತ್ತಮನು, ಅಸ್ಮಿ=ಆಗಿದ್ದೇನೆ.

**ತಾತ್ಪರ್ಯ.**—ನಾನು ಕ್ಷರಾಕ್ಷರ ಪುರುಷರುಗಳಿಗಿಂತ ಉತ್ತಮನು. ಈ ರೀತಿ ಉತ್ತಮನಾದದ್ದರಿಂದಲೇ ಲೋಕದಲ್ಲಿಯೂ, ವೇದದಲ್ಲಿಯೂ ಪ್ರಸಿದ್ಧನಾದ ಪುರುಷೋತ್ತಮನೆಂದು ಹೊಗಳಿಸಿಕೊಳ್ಳುತ್ತೇನೆ.

ವಿಶೇಷಾರ್ಥ.—ಏಕೋ ನಾರಾಯಣ ಆಸೀತ್ ನಬ್ರಹ್ಮಾನಚ ಶಂಕರಃ । ವಾಸುದೇವೋವಾ ಇದಮಗ್ರ ಆಸೀತ್ ನಬ್ರಹ್ಮ ನಚ ಶಂಕರಃ" ಎಂಬುವ ಅಪೌರುಷೇಯ ಆಗಮದಲ್ಲಿಯೂ " ನಾಸ್ತಿ ನಾರಾಯಣ ಸಮಂ ' ಎಂಬುವ ಪೌರುಷೇಯ ಆಗಮದಲ್ಲಿಯೂ ಪ್ರತಿಪಾದಿಸಲ್ಪಡುವ ಮಹಿಮೋಪೇತನಾದ ಪರಬ್ರಹ್ಮನೇ ಕ್ಷರಾಕ್ಷರ ಪುರುಷರುಗಳಿಗಿಂತ ಉತ್ತಮನಾದ ಪುರುಷೋತ್ತಮನೆಂದು ತಿಳಿಯಬೇಕು.

**ಅವತಾರಿಕೆ.**—ಈ ರೀತಿಯಾಗಿ ಪರಮಾತ್ಮನು ಕ್ಷರಾಕ್ಷರ ಪುರುಷರಿಗಿಂತ ಉತ್ತಮನೆಂದು ತಿಳಿಯುವವರಿಗೆ ಆಗುವ ಫಲವನ್ನು ಸೂಚಿಸುತ್ತಾರೆ

**ಶ್ಲೋಕ ॥ ಯೋಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ।**
**ಸಸರ್ವವಿದ್ಭಜತಿಮಾಂ ಸರ್ವಭಾವೇನ ಭಾರತ ॥೧೯॥**

**ಅರ್ಥ.**— ಹೇ ಭಾರತ=ಭರತ ಕುಲೀನನಾದ ಹೇ ! ಅರ್ಜುನನೇ, **ಯಃ-ಯಾವ** ಪುರುಷನು, ಮಾಂ=ನನ್ನನ್ನು, ಏವಂ-ಪೂರ್ವದಲ್ಲಿ ಹೇಳಿದ ರೀತಿಯಾಗಿ, ಅಸಮ್ಮೂಢಃ-ಮೋಹಾದಿಗಳಿಂದ ರಹಿತನನ್ನಾಗಿಯೂ, ಪುರುಷೋತ್ತಮಂ-ಪುರುಷೋತ್ತಮನೆಂದು, ಜಾನಾತಿ=ತಿಳಿಯುತ್ತಾನೋ, ಸಃ -ಆ ಅಧಿಕಾರಿಯು, ಸರ್ವವಿತ್=ಸರ್ವವನ್ನೂ ತಿಳಿದವನು. ಸರ್ವಭಾವೇನ=ಸಕಲ ವಿಧದಿಂದಲೂ, ಮಾಂ=ನನ್ನನ್ನು, ಭಜತಿ=ಭಜಿಸುತ್ತಾನೆ.

ತಾತ್ಪರ್ಯ.—ಎಲೋ ಅರ್ಜುನನೇ ಯಾವ ಅಧಿಕಾರಿಯು ಮೋಹವಿಲ್ಲದವನಾಗಿ ನನ್ನನ್ನು ಕ್ಷರಾಕ್ಷರ ಪುರುಷರಿಗಿಂತ ಉತ್ತಮನೆಂದು, ತಿಳಿಯುತ್ತಾನೋ, ಆ ಅಧಿಕಾರಿಯೇ ಲೋಕದಲ್ಲಿ ಸರ್ವಜ್ಞನು. ಈ ರೀತಿಯಾದ ಸರ್ವಜ್ಞನು ಸರ್ವ ಕಾಲದಲ್ಲಿಯೂ ನನ್ನನ್ನೇ ಭಜಿಸುತ್ತಾನೆ.

ವಿಶೇಷಾರ್ಥ.— ಪರಬ್ರಹ್ಮನಿಂದ ಕೊಡಲ್ಪಡುವ ಮೋಕ್ಷಕ್ಕೆ ಜ್ಞಾನ ಹೊರ್ತು ಮಿಕ್ಕ ಯಾವ ಸಾಧನಗಳು ಸಾಕ್ಷಾತ್ತಾಗಿ ಪರಬ್ರಹ್ಮನನ್ನು ಹೊಂದಿಸಲು ಶಕ್ತವಲ್ಲ, ಆದ್ದರಿಂದ ಜೀವರುಗಳಿಂದ ತಿಳಿಯಬೇಕಾದ ವಸ್ತುಗಳಲ್ಲಿ ಪರಬ್ರಹ್ಮನೇ ಉತ್ತಮನು. ಇವನ ವಿಷಯಕವಾದ ಜ್ಞಾನವೇ ಸರ್ವಜ್ಞತ್ವಕ್ಕೆ ಸಾಧನವು. ಈ ರೀತಿಯಾಗಿ ಪರಮಾತ್ಮನನ್ನು ತಿಳಿದ ಅಧಿಕಾರಿಗಳು ಸರ್ವ ದೇಶಕಾಲಗಳಲ್ಲಿಯೂ ಪುರುಷೋತ್ತಮನನ್ನೇ ಭಜಿಸುತ್ತಾರೆ.

ಅವತಾರಿಕೆ.-ಹಿಂದೆ ಹೇಳಿದ ರೀತಿಯಾಗಿ ಭಗವದ್ಗುಣಗಳನ್ನ ಪ್ರತಿಪಾದಿಸುವ ಶಾಸ್ತ್ರ ಭಾಗವನ್ನ ಭಗವದ್ಭಕ್ತರಲ್ಲದ ದುರ್ಜನರುಗಳಿಗೆ ಉಪದೇಶ ಮಾಡಬಾರದೆಂದು ಸೂಚಿಸುತ್ತಾಗೆ.

**ಶ್ಲೋಕ ॥ ಇತಿಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ಕೃತ ಕೃತ್ಯಶ್ಚ ಭಾರತ ॥೨೦॥**

ಅರ್ಥ.-ಹೇ ಅನಘ=ಓ ಪ್ರೀತಿಪಾತ್ರನಾದ, (ಪಾಪರಹಿತನಾದ) ಅರ್ಜುನನೇ, ಮಯಾ-ನನ್ನಿಂದ, ಇತಿ-ಪೂರ್ವದಲ್ಲಿ ಹೇಳಲ್ಪಟ್ಟ ಶಾಸ್ತ್ರವು ಗುಹ್ಯತಮಂ-ಅತಿ ಗೋಪ್ಯವಾದದ್ದು. ಇದಂ=ಇಂತಹ, ಶಾಸ್ತ್ರಂ-ಶಾಸ್ತ್ರವು

ಉಕ್ತಂ=ನಿನಗೆ, ಮಯಾ=ನನ್ನಿಂದ ಹೇಳಲ್ಪಟ್ಟಿತು. ಹೇ ಭಾರತ=ಓ ಭರತ ಕುಲದಲ್ಲಿ ಹುಟ್ಟಿದ ಅರ್ಜುನನೆ, ಏತತ್=ಈ ರೀತಿಯಾದ ಶಾಸ್ತ್ರವನ್ನು, ಬುಧ್ವಾ=ಚೆನ್ನಾಗಿ ಶ್ರವಣ ಮನನಮಾಡಿ ತಿಳಿದ ನಂತರ, ಬುದ್ಧಿಮಾನ್=ಅಪರೋಕ್ಷಜ್ಞಾನಿಯು, ಸ್ಯಾತ್=ಆಗುತ್ತೀ, ಕೃತಕೃತ್ಯಶ್ಚ - ಮುಕ್ತನೂ ಆಗುತ್ತೀ.

ತಾತ್ಪರ್ಯ.—"ಪಾಪರಹಿತನಾದ ಅರ್ಜುನನೇ, ಅತಿ ಗೋಪ್ಯವಾದ ಪರಮಾತ್ಮನ ಗುಣಗಳನ್ನು ಪ್ರತಿಪಾದಿಸುವ ಶಾಸ್ತ್ರಭಾಗವನ್ನು ನಿನಗೆ ನಾನು ಹೇಳುತ್ತೇನೆ. ಈ ಶಾಸ್ತ್ರಭಾಗವನ್ನು ಅಯೋಗ್ಯ ಜನಗಳಿಗೆ ಹೇಳಬಾರದು ಈ ರೀತಿಯಾಗಿ ಭಗವಂತನ ಗುಣಗಳನ್ನು ತಿಳಿದು ಅಪರೋಕ್ಷ ಜ್ಞಾನಿಯಾಗಿ ಮುಕ್ತಿಯನ್ನು ಹೊಂದುವವನಾಗು" ಎಂದು ಪರಮಾತ್ಮನು ಅರ್ಜುನನಿಗೆ ಹೇಳಿದನು.

ವಿಶೇಷಾರ್ಥ.—ಶ್ರೀಕೃಷ್ಣನು ಅರ್ಜುನನಿಗೆ ಗೋಪ್ಯವಾದ ಶಾಸ್ತ್ರಾರ್ಥವನ್ನು ತಿಳಿ, ಅಪರೋಕ್ಷಜ್ಞಾನಿಯಾಗು, ಮುಕ್ತಿಯನ್ನು ಹೊಂದು ಎಂದು ಹೇಳಿದ್ದರಿಂದ, ಆದ್ಯಂತಿಕ ದುಃಖ ನಿವೃತ್ತಿ, ವಿಶಿಷ್ಟ ಪರಮಾನಂದಾವಿರ್ಭಾವ ರೂಪವಾದ ಮೋಕ್ಷಕ್ಕೆ ಶ್ರವಣಾದಿಗಳಿಂದ ಜನ್ಯವಾದ ಹರಿಸರ್ವೋತ್ತಮತ್ವ ರೂಪವಾದ ಜ್ಞಾನವೇ ಮುಖ್ಯವೆಂದು ಸೂಚಿಸಿದ ಹಾಗಾಯಿತು.

ಅವತಾರಿಕೆ.—ಸಾತ್ವಿಕ, ರಾಜಸ, ತಾಮಸರೆಂಬ ಮೂರು ವಿಧ ಚೇತನರುಗಳಲ್ಲಿ ಸಾತ್ವಿಕರಿಗೆ ಭಕ್ತಿಯೂ, ರಾಜಸರಿಗೆ ಉದಾಸೀನವೂ, ತಾಮಸರಿಗೆ ದ್ವೇಷವೂ, ಸ್ವರೂಪ ಸಿದ್ಧವೆಂದು ಹಿಂದೆ ಹೇಳಲ್ಪಟ್ಟಿದೆ. ಈಗ ದ್ವೇಷಿಗಳಿಗೆ ನರಕ ಪ್ರಾಪ್ತಿ ಎಂಬುವುದಕ್ಕೆ ಗೀತಾ ಪ್ರಮಾಣವನ್ನು ಹೇಳುತ್ತಾರೆ.—

ಶ್ಲೋಕ ॥ ದ್ವೌಭೂತಸರ್ಗೌಲೋಕೇಽಸ್ಮಿನ್ ದೈವ ಅಸುರ ಏವಚ ।
ದೈವೋವಿಸ್ತರಶಃಪ್ರೋಕ್ತಃ ಅಸುರಂ ಪಾರ್ಥಮೇಶೃಣು ॥೧೦೦॥

ಅರ್ಥ.—ಹೇ ಪಾರ್ಥ=ಎಲೋ ಅರ್ಜುನನೆ! ಅಸ್ಮಿನ್ = ಇಂಥಾ, ಲೋಕೇ=ಪ್ರಪಂಚದಲ್ಲಿ, ಭೂತಸರ್ಗೌ = ಪ್ರಾಣಿಗಳ ಸೃಷ್ಟಿಯು, ದ್ವೌ=

ಎರಡು ವಿಧ, ದೈವಃ ದೇವ ಸಂಬಂಧವೆಂತಲೂ, ಆಸುರಏವಚ=ಆಸುರ ಸಂಬಂಧವೆಂತಲೂ, ದೈವಃ-ದೇವತಾ ಸಂಬಂಧವಾದ ಸೃಷ್ಟಿಯು, ವಿಸ್ತರಶಃ=ವಿಸ್ತಾರವಾಗಿ, ಪ್ರೋಕ್ತಃ=ಹೇಳಲ್ಪಟ್ಟಿತು. ಆಸುರಂ = ಅಸುರ ಸಂಬಂಧ ಸೃಷ್ಟಿಯನ್ನು, ಮೇ=ನನ್ನಿಂದ, ಶೃಣು=ಕೇಳು.

ತಾತ್ಪರ್ಯ.—ಈ ಲೋಕದಲ್ಲಿ ನನ್ನಿಂದ ಸೃಷ್ಟರಾದ ಚೇತನರುಗಳಲ್ಲಿ ದೈವವೆಂತಲೂ, ಅಸುರವೆಂತಲೂ ಎರಡು ವಿಧ. ಇದುವರಿವಿಗೆ ದೈವ ಸ್ವಭಾವವನ್ನು ವಿಸ್ತಾರವಾಗಿ ಹೇಳಿದೆ. ಇನ್ನು ಮುಂದೆ ನಾನು ಹೇಳುವ ಅಸುರ ಸಂಬಂಧವಿಭಾಗವನ್ನು ಕೇಳೆಂಬುದಾಗಿ ಅರ್ಜುನನಿಗೆ ದೇವರು ಹೇಳಿದರು.

ವಿಶೇಷಾರ್ಥ.--ಪ್ರಮಾಣ.- "ಸರ್ಗಾಣಾಂ ಸುಬಹುತ್ವೇಪಿ ಶುಭಾಶುಭಫಲಾಧಿಕಾ । ದೇವಾಸುರಾಖ್ಯೌ ದ್ವಾವೇವಗಂಧರ್ವಾದ್ಯಾಸ್ತದಂತರಾಃ ಮುಕ್ತಿಗಾ ಏವ ವಿಜ್ಞಾಯ ದೇವಾ ಏವಾ ವಿಮುಕ್ತಿಗಾಃ ॥" ಈ ರೀತಿಯಾಗಿ ಜಯತೀರ್ಥರು ಉದಾಹರಿಸಿರುವುದರಿಂದ ದೇವ, ಗಂಧರ್ವ, ಮನುಷ್ಯ ಇವರುಗಳಿಂದ ಭಿನ್ನರಾದ ಅಸುರಾದಿಗಳಿಗೆ ತಮಃಪ್ರಾಪ್ತಿ ಉಂಟೆಂದು ತಿಳಿಯಬೇಕು.

ಅವತಾರಿಕೆ.—ಅಸುರರ ತಮಸ್ಸಾಧನ ರೂಪವಾದ ಉಪಾಸನೆಯು ಯಾವ ರೀತಿ ಎಂಬುವುದನ್ನು ಹೇಳುತ್ತಾರೆ.-

**ಶ್ಲೋಕ ॥ ಅಸತ್ಯಮ ಪ್ರತಿಷ್ಠಂತೇ ಜಗದಾಹುರನೀಶ್ವರಂ ।**
**ಅಪರಸ್ಪರ ಸಂಭೂತಂ ಕಿಮನ್ಯತ್ಕಾಮಹೈತುಕಂ ॥೧೦॥**

ಅರ್ಥ.-ತೇ=ಆ ದೈತ್ಯರುಗಳು, ಜಗತ್=ಪ್ರಪಂಚವನ್ನು, ಅಸತ್ಯಂ ಮಿಥ್ಯವೆಂತಲೂ, ಅಪ್ರತಿಷ್ಠಂ=ಬ್ರಹ್ಮ ಜ್ಞಾನದಿಂದ ನಾಶ ಹೊಂದತಕ್ಕದ್ದೆಂತಲೂ, ಅನೀಶ್ವರಂ-ಸ್ವಾಮಿ ಇಲ್ಲದೆ ಇರುವುದನ್ನಾಗಿಯೂ, ಅಪರಸ್ಪರ ಸಂಭೂತಂ=ಸ್ವತಃ ಉತ್ಪನ್ನವಾದದ್ದಾಗಿಯೂ (ಸದಸದ್ವಿಲಕ್ಷಣನನ್ನಾಗಿಯೂ,) ಕಿಂ=ಮತ್ತು, ಅನ್ಯತ್=ಬೇರೆಯಾದ (ಪ್ರಪಂಚದಿಂದ ಭಿನ್ನವಾದ) ಕಾಮಹೈತುಕಂ=ಅಜ್ಞಾನ ಕಲ್ಪಿತವೆಂತಲೂ, ಆಹುಃ=ಹೇಳುತ್ತಾರೆ.

ತಾತ್ಪರ್ಯ.-ದೈತ್ಯರುಗಳು ಕಣ್ಣಿಗೆ ಕಾಣುವ ಪ್ರಪಂಚವನ್ನು ಸುಳ್ಳೆಂದೂ ಬ್ರಹ್ಮಜ್ಞಾನದಿಂದ ನಾಶ ಹೊಂದತಕ್ಕದ್ದೆಂದೂ ಸೃಷ್ಟಿಸುವ ಪರಬ್ರ

ಕ್ಕನೇ ಇಲ್ಲವೆಂದೂ, ಕಾರ್ಯಕಾರಣ ಭಾವರೂಪ ಸಂಬಂಧವಿಲ್ಲವೆಂದೂ ಹೇಳುತ್ತಾರೆ.

ವಿಶೇಷಾರ್ಥ.-ದೈತ್ಯರುಗಳ ಉಪಾಸನೆಯು ಕೇವಲ ಸತ್ಯವಾದ ಪ್ರಪಂಚಕ್ಕೆ ಮಿಥ್ಯವನ್ನು ಹೇಳುವುದೇ ಅಲ್ಲ, ಜಗಜ್ಜನ್ಮಾದಿ ಕಾರಣನಾದ ವಿಷ್ಣುವಿಗೆ ಸೃಷ್ಟಿ ಕರ್ತೃತ್ವವೂ ಇಲ್ಲವೆಂಬುದು. ಇದೇ ಅಸುರ ಸ್ವಭಾವವು.

ಅವತಾರಿಕೆ.- ಹಿಂದೆ ಪ್ರತಿಜ್ಞೆ ಮಾಡಿದ ಅಸುರ ಕರ್ಮವನ್ನೇ ತಿಳಿಸುತ್ತಾರೆ.-

ಶ್ಲೋಕ || ಏತಾಂದೃಷ್ಟಿ ಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ |
ಪ್ರಭವಂತ್ಯುಗ್ರ ಕರ್ಮಾಣಃ ಕ್ಷಯಾಯಜಗತೋಽಹಿತಾಃ ||೧೦೨||

ಅರ್ಥ.- ಏತಾಂ=ಈ ಪ್ರಕಾರ, ದೃಷ್ಟಿಂ-ಮಿಥ್ಯಾಜ್ಞಾನವನ್ನು, ಅವಷ್ಟಭ್ಯ=ಆಶ್ರಯಿಸಿ, ನಷ್ಟಾತ್ಮಾನಃ=ನಷ್ಟವಾದ ಜ್ಞಾನ ಉಳ್ಳವರಾಗಿಯೂ, ಅಲ್ಪಬುದ್ಧಯಃ=ಅಲ್ಪ=ಕುಚ್ಛಿತವಾದ ವಿಷಯಗಳಲ್ಲಿ, ಬುದ್ಧಯಃ=ಆಸಕ್ತಿ ಉಳ್ಳವರಾಗಿಯೂ, ಜಗತಃ=ಜಗತ್ತಿಗೆ, ಅಹಿತಾಃ=ಶತ್ರುರೂಪರಾಗಿ, ಕ್ಷಯಾಯ=ನಾಶಕ್ಕೂ, ಉಗ್ರಕರ್ಮಾಣಃ=ಉಗ್ರ-ಕ್ರೂರವಾದ, ಕರ್ಮಾಣಃ=ವ್ಯಾಪಾರವುಳ್ಳವರಾಗಿ, ಪ್ರಭವಂತಿ-ಸಮರ್ಥರಾಗುತ್ತಾರೆ.

ತಾತ್ಪರ್ಯ.-ಪೂರ್ವದಲ್ಲಿ ಹೇಳಿದ ಜಗದಸತ್ತ್ವ, ನಿರೀಶ್ವರತ್ವವೇ ಮೊದಲಾದ ಜ್ಞಾನವುಳ್ಳವರಾಗಿ ತಾವು ಸುಖಪಡದೇ ಅಲ್ಪ ವಿಷಯದಲ್ಲಿ ಆಸಕ್ತರಾಗಿ ಜಗತ್ತಿನ ನಾಶಕ್ಕೆ ಕಾರಣರಾಗುತ್ತಾರೆ. ನಂತರ ಶತ್ರುತ್ವರೂಪವಾದ ಕ್ರೂರ ಕರ್ಮಗಳನ್ನೂ ಕೂಡ ಆಚರಿಸಲು ಸಮರ್ಥರಾಗುತ್ತಾರೆ.

ವಿಶೇಷಾರ್ಥ.- ನಿತ್ಯವಾದ ವೇದದಲ್ಲಿ ಸತ್ಯವೆಂದು ಹೇಳುವ ಜಗತ್ತನ್ನು ಅಸತ್ಯವೆಂದು ತಿಳಿದು ಗುಣಗಣ ಪೂರ್ಣನಾದ ಶ್ರೀಬ್ರಹ್ಮನನ್ನು ನಿರ್ಗುಣನೆಂದು ಉಪಾಶಿಸಿ ತಾವು ಬ್ರಹ್ಮನಿಂದ ಕೊಡಲ್ಪಟ್ಟ ಸುಖಕ್ಕೆ ಭಾಗಿಗಳಾಗದೆ ಇತರ ಚೇತನರುಗಳನ್ನು ಸಾಧನ ಮಾಡದಂತೆ ಪ್ರತಿಬಂಧಿಸಿ ದುರ್ಗತಿಗೆ ಪಾತ್ರರನ್ನಾಗಿ ಮಾಡುತ್ತಾರೆ.

**ಅವತಾರಿಕೆ.**—ಹಿಂದಿನ ಶ್ಲೋಕದಲ್ಲಿ ನಿರೂಪಿಸಿದ ಕರ್ಮಗಳಿಂದ ಉಂಟಾಗುವ ಮನೋವೃತ್ತಿಯನ್ನು ಸೂಚಿಸುತ್ತಾರೆ :—

**ಶ್ಲೋಕ॥ ಈಶ್ವರೋಽಹಮಹಂಭೋಗೀ ಸಿದ್ಧೋಽಹಂಬಲವಾನ್ ಸುಖೀ ॥**
**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋಮಯಾ॥೧೫॥**

ಅರ್ಥ.—ಅಹಂ=ನಾನು, ಈಶ್ವರಃ=ಐಶ್ವರ್ಯಪೂರ್ಣನು, ಭೋಗೀ= ಸುಖವುಳ್ಳವನು, ಅಹಂ = ನಾನು, ಸಿದ್ಧಃ = ಸುಕರ್ಮ ದುಷ್ಕರ್ಮಗಳನ್ನು ಸಿದ್ಧಿಸಿಕೊಂಡಿರುವವನು, ಅಹಂ=ನಾನು, ಬಲವಾನ್ = ಬಲವುಳ್ಳವನು, ಸುಖೀ=ಸುಖವುಳ್ಳವನು, ಆಢ್ಯಃ=ಜ್ಞಾನ ಮತ್ತು ಬಲ ಇವೆರಡೂ ಉಳ್ಳವನು, ಅಭಿಜನವಾನ್ = ಜನಾನುರಾಗ ಉಳ್ಳವನು, ಅಸ್ಮಿ = ಆಗಿದ್ದೇನೆ, ಮಯಾ=ನನಗೆ, ಸದೃಶಃ=ಸಮಾನನು, ಅನ್ಯಃ = ಮತ್ತೊಬ್ಬನು, ಕಃ= ಯಾರು, ಅಸ್ತಿ=ಇರುತ್ತಾನೆ, ನಕೋಽಪಿ=ಯಾರು ಇಲ್ಲ.

ತಾತ್ಪರ್ಯ.—ಲೋಕದಲ್ಲಿ ನಾನೇ ಐಶ್ವರ್ಯವಂತನು, ಭೋಗವುಳ್ಳವನು, ಬಲಿಷ್ಠನು. ಸುಖಿಯು, ಜ್ಞಾನಿಯು, ಸರ್ವ ಜನರೂ ನನ್ನಲ್ಲಿ ಅನುರಾಗವುಳ್ಳವರಾಗಿದ್ದಾರೆ. ಈರೀತಿಯಾಗಿ ತನಗೆ ಯಾರೂ ಸಮರಿಲ್ಲವೆಂದು ತಿಳಿಯುತ್ತಾನೆ.

ವಿಶೇಷಾರ್ಥ.—ಸ್ವಾತಂತ್ರ್ಯವಿಲ್ಲದ ತನ್ನಲ್ಲಿ ಸ್ವಾತಂತ್ರ್ಯವನ್ನೂ ಕಲ್ಪಿಸಿಕೊಂಡು ಮಮತೆ ಉಳ್ಳವನಾಗಿ, ದುಃಖಮಿಶ್ರವಾದ ಲೇಶಸುಖವುಳ್ಳ ಸಂಸಾರದಲ್ಲಿ ಸರ್ವದಾ ತಾನು ಸುಖಿಯೆಂದು ತಿಳಿಯುತ್ತಿರುವುದೇ ತಮಸ್ಸಿಗೆ ಕಾರಣವಾದ ಅಸುರ ಭಾವನೆಯು.

**ಅವತಾರಿಕೆ.**—ಹಿಂದೆ ಹೇಳಿದ ಅಸುರ ಭಾವವನ್ನು ಹೊಂದಿದವರಿಗೆ ಆಗುವ ಗತಿಯನ್ನು ಸೂಚಿಸುತ್ತಾರೆ.

**ಶ್ಲೋಕ॥ ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥**
**ತಾನಹಂದ್ವಿಷತಃಕ್ರೂರಾನ್ ಸಂಸಾರೇಷುನರಾಧಮಾನ್ ॥೧೬॥**

**ಶ್ಲೋಕ॥ ಕ್ಷಿಪಾಮ್ಯಜಸ್ರಮಶುಭಾ ನಾಸುರೀಷ್ವೇವಯೋನಿಷು ॥ ಆಸುರೀಂ ಯೋನಿಮಾಪನ್ನಾ ಮೂಢಾಜನ್ಮನಿಜನ್ಮನಿ ॥ ಮಾಮಪ್ರಾಪ್ಯೈವ ಕೌಂತೇಯ ತತೋಯಾಂತ್ಯಧಮಾಂಗತಿಂ ॥೧೭॥**

ಅರ್ಥ.—ತೇ=ನನ್ನ ಸಮಾನ ಯಾರೂ ಇಲ್ಲವೆನ್ನುವರು, ಮಾಂ= ನನ್ನನ್ನು. ಆತ್ಮಾ=ತಮ್ಮ ದೇಹದಲ್ಲಿಯೂ, ಪರದೇಹೇಷು=ಇತರರ ದೇಹ ಗಳಲ್ಲಿಯೂ ಇರುವ ನನ್ನನ್ನು, ಪ್ರದ್ವಿಷಂತಃ=ದ್ವೇಷ ಮಾಡತಕ್ಕವರಾಗಿ, ಅಭ್ಯಸೂಯಕಾಃ=ಅಸೂಯೆವುಳ್ಳವರಾಗುತ್ತಾರೆ, ತಾನ್ = ಆ ಅಸೂಯೆ ವುಳ್ಳ, ದ್ವಿಷತಃ=ದ್ವೇಷ ಮಾಡತಕ್ಕ. ಕ್ರೂರಾನ್=ಭಯಂಕರವಾದ ವ್ಯಾ ಪಾರವುಳ್ಳ, ನರಾಧಮಾನ್=ಮನುಷ್ಯಾಧಮರನ್ನು, ಅಹಂ=ನಾನು, ಸಂಸಾ ರೇಷು=ಸಂಸಾರದಲ್ಲಿ, ಅಜಸ್ರಂ ನಿರಂತರದಲ್ಲಿಯೂ. ಕ್ಷಿಪಾಮಿ = ಹಾಕು ತ್ತೇನೆ, ಅಶುಭಾನ್=ಇಂತಹ ಅಮಂಗಳ ಚೇತನರನ್ನು. ಆಸುರೀಷ್ವೇವ= ಅಸುರ ಸಂಬಂಧವಾದ, ಯೋನಿಷು=ಯೋನಿಗಳಲ್ಲಿ (ಉದರದಲ್ಲಿ), ಕ್ಷಿಪಾ ಮಿ=ಹಾಕುತ್ತೇನೆ. ಮೂಢಾಃ = ಅಜ್ಞಾನಿಗಳು, ಆಸುರೀಂ = ಅಸುರ ಸಂಬಂಧಿಯಾದ, ಯೋನಿಂ=ಜನ್ಮಗಳನ್ನು, ಆಪನ್ನಾಃ=ಹೊಂದಿದವರಾಗಿ, ಜನ್ಮನಿಜನ್ಮನಿ=ಪ್ರತಿ ಜನ್ಮದಲ್ಲಿಯೂ, ಮಾಂ=ನನ್ನನ್ನು, ಅಪ್ರಾಪ್ಯೈವ= ಹೊಂದದ ಹಾಗೆಯೇ, ತತಃ=ಅಸುರ ಜನ್ಮಧಪೆಶೆಯಿಂದ, ಅಧಮಾಂಗ ತಿಂ=ನಿತ್ಯ ನರಕವನ್ನು, ಯಾಂತಿ=ಹೊಂದುತ್ತಾರೆ.

ತಾತ್ಪರ್ಯ.—ಪೂರ್ವದಲ್ಲಿ ಹೇಳಿದ ದುಸ್ಸಾಧನ ಮಾಡತಕ್ಕ ತಮೋ ಯೋಗ್ಯರು ತಮ್ಮ ದೇಹದಲ್ಲಿಯೂ ಇತರರ ದೇಹದಲ್ಲಿಯೂ ಇರುವ ಜಗ ದಂತನನ್ನು ಅಸೂಯೆಯಿಂದ ದ್ವೇಷಿಸುತ್ತಾರೆ. ಅಂತಹ ದ್ವೇಷ ಮಾಡತಕ್ಕ ನರಾಧಮರನ್ನ, ನಾನು ಸಂಸಾರದಲ್ಲಿ ದಬ್ಬಿ, ದೈತ್ಯ ಜನ್ಮವನ್ನು ಕೊಡು ತ್ತೇನೆಂದು ಪರಮಾತ್ಮನು ಹೇಳುತ್ತಾನೆ.

ವಿಶೇಷಾರ್ಥ.—ಕರ್ತನಾದ ಹರಿಯನ್ನೂ ಮತ್ತು ಹರಿ ಭಕ್ತರನ್ನೂ, ದ್ವೇಷಿಸುವ ಚೇತನರುಗಳು (ಜೀವರುಗಳು) ಸಂಸಾರದಲ್ಲಿ ಕ್ಲೇಶಪಟ್ಟು ದೈತ್ಯ ಜನ್ಮವನ್ನು ಎತ್ತಿ ದುಃಖಿಸುತ್ತಾರೆ.

**ಅವತಾರಿಕೆ**—ಪರಮಾತ್ಮನ ಮೂಲ ರೂಪಕ್ಕೂ (ಅಂಶಿ) ಅಂಶ, ಅವತಾರ, ಆವೇಶ, ಅಧಿಷ್ಠಾನ ಅಂತರ್ಯಾಮಿ ರೂಪಗಳಿಗೂ ಸ್ವಲ್ಪವೂ ಭೇದವಿಲ್ಲವೆಂದೂ ಚೇತನಾ ಚೇತನ ಪ್ರಪಂಚದಿಂದ ಅತ್ಯಂತ ಭಿನ್ನನೆಂದೂ ಸೂಚಿಸುವ ಪ್ರಮಾಣವನ್ನು ಹೇಳುತ್ತಾರೆ :—

**ಶ್ಲೋಕ॥ ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ॥
ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಂ ॥೧೦೬॥**

ಅರ್ಥ.——ಯೇನಾ=ಯಾವ ಜ್ಞಾನದಿಂದ, ಸರ್ವಭೂತೇಷು—ಪ್ರಪಂಚದಲ್ಲಿರುವ ಸಮಸ್ತ ಚರಾಚರಾತ್ಮಕವಾದ ವಸ್ತುಗಳಲ್ಲಿಯೂ, ಏಕಂ=ಸರ್ವೋತ್ತಮನಾಗಿರತಕ್ಕ ನಾರಾಯಣನನ್ನು, ಭಾವಂ—ಅಧಿಷ್ಠಾನ ಭೇದವಿದ್ದರೂ ಸ್ವಗತ ಭೇದ ಇಲ್ಲದವನನ್ನಾಗಿಯೂ, ಅವ್ಯಯಂ=ನಾಶರಹಿತನನ್ನಾಗಿಯೂ ವಿಭಕ್ತೇಷು=ಚೇತನ ಮತ್ತು ಜಡ ಪದಾರ್ಥಗಳಲ್ಲಿ. ಅವಿಭಕ್ತಂ—ವ್ಯಾಪ್ತನನ್ನಾಗಿಯೂ. ಈಕ್ಷತೇ=ನೋಡುತ್ತಾನೆಯೋ, ತತ್=ಅಂತಹ, ಜ್ಞಾನಂ=ಜ್ಞಾನವು, ಸಾತ್ವಿಕಂ—(ಸೋತ್ತಮ) ಸಾತ್ವಿಕ ಜ್ಞಾನವೆಂದು, ವಿದ್ಧಿ ತಿಳಿ.

ತಾತ್ಪರ್ಯ.—ಹೇ ಅರ್ಜುನನೆ! ಸಕಲ ಭೂತಗಳಲ್ಲಿ ಸರ್ವೋತ್ತಮನಾದ, ನಾಶರಹಿತನಾದ ನಾರಾಯಣನು ಏಕರೀತಿಯಾಗಿ ಇರುತ್ತಾನೆಂದು ತಿಳಿದು ಯಾವ ಪದಾರ್ಥವಲ್ಲಿದ್ದರೂ ಅದರ ಸಂಬಂಧವಿಲ್ಲದೆ ಇರುತ್ತಾನೆಂದು ತಿಳಿಯಬೇಕು. ಸರ್ವ ಪದಾರ್ಥಗಳಲ್ಲಿ ಇರತಕ್ಕ ಭಗವಂತನ ರೂಪಗಳಿಗೆ ಪರಸ್ಪರ ಭೇದವಿಲ್ಲವೆಂದು ತಿಳಿಯಬೇಕು. ಈ ರೀತಿ ತಿಳಿಯುತಕ್ಕ ಜ್ಞಾನವೇ ಸಾತ್ವಿಕ ಜ್ಞಾನವೆಂದು ಹೇಳುತ್ತಾರೆ.

ವಿಶೇಷಾರ್ಥ.—ಜಗತ್ಸೃಷ್ಟಿಕರ್ತನಾದ ನಾರಾಯಣನು "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬುವ ಶ್ರುತಿಯನ್ನು ಅನುಸರಿಸಿ ಜಗತ್ತನ್ನು ಸೃಷ್ಟಿಸಿ ತಾನು ಸೃಷ್ಟಿಸಿದ ಪ್ರತಿಯೊಂದು ಪದಾರ್ಥದಲ್ಲಿಯೂ ತಾನು ಪ್ರವೇಶಿಸಿದನೆಂದು ಹೇಳುವುದರಿಂದ ಸೃಷ್ಟಿಸಿದ ಪರಬ್ರಹ್ಮನಿಗೂ ಸೃಷ್ಟಿಸಲ್ಪಟ್ಟ ಪದಾರ್ಥಗಳಿಗೂ ಪರಸ್ಪರ ಭೇದವನ್ನು ಸೂಚಿಸಿದಂತಾಯಿತು ಮತ್ತು "ನೈಷಾಂಭೇದಃ ಕಥಂಚ್ಚನ" ಎಂಬುವ ಪ್ರಮಾಣಾನುಸಾರ ಭಗವಂತನ ಅವತಾರ ರೂಪಗಳಿಗೂ ಮೂಲ ರೂಪಕ್ಕೂ (ಅಂಶಿ) ಜಗತ್ತಿನಲ್ಲಿ ವ್ಯಾಪಿಸಿರುವ ರೂಪಕ್ಕೂ ಪರಸ್ಪರ ಭೇದವಿಲ್ಲವೆಂದೂ ತಿಳಿಯಬೇಕು.

**ಅವತಾರಿಕೆ.**—ವಿಷ್ಣು ಸರ್ವೋತ್ತಮನಾದುದರಿಂದ ಸರ್ವ ಕರ್ಮಗಳನ್ನೂ ಅವನ ಪ್ರೀತ್ಯರ್ಥವಾಗಿ ಮಾಡಬೇಕೆಂಬ ಗೀತಾ ವಾಕ್ಯವನ್ನು ಪ್ರಮಾಣಪೂರ್ವಕ ಸೂಚಿಸುತ್ತಾರೆ :—

**ಶ್ಲೋಕ|| ಸರ್ವಗುಹ್ಯತಮಂಭೂಯಃ ಶೃಣುಮೇಪರಮಂವಚಃ ||**
**ಇಷ್ಟೋಽಸಿಮೇದೃಢಮಿತಿ ತತೋವಕ್ಷ್ಯಾಮಿತೇಹಿತಂ ||೧೦೭||**

ಅರ್ಥ.—ಹೇ ಅರ್ಜುನ, ತ್ವಂ=ನೀನು, ಪರಮಂ=ಶ್ರೇಷ್ಠವಾದ, ಸರ್ವಗುಹ್ಯತಮಂ=ಸಕಲ ಅರ್ಥಗಳಲ್ಲಿ ಅತ್ಯಂತ ರಹಸ್ಯವಾದ, ವಚಃ= ವಾಕ್ಯವನ್ನ, ಭೂಯಃ=ಪುನಃ, ಶೃಣು=ಕೇಳು, ಮೇ=ನನಗೆ, ದೃಢಂ= ನಿಶ್ಚಯುವಾಗಿಯು (ನೀನು), ಇಷ್ಟೋಽಸಿ=ಇಷ್ಟನಾಗಿದ್ದಿ, ಇತಿ=ಆದ್ದರಿಂದ, ತೇ=ನಿನಗೆ, ತತಃ=ಅತಿ ಗೋಪ್ಯಾರ್ಥಗಳ ದೆಸೆಯಿಂದ, ಹಿತಂ=ಹಿತವನ್ನು, ವಕ್ಷ್ಯಾಮಿ=ಹೇಳುತ್ತೇನೆ.

ತಾತ್ಪರ್ಯ.—ಶ್ರೀ ಕೃಷ್ಣನು ತನ್ನ ಅತ್ಯಂತ ಭಕ್ತನಾದ ಅರ್ಜುನನಿಗೆ ಹೇಳುತ್ತಾನೆ :–ಎಲೈ ಅರ್ಜುನನೆ! ನಿನಗೆ ಅತ್ಯಂತ ಗೋಪ್ಯವಾದ ಮತ್ತು ಶ್ರೇಷ್ಠವಾದ ವಾಕ್ಯವನ್ನು ಹೇಳುತ್ತೇನೆ ಕೇಳು. ನೀನು ನನಗೆ ಇಷ್ಟನಾ ದ್ದರಿಂದಲೂ, ದೃಢಭಕ್ತನಾದ್ದರಿಂದಲೂ ನಿನಗೆ ಹಿತವಾದ ವಚನವನ್ನ ಹೇಳುತ್ತೇನೆ.

ವಿಶೇಷಾರ್ಥ.—ಭಕ್ತವತ್ಸಲನಾದ ನಾರಾಯಣನು ತನ್ನ ಭಕ್ತರು ಗಳ ಜ್ಞಾನ, ಕರ್ಮ, ರೂಪ, ಸಾಧನೆಗಳನ್ನು ಪ್ರತಿ ಕ್ಷಣದಲ್ಲಿಯೂ ನಡಿಸಿ ಅವುಗಳಿಂದ ತಾನು ಸಂತೋಷಪಟ್ಟು ಭಕ್ತರುಗಳಿಗೆ ಮೋಕ್ಷಾದಿ ಪುರುಷಾ ರ್ಥಗಳನ್ನ ಕೊಡುತ್ತಾನೆ. ಆದ್ದರಿಂದ ಭಕ್ತನಾದ ಅರ್ಜುನನನ್ನು ಕುರಿತು ಹಿತವಚನಗಳನ್ನ ಉಪದೇಶಿಸುತ್ತಾನೆ.

ಅವತಾರಿಕೆ.—ಪುನಃ ವಿಷ್ಣು ಸರ್ವೋತ್ತಮತ್ವದ ವಿಚಾರದಲ್ಲಿ ಯೂ, ಸರ್ವ ಕರ್ಮಗಳನ್ನ ಪರಮಾತ್ಮನಿಗೆ ಅರ್ಪಿಸುವ ವಿಚಾರದಲ್ಲಿಯೂ ಹೇಳುತ್ತಾರೆ :—

**ಶ್ಲೋಕ|| ಮನ್ಮನಾಭವಮದ್ಭಕ್ತೋ ಮದ್ಯಾಜೀಮಾಂನಮಸ್ಕುರು ||**
**ಮಾಮೇವೈಷ್ಯಸಿಸತ್ಯಂತೇ ಪ್ರತಿಜಾನೇಪ್ರಿಯೋಽಸಿಮೇ||೧೦೮||**

ಅರ್ಥ.—ಹೇ ಅರ್ಜುನ! ಮನ್ಮನಾಃ = ನನ್ನಲ್ಲೇ ಮನಸ್ಸುಳ್ಳವನು, ಭವ=ಆಗು, ಮದ್ಭಕ್ತಃ=ನನ್ನಲ್ಲೇ ಭಕ್ತಿ ಉಳ್ಳವನು, ಭವ = ಆಗು, ಮ ದ್ಯಾಜೀ=ನನ್ನ ಉದ್ದೇಶ್ಯವಾದ ಯಜ್ಞ ಉಳ್ಳವನು, ಭವ=ಆಗು, ಮಾಂ=

ನನ್ನನ್ನು, ನಮಃ-ನಮಸ್ಕಾರವನ್ನು, ಕುರು=ಮಾಡು, ಮಾಮೇವಾ=ನನ್ನನ್ನೇ, ಏಷ್ಯಸಿ=ಹೊಂದುತ್ತಿ, ಯತಃ=ಯಾವಕಾರಣದಿಂದ, ಮೇ=ನನಗೆ, ಪ್ರಿಯೋಸಿ=ಪ್ರಿಯನಾಗಿದ್ದೀಯೋ, ಅತಃ-ಆ ಕಾರಣದ ದೆಶೆಯಿಂದ, ತೇ=ನಿನಗೆ, ಸತ್ಯಂ=ಯಥಾರ್ಥವಾದದ್ದನ್ನು, ಪ್ರತಿಜಾನೇ=ತಿಳಿಸುತ್ತೇನೆ.

ತಾತ್ಪರ್ಯ.—ಶ್ರೀಕೃಷ್ಣನು ಅರ್ಜುನನಿಗೆ ಸರ್ವ ಕಾಲದಲ್ಲಿಯೂ ನನ್ನಲ್ಲಿ ಮನಸ್ಸುಳ್ಳವನಾಗು, ನನ್ನಲ್ಲಿ ಭಕ್ತಿಯನ್ನಿಡು, ನನ್ನ ಪ್ರೀತ್ಯರ್ಥವಾಗಿಯೇ ಯಜ್ಞವನ್ನು ಮಾಡು, ನನ್ನನ್ನೇ ನಮಸ್ಕರಿಸು, ಈ ರೀತಿಯಾಗಿ ಸೇವಿಸಿದರೆ ನನ್ನನ್ನೇ ಹೊಂದುತ್ತೀ, ನನಗೆ ಅತಿ ಪ್ರೀತಿಪಂತನಾದ್ದರಿಂದ ನಿನಗೆ ಸತ್ಯವಾದ ವಚನವನ್ನು ಹೇಳುತ್ತೇನೆ ಎಂದು ಹೇಳಿದನು.

ವಿಶೇಷಾರ್ಥ.—ಸರ್ವಲೋಕವನ್ನು ಸೃಷ್ಟಿಸುವ ನಾರಾಯಣನು ಸರ್ವರಿಗೂ ಸಮನು. ಆದರೆ ಅವರವರ ಉಪಾಸನೆಗಳಿಗೆ ತಕ್ಕಂತೆ ಫಲಗಳನ್ನು ಕೊಡುವನು. ಅಂದರೆ ಭಕ್ತರು ಮಾಡುವ ಭಕ್ತಿಯಿಂದಲೂ ಮಧ್ಯಮರು ತೋರಿಸುವ ಉದಾಸೀನದಿಂದಲೂ, ಅಧಮರು ಆಚರಿಸುವ ದ್ವೇಷದಿಂದಲೂ ಅವರವರ ಆಚರಣೆಗೆ ಅನುಸಾರವಾದ ಫಲವನ್ನು ಕೊಡುತ್ತಾನೆ ನಾರಾಯಣನು ಕೊಡುವ ಮೋಕ್ಷಕ್ಕೆ ಸಾಧನೆಯೂ ಹರಿಪೂಜಾ, ಹರಿನಮಸ್ಕಾರ, ಹರಿಧ್ಯಾನ, ಹರಿಭಕ್ತಿ ಇವುಗಳನ್ನು ಬಿಟ್ಟು ಬೇರೆ ಉಪಾಯಗಳಿಲ್ಲವೆಂದು ಹೇಳುತ್ತಾರೆ.

ಅವತಾರಿಕೆ.—ಜಗತ್ಸೃಷ್ಟಿಕರ್ತನಾದ ವಿಷ್ಣುವಿಗೆ ಸರ್ವೋತ್ಕೃಷ್ಟತ್ವವನ್ನು ಸೂಚಿಸುವ ಮೋಕ್ಷ ಧರ್ಮದ ವಚನವನ್ನು ಪ್ರಮಾಣತ್ವೇನ ಉದಾಹರಿಸುತ್ತಾರೆ.—

**ಶ್ಲೋಕ ॥ ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಸ್ಸ್ವಯಂ ।**
**ಸರ್ವೇಷ್ವೇತೇಷು ರಾಜೇಂದ್ರ ಜ್ಞಾನೇಷ್ವೇತದ್ವಿಶಿಷ್ಯತೆ ॥೧೯॥**

ಅರ್ಥ.-ಹೇ ರಾಜೇಂದ್ರ=ಹೇ ! ಜನಮೇಜಯರಾಯನೇ, ಕೃತ್ಸ್ನಸ್ಯ=ಸಮಸ್ತವಾದ, ಪಂಚರಾತ್ರಸ್ಯ=ಪಾಂಚರಾತ್ರಾಗಮವನ್ನು, ವಕ್ತಾ=ಹೇಳತಕ್ಕವನು, ನಾರಾಯಣಃ=ನಾರಾಯಣನು, ಸ್ವಯಂ=ತಾನೇ ಅದ್ದರಿಂದ, ಏತೇಷು-ಮುಂದೆ ಹೇಳಲ್ಪಡುವ, ಸರ್ವೇಷು=ಸರ್ವ ಶಾಸ್ತ್ರಗಳ, ಜ್ಞಾನೇ

ಷ-ಜ್ಞಾನಗಳಲ್ಲಿ, ಏತತ್=ಈ ಪಾಂಚರಾತ್ರಾಗಮದ ಜ್ಞಾನವು, ವಿಶಿಷ್ಯ ತೆ-ಶ್ರೇಷ್ಠವೆನಿಸುತ್ತದೆ

ತಾತ್ಪರ್ಯ.—ಜನಮೇಜಯರಾಯನನ್ನು ಕುರಿತು ವೈಶಂಪಾಯನರು ಹೇಳುತ್ತಾರೆ. ಎಲೌ ರಾಜನೇ ಸಮಸ್ತವಾದ ಪಾಂಚರಾತ್ರಾಗಮವನ್ನು ಉಪದೇಶಿಸುವವನು ಸಾಕ್ಷಾತ್ ನಾರಾಯಣನು ಸರ್ವ ಶಾಸ್ತ್ರಗಳನ್ನು ತಿಳಿಯುವುದರಿಂದ ಹುಟ್ಟುವ ಜ್ಞಾನಕ್ಕಿಂತಲೂ ಈ ಪಾಂಚರಾತ್ರಾಗಮದ ಅಧ್ಯಯನದಿಂದ ಹುಟ್ಟುವ ಜ್ಞಾನವು ಶ್ರೇಷ್ಠವು ಎಂದು ಹೇಳಿದನು.

ವಿಶೇಷಾರ್ಥ.—ಪ್ರಮಾಣ.—" ಸಾಂಖ್ಯಂಯೋಗಃ ಪಾಶುಪತಂ | ವೇದಾರಣ್ಯಕಮೇವಚ || ಜ್ಞಾನಾನ್ಯೇತಾನಿಭಿನ್ನಾನಿ | ಉತಾಹೋನೇತಿವಾ ಚ್ಯತಾಂ ||" ಎಂಬುವ ಪ್ರಮಾಣದಿಂದ ಜನಮೇಜಯರಾಯನು ವೈಶಂಪಾಯನರನ್ನು ಕುರಿತು—ಸ್ವಾಮಿ! ಸಾಂಖ್ಯ, ಯೋಗ, ಪಾಶುಪತ, ವೇದ, ಆರಣ್ಯಕ ಇವುಗಳು ಒಂದೇ ವಿಷಯವನ್ನು ಪ್ರತಿಪಾದನೆ ಮಾಡುತ್ತವೆ. ಎಂದು ಅಥವಾ ಭಿನ್ನವಿಷಯಕ ಜ್ಞಾನವನ್ನು ಪ್ರತಿಪಾದನೆ ಮಾಡುತ್ತವೆಯೋ? ಪ್ರಶ್ನೆಮಾಡಿದಾಗ, ವೈಶಂಪಾಯನರು ಎಲೌ ರಾಜನೇ ಪಾಶುಪತಾದಿಗಳಿಂದ ಹುಟ್ಟತಕ್ಕ ಜ್ಞಾನವು ಏಕವಿಷಯಕವಲ್ಲ. ಪರಸ್ಪರ ವಿರುದ್ಧಾರ್ಥಗಳನ್ನು ಹೇಳುತ್ತವೆ. ವೇದಾರಣ್ಯಕ, ಪಂಚರಾತ್ರ ಇವೆರಡಕ್ಕೂ ಏಕಾರ್ಥಕತ್ವ ಇದೆ ಎಂದು ಹೇಳಿ ಈ ಪಾಂಚರಾತ್ರವು ಸರ್ವಶ್ರೇಷ್ಠವೆಂದು ತಿಳಿಸಲು, ಶ್ರೀನಾರಾಯಣನಿಂದಲೇ ಉಕ್ತವಾದ್ದರಿಂದ ವಿಷ್ಣು ಸರ್ವೋತ್ತಮತ್ವ ವಿಚಾರದಲ್ಲಿ ಪಾಂಚರಾತ್ರಕ್ಕಿಂತಲೂ ಇನ್ನಾವುದೂ ಶ್ರೇಷ್ಠವಿಲ್ಲವೆಂದು ಹೇಳತಕ್ಕವರಾದರು.

ಅವತಾರಿಕೆ.-ಹಿಂದಿನ ಶ್ಲೋಕದಲ್ಲಿ ಪಾಂಚರಾತ್ರಾಗಮಕ್ಕೆ ಸರ್ವೋತ್ಕೃಷ್ಟತ್ವವನ್ನು ತಿಳಿಸಿದ್ದರಿಂದ ಪಾಶುಪತಾದಿಗಳು ಜ್ಞಾನಸಾಧನವಲ್ಲವೆಂತ ತಿಳಿದು ಸರ್ವಥಾ ಅವುಗಳ ಅಧ್ಯಯನ ಮಾಡತಕ್ಕದ್ದಲ್ಲವೆಂದರೆ, ಪೂರ್ತಿಯಾಗಿ ಬಿಡಬಾರದು, ಅವುಗಳಲ್ಲಿ ಕೆಲಕೆಲವು ಭಾಗಗಳಿಂದ ವಿಷ್ಣುಸರ್ವೋತ್ತಮತ್ವಕ್ಕೆ ಸಾಧಕವಾದ ವಿಷಯಗಳನ್ನು ಸ್ವೀಕರಿಸಲೇಬೇಕೆಂದು ತಿಳಿಸುತ್ತಾರೆ.

**ಶ್ಲೋಕ ॥ ಜ್ಞಾನೇಷ್ವೇತೇಷುರಾಜೇಂದ್ರ ಸಾಂಖ್ಯಪಾಶುಪತಾದಿಷು ॥**
**ಯಥಾಯೋಗಂಯಥಾನ್ಯಾಯಂ ನಿಷ್ಠಾನಾರಾಯಣಃಪರಃ ॥೧೧೦॥**

ಅರ್ಥ.— ಹೇ ರಾಜೇಂದ್ರ=ಓ ರಾಜಶ್ರೇಷ್ಠನೇ, ಏತೇಷು=ಇಂತಹ ಸಾಂಖ್ಯಪಾಶುಪತಾದಿಷು=ಸಾಂಖ್ಯ ಪಾಶುಪತಶಾಸ್ತ್ರ ಮೊದಲಾದವುಗಳ ಸಂಬಂಧವಾದ, ಜ್ಞಾನೇಷು=ಜ್ಞಾನಗಳಲ್ಲಿ ಅಥವಾ ಶಾಸ್ತ್ರಗಳಲ್ಲಿ, ಯಥಾಯೋಗಂ=ಯೋಗವನ್ನು ಬಿಡದೆ, ಯಥಾನ್ಯಾಯಂ=ನ್ಯಾಯವನ್ನು ಬಿಡದೆ ಪರಃ-ಸರ್ವೋತ್ತಮನಾದ, ನಾರಾಯಣಃ=ನಾರಾಯಣನು, ನಿಷ್ಠಾ=ಹೇಳಿಸಿಕೊಳ್ಳಲ್ಪಡುತ್ತಾನೆ.

ತಾತ್ಪರ್ಯ.- ಸಾಂಖ್ಯ, ಪಾಶುಪತಶಾಸ್ತ್ರ ಸಂಬಂಧವಾದ ಇತರ ಶಾಸ್ತ್ರಗಳಲ್ಲಿ ಯೋಗದಿಂದಲೂ, ನ್ಯಾಯದಿಂದಲೂ ನಾರಾಯಣನಿಗೇನೇ ಸರ್ವೋತ್ಕೃಷ್ಟತ್ವವು ಹೇಳಲ್ಪಡುತ್ತದೆ ಎಂದು ತಿಳಿಯಬೇಕು.

ವಿಶೇಷಾರ್ಥ.- ಸಾಂಖ್ಯಶಾಸ್ತ್ರ, ಪಾಶುಪತಶಾಸ್ತ್ರ ಇವೇ ಮೊದಲಾದ ಶಾಸ್ತ್ರಗಳಿಂದ ವಿಷ್ಣು ಸರ್ವೋತ್ತಮತ್ವವನ್ನು ತಿಳಿಯಲು ಕಷ್ಟವಾದ ಪ್ರಯುಕ್ತ ಪಾಂಚರಾತ್ರಾಗಮದಲ್ಲಿ ಶ್ರೀಹರಿಯೇ ಉತ್ಕೃಷ್ಟವೆಂದು ವ್ಯವಸ್ಥೆಮಾಡಿರುವುದರಿಂದ ಜ್ಞಾನಸಾಧನಕ್ಕೆ ಪಾಂಚರಾತ್ರವೇ ಶ್ರೇಷ್ಠವೆಂದು ತಿಳಿಯಬೇಕು.

ಅವತಾರಿಕೆ.--ಪರಮ ಶ್ರೇಷ್ಠವಾದ ಪಾಂಚರಾತ್ರಾಗಮವನ್ನು ತಿಳಿದು ಅದರಂತೆ ಶ್ರೀಹರಿಯನ್ನು ಸೇವಿಸುವವರಿಗೆ ಭಕ್ತಿಮೂಲಕ ಮೋಕ್ಷವಾಗುತ್ತವೆಯೆಂದು ಹೇಳುತ್ತಾರೆ.

**ಶ್ಲೋಕ ॥ ಪಂಚರಾತ್ರವಿದೋಮುಖ್ಯಾ ಯಥಾಕ್ರಮಪರಾನ್ನೃಪ ।**
**ಏಕಾಂತಭಾವೋಪಗತಾ ವಾಸುದೇವಂವಿಶಂತಿತೇ ॥೧೧೧॥**

ಅರ್ಥ.- ಹೇ ನೃಪ-ಓ ರಾಜನೇ, ಪಂಚರಾತ್ರವಿದಃ=ಪಂಚರಾತ್ರಾಗಮವನ್ನು ತಿಳಿದ, ಮುಖ್ಯಾ=ಶ್ರೇಷ್ಠರು, ಯಥಾಕ್ರಮಪರಾಃ=ತಾರತಮ್ಯಜ್ಞಾನವಿಶಿಷ್ಟರಾಗಿ, ಏಕಾಂತಭಾವೋಪಗತಾಃ=ಪರಮಾತ್ಮನಲ್ಲಿ ಅತ್ಯಂತ ಭಕ್ತಿ ಉಳ್ಳವರಾದರೆ, ತೇ=ಅವರು, ವಾಸುದೇವಂ=ಸರ್ವತ್ರ ವ್ಯಾಪ್ತನಾದ ನಾರಾಯಣನಲ್ಲಿ, ವಿಶಂತಿ=ಪ್ರವೇಶಿಸುತ್ತಾರೆ.

ತಾತ್ಪರ್ಯ.-ಪಾಂಚರಾತ್ರಾಗಮದ ಸರ್ವ ಸಾರವನ್ನು ತಿಳಿದು ತಾರತಮ್ಯ ಜ್ಞಾನದಿಂದ ಯುಕ್ತರಾಗಿ ಪರಮಾತ್ಮನಲ್ಲಿ ಹೆಚ್ಚಾದ ಭಕ್ತಿಭಾವವನ್ನು ಇಟ್ಟ ಭಕ್ತರುಗಳು ವಾಸುದೇವನಲ್ಲಿ ಸಾಯುಜ್ಯವನ್ನು ಹೊಂದುತ್ತಾರೆ.

ವಿಶೇಷಾರ್ಥ.-ಪಂಚರಾತ್ರಾಗಮದಲ್ಲಿ ವಿಷ್ಣುವಿನ ಸರ್ವೋತ್ತಮತ್ವವೇ ಅಲ್ಲದೆ ದೇವತಾ ತಾರತಮ್ಯವೂ ಹೇಳಲ್ಪಟ್ಟಿದೆ. ಆದ್ದರಿಂದ ತಾರತಮ್ಯಪೂರ್ವಕವಾದ ವಿಷ್ಣು ಸರ್ವೋತ್ತಮತ್ವ ಜ್ಞಾನವೇ ಮೋಕ್ಷಸಾಧಕವೆಂದು ತಿಳಿಯಬೇಕು. ಈ ಜ್ಞಾನದಿಂದ ಶ್ರೀಹರಿಯ ಅನುಗ್ರಹಕ್ಕೆ ಪಾತ್ರರಾಗಿ ವಾಸುದೇವನ ಅತ್ಯರ್ಥಪ್ರಸಾದ ಹೊಂದುತ್ತಾರೆ. ಪ್ರಮಾಣ.—ಯಮೇವೈಷವೃಣುತೇತೇನಲಭ್ಯಃ.

ಅವತಾರಿಕೆ.-ವಿಷ್ಣುವಿನ ಸರ್ವೋತ್ತಮತ್ವದ ವಿಚಾರದಲ್ಲಿ ಪ್ರಮಾಣವನ್ನು ಹೇಳುತ್ತಾರೆ.-ಜನಮೇಜಯ ಉವಾಚ.--

ಶ್ಲೋಕ॥ ಬಹವಃ ಪುರುಷಾಃ ಬ್ರಹ್ಮನ್ನುತಾಹೋ ಏಕಏವತು ।
ಕೋಹ್ಯತ್ರ ಪುರುಷಶ್ರೇಷ್ಠಸ್ತಂಭವಾನ್ವಕ್ತುಮರ್ಹಸಿ ॥೧೧೨॥

ಅರ್ಥ.--ಜನಮೇಜಯರಾಯನು ಪ್ರಶ್ನೆಮಾಡುತ್ತಾನೆ.-ಹೇ ! ಬ್ರಹ್ಮನ್=ಓ ! ಜ್ಞಾನಿಗಳಾದ ವೈಶಂಪಾಯನಾಚಾರ್ಯರೇ, ಪುರುಷಾಃ=ಪುರುಷರು, ಬಹವಃ-ಅನೇಕರೋ, ಉತ-ಅಥವಾ, ಏಕಏವ=ಒಬ್ಬನೇನೋ, ಅತ್ರ-ಈ ಪುರುಷರುಗಳು ಅನೇಕರಾಗಿದ್ದಪಕ್ಷದಲ್ಲಿ ಅವರುಗಳಲ್ಲಿ, ಶ್ರೇಷ್ಠಃ=ಶ್ರೇಷ್ಠನಾದ, ಪುರುಷಃ=ಪುರುಷನು, ಕಃ-ಯಾರು, ತಂ=ಅಂತಹ ಪುರುಷಶ್ರೇಷ್ಠನನ್ನು, ಭವಾನ್=ನೀವು, ವಕ್ತುಂ-ಹೇಳುವುದಕ್ಕೆ, ಅರ್ಹಸಿ=ಅರ್ಹರಾಗಿದ್ದೀರಿ.

ತಾತ್ಪರ್ಯ.-ಲೋಕದಲ್ಲಿ ಪುರುಷರು ಎಂಬುವರು ಒಬ್ಬನೇ ಅಥವಾ ಬಹುಮಂದಿಗಳೇ ? ಬಹುಮಂದಿ ಪುರುಷರು ಆದ ಪಕ್ಷದಲ್ಲಿ ಪುರುಷಶ್ರೇಷ್ಠನು ಯಾರು ? ಅದನ್ನು ತಿಳಿಸುವುದಕ್ಕೆ ತಾವು ಶಕ್ತರಾಗಿದ್ದೀರಿ. ಆದ್ದರಿಂದ ನನಗೆ ಅದನ್ನು ತಿಳಿಸಿ, ಎಂದು ಜನಮೇಜಯರಾಯನು ವೈಶಂಪಾಯನರನ್ನು ಕೇಳಿದನು.

ವಿಶೇಷಾರ್ಥ:— "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ" ಎಂಬುವ ಗೀತಾನುಸಾರ ಪುರುಷೋತ್ತಮನ ವಿಷಯಕವಾದ ಜ್ಞಾನವು ಮೋಕ್ಷ ಸಾಧಕವು. ಸರ್ವ ಶಾಸ್ತ್ರಗಳಿಂದಲೂ ತಿಳಿಯಬೇಕಾದುದು ಈ ಪುರುಷೋತ್ತಮನ ಜ್ಞಾನವೇ ಆದುದರಿಂದ ಜನಮೇಜಯರು ವೈಶಂಪಾಯನರನ್ನು ಪ್ರಶ್ನೆ ಮಾಡಿದರು

ಅವತಾರಿಕೆ:—ಪೂರ್ವೋಕ್ತ ಪ್ರಕಾರವಾಗಿ ಜನಮೇಜಯರಾಯನಿಂದ ಪ್ರಶ್ನೆ ಮಾಡಿಸಿಕೊಳ್ಳಲ್ಪಟ್ಟ ವೈಶಂಪಾಯನಾಚಾರ್ಯರು ಅವರಿಗೆ ತಿಳಿದ ಪುರುಷೋತ್ತಮನ ವಿಷಯವನ್ನು ಹೇಳುತ್ತಾರೆ:—

ವೈಶಂಪಾಯನ ಉವಾಚ:—

ಶ್ಲೋಕ॥ ನೈತದಿಚ್ಛಂತಿಪುರುಷಮೇಕಂಕುರುಕುಲೋದ್ವಹ।
ಬಹೂನಾಂಪುರುಷಾಣಾಂಹಿಯಥೈಕಾಯೋನಿರುಚ್ಯತೇ।
ತಥಾತಂಪುರುಷಂವಿಶ್ವಮಾಖ್ಯಾಸ್ಯಾಮಿಗುಣಾಧಿಕಂ ॥೧೩॥

ಅರ್ಥ:—ವೈಶಂಪಾಯನರು ಹೇಳುತ್ತಾರೆ:— ಹೇ ಕುರುಕುಲೋದ್ವಹ-ಓ! ಕುರುಕುಲದಲ್ಲಿ ಜನಿಸಿದ ಜನಮೇಜಯನೇ, ಏಕಂ-ಒಬ್ಬನೇ (ಪುರುಷನು ಒಬ್ಬನೇ ಎಂಬುವದನ್ನ ಅಂಗೀಕರಿಸುವುದಿಲ್ಲ.) ಪುರುಷಂ-ಪುರುಷನನ್ನು ಏತತ್-ಅನ್ನುವದು, ನೇಚ್ಛಂತಿ ಇಚ್ಛಿಸುವುದಿಲ್ಲ (ಅಂಗೀಕರಿಸುವುದಿಲ್ಲ.) ಯಥಾ-ಹ್ಯಾಗೆ, ಬಹೂನಾಂ-ಅನೇಕವಾದ, ಪುರುಷಾಣಾಂ-ಪುರುಷರುಗಳಿಗೆ, ಯೋನಿಃ-ಉತ್ಪತ್ತಿ ಕಾರಣನು ಏಕಾ-ಒಬ್ಬನೇ ಎಂದು, ಉಚ್ಯತೇ-ಹೇಳಲ್ಪಡುತ್ತಾನೊ, ತಂ-ಅಂಥ, ವಿಶ್ವಂ-ಪೂರ್ಣನಾದ, ಗುಣಾಧಿಕಂ-ಗುಣಶ್ರೇಷ್ಠನಾದಂಥ, ಪುರುಷಂ-ಪುರುಷನನ್ನು, ಆಖ್ಯಾಸ್ಯಾಮಿ-ಹೇಳುತ್ತೇನೆ.

ತಾತ್ಪರ್ಯ:— ವೈಶಂಪಾಯನರು ಹೇಳುತ್ತಾರೆ:— ಜನಮೇಜಯನೇ ಕೇಳು "ಪುರುಷನು ಒಬ್ಬನೇ ಅನ್ನುವದು ಸರಿಯಲ್ಲ, ಪುರುಷರು ಅನೇಕರಿದ್ದಾರೆ. ಅಂಥ ಬಹು ಪುರುಷರುಗಳಿಗೆ ಉತ್ಪತ್ತಿ ಕಾರಣವಾದುದು ಒಂದು ವಸ್ತು ಇದೆ. ಆ ವಸ್ತುವೇ ಗುಣಪೂರ್ಣನಾದ ಪುರುಷಶಬ್ದವಾಚ್ಯನಾದ ಪರಬ್ರಹ್ಮನು" ಎಂದು ಹೇಳುತ್ತೇನೆ.

ವಿಶೇಷಾರ್ಥ:—ಅನೇಕ ಜೀವರುಗಳಿಗೆ ಉತ್ಪತ್ತಿ ಕಾರಣನಾದ ಮತ್ತು ಗುಣಪೂರ್ಣನಾದ ಪರಬ್ರಹ್ಮನ ಜ್ಞಾನವು ಅತ್ಯಾವಶ್ಯಕ ಅವನೇ ಜಗಜ್ಜನ್ಮಾದಿ ಕಾರಣನೆಂತಲೂ ತಿಳಿಯಬೇಕೆಂಬುದೆ ಮುಖ್ಯ ತಾತ್ಪರ್ಯ.

ಅವತಾರಿಕೆ:—ಬ್ರಹ್ಮದೇವರ ಮತ್ತು ರುದ್ರದೇವರ ಪ್ರಶ್ನೋತ್ತರ ರೂಪ ವಾದ ಇತಿಹಾಸದಿಂದ ವಿಷ್ಣು ಸರ್ವೋತ್ತಮತ್ವವನ್ನು ಸಾಧಿಸುತ್ತಾರೆ.

ಶ್ಲೋ|| ಆಹಬ್ರಹ್ಮೈಕಮೇವಾರ್ಥಂ ಮಹಾದೇವಾಯ ಪೃಚ್ಛತೇ||
ತಸ್ಯೈಕಸ್ಯ ಮಮತ್ವಂಹಿ ಸಚೈಕಃಪುರುಷೋವಿರಾಟ್ ||೧೦||

ಅರ್ಥ:—ಬ್ರಹ್ಮ-ಬ್ರಹ್ಮದೇವನು, ಪೃಚ್ಛತೆ-ಪ್ರಶ್ನೆ ಮಾಡಿದ, ಮಹಾದೇವಾಯ-ರುದ್ರದೇವರಿಗೆ, ಏಕಮೇವ-ಒಬ್ಬನೇ (ಎಂಬ), ಅರ್ಥಂ-ಅರ್ಥವನ್ನು, ಆಹ-ಹೇಳಿದನು, ಸಚ-ಅವನೇ, ವಿರಾಟ್-ವಿಶೇಷವಾಗಿ ಪ್ರಕಾಶಮಾನನಾದಂಥ, ಪುರುಷಃ-ಪುರುಷನು, ಏಕಃ ಒಬ್ಬನು, ತಸ್ಯ-ಅಂಥ, ಏಕಸ್ಯ-ಒಬ್ಬನಾದವನನ, ಮಮತ್ವಂ-ನನ್ನದು ಎಂಬ ಬುದ್ಧಿಯು, ಹಿ-ಇದ್ದಿತು.

ತಾತ್ಪರ್ಯ — ಪ್ರಶ್ನೆ ಮಾಡಿದ ರುದ್ರದೇವರನ್ನು ಕುರಿತು, ಎಲೈ! ರುದ್ರನೇ; ಯಾವ ಪುರುಷನು ತಾನು ಒಬ್ಬನೇ ಪ್ರಕಾಶಮಾನನೋ ಅಂಥ ಒಬ್ಬ ಪುರುಷನಿಗೇ ನನ್ನನು ಎಂಬ ಬುದ್ಧಿ ಇದೆ ಅವನೇ ಸರ್ವೋತ್ತಮನು ಮತ್ತು ಪುರುಷ ಶ್ರೇಷ್ಠನು ಎಂದು ಬ್ರಹ್ಮದೇವರು ಹೇಳಿದರು.

ವಿಶೇಷಾರ್ಥ.—ಬ್ರಹ್ಮ, ರುದ್ರ ಸಂವಾದದಲ್ಲಿ ವಿಶೇಷ ಪ್ರಕಾಶಮಾನನಾದ ಪುರುಷ ಒಬ್ಬನೇ ಎಂದು ಹೇಳಿದ್ದರಿಂದ ಪ್ರಕಾಶತ್ವ ರೂಪ ಧರ್ಮವುಳ್ಳ ವಹ್ನಿ, ಸೂರ್ಯ, ಚಂದ್ರ ಇವರೇ ಮೊದಲಾದ ಪ್ರಕಾಶಕ ವಸ್ತುಗಳಿಗೆ ತನ್ನಲ್ಲಿರುವ ಪ್ರಕಾಶವನ್ನು ಕೊಟ್ಟು ಜಗತ್ತನ್ನು ಪ್ರಕಾಶಿಸುವವನೇ ಪರಬ್ರಹ್ಮನೆಂದು ತಿಳಿಯಬೇಕು

ಅವತಾರಿಕೆ.—ಪುನಃ ಬ್ರಹ್ಮ ರುದ್ರ ಸಂವಾದರೂಪ ಇತಿಹಾಸದಿಂದ ಶ್ರೀ ವಿಷ್ಣುವಿಗೆ ಉತ್ತಮತ್ವವನ್ನು ಸಾಧಿಸುತ್ತಾರೆ :—

ದಿಭಿಃ-ಬ್ರಹ್ಮ-ಬ್ರಹ್ಮದೇವರು, ಈಶಾನ ಖದ್ರದೇವರು, ಇವರೇ, ಆದಿಭಿಃ-ಮೊದಲಾಗಿ ಉಳ್ಳಂಥ, ದೇವೈಃ-ದೇವತೆಗಳಿಂದ, ಸರ್ವದಾ-ಸರ್ವಕಾಲದಲ್ಲಿಯೂ, ವ್ಯಾಚಕ್ಷಾಣೈಶ್ಚ-ವಿಚಾರವಮಾಡಿದರೂ, ಯದ್ಗುಣಾಂಶಕಃ- ಯತ್-ಯಾವ ನಾರಾಯಣನ, ಗುಣಾಂಶಕಃ-ಗುಣೈಕ ದೇಶವು, ಅವಸಾಯಯಿತುಂ-ಮುಗಿಸುವುದಕ್ಕೆ, ಶಕ್ಯಃ-ಶಕ್ಯವಲ್ಲ.

ತಾತ್ಪರ್ಯ—ಅಣ್ಣನಾದ ಧರ್ಮರಾಜನೇ, ಬ್ರಹ್ಮಾದಿ ದೇವತೆಗಳು ಸರ್ವರೂ ಕೂಡಿ ಸರ್ವ ಕಾಲದಲ್ಲಿಯೂ ವಿಚಾರ ಮಾಡಿ ತಿಳಿದರೂ, ಆ ನಾರಾಯಣನ ಗುಣಗಳಲ್ಲಿ ಏಕದೇಶವನ್ನು ಮುಗಿಸಲು ಶಕ್ತರಲ್ಲವೆಂದು ಭೀಮಸೇನದೇವರು ಹೇಳಿದರು

ವಿಶೇಷಾರ್ಥ:—ನಿತ್ಯ ಮುಕ್ತಳಾದ ರಮಾ ದೇವಿಯು ಕಾಲ ದೇಶಗಳಲ್ಲಿ ವ್ಯಾಪ್ತಳಾದರೂ, ಪರಮಾತ್ಮನ ಗುಣಗಳನ್ನ ಸಾಕಲ್ಯೇನ ತಿಳಿಯಲು ಶಕ್ತಳಲ್ಲ. ಹೀಗಿರುವಾಗ ಬ್ರಹ್ಮಾದಿಗಳು ತಿಳಿಯಲಾರರು ಎಂದು ಹೇಳತಕ್ಕದ್ದೇನು.

ಅವತಾರಿಕೆ:—ಯಾವ ದೇವರು ಬ್ರಹ್ಮ, ರುದ್ರಾದಿಗಳಿಂದ ತಿಳಿಯಲು ಅಶಕ್ಯನೋ, ಅವನೇ ಶ್ರೀಕೃಷ್ಣನೆಂದು ಹೇಳುತ್ತಾರೆ:—

ಶ್ಲೋ॥ ಸಏವಭಗವಾನ್ ಕೃಷ್ಣೋ ನೈವ ಕೇವಲಮಾನುಷಃ॥
ಯಸ್ಯಪ್ರಸಾದಜೋಬ್ರಹ್ಮ ರುದ್ರಶ್ಚಕ್ರೋಧಸಂಭವಃ ॥೧೧೭॥

ಅರ್ಥ.—ಯಸ್ಯ-ಯಾವ ನಾರಾಯಣನ, ಪ್ರಸಾದಜಃ-ಪ್ರಸಾದ ಅನುಗ್ರಹದಿಂದ ಜಃ-ಉತ್ಪನ್ನರಾದವರು, ಬ್ರಹ್ಮ-ಬ್ರಹ್ಮದೇವರು, ರುದ್ರಶ್ಚ-ರುದ್ರದೇವರಾದರೂ, ಕ್ರೋಧಸಂಭವ -ಕ್ರೋಧ-ಕ್ರೋಧದಿಂದ, ಸಂಭವ -ಉತ್ಪನ್ನರಾದರೋ ಸಏವ-ಆ ನಾರಾಯಣನೇ, ಭಗವಾನ್-ಷಡ್ಗುಣೈಶ್ವರ್ಯನಾದ ಪೂರ್ಣನಾದ, ಶ್ರೀಕೃಷ್ಣಃ-ಕೃಷ್ಣನು, ನೈವ ಕೇವಲಮಾನುಷಃ-ಕೇವಲ ಮನುಷ್ಯನೇ (ಆತನು) ಅಲ್ಲ

ತಾತ್ಪರ್ಯ =ಭೀಮಸೇನದೇವರು ಅಣ್ಣನಾದ ಧರ್ಮರಾಯನನ್ನು ಕುರಿತ ಯಾವ ನಾರಾಯಣನ ಪ್ರಸಾದದಿಂದ ಬ್ರಹ್ಮ ಹುಟ್ಟಿದನೋ ಮತ್ತು

ಯಾವ ನಾರಾಯಣನ ಕ್ರೋಧದಿಂದ ರುದ್ರ ಹುಟ್ಟಿದನೋ ಆ ನಾರಾಯಣನೇ ಷಡ್ಗುಣೈಶ್ವರ್ಯ ಪೂರ್ಣನಾದ ಶ್ರೀ ಕೃಷ್ಣನು. ಈ ಕೃಷ್ಣನು ಕೇವಲ ಮನುಷ್ಯನೆಂದು ತಿಳಿಯಬೇಡ ಎಂದು ಹೇಳಿದರು.

ವಿಶೇಷಾರ್ಥ—ಜ್ಞಾನಾನಂದ ಪರಿಪೂರ್ಣನಾದ ಪರಬ್ರಹ್ಮನು ಮನುಷ್ಯತ್ವೇನ ಅವತರಿಸಿದರೂ ಚಿದಾನಂದಾತ್ಮಕ ಶರೀರ ಉಳ್ಳವನೇ ಹೊರತು ಮನುಷ್ಯ ಶರೀರಿಯಲ್ಲ. ಇಂಥಾ ಸ್ವಾಮಿಯೇ ಸೃಷ್ಟಿ, ಸ್ಥಿತಿ ಲಯಾದಿಗಳಿಗೆ ಕಾರಣನೇ ಹೊರತು ಬೇರೆ ಯಾರೂ ಅಲ್ಲ.

**ಅವತಾರಿಕೆ.**—ಮುಕ್ತರಾದ ಬ್ರಹ್ಮಾದಿ ಅಶೇಷ ಚೇತನರು ಶ್ರೀನಾರಾಯಣನ ಆಶ್ರಯವುಳ್ಳವರು ಮತ್ತು ಅಧೀನರೆಂದು ಕುಂತೀ ಪುತ್ರನಾದ ಧರ್ಮಜನಿಗೆ ಶ್ರೀ ಕೃಷ್ಣನು ಉಪದೇಶಿಸಿದ ಭಾಗವನ್ನು ತಿಳಿಸುತ್ತಾರೆ :—

**ಶ್ಲೋಕ|| ವಚನಂಚೈವಕೃಷ್ಣಸ್ಯಜೇಷ್ಠಂಕುಂತೀಸುತಂಪ್ರತಿ ||೧೧೮||**

**ಶ್ಲೋಕ|| ಋದ್ರಂಸಮಾಶ್ರಿತಾದೇವಾಃ ಋದ್ರೋಬ್ರಹ್ಮಾಣಮಾಶ್ರಿತಃ||**
**ಬ್ರಹ್ಮಾಮಾಮಾಶ್ರಿತೋನಿತ್ಯಂ ನಾಹಂಕಂಚಿದುಪಾಶ್ರಿತಃ||೧೧೯||**

ಅರ್ಥ.—ಜೇಷ್ಠಂ=ದೊಡ್ಡವನಾದ, ಕುಂತೀಸುತಂಪ್ರತಿ = ಕುಂತೀ ಪುತ್ರನಾದ ಧರ್ಮರಾಜನನ್ನು ಕುರಿತು ಹೇಳಿದ, ಕೃಷ್ಣಸ್ಯ=ಶ್ರೀ ಕೃಷ್ಣದೇವರ, ವಚನಂಚ=ವಾಕ್ಯವೂ ಇದೇ ರೀತಿ ಇದೆ (ಅದೇನೆಂದರೆ) ಋದ್ರಂ=ಋದ್ರದೇವರನ್ನ, ದೇವಾಃ = ದೇವತೆಗಳು, ಸಮಾಶ್ರಿತಾಃ=ಆಶ್ರಯಿಸಿರುವರು, ರುದ್ರಃ-ಋದ್ರದೇವರು, ಬ್ರಹ್ಮಾಣಂ = ಬ್ರಹ್ಮದೇವರನ್ನ, ಆಶ್ರಿತಃ=ಆಶ್ರಯಿಸಿರುವರು, ಬ್ರಹ್ಮಃ=ಬ್ರಹ್ಮದೇವರು, ಮಾಂ=ನನ್ನನ್ನ, ನಿತ್ಯಂ=ನಿರಂತರದಲ್ಲಿಯೂ, ಆಶ್ರಿತಃ = ಆಶ್ರಯಿಸಿರುವನು, ಅಹಂ=ನಾನು, ಕಂಚಿತ್= ಯಾರನ್ನೂ, ನೊಪಾಶ್ರಿತಃ-ಆಶ್ರಯಿಸಿದವನಲ್ಲ.

ತಾತ್ಪರ್ಯ.—ಶ್ರೀ ಕೃಷ್ಣನು ಧರ್ಮರಾಜನಿಗೆ ಉಪದೇಶಿಸಿದುದು ಏನೆಂದರೆ-ಧರ್ಮಜನೇ ! ದೇವತೆಗಳು ಋದ್ರನನ್ನು ಆಶ್ರಯಿಸಿರುವರು, ಋದ್ರನು ಬ್ರಹ್ಮನನ್ನು ಆಶ್ರಿಸಿರುವನು, ಬ್ರಹ್ಮನು ನನ್ನನ್ನು ಆಶ್ರಯಿಸಿರುವನು. ನಾನಾದರೋ ಯಾರನ್ನೂ ಆಶ್ರಯಿಸಿದವನಲ್ಲ.

ವಿಶೇಷಾರ್ಥ.—ಆಶ್ರಯವೆಂದರೆ ಆಶ್ರಯಿಸಿದವನ ದುಃಖಗಳನ್ನು ಪರಿಹರಿಸಿ ಸುಖವನ್ನುಂಟುಮಾಡುವುದು. ಬ್ರಹ್ಮಾದಿ ಅಶೇಷ ಜೀವರು ಪ್ರಾಕೃತ ಶರೀರವುಳ್ಳವರಾದ್ದರಿಂದ ದುಃಖವುಳ್ಳವರು. ದುಃಖರಹಿತನಾದ ಶ್ರೀ ಕೃಷ್ಣರೂಪಿಯಾದ ನಾರಾಯಣನನ್ನು ಆಶ್ರಯಿಸುವುದು ಏಕೆಂದರೆ— ಸರ್ವರ ದುಃಖವನ್ನು ಪರಿಹರಿಸಿ ಸುಖ ಕೊಡುತ್ತಾನಾದ್ದರಿಂದ ಬ್ರಹ್ಮಾದಿ ಗಳು ಆತನನ್ನ ಆಶ್ರಯಿಸಿದವರೆಂದು ಅಭಿಪ್ರಾಯ.

**ಅವತಾರಿಕೆ.**—ಹಿಂದಿನ ಶ್ಲೋಕದಲ್ಲಿ ಬ್ರಹ್ಮಾದಿಗಳು ನಾರಾಯಣ ನನ್ನ ಆಶ್ರಯಿಸಿದರೆಂದು ಹೇಳಿದರು. ಅದು ಹೇಗೆ ಎಂಬುದನ್ನು ಈ ಶ್ಲೋಕದಲ್ಲಿ ದೃಷ್ಟಾಂತದಿಂದ ಹೇಳುತ್ತಾರೆ :—

**ಶ್ಲೋಕ॥ ಯಥಾಽಶ್ರಿತಾನಿಜ್ಯೋತೀಂಷಿ ಜ್ಯೋತಿಶ್ರೇಷ್ಠಂದಿವಾಕರಂ ॥**
**ಏವಂಮುಕ್ತಗಣಾಸರ್ವೇವಾಸುದೇವಮುಪಾಶ್ರಿತಾಃ ॥೧೨॥**

ಅರ್ಥ.–ಯಥಾ=ಹೇಗೆ, ಜ್ಯೋತೀಂಷಿ=ನಕ್ಷತ್ರ, ಚಂದ್ರ, ಅಗ್ನಿ ಮೊದ ಲಾದ ಪ್ರಕಾಶ ವಸ್ತುಗಳು, ಜ್ಯೋತಿಶ್ರೇಷ್ಠಂ=ಶ್ರೇಷ್ಠವಾದ ಪ್ರಕಾಶವುಳ್ಳ, ದಿವಾಕರಂ–ಸೂರ್ಯನನ್ನು, ಆಶ್ರಿತಾನಿ=ಆಶ್ರಯಿಸಿವೆಯೋ, ಏವಂ=ಹಾಗೆಯೆ ಸರ್ವೇ=ಸಮಸ್ತವಾದ, ಮುಕ್ತಗಣಾಃ = ಮುಕ್ತಚೇತನರ ಗುಂಪುಗಳು, ವಾಸುದೇವಂ=ವಸುದೇವನಾಮಕ ಶ್ರೀ ನಾರಾಯಣನನ್ನು, ಉಪಾಶ್ರಿತಾಃ= ಆಶ್ರಯಿಸಿರುವವು.

ತಾತ್ಪರ್ಯ.—ಪ್ರಕಾಶ ವಿಶೇಷವುಳ್ಳ ಸೂರ್ಯನನ್ನು ನಕ್ಷತ್ರ, ಚಂದ್ರ, ಅಗ್ನಿ ಮೊದಲಾದ ಪ್ರಕಾಶ ವಸ್ತುಗಳು ಆಶ್ರಯಿಸಿರುವಂತೆ ವಾಸುದೇವ ನನ್ನು ಸರ್ವ ಮುಕ್ತ ಜೀವರುಗಳು ಆಶ್ರಯಿಸಿರುತ್ತಾರೆ.

ವಿಶೇಷಾರ್ಥ.—ಸರ್ವ ಪ್ರಕಾಶ ವಸ್ತುಗಳಿಗೂ ಪ್ರಕಾಶ ಪಡಿಸುವ ಶಕ್ತಿಯನ್ನು ಅನುಗ್ರಹಿಸುವ ನಾರಾಯಣನು ತನ್ನ ನೇತ್ರದಿಂದ ಉದ್ಭವಿಸಿದ ಸೂರ್ಯನಿಗೆ ಶ್ರೇಷ್ಠವಾದ ಪ್ರಕಾಶವನ್ನು ಕೊಟ್ಟು ಇತರ ಪ್ರಕಾಶ ವಸ್ತುಗ ಳನ್ನ ಸೂರ್ಯನ ಅಧೀನದಲ್ಲಿ ಇಟ್ಟಿರುವಂತೆ ಸೂರ್ಯಾದಿ ಸರ್ವ ಪ್ರಕಾಶ ವಸ್ತುಗಳು ಮತ್ತೂ ಬ್ರಹ್ಮಾದಿ ಚೇತನರುಗಳು ವಾಸುದೇವನ ಅಧೀನ ದಲ್ಲಿದ್ದು ಸುಖಪಡುತ್ತಾರೆ.

**ಅವತಾರಿಕೆ.**—ಭಾರತ ಗ್ರಂಥವು ಸಕಲ ಅರ್ಥಗಳನ್ನು ನಿಶ್ಚಯ ಪಡಿಸುವುದು ಎಂಬ ಬವಿಷ್ಯತ್ಪರ್ವದಲ್ಲಿರುವ ವೇದ ವ್ಯಾಸರ ವಚನವನು ಹೇಳುತ್ತಾರೆ :—

**ಶ್ಲೋಕ॥ ಭವಿಷ್ಯತ್ಪರ್ವಗಂಚಾಪಿ ವಚೋವ್ಯಾಸಸ್ಯಸಾದರಂ ॥**
**ವಾಸುದೇವಸ್ಯಮಹಿಮಾ ಭಾರತೇನಿರ್ಣಯೋದಿತಃ ॥೧೨೧॥**

ಅರ್ಥ.—ಭವಿಷ್ಯತ್ಪರ್ವಗಂ=(ಭಾರತಾದಿ ಸಕಲ ಸಚ್ಛಾಸ್ತ್ರ ನಿರ್ಣಾಯಕ) ವಾದ 'ಭವಿಷ್ಯತ್ಪರ್ವ' ಎಂಬ ಗ್ರಂಥದಲ್ಲಿರುವ, ವ್ಯಾಸಸ್ಯ=ಶ್ರೀ ವೇದ ವ್ಯಾಸದೇವರ, ಸಾದರಂ = ಆದರಪೂರ್ವಕವಾದ, ವಚೋಽಪಿ=ವಾಕ್ಯವೂ ಇದೆ ಏನೆಂದರೆ, ಭಾರತೇ=ಭಾರತದಲ್ಲಿ, ವಾಸುದೇವಸ್ಯ = ವಾಸುದೇವನ, ಮಹಿಮಾ = ಮಹಿಮೆಯು. ಮಯಾ=ನನ್ನಿಂದ, ನಿರ್ಣಯ=ನಿರ್ಣಯ ಮಾಡಿ, ಉದಿತಃ=ಹೇಳಲ್ಪಟ್ಟಿದೆ ಎಂದು ಇದೆ.

ತಾತ್ಪರ್ಯ.—ಆಚಾರ್ಯರು ತಾವು ಮಾಡಿರುವ ತಾತ್ಪರ್ಯ ನಿರ್ಣಯ ದಲ್ಲಿ ಶ್ರೀ ವೇದವ್ಯಾಸದೇವರು ಭಾರತದಲ್ಲಿ ವಾಸುದೇವನ ಮಹಿಮೆಯನ್ನು ಹೇಳಿರುತ್ತೇನೆಂದು ಭವಿಷ್ಯತ್ಪರ್ವವೆಂಬ ಗ್ರಂಥವಲ್ಲಿ ಹೇಳಿರುವದನ್ನ ಈಗ ಪ್ರಮಾಣತ್ವೇನ ನಾನು ಹೇಳುತ್ತೇನೆಂದು ಆಚಾರ್ಯರು ಹೇಳುತ್ತಾರೆ.

ವಿಶೇಷಾರ್ಥ.—ಶ್ರೀಮದಾಚಾರ್ಯರಿಂದ ರಚಿತವಾದ ಈ ನಿರ್ಣಯ ಗ್ರಂಥವು ತಾವೇ ರಚಿಸಿದ ಶ್ಲೋಕಗಳಿಂದ ಯುಕ್ತವಾದದ್ದಲ್ಲವೆಂತಲೂ, ಭಾರತವನ್ನು ರಚಿಸಿದ ವ್ಯಾಸರೇ ವಾಸುದೇವನ ಮಹಿಮೆಯನ್ನು ಭಾರ ತದಲ್ಲಿ ಹೇಳಿರುತ್ತಾರೆಂತಲೂ ಭವಿಷ್ಯತ್ಪರ್ವದ ವಚನವಿದೆ ಎಂದು ಹೇಳುತ್ತಾರೆ.

**ಅವತಾರಿಕೆ.**---ಹಿಂದಿನ ಶ್ಲೋಕದಲ್ಲಿ ವಾಸುದೇವನ ಮಹಿಮೆಯು ಭಾರತದಲ್ಲಿ ಹೇಳಲ್ಪಟ್ಟಿದೆ ಎಂದು ಹೇಳಿದರು. ಹಾಗಾದರೆ ಇತರ ಕಥೆ ಗಳು ಅಂದರೆ ಪಾಂಡವರ ಕಥೆ ಏತಕ್ಕಾಗಿ ಹೇಳಬೇಕೆಂದರೆ ಹೇಳುತ್ತಾರೆ. ಶ್ರೀ ವಾಸುದೇವನ ಕಥೆಯೇ ಪ್ರಧಾನ ಮಿಕ್ಕ ಕಥೆಗಳೆಲ್ಲವೂ ವಾಸುದೇವನ ಮಹಿಮೆಯನ್ನು ತಿಳಿಸುವುದಕ್ಕಾಗಿ ಎಂದು ಹೇಳುತ್ತಾರೆ :—

**ಶ್ಲೋಕ॥ ತದರ್ಥಾಸ್ತು ಕಥಾಃಸರ್ವಾ ನಾನ್ಯಾರ್ಥಂವೈಷ್ಣವಂಯಶಃ ॥**
**ತತ್ಪ್ರತೀಪಂತುಯದ್ದೃಶ್ಯೇ ನ್ನತನ್ಮಮಮನೀಷಿತಂ ॥೧೨೨॥**

ಅರ್ಥ.—ಸರ್ವಾಃ=ಸಮಸ್ತವಾದ, ಕಥಾಸ್ತು=(ಪಾಂಡವರ) ಕಥೆಗಳು, ತದರ್ಥಾಃ=ವಿಷ್ಣುವಿಗೆ ಸರ್ವೋತ್ತಮತ್ವವನ್ನ ಹೇಳುವದಕ್ಕಾಗಿಯೇ ವೈಷ್ಣವಂ=ವಿಷ್ಣು ಸಂಬಂಧವಾದ, ಯಶಃ = ಮಹಿಮಾ ಚರಿತ್ರೆಯನ್ನ ಬಿಟ್ಟು, ನಾನ್ಯಾರ್ಥಂ=ಬೇರೆ ಯಾವದಕ್ಕೂ ಅಲ್ಲ, ಯತ್=ಯಾವ ವಿಷಯಗಳು, ತತ್ಪ್ರತೀಪಂ=ವಿಷ್ಣು ಸರ್ವೋತ್ತಮತ್ವಕ್ಕೆ ವಿರೋಧವಾಗಿ, ದೃಶ್ಯೇತ್=ಕಂಡು ಬರುತ್ತವೆಯೋ, ತತ್=ಅಂಥಹ ವಿಷಯಗಳು, ಮಮಮನೀಷಿತಂ=ನನಗೆ ಸಮ್ಮತವಲ್ಲ.

ತಾತ್ಪರ್ಯ—ಭಾರತದಲ್ಲಿ ಹೇಳತಕ್ಕ ಸಮಸ್ತ ಕಥೆಗಳೂ ಶ್ರೀ ನಾರಾಯಣನ ಸರ್ವೋತ್ತಮತ್ವವನ್ನ ಸ್ಥಾಪನೆ ಮಾಡತಕ್ಕವುಗಳಾಗಿವೆ. ಬೇರೆ ಯಾವ ಅಭಿಪ್ರಾಯ ಉಳ್ಳವುಗಳೂ ಅಲ್ಲ. ಒಂದು ವೇಳೆ ಹರಿ ಸರ್ವೋತ್ತಮತ್ವಕ್ಕೆ ವಿರೋಧವಾಗಿ ಹೇಳುವ ಕಥೆಗಳಿದ್ದರೆ ಅವು ನನಗೆ ಸಮ್ಮತವಲ್ಲ.

ವಿಶೇಷಾರ್ಥ.—" ಭಾರತಃ ಪಂಚಮೋವೇದಃ " ಎಂಬುವ ಪ್ರಮಾಣಾನುಸಾರ ನಾಲ್ಕು ವೇದಗಳಲ್ಲಿ ಹೇಳಲ್ಪಟ್ಟಿರುವ ವಿಷ್ಣುವಿನ ಮಹಿಮೆಯೂ ಭಾರತದಲ್ಲಿ ಹೇಳಲ್ಪಟ್ಟಿದೆ. ಆವರೆ ವೇದಗಳು ಶ್ರೀ ನಾರಾಯಣನ ಮಹಿಮೆಯನ್ನು ಮಾತ್ರ ಹೇಳುತ್ತವೆಯೇ ಅಂದರೆ ಪ್ರಮಾಣ–ಸರ್ವೇವೇದಾಯತ್ಪದಮಾಮನಂತಿ ತಪಾಂಶಿಸರ್ವಾಣಿಚಯದ್ವದಂತಿ ವೇದೈಶ್ಚ ಸರ್ವೈರಹಮೇವವೇದ್ಯಃ " ಎಂದು ಹೇಳುವುದರಿಂದ ಸರ್ವ ವೇದಗಳು ಶ್ರೀನಾರಾಯಣನನ್ನ ತಿಳಿಸುತ್ತವೆ. ಅದೇ ಅರ್ಥವನ್ನ ಭಾರತವೂ ಹೇಳುತ್ತದೆಂದು ತಿಳಿಯಬೇಕು.

**ಅವತಾರಿಕೆ.**—ಪರಮಾತ್ಮನಿಗೆ ಸಮ್ಮತವಲ್ಲದೇ ಇರುವ ವಿಷಯಗಳನ್ನ ಪಕೆ ಹೇಳಿದರೆಂದರೆ ಹೇಳುತ್ತಾರೆ. ಮೂರು ಭಾಷೆಗಳಿಂದ ಹೇಳಿದ್ದೇನೆ ನನ್ನ ಅಭಿಪ್ರಾಯವು ವಿಷ್ಣು ಸರ್ವೋತ್ತಮತ್ವವೇ ಹೊರ್ತು ಬೇರೆ ಅಲ್ಲ ಅದನ್ನ ಭಾಷಾ ವಿವೇಕದಿಂದ ತಿಳಿಯಬೇಕು :—

**ಶ್ಲೋಕ॥ ಭಾಷಾಸ್ತು ತ್ರಿವಿಧಾಸ್ತತ್ರ ಮಯಾವೈಸಂಪ್ರದರ್ಶಿತಾಃ ॥**
**ಉಕ್ತೋಯೋಮಹಿಮಾವಿಷ್ಣೋಃ ಸತೂಕ್ತೋಹಿಸಮಾಧಿನಾ॥**

ಅರ್ಥ.—ತತ್ರ=ಆ ಭಾರತದಲ್ಲಿ ಮಯಾ=ನನ್ನಿಂದ, ತ್ರಿವಿಧಾಃ=

ಮೂರು ವಿಧವಾದ, ಭಾಷಾಸ್ತು=ಭಾಷೆಗಳಿಂದ, ಸಂಪ್ರದರ್ಶಿತಾಃ=ತೋರಿ ಸಲ್ಪಟ್ಟಿವೆ, ವೈ=ಪ್ರಸಿದ್ಧ, ಯಃ = ಯಾವದು, ವಿಷ್ಣೋಃ = ವಿಷ್ಣುವಿನ, ಮಹಿಮಾ=ಮಾಹಾತ್ಮ್ಯೆಯು, ಉಕ್ತಃ=ಹೇಳಿರುತ್ತದೆಯೋ, ಸತೂ = ಆ ವಿಷ್ಣುವಿನ ಮಹಿಮೆಯು, ಸಮಾಧಿನಾ=ಸಮಾಧಿ ಭಾಷೆಯಿಂದ, ಉಕ್ತಃ= ಹೇಳಲ್ಪಟ್ಟಿರುತ್ತದೆ, ಹಿ=ಪ್ರಸಿದ್ಧವು.

ತಾತ್ಪರ್ಯ.—ಸನ್ನಿಂದ ಭಾರತದಲ್ಲಿ ಮೂರು ಭಾಷೆಗಳಿಂದಲೂ ಅರ್ಥ ಗಳು ತೋರಿಸಲ್ಪಟ್ಟಿವೆ. ಅದರಲ್ಲಿ ವಿಷ್ಣುವಿನ ಮಹಾತ್ಮ್ಯೆಯು ಯಾವ ಸ್ಥಳದಲ್ಲಿ ಹೇಳಿರುತ್ತದೆಯೋ ಅದೆಲ್ಲಾ ಸಮಾಧಿ ಭಾಷೆಯಿಂದಲೇ ಹೇಳಲ್ಪಟ್ಟಿರುತ್ತದೆ.

ವಿಶೇಷಾರ್ಥ.—ಶ್ರೀ ಭಾರತ ಗ್ರಂಥವು ಸರ್ವ ಸಾರ ಉಳ್ಳದ್ದು ಅದರಲ್ಲಿ ಅರ್ಥವು ಸ್ಪುಟವಾಗಿ ತಿಳಿಯುವ ರೀತಿ ಪ್ರತಿಪಾದನ ಮಾಡುತ್ತ ದಲ್ಲಾ ಅಂದರೆ ದರ್ಶನ (ಮೇಲೆ ತೋರುವ) ಭಾಷಾದಿಂದ ಬಾಹ್ಯಾರ್ಥ ಹೇಳುತ್ತದೆ. ಸರ್ವ ಶಾಸ್ತ್ರಾರ್ಥವೂ ಗೋಪ್ಯವಾಗಿ ಸಮಾಧಿ ಭಾಷೆಯಿಂದ ಇರುತ್ತದೆ. ಯಾವಾಗಲೂ ಭಾರತವನ್ನು ತಿಳಿದುಕೊಳ್ಳಬೇಕಾದರೆ ಭಾಷಾ ತ್ರಯ ಜ್ಞಾನವು ಅತ್ಯಾವಶ್ಯಕವೆಂದು ತಿಳಿಸುತ್ತಾರೆ.

**ಅವತಾರಿಕೆ.**—ಶಿವ ಸರ್ವೋತ್ತಮತ್ವಕ್ಕೆ ಸಾಧಕವಾಗಿ ಕೆಲವು ಕಥೆ ಗಳು ಹೇಳಲ್ಪಟ್ಟಿವೆ. ಅವುಗಳು ದರ್ಶನ ಭಾಷಾದಿಂದಲೇ ಹೇಳಲ್ಪಟ್ಟಿವೆ. ಅಂಥವುಗಳನ್ನ ಸ್ವೀಕಾರ ಮಾಡಬೇಕೇ ಬೇಡವೇ ಅಂದರೆ ಸಮಾಧಿ ಭಾಷೆ ಯಿಂದಲೇ ಸ್ವೀಕಾರ ಮಾಡಬೇಕೆಂದು ಹೇಳುತ್ತಾರೆ :—

**ಶ್ಲೋಕ|| ಶೈವದರ್ಶನಮಾಲಂಬ್ಯ ಕ್ವಚಿಚ್ಛೈವೀಕಥೋದಿತಾ ||**
**ಸಮಾಧಿಭಾಷಯೋಕ್ತಂ ಯತ್ತತ್ಸರ್ವಂಗ್ರಾಹ್ಯಮೇವಹಿ ||೧೨||**

ಅರ್ಥ.—ಶೈವದರ್ಶನಂ=ಶೈವ ಶಾಸ್ತ್ರವನ್ನು, ಆಲಂಬ್ಯ = ಅವಲಂ ಬಿಸಿ, ಕ್ವಚಿತ್ ಕೆಲವು ಸ್ಥಳಗಳಲ್ಲಿ, ಶೈವೀಕಥಾ=ಶಿವಸರ್ವೋತ್ತಮತ್ವ ಪ್ರತಿ ಪಾದಿಸುವ ಕಥೆಯು, ಉದಿತಾ=ಹೇಳಲ್ಪಟ್ಟಿರುತ್ತದೆ, ಯತ್=ಯಾವದು, ಸಮಾಧಿಭಾಷಯಾ=ಸಮಾಧಿ ಭಾಷಯಿಂದ, ಉಕ್ತಂ=ಹೇಳಲ್ಪಟ್ಟಿದೆಯೋ, ತತ್ಸರ್ವಂ=ಅದೆಲ್ಲವೂ, ಗ್ರಾಹ್ಯಮೇವ=ಸ್ವೀಕಾರ್ಯವೇನೆ, ಹಿ=ಪ್ರಸಿದ್ಧವು.

ತಾತ್ಪರ್ಯ.—ಶೈವ ಶಾಸ್ತ್ರವನ್ನ ಅನುಸರಿಸಿ ಕೆಲವು ಸ್ಥಳಗಳಲ್ಲಿ ಶಿವ ಸರ್ವೋತ್ತಮತ್ವಕ್ಕೆ ಸಾಧಕವಾಗಿ ಕೆಲವು ಪ್ರಮಾಣಗಳು ಪ್ರತಿಪಾದಿತವಾಗಿವೆ. ಅವೂ ಕೂಡ ಸಮಾಧಿ ಭಾಷಾದಿಂದಲೇ ಸ್ವೀಕಾರ್ಯವು. ಹಾಗಿಲ್ಲದೇ ಇದ್ದರೆ ವಿಷ್ಣು ಸರ್ವೋತ್ತಮತ್ವಕ್ಕೆ ಸಾಧಕವಾಗಲಾರವು.

ವಿಶೇಷಾರ್ಥ.—ಶ್ರೀಹರಿಯು ರೂಪತ್ರಯಾತ್ಮಕನಾಗಿ ಸೃಷ್ಟಿ, ಸ್ಥಿತಿ, ಲಯಗಳನ್ನ ಮಾಡುತ್ತಾನೆ. ಅದರಲ್ಲಿ ದುರ್ಗಾಪತಿಯಾದ ಋದ್ರ ಶಬ್ದ ವಾಚ್ಯನಾದ ಶ್ರೀಹರಿಯು ಭಾರತದಲ್ಲಿ ಹೇಳಿರುವ ಶಿವ ಸರ್ವೋತ್ತಮತ್ವಕ್ಕೆ ಸಾಧಕವಾದ ಪ್ರಮಾಣ ಸೂಚಕನೇ ಹೊರ್ತು ಪಾರ್ವತೀಪತಿಯಾದ ಋದ್ರನಲ್ಲವೆಂದು ಸ್ಪಷ್ಟವಾಗಿ ತಿಳಿಯಬೇಕು. ಮತ್ತು ಸರ್ವ ಶಬ್ದವಾಚ್ಯನಾದ ಶ್ರೀಹರಿಗೆ ಶಿವ (ಮಂಗಳಕರ) ಎಂಬ ಶಬ್ದವೂ ಉಂಟೆಂದು ತಿಳಿಯಬೇಕು. ಶ್ರೀಹರಿಯು ಸರ್ವ ಮಂಗಳನಾದ್ದರಿಂದ ಶಿವಶಬ್ದವಾಚ್ಯನೆಂದು ಭಾರತ ಹೇಳುತ್ತದೆ.

**ಅವತಾರಿಕೆ.**—ಭಾಷಾತ್ರಯಗಳನ್ನ ಸೂಚಿಸಿ, ಅದರಲ್ಲಿ ಸಮಾಧಿ ಭಾಷೆಗೆ ವಿರೋಧವಲ್ಲದ ದರ್ಶನ ಭಾಷಾ ವಚನಗಳನ್ನ ಸ್ವೀಕಾರ ಮಾಡಬೇಕೆಂದು ಹೇಳುತ್ತಾರೆ :—

**ಶ್ಲೋಕ|| ಅವಿರುದ್ಧಂಸಮಾಧೇಸ್ತು ದರ್ಶನೋಕ್ತಂಚಗೃಹ್ಯತೇ ||**
**ಆದ್ಯಂತಯೋರ್ವಿರುದ್ಧಂಯ ದ್ದರ್ಶನಂತದುದಾಹೃತಂ||೧೨೫||**

ಅರ್ಥ.—ಸಮಾಧೇಃ=ಸಮಾಧಿ ಭಾಷೆಗೆ, ಅವಿರುದ್ಧಂ = ವಿರೋಧವಲ್ಲದ ಅರ್ಥವನ್ನು, ದರ್ಶನೋಕ್ತಂಚ=ದರ್ಶನ ಭಾಷೆಯಲ್ಲಿ ಹೇಳಲ್ಪಟ್ಟದ್ದರೆ, ಗೃಹ್ಯತೇ=ಅದನ್ನ ಗ್ರಹಿಸಬಹುದು, ಆದ್ಯಂತಯೋಃ=ಮೊದಲು ಕೊನೆಗಳಲ್ಲಿ, ವಿರುದ್ಧಂ=ಪರಸ್ಪರ ವಿರೋಧ ಉಳ್ಳದ್ದು, ಯತ್=ಯಾವ ಶಾಸ್ತ್ರವೋ, ತತ್=ಅದು, ದರ್ಶನಂ=ದರ್ಶನ ಭಾಷೆಯೆಂದು, ಉದಾಹೃತಂ= ಉದಾಹರಿಸಲ್ಪಟ್ಟದೆ.

ತಾತ್ಪರ್ಯ.—ವೇದವ್ಯಾಸದೇವರು ಭಾರತವನ್ನು ಭಾಷಾತ್ರಯದಲ್ಲಿಯೂ ಅರ್ಥವಾಗುವಂತೆ ರಚಿಸಿರುತ್ತಾರೆ. ಅದರಲ್ಲಿ ಭಗವಂತನ ಪರವಾಗಿ ಅರ್ಥವಾಗುವ ಭಾಗವೆಲ್ಲಾ ಸಮಾಧಿಭಾಷೆಯಲ್ಲಿದೆ. ಶಿವ ಪರವಾಗಿರುವ

ದೆಲ್ಲಾ ದರ್ಶನ ಭಾಷೆ ಎಂದು ತಿಳಿಯಬೇಕು. ಅದರಲ್ಲಿ ಕೆಲವು ಭಾಗ ಮಟ್ಟಿಗೆ ಗುಹ್ಯ ಭಾಷೆಯಲ್ಲಿರುತ್ತೆ. ಅರ್ಥಾನುಸಂಧಾನ ಮಾಡುವವರು ಸಮಾಧಿ ಭಾಷೆಗೆ ಅವಿರೋಧವಾಗಿ ದರ್ಶನ ಭಾಷೆಯೂ ಇದೆ ಎಂದು ತಿಳಿಯಬೇಕು.

ವಿಶೇಷಾರ್ಥ.—ಸಾಧನ ಚೇತನರು ನವವಿಧರು. ಅವರವರ ಸಾಧನಾನುಸಾರ ಫಲ ಕೊಡುವದಕ್ಕೋಸ್ಕರ ಶ್ರೀಹರಿಯು ಸರ್ವ ಚೇತನರ ಸಾಧನೆಗಾಗಿ ಭಾಷಾತ್ರಯದಿಂದ ಭಾರತವನ್ನ ರಚನೆ ಮಾಡಿರುತ್ತಾನೆ. ಅದರಲ್ಲಿ ಪ್ರಮಾಣ–" ಸರ್ವೇವೇದಾಯತ್ಪದಮಾಮನಂತಿ " ಎಂಬುವ ಪ್ರಮಾಣಾನುಸಾರ ಭಾಷಾತ್ರಯಕ್ಕೂ, ಹರಿ ಸರ್ವೋತ್ತಮತ್ವಕ್ಕೆ ವಿರೋಧವಿಲ್ಲದಂತೆ ಅರ್ಥ ಮಾಡಬೇಕು.

**ಅವತಾರಿಕೆ.**—ದರ್ಶನ ಭಾಷಾ ಲಕ್ಷಣ ಹೇಳಿ ನಂತರ ಕ್ರಮಪ್ರಾಪ್ತವಾದ ಗುಹ್ಯ ಭಾಷಾ ಲಕ್ಷಣವನ್ನ ಹೇಳುತ್ತಾರೆ :—

**ಶ್ಲೋಕ॥ ದರ್ಶನಾನಂತರಂಸಿದ್ಧಂ ಗುಹ್ಯಭಾಷಾನ್ಯಥಾಭವೇತ್ ॥**
**ತಸ್ಮಾದ್ವಿಷ್ಣೋರ್ಹಿಮಹಿಮಾ ಭಾರತೋಕ್ತೋಯಥಾರ್ಥತಃ॥**

ಅರ್ಥ.—ದರ್ಶನಾನಂತರಂ=ಶೈವಾದಿ ಶಾಸ್ತ್ರಗಳಲ್ಲಿ, ಸಿದ್ಧಂ=ಪ್ರತಿಪಾದಿತವಾದಂಥ, ಗುಹ್ಯಭಾಷಾ=ಗುಹ್ಯ ಭಾಷೆಯು, ಅನ್ಯಥಾ = ಅರ್ಥಾಂತರ ಉಳ್ಳದ್ದು, ಭವೇತ್–ಆಗುತ್ತದೆ, ತಸ್ಮಾತ್=ಆದಕಾರಣದಿಂದ, ವಿಷ್ಣೋ=ಶ್ರೀನಾರಾಯಣನ, ಮಹಿಮಾ=ಮಹಾತ್ಮೆಯು, ಯಥಾರ್ಥತಃ=ಸತ್ಯವಾಗಿ, ಭಾರತೋಕ್ತಃ–ಭಾರತದಲ್ಲಿ ಹೇಳಲ್ಪಟ್ಟಿರುತ್ತದೆ, ಹಿ=ಪ್ರಸಿದ್ಧವು.

ತಾತ್ಪರ್ಯ.—ಶೈವಾದಿ ಶಾಸ್ತ್ರಗಳಲ್ಲಿ ಪ್ರತಿಪಾದಿತವಾದ ದರ್ಶನಭಾಷ ಪ್ರಯೋಗವನ್ನು ವಿಷ್ಣು ಪರವಾಗಿ ದರ್ಶನ ಭಾಷೆಯಿಂದಲೇ ಅರ್ಥ ಮಾಡಬಹುದು. ಆದ್ದರಿಂದ ಭಾರತದಲ್ಲಿ ಯತಾರ್ಥವಾಗಿ ವಿಷ್ಣುವಿನ ಮಹಿಮೆಯು ಹೇಳಲ್ಪಟ್ಟಿರುತ್ತದೆ.

ವಿಶೇಷಾರ್ಥ.—" ಸರ್ವೇವೇದಾಃ ಯತ್ಪದಮಾಮನಂತಿ " ಎಂಬುವ ಪ್ರಮಾಣಾನುಸಾರ ಸರ್ವ ಶಾಸ್ತ್ರಗಳು ಸರ್ವಾರ್ಥ ಪ್ರತಿಪಾದಕವಾದರೂ ಅವು ವಿಷ್ಣು ಪರವೇ ಹೊರತು ಅನ್ಯಪರವಲ್ಲ. " ತಂವೈವಿಷ್ಣುಂ ಪರಮಮುದಾಹರಂತಿ " ಎಂಬುವ ವಚನಾನುಸಾರ ಸರ್ವ ಶಬ್ದಗಳು ಪರಬ್ರಹ್ಮ

ಪ್ರತಿಪಾದಕವಾದವು. ಮತ್ತು "ಯೋದೇವಾನಾಂನಾಮಧಾ ಏಕೈವ" ಎಂಬ ಶ್ರುತ್ಯಾನುಸಾರ ಸರ್ವ ನಾಮಗಳು ಶ್ರೀವಿಷ್ಣು ಪರನೇ ಆಗಿರುವವು. ಆದ್ದರಿಂದ ಗುಹ್ಯ, ದರ್ಶನ, ಸಮಾಧಿ ಭಾಷಾತ್ರಯುಕ್ತ ಭಾರತ ಗ್ರಂಥವು ಶ್ರೀ ವಿಷ್ಣು ಮಹಿಮಾ ಪ್ರತಿಪಾದಕವೇ ಹೊರತು ಬೇರೆ ಇಲ್ಲ.

**ಅವತಾರಿಕೆ.**—ವಾಯುದೇವರೇ ಮೊದಲಿನವರು ಶ್ರೀ ವಿಷ್ಣುವಿಗೆ ಅಂಗಭೂತರು ಎಂಬುವದನ್ನ ತಿಳಿಸುವ ಭವಿಷ್ಯತ್ಪುರಾಣದ ವಚನವನ್ನ ಉದಾಹರಿಸುತ್ತಾರೆ:—

**ಶ್ಲೋಕ|| ತಸ್ಯಾಂಗಂಪ್ರಥಮೋವಾಯುಃ ಪ್ರಾದುರ್ಭಾವತ್ರಯಾನ್ವಿತಃ |**
**ಪ್ರಥಮೋಹನುಮಾನ್ನಾಮ ದ್ವಿತೀಯೋಭೀಮಏವಚ ||**
**ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ||೧೨೭||**

ಅರ್ಥ.—ತಸ್ಯ=ಆ ವಿಷ್ಣುವಿಗೆ, ಪ್ರಾದುರ್ಭಾವತ್ರಯಾ – ಮೂರು ಅವತಾರಗಳಿಂದ, ಅನ್ವಿತಃ=ಯುಕ್ತರಾದ, ವಾಯುಃ = ವಾಯುದೇವರು, ಪ್ರಥಮಃ=ಮೊದಲನೆಯ, ಅಂಗಂ=ಅಂಗಭೂತರು, ಪ್ರಥಮಃ = ಮೊದಲನೆಯ ಅವತಾರವು, ಹನುಮಾನ್ನಾಮ=ಹನುಮಂತದೇವರೆನಿಸಿ, ದ್ವಿತೀಯಃ=ಎರಡನೆಯ ಅವತಾರರು, ಭೀಮಏವಚ – ಭೀಮಸೇನ ದೇವರೆನಿಸಿ, ತ್ರಿತೀಯಸ್ತು=ಮೂರನೆಯ ಅವತಾರವಾದ, ಪೂರ್ಣಪ್ರಜ್ಞಃ=ಪೂರ್ಣ ಪ್ರಜ್ಞಾಚಾರ್ಯರೆನಿಸಿ, (ಈ ಮೂರು ಅವತಾರಗಳಲ್ಲಿಯೂ) ಭಗವತ್ಕಾರ್ಯಸಾಧಕಃ=ನಾರಾಯಣನ ದುಷ್ಟಸಂಹಾರಾದಿ ಕಾರ್ಯಗಳಿಗೆ ಸಹಾಯಭೂತರಾಗಿರುವರು.

ತಾತ್ಪರ್ಯ.—ಅವತಾರತ್ರಯ ಭೂತರಾದ ವಾಯುದೇವರು ಸೃಷ್ಟಿಕರ್ತನಾದ ಶ್ರೀಹರಿಗೆ ಮೊದಲನೆಯ ಅಂಗದಂತೆ ಇರುವರು ಅಂದರೆ ಕೇವಲ ಪ್ರತಿಬಿಂಬರಾಗಿರುವರು. ಹನುಮ, ಭೀಮ, ಮಧ್ವರೆಂಬ ಮೂರು ಅವತಾರಗಳಿಂದ ತತ್ತತ್ಕಾಲಗಳಲ್ಲಿ ಅವತರಿಸಿದ ಭಗವಂತನ ಕಾರ್ಯಗಳಿಗೆ ಸಹಾಯಭೂತರಾಗಿದ್ದ ಪ್ರಯುಕ್ತ ಅಂಗಭೂತರೆಂದು ತಿಳಿಯಬೇಕು.

ವಿಶೇಷಾರ್ಥ.—ಶ್ರೀಪರಮಾತ್ಮನಿಂದ ಸೃಷ್ಟರಾದ ಚೇತನ ರಾಶಿಯಲ್ಲಿ ವಾಯುದೇವರು ಶ್ರೇಷ್ಠರು. ಅತಏವ ಉತ್ತಮರು. ಇತರ ಚೇತ

ನರಿಗಿಂತಲೂ ಇವರು ಬಲ, ಧ್ಯಾನಾದಿ ಸರ್ವ ಗುಣಗಳಿಂದಲೂ ಉತ್ತಮರು. ಆದ್ದರಿಂದಲೇ ಭಗವತ್ಕಾರ್ಯ ಸಾಧಕರೆಂದು ತಿಳಿಯಬೇಕು. ಹೀಗಿರುವದರಿಂದ ಪರಮಾತ್ಮನ ಆಜ್ಞೆಯಂತೆ ಹನುಮ ಭೀಮ ಮಧ್ವರೆಂಬ ಮೂರು ಅವತಾರಗಳನ್ನೆತ್ತಿ ಪರಮಾತ್ಮನ ಸೇವೆ ಮಾಡಿದ್ದಾರೆ.

ಅವತಾರಿಕೆ.—ವಾಯ್ವಾದಿಗಳಿಗೆ ಶ್ರೀವಿಷ್ಣುವಿನ ಅಂಗಭೂತತ್ವ ವಿಚಾರದಲ್ಲಿ ಭವಿಷ್ಯತ್ಪುರಾಣದ ಮತ್ತೊಂದು ವಚನವನ್ನು ಹೇಳುತ್ತಾರೆ.—

**ಶ್ಲೋಕ ॥ ತ್ರೇತಾದ್ಯೇಷು ಯುಗೇಷ್ವೇವ ಸಂಭೂತಃ ಕೇಶವಾಜ್ಞಯಾ ।**
**ಏಕೈಕಶಸ್ತ್ರಿಷು ಪೃಥಕ್ ದ್ವಿತೀಯಾಂಗಂ ಸರಸ್ವತೀ ॥೧೨೮॥**

ಅರ್ಥ.—ವಾಯುಃ=ವಾಯುದೇವರು, ತ್ರೇತಾದ್ಯೇಷು - ತ್ರೇತಾ, ದ್ವಾಪರ, ಕಲಿ ಎಂಬ, ಯುಗೇಷ್ವೇವ=ಮೂರು ಯುಗಗಳಲ್ಲಿ, ಕೇಶವಾಜ್ಞಯಾ=ಶ್ರೀಹರಿಯ ಅಪ್ಪಣೆಯಿಂದ, ಏಕೈಕಶಃ=ಹನುಮ, ಭೀಮ, ಮಧ್ವ ಎಂಬ ಒಂದೊಂದು ರೂಪದಿಂದ, ತ್ರಿಷು ೩ ಅವತಾರಗಳಲ್ಲಿ, ಪೃಥಕ್=ಪ್ರತ್ಯೇಕ ಪ್ರತ್ಯೇಕ ನಾಮಗಳಿಂದ, ಸಂಭೂತ್=ಅವತಾರಮಾಡಿದ್ದಾರೆ. ಇದೇ ಬಗೆಯಿಂದ, ಸರಸ್ವತೀ=ಸರಸ್ವತೀ ತಥಾ ಭಾರತೀದೇವಿಯು, ದ್ವಿತೀಯಾಂಗಂ=ಎರಡನೆಯ ಅಂಗಭೂತರು,

ತಾತ್ಪರ್ಯ.—ಹಿಂದೆ ಹೇಳಿದಂತೆ ಶ್ರೀವಿಷ್ಣುವು ಬ್ರಹ್ಮಾಂಡಗತ ಕಾರ್ಯಗಳಿಗೆ ಸಹಾಯವಾಗಲು ವಾಯುದೇವರು ತ್ರೇತಾದಿ ೩ ಯುಗಗಳಲ್ಲಿ ವಿಷ್ಣುವು ೩ ಅವತಾರಗಳನ್ನು ಮಾಡಲು ತಾವು ಅಂಗಭೂತರಾಗಿ ಬೇರೆಬೇರೆ ಹೆಸರಿನಿಂದ ಶ್ರೀವಿಷ್ಣುವಿನ ಅಪ್ಪಣೆಯಂತೆ ಅವತಾರಮಾಡಿದರು ಸರಸ್ವತೀ ( ಭಾರತೀ ) ದೇವಿಯರೂ ಕೂಡ ಶ್ರೀವಿಷ್ಣುವಿನ ಜಗದ್ರಕ್ಷಣಾದಿ ಕೆಲಸಗಳಿಗೆ ಎರಡನೆಯ ಅಂಗಭೂತರು.

ವಿಶೇಷಾರ್ಥ.—ಋಜುಗಣಸ್ಥರುಗಳು ಸ್ವಯೋಗ್ಯಾಪರೋಕ್ಷಾನಂತರದಲ್ಲಿ ಶ್ರೀವಿಷ್ಣುವಿನ ಸೇವೆಯನ್ನು ೧೦೦ ಬ್ರಹ್ಮ ಕಲ್ಪಗಳವರೆವಿಗೆ ಮಾಡಿ ಶ್ರೀವಿಷ್ಣುವಿನಿಂದ ಕೊಡಲ್ಪಡುವ ಮೋಕ್ಷದಲ್ಲಿ ಪೂರ್ಣಾನಂದವನ್ನು ಪಡೆಯು

ವರು. ಈ ರೀತಿಯಾಗಿ ಋಜುಗಣಸ್ಥರಾದ ವಾಯುದೇವರು ಶ್ರೀಹರಿಯ ಪ್ರಥಮಾಂಗಭೂತರಾದುದರಿಂದ ( ಮೊಟ್ಟಮೊದಲಿಗೆ ಜನಿಸಿದವರಾಗಿ ) ಮೂರು ಯುಗಗಳಲ್ಲಿಯೂ ಶ್ರೀಹರಿಯ ಮೂರು ಅವತಾರಗಳ ಸೇವೆಯನ್ನು ತಮ್ಮ ಮೂರು ಅವತಾರಗಳಿಂದ ಮಾಡಿ ಅನುಗ್ರಹಕ್ಕೆ ಬಾಧ್ಯರಾದರು. ಇವರನಂತರ ತತ್ವನಿಯಾಮಕರಾದ ಸರಸ್ವತೀದೇವಿಯರು ಎರಡನೇ ಅಂಗಭೂತರೆಂದು ತಿಳಿಯಬೇಕು.

ಅವತಾರಿಕೆ.—ಪ್ರಮಾಣಾಂತರದಲ್ಲಿ ಶ್ರೀದೇವಿಯು ಎರಡನೆಯ ಅಂಗಭೂತಳೆಂದು ಹೇಳಲ್ಪಟ್ಟಿದೆ. ಈಗ ಸರಸ್ವತೀದೇವಿಯು ಎರಡನೇ ಅಂಗಭೂತಳೆಂದು ಹೇಳಿದರೆ ಸಂದೇಹ ಹುಟ್ಟುತ್ತದೆಯಾದ್ದರಿಂದ ಅದನ್ನು ಪರಿಹಾರಮಾಡುತ್ತಾರೆ.—

**ಶ್ಲೋಕ ॥ ಶ್ಯಂರೂಪೇತು ರತೇರ್ವಾಯೌ ಶ್ರೀರತ್ಯೇವಚಕೀರ್ತ್ಯತೇ । ಸೈವ ಚ ದ್ರೌಪದೀನಾಮ ಕಾಳೀ ಚಂದ್ರೇತಿ ಚೋಚ್ಯತೇ ॥೧೨೯॥**

ಅರ್ಥ.—ಯಾ=ಯಾವ ಸರಸ್ವತಿಯು, ಶ್ಯಂರೂಪೇತು=ಸುಖಸ್ವರೂಪರಾದ, ವಾಯೌ–ವಾಯುದೇವರಲ್ಲಿ, ಋತೇಃ=ವಿಹಾರದ ದೆಶೆಯಿಂದ, ಶ್ರೀರಿತ್ಯೇವ=ಶ್ರೀ ಎಂಬ ಹೆಸರಿನಿಂದ, ಕೀರ್ತ್ಯತೆ=ಹೇಳಿಸಿಕೊಳ್ಳಲ್ಪಡುತ್ತಾಳೋ, ಸೈವ=ಆ ಸರಸ್ವತೀದೇವಿಯೇ, ದ್ರೌಪದೀನಾಮ–ದ್ರೌಪದೀ ಎಂದು ಕಾಳೀಚ=ಕಾಳೀ ಎಂದೂ, ಚಂದ್ರೇತಿ=ಚಂದ್ರಾ ಎಂದೂ, ಉಚ್ಯತೇ–ಕರಸಿಕೊಳ್ಳಲ್ಪಡುತ್ತಾಳೆ.

ತಾತ್ಪರ್ಯ.—ಸುಖ ಸ್ವರೂಪರಾದ ವಾಯುದೇವರ ಕೂಡವಿಹಾರ ಮಾಡುವ ಸರಸ್ವತೀ ( ಭಾರತೀ ) ದೇವಿಗೆ ಶ್ರೀ ಎಂದು ಹೆಸರು. ಆದ್ದರಿಂದಲೇ ಪ್ರಮಾಣಾಂತರದಲ್ಲಿ ಶ್ರೀದೇವಿಯು ದ್ವಿತೀಯಾಂಗಳೆಂದು ಸೂಚಿಸಿರುವರು. ಶ್ರೀನಾಮಕ ಸರಸ್ವತಿಯು ಕಾಳೀ, ದ್ರೌಪಧೀ, ಚಂದ್ರಾ ಎಂಬ ನಾಮಗಳಿಂದ ಲೋಕದಲ್ಲಿ ಕರೆಸಿಕೊಳ್ಳಲ್ಪಡುತ್ತಾಳೆ.

ವಿಶೇಷಾರ್ಥ.—ಪರಮ ಸುಖ ಸ್ವರೂಪನಾದ ಪರಬ್ರಹ್ಮನ ಕೇವಲ ಅಧಿಷ್ಠಾನಭೂತರಾದುದರಿಂದ ವಾಯುದೇವರಿಗೆ ಸುಖಸ್ವರೂಪರೆಂತಲೂ,

ಹಾಗೆಯೇ ಸುಖಸ್ವರೂಪಿಣಿಯಾದ ರಮಾಧಿಷ್ಠಾನವುಳ್ಳವರಾದ್ದರಿಂದ ಸರಸ್ವತೀದೇವಿಯರಿಗೆ ಶ್ರೀ ಎಂತಲೂ, ಪ್ರಪಂಚದಲ್ಲಿ ಪರಿಪೂರ್ಣ ಸುಖ ವಿಹಾರವುಳ್ಳವರಾದುದರಿಂದ ವಾಯುದೇವರಿಗೆ " ಶ್ಯಂ " ಎಂತಲೂ, ಸರಸ್ವತೀದೇವಿಗೆ ಶ್ರೀ ಎಂತಲೂ ಪ್ರಮಾಣಗಳಲ್ಲಿ ಸೂಚಿಸಿದ್ದಾರೆ.

ಅವತಾರಿಕೆ.—ಶ್ರೀಪರಮಾತ್ಮನ ಜಗದ್ರಕ್ಷಣಾದಿ ಕಾರ್ಯಗಳಿಗೆ ಮೂರನೆಯ ಅಂಗ ಯಾರೆಂಬುವುದನ್ನು ಪ್ರಮಾಣಾಂತರದಿಂದ ಸೂಚಿಸುತ್ತಾರೆ.—

**ಶ್ಲೋಕ ॥ ತೃತೀಯಾಂಗಂಹರೇಃ ಶೇಷಃ ಪ್ರಾದುರ್ಭಾವಸಮನ್ವಿತಃ ॥**
**ಪ್ರಾದುರ್ಭಾವಾನರಶ್ಚೈವ ಲಕ್ಷ್ಮಣೋಬಲ ಏವಚ ॥೧೩೦॥**

ಅರ್ಥ.-ಪ್ರಾದುರ್ಭಾವಸಮನ್ವಿತಃ=ಅವತಾರ ರೂಪಗಳಿಂದ ಯುಕ್ತರಾದ, ಶೇಷಃ=ಶೇಷದೇವರು, ಹರೇಃ=ಶ್ರೀನಾರಾಯಣನಿಗೆ, ತೃತೀಯ= ಮೂರನೆಯ, ಅಂಗಂ=ಸಹಾಯಭೂತರು, ನರಶ್ಚ=ನರಯೆಂಬ ರೂಪವೂ, ಲಕ್ಷ್ಮಣಏವ-ಲಕ್ಷ್ಮಣನೂ ಸಹ, ಬಲಏವಚ=ಬಲರಾಮನೂ ಸಹ, ಪ್ರಾದುರ್ಭಾವಾಃ=ಅವತಾರ ರೂಪಗಳು ಮತ್ತು ಹರಿಯಂಶವುಳ್ಳವುಗಳು.

ತಾತ್ಪರ್ಯ.—ಶ್ರೀಹರಿಯ ಆವೇಶವುಳ್ಳ ಅವತಾರಗಳಿಂದ ಯುಕ್ತರಾದ ಶೇಷದೇವರು ಶ್ರೀಹರಿಗೆ ಮೂರನೆಯ ಅಂಗಭೂತರೆನಿಸುವರು. ನರ, ಲಕ್ಷ್ಮಣ, ಮತ್ತು ಬಲರಾಮದೇವರೆಂಬ ಶೇಷದೇವರ ಮೂರು ಅವತಾರಗಳು ಶ್ರೀಹರಿಯಾವೇಶವುಳ್ಳವಾದ್ದರಿಂದ ಪ್ರಾದುರ್ಭಾವವೆನಿಸುತ್ತವೆ.

ವಿಶೇಷಾರ್ಥ.—ಶೇಷದೇವರಿಗೆ ಉಪಸಾಧಕರೆಂದು ಪ್ರಮಾಣವಿರುವುದರಿಂದ ಮೂರನೆಯ ಅಂಗರೆಂದೂ, ಎರಡನೆಯ ಅಂಗಭೂತಳಾದ ಸರಸ್ವತಿಯು ಸಾಧಕಳೆಂತಲೂ, ಪ್ರಥಮಾಂಗರಾದ ವಾಯುದೇವರು ಸಾಧಕೇಶರೆಂತಲೂ ಹೇಳಿಸಿಕೊಳ್ಳುತ್ತಾರೆ.

ಅವತಾರಿಕೆ.—ಹಿಂದಿನ ಶ್ಲೋಕದಲ್ಲಿ ಶೇಷದೇವರು ಭಗವತ್ಕಾರ್ಯ ಸಾಧಕರಲ್ಲಿ ಮೂರನೆಯವರೆಂದು ಹೇಳಿ ಅವರ ಮತ್ತೊಂದು ಅಂಶದ ಅವತಾರವನ್ನು ಸೂಚಿಸುತ್ತಾರೆ.-

ಶ್ಲೋಕ ॥ ಋದ್ರಾತ್ಮಕತ್ವಾತ್ ಶೇಷಸ್ಯ ಶುಕೋದ್ರೌಣಿಶ್ಚ ತತ್ತನುಃ ।
ಇಂದ್ರೋ ನರಾಂಶ ಸಂಪತ್ತ್ಯಾ । ಪಾರ್ಥೋಽಪೀಷತ್ತದಾತ್ಮಕಃ ॥೧೩೧॥

ಅರ್ಥ.—ಋದ್ರಾತ್ಮಕತ್ವಾತ್=ಹಿಂದಿನ ಕಲ್ಪದಲ್ಲಿ ಋದ್ರಾವತಾರತ್ವೇನ ಸಾಧನಮಾಡಿದವರಾದ್ದರಿಂದ, ಶೇಷಸ್ಯ=ಶೇಷದೇವರೇ, ಶುಕಃ=ಶುಕಾಚಾರ್ಯರು, ದ್ರೌಣಿಶ್ಚ=ಅಶ್ವತ್ಥಾಮಾಚಾರ್ಯರೂನೂ, ತತ್ತನುಃ-ತತೇ=ಆ ಋದ್ರದೇವರ, ತನುಃ-ಶರೀರ ಉಳ್ಳವರು, ಇಂದ್ರಃ=ಇಂದ್ರಾವತಾರನಾದ, ಪಾರ್ಥೋಽಪಿ=ಅರ್ಜುನನೂ ಕೂಡ, ನರಾಂಶಸಂಪತ್ತ್ಯಾ=ನರಾಂಶ=ನರರೂಪನಾದ ಶೇಷದೇವರ, ಅಂಶಸಂಪತ್ತ್ಯಾ=ಅಂಶವಿರೂಢದರಿಂದ, ಈಷತ್-ಕೊಂಚವಾಗಿ, ತದಾತ್ಮಕಃ=ಶೇಷ ಸ್ವರೂಪ ಉಳ್ಳವರಾಗಿದ್ದಾರೆ.

ತಾತ್ಪರ್ಯ.—ಋದ್ರದೇವರು ಸಾಧನಾನಂತರದಲ್ಲಿ ಶೇಷಪದವಿಗೆ ಬಂದವರಾದ್ದರಿಂದ ಋದ್ರಾವತಾರವು ಶೇಷದೇವರಂತೆ ಭಗವತ್ಕಾರ್ಯಸಾಧಕವೆಂದು ತಿಳಿಯಬೇಕು. ಶುಕಾಚಾರ್ಯರು ಅಶ್ವತ್ಥಾಮಾಚಾರ್ಯರು ಈ ಎರಡವತಾರಗಳೂ ಋದ್ರಾವತಾರವೇ ಹೊರತು ಬೇರೆಯಲ್ಲ. ಆದ್ದರಿಂದ ಶೇಷದೇವರಂತೆ ಋದ್ರದೇವರೂ ಮೂರನೆಯ ಅಂಗಭೂತರೆಂದು ತಿಳಿಯಬೇಕು. ಇಂದ್ರಾಂಶನಾದ ಅರ್ಜುನನು ನರನಾಮಕ ಶೇಷದೇವರಂಶದಿಂದ ಕೂಡಿದನು. ಇದರಿಂದ ಶುಕಾಚಾರ್ಯರೂ ಅಶ್ವತ್ಥಾಮಾಚಾರ್ಯರೂ ಪರಮಾತ್ಮನಿಗೆ ತೃತೀಯಾಂಗಭೂತರೆಂತಲೂ, ಅರ್ಜುನನೂ ಕೂಡ ಸ್ವಲ್ಪ ತೃತೀಯಾಂಗಭೂತನೆಂತಲೂ ತಿಳಿಯಬೇಕು.

ವಿಶೇಷಾರ್ಥ.—ದೇವತೆಗಳು ಅಂಶರೂಪದಿಂದಲೂ ಆವೇಶ ವಿಶೇಷಗಳಿಂದಲೂ ಅವತರಿಸಿ ಭಗವಂತನ ಅವತಾರ ಕಾರ್ಯಗಳಲ್ಲಿ ಸಹಾಯಭೂತರಾಗಿ ತಮ್ಮ ತಮ್ಮ ಪದವಿಯಿಂದ ಸಾಧನಮಾಡಲ್ಪಟ್ಟ ಶುಭ ಕರ್ಮಗಳಿಂದ ಪರಮಾತ್ಮನ ಪೂರ್ಣಾನುಗ್ರಹಕ್ಕೆ ಭಾದ್ಯರಾಗುತ್ತಾರೆ. ಕೃಷ್ಣಾವತಾರದಲ್ಲಿ ಭಗವಂತನು ಪಾಂಡವರಲ್ಲಿ ದೇಹಾಭಿಮಾನ ಉಳ್ಳವನಾಗಿ ಅರ್ಜುನನಿಗೆ ಸಾರಥಿಯಾಗಿ ಅನೇಕ ದುರ್ಗಮಗಳನ್ನು ದಾಟಿಸಿ ಉದ್ಧಾರ ಮಾಡಿರುತ್ತಾನೆ. ಇವೆಲ್ಲವೂ ಆವೇಶಭೂತ ಶೇಷದೇವರ ಸೇವೆಯಿಂದುಂಟಾದ ಅಭಿಮಾನವೇ ಹೊರತು ಬೇರೆಯಲ್ಲ. ಈ ರೀತಿಯಾಗಿ ಶ್ರೀಹರಿಯು ಅಭಿ

ಮಾನವನ್ನ ಪಡೆದಿದ್ದುದರಿಂದಲೇ ಶೇಷದೇವರು ಆಸನ, ಶಯ್ಯೆ, ಆತುಪತ್ರ ಮೊದಲಾದ ರೂಪಗಳಿಂದ ಶ್ರೀಹರಿಯನುಗ್ರಹಕ್ಕೆ ಭಾಧ್ಯರಾಗಿರುತ್ತಾರೆ.

ಅವತಾರಿಕೆ.—ಅನಂತರ ಪ್ರದ್ಯುಮ್ನಾದಿಗಳು ಭಗವತ್ಕಾರ್ಯ ಸಾಧಕರೆಂದು ಹೇಳಿ, ಭಾರತ ಗ್ರಂಥದಲ್ಲಿ ಪಾಂಡವರ ಕಥೆ ಹೇಳೋಣದರಿಂದ ಶ್ರೀಹರಿಯ ಮಹಾತ್ಮ್ಯೆ ಸೂಚಿತವೆಂದು ಹೇಳುತ್ತಾರೆ.—

**ಶ್ಲೋಕ|| ಪ್ರದ್ಯುಮ್ನಾದ್ಯಾಃತತೋವಿಷ್ಣೋರಂಗಭೂತಾಃಕ್ರಮೇಣತು ||**
**ಚರಿತಂವೈಷ್ಣವಾನಾಂಚ ವಿಷ್ಣೂದ್ರೇಕಾಯಕಥ್ಯತೇ ||೧೩||**

ಅರ್ಥ.—ತತಃ=ಅನಂತರದಲ್ಲಿ, ಪ್ರದ್ಯುಮ್ನಾದ್ಯಾಃ=ಪ್ರದ್ಯುಮ್ನನೇ ಮೊದಲಾದವರು, ಕ್ರಮೇಣತು=ಕ್ರಮವಾಗಿ, ವಿಷ್ಣೋಃ=ಶ್ರೀವಿಷ್ಣುವಿಗೆ, ಅಂಗಭೂತಾಃ=ಸೃಷ್ಟ್ಯಾದಿ ವ್ಯಾಪಾರಗಳಿಗೆ ಸಾಧಕರು, ವೈಷ್ಣವಾನಾಂ=ವಿಷ್ಣು ಭಕ್ತರ, ಚರಿತಂಚ=ಕಥೆಯು, ವಿಷ್ಣೂದ್ರೇಕಾಯ, ವಿಷ್ಣು=ಶ್ರೀಹರಿಯ, ಉದ್ರೇಕಾಯ=ಶ್ರೇಷ್ಠತ್ವಕ್ಕಾಗಿ, ಕಥ್ಯತೆ=ಹೇಳಲ್ಪಡುತ್ತದೆ.

ತಾತ್ಪರ್ಯ.—ಪ್ರದ್ಯುಮ್ನನೇ ಮೊದಲಾದವರು ಶ್ರೀಹರಿಯ ಜಗತ್ಸೃಷ್ಟ್ಯಾದಿ ವ್ಯಾಪಾರಕ್ಕೆ ಕ್ರಮದಿಂದ ಅಂಗಭೂತರು. ಭಗವದ್ಭಕ್ತರುಗಳ ಕಥೆಯು ಭಗವಂತನ ಪ್ರಾಶಸ್ತ್ಯಕ್ಕಾಗಿಯೇ ಹೇಳಲ್ಪಡುತ್ತದೆ ಎಂದು ತಿಳಿಯಬೇಕು.

ವಿಶೇಷಾರ್ಥ.—ಇಂದ್ರಕಾಮರು ತಾರತಮ್ಯದಲ್ಲಿ ಸಮರು. ಇಂದ್ರನಂತೆ ಪ್ರದ್ಯುಮ್ನಾವತಾರನಾದ ಕಾಮನು ಪ್ರದ್ಯುಮ್ನನೆಂಬ ಭಗವದಂಶಯುಕ್ತನಾದುದರಿಂದ ಅವನೂ ಸಾಧಕನೆಂದು ತಿಳಿಯಬೇಕು. ಪ್ರದ್ಯುಮ್ನನನಂತರ ಅನಿರುದ್ಧಾದಿಗಳೂ ಕೂಡ ಈ ರೀತಿಯಾಗಿ ಸೇವಕರೆಂದು ತಿಳಿಯಬೇಕು. ಶ್ರೀಭಾರತ ಗ್ರಂಥದಲ್ಲಿ ಕೃಷ್ಣಕಥಾ ವಿಶೇಷವಾಗಿ ಹೇಳದೆ ಪಾಂಡವರ ಕಥೆಯನ್ನೇ ವಿಶೇಷವಾಗಿ ಹೇಳಿರುತ್ತಾರೆ. ಭಗವದ್ಭಕ್ತರಾದ ಪಾಂಡವರ ಕಥೆಯನ್ನು ಹೇಳುವುದರಿಂದ ಕೃಷ್ಣ ಕಥೆಯನ್ನೂ ಹೇಳಿದಂತಾಯಿತು. ಹೇಗೆಂದರೆ, ಕೃಷ್ಣನ ಅನುಗ್ರಹದಿಂದಲೇ ಪಾಂಡವರು ಜಯವಂತರಾದ್ದರಿಂದ,

ಭಗವದ್ಭಕ್ತರಲ್ಲಿ ಭಗವಂತನನುಗ್ರಹವು ಜಯರೂಪದಿಂದಿದೆಯೆಂಬ ಭಗವಂತನ ಮಹಿಮೆಯನ್ನು ಹೇಳಿದಂತಾಯ್ತು.

ಅವತಾರಿಕೆ.—ಭಗವದ್ರೂಪಗಳಿಗೆ ದುಃಖಾದಿಗಳಿಲ್ಲವೆಂದು ಹೇಳುವ ಭಾಗವತ ವಚನವನ್ನು ಉದಾಹರಿಸುತ್ತಾರೆ. ಅದರಂತೆಯೇ ಭಾಗವತದಲ್ಲಿ ಶ್ರೀಹನುಮಂತದೇವರ ವಚನವೂ ಇದೆಯೆಂದು ಹೇಳುತ್ತಾರೆ.—

**ಶ್ಲೋಕ॥ ತಥಾಭಾಗವತೇಪ್ಯುಕ್ತಂ ಹನೂಮದ್ವಚನಂಪರಂ ॥ ಮರ್ತ್ಯಾವತಾರಸ್ತ್ವಿಹಮರ್ತ್ಯಶಿಕ್ಷಣಂ ರಕ್ಷೋವಧಾಯೈವನ ಕೇವಲಂ ವಿಭೋಃ ॥ ಕುತೋಸ್ಯಹಿಸ್ಯೂರಮತಃಸ್ವಆತ್ಮನ ।ಸಿತಾಕೃತಾನಿ ವ್ಯಸನಾದೀಶ್ವರಸ್ಯ ॥೧೩೩॥**

ಅರ್ಥ.—ತಥಾ=ಅದೇ ರೀತಿಯಾಗಿ, ಭಾಗವತೇಪಿ=ಭಾಗವತದಲ್ಲಿಯೂ, ಪರಂ=ಶ್ರೇಷ್ಟವಾದ, ಹನುಮದ್ವಚನಂ=ಹನುಮಂತದೇವರ, ವಚನವು, ಉಕ್ತಂ=ಹೇಳಲ್ಪಟ್ಟಿರುತ್ತದೆ. (ಅದೇನೆಂದರೆ) ವಿಭೋಃ=ಶ್ರೀನಾರಾಯಣನ, ಮರ್ತ್ಯಾವತಾರಃ=ಮನುಷ್ಯತ್ವೇನ ಅವತಾರವು, ಕೇವಲಂ=ಮುಖ್ಯವಾಗಿ, ರಕ್ಷಃ=ರಾಕ್ಷಸರ, ವಧಾಯೈವ=ಸಂಹಾರಕ್ಕಾಗಿಯೇ, ನ=ಅಲ್ಲ, ಮತ್ತೇನೆಂದರೆ ಇಹ=ಈಭೂಲೋಕದಲ್ಲಿನ. ಮರ್ತ್ಯ ಶಿಕ್ಷಣಂ=ಮನುಷ್ಯ ಶಿಕ್ಷಣಕ್ಕಾಗಿಯೂ ಆಗಿರುತ್ತದೆ. ಅಸ್ಯ=ಇಂಥಾ, ಸ್ವೇ=ಸ್ವ ಸಂಬಂಧಿಯಾದ, ಆತ್ಮನಿ=ತನ್ನಲ್ಲಿ (ತನ್ನಲ್ಲೇ ತಾನು), ರಮತಃ=ವಿಹರಿಸುವಂಥಾ, ಈಶ್ವರಸ್ಯ=ಸ್ವಾಮಿಯಾದ, ವಿಷ್ಣು=ರಾಮನಿಗೆ ಅಥವಾ ರಾಮಚಂದ್ರದೇವರಿಗೆ, ಸೀತಾಕೃತಾನಿ=ಸೀತಾ ವಿಯೋಗ ನಿಮಿತ್ತವಾದ, ವ್ಯಸನಾನಿ=ದುಃಖಗಳು, ಕುತಃ=ಹೇಗೆ, ಸ್ಯುಃ=ಉಂಟಾದೀತು. (ಉಂಟಾಗಲಾರದು) ಹಿ=ಪ್ರಸಿದ್ಧವು.

ತಾತ್ಪರ್ಯ.—ಹನುಮಂತದೇವರು ಭಾಗವತದಲ್ಲಿ ಶ್ರೀನಾರಾಯಣನು ಭೂಲೋಕದಲ್ಲಿ ಮನುಷ್ಯಾವತಾರ ಮಾಡುವುದು ಮುಖ್ಯವಾಗಿ ಮನುಷ್ಯ ಶಿಕ್ಷಣಕ್ಕಾಗಿಯೇ ಹೊರತು ರಾಕ್ಷಸರ ಸಂಹಾರಕ್ಕಲ್ಲ. ಸ್ವರಮಣನಾದ ವಿಷ್ಣುವಿಗೆ ರಾಮಾವತಾರದಲ್ಲಿ ಸೀತಾವಿಯೋಗ ನಿಮಿತ್ತವಾದ ದುಃಖಾದಿಗಳು ಹೇಗೆ ಉಂಟಾದೀತು ?ಸರ್ವೋತ್ತಮನಾದ ಸ್ವಾಮಿಗೆ ಸರ್ವಥಾ ಯಾವ ಅವತಾರಗಳಲ್ಲಿಯೂ ದುಃಖ ಸಂಬಂಧವೇ ಇಲ್ಲವೆಂದು ತಿಳಿಯಬೇಕು.

ವಿಶೇಷಾರ್ಥ.—ಸ್ಮರಮಣನೆಂದರೆ ಅನಾದಿಕಾಲದಿಂದಲೂ ಕಾಲತಃ ದೇಶತಃ ವ್ಯಾಪ್ತಳೆನಿಸಿದ ಮಹಾಲಕ್ಷ್ಮೀದೇವಿಯರಿಗೆ ತನ್ನ ದೇಹ ಸಂಭಂದವನ್ನು ಕೊಟ್ಟು ಆನಂದ ಪಡಿಸಬೇಕೆಂಬ ಇಚ್ಛೆಯುಳ್ಳ ಹರಿಯು ರಮಾದೇಹವಲ್ಲಿ ತನ್ನ ಹೆಣ್ಣು ರೂಪದಿಂದಲೇ ವಿಹರಿಸಿ ತಾನು ಪೂರ್ಣನಾದುದರಿಂದ ತನ್ನ ವಿಹಾರದಿಂದ ಪ್ರಕಟಿಸಿದ ಆನಂದದಿಂದ ರಮಾದೇವಿಯರನ್ನು ಆನಂದ ಪಡಿಸುವನಾದ್ದರಿಂದ ಶ್ರೀಹರಿಗೆ ಸ್ಮರಮಣನೆಂದು ಹೆಸರು.

ಅವತಾರಿಕೆ.—ಶ್ರೀಹರಿಗೆ ಜ್ಞಾನಿಗಳ ಅಧೀಶ್ವರತ್ವರೂಪವಾದ ಲಕ್ಷಣವನ್ನೂ ಮತ್ತೆ ಕಾಮಾದಿ ದೋಷದೂರತ್ವವನ್ನೂ ತಿಳಿಸುತ್ತಾರೆ.

**ಶ್ಲೋಕ॥ನವೈಸ ಆತ್ಮಾತ್ಮವತಾಂಅಧೀಶ್ವರೋ ಭುಂಕ್ತೇಹಿದುಃಖಂ ಭಗವಾನ್ ವಾಸುದೇವಃ। ನಸ್ತ್ರೀಕೃತಂಕಶ್ಮಲಮಶ್ನುವೀತನಲಕ್ಷ್ಮಣಂಚಾಪಿ ಜಹಾತಿಕುತ್ರಚಿತ್ ॥೧೩॥**

ಅರ್ಥ.—ಭಗವಾನ್=ಗುಣಪೂರ್ಣನಾದ, ಆತ್ಮಾ-ಸರ್ವತ್ರ ವ್ಯಾಪ್ತನಾದ, ಆತ್ಮವತಾಂ=ಜ್ಞಾನಿಗಳಿಗೆ, ಅಧೀಶ್ವರಃ=ಸ್ವಾಮಿಯಾದ, ಸಃ=ಅಂಥ, ವಾಸುದೇವಃ=ಶ್ರೀರಾಮಚಂದ್ರಾವತಾರವನ್ನು ಮಾಡಿದ ಶ್ರೀನಾರಾಯಣನು, ದುಃಖಂ=ದುಃಖವನ್ನು, ನಭುಂಕ್ತೇ=ಅನುಭವಿಸುವುದಿಲ್ಲ. ವೈ=ಇದು ಪ್ರಸಿದ್ಧವು, ಸ್ತ್ರೀಕೃತಂ=ಸ್ತ್ರೀ ನಿಮಿತ್ತವಾದ, ಕಶ್ಮಲಂ=ಮೋಹಾದಿಗಳನ್ನ, ನಾಶ್ನುವೀತ=ಅನುಭವಿಸಲಾರನು. ಲಕ್ಷ್ಮಣಂಚ=ಲಕ್ಷ್ಮಣದೇವರನ್ನೂ, ಕರ್ಹಿದಪಿ, ಯಾವಾಗಲಾದರೂ, ನಚಹಾತಿ=ಬಿಡುವುದಿಲ್ಲ.

ತಾತ್ಪರ್ಯ.—ಜ್ಞಾನಾನಂದಾದಿ ಗುಣಪೂರ್ಣನಾದ ಸರ್ವತ್ರ ವ್ಯಾಪ್ತನಾದ ಜ್ಞಾನಿಗಳಿಗೆ ಸ್ವಾಮಿಯಾದ ವಾಸುದೇವ ಶಬ್ದವಾಚ್ಯನಾದ ನಾರಾಯಣದೇವರು ದುಃಖರಹಿತನು, ಮತ್ತು ಸ್ತ್ರೀನಿಮಿತ್ತವಾದ ಕಾಮಾದಿ ದೋಷ ಶೂನ್ಯನು ಮತ್ತು ಭಕ್ತನಾದ ಲಕ್ಷ್ಮಣದೇವರನ್ನು ಎಂದಿಗೂ ಬಿಡತಕ್ಕವನಲ್ಲವೆಂದು ತಿಳಿಯಬೇಕು.

ವಿಶೇಷಾರ್ಥ.—ಶ್ರೀಹರಿಯು ಅವತಾರ ರೂಪಗಳು ಮತ್ತು ಮೂಲರೂಪಗಳು ಅಂಶರೂಪಗಳು ಸಹ ಸರ್ವತ್ರಪೂರ್ಣಗಳು, ಮತ್ತು ದೋಷ

ರಹಿತವಾದವುಗಳು ಎಂದು ತಿಳಿಸುವುದಕ್ಕಾಗಿ ತಾತ್ಪರ್ಯಾಚಾರ್ಯರು ರಾಮನಿಗೆ ಸೀತಾದೇವಿಯ ನಿಮಿತ್ತ ವಿಯೋಗ ದುಃಖವಿಲ್ಲ, ಮತ್ತು ಲಕ್ಷ್ಮಣದೇವರನ್ನ ಬಿಡುವುದಿಲ್ಲವೆಂದು ಸೂಚಿಸುವುದರಿಂದ ಶ್ರೀಪರಮಾತ್ಮನು ಭಕ್ತಪರಾಧೀನನೆಂತಲೂ ತಿಳಿಯಬೇಕು.

ಅವತಾರಿಕೆ.—ಪೂರ್ವದಲ್ಲಿ ಹೇಳಿದ ಪ್ರಮೇಯವನ್ನ ಕಾರಣ ಮೂಲಕ ತಿಳಿಸುತ್ತಾರೆ.—

**ಶ್ಲೋಕ|| ಯತ್ಪಾದಪಂಕಜ ಪರಾಗ ನಿಷೇವಕಾಣಾಂ ದುಃಖಾನಿಸರ್ವಾಣಿ ಲಯಂ ಪ್ರಯಾಂತಿ || ಸಬ್ರಹ್ಮವಂದ್ಯಚರಣೋ ಜನಮೋಹನಾಯ ಸ್ತ್ರೀಸಂಗಿನಾಮಿತಿರತಿಂ ಪ್ರಥಯಂಶ್ಚಚಾರ ||೧೩||**

ಅರ್ಥ.—ಯತ್‌-ಯಾವ ನಾರಾಯಣನ, ಪಾದಪಂಕಜ=ಪಾದಕಮಲಗಳ, ಪರಾಗ=ಧೂಳಿಯನ್ನು; ನಿಷೇವಕಾಣಾಂ=ಸೇವಿಸುವ ಜನರುಗಳ, ಸರ್ವಾಣಿ=ಸಮಸ್ತವಾದ, ದುಃಖಾನಿ=ದುಃಖಗಳು, ಲಯಂ=ನಾಶವನ್ನು, ಪ್ರಯಾಂತಿ=ಹೊಂದುತ್ತವೆಯೋ; ಸಃ=ಅಂತಹ, ಬ್ರಹ್ಮವಂದ್ಯಚರಣ-ಬ್ರಹ್ಮದೇವರಿಂದ ನಮಸ್ಕಾರ ಮಾಡಿಸಿಕೊಳ್ಳಲ್ಪಟ್ಟ ಪಾದಗಳುಳ್ಳ ಶ್ರೀರಾಮಚಂದ್ರದೇವರು, ಜನಮೋಹನಾಯ=ದುರ್ಜನರ ಮೋಹಕ್ಕೋಸ್ಕರವಾಗಿ, ಸ್ತ್ರೀಸಂಗಿನಾಂ=ಸ್ತ್ರೀಯರ ಸಂಗಮಾಡತಕ್ಕ ಚೇತನರುಗಳಿಗೆ, ರತಿಂ-ಆದರ ಸುಖವು, ಇತಿ-ಇಂಥಾದ್ದೆಂದು, ಪ್ರಥಯನ್‌ಸರ=ಪ್ರಸಿದ್ಧಿಪಡಿಸುವವನೋಪಾದಿಯಲ್ಲಿ, ಚಚಾರ=ಆಚರಿಸಿದನು.

ತಾತ್ಪರ್ಯ.—ಯಾವ ದೇವರ ಪಾದಕಮಲಗಳ ಧೂಳಿಯನ್ನ ಸೇವಿಸುವುದರಿಂದ ಚೇತನರುಗಳ ದುಃಖಗಳು ನಾಶವಾಗುತ್ತವೆಯೋ, ಅಂತಹ ಬ್ರಹ್ಮಾದಿಗಳಿಂದ ನಮಸ್ಕಾರ ಮಾಡಿಸಿಕೊಳ್ಳಲ್ಪಟ್ಟ ನಾರಾಯಣನು ದುರ್ಜನರಿಗೆ ಮೋಹವನ್ನುಂಟು ಮಾಡುವದಕ್ಕೋಸ್ಕರವಾಗಿಯೂ ಮತ್ತು ಸ್ತ್ರೀಸಂಗಿಗಳ ಮನೋವೃತ್ತಿ ಇಂತಹುದೆಂದು ಲೋಕದಲ್ಲಿ ಪ್ರಸಿದ್ಧಿ ಪಡಿಸುವದಕ್ಕೋಸ್ಕರವಾಗಿಯೂ ಹಾಗೆ ಆಚರಿಸಿದನೆಂದು ತಿಳಿಯಬೇಕು.

ವಿಶೇಷಾರ್ಥ.--ಪರಬ್ರಹ್ಮನ ಅವತಾರಗಳು ಮೂಲರೂಪದಂತೆಯೇ ಚಿದಾನಂದಾತ್ಮಕವಾದ್ದರಿಂದಲೂ, ಮೂಲರೂಪಕ್ಕೂ ಅವತಾರ ರೂಪಗಳಿಗೂ ಭೇದವಿಲ್ಲದ್ದರಿಂದಲೂ ಸ್ವರಮಣನಾದ್ದರಿಂದಲೂ ಈ ದೇವರು ನಡಿಸಿದ ನಟನೆಯುಲ್ಲವೂ ದುರ್ಜನರ ಮೋಹಕ್ಕೆಂತಲೂ, ಸಜ್ಜನರ ಉದ್ಧಾರಕ್ಕೆಂತಲೂ ತಿಳಿಯಬೇಕು.

ಅವತಾರಿಕೆ.—ಶ್ರೀನಾರಾಯಣನು ತನ್ನ ಅವತಾರಗಳಲ್ಲಿ ನಡಿಸಿದ ಕಾರ್ಯಗಳನ್ನ ಭಾರತ ವಚನಗಳಿಂದ ತಿಳಿಸುತ್ತಾರೆ.

**ಶ್ಲೋಕ॥ ಕ್ವಚಿಚ್ಛಿವಂ ಕ್ವಚಿದೃಷೀನ್ ಕ್ವಚಿದ್ದೇವಾನ್ ಕ್ವಚಿನ್ನರಾನ್॥ ನಮಸ್ಯತ್ಯರ್ಚಯತಿ ಸ್ತೌತಿ ವರಾನ್ಪ್ರಾರ್ಥಯತೇಽಪಿಚ। ಲಿಂಗಂ ಪ್ರತಿಷ್ಠಾಪಯತಿ ವೃಣೋತ್ಯಸುರತೋ ವರಾನ್ ॥೧೩೬॥**

ಅರ್ಥ.—ಕ್ವಚಿತ್=ಕೆಲವು ಸ್ಥಳಗಳಲ್ಲಿ, ಶಿವಂ=ರುದ್ರದೇವರನ್ನೂ, ಕ್ವಚಿತ್=ಕೆಲವು ಸ್ಥಳಗಳಲ್ಲಿ, ಋಷೀನ್=ಋಷಿಗಳನ್ನೂ, ಕ್ವಚಿತ್-ಕೆಲವು ಸ್ಥಳಗಳಲ್ಲಿ, ದೇವಾನ್=ದೇವತೆಗಳನ್ನೂ, ಕ್ವಚಿತ್-ಕೆಲವು ಸ್ಥಳಗಳಲ್ಲಿ, ನರಾನ್ = ಮನುಷ್ಯರನ್ನೂ, ನಮತಿ = ನಮಸ್ಕಾರಮಾಡುತ್ತಾನೆ, ಅರ್ಚಯತಿ=ಪೂಜೆಮಾಡುತ್ತಾನೆ, ಸ್ತೌತಿ=ಸ್ತೋತ್ರಮಾಡುತ್ತಾನೆ. ಅಪಿಚ= ಮತ್ತು, ವರಾನ್-ವರಗಳನ್ನು, ಅರ್ಥಯತೆ-ಪ್ರಾರ್ಥಿಸುತ್ತಾನೆ, ಲಿಂಗಂ-ರುದ್ರದೇವರ ಲಿಂಗವನ್ನು, ಪ್ರತಿಷ್ಠಾಪಯತಿ-ಪ್ರತಿಷ್ಟಿಸುತ್ತಾನೆ, ಅಸುರತಃ= ದೈತ್ಯರದೆಶೆಯಿಂದ, ವರಾನ್-ವರಗಳನ್ನು, ವೃಣೋತಿ=ಸ್ವೀಕರಿಸುತ್ತಾನೆ.

ತಾತ್ಪರ್ಯ.—ಶ್ರೀನಾರಾಯಣನು ತನ್ನ ಅವತಾರ ರೂಪಗಳಲ್ಲಿಯೂ ಮೂಲರೂಪದಲ್ಲಿಯೂ ಶಿವಪೂಜೆ, ಋಷಿಪೂಜೆ, ದೇವತೆಗಳ ಪೂಜೆ, ಮನುಷ್ಯ ಪೂಜೆ, ಇತ್ಯಾದಿಗಳನ್ನ ಆಚರಿಸಿ ನಮಸ್ಕಾರ ಮಾಡಿ ವರಗಳನ್ನು ಕೇಳಿರುತ್ತಾನೆ. ಮತ್ತು ಕೆಲವು ಸ್ಥಳಗಳಲ್ಲಿ ಲಿಂಗವನ್ನು ಪ್ರತಿಷ್ಠಿಸಿ ಅಸುರರಿಂದ ಕೆಲವು ಸಮಯಗಳಲ್ಲಿ ವರಗಳನ್ನೂ ಪಡಿದಿರುತ್ತಾನೆ.

ವಿಶೇಷಾರ್ಥ.—ಮಾರ್ಕಂಡೇಯ ಪುರಾಣದಲ್ಲಿ ವಿಷ್ಣುವಿನ ಕಿವಿಯಿಂ

ದ ಹುಟ್ಟಿದ ಮಧು ಮತ್ತು ಕೈಟಭರೆಂಬ ಇಬ್ಬರು ದೈತ್ಯರು ವಿಷ್ಣುವಿನ ಸಂಗಡ ಯುದ್ಧ ಮಾಡುವಾಗ, ಬಲಪೂರ್ಣನಾದ ನಾರಾಯಣನು ದೈತ್ಯರ ಮೋಹಕ್ಕಾಗಿ ಪರಾಜಿತನಾಗಲು ಅವರುಗಳು " ಎಲೋ ವಿಷ್ಣುವೇ, ನಮ್ಮಿಂದ ನೀನು ವರಗಳನ್ನು ಕೇಳು " ಎಂದರು. ಆಗ ವಿಷ್ಣುವು ನೀವಿಬ್ಬರೂ ಮರಣವನ್ನು ಹೊಂದುವರಾಗಿರಿ ಎಂದು ವರವನ್ನು ಕೇಳಿರುತ್ತಾನೆ. ಆದ್ದರಿಂದ ಅವರು ಅದೇ ರೀತಿ ವರ ಕೊಟ್ಟು ಆ ವಿಷ್ಣುವಿನಿಂದಲೇ ಪುನಃ ಹತರಾದ್ದರಿಂದ ಮಧುಸೂದನನೆಂತಲೂ, ಕೈಟಭಾರಿ ಎಂತಲೂ ಬಿರದುಳ್ಳವನಾಗಿರುತ್ತಾನೆ.

ಅವತಾರಿಕೆ.—ಪೂರ್ವದಲ್ಲಿ ಹೇಳಿದ ರೀತ್ಯಾ ವರವನ್ನು ಕೇಳುವುದು, ಶಿವಪೂಜೆ ಮಾಡುವುದು ಇವೇ ಮೊದಲಾದ ವ್ಯಾಪಾರಗಳಿಂದ ಶ್ರೀಹರಿಯು ಬಲಹೀನನೆಂತಲೂ, ಪರಾಧೀನನೆಂತಲೂ ಭಕ್ತರು ತಿಳಿದು ಸಾಧನ ರಹಿತರಾದಾರು ಎಂದು ತಿಳಿದು ಶ್ರೀಹರಿಯು ಸ್ವತಂತ್ರ್ಯಾದಿ ಗುಣಗಳನ್ನು ಪ್ರತಿಪಾದನಮಾಡುತ್ತಾನೆ.

**ಶ್ಲೋಕ|| ಸರ್ವೇಶ್ವರಃ ಸ್ವತಂತ್ರೋಽಪಿ ಸರ್ವಶಕ್ತಿಶ್ಚ ಸರ್ವದಾ|**
**ಸರ್ವಜ್ಞೋಽಪಿವಿಮೋಹಾಯ ಜನಾನಾಂ ಪುರುಷೋತ್ತಮಃ ||೧೩೭||**

ಅರ್ಥ.—ಪುರುಷೋತ್ತಮಃ=ಕ್ಷರಾಕ್ಷರ ಪುರುಷರುಗಳಿಗಿಂತ ಉತ್ತಮನಾದ, ಸರ್ವೇಶ್ವರಃ=ಸರ್ವ ಪ್ರಪಂಚಕ್ಕೆ ಸ್ವಾಮಿಯಾದ, ಶ್ರೀನಾರಾಯಣನು, ಸ್ವತಂತ್ರೋಽಪಿ=ಪರಾಧೀನನಲ್ಲದಿದ್ದರೂ, ಸರ್ವದಾ=ಸರ್ವ ಕಾಲದಲ್ಲಿಯೂ, ಸರ್ವಶಕ್ತಿಶ್ಚ=ಸಮಸ್ತ ಶಕ್ತಿವುಳ್ಳವನಾದರೂ, ಸರ್ವಜ್ಞೋಽಪಿ=ಸಮಸ್ತ ವಿಷಯಗಳನ್ನೂ ತಿಳಿದವನಾದರೂ, ಜನಾನಾಂ = ಮಾನವರ, ವಿಮೋಹಾಯ=ವಿಶೇಷಾಕಾರವಾದ ಮೋಹಕ್ಕೋಸ್ಕರಲೇ, ಅಸುರತಃ=ದೈತ್ಯರ ದೆಶೆಯಿಂದ, ವರಾನ್=ವರಗಳನ್ನು, ವೃಣೋತಿ=ಸ್ವೀಕಾರ ಮಾಡುತ್ತಾನೆ.

ತಾತ್ಪರ್ಯ.— ಜಗದ್ರಕ್ಷಕನಾದ ಶ್ರೀಹರಿಯು ಸರ್ವೇಶ್ವರನು, ಸ್ವತಂತ್ರನು, ಸರ್ವ ಕಾಲದಲ್ಲಿಯೂ ಸರ್ವ ಶಕ್ತಿಯುಳ್ಳವನು, ಈ ಹರಿಯು

ಸರ್ವಜ್ಞನಾದರೂ ದೈತ್ಯರುಗಳಿಂದ ವರವನ್ನು ಪಡಿಯುತ್ತಾನೆ.

ವಿಶೇಷಾರ್ಥ.—ಸಾತ್ವಿಕ ರಾಜಸ ತಾಮಸರೆಂಬ ಮೂರು ವಿಧ ಚೇತನರುಗಳಿಂದ ಸರ್ವಜ್ಞತ್ವಾದಿಗುಣವುಳ್ಳ ಶ್ರೀವಿಷ್ಣುವು ಸಾತ್ವಿಕರಿಂದ ಗುಣಪೂರ್ಣನೆಂತಲೂ, ರಾಜಸರಿಂದ ಸರ್ವಚೇತನ ಸಾಮಾನ್ಯನೆಂತಲೂ, ತಾಮಸ ಚೇತನರಿಂದ ತಮಗಿಂತಲೂ ಬಲಹೀನನೆಂತಲೂ, ಈ ರೀತಿ ಮೂರು ವಿಧ ಉಪಾಸಿತನಾಗಿ ಅನುಗುಣವಾದ ಮೂರು ಫಲಗಳನ್ನು ಕೊಡುವನಾದ್ದರಿಂದ ಅದಕ್ಕೆ ಅನುಗುಣವಾದ ಕಾರ್ಯಗಳನ್ನು ಆಚರಿಸಿದ್ದಾನೆಂದು ತಿಳಿಯಬೇಕು.

ಅವತಾರಿಕೆ.—ಹಿಂದಿನ ಶ್ಲೋಕದಲ್ಲಿ ಹೇಳಿದ ಭಗವಂತನ ಮಹಿಮೆಯನ್ನು ಉಪಸಂಹಾರ ಮಾಡುತ್ತಾರೆ.

**ಶ್ಲೋಕ || ತಸ್ಮಾದ್ಯೋಮಹಿಮಾವಿಷ್ಣೋಃ ಸರ್ವಶಾಸ್ತ್ರೋದಿತಸ್ಸಹಿ |**
**ನಾನ್ಯದಿತ್ಯೇಷಶಾಸ್ತ್ರಾಣಾಂ ನಿರ್ಣಯಸ್ಸಮುದಾಹೃತಃ ||೧೩೮||**

ಅರ್ಥ.—ತಸ್ಮಾತ್=ಆ ಕಾರಣದ ದೆಶೆಯಿಂದ, ಯಃ=ಯಾವ, ವಿಷ್ಣೋ=ಶ್ರೀನಾರಾಯಣನ, ಮಹಿಮಾ—ಮಹಿಮೆಯು, ಸರ್ವಶಾಸ್ತ್ರೋದಿತಃ=ಸಕಲ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆಯೋ, ಸಹಿ=ಅದೇನೆ (ಹೊರತು,) ನಾನ್ಯತೆ=ಬೇರೆಯಿಲ್ಲ. ಇತಿ=ಹೀಗೆಂದು, ಶಾಸ್ತ್ರಾಣಾಂ=ಶಾಸ್ತ್ರಗಳ, ಏಷಃ=ಇಂಥಾ, ನಿರ್ಣಯಃ=ನಿಶ್ಚಯವು, ಸಮುದಾಹೃತಃ=ಚೆನ್ನಾಗಿ ಉದಾಹರಿಸಲ್ಪಟ್ಟಿರುತ್ತದೆ.

ತಾತ್ಪರ್ಯ.—ಸರ್ವಶಾಸ್ತ್ರಗಳೂ ದೇವರ ಮಹಿಮೆಯನ್ನು ಹೇಳುತ್ತವೆಯೇ ಹೊರತು ಬೇರೆಯಲ್ಲ. ಈರೀತಿಯಾಗಿ ಸಕಲ ಶಾಸ್ತ್ರಗಳ ನಿರ್ಣಯವೂ ಅರ್ಥ ರೂಪದಿಂದ ನಿಶ್ಚಯಿಸಲ್ಪಟ್ಟಿರುತ್ತದೆ.

ವಿಶೇಷಾರ್ಥ.—"ಸರ್ವೇವೇದಾಃಯತ್ಪದ ಮಾಮನಂತಿ" ಎಂಬುವ ಪ್ರಮಾಣಾನುಸಾರ ಸರ್ವ ಶಾಸ್ತ್ರಗಳು ಪರಬ್ರಹ್ಮನನ್ನ ತಿಳಿಸುತ್ತವೆ. ಮತ್ತು "ನಾಮಾನಿ ಸರ್ವಾಣಿಯಮಾವಿಶಂತಿ" ಎಂಬುವ ಪ್ರಮಾಣಾನುಸಾರ

ಸರ್ವ ನಾಮಗಳು ಪರಬ್ರಹ್ಮನನ್ನು ಹೊಗಳುತ್ತವೆ. "ಯೋದೇವಾನಾಂ ನಾಮಧಾ ಏಕಯೆವ" ಎಂಬುವ ಶೃತಿಯನ್ನು ಅನುಸರಿಸಿ ಇತರ ದೇವತೆಗಳ ಮಹಿಮೆಗಳನ್ನು ಸೂಚಿಸಿದರೂ ಪರಬ್ರಹ್ಮನ ವಿಷಯಕವೆಂದೇ ತಿಳಿಯಬೇಕು.

ಅವತಾರಿಕೆ.— ಭಾರತ ಗ್ರಂಥವು ಕೇವಲ ವಿಷ್ಣು ಪರವೆಂದು ಹೇಳುವುದಾದರೆ, ಮನುಗಳ ಕಥಾನುವಾದಮಾಡತಕ್ಕದ್ದೂ ಮತ್ತು ಪಾಂಡವರ ಕಥಾ ಸೂಚನೆ ಮಾಡತಕ್ಕದ್ದೂ ಹೇಗೆ ವಿಷ್ಣುಪರವೆಂಬುದನ್ನು ಸೂಚಿಸುತ್ತಾರೆ.

**ಶ್ಲೋಕ ॥ ಭಾರತಾರ್ಥಸ್ತ್ರಿಧಾಪ್ರೋಕ್ತಃ ಸ್ವಯಂಭಗವತೈವಹಿ ।**
**ಮನ್ವಾದಿಕೇಚಿತ್ಬ್ರುತೆಯ್ಯಾಸ್ತಿಕಾದಿತಥಾಪರೇ ॥೧೩೯॥**

ಅರ್ಥ.—ಭಗವತ=ವೇದವ್ಯಾಸ ದೇವರಿಂದ, ಸ್ವಯಂ=ಸ್ವತಂತ್ರವಾಗಿ, ಭಾರತಾರ್ಥ=ಭಾರತಾರ್ಥವು, ತ್ರಿಧಃ=ಮೂರು ಪ್ರಕಾರವಾಗಿ, ಪ್ರೋಕ್ತಃ=ಹೇಳಲ್ಪಟ್ಟಿರುತ್ತದೆ. ಹಿ=ಪ್ರಸಿದ್ಧಿಯು, ಕೇಚಿತ್=ಕೆಲವು ವಚನಗಳು, ಮನ್ವಾದಿ=ಮನ್ವಾದ್ಯರ್ಥವನ್ನ, ಬ್ರೂತೆ=ಹೇಳುತ್ತವೆ. ತಥಾ=ಹಾಗೆಯೇ, ಅಪರೆ=ಮತ್ತೆ ಕೆಲವು ವಚನಗಳು, ಆಸ್ತಿಕಾದಿ=ಆಸ್ತೀಕಾರ್ಥವನ್ನು, ಬೃತೆ=ಹೇಳುತ್ತವೆ. ಹಿ=ಪ್ರಸಿದ್ಧವು-

ತಾತ್ಪರ್ಯ.—ಭಾರತವು ಮೂರು ವಿಧ ಅರ್ಥವುಳ್ಳದ್ದೆಂದು ವ್ಯಾಸರಿಂದಲೇ ಸೂಚಿತವಾಗಿದೆ. ಅದೇ ಭಾರತದಲ್ಲಿ ಮನ್ವಾದ್ಯರ್ಥ ಪರವಾಗಿಯೂ ಆಸ್ತೀಕಾರ್ಥ ಪರವಾಗಿಯೂ ಕೆಲವು ವಚನಗಳು ಸೂಚಿಸಲ್ಪಟ್ಟಿವೆ.

ವಿಶೇಷಾರ್ಥ.— "ಭಾರತೋ ಪಂಚಮೋವೇದಃ" ಎಂದಿರುವುದರಿಂದ ಭಾರತದಲ್ಲಿ ನಾಲ್ಕು ವೇದಗಳರ್ಥವೂ ಸೂಚಿತವಾಗಿದೆ. ವೇದಗಳಲ್ಲಿ ಮನ್ವಾದ್ಯರ್ಥಪರವಾಗಿ ಹೇಳತಕ್ಕವೇದಾರ್ಥಗಳೂ ಆಸ್ತಿಕಾರ್ಥ ಪರವಾಗಿ ಹೇಳತಕ್ಕ ವೇದಾರ್ಥಗಳೂ ಈ ಭಾರತದಲ್ಲಿ ಸೂಚಿತವಾಗಿದೆ. ಆದ್ದರಿಂದ ಭಾರತವನ್ನು ಸರ್ವ ವೇದಗಳಿಗಿಂತಲೂ ಶ್ರೇಷ್ಠವೆಂದು ತಿಳಿಯಬೇಕು.

ಅವತಾರಿಕೆ.—ಭಾರತದಲ್ಲಿ ಔಪಚಾರಾರ್ಥವನ್ನು ವ್ಯಾಸರು ಹೇಳಿರುತ್ತಾರೆಂದು ತಿಳಿಸುತ್ತಾರೆ.—

**ಶ್ಲೋಕ॥ ತಥೋಽಪರಿಚರಾದ್ಯನ್ಯೈಃ ಭಾರತಂ ಪರಿಚಕ್ಷತೆ ॥೧೪೦॥**

ಅರ್ಥ.—ತಥಾ=ಹಾಗೆಯೇ, ಅನ್ಯೈ=ಮತ್ತೆ ಕೆಲವು ವಚನಗಳು, ಉಪರಿಚರಾದಿ=ಔಪರಿಚರವೆಂಬ ಅರ್ಥವುಳ್ಳದ್ದಾಗಿ, ಭಾರತಂ=ಭಾರತವನ್ನು, ಪರಿಚಕ್ಷತೆ=ತಿಳಿಸುತ್ತದೆ.

ತಾತ್ಪರ್ಯ.—ಭಾರತದಲ್ಲಿ ಔಪರಿಚರಾರ್ಥವುಳ್ಳ ಭಗವನ್ಮಹಿಮಾದಿಗಳು ಸೂಚಿಸಲ್ಪಟ್ಟಿವೆ ಎಂದು ಹೇಳುತ್ತಾರೆ.

ವಿಶೇಷಾರ್ಥ.—ಆಸ್ತಿಕಾರ್ಥ, ಮನ್ವಾದ್ಯರ್ಥ, ಉಪರಿಚರಾರ್ಥ ಈ ವಿಧವಾದ ಮೂರು ಅರ್ಥಗಳನ್ನು ಭಾರತದಲ್ಲಿ ಸೂಚಿಸಿರುವುದರಿಂದ ಭಗವದ್ಗುಣಗಳ ಪ್ರತಿಪಾದನ, ಧರ್ಮ, ಭಕ್ತಿ ಇವುಗಳ ಪ್ರತಿಪಾದನ, ಭಗವದ್ಭಕ್ತರಲ್ಲಿ ಧರ್ಮಾದಿ ಮೂಲಕವಾದ ಭಗವದನುಗ್ರಹವನ್ನು ಅರ್ಥತ್ರಯವು ಸೂಚಿಸುತ್ತದೆ.

ಅವತಾರಿಕೆ.—ಭಾರತದ ಮೂರು ವಿಧವಾದ ಅರ್ಥಗಳನ್ನು ಹೇಳುವುದಕ್ಕೆ ಪ್ರಯತ್ನಿಸಿ, ಮೊದಲಿನಲ್ಲಿ ಆಸ್ತಿಕಾರ್ಥವನ್ನು ಹೇಳುತ್ತಾರೆ.—

**ಶ್ಲೋಕ॥ ಸಕೃಷ್ಣಾನ್ ಪಾಂಡುವಾನ್ ಗೃಹ್ಯಾ ಯೋಽಯಮರ್ಥಃಪ್ರವರ್ತತೇ॥**
**ಪ್ರಾತಿಲೋಮ್ಯಾದಿ ವೈಚಿತ್ರ್ಯಾತ್ತಮಾಸ್ತಿಕಂಪ್ರಚಕ್ಷತೇ ॥೧೪೧॥**

ಅರ್ಥ.—ಸಕೃಷ್ಣಾನ್=ಕೃಷ್ಣನಿಂದ ಸಹಿತರಾದ, ಪಾಂಡವಾನ್=ಪಾಂಡವರುಗಳನ್ನು, ಗೃಹ್ಯಾ=ಹಿಡಿದು, ಯೋಽಯಂ=ಯಾವಯಾವ, ಅರ್ಥಃ=ಅರ್ಥವು, ಪ್ರಾತಿಲೋಮ್ಯಾದಿವೈಚಿತ್ರ್ಯಾ=ಹಿಂದೆ ಹೇಳತಕ್ಕ ಅರ್ಥವನ್ನು ಮೊದಲಲ್ಲಿ ಹೇಳೋಣವು ಮತ್ತು ಭೀಮನಿಂದ ಹತರಾದರು ಎಂಬುವರನ್ನು ಅರ್ಜುನನಿಂದ ಹತರಾದರೆಂದು ಹೇಳುವುದು ಇವೇ ಮೊದಲಾದ ಪ್ರಕಾರದಿಂದ, ಪ್ರವರ್ತತೆ=ಹೇಳಲ್ಪಟ್ಟಿದೆಯೋ, ತಂ—ಆ ಅರ್ಥವನ್ನು, ಆಸ್ತೀಕಂ=ಆಸ್ತೀಕಾರ್ಥವುಳ್ಳದ್ದನ್ನಾಗಿ, ಪ್ರಚಕ್ಷತೆ=ಹೇಳುತ್ತಾರೆ.

ತಾತ್ಪರ್ಯ.—ಶ್ರೀಕೃಷ್ಣದೇವರು ಮತ್ತು ಪಾಂಡವರು ಇವರುಗಳ ಪರಪಾದ ಯಾವ ಅರ್ಥವು ಪುರುಷ ವ್ಯತ್ಯಾಸದಿಂದಲೂ, ಕಾಲ ವ್ಯತ್ಯಾಸದಿಂದಲೂ ಹೇಳಲ್ಪಟ್ಟಿದೆಯೋ ಅದಕ್ಕೆ ಆಸ್ತೀಕಾರ್ಥವೆಂದು ಹೇಳುತ್ತಾರೆ.

ವಿಶೇಷಾರ್ಥ.—ವೇದಗಳು ಶ್ರೀನಾರಾಯಣನ ಗುಣಗಳನ್ನ ಹೇಳುವುದರಿಂದ ಆ ವೇದಾರ್ಥಗಳನ್ನ ಶ್ರೀಭಾರತದಲ್ಲಿ ವ್ಯಾಸರು ಆಸ್ತೀಕಾರ್ಥದ ರೀತ್ಯಾ ತಿಳಿಸಿರುತ್ತಾರೆ, ಮತ್ತು ಶ್ರೀಪರಮಾತ್ಮನ ಪರವಾದ ಮಹಿಮಾ ಮತ್ತು ಭಗವದ್ಭಕ್ತರ ಮಹಿಮಾ ಇವುಗಳನ್ನು ತಿಳಿದಹೊರತು ಮೋಕ್ಷಸಾಧನವಿಲ್ಲದ್ದರಿಂದ ಭಾರತಾರ್ಥವನ್ನು ಜ್ಞಾನಿಗಳು ಆಸ್ತೀಕಾರ್ಥವಾಗಿ ತಿಳಿದು ಪುರುಷಾರ್ಥವನ್ನು ಹೊಂದುತ್ತಾರೆ.

ಅವತಾರಿಕ.—ಪೂರ್ವ ಶ್ಲೋಕದಲ್ಲಿ ಆಸ್ತಿಕಾರ್ಥವನ್ನು ತಿಳಿಸಿ ಈಗ ಮನ್ವಾದ್ಯರ್ಥವನ್ನು ತಿಳಿಸುತ್ತಾರೆ.—

**ಶ್ಲೋಕ॥ ಧರ್ಮೋಃಭಕ್ತ್ಯಾದಿ ದಶಕಃ ಶ್ರುತಾದಿಃ ಶೀಲವೈನಯೌ ॥**

**ಸಬ್ರಹ್ಮಕಾಸ್ತು ತೇಯತ್ರ ಮನ್ವಾದಿಂತಂ ವಿದುರ್ಬುಧಾಃ ॥೧೪೨॥**

ಅರ್ಥ.—ಭಕ್ತ್ಯಾದಿದಶಕಃ—ಧರ್ಮ, ಭಕ್ತಿ, ವೈರಾಗ್ಯ ಇವುಗಳೇ ಆದಿಯಾಗಿಯುಳ್ಳ ಹತ್ತು ಧರ್ಮಗಳು, ಶ್ರುತಾದಿಃ-ಶ್ರವಣ, ಮನನ, ನಿದಧ್ಯಾಸನಾದಿಗಳು, ಶೀಲ, ವೈನಯೌ=ಶುದ್ಧ ಸ್ವಭಾವವು, ವಿನಯ ಸ್ವಭಾವವು, ಇವುಗಳು; ಸ ಬ್ರಹ್ಮಕಾಃ=ಬ್ರಹ್ಮಾದಿ ದೇವತೆಗಳಿಂದ ಆಚರಿಸಲ್ಪಟ್ಟ ಧರ್ಮಗಳು, ಯತ್ರ=ಯಾವ ಭಾರತದಲ್ಲಿ, ಸ್ತುತೇ=ಪ್ರತಿಪಾದಿತವಾಗಿವೆಯೋ, ತಂ-ಅಂಥಾ ಅರ್ಥವನ್ನು, ಮನ್ವಾದಿಂ-ಮನ್ವಾದ್ಯರ್ಥವೆಂದು, ಬುಧಾಃ=ಜ್ಞಾನಿಗಳು, ವಿದುಃ=ಹೇಳುತ್ತಾರೆ.

ತಾತ್ಪರ್ಯ.—ಭಕ್ತಿ, ಜ್ಞಾನ, ವೈರಾಗ್ಯ ಮೊದಲಾದವುಗಳು, ಶ್ರವಣ ಮನನ, ನಿದಧ್ಯಾಸನಾದಿಗಳು, ಶೀಲ, ವಿನಯಾದಿಗಳು, ಇವುಗಳೆಲ್ಲವೂ ಬ್ರಹ್ಮಾದಿಗಳಿಂದ ಸಹಿತರಾದ ದೇವತೆಗಳಿಂದ ಆಚರಿಸಲ್ಪಟ್ಟಂತೆ ತಿಳಿಸುತ್ತದೆಯೋ, ಆ ಅರ್ಥವನ್ನ ಮನ್ವಾದ್ಯರ್ಥವೆಂದು ಜ್ಞಾನಿಗಳು ಹೇಳುತ್ತಾರೆ.

ವಿಶೇಷಾರ್ಥ.—ಶ್ರೀಪರಮಾತ್ಮನ ಆಜ್ಞಾಧಾರಕರಾದ ದೇವತೆಗಳೇ ಮೊದಲಾದ ಭಕ್ತರುಗಳು, ಶ್ರೀಹರಿಯ ಉಪ್ಪಣೆ ಪಡೆದು, ಲೋಕ ಶಿಕ್ಷಾಕ್ಕೋಸ್ಕರಲೂ, ತಮ್ಮ ಸಾಧನಕ್ಕೋಸ್ಕರಲೂ ಆಚರಿಸಿದ ಧರ್ಮಗಳನ್ನು ಪುರುಷಾರ್ಥ ಭಾಗಿಗಳಾದ ಮಾನವರು ಆಚರಿಸಬೇಕೆಂದು ಶ್ರೀವೇದವ್ಯಾಸದೇವರು ಭಾರತದಲ್ಲಿ ಮನ್ವಾದ್ಯರ್ಥಕ್ಕೆ ಅನುಕೂಲಿಸುವ ವಚನಗಳನ್ನು ಉದಾಹರಿಸಿ ಭಾರತವನ್ನು ರಚಿಸಿರುತ್ತಾರೆ.

ಅವತಾರಿಕೆ.—ಭಾರತದಲ್ಲಿ ಹೇಳಿದ ಔಪರಿಚರಾರ್ಥವನ್ನು ತಿಳಿಸುವ ಪ್ರಮಾಣವನ್ನು ಸೂಚಿಸುತ್ತಾರೆ.—

**ಶ್ಲೋಕ|| ನಾರಾಯಣಸ್ಯ ನಾಮಾನಿ ಸರ್ವಾಣಿವಚನಾನಿತು |**
**ತತ್ಸಾಮರ್ಥ್ಯಾಭಿಧಾಯೀನಿ ತಮೌಪರಿಚರಂ ವಿದುಃ ||೧೪೩||**

ಅರ್ಥ.—ನಾರಾಯಣಸ್ಯ=ಶ್ರೀನಾರಾಯಣನ, ನಾಮಾನಿ=ಹರೇ ಕೃಷ್ಣ ಎಂಬ ಹೆಸರುಗಳು, ತತ್ಸಾಮರ್ಥ್ಯಾಭಿದಾಯಿನಿ=ಆ ಶ್ರೀಹರಿಯ, ಸಾಮರ್ಥ್ಯವನ್ನು ಹೇಳುವ, ಸರ್ವಾಣಿ=ಸಮಸ್ತವಾದ, ವಚನಾನಿತು–ವಾಕ್ಯಗಳು, ಯತ್ರ=ಯಾವ ಭಾರತದಲ್ಲಿ, ಪ್ರವರ್ತತೆ=ಹೇಳುತ್ತದೋ, ತಂ= ಅಂತಹ ಅರ್ಥವನ್ನು, ಔಪರಿಚರಂ–ಉಪರಿಚರಾರ್ಥವುಳ್ಳದ್ದನ್ನಾಗಿ,ವಿಧುಃ= ಹೇಳುತ್ತಾರೆ.

ತಾತ್ಪರ್ಯ.—ಶ್ರೀಹರಿಯ ಹೆಸರುಗಳು ಮತ್ತು ಅವನ ಗುಣಗಳನ್ನು ಹೇಳುವ ಸಮಸ್ತ ವಚನಗಳು, ಯಾವ ಭಾರತದಲ್ಲಿ ಹೇಳಿದೆಯೋ ಅವುಗಳ ಸಂಬಂಧವಾದ ಅರ್ಥವೆಲ್ಲವೂ ಔಪರಿಚರಾರ್ಥವುಳ್ಳದ್ದೆಂದು, ಜ್ಞಾನಿಗಳು ಹೇಳುತ್ತಾರೆ.

ವಿಶೇಷಾರ್ಥ.—“ ನಾಮಾನಿ ಸರ್ವಾಣಿಯಮಾವಿಶಂತಿ ” ಎಂಬ ಪ್ರಮಾಣಾನುಸಾರ ಭಾರತದಲ್ಲಿ ಹೇಳಿರುವ ಎಲ್ಲಾ ವಚನಗಳು ಪರಮಾತ್ಮನ ಸೃಷ್ಟ್ಯಾದ್ಯಷ್ಟಕರ್ತೃತ್ವ ವಿಷಯವಾದ ಮಹಿಮಾ ಪ್ರತಿಪಾದಕವೆಂದು ಅರ್ಥಿಸಿ ಆವಿಷಯಕವಾದ ಮನೋವೃತ್ತಿಯುಳ್ಳವನಿಗೆ ದೇವರು ಜ್ಞಾನ ಭಕ್ತಿ ವೈರಾಗ್ಯಾದಿಗಳನ್ನು ಕೊಟ್ಟು ಮೋಕ್ಷವನ್ನೂ ಕೊಡುತ್ತಾನೆಂದು ತಿಳಿಯಬೇಕು.

ಅವತಾರಿಕೆ.—ಮನ್ವಾದಿ ಶಬ್ದಗಳಿಗೆ ವ್ಯಾಖ್ಯಾನ ಮಾಡುವ್ರದರಲ್ಲಿ ಧರ್ಮಾದಿ ಶಬ್ಧಗಳನ್ನು ಉಪಯೋಗಿಸಿರುವದರಿಂದ ಮನ್ವಾದಿಗಳಿಗೆ ವ್ಯಾಖ್ಯಾನ ಯಾವ ರೀತಿ ಆಗುತ್ತದೆಂದು ಸಂದೇಹಪಟ್ಟು ಧರ್ಮಾದಿ ಶಬ್ಧಗಳೆಲ್ಲಾ ಯುಧಿಷ್ಠರಾದಿಗಳು ವಾಚ್ಯರು, ಧರ್ಮಾದಿಶಬ್ದ ಪ್ರತಿಪಾದಕವಾದ ಭಾರತವು ಧರ್ಮಕ್ಕೆ ಅಭಿಮಾನಿಯಾದ ಯುಧಿಷ್ಠರಾದಿಗಳನ್ನ ಪ್ರತಿಪಾದನ ಮಾಡುತ್ತದೆಂದು ತಿಳಿಸಿ ಈ ಭಕ್ತ್ಯಾದಿಗಳಿಗೆ ಅಭಿಮಾನಿದೇವತೆಯನ್ನು ಹೇಳುತ್ತಾರೆ.—

**ಶ್ಲೋಕ॥ ಭಕ್ತಿ ಜ್ಞಾನಂ ಸವೈರಾಗ್ಯಂ ಪ್ರಜ್ಞಾಮೇಧಾಧೃತಿಃಸ್ಥಿತಿಃ ।**
**ಯೋಗಃಪ್ರಾಣೋಬಲಂಚೈವ ವೃಕೋದರ ಇತಿಸ್ಮೃತಃ ॥೧೪೪॥**

ಅರ್ಥ.—ಭಕ್ತಿ=ಭಕ್ತಿಯು ಸವೈರಾಗ್ಯಂ=ವೈರಾಗ್ಯದಿಂದ ಸಹಿತವಾದ, ಜ್ಞಾನಂ=ಜ್ಞಾನವು, ಪ್ರಜ್ಞ=ಜಾಗ್ರತೆ ಗ್ರಹಣಮಾಡತಕ್ಕ ಸಾಮರ್ಥ್ಯವು, ಮೇಧಾ-ಶ್ರವಣ ಮಾಡಿದ್ದನ್ನ ಮರಿಯದಹಾಗಿರೋಣವೂ, ಧೃತಿ-ಧೈರ್ಯವು, ಸ್ಥಿತಿಃ=ಚಂಚಲವಿಲ್ಲದೆ ಇರೋಣವು, ಯೋಗಃ=ಉಪಾಯವು, ಪ್ರಾಣಃ=ಶ್ವಾಸ ರೂಪ ಸಾಮರ್ಥ್ಯವು, ಬಲಂಚೈವ=ಬಲದಿಂದ ಸಹಿತವಾದ ಹತ್ತು ಗುಣಗಳು, ವೃಕೋದರ ಇತಿ-ಭೀಮಸೇನದೇವರೆಂದು, ಸ್ಮೃತಃ=ಹೇಳಿಸಿಕೊಳ್ಳಲ್ಪಡುತ್ತವೆ.

ತಾತ್ಪರ್ಯ.—ಜ್ಞಾನ ಭಕ್ತಿ ವೈರಾಗ್ಯಾದಿ ಗುಣಗಳು ಭಾರತದಲ್ಲಿ ಎಲ್ಲಿ ಪ್ರತಿಪಾದನ ಮಾಡಿರುತ್ತವೆಯೋ, ಆ ಸ್ಥಳಗಳಲ್ಲೆಲ್ಲಾ ಭೀಮಸೇನದೇವರನ್ನ ಆ ಗುಣಗಳ ವಿಶಿಷ್ಠರನ್ನಾಗಿ ಸೂಚಿಸುತ್ತವೆ ಎಂದು ತಿಳಿಯಬೇಕು.

ವಿಶೇಷಾರ್ಥ.—ಸರ್ವ ದೇವತೆಗಳಲ್ಲಿ ಉತ್ತಮರಾದ ವಾಯುದೇವರು ಕೃಷ್ಣಾವತಾರದಲ್ಲಿ ಸೇವೆ ಮಾಡುವುದಕ್ಕಾಗಿ ಭೀಮಸೇನನೆಂದು ಅವತಾರ ಮಾಡಿ, ಭೂಭಾರಹರಣ ಮಾಡುವ ಯಾದವೇಶಗೆ ಶುದ್ಧ ಭಾಗವತ ಧರ್ಮ ರೂಪವಾದ ಕಾರ್ಯಗಳಿಂದ ಸೇವಿಸಿ ಪೂರ್ಣಾನುಗ್ರಹ ಪಡೆದಿರುತ್ತಾರೆ. ಶ್ರೀಹರಿಯ ಅನುಗ್ರಹ ಪಡೆಯುವುದಕ್ಕೆ ಮೇಲೆ ಹೇಳಿದ ಹತ್ತು ಗುಣಗಳು ನಿತ್ಯವಾಗಿ ಜೀವನಲ್ಲಿ ಇದ್ದ ಹೊರತು ಸಾಧ್ಯವಲ್ಲದ್ದರಿಂದ ಈ ಭೀಮಸೇನದೇವರು ಆ ವಿಧವಾದ ಗುಣಗಳಿಗೆ ಒಬ್ಬರೆ ಭಾಧ್ಯರಾದ್ದರಿಂದ ಭಾರತದಲ್ಲಿ ಇವರನ್ನೇ ಆ ಗುಣಗಳು ಸೂಚಿಸುತ್ತವೆಂದು ತಿಳಿಯಬೇಕು.

ಅವತಾರಿಕೆ.—ಈ ಭಕ್ತ್ಯಾದಿ ಶಬ್ದಗಳು ಭೀಮಸೇನದೇವರಿಗೆ ಯಾವ ಕಾರಣದಿಂದ ಅನ್ವಯಿಸುತ್ತವೆ ಎಂಬುವವನ್ನು ಸೂಚಿಸುತ್ತಾರೆ:—

**ಶ್ಲೋಕ|| ಏತದ್ವಶಾತ್ಮಕೋ ವಾಯುಃ ತಸ್ಮಾತ್ ಭೀಮಸ್ತದಾತ್ಮಕಃ |**
**ಸರ್ವವಿದ್ಯಾ ದ್ರೌಪದೀತುಯಸ್ಮಾತ್ಸೈವ ಸರಸ್ವತೀ ||೧೪೫||**

ಅರ್ಥ.— ವಾಯುಃ=ವಾಯುದೇವರು, ಯಸ್ಮಾತ್=ಯಾವ ಕಾರಣದ ದೆಶೆಯಿಂದ, ಏತತ್-ಪೂರ್ವದಲ್ಲಿ ಹೇಳಿದ ಹತ್ತು ಗುಣಗಳ, ದಶಾತ್ಮಕಃ=ಪೂರ್ಣವಾದ ಸ್ವರೂಪವುಳ್ಳವರೊ, ತಸ್ಮಾತ್-ಆ ಕಾರಣದ ದೆಶೆಯಿಂದ, ಭೀಮಃ-ಭೀಮಸೇನದೇವರು, ತದಾತ್ಮಕಃ-ಆ ಗುಣಗಳೇ ಶರೀರವಾಗುಳ್ಳವರು, ದ್ರೌಪದೀತು-ದ್ರೌಪದೀದೇವಿಯಾದರೋ, ಯಸ್ಮಾತ್-ಯಾವ ಕಾರಣದ ದೆಶೆಯಿಂದ, ಸರ್ವವಿದ್ಯಾ-ಸಕಲ ವಿಧ್ಯಾಭಿಮಾನಿಯೋ, ತಸ್ಮಾತ್-ಆ ಕಾರಣದ ದೆಶೆಯಿಂದ, ಸೈವ=ದ್ರೌಪದೀದೇವಿಯರೇ, ಸರಸ್ವತೀ-ಸರಸ್ವತೀದೇವಿಯರು.

ತಾತ್ಪರ್ಯ.—ವಾಯುದೇವರು ಪೂರ್ವದಲ್ಲಿ ಹೇಳಿದ ಭಕ್ತ್ಯಾದಿ ಹತ್ತು ಗುಣಗಳೇ ಸ್ವರೂಪವಾಗುಳ್ಳವರೋ ಅವರ ಮಕ್ಕಳಾದ ಭೀಮಸೇನದೇವರು ಅವರಂತೆ ಶ್ರವಣಾದಿಗುಣ ಪ್ರಾಚುರ್ಯದಿಂದ ಲೋಕದಲ್ಲಿ ಭಕ್ತ್ಯಾದಿ ಶಬ್ದವಾಚ್ಯರೆಂದು ತಿಳಿಯಬೇಕು. ದ್ರೌಪದೀದೇವಿಯರು ಸರ್ವವಿದ್ಯಾಭಿಮಾನಿಗಳಾದ್ದರಿಂದ ಅವರೇ ಸರಸ್ವತಿಯೆಂದು ತಿಳಿಯಬೇಕು.

ವಿಶೇಷಾರ್ಥ.— ಧರ್ಮಶಬ್ದವಾಚ್ಯರು ಯುಧಿಷ್ಠಿರರೆಂದು ಹೇಳಿದರು. ಭಕ್ತಿ, ಜ್ಞಾನಾದಿ ಹತ್ತು ಶಬ್ದಗಳು ಗುಣತ್ವೇನ ಭೀಮಸೇನದೇವರೆಂದು ಹೇಳಿದರು. ೧೪೨ನೇ ಶ್ಲೋಕದಲ್ಲಿ ಸೂಚಿಸಿದ ಸ್ವತ್ವಾದಿಗಳು ಅರ್ಜುನನೆಂತಲೂ, ಶೀಲವೆಂಬ ಗುಣ ನಕುಲನೆಂತಲೂ, ವಿನಯವೆಂಬ ಗುಣ ಸಹದೇವನೆಂತಲೂ ಸೂಚಿಸಿದರು. ಶ್ರವಣಾದಿಗಳಿಂದ ಜನಿತವಾದ (ಹುಟ್ಟಿದ) ಭಕ್ತ್ಯಾದಿಗಳು ವಾಯುರೂಪವೆಂದು ಹೇಳಿದ ಪ್ರಯುಕ್ತ, ಭಕ್ತಿಗೂ ಶ್ರವಣಕ್ಕೂ ಮಧ್ಯದಲ್ಲಿ ವಿದ್ಯೆಯೆಂಬುವುದು ಸಾಧಕವಾದ್ದರಿಂದ ಆ ವಿದ್ಯೆಯು ಯಾರು ಎಂಬುವುದನ್ನು ತಿಳಿಸುವುದಕ್ಕಾಗಿ ದ್ರೌಪದಿಯೇ ವಿದ್ಯಾಭಿಮಾನಿಯಾದ ಸರಸ್ವತಿ ಎಂದು ಸೂಚಿಸುತ್ತಾರೆ.

ಅವತಾರಿಕೆ.—ಪ್ರಸಂಗದಿಂದ ಭಕ್ತ್ಯಾದಿಗಳಿಗೆ ವಿರುದ್ಧವಾದ ಗುಣಗಳಿಗೆ ಅಭಿಮಾನಿಗಳನ್ನು ಸೂಚಿಸುತ್ತಾರೆ:—

**ಶ್ಲೋಕ॥ ಅಜ್ಞಾನಾದಿಸ್ವರೂಪಸ್ತು ಕಲಿರ್ದುರ್ಯೋಧನಃಸ್ಮೃತಃ ।**
**ವಿಪರೀತಂತು ಯದ್‌ಜ್ಞಾನಂ ದುಶ್ಶಾಸನ ಇತೀರಿತಃ ॥೧೪೬॥**

ಅರ್ಥ.—ಅಜ್ಞಾನಾದಿಸ್ವರೂಪ=ಅಜ್ಞಾನವೇ ಮೊದಲಾದ ಸ್ವರೂಪವುಳ್ಳ, ಕಲಿಃ=ಕಲಿಯು, ದುರ್ಯೋಧನಃ-ದುರ್ಯೋಧನನೆಂದು,ಸ್ಮೃತಃ=ಹೇಳಿಸಿಕೊಳ್ಳುತ್ತಾನೆ. ಯತ್=ಯಾವ, ಜ್ಞಾನಂ-ಜ್ಞಾನವು, ವಿಪರೀತಂ=ವಿದ್ಯಮಾನವಾದ ಅರ್ಥವನ್ನು ಬಿಟ್ಟು ವಿರುದ್ಧಾರ್ಥವನ್ನು ತಿಳಿಸುತ್ತದೆಯೋ, ತತ್=ಆ ಜ್ಞಾನವು, ದುಶ್ಶಾಸನ ಇತಿ-ದುಶ್ಶಾಸನನೆಂದು, ಈರಿತಃ=ಹೇಳಿಸಿಕೊಳ್ಳಲ್ಪಡುತ್ತಾನೆ.

ತಾತ್ಪರ್ಯ.—ದುರ್ಯೋಧನನ ಸ್ವರೂಪವು ಅಜ್ಞಾನಾದಿ ಸ್ವರೂಪವುಳ್ಳ ಕಲಿಯೆಂದು ಸೂಚಿಸುತ್ತದೆ. ವಿಪರೀತ ಜ್ಞಾನಾಭಿಮಾನಿ ದುಶ್ಶಾಸನನೆಂದು ಅರ್ಥ.

ವಿಶೇಷಾರ್ಥ.—ಅಜ್ಞಾನ, ಭ್ರಮ, ಪ್ರಮಾದ, ಇವೇ ಮೊದಲಾದ ದೋಷಗಳೇ ಸ್ವರೂಪವೆಂದು ಹೇಳಿದ ದುರ್ಯೋಧನ, ಮತ್ತು ವಿಪರೀತ ಜ್ಞಾನಾಭಿಮಾನಿ ದುಶ್ಶಾಸನನೆಂದು ಸೂಚಿಸಿದ್ದರಿಂದ ಮೋಕ್ಷಸಾಧಕವಾದ ವೇದ ವಿದ್ಯಾಕ್ಕೆ ಪೂರ್ವದಲ್ಲಿ ಹೇಳಿದ ದೋಷಗಳು ಪ್ರತಿಬಂಧಕವೆಂದು ತಿಳಿಸುವುದಕ್ಕಾಗಿ ಲೋಕೋದ್ಧಾರ ಮಾಡುವ ಶ್ರೀಕೃಷ್ಣನು ಮೋಕ್ಷ ಕೊಡುವವನಾದ್ದರಿಂದ ಆವನಿಗೆ ವಿರುದ್ಧವಾದ ಕಾರ್ಯಮಾಡತಕ್ಕ ದುರ್ಯೋಧನಾದಿಗಳು ಪೂರ್ವದಲ್ಲಿ ಹೇಳಿದ ದೋಷಾಭಿಮಾನಿಗಳೆಂದು ತಿಳಿಯಬೇಕು. ಹಿಂದೆ ಹೇಳಿದ ಅಜ್ಞಾನಾದಿ ದೋಷಗಳು ಮೋಕ್ಷಕ್ಕೆ ಪ್ರತಿಬಂಧಕವೆಂದು ಹೇಳಿದಂತಾಯಿತು.

ಅವತಾರಿಕೆ.—ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಮಿಕ್ಕ ಅಭಿಮಾನಿಗಳನ್ನು ಸೂಚಿಸುತ್ತಾರೆ:—

**ಶ್ಲೋಕ|| ನಾಸ್ತಿಕ್ಯಂ ಶಕುನಿರ್ನಾಮ ಸರ್ವದೋಷಾತ್ಮಕಾಃಪರೇ |**
**ಧಾರ್ತರಾಷ್ಟ್ರಾಸ್ತ್ವಹಂಕಾರೊ ದ್ರೋಣೇ ಋದ್ರಾತ್ಮಕೋಯತಃ ||೧೬೭||**

ಅರ್ಥ.—ಶಕುನಿಃ=ಶಕುನಿಯು, ನಾಸ್ತಿಕ್ಯಂ=ನಾಸ್ತಿಕಾಭಿಮಾನಿಯು, ಎಂಬ, ನಾಮ=ಪ್ರಸಿದ್ಧಿಯು, ಪರೇ=ದುರ್ಯೋಧನ ಮತ್ತು ದುಶ್ಶಾಸನ ನಿಂದ ಬೇರೆಯಾದ, ಧಾರ್ತರಾಷ್ಟ್ರಃ=ಧೃತರಾಷ್ಟ್ರ ಪುತ್ರರುಗಳು, ಸರ್ವ ದೋಷಾತ್ಮಕಾಃ=ಸಕಲ ದೋಷಸ್ವರೂಪರುಗಳು. ದ್ರೋಣೇ=ಅಶ್ವಥ್ಥಾಮಾ ಚಾರ್ಯರು, ಯತಃ=ಯಾವ ಕಾರಣದ ದೆಶೆಯಿಂದ, ಋದ್ರಾತ್ಮಕಃ=ಋದ್ರ ಸ್ವರೂಪರಾದ್ದರಿಂದ, ಅಹಂಕಾರಃ=ಅಹಂಕಾರಕ್ಕೆ ಅಭಿಮಾನಿಗಳು.

ತಾತ್ಪರ್ಯ.—ನಾಸ್ತಿಕ್ಯಮಾನಿಯಾದದೈತ್ಯ ಶಕುನಿಯೆಂತಲೂ, ದು ರ್ಯೋಧನ, ದುಶ್ಶಾಸನನನ್ನು ಬಿಟ್ಟು ಮಿಕ್ಕ ಧೃತರಾಷ್ಟ್ರ ಪುತ್ರರುಗಳು ಸ ಕಲ ದೋಷಾಭಿಮಾನಿಗಳು. ಅಶ್ವಥ್ಥಾಮಾಚಾರ್ಯರು ಋದ್ರಾಂಶರಾದ್ದರಿಂ ದ ಅಹಂಕಾರ ತತ್ವಮಾನಿಗಳೆಂದು ತಿಳಿಯಬೇಕು.

ವಿಶೇಷಾರ್ಥ.—ಭಗವತ್ ಜ್ಞಾನಕ್ಕೆ ಪ್ರತಿಬಂಧಕವಾದ ನಾಸ್ತಿಕತ್ವ ವೇ ಮೊದಲಾದ ದೋಷಗಳು ದೇಹದಲ್ಲಿ ಕಂಡು ಬರುತ್ತವೆ. ಅವುಗಳಿಗೆ ಅಭಿಮಾನಿಗಳಾದ ದೈತ್ಯರುಗಳನ್ನೂ ಮತ್ತು ಅವರ ಸ್ವರೂಪವನ್ನೂ ತಿಳಿ ದು, ದೈತ್ಯಾವೇಶವುಳ್ಳವನಾಗಿ ಪಾಪಕಾರ್ಯ ಮಾಡತಕ್ಕ ನಾಸ್ತಿಕತ್ವ ಸಂ ಬಂಧ ಬುದ್ಧಿ ಹುಟ್ಟಿದೊಡನೆಯೇ ಅವರುಗಳನ್ನು ಪ್ರತಿಭಟಿಸಿ ಸಮೀಚೀನ ಬುದ್ಧಿಯುಳ್ಳವನಾಗಬೇಕೆಂಬ ಉದ್ದೇಶದಿಂದ ಅವುಗಳ ಅಭಿಮಾನಿಗಳನ್ನು ಸೂಚಿಸಿದ್ದಾರೆ.

ಅವತಾರಿಕೆ.—ಈ ಶ್ಲೋಕದಲ್ಲಿ ಇನ್ನೂ ಕೆಲವು ಅಭಿಮಾನಿಗಳನ್ನು ಸೂಚಿಸುತ್ತಾರೆ:—

**ಶ್ಲೋಕ|| ದ್ರೋಣಾದ್ಯಾಇಂದ್ರಿಯಾಣ್ಯೇವ ಪಾಪಾನ್ಯನ್ಯೇತುಸೈನಿಕಾಃ |**
**ಪಾಂಡವೇಯಾನಿಪುಣ್ಯಾನಿ ತೇಷಾಂವಿಷ್ಣುರ್ನಿಯಾಮಕಃ ||೧೬೮||**

ಅರ್ಥ.—ದ್ರೋಣಾದ್ಯಾಃ-ದ್ರೋಣಾಚಾರ್ಯರು ಕರ್ಣ ಭೀಷ್ಮಾದಿಗಳು, ಇಂದ್ರಿಯಾಣೀವ=ಇಂದ್ರಿಯಾಭಿಮಾನಿಗಳೇನೆ, ಅನ್ಯೇತು=ಮಿಕ್ಕ, ಸೈನಿಕಾಃ=ದುರ್ಯೋಧನನ ಸೈನಿಕರು, ಪಾಪಾನಿ—ಪಾಪಾಭಿಮಾನಿಗಳು, ಪಾಂಡುವೇಯಾನಿ-ಪಾಂಡವ ಸೈನಿಕರು, ಪುಣ್ಯಾನಿ=ಪುಣ್ಯಾಭಿಮಾನಿಗಳು, ತೇಷಾಂ=ಈ ಪಾಂಡವರುಗಳಿಗೆ, ವಿಷ್ಣುಃ=ನಾರಾಯಣನು, ನಿಯಾಮಕಃ=ಯಜಮಾನನು.

ತಾತ್ಪರ್ಯ.—ದ್ರೋಣಾದಿ ಆಚಾರ್ಯವರ್ಯರುಗಳು ಇಂದ್ರಿಯಾಭಿಮಾನಿಗಳೆಂದೂ, ಇತರ ದುರ್ಯೋಧನನ ಸೈನಿಕರು ಪಾಪಾಭಿಮಾನಿಗಳೆಂದೂ ಪಾಂಡವರ ಪರಿವಾರಗಳೆಲ್ಲವೂ ಪುಣ್ಯಾಭಿಮಾನಿಗಳೆಂದೂ, ಪುಣ್ಯಾಭಿಮಾನಿಗಳಿಗೆ ವಿಷ್ಣುನಿಯಾಮಕನೆಂದೂ ತಿಳಿಯಬೇಕು.

ವಿಶೇಷಾರ್ಥ.—ದ್ರೋಣರು ಬೃಹಸ್ಪತಿಗಳು, ಅಶ್ವತ್ಥಾಮರು ಖುದ್ರರು, ಕರ್ಣ ಸೂರ್ಯನು. ಇವರುಗಳು ನೇತ್ರ, ಅಹಂಕಾರ, ಶಬ್ದ, ಈ ತತ್ವಗಳಿಗೆ ಅಭಿಮಾನಿಗಳು. ಮಿಕ್ಕ ಸೈನಿಕರಲ್ಲಿ ಕ್ರೋಧಾದಿ ಸಕಲಾಭಿಮಾನಿಗಳು ಇದ್ದಾರೆ. ಪಾಂಡವರುಗಳಲ್ಲಿ ಭೀಮಸೇನದೇವರೇ ಮೊದಲಾದವರು ಜ್ಞಾನ, ಭಕ್ತಿ, ವೈರಾಗ್ಯಾದಿಗಳಿಗೆ ಅಭಿಮಾನಿಗಳು. ಇವರುಗಳಿಗೆ ವಿಷ್ಣುನಿಯಾಮಕನೆಂದು ಹೇಳಿದ್ದರಿಂದ ಜ್ಞಾನ, ಭಕ್ತಿ, ವೈರಾಗ್ಯಾದಿಗಳು ಹೊರತು ಇತರ ಸಾಧನೆಗಳಿಗೆ ಪರಮಾತ್ಮನು ಸಾಧ್ಯನಲ್ಲವೆಂದು ಹೇಳಿದಂತಾಯಿತು.

ಅವತಾರಿಕೆ—ಭಾರತದಲ್ಲಿ ಹೇಳುವ ಅರ್ಥಗಳನ್ನು ತಿಳಿಯಲು ಅಸಾಧ್ಯವೆಂದು ಪ್ರತಿಪಾದಿಸಿ ಉಪಸಂಹಾರ ಮಾಡುತ್ತಾರೆ:—

**ಶ್ಲೋಕ ॥ಏವಮಧ್ಯಾತ್ಮನಿಷ್ಠಂಹಿ ಭಾರತಂಸರ್ವಮುಚ್ಯತೇ ।**
**ದುರ್ವಿಜ್ಞೇಯಮತಸ್ಸರ್ವೈ ಭಾರತಂತುಸುರೈರಪಿ ॥೧೪೯॥**

ಅರ್ಥ.—ಏವಂ=ಪೂರ್ವೋಕ್ತ ಪ್ರಕಾರವಾಗಿ, ಸರ್ವಂ=ಸಮಸ್ತವಾದ, ಭಾರತಂ=ಭಾರತವು, ಅಧ್ಯಾತ್ಮನಿಷ್ಠಂ=ದೇಹದಲ್ಲಿ ಉಳ್ಳ ಅಂತರ್ಯಾಮಿ

ಪರವೆಂದು, ಉಚ್ಯತೆ=ಹೇಳಿಸಿಕೊಳ್ಳಲ್ಪಡುತ್ತದೆ. ಹಿ=ಪ್ರಸಿದ್ಧಿಯು, ಅಥಃ–ಆ ಕಾರಣದ ದೆಶೆಯಿಂದ, ಸರ್ವೈ=ಸಮಸ್ತರಾದ, ಸುರೈರಪಿ= ದೇವತೆಗಳಿಂದಲೂ, ಭಾರತಂ=ಭಾರತವು, ದುರ್ವಿಜ್ಞೇಯಂ=ತಿಳಿಯಲು ಅಶಕ್ಯವು.

ತಾತ್ಪರ್ಯ.—ಭಾರತಾರ್ಥವು ಸರ್ವ ಚೇತನರುಗಳ ಹೃದಯದಲ್ಲಿರುವ ಪರಮಾತ್ಮ ಅಧ್ಯಾತ್ಮ ಶಬ್ದವಾಚ್ಯನಾದ್ದರಿಂದ ಅವನ ಪರವಾಗಿ ಅರ್ಥವನ್ನು ಸೂಚಿಸುತ್ತದೆ. ಆದಕಾರಣದಿಂದ ಇದು ಮನುಷ್ಯರಿಂದಲೂ ದೇವತೆಗಳಿಂದಲೂ ಸುಲಭವಾಗಿ ತಿಳಿಯಲು ಅಸಾಧ್ಯವು.

ವಿಶೇಷಾರ್ಥ.—ಶರೀರದಲ್ಲಿರುವ ಜೀವ ಪುಣ್ಯ ಪಾಪಾದಿ ಕರ್ಮ ಸಂಬಂಧವಾದ ಸುಖ ದುಃಖಗಳನ್ನು ಅನುಭವಿಸುತ್ತಾನೆ, ಇಂತಹ ಸುಖ ದುಃಖಗಳನ್ನು ಅನುಭವಕ್ಕೆ ತಂದುಕೊಡುವುದಕ್ಕಾಗಿ ಬಿಂಬರೂಪಿಯಾದ ದೇವರು ಒಳಗೆ ನಿಂತು ಪ್ರಾರಬ್ಧ ಸಂಬಂಧವಾದ ಪುಣ್ಯ ಕರ್ಮಗಳನ್ನು ದೇವತೆಗಳಿಂದಲೂ ಪಾಪ ಕರ್ಮಗಳನ್ನು ದೈತ್ಯರಿಂದಲೂ ತಾನೇ ನಡಿಸಿ ಸ್ವರ್ಗ ನರಕಗಳಲ್ಲಿಜೀವಗೆ ಸುಖ ದುಃಖಗಳನ್ನು ಕೊಡುತ್ತಾನೆ. ಇಂತಹ ಸ್ವಾಮಿಯ ಪರವಾದ ಅರ್ಥವನ್ನು ಭಾರತಾರ್ಥವು ಸೂಚಿಸುತ್ತದೆಂದು ತಿಳಿಯಬೇಕು.

ಅವತಾರಿಕೆ.—ಪೂರ್ವ ಶ್ಲೋಕದಲ್ಲಿ ಹೇಳಿದ ಅಧ್ಯಾತ್ಮ ರೂಪವಾದ ಅರ್ಥವನ್ನು ತಿಳಿದವರು ಯಾರು ಎಂಬುವುದನ್ನು ಸೂಚಿಸುತ್ತಾನೆ.

**ಶ್ಲೋಕ॥ ಸ್ವಯಂವ್ಯಾಸೋಽಹಿತದ್ವೇದ ಬ್ರಹ್ಮಾವಾತತ್ಪ್ರಸಾದತಃ ।**
**ತಥಾಪಿವಿಷ್ಣುಪರತಾ ಭಾರತೇಽಸಾರಸಂಗ್ರಹಃ ॥೧೫೦॥**

ಅರ್ಥ.—ವ್ಯಾಸಃ=ವೇದವ್ಯಾಸದೇವರು, ಸ್ವಯಂ=ತಾವೇ, ತತ್= ಅಧ್ಯಾತ್ಮಾರ್ಥವನ್ನು, ವೇದ=ತಿಳಿದವರು, ತತ್ಪ್ರಸಾದತಃ=ಆ ವೇದವ್ಯಾಸ ದೇವರನುಗ್ರಹದಿಂದ, ಬ್ರಹ್ಮಾವಾ=ಬ್ರಹ್ಮದೇವರೂ, ವೇದ=ತಿಳಿದಿರುವರು. ತಥಾಪಿ=ಹಾಗಾದರೂನು, ಭಾರತೆ=ಭಾರತದಲ್ಲಿ, ವಿಷ್ಣುಪರತಾ= ಹರಿಯಪರವಾಗಿ, ಸಾರಸಂಗ್ರಹಃ=ಶ್ರೇಷ್ಠವಾದ ಅರ್ಥಗಳು ಸಂಗ್ರಹಿಸಲ್ಪಟ್ಟಿವೆ.

ತಾತ್ಪರ್ಯ.—ಅಧ್ಯಾತ್ಮರೂಪವಾದ ಭಾರತಾರ್ಥವನ್ನು ವೇದವ್ಯಾಸ ದೇವರು ತಿಳಿದಿರುತ್ತಾರೆ. ಅವರನುಗ್ರಹದಿಂದ ಬ್ರಹ್ಮದೇವರು ತಿಳಿದಿರು ತ್ತಾರೆ. ಹಾಗಾದರೆ ಮಾನವರು ಭಾರತವನ್ನು ತಿಳಿಯುವುದು ಹೇಗೆಂದರೆ, ಮೊದಲಿನಿಂದ ಕೊನೆಯವರಿವಿಗೂ ವಿಷ್ಣುಪರವಾಗಿಯೇ ಅರ್ಥವುಳ್ಳದ್ದರಿಂದ ಭಾರತವು ಹರಿ ಸರ್ವೋತ್ತಮತ್ವವನ್ನು ಪ್ರತಿಪಾದನೆಮಾಡುತ್ತದೆಂದು ತಿಳಿ ಯಬೇಕು.

ವಿಶೇಷಾರ್ಥ.—ಗ್ರಂಥಕರ್ತೃವಾದ ವ್ಯಾಸರು ಅಧ್ಯಾತ್ಮಾರ್ಥವನ್ನು ದೇವತೆಗಳಿಗಾಗಿಯೂ ಬಾಹ್ಯಾರ್ಥವನ್ನು ದರ್ಶನಾದಿ ಭಾಷೆಗಳಿಂದ ವಿಷ್ಣು ಪರವಾಗಿ ತಿಳಿದು, ಮೋಕ್ಷಾದಿ ಪುರುಷಾರ್ಥವನ್ನು ಪಡೆಯಬೇಕೆಂತಲೇ ರಚಿಸಿರುತ್ತಾರೆ. ಆದರೆ ಮೋಕ್ಷಕ್ಕೆ ಸಾಧನವಾದ ತತ್ವಜ್ಞಾನಕ್ಕೆ ಭಾರತವು ಅತ್ಯಾವಶ್ಯಕವಾದದ್ದು. ಭಾರತವನ್ನು ಶ್ರವಣ ಮಾಡುವ ಚೇತನರಿಗೆ ಪಾಪ ಪರಿಹಾರದ್ವಾರ ಜ್ಞಾನವು ಹುಟ್ಟಿ ತನ್ಮೂಲಕವಾದ ಭಕ್ತಿಯೂ ಕಾರಣವಾಗುತ್ತದೆ.

ಅವತಾರಿಕೆ.—ಹಿಂದಿನ ಶ್ಲೋಕದಲ್ಲಿ ಹೇಳಿದ ವಿಷ್ಣುವಿನ ಶ್ರೇಷ್ಠತ್ವ ವನ್ನು ಉಪಸಂಹರಿಸುತ್ತಾರೆ:—

**ಶ್ಲೋಕ|| ಇತ್ಯಾದಿವ್ಯಾಸವಾಕ್ಯೇಸ್ತು ವಿಷ್ಣೋರುತ್ಕರ್ಷೋವಗಮ್ಯತೆ |**
**ವಾಯ್ವಾದೀನಾಂ ಕ್ರಮಶ್ಚೈವ ತದ್ವಾಕ್ಯೈರೇವಚಿಂತ್ಯತೆ ||೧೫೧||**

ಅರ್ಥ.—ಇತ್ಯಾದಿ-ಇವೇ ಮೊದಲಾಗಿವುಳ್ಳ, ವ್ಯಾಸವಾಕ್ಯೇಸ್ತು- ವೇದವ್ಯಾಸದೇವರ ವಾಕ್ಯದಿಂದ, ವಿಷ್ಣೋರುತ್ಕರ್ಷಃ, ವಿಷ್ಣು-ಶ್ರೀನಾರಾಯಣ ನಿಗೆ, ಉತ್ಕರ್ಷಃ=ಶ್ರೇಷ್ಠತ್ವವು, ಅವಗಮ್ಯತೆ=ತಿಳಿಸಿಕೊಳ್ಳಲ್ಪಡುತ್ತದೆ, ವಾಯ್ವಾದೀನಾಂ=ವಾಯ್ವಾದಿ ದೇವತೆಗಳ, ಕ್ರಮಶ್ಚೈವ=ತಾರತಮ್ಯದ ಕ್ರಮವೂ, ತದ್ವಾಕ್ಯೈರೇವ=ಆ ವ್ಯಾಸರ ವಾಕ್ಯದಿಂದಲೇ, ಚಿಂತ್ಯತೆ-ತಿಳಿ ಯುತ್ತದೆ.

ತಾತ್ಪರ್ಯ.—ಹಿಂದೆ ಹೇಳಿದ ವೇದವ್ಯಾಸದೇವರ ವಾಕ್ಯಗಳಿಂದ ವಿ ಷ್ಣು ಸರ್ವೋತ್ತಮತ್ವವು ತಿಳಿಯಿಸಲ್ಪಟ್ಟಿತು. ಅದೇ ವೇದವ್ಯಾಸದೇವರ ವಚನವೇ ವಾಯ್ವಾದಿದೇವತೆಗಳ ತಾರತಮ್ಯವನ್ನೂ ಸೂಚಿಸುತ್ತದೆ.

ವಿಶೇಷಾರ್ಥ.—ಮೋಕ್ಷಾಪೇಕ್ಷಿಗಳಾದ ಚೇತನರುಗಳಿಗೆ ತಾರತಮ್ಯ ಜ್ಞಾನವು ಅತ್ಯಾವಶ್ಯಕವೆಂದು ತಿಳಿದು ವ್ಯಾಸರು ಶ್ರೀಭಾರತದಲ್ಲಿತಾರತಮ್ಯ ಜ್ಞಾನ ಮತ್ತು ಹರಿಸರ್ವೋತ್ತಮತ್ವಜ್ಞಾನಗಳನ್ನೂ, ಇವುಗಳಿಗೆ ಅನುಕೂಲ ವಾದ ಶ್ರುತ್ಯರ್ಥಗಳನ್ನೂ ಪ್ರತಿಪಾದಿಸಿರುತ್ತಾರೆ. ಆದ್ದರಿಂದ ಭಾರತಾರ್ಥ ದಿಂದತಾರತಮ್ಯಾದಿಗಳನ್ನು ತಿಳಿದು ಅಧಿಕಾರಿಗಳು ಮೋಕ್ಷಾದಿ ಪುರುಷಾರ್ಥ ವನ್ನುಪಡೆಯಬೇಕೆಂಬುದೇ ಶ್ರೀವೇದವ್ಯಾಸರ ಅಭಿಪ್ರಾಯವು.

ಅವತಾರಿಕೆ.—ಬ್ರಹ್ಮಾದಿಗಳ ತಾರತಮ್ಯವು ಮೋಕ್ಷಸಾಧಕವಾಗಿರ ಲು ಅದನ್ನ ಬಿಟ್ಟು ವಾಯ್ವಾದಿಗಳ ತಾರತಮ್ಯವನ್ನು ಏಕೆ ಸೂಚಿಸಬೇಕೆಂ ಬುವುದನ್ನು ಹೇಳುತ್ತಾರೆ:—

**ಶ್ಲೋಕ॥ ವಾಯುರ್ಹಿಬ್ರಹ್ಮತಾಮೇತಿ ತಸ್ಮಾದ್ಬ್ರಹ್ಮೈವಸಸ್ಮೃತಃ ।**
**ನಬ್ರಹ್ಮಸದೃಶಃ ಕಶ್ಚಿತ್‌ಶ್ಶಿವಾದಿಷು ಕಥಂಚನ ॥೧೫೨॥**

ಅರ್ಥ.—ವಾಯುರ್ಹಿ=ಈ ಕಲ್ಪದ ವಾಯುದೇವರೇ, ಬ್ರಹ್ಮತಾಂ= ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯನ್ನು, ಏತಿ=ಹೊಂದುತ್ತಾರೆ. ತಸ್ಮಾ ತ್=ಆ ಕಾರಣದಿಂದ, ಸಃ=ಆ ವಾಯುದೇವರೇ, ಬ್ರಹ್ಮೈವ=ಬ್ರಹ್ಮದೇವ ರೆಂದು, ಸ್ಮೃತಃ=ಹೇಳಲ್ಪಟ್ಟಿದೆ. ಶಿವಾದಿಷು=ಋದ್ರಾದಿ ದೇವತೆಗಳಲ್ಲಿ, ಕಥಂಚನ=ಯಾರಾದರೂ ಯಾವ ವಿಧದಿಂದಲೂ, ಬ್ರಹ್ಮಸದೃಶಃ=ಬ್ರಹ್ಮ ದೇವರಿಗೆ ಸಮಾನರು, ಕಶ್ಚಿತ್=ಯಾರು, ನ=ಇಲ್ಲ.

ತಾತ್ಪರ್ಯ.—ಋಜುಗಣಸ್ಥರು ವಾಯುಪದವಿಯಿಂದಲೇ ಬ್ರಹ್ಮ ಪದ ವಿಗೆ ಬರಬೇಕು. ವಾಯುದೇವರಾದರೂ ಬ್ರಹ್ಮ ಪದವಿಯಿಂದಲೇ ಮೋಕ್ಷ ಹೊಂದುತ್ತಾರೆ. ಶಿವಾದಿ ದೇವತೆಗಳಲ್ಲಿ ಬ್ರಹ್ಮದೇವರಿಗೆ ಸಮರಾದವರು ಯಾರೂ ಇಲ್ಲ.

ವಿಶೇಷಾರ್ಥ.—ಕಲ್ಪಸಾಧನೆಗಳಲ್ಲಿ ಬ್ರಹ್ಮಪದವಿಯವರು ೨೦೦ಕಲ್ಪ ಗಳು ಸಾಧನಮಾಡಿ, ಮೋಕ್ಷದಲ್ಲಿ ಪೂರ್ಣಾನಂದಕ್ಕೆ ಭಾಗಿಗಳಾಗುತ್ತಾರೆ. ಆದ್ದರಿಂದಲೇ ಬ್ರಹ್ಮದೇವರಿಗೆ ಸಮರಾದ ಚೇತನರು ಇಲ್ಲ. ಬ್ರಹ್ಮದೇವರು

ಚೇತನರುಗಳಲ್ಲಿ ಶ್ರೇಷ್ಠರಾದ್ದರಿಂದ ಜೀವೋತ್ತಮರೆಂದು ತಿಳಿಯಬೇಕು, ಹರಿ ಸರ್ವೋತ್ತಮತ್ವ ವಾಯು ಜೀವೋತ್ತಮತ್ವ ಎರಡೂ ಮೋಕ್ಷಕ್ಕೆ ಪರಮ ಸಾಧಕವೆಂದು ತಿಳಿಯಬೇಕು.

ಅವತಾರಿಕೆ.—ವಾಯುದೇವರೇ ಬ್ರಹ್ಮಪದವಿಗೆ ಬರುವವರಾದ್ದರಿಂದಲೂ ಹನುಮಂತ ದೇವರು ವಾಯುದೇವರ ಅಂಶರಾದ್ದರಿಂದಲೂ ಹನುಮಂತದೇವರಿಗೆ ಉತ್ತಮತ್ವವನ್ನು ಸೂಚಿಸುತ್ತಾರೆ:—

**ಶ್ಲೋಕ॥ ಜ್ಞಾನೇವಿರಾಗೇ ಹರಿಭಕ್ತಿಭಾವೇ ಧೃತಿಸ್ಥಿತಿ ಪ್ರಾಣಬಲೇಷು ಯೋಗೇ ಬುದ್ಧೌಚನಾನ್ಯೋ ಹನುಮತ್ಸಮಾನಃ ಪುಮಾನ್ ಕದಾಚಿತ್ ಕ್ವಚಕಶ್ಚ ನೈವ ॥೧೫೩॥**

ಅರ್ಥ.—ಜ್ಞಾನ=ತತ್ವಜ್ಞಾನದಲ್ಲಿ, ವಿರಾಗೇ=ವೈರಾಗ್ಯದಲ್ಲಿ, ಹರಿಭಕ್ತಿಭಾವೇ=ನಾರಾಯಣನ ಭಕ್ತಿವಿಷಯದಲ್ಲಿ, ಧೃ....ಷು, ಧೃತಿ=ಧೈರ್ಯವು, ಸ್ಥಿತಿ=ನಿಶ್ಚಲವಾಗಿರೋಣವು, ಪ್ರಾಣ=ದೇಹಧಾರಣವು, ಇವುಗಳ, ಬಲೇಷು=ಸಾಮರ್ಥ್ಯದಲ್ಲಿ; ಯೋಗೆ-ಹರಿಯನುಗ್ರಹ ಪಡೆಯತಕ್ಕ ಉಪಾಯದಲ್ಲಿ, ಬುದ್ಧೌಚ=ಬುದ್ಧಿಯಲ್ಲೂ, ಹನುಮತ್ಸಮಾನಃ=ಹನುಮಂತದೇವರಿಗೆ ಸಮಾನ ಪುರುಷನು, ಕದಾಚಿತ್=ಯಾವ ಕಾಲದಲ್ಲಿಯೂ, ಕ್ವಚ-ಯಾವ ಸ್ಥಳದಲ್ಲಿಯೂ, ಕಶ್ಚನ=ಯಾವ ಪುರುಷನೂ, ಅನ್ಯಃ=ಮತ್ತೊಬ್ಬನು, ನೈವ=ಇಲ್ಲವು.

ತಾತ್ಪರ್ಯ.—ಜ್ಞಾನ, ಭಕ್ತಿ, ವೈರಾಗ್ಯಾದಿಗಳೂ; ಧೈರ್ಯ, ಸ್ಥೈರ್ಯ, ಪ್ರಾಣ ಶಕ್ತ್ಯಾದಿಗಳೂ; ಬುದ್ಧಿಸ್ತ ಅಂತರಂಗ ಸಾಧನವೂ, ಇವುಗಳಲ್ಲಿ ಯಾವಾಗಲೂ ಯಾವ ಸ್ಥಳದಲ್ಲಿಯೂ, ಯಾವ ಜೀವನೂ ಈ ಹನುಮಂತದೇವರಿಗೆ ಸಮರಾದವನಿಲ್ಲ.

ವಿಶೇಷಾರ್ಥ.—ಸಾತ್ವಿಕ ಚೇತನರಲ್ಲಿ ಬ್ರಹ್ಮದೇವರು ಮತ್ತು ವಾಯುದೇವರು, ಶುದ್ಧ ಸತ್ವಸ್ವಭಾವವುಳ್ಳವರು. ಮೇಲೆ ಹೇಳಿದ ಜ್ಞಾನಾದಿ ಗುಣಗಣಗಳು ಬ್ರಹ್ಮಪದವಿಗೆ ಬರತಕ್ಕ ಋಜುಗಳ ಹೊರತು ಮತ್ತೊಬ್ಬರಲ್ಲಿಲ್ಲ. ಆದ್ದರಿಂದ 99ನೇ ಕಲ್ಪಸಾಧನ ಉಳ್ಳ ವಾಯು ಪುತ್ರರಾದ

ಹನುಮಂತದೇವರು ಭಗವಂತನ ಜ್ಞಾನಾದಿಗಳಿಂದ ಸಂಪೂರ್ಣರೆಂದು ತಿಳಿಯಬೇಕು.

ಅವತಾರಿಕೆ.—ಹನುಮಂತದೇವರು ವಾಯುದೇವರ ಅವತಾರರೆಂಬ ವಿಷಯದಲ್ಲಿ ಶ್ರುತಿಯನ್ನು ಉದಾಹರಿಸುತ್ತಾರೆ:—

**ಶ್ಲೋಕ॥ ಬಳಿತ್ಥಾತದ್ವಪುಷೇಧಾಯಿದರ್ಶತಂ। ದೇವಸ್ಯಭರ್ಗಸ್ಸಹಸೋ ಯತೋಜನಿ**

ಅರ್ಥ.—ಯತಃ=ಯಾವ ನಾರಾಯಣ ದೇವರಿಂದ (ವಾಯುದೇವರ ಮೂಲರೂಪವು) ಅಜನಿ=ಉತ್ಪನ್ನವಾಯಿತೋ (ಆ ನಾರಾಯಣದೇವರಿಂದ) ಸಹಸಃ=ಬಲ ರೂಪರಾದ, ದೇವಸ್ಯ=ಕ್ರೀಡಾದಿ ಗುಣಯುಕ್ತರಾದ ವಾಯು ದೇವರ, ತತ್=ಆ ಮೂಲ ರೂಪವು, ಬಟ್=ಬಲ ರೂಪವಾಗಿಯೂ, ದರ್ಶತಂ=ಜ್ಞಾನ ಪೂರ್ಣವಾಗಿಯೂ, ಭರ್ಗಃ=ಭರ್, ಗಃ=(ಜನಗಳನ್ನು) ಪೋಷಣಗಮನ ಮಾಡುವದಾಗಿಯು, ಇತ್ಥಾ=ಈ ಪ್ರಕಾರವಾಗಿರುತ್ತದೋ (ಹೇಗೆ ಮೂಲರೂಪವು ಬಲಾದಿಗಳಿಂದ ಯುಕ್ತವಾದದ್ದೋ ಹಾಗೆಯೇ) ವಪುಷೇ=ಅವತಾರಕ್ಕೋಸ್ಕರ, ಅಧಾಯಿ=ಇಡಲ್ಪಟ್ಟಿದೆ.

ಅಥವಾ; ಸಹಸಃ=ಬಲರೂಪರಾದ, ದೇವಸ್ಯ=ಕ್ರೀಡಾದಿ ಗುಣಯುಕ್ತರಾದ ವಾಯುದೇವರ, ತತ್=ಆ ಮೂಲರೂಪವು, ಬಟ್=ಬಲಾತ್ಮಕ ವಾಗಿಯೂ, ದರ್ಶತಂ=ಜ್ಞಾನಪೂರ್ಣವಾಗಿಯೂ, ಭರ್ಗಃ=(ಜನಗಳನ್ನು) ಪೋಷಣಗಮನ ಮಾಡುವುದೋ, ಇತ್ಥಾ=ಹೀಗೆಯೇ, ವಪುಷೇ=ಅವತಾರ ಕ್ಕೋಸ್ಕರ, ಅಧಾಯಿ=ಇಡಲ್ಪಟ್ಟಿದೆ. ಯತಃ=ಯಾವ ಮೂಲ ರೂಪದಿಂದ ಅಜನಿ=ಉತ್ಪನ್ನವಾದದ್ದೋ,

ಅಥವಾ: ಸಹಸಃ=ಬಲರೂಪರಾದ, ದೇವಸ್ಯ=ಕ್ರೀಡಾದಿ ಗುಣಯುಕ್ತರಾದ ವಾಯುದೇವರ, (ಯಾವ ರೂಪವೋ) ತತ್=ಆ ರೂಪವು, ಬಟ್=ಬಲಾತ್ಮಕವು. ದರ್ಶತಂ=ಜ್ಞಾನದಿಂದ ವ್ಯಾಪ್ತವಾದದ್ದು, ಇತ್ಥಾ=ಈ ಪ್ರಕಾರ, ವಪುಷೇ=ಅವತಾರಕ್ಕೋಸ್ಕರ, ಅಧಾಯಿ=ಇಡಲ್ಪಟ್ಟಿದೆ ಯತಃ=ಯಾವ

ಮೂರು ಅವತಾರಗಳ ದೆಶೆಯಿಂದ, ಭರ್ಗಃ=ಪ್ರಕಾಶನಾಗಿಯೂ, ಸರ್ವಜ್ಞ ನಾಗಿಯೂ ಇರುವ ಪರಮಾತ್ಮನು, ಅಜನಿ-ಅಭಿವ್ಯಕ್ತನಾದನೋ-

ತಾತ್ಪರ್ಯ—ವಾಯುದೇವರ ಮೂಲರೂಪ ಸಾಕ್ಷಾತ್ತಾಗಿ ಪರಮಾತ್ಮ ನಿಂದ ಉತ್ಪನ್ನವಾದ್ದರಿಂದ ಬಲ ಜ್ಞಾನಗಳು ಪೂರ್ಣವಾಗಿಯೂ ಪ್ರೇಷ ಣವನ್ನೂ ವ್ಯಾಪ್ತಿಯನ್ನೂ ಮಾಡುವದಾಗಿಯೂ ಇರುತ್ತದೆ. ಹೇಗೆ ಮೂಲ ರೂಪವೋ ಹಾಗೆಯೇ ಅವತಾರ ರೂಪವೂ ಬಲ ಜ್ಞಾನಾದಿಗಳಿಂದ ಪೂರ್ಣ ವಾಗಿರುತ್ತದೆ.

ಅಥವಾ; ವಾಯುದೇವರ ಅವತಾರ ರೂಪವು ಬಲಜ್ಞಾನಾದಿಗಳಿಂದ ಪೂರ್ಣವಾದ ಮೂಲರೂಪದಿಂದ ಉತ್ಪನ್ನವಾದದ್ದೋ ಆ ಕಾರಣದಿಂದ ಇದೂಸು ಬಲ ಜ್ಞಾನಾದಿಗಳಿಂದ ಪೂರ್ಣವಾದದ್ದೇ,

ಅಥವಾ-ಯಾವ ವಾಯುದೇವರ ರೂಪವು ಬಲ ಸ್ವರೂಪವಾಗಿ ಜ್ಞಾನದಿಂದ ವ್ಯಾಪ್ತವಾದದ್ದೋ ಹಾಗೆಯೇ ಅವತಾರವೂ ಮಾಡಲ್ಪಟ್ಟದೆ. ಆ ಮೂರು ಅವತಾರಗಳೂ ಸ್ವಯಂ ಪ್ರಕಾಶವಾಗಿಯೂ ಸರ್ವಜ್ಞನಾಗಿಯೂ ಇರುವ ಭಗವಂತನ ಸ್ವರೂಪವನ್ನು ಉಪದೇಶಗಳಿಂದ ಸಜ್ಜನರಿಗೆ ಪ್ರಕಾಶ ಪಡಿಸುವಂಥಾದ್ದು

**ಶ್ಲೋಕ॥ ಯದೀಮುಪಹ್ವರತೇ ಸಾಧತೇಮತಿರ ಋತಸ್ಯಧೇನಾಅನಯಂತ ಸಸ್ರುತಃ ॥೧೫॥**

ಅರ್ಥ.—ಯತ್-ಯಾವ ಪ್ರಥಮಾವತಾರವು, ಮತಿಃ-ಜ್ಞಾನ ಪೂರ್ಣವಾದ ಪ್ರಯುಕ್ತ ಜ್ಞಾನ ಪೂರ್ಣನೆಂಬ ಅರ್ಥ ಪ್ರತಿಪಾದಕವಾದ "ಹನುಮಾನ್" ಎಂಬ ಶಬ್ದದಿಂದ ವಾಚ್ಯವಾದದ್ದೋ, ಋತಸ್ಯ=ಜ್ಞಾನ ಸ್ವರೂಪರಾದ ರಾಮಚಂದ್ರದೇವರ, ಉಪಹ್ವರತೇ-ಸಮೀಪದಲ್ಲೇ ಇರುತ್ತದೋ, ಈಂ=ಈ ಪ್ರಕಾರವಾಗಿ(ಮತ್ತು) ಒಬ್ಬರೇ ಸಾಧತೇ=ಶ್ರೀರಾಮ ಚಂದ್ರದೇವರ ಕಾರ್ಯಗಳನ್ನ ಸಾಧನೆ ಮಾಡುತ್ತದೋ, ಋತಸ್ಯ= ಶ್ರೀರಾಮಚಂದ್ರದೇವರ, ಸಸ್ರುತಃ-ಅಮೃತವನ್ನ ಸ್ರವಿಸುವಂಥ, ಧೇನಾಃ= ರಾಮಾಯಣ ರೂಪವಾದ ವಾಕ್ಯಗಳನ್ನು (ಶಿಷ್ಯಾನ್ ಪ್ರತಿ=ಶಿಷ್ಯರುಗಳನ್ನು

ಕುರಿತು) ಅನಯಂತ=ಉಪದೇಶದಿಂದ ಹೊಂದಿಸಿತೋ (ಅದು ವಾಯುದೇವರ ಪ್ರಥಮಾವತಾರವಾದ ಹನುಮಂತ ರೂಪವು).

ಅಥವಾ—ಸಸ್ರುತಃ=ಸುಖಪ್ರದವಾದ ಋತಸ್ಯಧೇನಾಃ=ಶ್ರೀರಾಮಚಂದ್ರದೇವರ ವಾಕ್ಯಗಳನ್ನ, ಅನಯಂತ–ಸೀತಾದೇವಿಯರನ್ನ ಕುರಿತು ಕೇಳಿಸುವಂತೆ ಮಾಡ್ಯಾಯಿತೋ, (ಅದು ವಾಯುದೇವರ ಹನುಮನ್ನಾಮಕ ಪ್ರಥಮಾವತಾರವು.

ಅವತಾರಿಕೆ.— ವಾಯುದೇವರ ಎರಡನೆಯ ಅವತಾರವನ್ನು ಹೇಳುತ್ತಾರೆ:—

**ಶ್ಲೋಕ॥ ಪೃಕ್ಷೋವಪುಃ ಪಿತುಮಾನಿತ್ಯ ಆಶಯೇ ದ್ವಿತೀಯ ಮಾಸಪ್ತಶಿವಾಸುಮಾತೃಷು ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂಜನಯಂತಯೋಷಣಃ ॥೧೫॥**

ಅರ್ಥ.—ಪೃಕ್ಷಃ–ಸೈನ್ಯಗಳನ್ನು ಸಂಹಾರ ಮಾಡುವವರಾದ, ಪಿತುಮಾ=ಬಹು ಅನ್ನವನ್ನ ಭೋಜನ ಮಾಡುವವರಾದ, ನಿತ್ಯಃ=ಪ್ರಳಯ ಕಾಲದಲ್ಲಿಯೂ ನಷ್ಟವಾಗದೇ ನಿತ್ಯವಾಗಿರುವ ಜ್ಞಾನವುಳ್ಳವರಾದ, ದ್ವಿತೀಯವಪುಃ=ವಾಯುದೇವರ ಎರಡನೆಯ ಅವತಾರರಾದ ಭೀಮಸೇನದೇವರು, ಶಿವಾಸು–ನಿರ್ದೋಷಗಳಾದ ಪ್ರಯುಕ್ತ ಮಂಗಳ ಸ್ವರೂಪಗಳಾದ, ಅಥವಾ, ಮಂಗಳ ರೂಪನಾದ ಭಗವಂತನನ್ನ ಪ್ರತಿಪಾದನೆ ಮಾಡತಕ್ಕ ಮಾತೃಷು=ಪ್ರಮಾಣ ರೂಪಗಳಾದ, ಸಪ್ತ–ನಾಲ್ಕು ವೇದಗಳು, ಇತಿಹಾಸ ಪುರಾಣ ಮತ್ತು ಪಂಚರಾತ್ರ ಒಟ್ಟು ಏಳು ಶಾಸ್ತ್ರಗಳಲ್ಲಿ, ಆಶಯೇ=ಚನ್ನಾಗಿ ಮಲಗಿರುತ್ತಾರೆ (ಅಂದರೆ ಅದರಲ್ಲೇ ಅತ್ಯಂತ ಆಸಕ್ತರಾಗಿರುತ್ತಾರೆ).

ಇನ್ನು ಮೂರನೆಯ ಅವತಾರವನ್ನು ಹೇಳುತ್ತಾರೆ:—

ಅಸ್ಯವೃಷಭಸ್ಯ=ದೇವ ಶ್ರೇಷ್ಟರಾದ ವಾಯುದೇವರ, ತೃತೀಯಂ–ಮೂರನೆಯ ರೂಪವಾದ, ದಶಪ್ರಮತಿಂ=ಪೂರ್ಣಪ್ರಜ್ಞಾಚಾರ್ಯರನ್ನ, ಯೋಷಣಃ–ಮಧ್ಯಗೇಹಭಟ್ಟರ ಪತ್ನಿ, ಅಥವಾ, ವಿದ್ಯಾಭಿಮಾನಿಗಳಾದ ಶ್ರೀ

ಭೂ ದುರ್ಗಾ ರೂಪರಾದ ಲಕ್ಷ್ಮೀದೇವಿಯರು, ದೋಹಸೇ=ಜ್ಞಾನ ಪ್ರಕಾಶ ಮಾಡುವದಕ್ಕೋಸ್ಕರ. ಅಜನಯಂತ=ಪಡೆವರು, ಅಥವಾ, ಯೋಷಣಃ-ಸಪ್ತ ಮಾತೃಗಳೆಂಬ ಪೂರ್ವೋಕ್ತ ಏಳುಶಾಸ್ತ್ರಗಳ, ದೋಹಸೇ=ಜ್ಞಾನ ಪ್ರಕಾಶ ಮಾಡುವದಕ್ಕೋಸ್ಕರ, ಜನಯಂತ=(ತೃತೀಯ ರೂಪವು) ಉತ್ಪನ್ನವಾಯಿತು ಎಂದು ತಿಳಿಯಬೇಕು.

ಅವತಾರಿಕೆ.—ಮೂರನೆಯ ಅವತಾರದ ಪ್ರಯೋಜನವನ್ನು ಹೇಳುತ್ತಾರೆ:—

**ಶ್ಲೋ॥ ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ ಈಶಾನಾಸಃ ಶವಸಾಕ್ರಂತ ಸೂರಯಃ ಯದೀಮನುಪ್ರದಿವೋಮಧ್ವಆಧವೇ ಗುಹಾಸನ್ತಂ ಮಾತರಿಶ್ವಾಮಥಾಯತಿ ॥೧೫೬॥**

ಅರ್ಥ.—ಯತ್ ಬುಧ್ನಾತ್=ಜ್ಞಾನ ಸ್ವರೂಪವಾದ ತೃತೀಯಾವತಾರದ ದೆಶೆಯಿಂದ, ಅಥವಾ—ಜ್ಞಾನೋಪದೇಶಕ್ಕೆ ಮೂಲಭೂತರಾದ ಶ್ರೀಮದಾಚಾರ್ಯರ ದೆಶೆಯಿಂದ, ಅಥವಾ ಮೂಲಭೂತ ಪ್ರಮಾಣವಾದ ಬ್ರಹ್ಮ ಸೂತ್ರ ಭಾಷ್ಯದ ದೆಶೆಯಿಂದ, ಅಥವಾ ಮೂಲರೂಪರಾದ ನಾರಾಯಣ ದೇವರ ಅನುಗ್ರಹದಿಂದ, ಅಥವಾ ಮೂಲರೂಪರಾದ ವಾಯುದೇವರನುಗ್ರಹದಿಂದ, ಈಂಮಹಿಷಸ್ಯ-ಪೂಜ್ಯವಾದ ಗುಣವುಳ್ಳ ಈ ಪರಮಾತ್ಮನ, ವಪ್ಪಸಃ=ಪಾನಮಾಡುವದಕ್ಕೆ ಅರ್ಹಗಳಾದ (ಅಂದರೆ ಶ್ರವಣ ಕೀರ್ತನಗಳಿಗೆ ಅರ್ಹಗಳಾದ ಜ್ಞಾನ, ಬಲ ಮೊದಲಾದ ಗುಣಗಳನ್ನ) ಸೂರಯಃ-ಜ್ಞಾನಿಗಳಾದ, ಈಶಾನಾಸಃ=ರುದ್ರಾದಿ ದೇವತೆಗಳು, ಅಥವಾ, ಲೋಕಪಾಲಕರಾದ ದೇವತೆಗಳು, ಶವಸಾ-ಸುಖವಾಗಿ, ನಿರಾಕ್ರಂತ=ಅತ್ಯಂತವಾಗಿ ತಿಳಿದುಕೊಳ್ಳುವವರಾದರೋ, ಮಾತರಿಶ್ವಾ (ಅ)ವಾಯ್ವವತಾರರಾದ, ಪ್ರದಿವಃ=ಉತ್ಕೃಷ್ಟ ಜ್ಞಾನ ಉಳ್ಳವರಾದ ಶ್ರೀಮದಾಚಾರ್ಯರು, ಯತ್ ಈಂ=ಇವರೇ, ಗುಹಾಸನ್ತಂ=ಹೃದಯ ಗುಹಾದಲ್ಲಿ ಮರೆಯಾಗಿರುವ, ಭಗವಂತನನ್ನ, ಅಥವಾ ಚೆನ್ನಾಗಿ ಸರ್ವಸ್ವಾಮಿ ಎಂಬ ಅರ್ಥದಲ್ಲಿ, ಅನು=ಅನುಕೂಲವಾಗಿ, (ಋಗಾದಿ ಶಾಸ್ತ್ರಗಳನ್ನ), ಮಥಾಯತಿ=ವಿಚಾರಮಾಡುತ್ತಾರೆ.

ಶ್ಲೋಕ॥ ಪ್ರಯುಕ್ಷಿತುಃ ಪರಮಾನ್ನೀಯತೇ ಪರ್ಯ್ಯಾಪೃಕ್ಷುಧೋವೀರುಧೋ ದಂಷುರೋಹತಿ ಉಭಾಯದಸ್ಯ ಜನುಷಂ ಯದಿನ್ವತ ಆದಿದ್ಯವಿ ಷ್ಠೋ ಅಭವದ್ಘೃಣಾಶುಚಿಃ ॥೧೫೭॥

ಅರ್ಥ.—ಯತ್—ಯಾವ ರೂಪವು, ಪರಮಾತ್ ಪಿತುಃ-ಸರ್ವೋತ್ತಮನಾದ ತಂದೆಯಾದ ನಾರಾಯಣದೇವರಿಂದ, ಪ್ರಣೀಯತೇ—ಚೆನ್ನಾಗಿ ಪ್ರೇರೇಪಿಸಲ್ಪಡುತ್ತದೆಯೋ, ತತ್—ಆ ರೂಪರಾದ ಮಧ್ವಾಚಾರ್ಯರು, ಪೃಕ್ಷುಧಃ=ಪ್ರಶ್ನರೂಪಗಳಾದ, ವೀರುಧಃ=ಬಳ್ಳಿಗಳನ್ನು, ದಂಷು-ಹಲ್ಲುಗಳಿಂದ, ಪರ್ಯ್ಯಾರೋಹತಿ=ಖಂಡಿಸುತ್ತಾರೆ. (ಅಂದರೆ ಸಣ್ಣ ಬಳ್ಳಿಗಳನ್ನ ಹಲ್ಲುಗಳಿಂದ ಖಂಡಿಸುವಹಾಗೆ ದುರ್ವಾದಿಗಳ ಆಕ್ಷೇಪಣೆಗಳನ್ನು ಖಂಡನ ಮಾಡುತ್ತಾರೆಂದು ತಿಳಿಯಬೇಕು. ಯತ್—ಯಾವಕಾರಣದಿಂದ, ಉಭಾ=ಶ್ರೀಲಕ್ಷ್ಮೀನಾರಾಯಣರು, ಅಸ್ಯ=ಈ ವಾಯುದೇವರ, ಜನುಷಂ=ಅವತಾರವನ್ನು; ಯತ್=ಯಾವ ಜ್ಞಾನಕಿರ್ಯೋಸ್ಕರ, ಇನ್ವತಃ=ಪ್ರೇರಣೆ ಮಾಡುವವರಾದರೋ, ಘೃಣಾ=ವಿಷ್ಣು ಭಕ್ತರುಗಳಲ್ಲಿ ದಯವುಳ್ಳವರಾಗಿಯೂ, ಶುಚಿಃ=ಗರ್ಭವಾಸಾದಿ ದೋಷಗಳಿಲ್ಲದವರಾಗಿಯೂ ಇರುವ ವಾಯ್ವಾವತಾರರಾದ ಪೂರ್ಣಪ್ರಜ್ಞಾಚಾರ್ಯರು, ಆತ್=ಈ ಕಾರಣದಿಂದ (ಮತ್ತು) ಮೊದಲಿನಿಂದ, ಇತ್=ಇವರಿಬ್ಬರ ದೆಶೆಯಿಂದ, ಯವಿಷ್ಟಃ=ಕಡಿಮೆಯಾದವರಾಗಿ, ಅಭವತ್—ಆದರು. (ಅಂದರೆ ಸಜ್ಜನರಿಗೆ ಜ್ಞಾನೋಪದೇಶ ಮಾಡುವದಕ್ಕಾಗಿ ಶ್ರೀಮಧ್ವಾಚಾರ್ಯರನ್ನ ಲಕ್ಷ್ಮೀನಾರಾಯಣರು ಪ್ರೇರೇಪಿಸಿದ್ದರಿಂದ ಶ್ರೀಮಧ್ವಾಚಾರ್ಯರು ಅನಾದಿ ಕಾಲದಿಂದಲೂ ಶ್ರೀಲಕ್ಷ್ಮೀನಾರಾಯಣರಿಗಿಂತಲೂ ತಾರತಮ್ಯದಲ್ಲಿ ಕಡಿಮೆಯಾದವರು),

ಶ್ಲೋಕ॥ ಆದಿನ್ಮಾತೄರಾವಿ ದ್ಯಾಸ್ವಾಶುಚಿರಹಿಂಸ್ಯಮಾನಉರ್ವಿಯಾ ವಿವಾವೃಧೇ ಅನುಯತ್ಪೂರ್ವಾಅರುಹತ್ಸನಾಜುವೋ ನಿನವ್ಯಸೀಷ್ವವರಾಸುಧಾವತೇ ॥೧೫೮॥

ಅರ್ಥ.—(ಅಯಂ=ಈ ವಾಯುದೇವರು) ಆದಿತ್=ನಾರಾಯಣದೇವರ ಪ್ರೇರಣೆಯಿಂದಲೇ, ಮಾತೄಃ=ಶ್ರೀ, ಭೂ, ದುರ್ಗಾ, ಜಯಾ, ಶಾಂತಿ

ಮೊದಲಾದ ಲಕ್ಷ್ಮೀರೂಪಗಳನ್ನು, ಆವಿಶತ್=(ಜನನಕ್ಕೋಸ್ಕರ) ಪ್ರವೇಶ ಮಾಡಿದರು, ಯಾಸು=ಈ ಮಾತೃಗಳಲ್ಲಿ, ಅಶುಚಿಃ=ಅತ್ಯಂತ ಶುದ್ಧರಾಗಿಯೂ, ಊರ್ವ್ಯಾ=ಉತ್ಕೃಷ್ಟವಾದ ಶಕ್ತಿಯಿಂದ, ಅಹಿಂಸ್ಯಮಾನಃ=ಪೀಡಿಸಲ್ಪಡದಿದ್ದವರಾಗಿಯೂ, ವಿವಾವೃಧೇ=ವೃದ್ಧಿಯನ್ನು ಹೊಂದಿದರೊ ಸನಾಜುವಃ=ವಿಷ್ಣುವಿನ ಸೇವೆಯಲ್ಲಿ ಆಸಕ್ತರಾದ, ಆಸು=ಈ ಮಾತೃಗಳಲ್ಲಿ, ಪೂರ್ವಾಃ=ಲಕ್ಷ್ಮೀ ಮೊದಲಾದವರುಗಳನ್ನು ಅನು=ಕ್ರಮದಿಂದ ಅನುಸರಿಸಿ, ಅರುಹತ್=ಹುಟ್ಟಿದರು, ನವ್ಯಸೀಷು=ನೂತನ ದೇಹ ಇಡುವುದರಿಂದ ನೂತನಗಳಾದ, ಅವರಾಸು=ತನಗಿಂತಲೂ ಕಡಿಮೆಯಾದ ಜಾತಿಯಲ್ಲಿ. ನಿಧಾವತೇ—ವಿಕ್ರಮವಾಗಿ ಜನನವನ್ನು ಹೊಂದಿದ್ದಾರೆ. (ಅಂದರೆ, ತನಗಿಂತಲೂ ಕಡಿಮೆಯಾದ ಧರ್ಮರಾಜನು ಹುಟ್ಟಿದನಂತರ ತಾವು ಹುಟ್ಟಿದ್ದಾರೆ.). ಅಥವಾ, (ಈ ವಾಯುದೇವರು) ಆದಿತ್=ಈ ನಾರಾಯಣದೇವರ ದೆಶೆಯಿಂದಲೇ, ಮಾತೃಃ=ಋಗಾದಿ ಸಪ್ತ ಮಾತೃಗಳನ್ನು. ಆವಿಶತ್=ವಿಚಾರ ಮಾಡಿದರು, ಆಸು=ಈ ಋಗಾದಿ ಶಾಸ್ತ್ರಗಳಲ್ಲಿ, ಊರ್ವ್ಯಾ=ಉತ್ಕೃಷ್ಟವಾದ ಜ್ಞಾನ ಶಕ್ತಿಯಿಂದ, ಅಹಿಂಸ್ಯಮಾನಃ=ಅಜ್ಞಾನಾದಿ ಗುಣಗಳಿಂದ ಪೀಡಿಸಲ್ಪಡದಿದ್ದವರಾಗಿಯೂ, ಅಶುಚಿಃ=ಯಥಾರ್ಥ ಜ್ಞಾನವುಳ್ಳವರಾಗಿಯೂ, ವಿವಾವೃಧೇ=ಋದ್ರಾದಿಗಳಿಗಿಂತಲೂ ಹೆಚ್ಚು ಜ್ಞಾನದಿಂದ ವೃದ್ಧಿಯನ್ನು ಹೊಂದಿದರು, ಆಸು—ಈ ಋಗಾದಿ ಏಳು ಶಾಸ್ತ್ರಗಳಲ್ಲಿ, ಸನಾಜುವಃ=ಅನಾದಿಯಾದ ಶ್ರೀವಿಷ್ಣುವನ್ನು ಪ್ರತಿಪಾದನೆ ಮಾಡತಕ್ಕವುಗಳಾದ, ಅಥವಾ ಅನಾದಿ ಕಾಲದಿಂದ ಇರತಕ್ಕವುಗಳಾದ, (ಅಂದರೆ ಪೌರುಷೇಯುಗಳಾದ) ಪೂರ್ವಾಃ=ಮೊದಲನೆ ನಾಲ್ಕು ಋಗಾದಿ ವೇದಗಳನ್ನು, ಅನು=ಉಪಕ್ರಮಾದಿಗಳನ್ನನುಸರಿಸಿ, ಅರುಹತ್=ತಿಳಿದುಕೊಂಡರು, ನವ್ಯಸೀಷು=(ಪೌರುಷೇಯುವಾದ ಪ್ರಯುಕ್ತ) ನೂತನಗಳಾದ, ಅವರಾಸು=ವೇದಗಳಿಗಿಂತ ಕಡಿಮೆಯಾದ ಇತಿಹಾಸ ಪುರಾಣ ಪಾಂಚರಾತ್ರಗಳೆಂಬ ಶಾಸ್ತ್ರಗಳಲ್ಲಿ, ನಿಧಾವತೇ—ಶೀಘ್ರದಲ್ಲಿ ಜ್ಞಾನವನ್ನು ಹೊಂದಿದ್ದಾರೆ.

ಅವತಾರಿಕೆ.—ವಾಯುದೇವರಿಗೆ ಉತ್ತಮತ್ವ ವಿಚಾರದಲ್ಲಿ ಭಾರತ ವಾಕ್ಯಗಳನ್ನು ಪಠಿಸುತ್ತಾರೆ:—

**ಶ್ಲೋಕ|| ಅಶ್ವಮೇಧಃಕ್ರತುಃಶ್ರೇಷ್ಠೋ ಜ್ಯೋತಿಶ್ರೇಷ್ಠೋ ದಿವಾಕರಃ ಬ್ರಾಹ್ಮಣೋದ್ವಿಪದಾಂ ಶ್ರೇಷ್ಠಃ ದೇವಶ್ರೇಷ್ಠಸ್ತು ಮಾರುತಃ ||೧೫||**

ಅರ್ಥ.—ಅಶ್ವಮೇಧಃ-ಅಶ್ವಮೇಧಯಜ್ಞವು, ಕ್ರತಃ-ಯಜ್ಞಗಳಲ್ಲಿ, ಶ್ರೇಷ್ಠ=ಶ್ರೇಷ್ಠವು, ದಿವಾಕರಃ-ಸೂರ್ಯದೇವರು, ಜ್ಯೋತಿಶ್ರೇಷ್ಠಃ=ಪ್ರಕಾಶವಾದ ವಸ್ತುಗಳಲ್ಲಿ, ಶ್ರೇಷ್ಠರು. ದ್ವಿಪದಾಂ-ಮಾನವರಲ್ಲಿ, ಬ್ರಾಹ್ಮಣಃ=ಬ್ರಾಹ್ಮಣನು, ಶ್ರೇಷ್ಠ-ಶ್ರೇಷ್ಠನು. ಮಾರುತಸ್ತು=ವಾಯುದೇವರು ಆದರೋ, ದೇವಶ್ರೇಷ್ಠಃ-ದೇವತೆಗಳಲ್ಲಿ ಶ್ರೇಷ್ಠರು.

ತಾತ್ಪರ್ಯ.—ಯಜ್ಞಗಳಲ್ಲಿ ಅಶ್ವಮೇಧ ಯಜ್ಞವು ಹೇಗೆ ಶ್ರೇಷ್ಠವೋ ಪ್ರಕಾಶವಾದ ವಸ್ತುಗಳಲ್ಲಿ ಸೂರ್ಯನು ಹೇಗೆ ಶ್ರೇಷ್ಠನೋ, ಮಾನವರಲ್ಲಿ ಬ್ರಾಹ್ಮಣನು ಹೇಗೆ ಶ್ರೇಷ್ಠನೋ, ಹಾಗೆ ದೇವತೆಗಳಲ್ಲಿ ವಾಯುದೇವರು ಶ್ರೇಷ್ಠರು.

ವಿಶೇಷಾರ್ಥ.—ವಾಯುದೇವರಿಗೆ ದೇವ ಶ್ರೇಷ್ಠತ್ವವನ್ನು ಛಾಂದೋಗ್ಯದಲ್ಲಿ ಹೇಳುವಾಗ ರುದ್ರಾದಿ ಸರ್ವ ದೇವತೆಗಳಿಗೂ ಮೃತ್ಯು ಬರಲು ವಾಯುದೇವರಲ್ಲಿ ಶರಣಾಗತರಾಗಿ ಮೃತ್ಯುವನ್ನುಜಯಿಸಿದರೆಂದು ಹೇಳಿದೆ.

ಅವತಾರಿಕೆ.—ಇಂದ್ರಾದಿಗಳ ತಾರತಮ್ಯದಿಂದ ವಾಯುದೇವರಿಗಿಂತಲೂ ಶ್ರೀಹರಿಯು ಸರ್ವಶ್ರೇಷ್ಠನೆಂದು ತಿಳಿಸುತ್ತಾರೆ:—

**ಶ್ಲೋಕ|| ಬಲಮಿಂದ್ರಸ್ಯಗಿರಿಶೋ ಗಿರಿಶಸ್ಯ ಬಲಂಮರುತ್ ।**
**ಬಲಂತಸ್ಯಹರಿಃ ಸಾಕ್ಷಾತ್ನಹರೇಃ ಬಲಮನ್ಯತಃ ||೧೬೦||**

ಅರ್ಥ.—ಇಂದ್ರಸ್ಯ=ಇಂದ್ರ ದೇವರಿಗೆ, ಗಿರಿಶಃ=ರುದ್ರ ದೇವರು, ಬಲಂ=ಬಲಪ್ರದರು, ಗಿರಿಶಸ್ಯ=ರುದ್ರದೇವರಿಗೆ, ಮರುತ್-ವಾಯುದೇವರು, ಬಲಂ=ಬಲಪ್ರದರು, ತಸ್ಯ=ಆ ವಾಯುದೇವರಿಗೆ, ಹರಿಃ-ಶ್ರೀನಾರಾಯಣದೇವರು, ಸಾಕ್ಷಾತ್-ಮುಖ್ಯವಾಗಿ, ಬಲಂ-ಬಲಪ್ರದರು. ಹರೇಃ-ಶ್ರೀಹರಿಗೆ, ಅನ್ಯತಃ-ಮತ್ತೊಬ್ಬರ ದೆಶೆಯಿಂದ, ಬಲಂ-ಜ್ಞಾನಾದಿ ಬಲ ಶ್ರೇಷ್ಠತ್ವವು, ನ-ಇಲ್ಲ.

ತಾತ್ಪರ್ಯ.—ಇಂದ್ರದೇವರಿಗೆ ಋದ್ರದೇವರು ಜ್ಞಾನಾದಿ ಬಲಪ್ರದರು. ಋದ್ರದೇವರಿಗೆ ವಾಯುದೇವರು, ವಾಯುದೇವರಿಗೆ ಶ್ರೀನಾರಾಯಣದೇವರು ಜ್ಞಾನಾದಿ ಬಲಪ್ರದರು. ಶ್ರೀನಾರಾಯಣದೇವರಿಗೆ ಅನ್ಯರಿಂದ ಜ್ಞಾನಾದಿ ಬಲದಾತೃತ್ವವು ಇರುವುದಿಲ್ಲ. ಆದ್ದರಿಂದ ಶ್ರೀನಾರಾಯಣನೇ ಸರ್ವೋತ್ತಮನು.

ವಿಶೇಷಾರ್ಥ.—ಆನಂದ, ಜ್ಞಾನ, ಬಲ ಇವುಗಳನ್ನು ಸರ್ವರಿಗೂ ಕೊಡತಕ್ಕವನು ಶ್ರೀಹರಿಯಾದವರೂ ದೇವತೆಗಳಿಗೆ ತಮಗಿಂತಲೂ ಉತ್ತಮರಾದವರ ಅನುಗ್ರಹದಿಂದಲೇ ಮೋಕ್ಷವಾದ ಪ್ರಯುಕ್ತ ಸರ್ವರಿಗೂ ತಮ್ಮ ತಮ್ಮ ಗುರುವಂತರ್ಗತ ಶ್ರೀನಾರಾಯಣನೇ ಬಲಪ್ರದನು. ಆ ಶ್ರೀಹರಿಯು ಸರ್ವಸ್ವತಂತ್ರನು.

ಅವತಾರಿಕೆ.—ವಾಯುದೇವರ ಉತ್ತಮತ್ವ ವಿಚಾರದಲ್ಲಿ ಮತ್ತೊಂದು ಪ್ರಮಾಣವನ್ನು ಸೂಚಿಸುತ್ತಾರೆ:—

**ಶ್ಲೋಕ॥ ವಾಯುರ್ಭೀಮೋ ಭೀಮನಾದೋ ಮಹೌಜಾಃ ಸರ್ವೇಷಾಂಚ**
**ಪ್ರಾಣಿನಾಂ ಪ್ರಾಣಭೂತಃ । ಅನಾವೃತ್ತಿಃ ದೇಹಿನಾಂ ದೇಹಪಾತೇ**
**ತಸ್ಮಾದ್ವಾಯುರ್ದೇವದೇವೋ ವಿಶಿಷ್ಟಃ ॥೧೬೧॥**

ಅರ್ಥ.— ಭೀಮಃ—ಭಯಂಕರರಾದ, ಸರ್ವೇಷಾಂ—ಸಮಸ್ತರಾದ, ಪ್ರಾಣಿನಾಂ—ಇಂದ್ರಿಯಗಳಿಗೆ, ಪ್ರಾಣಭೂತಃ—ಸತ್ವಭೂತರಾದಂಥ ಅಥವಾ ಜೀವನಪ್ರದರಾದಂಥ, ವಾಯುಃ—ವಾಯುದೇವರು, ಭೀಮನಾದಃ—ಭೀಮ—ಭಯಂಕರವಾದ, ನಾದಃ—ಧ್ವನಿಯುಳ್ಳ, ಮಹೋಜಾಃ—ಮಹಾಸಾಮರ್ಥ್ಯರಾದ, ವಾಯುಃ—ವಾಯುದೇವರು, ದೇಹಿನಾಂ—ದೇಹವುಳ್ಳ ಚೇತನರುಗಳ, ದೇಹಪಾತೇ—ಶರೀರ ಬೀಳತ್ತಾ ಇರಲಾಗಿ, ಅನಾವೃತ್ತಿಃ—ಪುನಃ ಪ್ರವೇಶ ಹೀನರೋ, ತಸ್ಮಾತ್—ಆ ಕಾರಣದ ದೆಶೆಯಿಂದ, ವಾಯುಃ—ವಾಯುದೇವರು, ದೇವದೇವ—ದೇವತೆಗಳಿಗೆ ಅಧಿಪತಿಗಳು. ವಿಶಿಷ್ಟಃ—ಆದ್ದರಿಂದಲೇ ಶ್ರೇಷ್ಠರು.

ತಾತ್ಪರ್ಯ.—ಯಾವ ವಾಯುದೇವರು ಶತೃಗಳಿಗೆ ಭಯಂಕರವಾದ ಧ್ವನಿಯುಳ್ಳವರೋ, ಮಹಾ ಸಾಮರ್ಥ್ಯವಂತರೋ, ಸಕಲ ಪ್ರಾಣಿಗಳಿಗೆ ಪ್ರಾಣಭೂತರೋ, ಚೇತನರುಗಳ ಪ್ರಾಣ ಹೋದಮೇಲೆ ಪುನಃ ಆ ದೇಹದಲ್ಲಿ ಪ್ರವೇಶಿಸುವುದಿಲ್ಲವೊ, ಅಂತಹ ವಾಯುದೇವರು ಸರ್ವದೇವತೆಗಳಲ್ಲಿ ಶ್ರೇಷ್ಟನು.

ವಿಶೇಷಾರ್ಥ.—ಹರಿ ಸರ್ವೋತ್ತಮತ್ವ ಜ್ಞಾನವು ಮೋಕ್ಷಕ್ಕೆ ಹೇಗೆ ಸಾಧಕವೋ ಹಾಗೆ ವಾಯುಜೀವೋತ್ತಮತ್ವ ಜ್ಞಾನವು ಮೋಕ್ಷಕ್ಕೆ ಸಾಧಕವೆಂದು ತಿಳಿಯಬೇಕು. ದೇಹೇಂದ್ರಿಯಗಳಿಗೆ ನಿಯಾಮಕರಾದ ಖುದ್ರಾದಿಗಳು ದೇಹದಲ್ಲಿದ್ದರೂ ಅವರುಗಳಿಂದ ಬಿಡಲ್ಪಟ್ಟ ದೇಹವು ಹೋಗುವುದಿಲ್ಲ. ಪ್ರಾಣದೇವರು ದೇಹವನ್ನು ಬಿಟ್ಟು ಹೋದರೆ ಜೀವನು ಸತ್ತು ಹೋದನೆಂದೆನಿಸುವನು. ಆದ್ದರಿಂದ ವಾಯುದೇವರು ಜೀವೋತ್ತಮರೆಂದು ತಿಳಿಯಬೇಕು.

ಅವತಾರಿಕೆ.—ವಾಯುದೇವರ ಅವತಾರ ಭೂತರಾದ ಭೀಮಸೇನದೇವರಿಗೆ ಶ್ರೇಷ್ಠತ್ವವನ್ನು ಹೇಳುವ ಭಾರತ ವಚನಗಳನ್ನು ಪಠಿಸುತ್ತಾರೆ.—

**ಶ್ಲೋಕ ॥ ತತ್ವಜ್ಞಾನೇ ವಿಷ್ಣುಭಕ್ತಾ ಧೈರ್ಯೇ ಸ್ಥೈರ್ಯೇ ಪರಾಕ್ರಮೆ । ವೇಗೆಚಲಾಘವೇಚೈವ ಪ್ರಲಾಪಸ್ಯಚ ವರ್ಜನ ॥೧೬೨॥**

**ಭೀಮಸೇನ ಸಮೋನಾಸ್ತಿ ಸೇನೆಯೋಃ ಉಭಯೋರಪಿ ॥೧೬೩॥**

ಅರ್ಥ.—ತತ್ವಜ್ಞಾನೆ=ಯತಾರ್ಥಜ್ಞಾನ ವಿಷಯದಲ್ಲಿ, ವಿಷ್ಣುಭಕ್ತಾ=ನಾರಾಯಣನಲ್ಲಿ ಭಕ್ತಿಮಾಡೋಣದರಲ್ಲಿ, ಧೈರ್ಯ=ಧೈರ್ಯದಲ್ಲಿ, ಸ್ಥೈರ್ಯೆ=ಚಂಚಲವಿಲ್ಲದೇ ಇರುವುದರಲ್ಲಿ, ಪರಾಕ್ರಮೇ=ಪರಾಕ್ರಮದಲ್ಲಿ, ವೇಗೆ=ವೇಗದಲ್ಲಿ, ಲಾಘವೇಚ=ಲಾಘವದಲ್ಲಿಯೂ, ಪ್ರಲಾಪ=ಅನರ್ಥ ವಚನಗಳನ್ನು, ವರ್ಜನ=ಬಿಡುವುದರಲ್ಲಿ, ಉಭಯೋಃ=ಎರಡಾದ, ಸೇನೆಯೋರಪಿ=ಸೈನ್ಯದಲ್ಲಿಯೂ, ಭೀಮಸೇನ=ಭೀಮಸೇನದೇವರಿಗೆ, ಸಮಃ=ಸಮರಾದವರು, ನಾಸ್ತಿ–ಇಲ್ಲ.

ತಾತ್ಪರ್ಯ.—ಜ್ಞಾನ, ಭಕ್ತಿ, ಧೈರ್ಯ, ಸ್ಥೈರ್ಯ, ಪರಾಕ್ರಮಾದಿಗಳು, ಇವುಗಳಲ್ಲಿ ಮತ್ತು ವೇಗದಲ್ಲಿ, ಲಾಘವದಲ್ಲಿ, ಅನರ್ಥವಚನಗಳನ್ನು ಆಡದೇ ಇರುವುದರಲ್ಲಿ, ಉಭಯ ಸೈನ್ಯದಲ್ಲಿಯೂ ಭೀಮಸೇನದೇವರಿಗೆ ಸಮರಾದವರಿಲ್ಲ.

ವಿಶೇಷಾರ್ಥ.—ವಿಷ್ಣು ಭಕ್ತ್ಯಾದಿಗಳೂ ಭಾಗವತ ಲಕ್ಷಣವಾದ ತತ್ವಜ್ಞಾನವೂ ಮೋಕ್ಷಕ್ಕೆ ಅತಿ ಸಾಧಕ. ಇವುಗಳ ಅಂಗಭೂತವಾದ ಧೈರ್ಯ, ಸ್ಥೈರ್ಯ, ಪರಾಕ್ರಮಾದಿಗಳೂ ಮೋಕ್ಷಕ್ಕೆ ಸಾಧಕಗಳು. ಸರ್ವಜೀವಾಪೇಕ್ಷಯಾ ವಾಯುದೇವರ ಮಕ್ಕಳಾದ ಭೀಮಸೇನದೇವರಲ್ಲಿ ಮೇಲೆ ಹೇಳಿರುವ ಗುಣಗಳು ಪೂರ್ಣವಾಗಿವೆ ಎಂದು ಸೂಚಿಸಿದ್ದರಿಂದ ಅವರು ಸರ್ವೋತ್ತಮರಾದ ಸಾಯುಜ್ಯರೂಪ ಮೋಕ್ಷಾಧಿಕಾರಿಗಳೆಂದು ತಿಳಿಯಬೇಕು.

ಅವತಾರಿಕೆ.— ಪುನಃ ವಾಯು ಅವತಾರರಾದ ಭೀಮಸೇನದೇವರಿಗೆ ಶ್ರೇಷ್ಠತ್ವವನ್ನು ಸೂಚಿಸುತ್ತಾರೆ.—

**ಶ್ಲೋಕ || ಪಾಂಡಿತ್ಯೇಚ ಪಟುತ್ವೇಚ ಶೂರತ್ವೇಚ ಬಲೇಪಿಚ । ತಥಾ ಯುಧಿಷ್ಠಿರೇಣೇವ ಭೀಮಂಪ್ರತಿ ಸಮೀರಿತಂ ||೧೬||**

ಅರ್ಥ.—ಪಾಂಡಿತ್ಯೇಚ-ವಿದ್ಯಾಪೂರ್ಣತ್ವ ವಿಚಾರದಲ್ಲಿ, ಪಟುತ್ವೇಚ=ವಾಗ್ವಿಜೃಂಭಣೆಯಲ್ಲಿ, ಶೂರತ್ವೇಚ=ಜ್ಞಾನ ಸಾಮರ್ಥ್ಯದಲ್ಲಿ, ಬಲೇಪಿಚ=ಶರೀರ ಸಾಮರ್ಥ್ಯದಲ್ಲಿಯೂ, ಭೀಮಸೇನಃ=ಭೀಮಸೇನದೇವರಿಗೆ, ಸಮಃ=ಸಮನಾದವನು, ನಾಸ್ತಿ=ಇರುವುದಿಲ್ಲ. ತಥಾ = ಈ ರೀತಿಯಾಗಿ, ಯುಧಿಷ್ಠಿರೇಣೇವ=ಧರ್ಮರಾಜನಿಂದಲೇ, ಭೀಮಂಪ್ರತಿ=ಭೀಮಸೇನದೇವರನ್ನು ಕುರಿತು, ಸಮೀರಿತಂ=ಹೇಳಲ್ಪಟ್ಟಿತು.

ತಾತ್ಪರ್ಯ.—ಪಾಂಡಿತ್ಯ, ವಾಕ್ಪಟುತ್ವ, ಮನೋ ಸಾಮರ್ಥ್ಯ, ಶರೀರ ಸಾಮರ್ಥ್ಯ, ಇವುಗಳ ವಿಚಾರದಲ್ಲಿ ಧರ್ಮರಾಜರು ಭೀಮಸೇನದೇವರನ್ನು ಕುರಿತು ಎಲೋ ಭೀಮಸೇನನೇ ! ಮೇಲೆ ಹೇಳಿದ ಗುಣಗಳಲ್ಲಿ ನಿನಗೆ ಸಮರಾದವರು ಯಾರೂ ಇಲ್ಲವೆಂದು ಹೇಳಿರುವರು.

ವಿಶೇಷಾರ್ಥ.—ಮೋಕ್ಷದಲ್ಲಿ ಪೂರ್ಣಾನಂದ ಭಾಗಿಗಳಾದ ಬ್ರಹ್ಮ ದೇವರು ವಾಯುಪದವಿಯಲ್ಲಿಯೂ, ಮತ್ತು ಅವತಾರತ್ರಯಗಳಲ್ಲಿಯೂ ಮೇಲೆ ಹೇಳಿರುವ ಗುಣಗಳಿಂದ ಪೂರ್ಣರಾಗಿ ಶ್ರೀಹರಿಯ ಸೇವೆಮಾಡಿ ಕೃತಾರ್ಥರಾಗಿ ಮುಕ್ತ ಜೀವರುಗಳ ಸಮೂಹಕ್ಕೆ ಅಧಿಪತಿಗಳಾಗಿ ಆನಂದಪಡುತ್ತಾರೆಂದು ತಿಳಿಯಬೇಕು.

**ಅವತಾರಿಕೆ.—ಚತುರ್ವಿಧ ಪುರುಷಾರ್ಥವು ಭೀಮಸೇನದೇವರ ಅಧೀನವೆಂಬುದರಲ್ಲಿ ಪ್ರಮಾಣವನ್ನು ಸೂಚಿಸುತ್ತಾರೆ.—**

**ಶ್ಲೋಕ ॥ ಧರ್ಮಾರ್ಥಶ್ಚಾರ್ಥಶ್ಚ ಕಾಮಾಶ್ಚ ಮೋಕ್ಷಶ್ಚೈವ ಯಶೋಧ್ರುವಂ ।**
**ತ್ವಯ್ಯಾತತಯಿದಂ ಸರ್ವಂ ಸರ್ವಲೋಕಸ್ಯಪಶ್ಯತಃ ॥೧೬೫॥**

ಅರ್ಥ.— ಧರ್ಮಶ್ಚ-ಧರ್ಮವೂ, ಅರ್ಥಶ್ಚ—ಅರ್ಥವೂ, ಕಾಮಶ್ಚ= ಕಾಮವೂ, ಮೋಕ್ಷಶ್ಚ=ಮೋಕ್ಷವೂ, ಧ್ರುವಂ=ಶಾಶ್ವತವಾದ, ಯಶಶ್ಚ= ಕೀರ್ತಿಯೂ, ಪಶ್ಯತಃ=ನೋಡತಕ್ಕ, ಸರ್ವಲೋಕಸ್ಯ-ಸಮಸ್ತ ಪ್ರಪಂಚದ, ಇದಂಸರ್ವಂ-ಈ ಸಕಲ ಪದಾರ್ಥಗಳು, ತ್ವಯಿ=ನಿನ್ನ, ಆತತಂ= ಅಧೀನದಲ್ಲಿರತಕ್ಕವುಗಳಾಗಿವೆ.

ತಾತ್ಪರ್ಯ.--ಧರ್ಮರಾಜನು ಭೀಮಸೇನದೇವರನ್ನು ಕುರಿತು, ಎಲೋ ! ಭೀಮಸೇನನೇ, ಮೋಕ್ಷಾದಿ ಚತುರ್ವಿಧ ಪುರುಷಾರ್ಥಗಳು ನಿಶ್ಚಯವಾಗಿಯೂ ನಿನ್ನ ಅಧೀನವು. ಮತ್ತು ಸರ್ವ ಚೇತನರುಗಳ ಶಾಶ್ವತವಾದ ಕೀರ್ತಿಯೂ ನಿನ್ನ ದೃಷ್ಟಿಯ ಅಧೀನವೆಂದು ತಿಳಿಯುತ್ತದೆ " ಎಂದು ಹೇಳಿರುವರು ಮತ್ತು ವಿರಾಟಪರ್ವದಲ್ಲಿ ಶಸ್ತ್ರವಿದ್ಯಾವಿಶಾರದರಾಗಿಯೂ, ಶೂರರಾಗಿಯೂ ಇರುವ ಚೇತನರುಗಳ ತತ್ವಗಳನ್ನು ವ್ಯವಸ್ಥೆಮಾಡುವ ಸಂದರ್ಭದಲ್ಲಿ ದುರ್ಯೋಧನನು ಆಡಿದ ವಾಕ್ಯವು ಇದೇ ರೀತಿ ಇದೆ

ವಿಶೇಷಾರ್ಥ.--" ವಿಷ್ಣುರ್ಹಿದಾತಾ ಮೋಕ್ಷಸ್ಯ ವಾಯುಸ್ತುತದನುಜ್ಞೆಯಾ " ಎಂಬ ಪ್ರಮಾಣಾನುಸಾರ ಸಮಸ್ತ ಪುರುಷಾರ್ಥಗಳನ್ನೂ ಕೊಡ ತಕ್ಕ ಶಕ್ತಿಯು ವಾಯುದೇವರಿಗೆ ಇದೆಯೆಂದು ತಿಳಿಯಬೇಕು ಸರ್ವ

ಪ್ರಪಂಚವು ವಾಯುದೇವರಿಂದ ಆವಿಷವೆಂದು ತಿಳಿಯಬೇಕು.

ಅವತಾರಿಕೆ.—ಭೀಮಸೇನದೇವರ ಶ್ರೇಷ್ಠತ್ವ ವಿಚಾರದಲ್ಲಿ ದುರ್ಯೋಧನನ ವಚನವನ್ನು ತಿಳಿಸುತ್ತಾರೆ.—

**ಶ್ಲೋಕ ‖ ವಿರಾಟಪರ್ವಗಂ ಚಾಪಿವಚೋ ದುರ್ಯೋಧನಸ್ಯಹಿ । ವಿರಾಣಾಂ ಶಸ್ತ್ರವಿದುಷಾಂ ಕೃತಿನಾಂ ತತ್ವನಿರ್ಣಯ ‖೧೬೬‖**

ಅರ್ಥ.—ಶಸ್ತ್ರವಿದುಷಾಂ-ಬಾಣವನ್ನು ತಿಳಿದಿರತಕ್ಕ, ವೀರಾಣಾಂ=ವೀರರುಗಳು, ಕೃತೀನಾಂ=ವ್ಯಾಪಾರಗಳ, ತತ್ವನಿರ್ಣಯೇ-ತತ್ವವನ್ನು ನಿಶ್ಚಯಮಾಡೋಣದರಲ್ಲಿ, ವಿರಾಟಪರ್ವಗಂ - ವಿರಾಟಪರ್ವದಲ್ಲಿರತಕ್ಕ, ದುರ್ಯೋಧನಸ್ಯ=ದುರ್ಯೋದನನ, ವಚ=ವಾಕ್ಯವು, ಹಿ=ಪ್ರಸಿದ್ಧಿಯು.

ತಾತ್ಪರ್ಯ.--ವಿರಾಟಪರ್ವದಲ್ಲಿ ಶಸ್ತ್ರವಿದ್ಯೆಯನ್ನು ತಿಳಿದ ವೀರರುಗಳ ವ್ಯಾಪಾರ, ಅವರುಗಳ ವಿಷಯಕವಾದ ತತ್ವನಿರ್ಣಯ, ಈ ವಿಷಯಗಳಲ್ಲಿ ದುರ್ಯೋಧನನ ವಚನವು ಮುಂದೆ ಹೇಳುವ ರೀತಿ ತಿಳಿಸುತ್ತದೆ.

ವಿಶೇಷಾರ್ಥ.--ಭೀಮಸೇನದೇವರಲ್ಲಿ ಪರಮ ದ್ವೇಷಿಯಾದ ದುರ್ಯೋಧನನೇ ವಿರಾಟಪರ್ವದಲ್ಲಿ ಬಲ ಜ್ಞಾನಾದಿಗಳ ವಿಚಾರದಲ್ಲಿ ಭೀಮಸೇನದೇವರಿಗೆ ಸಮರಾದವರಿಲ್ಲವೆಂದು ಒಪ್ಪಿರುವುದರಿಂದ ಭೀಮಸೇನದೇವರು ಜೀವೋತ್ತಮರೆಂದು ತಿಳಿಯಬೇಕು.

ಅವತಾರಿಕೆ.--ಪುನಃ ದುರ್ಯೋಧನನ ವಚನವನ್ನೇ ಹೇಳುತ್ತಾರೆ.--

**ಶ್ಲೋಕ ‖ ಸತ್ವೇಬಾಹುಬಲೇ ಧೈರ್ಯೇ ಪ್ರಾಣೇ ಶಾರೀರ ಸಂಭವೇ । ಸಾಂಪ್ರತಂ ಮಾನುಷೇ ಲೋಕೇ ಸದೈತ್ಯ ನರರಾಕ್ಷಸೇ ‖ ಚತ್ವಾರಃ ಪ್ರಾಣಿನಾಂ ಶ್ರೇಷ್ಠಾಃ ಸಂಪೂರ್ಣಬಲ ಪೌರುಷಾಃ ‖೧೬೭‖**

ಸತ್ವೇ=ಜ್ಞಾನ ಬಲದಲ್ಲಿ, ಬಾಹುಬಲೇ=ಶರೀರ ಬಲದಲ್ಲಿ, ಧೈರ್ಯೇ=ಪ್ರಾಮಾಣ್ಯ ನಿಶ್ಚಯದಲ್ಲಿ, ಪ್ರಾಣೇ-ಜೀವನ ವಿಚಾರದಲ್ಲಿ, ಶರೀರ ಸಂಭವೇ-ದೇಹ ವಿಚಾರದಲ್ಲಿ, ಸಾಂಪ್ರತಂ=ಈಗ, ಸದೈತ್ಯನರರಾಕ್ಷಸೇ=ದೈತ್ಯರು, ಮಾನವರು, ರಾಕ್ಷಸರು, ಇವರುಗಳಿಂದ ಸಹಿತವಾದ, ಮಾನುಷೇಲೋಕೇ=ಮನುಷ್ಯ ಲೋಕದಲ್ಲಿ, ಸಂಪೂರ್ಣಬಲಪೌರುಷಾಃ - ಪರಿಪೂರ್ಣ

ವಾದ ಬಲ, ಪೌರುಷ ಇವುಗಳುಳ್ಳ, ಚತ್ವಾರಃ=ನಾಲ್ಕು ಮಂದಿ, ಪ್ರಾಣಿನಾಂ–ಚೇತನರುಗಳಲ್ಲಿ, ಶ್ರೇಷ್ಠಾ=ಉತ್ತಮರು.

ತಾತ್ಪರ್ಯ.—ಮಾನವ, ದೈತ್ಯ, ರಾಕ್ಷಸರೇ ಮೊದಲಾದವರಿಂದ ಕೂಡಿದ ಈ ಮನುಷ್ಯ ಲೋಕದಲ್ಲಿನ ಪ್ರಾಣಿಗಳಲ್ಲಿ ಪೂರ್ಣವಾದ ಬಲ ಪೌರುಷಗಳಿಂದ ಕೂಡಿದವರು ನಾಲ್ಕು ಜನಗಳೆಂದು ತಿಳಿಯಬೇಕು.

ವಿಶೇಷಾರ್ಥ.—ಕ್ಷತ್ರಿಯರಿಗೆ ಬಲ ಶ್ರೇಷ್ಠತ್ವವನ್ನು ಹೇಳಿರುವುದರಿಂದ ಮುಂದೆ ಹೇಳುವ ನಾಲ್ಕು ಜನಗಳಲ್ಲಿ ಭೀಮಸೇನದೇವರೇ ಉತ್ತಮರಾದ್ದರಿಂದ ಅವರೇ ಶ್ರೇಷ್ಟರೆಂದು ತಿಳಿಯಬೇಕು.

ಅವತಾರಿಕೆ.—ಭೀಮಸೇನದೇವರಿಗೆ ಶ್ರೇಷ್ಠತ್ವವನ್ನು ಸೂಚಿಸುವ ದುರ್ಯೋಧನನ ವಚನವನ್ನ ಪ್ರಮಾಣತ್ವೇನ ಉದಾಹರಿಸುತ್ತಾರೆ:—

**ಶ್ಲೋಕ॥ ಭೀಮಶ್ಚ ಬಲಭದ್ರಶ್ಚ ಮದ್ರರಾಜಶ್ಚ ವೀರ್ಯವಾನ್ ।**
**ಚತುರ್ಥಃ ಕೀಚಕ ಸ್ತೇಷಾಂ ಪಂಚಮಂನಾನುಶುಶ್ರುಮಃ॥೧೬॥**

ಅರ್ಥ.—ಭೀಮಶ್ಚ–ಭೀಮಸೇನದೇವರು, ಬಲಭದ್ರಶ್ಚ=ಬಲರಾಮದೇವರು, ವೀರ್ಯವಾನ್–ಪರಾಕ್ರಮಶಾಲಿಯಾದ, ಮದ್ರರಾಜಶ್ಚ=ಶಲ್ಯರಾಜನು, ಚತುರ್ಥಃ=ನಾಲ್ಕನೆಯವನು, ಕೀಚಕಃ–ಕೀಚಕನು. ತೇಷಾಂ=ಇವರಂತೆ, ಪಂಚಮಂ=ಬಲಜ್ಞಾನಾದಿಗಳಲ್ಲಿ ಐದನೆಯ ಮನುಷ್ಯನನ್ನು, ನಾನುಶುಶ್ರುಮಃ–ಕೇಳಲಿಲ್ಲ.

ತಾತ್ಪರ್ಯ.—ಭೀಮಸೇನ, ಬಲರಾಮ, ಕೀಚಕ, ಶಲ್ಯರಾಜ ಇವರು ನಾಲ್ಕು ಜನರೇ ಬಲಿಷ್ಠರು. ಇವರಿಗೆ ಸಮರಾದ ಐದನೇ ಬಲಿಷ್ಠನು ಪ್ರಪಂಚದಲ್ಲಿ ಇದ್ದಾನೆಂದು ನಾನು ಕೇಳಿರುವುದಿಲ್ಲ.

ವಿಶೇಷಾರ್ಥ.—ಬಲ ಶಬ್ದ ವಾಚ್ಯರಾದ ವಾಯುದೇವರ ಪುತ್ರರಾದ ಭೀಮಸೇನದೇವರು ಅತ್ಯಂತ ಬಲವಂತರು. ಬಲಭದ್ರರು ಪಂಚಾಶತ್ಕೋಟಿ ವಿಸ್ತೀರ್ಣ ಪ್ರಪಂಚವನ್ನು ಶಿರಸ್ಸಿನಲ್ಲಿ ಧರಿಸಿಕೊಂಡಿರುವ ಆದಿಶೇಷನ ಅವತಾರ ಭೂತರಾದ್ದರಿಂದ ಇವರು ಎರಡನೇ ಬಲಿಷ್ಠರು. ಶಲ್ಯರಾಜವರುದಂಶರಾದ್ದರಿಂದ ಬಲದಲ್ಲಿ ಮೂರನೆಯವನು, ಕೀಚಕ ಬಲದಲ್ಲಿ ನಾ

ಲ್ಕನೇಯವನು. ಈ ನಾಲ್ಕು ಜನಗಳಿಗಿಂತಲೂ ಶ್ರೀಹರಿಯ ಪೂರ್ಣಾನುಗ್ರಹಕ್ಕೆ ಬಾಧ್ಯರಾದ ಭೀಮಸೇನದೇವರು ಉತ್ತಮರೆಂದು ತಿಳಿಯಬೇಕು.

ಅವತಾರಿಕೆ.—ಹಿಂದೆ ಹೇಳಿದ ನಾಲ್ಕು ಜನಗಳೂ ಬಲದಲ್ಲಿ ಸಮರಲ್ಲವೆಂದು ತಿಳಿಸುತ್ತಾರೆ:—

**ಶ್ಲೋಕ॥ ಅನ್ಯೋನ್ಯಾನಂತರಬಲಾಃ ಕ್ರಮಾದೇವ ಪ್ರಕೀರ್ತಿತಾಃ ।**
**ವಚನಂವಾಸುದೇವಸ್ಯ ತಥೋದ್ಯೋಗಗತಂಪರಂ॥೧೬೯॥**

ಅರ್ಥ.—ಅನ್ಯೋನ್ಯಾನಂತರ ಬಲಾಃ=ಹಿಂದೆ ಹೇಳಿದ ಕೀಚಕನಿಗಿಂತ ಮದ್ರರಾಜ ಉತ್ತಮ, ಮದ್ರರಾಜನಿಗಿಂತ ಬಲಭದ್ರ ಉತ್ತಮ, ಬಲಭದ್ರನಿಗಿಂತ ಭೀಮಸೇನದೇವರು ಉತ್ತಮ ಈ ರೀತಿಯಾಗಿ, ಕ್ರಮಾದೇವ-ಕ್ರಮದಿಂದ, ಪ್ರಕೀರ್ತಿತಾಃ-ಪ್ರಸಿದ್ಧರಾಗಿದ್ದಾರೆ, ತಥಾ-ಈ ರೀತಿಯಾಗಿ ಉದ್ಯೋಗಗತಂ-ಉದ್ಯೋಗ ಪರ್ವದಲ್ಲಿನ, ಪರಂ=ಉತ್ತಮವಾದ,ವಾಸುದೇವಸ್ಯ=ಕೃಷ್ಣನ, ವಚನಂ=ವಾಕ್ಯವು. (ಇದೆ).

ತಾತ್ಪರ್ಯ.—ಹಿಂದೆ ಹೇಳಿದ ನಾಲ್ಕು ಜನಗಳಲ್ಲಿ ಕೀಚಕ ಮೊದಲು ಭೀಮಸೇನನ ವರಿಯುಂತ ಒಬ್ಬರಿಗಿಂತೊಬ್ಬರು ಬಲದಲ್ಲಿ ಶ್ರೇಷ್ಠರೆಂದು ಹೇಳಿಸಿಕೊಂಡಿರುತ್ತಾರೆ. ಇದಕ್ಕೆ ಆಧಾರವಾಗಿ ಉದ್ಯೋಗಪರ್ವದಲ್ಲಿ ಶ್ರೀಕೃಷ್ಣನ ವಾಕ್ಯವಿದೆ.

ವಿಶೇಷಾರ್ಥ.—ಶ್ರೀಹರಿಯೇ ಸರ್ವರಿಗೂ ಬಲಾದಿಗಳನ್ನು ಕೊಡತಕ್ಕವನು. ಭೀಮಸೇನದೇವರು ಬಲಪೂರ್ಣರೆಂದು ಶ್ರೀಕೃಷ್ಣನೇ ಸೂಚನೆ ಮಾಡಿರುವುದರಿಂದ ಈ ನಾಲ್ಕು ಜನರಲ್ಲಿ ಅವರೇ ಉತ್ತಮರೆಂದು ತಿಳಿಯಬೇಕು.

ಅವತಾರಿಕೆ:—ಉದ್ಯೋಗ ಪರ್ವದಲ್ಲಿ ಶ್ರೀಕೃಷ್ಣನು ಹೇಳಿರುವ ವಚನವನ್ನು ಉದಾಹರಿಸುತ್ತಾರೆ:—

ಶ್ಲೋಕ॥ ಯತ್ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ ।
ಸಹಸ್ರಗುಣಮಪ್ಯೇತ ತ್ವಯಿ ಸಂಭಾವಯಾಮ್ಯಹಂ ॥೧೭೦॥

ಅರ್ಥ.—ಹೇ ಪಾಂಡವ=ಓ ಭೀಮಸೇನನೆ, ಆತ್ಮನಿ=ನಿನ್ನಲ್ಲಿ, ಯತ್ಕಿಂಚತ್–ಯಾವ ಸ್ವಲ್ಪವಾದ, ಕಲ್ಯಾಣಂ–ಜ್ಞಾನ ಭಕ್ತಿ ಬಲಾದಿಗಳು ಇವೆ ಎಂದು, ಸಂಭಾವಯಸಿ–ನೀನು ತಿಳಿದಿದ್ದಿಯೋ, ಏತತ್=ನೀನು ತಿಳಿದಿರುವುದಕ್ಕಿಂತಲೂ. ಅಹಂ–ನಾನು, ತ್ವಯಿ=ನಿನ್ನಲ್ಲಿ, ಸಹಸ್ರಗುಣಮಪಿ–ಸಾವಿರ ಭಾಗ ಹೆಚ್ಚಾಗಿದೆ ಎಂದು, ಸಂಭಾವಯಾಮಿ = ತಿಳಿದು ಬಹುಮಾನಿಸುತ್ತೇನೆ.

ತಾತ್ಪರ್ಯ.—ಭೀಮಸೇನದೇವರಿಗೆ ಭಗವಂತನಲ್ಲಿ ಭಕ್ತ್ಯಾದಿ ಗುಣಗಳು ಎಷ್ಟು ಇವೆ ಎಂದು ಅವರು ತಿಳಿದಿದ್ದಾರೆಯೋ, ಅದಕ್ಕಿಂತಲೂ ಸಾವಿರ ಪಾಲು ಹೆಚ್ಚಾಗಿವೆಯೆಂಬುವುದನ್ನು ನಾನು ತಿಳಿದಿರುತ್ತೇನೆಂದು ಶ್ರೀಕೃಷ್ಣನು ಹೇಳಿರುತ್ತಾನೆ.

ವಿಶೇಷಾರ್ಥ.—ಭಗವದ್ಭಕ್ತರು ತಮ್ಮಲ್ಲಿ ಜ್ಞಾನಾದಿಗಳು ಎಷ್ಟು ಅಧಿಕವಾಗಿದ್ದರೂ ಅಲ್ಪವೆಂತಲೇ ತಿಳಿಯುತ್ತಾರೆ. ಭಕ್ತಪರಾಧೀನನಾದ ಶ್ರೀಹರಿಯು ಆ ಜ್ಞಾನಾದಿಗಳನ್ನು ತನ್ನನುಗ್ರಹದಿಂದ ಅಭಿವೃದ್ಧಿಪಡಿಸಿ ಅವರನ್ನು ಯಶೋವಂತರನ್ನಾಗಿ ಮಾಡುತ್ತಾನೆಂದು ತಿಳಿಯಬೇಕು.

ಅವತಾರಿಕೆ.—ಭೀಮಸೇನನ ಶ್ರೇಷ್ಠತ್ವದ ವಿಚಾರದಲ್ಲಿ ಕೃಷ್ಣನಿಂದ ಹೇಳಲ್ಪಟ್ಟ ಪ್ರಮಾಣವನ್ನು ಸೂಚಿಸುತ್ತಾರೆ:—

ಶ್ಲೋಕ॥ ಯಾದೃಶೇಚಕುಲೇಜಾತಃ ಸರ್ವರಾಜಾಭಿಪೂಜಿತೇ।
ಯಾದೃಶಾನಿಚಕರ್ಮಾಣಿ ಭೀಮತ್ವಮಸಿತಾದೃಶಃ ॥೧೭೦॥

ಅರ್ಥ.—ಹೇ ಭೀಮಸೇನನೆ. ತ್ವಂ=ನೀನು, ಸರ್ವರಾಜಾಭಿಪೂಜಿತೇ=ಸಮಸ್ತ ರಾಜರುಗಳಿಂದ ಪೂಜಿತವಾದ, ಯಾದೃಶೇ=ಉತ್ತಮವಾದ, ಕುಲೇಚ=ಕುಲದಲ್ಲಿ, ಜಾತಃ=ಹುಟ್ಟಿದ್ದಿ, ಯಾದೃಶಾನಿ–ಉತ್ತಮವಾದ, ಕರ್ಮಾಣಿ = ವ್ಯಾಪಾರಗಳನ್ನು, (ಕರೋಷಿ=ಮಾಡತಕ್ಕವನಾಗುತ್ತಿ), ತಾದೃಶಃ=ಅಂತಹ ಸರ್ವೋತ್ಕೃಷ್ಟನಾದವನೇ, ಅಸಿ=ಆಗಿದ್ದಿ.

ತಾತ್ಪರ್ಯ.—ಹೇ ಭೀಮಸೇನ ನೀನು ಸರ್ವರಾಜರುಗಳಿಂದ ಪೂಜಿತವಾದ ಸರ್ವೋತ್ಕೃಷ್ಟವಾದ ಕುಲದಲ್ಲಿ ಉತ್ಪನ್ನವಾಗಿದ್ದಿ. ಅದಕ್ಕೆ ಅನುಗುಣವಾದ ಧರ್ಮ ಮತ್ತು ವ್ಯಾಪಾರಗಳುಳ್ಳವನಾಗಿದ್ದಿ.

ವಿಶೇಷಾರ್ಥ:—ಕ್ಷತ್ರಿಯ ಧರ್ಮವನ್ನು ಅವಲಂಬಿಸಿದ ರಾಜರುಗಳಲ್ಲಿ ಯಾರು ಬಲದಲ್ಲಿ ಉತ್ತಮರೋ ಅವರೇ ಗುಣಗಳಲ್ಲಿಯೂ ಉತ್ತಮರು. ಕೌರವಕುಲದಲ್ಲಿ ಅವತಾರ ಮಾಡಿದ ಮಹಾರಾಜರುಗಳ ಪೈಕಿ ಭೀಮಸೇನ ದೇವರಲ್ಲಿ ಈ ಗುಣಗಳು ಪೂರ್ಣವಾಗಿರುವುದರಿಂದ ಅವರೇ ಉತ್ತಮರು.

ಅವತಾರಿಕೆ:—ಶ್ರೀಕೃಷ್ಣದೇವರು ಅರ್ಜುನನಿಗಿಂತಲೂ ಭೀಮಸೇನ ದೇವರೇ ಉತ್ತಮರೆಂದು ಸೂಚಿಸಿರುವ ಪ್ರಮಾಣವನ್ನು ಪಠಿಸುತ್ತಾರೆ:—

**ಶ್ಲೋಕ|| ಅಸ್ಮಿನ್ಯುದ್ಧೇ ಭೀಮಸೇನ ತ್ವಯಿಭಾರಸ್ಸಮಾಹಿತಃ |**
**ಧೂರರ್ಜುನೇನ ಓಢವ್ಯಾ ಓಢವ್ಯಾಯಿತರೇಜನಾಃ ||೧೭೨||**

ಅರ್ಥ:—ಹೇ ಭೀಮಸೇನ, ಅಸ್ಮಿನ್ಯುದ್ಧೇ=ಈ ಭಾರತ ಯುದ್ಧದಲ್ಲಿ, ತ್ವಯಿ—ನಿನ್ನಲ್ಲಿ, ಭಾರಃ=ಶತ್ರುಸಂಹಾರಕರ್ತೃತ್ವ ರೂಪವಾದ ಭಾರವು, ಸಮಾಹಿತಃ=ನಿಲ್ಲಿಸಲ್ಪಟ್ಟಿದೆ. ಅರ್ಜುನೇನ=ಅರ್ಜುನನಿಂದ, ಧೂಃ=ಯುಗಂಧರನೆಂದು ಹೆಸರುಳ್ಳ ಕುದುರೆಯು, ಓಢವ್ಯ=ಹಿಡಿದುಕೊಳ್ಳಲ್ಪಡತಕ್ಕದ್ದು, ಇತರೇಜನಾಃ=ಇತರ ಸೈನಿಕರುಗಳು, ಓಢವ್ಯಾಃ=ಅಂಗಭೂತರು.

ತಾತ್ಪರ್ಯ:—ಎಲೋ ಭೀಮಸೇನ ಈ ಯದ್ಧರಂಗದಲ್ಲಿ ನನ್ನ ಸೇವಾರೂಪವಾದ ಶತ್ರು ಸಂಹಾರವನ್ನು ಮಾಡತಕ್ಕ ಭಾರವನ್ನು ನಿನ್ನಲ್ಲಿ ಇಟ್ಟಿರುತ್ತೇನೆ. ಅರ್ಜುನನಿಂದ ಅಶ್ವವು ಹಿಡಿದುಕೊಳ್ಳಲ್ಪಡತಕ್ಕದ್ದು. ಇತರ ಸೈನಿಕರು ಸಹಾಯಕರಾಗಿರತಕ್ಕದ್ದು ಎಂಬುದಾಗಿ ಶ್ರೀಕೃಷ್ಣನು ಹೇಳಿದನು

ವಿಶೇಷಾರ್ಥ.—ಭಾರತ ಯುದ್ಧರಂಗದಲ್ಲಿ ಅರ್ಜುನನಿಗಿಂತ ಬಲದಲ್ಲಿಯೂ ಜ್ಞಾನದಲ್ಲಿಯೂ ಉತ್ತಮರಾದವರು ಅಶ್ವತ್ಥಾಮ, ಕೃಪ. ಇವರುಗಳನ್ನು ಜಯಿಸಿ ಶತ್ರು ಸಂಹಾರ ಕೆಲಸವನ್ನು ಮಾಡುವುದಕ್ಕೆ ಬಲದಲ್ಲಿಯೂ, ಜ್ಞಾನದಲ್ಲಿಯೂ ಪೂರ್ಣರಾದ ಭೀಮಸೇನದೇವರಲ್ಲಿ ಭಾರವೆಲ್ಲವನ್ನು ಇಟ್ಟಿರುತ್ತೇನೆಂದು ಶ್ರೀಕೃಷ್ಣನು ಹೇಳಿರುವನು.

ಅವತಾರಿಕೆ.—ಇದುವರಿವಿಗೂ ಭೀಮಸೇನದೇವರಿಗೆ ಶ್ರೇಷ್ಠತ್ವವನ್ನು ಹೇಳಿ ದ್ರೌಪದಿದೇವಿಯರಿಗೆ ಶೇಷಾದಿಗಳಿಗಿಂತಲೂ ಉತ್ತಮತ್ವವನ್ನು ಈಗ ಸೂಚಿಸುತ್ತಾರೆ:—

**ಶ್ಲೋಕ॥ ಉಕ್ತಂ ಪುರಾಣೇಬ್ರಹ್ಮಾಂಡೇ ಬ್ರಹ್ಮಣಾನಾರದಾಯಚ।**
**ಯಸ್ಯಾಃಪ್ರಸಾದಾತ್ಪರಮಂವಿದಂತಿ ಶೇಷ ಸ್ಸುಪರ್ಣೋಗಿರಿಶಸ್ಸುರೇಂದ್ರಃ ॥೧೭೩॥**

ಅರ್ಥ.—ಬ್ರಹ್ಮಾಂಡೇಪುರಾಣೆ = ಬ್ರಹ್ಮಾಂಡ ಪುರಾಣದಲ್ಲಿ, ಬ್ರಹ್ಮಣಾ=ಚತುರ್ಮುಖ ಬ್ರಹ್ಮನಿಂದ. ನಾರದಾಯಚ=ನಾರದರಿಗೋಸ್ಕರವಾಗಿ, ಉಕ್ತಂ = ಹೇಳಲ್ಪಟ್ಟಿದೆ. ಯಸ್ಯಾಃ = ಯಾವ ಭಾರತೀದೇವಿಯರ, ಪ್ರಸಾದಾತ್=ಅನುಗ್ರಹದಿಂದ, ಶೇಷಃ=ಶೇಷದೇವರೂ, ಸುಪರ್ಣಃ= ಗರುಡದೇವರೂ, ಗಿರಿಶಃ=ರುದ್ರ ದೇವರೂ, ಸುರೇಂದ್ರಃ=ಇಂದ್ರ ದೇವರು, ಇವರೇ ಮೊದಲಾದವರು, ಪರಂ=ಶ್ರೀನಾರಾಯಣದೇವರನ್ನು, ವಿಂದತಿ= ತಿಳಯುತ್ತಾರೋ-

ತಾತ್ಪರ್ಯ.—ಬ್ರಹ್ಮಾಂಡ ಪುರಾಣದಲ್ಲಿ ಬ್ರಹ್ಮದೇವರು ತಮ್ಮ ಮಕ್ಕಳಾದ ನಾರದರಿಗೆ ಉಪದೇಶ ಮಾಡುವ ಕಾಲದಲ್ಲಿ "ಎಲೋ ನಾರದನೆ ಭಾರತೀದೇವಿಯರ ಅನುಗ್ರಹದಿಂದ, ಗರುಡ, ಶೇಷ, ರುದ್ರ, ಇಂದ್ರ ಇವರೇ ಮೊದಲಾದವರು ಸರ್ವೋತ್ತಮನಾದ ನಾರಾಯಣನನ್ನು ತಿಳಿಯುತ್ತಾರೆ" ಎಂಬುದಾಗಿ ಹೇಳಿದರು.

ವಿಶೇಷಾರ್ಥ.—ಅಹಂಕಾರ ತತ್ವಾಭಿಮಾನಿಗಳಾದ ಗರುಡ ಶೇಷ ರುದ್ರಾದಿಗಳಿಗಿಂತಲೂ ಭಾರತೀ ದೇವಿಯರು ಉತ್ತಮರೆಂಬುವುದರಲ್ಲಿ

"ಮನಸಸ್ತುಪರಾ ಬುದ್ಧಿಃ" ಎಂ ಬಪ್ರಮಾಣದಿಂದ ಬುದ್ಧಿಯ ಅಧೀನಮನಶ್ಸ್ಸು ಆದ್ದರಿಂದ, ಬುದ್ಧಿಗೆ ಅಭಿಮಾನಿಗಳಾದ ಭಾರತೀದೇವಿಯರಿಗೆ ಮನಸ್ಸಿಗೆ ಅಭಿಮಾನಿಗಳಾದ ಶೇಷಾದಿಗಳು ಅಧೀನರೆಂದು ತಿಳಿಯಬೇಕು, ಮತ್ತು ಅವರ ಅನುಗ್ರಹದಿಂದಲೇ ಗರುಡಾದಿಗಳಿಗೆ ಮೋಕ್ಷವೆಂದೂ ತಿಳಿಯಬೇಕು.

ಅವತಾರಿಕೆ.—ದ್ರೌಪದೀದೇವಿಯರಿಗೆ ಶೇಷಾದಿಗಳಿಗಿಂತಲೂ ಉತ್ತಮತ್ವವನ್ನು ಸೂಚಿಸುತ್ತಾರೆ:—

**ಶ್ಲೋಕ|| ಮಾತಾಚಏಷಾಂಪ್ರಥಮೈವ ಭಾರತೀ |**
**ಸಾದ್ರೌಪದೀನಾಮಬಭೂವ ಭೂಮೌ ||**

**ಶ್ಲೋಕ|| ಯಾಮಾರುತಾದ್ಗರ್ಭಮದತ್ತಪೂರ್ವಂ ಶೇಷಂ |**
**ಸುಪರ್ಣಂಗಿರಿಶಂಸುರೇಂದ್ರಂ ||೧೭೪||**

ಅರ್ಥ.—ಏಷಾಂ=ಯಾವ ಗರುಡ ಶೇಷಾದಿಗಳಿಗೆ, ಪ್ರಥಮಾ=ಶ್ರೇಷ್ಠರಾದ, ಭಾರತೀ=ಭಾರತೀದೇವಿಯರು, ಮಾತಾಚ=ತಾಯಿಯೋ, ಸಾ=ಹಅಂ ಭಾರತೀದೇವಿಯರು, ದ್ರೌಪದೀನಾಮ=ದ್ರೌಪದೀದೇವಿಯರೆಂದು ಭೂಮೌ=ಭೂಮಿಯಲ್ಲಿ, ಬಭೂವ=ಅವತಾರಮಾಡಿದರು.

ಪೂರ್ವಂ=ಮೊದಲು, ಯಾ=ಯಾವ ಭಾರತೀದೇವಿಯರು, ಮಾರುತಾತ್ ವಾಯುದೇವರ ದೆಶೆಯಿಂದ, ಗರ್ಭಂ=ಗರ್ಭವನ್ನು, ಅಧತ್ತ=ಸ್ವೀಕಾರ ಮಾಡಿ, ಶೇಷಂ=ಶೇಷದೇವರನ್ನು, ಸುಪರ್ಣಂ=ಗರುಡದೇವರನ್ನು; ಗಿರಿಶಂ=ಋದ್ರದೇವರನ್ನು, ಸುರೇಂದ್ರಂ=ಇಂದ್ರದೇವರನು ಪಡೆದರೂ. ||೧೭೪||

ತಾತ್ಪರ್ಯ.—ಯಾವ ಗರುಡ ಶೇಷಾದಿಗಳಿಗೆ ಶ್ರೇಷ್ಠರಾದ ಭಾರತೀದೇವಿಯರು ತಾಯಿಯೋ, ಅಂಥಹ ಭಾರತೀ ದೇವಿಯರು ಭೂಮಿಯಲ್ಲಿ ದ್ರೌಪದೀ ಎಂಬ ನಾಮದಿಂದ ಪ್ರಸಿದ್ಧರಾದರು. ||೧೭೪||

ಯಾವ ಭಾರತೀದೇವಿಯರು ವಾಯುದೇವರಿಂದ ಗರ್ಭಧಾರಣ ಮಾಡಿ ಗರುಡ, ಶೇಷ, ಋುದ್ರರೆಂಬ ನಾಲ್ಕು ಜನ ಮಕ್ಕಳನ್ನು ಪಡೆದರೋ.

ವಿಶೇಷಾರ್ಥ.—ಪಂಚವ್ಯೂಹ ಸೃಷ್ಟಿಯಲ್ಲಿ ಸೂತ್ರನಾಮಕ ವಾಯುದೇವರ ಪತ್ನಿಯಾದ ಶ್ರದ್ಧಾನಾಮಕ ಭಾರತೀದೇವಿಯರು ಮನೋಭಿಮಾನಿಗಳಾದ ಗರುಡ, ಶೇಷ, ಋುದ್ರಾದಿಗಳಿಗೆ ಅಪರೋಕ್ಷ ಜ್ಞಾನದ್ವಾರ ಮೋಕ್ಷ ಸಾಧಕರಾದ್ದರಿಂದ ಉತ್ತಮರೆಂತಲೂ, ಅದೇ ಭಾರತೀ ದೇವಿಯರೇ ಭೂಲೋಕದಲ್ಲಿ ಕುರುಕುಲದಲ್ಲಿ ಅವತಾರ ಮಾಡಿದ ಭೀಮಸೇನದೇವರ ನಿಜ ಪತ್ನಿಯಾದ ದ್ರೌಪದಿಯೆಂದೂ ಸೂಚಿಸುತ್ತಾರೆ.

ಅವತಾರಿಕೆ.— ಹಿಂದಿನ ಶ್ಲೋಕದಲ್ಲಿ ಹೇಳಿರುವ ಅರ್ಥವನ್ನು ಚೆನ್ನಾಗಿ ವಿಶದಮಾಡಿ ಹೇಳುತ್ತಾರೆ:—

**ಶ್ಲೋಕ || ಚತುರ್ಮುಖಾಭಾಚತುರಃ ಕುಮಾರಾ**
**ಸಾದ್ರೌಪದೀನಾಮ ಬಭೂವ ಭೂಮೌ ||೧೭೫||**

ಅರ್ಥ.—(ಯಾ=ಯಾವ ಭಾರತೀದೇವಿಯರು) ಚತುರ್ಮುಖಾಭಾ=ಭಾವಿ ಚತುರ್ಮುಖ ಬ್ರಹ್ಮದೇವರಿಗೆ, ಸದೃಶರಾದಂಥ ವಾಯುದೇವರಿಂದ, ಚತುರಃ=ನಾಲ್ಕು ಮಂದಿಯರಾದ ಗರುಡ, ಶೇಷ, ಋುದ್ರಾದಿಗಳೆಂಬ, ಕುಮಾರಾ=ಮಕ್ಕಳನ್ನು, (ಅಸೂತ=ಪಡೆದರೋ) ಸಾ=ಆ ಭಾರತೀದೇವಿಯರು, ದ್ರೌಪದೀನಾಮ=ದ್ರೌಪದಿ ಎಂಬ ಹೆಸರಿನಿಂದ, ಭೂಮೌ=ಭೂಮಿಯಲ್ಲಿ, ಬಭೂವ=ಅವತಾರಮಾಡಿದರು.

ತಾತ್ಪರ್ಯ.—ಯಾವ ಭಾರತೀದೇವಿಯರು ಭಾವಿಚತುರ್ಮುಖರಿಗೆ ಸಮಾನರಾದ ವಾಯುದೇವರಿಂದ ಗರ್ಭಧಾರಣಮಾಡಿ ಗರುಡ, ಶೇಷ, ಋುದ್ರೇಂದ್ರಾದಿ ನಾಲ್ಕು ಜನ ಮಕ್ಕಳನ್ನು ಪಡೆದರೋ ಆ ಭಾರತೀದೇವಿಯರೇ ಭೂಲೋಕದಲ್ಲಿ ದ್ರೌಪದಿ ಎಂದು ಅವತಾರಮಾಡಿದರು.

ವಿಶೇಷಾರ್ಥ.—ಭಾವಿಚತುರ್ಮುಖರಿಗೆ ಸಮರೆಂದರೆ "ಆತ್ಮಾವೈ ಪುತ್ರನಾಮಾಸೀತ್" ಎಂಬ ಪ್ರಮಾಣಾನುಸಾರ ಪುತ್ರತ್ವ ಧರ್ಮದಿಂದ

ಸಮಾನ ಯೋಗ್ಯರೆಂದು ತಿಳಿಯಬೇಕೇ ಹೊರತು ಜ್ಞಾನ, ಭಕ್ತಿ, ವೈರಾಗ್ಯಾದಿಗಳಲ್ಲಿ ಸಮರಲ್ಲ ಮತ್ತು ಗರುಡ, ಶೇಷ, ಋದ್ರಾ ಎಂಬ ಪದಗಳಿಂದ ಕ್ರಮದಿಂದ ನ್ಯೂನಾತಿರಿಕ್ತವುಳ್ಳವರು; ಅಂದರೆ ಋದ್ರನಿಗಿಂತಲೂ ಗರುಡ, ಶೇಷರು ಉತ್ತಮರು. ಇಂದ್ರದೇವರು ಇವರೆಲ್ಲರಿಗಿಂತಲೂ ಕಡಿಮೆಯಾದವರು.

ಅವತಾರಿಕೆ.- ಶೇಷದೇವರು ಇಂದ್ರದೇವರಿಗಿಂತಲೂ ಉತ್ತಮರೆಂದು ಸೂಚಿಸುವ ಭಾರತವಚನವನ್ನು ಉದಾಹರಿಸುತ್ತಾರೆ:—

**ಶ್ಲೋಕ || ಯಸ್ಯಾಧಿಕೋಬಲೇನಾಸ್ತಿ ಭೀಮಮೇಕ್ಯಮತೇಕ್ಕಚಿತ್ |**
**ಸವಿಜ್ಞಾನೇನಚಜ್ಞಾನೇ ಏಷರಾಮಸ್ಸಲಾಂಗಲೀ ||೧೭೬||**

ಅರ್ಥ——ಯಸ್ಯ=ಯಾವ ಬಲರಾಮದೇವರಿಗಿಂತಲೂ, ಬಲೆ=ಬಲದಲ್ಲಿ, ಅಧಿಕಃ=ಶ್ರೇಷ್ಠರಾದವರು, ಏಕಂ=ಒಬ್ಬರಾದ, ಭೀಮಂ=ಭೀಮಸೇನದೇವರು, ಋತೆ=ಹೊರತು, ಕ್ವಚಿತ್=ಬೇರೆಯಾರೂ, ನಾಸ್ತಿ=ಇಲ್ಲ. ವಿಜ್ಞಾನೆ=ವಿಶೇಷ ಜ್ಞಾನದಲ್ಲಿಯೂ, ನ=ಇಲ್ಲ, ಜ್ಞಾನೇಚ=ತತ್ವಜ್ಞಾನದಲ್ಲಿಯೂ ನ=ಇಲ್ಲ, ಏಷಃ=ಈ, ರಾಮಃ=ಬಲರಾಮದೇವರು, ಸಲಾಂಗಲೀ=ಒನಕೆಯೇ ಆಯುಧವಾಗುಳ್ಳವರು.

ತಾತ್ಪರ್ಯ——ಯಾವ ಬಲರಾಮದೇವರು ಭೂಲೋಕದಲ್ಲಿ ಒನಕೆ ಆಯುಧ ಸಹಿತರಾಗಿ ಅವತಾರಮಾಡಿದರೊ ಅಂಥಹ ಬಲರಾಮದೇವರಿಗಿಂತಲೂ ಬಲದಲ್ಲಿಯೂ, ಜ್ಞಾನದಲ್ಲಿಯೂ, ತತ್ವ ಜ್ಞಾನದಲ್ಲಿಯೂ ಭೀಮಸೇನದೇವರ ಹೊರತು ಮತ್ತ್ಯಾರೂ ಶ್ರೇಷ್ಟರು ಇಲ್ಲ.

ವಿಶೇಷಾರ್ಥ.—ಬಲರಾಮದೇವರು ಪರಮಾತ್ಮನ ಶುಕ್ಲಕೇಶವೆಂಬ ಆವೇಶದಿಂದ ಯುಕ್ತರು. ಆದರೂ ಭೀಮಸೇನದೇವರಿಗಿಂತಲೂ ಜ್ಞಾನ, ಬಲ, ಭಕ್ತಿ, ವೈರಾಗ್ಯಾದಿಗಳಲ್ಲಿ ಕಡಿಮೆ ಎಂದು ತಿಳಿಯಬೇಕು. ಅವೇಶಯುಕ್ತರಾದ ಕಾಲದಲ್ಲಿ ಭೀಮಸೇನದೇವರಿಗಿಂತಲೂ ಬಲದಲ್ಲಿ ಶ್ರೇಷ್ಠರೆಂದು ಹೇಳುತ್ತಾರೆ. ಅಂದರೆ ಆವೇಶದ ಬಲವೇ ಹೊರತು ಸ್ವರೂಪ ಬಲವಲ್ಲ.

ಅವತಾರಿಕೆ.— ಹಿಂದಿನ ಶ್ಲೋಕಾರ್ಥವನ್ನೇ ದೃಢಪಡಿಸುತ್ತಾರೆ.

**ಶ್ಲೋಕ ॥ ಯಸ್ಯನಪ್ರತಿರೋದ್ಧಾಸ್ತಿ ಭೀಮಮೇಕಮೃತೇಕ್ವಚಿತ್ ।**
**ಅನ್ವಿಷ್ಯಾಪಿತ್ರಿಲೋಕೇಷು ಸಯೇಷಮುಸಲಾಯುಧಃ ॥೧೭೭॥**

ಅರ್ಥ.— ತ್ರಿಲೋಕೇಷು=ಮೂರು ಲೋಕದಲ್ಲಿ, ಅನ್ವಿಷ್ಯಾಪಿ-ಹುಡುಕಿದಾಗ್ಯೂ, ಯಸ್ಯ=ಯಾವ ಬಲರಾಮದೇವರಿಗೆ, ಪ್ರತಿರೋದ್ಧಾ=ಎದುರಿಗೆ ನಿಂತು ಯುದ್ಧಮಾಡತಕ್ಕವರು, ಏಕಂ=ಒಬ್ಬರಾದ, ಭೀಮಮೃತೆ-ಭೀಮಸೇನದೇವರ ಹೊರತು, ಕ್ವಚಿತ್=ಬೇರೆ ಯಾವ ಮನುಷ್ಯನು, ನಾಸ್ತಿ=ಇಲ್ಲವೋ, ಸಃ=ಅಂತಹ, ಏಷಃ-ಬಲರಾಮದೇವರು, ಮುಸಲಾಯುಧಃ=ಮುಸಲವೇ ( ಒನಕೆಯೇ ) ಆಯುಧವಾಗಿವುಳ್ಳವನು.

ತಾತ್ಪರ್ಯ.--ಯಾವ ಬಲರಾಮದೇವರ ಎದುರಿಗೆ ಯುದ್ಧಕ್ಕೆ ನಿಲ್ಲತಕ್ಕವರು ಮೂರು ಲೋಕದಲ್ಲಿ ಹುಡುಕಿದರೂ ಭೀಮಸೇನದೇವರ ಹೊರತು ಮತ್ತೆ ಯಾರೂ ಇಲ್ಲವೋ, ಅಂಥಹ ಬಲರಾಮದೇವರು ಬಲಿಷ್ಠರಾಗಿಯೂ ಮುಸಲವೇ ಆಯುಧವಾಗಿವುಳ್ಳವರಾಗಿಯೂ ಇದ್ದಾರೆ.

ವಿಶೇಷಾರ್ಥ.— ಭೀಮಸೇನದೇವರು ಬಲಪೂರ್ಣನಾದ ನಾರಾಯಣನ ಉಪಾಸನಾಜನಿತ ಪುಣ್ಯವಿಶೇಷದಿಂದ ಬಲಶಬ್ದವಾಚ್ಯರಾಗಿಯೂ ಜೀವಕೋಟಿಯಲ್ಲಿ ಬಲಪೂರ್ಣರಾಗಿಯೂ ಇದ್ದಾರೆ.. ಭಾರತೀಶರ ಪುತ್ರರಾದ ಪ್ರಯುಕ್ತ ಬಲರಾಮದೇವರ ಎದುರಿಗೆ ಯುದ್ಧಮಾಡುತ್ತೇನೆಂದು ನಿಲ್ಲಲು ಸಮರ್ಥರು. ಇದರಿಂದ ಭೀಮಸೇನದೇವರು ಉತ್ತಮರೆಂತಲೂ, ಅವರ ಅನಂತರದಲ್ಲಿ ಬಲರಾಮದೇವರು. ಆದ್ದರಿಂದ ಬಲರಾಮದೇವರಿಗಿಂತಲೂ ಇಂದ್ರಾದಿಗಳು ಕಡಿಮೆಯೆಂದು ತಿಳಿಯಬೇಕು.

ಅವತಾರಿಕೆ.--ಅನಿರುದ್ಧಾದಿಗಳಿಗಿಂತಲೂ ಅರ್ಜುನನು ಶ್ರೇಷ್ಟನೆಂಬುವ ವಿಚಾರದಲ್ಲಿ ಭಾರತ ವಾಕ್ಯವನ್ನು ಉದಾಹರಿಸುತ್ತಾರೆ.-

**ಶ್ಲೋಕ ॥ ತಥಾಯುಧಿಷ್ಠಿರೇಣೈವ ಭೀಮಾಯುಸಮುದೀರಿತಂ ।**
**ಅನುಜ್ಞಾತೋ ರೌಹಿಣೇಯಾತ್ಕೃಯಾಚೈವಾವರಾಜಿತಃ ॥೧೭೮॥**

ಅರ್ಥ.— ತಥೈವಾ=ಹಾಗೆಯೇ, ಯುಧಿಷ್ಠಿರೇಣೈವ - ಧರ್ಮರಾಜ ನಿಂದಲೂ, ಭೀಮಾಯ=ಭೀಮಸೇನದೇವರಿಗೆ, ( ಹೇ ಭೀಮ = ಎಲೋ ಭೀಮಸೇನನೆ ) ತ್ವಯಾ=ನಿನ್ನಿಂದ, ಅನುಜ್ಞಾತಃ=ಅಪ್ಪಣೆಪಡೆದಿರತಕ್ಕ ಅ ರ್ಜುನನು, ರೌಹಿಣೇಯಾತ್=ಬಲರಾಮದೇವರ ದೆಸೆಯಿಂದ, ಅಪರಾಜಿ ತಃ=ಜಯವನ್ನು ಹೊಂದಿದನು. ಈ ಪ್ರಕಾರವಾಗಿ, ಸಮುದೀರಿತಃ= ಹೇಳಲ್ಪಟ್ಟಿತು.

ತಾತ್ಪರ್ಯ.— ಧರ್ಮರಾಯರು ಭೀಮಸೇನದೇವರನ್ನು ಕುರಿತು ಎಲೋ ಭೀಮಸೇನನೆ ಅರ್ಜುನನು ನಿನ್ನ ಅಪ್ಪಣೆಯಿಂದ ಬಲರಾಮನನ್ನು ಜಯಿಸಿದನು ಎಂದು ಹೇಳಿದರು.

ವಿಶೇಷಾರ್ಥ.— ಭೂಲೋಕದಲ್ಲಿನ ದುರ್ಜನರ ಸಂಹಾರಕ್ಕಾಗಿ ಪರ ಮಾತ್ಮನು ನರನಾರಾಯಣರೆಂಬ ಆವೇಶದಿಂದ ಅವತಾರಮಾಡಿದನು. ಅರ್ಜುನನಲ್ಲಿ ನರಾವೇಶವು ಆವಿಷ್ಟವಾಗಿರುವುದು. ಪ್ರಪಂಚದಲ್ಲಿ ಸೃಷ್ಟಿ ಸ್ಥಿತ್ಯಾದಿಗಳಿಗೆ ಬಾಧ್ಯನಾದ ನಾರಾಯಣನು ಭೀಮಸೇನದೇವರಲ್ಲಿ ನಿಂತು ಅವರಿಂದ ನಡಿಸಿದುದರಿಂದ ಅರ್ಜುನನಲ್ಲಿ ಉಳ್ಳ ನರಾವೇಶವು ಹೆಚ್ಚಿ ಬಲ ರಾಮದೇವರನ್ನು ಪರಾಜಿತರನ್ನಾಗಿ ಮಾಡಿತೇ ಹೊರತು ಬೇರೆಯಲ್ಲ.

ಅವತಾರಿಕೆ.— ಹಿಂದಿನ ಶ್ಲೋಕಾರ್ಥವನ್ನು ದೃಢಪಡಿಸುತ್ತಾರೆ.—

**ಶ್ಲೋಕ ॥ ಸರ್ವವಿದ್ಯಾಸು ಭೀಭತ್ಸುಃ ಕೃಷ್ಣೇನಚ ಮಹಾತ್ಮನಾ ।**
**ಅನ್ವೇಷರೌಹಿಣೇಯಂಚ ತ್ವಾಂಚ ಭೀಮಾಪರಾಜಿತಂ ॥೧೭೯॥**

ಅರ್ಥ.— ಹೇ ಭೀಮ=ಎಲೋ ಭೀಮಸೇನನೇ ! ಭೀಭತ್ಸುಃ = ಅ ರ್ಜುನನು, ಸರ್ವವಿದ್ಯಾಸು=ಸಕಲ ವಿದ್ಯೆಗಳಲ್ಲಿಯೂ, ಮಹಾತ್ಮನಾ=ಶ್ರೇ ಷ್ಠನಾದ, ಕೃಷ್ಣೇನಚ-ಕೃಷ್ಣನಿಂದಲೂ, ತ್ವಾಂಚ-ನಿನ್ನನ್ನೂ, ರೌಹಿಣೇಯಂ ಚ=ಬಲರಾಮದೇವರನ್ನೂ, ಅನು=ಅನುಸರಿಸಿ, ಅನ್ಯೇಷು=ಮೂರು ಜನ ಹೊರತು ಮಿಕ್ಕವರಲ್ಲಿ, ಅಪರಾಜಿತಃ=ಶ್ರೇಷ್ಠನು.

ತಾತ್ಪರ್ಯ.— ಭೀಮಸೇನನೇ ! ಸಕಲ ವಿದ್ಯೆಗಳಲ್ಲಿಯೂ, ಶ್ರೀಕೃಷ್ಣನೂ, ನೀನೂ, ಬಲರಾಮನೂ, ಇವರ ಹೊರತು ಮಿಕ್ಕ ಸರ್ವರಿಗಿಂತಲೂ ಅರ್ಜುನನು ಉತ್ತಮನು.

ವಿಶೇಷಾರ್ಥ.—ಸ್ವರ್ಗಾಧಿಪತಿಯಾದ ಇಂದ್ರನ ಪುತ್ರನಾದ ಅರ್ಜುನನು ಸರ್ವ ವಿದ್ಯೆಯಲ್ಲಿ ನಿಪುಣನೆಂದರೆ ಪುರುಷಸೂಕ್ತ " ಮುಖಾದಿಂದ್ರಶ್ಚ" ಎಂಬುವ ಪ್ರಮಾಣಾನುಸಾರ ಶ್ರೀಹರಿಯ ಮುಖದಿಂದ ಇಂದ್ರನು ಹುಟ್ಟಿದುದರಿಂದ, ಸರ್ವ ವಿದ್ಯೆಗಳಿಗೆ ಮುಖವೇ ಆಶ್ರಯವಾದ್ದರಿಂದ ಇಂದ್ರಪುತ್ರನಾದ ಅರ್ಜುನನು ಸರ್ವ ವಿದ್ಯೆಯಲ್ಲಿ ಪೂರ್ವದಲ್ಲಿ ಹೇಳಿರುವ ಮೂರು ಜನಗಳಿಗಿಂತಲೂ ಕಡಿಮೆ ಎಂತಲೂ, ಮಿಕ್ಕ ಸರ್ವ ಜೀವರುಗಳಿಗೆ ಶ್ರೇಷ್ಠನೆಂತಲೂ ತಿಳಿಯಬೇಕು.

ಅವತಾರಿಕೆ.—ಹಿಂದೆ ಹೇಳಿದ ಅರ್ಜುನನ ಪರಾಕ್ರಮವನ್ನು ಧೃಡಪಡಿಸುತ್ತಾರೆ.—

**ಶ್ಲೋಕ ॥ ವೀರ್ಯೇ ಶೌರ್ಯೇ ಬಲೇನಾನ್ಯಸ್ತೃತೀಯಃ ಫಲ್ಗುನಾದೃತೇ।**
**ತಥೈವ ದ್ರೌಪದೀ ವಾಕ್ಯಂ ವಾಸುದೇವಂ ಪ್ರತೀರಿತಂ ॥೧೮೦॥**

ಅರ್ಥ.- ವೀರ್ಯೇ=ಜ್ಞಾನ ಸಾಮರ್ಥ್ಯದಲ್ಲಿ, ಶೌರ್ಯೇ=ಬಾಹುಪರಾಕ್ರಮದಲ್ಲಿ, ಬಲೇ=ಶಾರೀರ ಬಲದಲ್ಲಿ, ಫಲ್ಗುನಾತ್=ಅರ್ಜುನನ, ಋತೇ=ಹೊರತು, ತೃತೀಯಃ=ಮೂರನೆಯ, ಅನ್ಯಃ=ಮತ್ತೊಬ್ಬನು, ನ=ಇಲ್ಲ ತಥೈವ=ಹಾಗೇ, ದ್ರೌಪದೀ=ದ್ರೌಪದೀದೇವಿಯರ, ವಾಕ್ಯಂ-ವಚನವು, ವಾಸುದೇವಂಪ್ರತಿ=ಕೃಷ್ಣನನ್ನು ಕುರಿತು, ಈರಿತಂ=ಹೇಳಲ್ಪಟ್ಟಿದೆ.

ತಾತ್ಪರ್ಯ.— ಸಾಮರ್ಥ್ಯತ್ರಯಗಳಲ್ಲಿ ಅರ್ಜುನನ ಹೊರತು ಮೂರನೆಯವನು ಯಾರೂ ಇಲ್ಲ. ಹೀಗೆ ದ್ರೌಪದೀದೇವಿಯು ಕೃಷ್ಣನಲ್ಲಿ ಹೇಳಿದಳು

ವಿಶೇಷಾರ್ಥ.— ದೇವತೆಗಳ ತಾರತಮ್ಯದಲ್ಲಿ ಬ್ರಹ್ಮವಾಯುಗಳು, ಅವರನಂತರದಲ್ಲಿ ಗರುಡ ಶೇಷಾದಿಗಳು, ಅನಂತರ ಇಂದ್ರಕಾಮರು ಸಮರು. ಈ ರೀತಿಯಾದ ತಾರತಮ್ಯವನ್ನನುಸರಿಸಿ ಅರ್ಜುನ ಇಂದ್ರಪುತ್ರನಾದ್ದ

ರಿಂದ ಇವನ ಹೊರತು ಪರಾಕ್ರಮದಲ್ಲಿ ಪೂರನೆಯವರು ಇಲ್ಲವೆಂದು ಸೂಚಿಸುತ್ತಾರೆ.

ಅವತಾರಿಕೆ.-- ಹಿಂದಿನ ದ್ರೌಪದೀ ವಚನವನ್ನು ಅನುವಾದಮಾಡು ತ್ತಾರೆ.--

**ಶ್ಲೋಕ ॥ ಅಧಿಜ್ಯಮಯಿಯತ್ಕರ್ತುಂ ಶಕ್ಯತೇನ್ನೈವ ಗಾಂಡಿವಂ ।**
**ಅನ್ಯತ್ರ ಭೀಮಪಾರ್ಥಾಭ್ಯಾಂ ಭವತಶ್ಚ ಜನಾರ್ದನ ॥೧೮೧॥**

ಅರ್ಥ.-- ಹೇ ಜನಾರ್ದನ=ಓ ದುರ್ಜನ ಶಿಕ್ಷಕನಾದ ಕೃಷ್ಣನೇ, ಭವತಃ-ನಿನ್ನಿಂದ, ಭೀಮಪಾರ್ಥಾಭ್ಯಾಂ=ಭೀಮಾರ್ಜುನರಿಂದ, ಮಯಿ= ನನ್ನಿಂದ, (ಹೊರತು) ಗಾಂಡೀವಂ=ಗಾಂಡೀವಧನುಸ್ಸನ್ನು, ಅಧಿಜ್ಯ= ಧಾರಣೆಮಾಡುವದಕ್ಕಾಗಲೀ, ಯಾವ ಕೆಲಸವೇ ಆಗಲೀ, ಕರ್ತುಂ=ಮಾ ಡುವುದಕ್ಕೆ, ಅನ್ಯತ್ರ=ಇತರರಿಂದ, ನೈವಶಕ್ಯತೆ-ಸಾಧ್ಯವಾಗುವುದಿಲ್ಲ.

ತಾತ್ಪರ್ಯ.--ಹೇ ಸ್ವಾಮಿಯೇ, ನೀನು, ಭೀಮಸೇನದೇವರು, ಮತ್ತು (ನರಾವೇಶದಿಂದ ಕೂಡಿದ) ಅರ್ಜುನ ಇವರ ಹೊರತು ನಾನು, ಇಷ್ಟು ಜನರನ್ನು ಬಿಟ್ಟು ಗಾಂಡೀವಧನಸ್ಸನ್ನು ಧಾರಣಮಾಡಲು ಮತ್ತಾರು ಶಕ್ತರಲ್ಲ.

ವಿಶೇಷಾರ್ಥ.—ದ್ರೌಪದೀದೇವಿಯು ಹರಿ ಸರ್ವೋತ್ತಮತ್ವಕ್ಕೆ ಸಾಧ್ಯವಾದ ತಾರತಮ್ಯವನ್ನು ಸೂಚಿಸುವುದಕ್ಕೋಸ್ಕರ ಜನಾರ್ದನ ಎಂಬ ಸಂಬೋಧನೆಯಿಂದ ಗಾಂಡೀವಧನುಸ್ಸನ್ನು ಧರಿಸಲು ಕೃಷ್ಣನೇ ಸಮರ್ಥ ನೆಂದೂ, ಅವನನಂತರದಲ್ಲಿ ಭೀಮಸೇನನೆಂದೂ ತಾವು ಎತ್ತಲೂ ಶಕ್ತ ರೆಂಬ ವಿಷಯವನ್ನು ಸೂಚಿಸುತ್ತಾರೆ.

ಅವತಾರಿಕೆ.--ಅದೇ ತಾರತಮ್ಯ ವಿಷಯದಲ್ಲಿ ವ್ಯಾಸರ ವಚನವನ್ನು ಉದಾಹರಿಸುತ್ತಾರೆ.--

**ಶ್ಲೋಕ ॥ ತಥೇವಾನ್ಯತ್ರ ವಚನಂ ಕೃಷ್ಣದ್ವೈಪಾಯನೇರಿತಂ ।**
**ದ್ವಾವಿಮೌ ಪುರುಷಾಲೋಕೇ ವಾಸುದೇವಾದನಂತತಃ ।**
**ಭೀಮಸ್ತು ಪ್ರಥಮಂ ತತ್ರ ದ್ವಿತೀಯೋದ್ರೌಣಿರೇವಚ ॥೧೮೨॥**

ಅರ್ಥ:--ತಥೇವ=ಇದೇ ಪ್ರಕಾರ, ಅನ್ಯತ್ರ=ಇತರ ಸ್ಥಳದಲ್ಲಿಯೂ, ಕೃಷ್ಣ ದ್ವೈಪಾಯನ=ವೇದವ್ಯಾಸದೇವರಿಂದ, ಈರಿತಂ=ಹೇಳಲ್ಪಟ್ಟಿದೆ. ಲೋಕೆ-ಈ ಲೋಕದಲ್ಲಿ, ವಾಸುದೇವಾತ್=ಶ್ರೀಕೃಷ್ಣನ ಹೊರತು, ಅನಂತರೌ=ಮಿಕ್ಕವರಾದ, ವಿಶ್ರುತೌ=ಪ್ರಸಿದ್ಧರಾದ, ದ್ವೌ=ಇಬ್ಬರು, ಪುರುಷೌ=ಪುರುಷರುಗಳು, ತತ್ರ=ಆ ಇಬ್ಬರಲ್ಲಿ, ಭೀಮಸ್ತು=ಭೀಮಸೇನದೇವರು, ಪ್ರಥಮಃ=ಮೊದಲನೆಯವರು, ದ್ರೌಣಿರೇವ = ಅಶ್ವತ್ಥಾಮಾಚಾರ್ಯರೇ, ದ್ವಿತೀಯಃ=ಎರಡನೆಯವರು.

ತಾತ್ಪರ್ಯ:—ವೇದವ್ಯಾಸದೇವರು ಭಾರತದಲ್ಲಿ ಸ್ವಾಮಿಯಾದ ಶ್ರೀ ಕೃಷ್ಣನೇ ಸರ್ವೋತ್ತಮನು ಮತ್ತು ಪುರುಷೋತ್ತಮನು; ಅವನನಂತರ ಭೀಮಸೇನದೇವರು ಮೊದಲನೆಯವರು, ಅಶ್ವಥ್ಥಾಮರು ಎರಡನೆಯವರು. ಇವರಿಬ್ಬರೇ ಪರಾಕ್ರಮಶಾಲಿಗಳಾದ ಪುರುಷರೆಂದು ಹೇಳಿರುತ್ತಾರೆ.

ವಿಶೇಷಾರ್ಥ.—ಶ್ರೀ ವೇದವ್ಯಾಸದೇವರು ವಿಷ್ಣುರೂಪರು. ಇವರ ವಚನವು ಹರಿ ಸರ್ವೋತ್ತಮನೆಂಬುವುದನ್ನೂ, ವಾಯು ಜೀವೋತ್ತಮನೆಂಬುವುದನ್ನೂ, ಋದ್ರಾದಿಗಳ ತಾರತಮ್ಯವೇ ಮೊದಲಾದುವನ್ನು ಸೂಚಿಸಿರುತ್ತದೆ

ಅವತಾರಿಕೆ.—ಅರ್ಜುನನಿಗೆ ಅಶ್ವತ್ಥಾಮರಿಗಿಂತಲೂ ಉತ್ತಮತ್ವವು ಹೇಗೆ ಎಂಬುವುದನ್ನು ಸೂಚಿಸುತ್ತಾರೆ:—

**ಶ್ಲೋಕ॥ ಅಕ್ಷಯಾವಿಷುಧೀದಿವ್ಯೆ ಧ್ವಜೋವಾನರಲಕ್ಷಣಃ ।**
**ಗಾಂಡೀವಂ ಧನುಷಾಂಶ್ರೇಷ್ಠಂತೇನದ್ರೌಣೇರ್ವರೋಽರ್ಜುನಃ ॥೧೮೩॥**

ಅರ್ಥ:—ಅಕ್ಷಯಾವಿಷುಧೀ=ಬಾಣಗಳು ಅಕ್ಷಯವಾಗತಕ್ಕ ಚೀಲಗಳು ಎರಡು, ದಿವ್ಯೆ=ಇವು ದೇವತಾಸಂಬಂಧವಾದವುಗಳು, ವಾನರಲಕ್ಷಣಃ=ಹನುಮಂತದೇವರಿಂದಕೂಡಿದ, ಧ್ವಜ=ಧ್ವಜವಿರೋಣವು, ಧನುಷಾಂ=ಧನಸ್ಸುಗಳಲ್ಲಿ, ಶ್ರೇಷ್ಠಂ=ಉತ್ತಮವಾದ, ಗಾಂಡೀವಂ=ಗಾಂಡೀವ ಧನಸ್ಸು ಇರೋಣವು, ತೇನ=ಇವುಗಳು ಇರೋಣದರಿಂದ, ಅರ್ಜುನಃ=ಅರ್ಜುನನು, ದ್ರೌಣೇಃ=ಅಶ್ವತ್ಥಾಮಾಚಾರ್ಯರಿಗಿಂತಲೂ, ವರಃ=ಉತ್ತಮನು.

ತಾತ್ಪರ್ಯ:—ಅರ್ಜುನನು ಅಶ್ವತ್ಥಾಮಾಚಾರ್ಯರಿಗಿಂತ ನಾಶವನ್ನು ಹೊಂದದೆ ಇರುವ ಬಾಣಗಳಿಂದಲೂ ಕಪಿ ಲಕ್ಷಣವಾದ ಧ್ವಜದಿಂದಲೂ, ಗಾಂಡೀವಧನುಸ್ಸಿನಿಂದಲೂ ಉತ್ತಮನೆಂದು ಹೇಳುತ್ತಾರೆ.

ವಿಶೇಷಾರ್ಥ:—ಇಂದ್ರದೇವರು ಖುದ್ರದೇವರಿಗಿಂತಲೂ ಕಡಿಮೆಯಾದುದರಿಂದ ಅಶ್ವಥ್ಥಾಮಾಚಾರ್ಯರಿಗಿಂತಲೂ ಅರ್ಜುನನು ಕಡಿಮೆಯೇ ಹೊರತು ಶ್ರೇಷ್ಠನಲ್ಲ. ಆದರೆ ಪೂರ್ವದಲ್ಲಿ ಹೇಳಿರುವ ಸಲಕ್ಷಣಗಳುಳ್ಳವನಾದ್ದರಿಂದ ಅರ್ಜುನನು ಯುದ್ಧದಲ್ಲಿ ಅಶ್ವಥ್ಥಾಮಾಚಾರ್ಯರಿಗಿಂತ ಉತ್ತಮನೆಂದು ತಿಳಿಯಬೇಕು.

ಅವತಾರಿಕೆ:—ಇದುವರಿವಿಗೆ ವಿಷ್ಣು ಸರ್ವೋತ್ತಮತ್ವವನ್ನೂ ಮತ್ತು ದೇವತಾತಾರತಮ್ಯವನ್ನೂ ಸೂಚನೆ ಮಾಡಿ ಈಗ ಅದನ್ನು ಉಪಸಂಹಾರ ಮಾಡುವುದಕ್ಕೆ ಕಾರಣವನ್ನು ಹೇಳುತ್ತಾರೆ:—

**ಶ್ಲೋಕ ॥ ಇತ್ಯಾದ್ಯನಂತವಾಕ್ಯಾನಿ ಸಂತ್ಯೇವಾರ್ಥೋವಿವಕ್ಷಿತೇ ।**
**ಕಾನಿಚಿದ್ದರ್ಶಿತಾನ್ಯತ್ರದಿಂಗ್ಮಾತ್ರಪ್ರತಿಪತ್ತಯೆ ॥೧೮೪॥**

ಅರ್ಥ:—ಇತ್ಯಾದಿ=ಇವೇ ಮೊದಲಾಗಿವುಳ್ಳ ಅನಂತ=ಬಹಳವಾದ ವಾಕ್ಯಾನಿ=ವಚನಗಳು, ವಿವಿಕ್ಷಿತೆ=ನಾವು ಹೇಳುವುದಕ್ಕೆ ಪ್ರಾರಂಭಿಸಿದ, ಅರ್ಥ=ವಿಷ್ಣು ಸರ್ವೋತ್ತಮತ್ವ ಮತ್ತು ದೇವತಾತಾರತಮ್ಯದ ವಿಷಯದಲ್ಲಿ ಸಂತ್ಯೇವ=ಇದ್ದೇ ಇವೆ. ಅತ್ರ=ಈ ಗ್ರಂಥದಲ್ಲಿ, ದಿಙ್ಮಾತ್ರಪ್ರತಿಪತ್ತಯೆ=ದಿಕ್ಕನ್ನು ತೋರಿಸುವಹಾಗೆ, ಕಾನಿಚಿತ್=ಕೆಲವು ವಚನಗಳು, ದರ್ಶಿತಾನಿ=ತೋರಿಸಲ್ಪಟ್ಟವೆ.

ತಾತ್ಪರ್ಯ.—ನಾವು ಇಲ್ಲಿ ಹೇಳುವ ವಚನಗಳು ಅನೇಕ ಸ್ಥಳಗಳಲ್ಲಿ ಪೂರ್ವದಲ್ಲಿಯೇ ಹೇಳಲ್ಪಟ್ಟವೆ. ಈ ನಿರ್ಣಯಗ್ರಂಥದಲ್ಲಿ ದಿಕ್ಕನ್ನು ತೋರಿಸುವಹಾಗೆ ಕೆಲವು ವಿಷಯಗಳನ್ನು ಮಾತ್ರ ಹೇಳುತ್ತೇವೆ.

ವಿಶೇಷಾರ್ಥ:—ಸರ್ವಶಾಸ್ತ್ರಗಳನ್ನು ಶೋಧಿಸಿದಾಗ್ಯೂ ಅವುಗಳ ಅರ್ಥವಿಶೇಷಗಳಿಂದ ನಿಶ್ಚಿತವಾಗತಕ್ಕದ್ದು ಹರಿ ಸರ್ವೋತ್ತಮತ್ವ, ವಾಯು ಜೀವೋತ್ತಮತ್ವ ಮತ್ತು ಖುದ್ರಾದಿ ಅಶೇಷ ದೇವತೆಗಳ ತಾರತಮ್ಯ

ಈ ವಿಷಯದಲ್ಲಿ ಅತ್ಯಾವಶ್ಯಕವಾಗಿ ಬೇಕಾದ ಕೆಲವು ವಚನಗಳನ್ನು ಇಲ್ಲಿ ಸೂಚಿಸಿರುತ್ತಾರೆ.

ಅವತಾರಿಕೆ:—ಇದುವರಿವಿಗೆ ಹೇಳಿದ ಪರಮಾತ್ಮನಪುರುಷೋತ್ತಮತ್ವವನ್ನು ಸೂಚಿಸಿ ಉಪಸಂಹಾರಮಾಡುತ್ತಾರೆ:—

**ಶ್ಲೋಕ॥ ತಸ್ಮಾದುಕ್ತಕ್ರಮೇಣೇವ ಪುರುಷೋತ್ತಮತಾಹರೇಃ ॥**
**ಅನೌಪಚಾರಿಕೀಸಿದ್ಧಾ ಬ್ರಹ್ಮತಾಚ ವಿನಿರ್ಣಯಾತ್ ॥೧೮೫॥**

ಅರ್ಥ.—ತಸ್ಮಾತ್–ಆ ಕಾರಣ ದೆಶೆಯಿಂದ, ಉಕ್ತಕ್ರಮೇಣೇವ= ಹೇಳಲ್ಪಟ್ಟ ಕ್ರಮದಿಂದಲೇ, ಹರೇಃ=ಶ್ರೀನಾರಾಯಣನಿಗೆ, ಪುರುಷೋತ್ತಮತಾ=ಕ್ಷರಾಕ್ಷರ ಪುರುಷರುಗಳಿಂದ ಉತ್ತಮತ್ವವು, ಬ್ರಹ್ಮತಾಚ=ಪರಬ್ರಹ್ಮತ್ವವೂ, ವಿನಿರ್ಣಯಾತ್=ವಿಶೇಷಾಕಾರವಾಗಿ ನಿರ್ಣಯಮಾಡಲ್ಪಟ್ಟ ಈ ಗ್ರಂಥದ ದೆಶೆಯಿಂದ, ಅನೌಪಚಾರಕೀ–ಸ್ವಾಭಾವಿಕವೆಂದು, ಸಿದ್ಧಾ= ನಿಶ್ಚಯವಾಯಿತು.

ತಾತ್ಪರ್ಯ:—ಜ್ಞಾನಮಾರ್ಗಕ್ಕಾಗಿ ತೋರಿಸಲ್ಪಟ್ಟ ಪ್ರಮಾಣ ವಿಶೇಷಗಳಿಂದ ಶ್ರೀಹರಿಗೆ ಪುರುಷೋತ್ತಮತ್ವವೂ, ಪರಬ್ರಹ್ಮತ್ವವೂ ವಿಶೇಷಾಕಾರವಾಗಿ ನಿರ್ಣಯಮಾಡಲ್ಪಟ್ಟ ಈ ಗ್ರಂಥದಿಂದ ಸ್ವಭಾವಸಿದ್ಧವೆಂದು ನಿಶ್ಚಯವಾಯ್ತು.

ವಿಶೇಷಾರ್ಥ:—ಪುರುಷೋತ್ತಮತ್ವ ಮತ್ತು ಬ್ರಹ್ಮತ್ವ ಈ ಧರ್ಮಗಳು ಸರ್ವೋತ್ತಮನಾದ ನಾರಾಯಣಗೆ ಸ್ವಭಾವವಾಗಿದ್ದರೂ ಇತರ ಮತಗಳಿಂದ ನಿರ್ಣಯಮಾಡಲ್ಪಟ್ಟ ಕೆಟ್ಟ ಅರ್ಥಗಳಿಂದ ಸೂರ್ಯಮಂಡಲಕ್ಕೆ ಮೇಘಗಳು ಆಚ್ಛಾದಿತವಾದರೆ ಆ ಮೇಘಗಳನ್ನು ವಾಯು ಹೇಗೆ ಓಡಿಸಿ ಪ್ರಕಾಶಪಡಿಸುತ್ತಾನೋ ಅದೇ ರೀತಿಯಾಗಿ ವಿಶೇಷಾಕಾರವಾದ ಈ ನಿರ್ಣಯ ವಚನಗಳು ಪರಬ್ರಹ್ಮನ ಗುಣಗಣಗಳನ್ನು ಪ್ರಕಾಶಪಡಿಸುತ್ತವೆ.

ಅವತಾರಿಕೆ:—ಪೂರ್ವೋಕ್ತ ಪ್ರಕಾರವಾಗಿ ಪ್ರತಿಪಾದನಮಾಡಲ್ಪಟ್ಟ ಅರ್ಥವನ್ನು ಸಂಕ್ಷೇಪದಿಂದ ಹೇಳುತ್ತಾರೆ:—

**ಶ್ಲೋಕ॥ ಪೂರ್ಣಪ್ರಜ್ಞಕೃತೇಯಂ ಸಂಕ್ಷೇಪಾದುಧೃತಿಃ ಸುವಾಕ್ಯಾನಾಂ ।**
**ಶ್ರೀಮದ್ಭಾರತಗಾನಾಂ ವಿಷ್ಣೋಃಪೂರ್ಣತ್ವನಿರ್ಣಯಾಯೈವ ।೧೮೬॥**

ಅರ್ಥ.—ಶ್ರೀಮದ್ಭಾರತಗಾನಾಂ=ಶ್ರೀಮತ್=ಸಂಪದ್ಯುಕ್ತವಾದಂಥ, ಭಾರತಗಾನಾಂ=ಭಾರತದಲ್ಲಿರುವಂಥ, ಸುವಾಕ್ಯಾನಾಂ=ಸಮಿಾಚೀನ ವಚನಗಳ, ಇಯಂ=ಇಂಥ, ಉಧೃತಿಃ=ಉದ್ಧಾರವು, ವಿಷ್ಣೋಃ=ಶ್ರೀಹರಿಯ,

ಪೂರ್ಣತ್ವ, ನಿರ್ಣಯಾಯೈವ-ಜ್ಞಾನಾನಂದ ಗುಣ ಪೂರ್ಣತ್ವ ವಿಷಯಕ್ಕಾಗಿಯೇ, ಸಂಕ್ಷೇಪಾತ್=ಸಂಕೋಚವಾಗಿ, ಪೂರ್ಣಪ್ರಜ್ಞಕೃತಾ=ಪೂರ್ಣಪ್ರಜ್ಞ=ಶ್ರೀಮನ್ಮಧ್ವಾಚಾರ್ಯರಿಂದ, ಕೃತಾ-ಮಾಡಲ್ಪಟ್ಟಿತು.

ತಾತ್ಪರ್ಯ:--ಶ್ರೀಮದಾಚಾರ್ಯರು ಭಾರತದಲ್ಲಿರುವ ಸಮೀಚೀನವಾದ ವಚನಗಳನ್ನು ಶ್ರೀಹರಿಯ ಸರ್ವೋತ್ತಮತ್ವ ಮತ್ತು ಗುಣಪೂರ್ಣತ್ವ ವಿಚಾರಕ್ಕಾಗಿ ಸಂಕ್ಷೇಪವಾಗಿ ನಿರ್ಣಯ ಮಾಡಿರುತ್ತಾರೆ.

ವಿಶೇಷಾರ್ಥ.--ಭಾರತ ಗ್ರಂಥವು ದೊಡ್ಡ ಸಮುದ್ರದಂತೆ ಇರುವದಾದ್ದರಿಂದ ಅದರಲ್ಲಿ ಶ್ರೀ ಹರಿಯ ಗುಣಪೂರ್ಣತ್ವ ವಿಚಾರವಾಗಿ ಪ್ರತಿಪಾದಿಸುವ ವಚನಗಳನ್ನು ನೋಡಬೇಕೆಂದರೆ ಅಧಿಕಾರಿಗಳಿಗೆ ಬಹಳ ಶ್ರಮವಾಗಬಹುದೆಂದು ಶ್ರೀಮದಾಚಾರ್ಯರು ದಯಮಾಡಿ ಅಧಿಕಾರಿಗಳ ಸುಖೋದಯಕ್ಕಾಗಿ ನಿರ್ಣಯವನ್ನು ಅದೇ ಭಾರತವಚನಗಳಿಂದಲೇ ಮಾಡಿರುತ್ತಾರೆ

ಅವತಾರಿಕೆ:—ಯಾವ ದೇವರಿಗೆ ನಮಿಸಿ ಗ್ರಂಥಪ್ರಾರಂಭ ಮಾಡಿದರೋ ಆ ದೇವರು ಸುಪ್ರೀತನಾಗಲಿ ಎಂದು ಪ್ರಾರ್ಥಿಸುತ್ತಾರೆ:--

**ಶ್ಲೋಕ|| ಸಪ್ರೀಯತಾಂಪರತಮಃ ಪರಮಾದನಂತಃ ಸಂತಾರಕಃ ಸತತಸಂಸೃತಿದುಸ್ತರಾರ್ಣಾತ್| ಯತ್ಪಾದಪದ್ಮಮಕರಂದಜುಷೋಹಿ ಪಾರ್ಥಾಃ ಸ್ವಾರಾಜ್ಯಮಾಪುರುಭಯತ್ರಸದಾವಿನೋದಾತ್ ||೧೮೭||**

ಅರ್ಥ---ಯತ್ಪಾದಪದ್ಮಮಕರಂದಜುಷೋಃ=ಯತ್=ಯಾವ ಪರಮಾತ್ಮನ, ಪಾದಪದ್ಮ=ಪಾದಕಮಲದ, ಮಕರಂದ ರಸ ವಿಶೇಷಗಳನ್ನು, ಜುಷಃ=ಸೇವನ ಮಾಡುವಂಥ, ಪಾರ್ಥಃ=ಪಾಂಡವರುಗಳು, ಸದಾ=ಸರ್ವಕಾಲದಲ್ಲಿ, ವಿನೋದಾತ್=ಸಂತೋಷ ಮನಸ್ಸಿನಿಂದ, ಉಭಯತ್ರ-ಈ ಲೋಕ ಪರಲೋಕದಲ್ಲಿ ಕೂಡ, ಸ್ವಾರಾಜ್ಯಂ=ಸ್ವತಂತ್ರ ರಾಜ್ಯ ಸುಖವನ್ನು, ಆಪುಃ-ಹೊಂದಿದರೋ, ಸಃ=ಅಂತಹ, ಪರಮಾತ್=ರಮಾ ಬ್ರಹ್ಮಾದಿಗಳ ದೆಶೆಯಿಂದ,ಪರತಮಃ=ಸರ್ವೋತ್ತಮನಾದಂಥ, ಅನಂತಃ=ಕಾಲತಃ, ದೇಶತಃ, ಗುಣತಃ ಪೂರ್ಣನಾದಂಥ, ಸಂತತಸಂಸೃತಿದುಸ್ತರಾರ್ಣಾತ್=ಸಂತತ=ನಿರಂತರದಲ್ಲಿಯೂ, ಸಂಸೃತಿ=ಸಂಸಾರವೆಂಬ, ದುಸ್ತರಾ=ದಾಟಲು ಅಶಕ್ಯವಾದಂಥ, ಅರ್ಣಾತ್=ಸಮುದ್ರದ ದೆಶೆಯಿಂದ, ಸಂತಾರಕಃ = ಚನ್ನಾಗಿ ದಾಟಿಸುವಂಥ, ಶ್ರೀ ನಾರಾಯಣದೇವರು, ಪ್ರೀಯತಾಂ=ಸುಪ್ರಸನ್ನನಾಗಲಿ.

ತಾತ್ಪರ್ಯ.—ಶ್ರೀಮದಾಚಾರ್ಯರು ತಮ್ಮ ಶ್ರೀಮಹಾಭಾರತ ತಾತ್ಪರ್ಯ ನಿರ್ಣಯದ ಎರಡನೆಯಅಧ್ಯಾಯದ ಕೊನೆಯಲ್ಲಿ ಈ ಅಧ್ಯಾಯವನ್ನು ರಚನೆ ಮಾಡಿದ ವ್ಯಾಪಾರದಿಂದ ಪಾಂಡವರುಗಳು ಯಾವ ಶ್ರೀನಾರಾಯಣನ ಪಾದಾರವಿಂದದ ಮಹಿಮಾ ಅವಲೋಡನೆ ಅಂದರೆ ಅವುಗಳ ಶೇವೆಯಿಂದ ಈ ಲೋಕ ಪರಲೋಕಗಳಲ್ಲಿ ಪರಮ ಸುಖಕ್ಕೆ ಪಾತ್ರರಾದರೋ, ಅಂತಹ ರಮಾ ಬ್ರಹ್ಮ ರುದ್ರಾದಿ ದೇವತೆಗಳಿಗಿಂತಲೂ ಪರಮ ಶ್ರೇಷ್ಟನಾದ ಕಾಲ ದೇಶಗಳಲ್ಲಿ ವ್ಯಾಪ್ತನಾದ ಸರ್ವತ್ರದಲ್ಲಿಯೂ ಗುಣಪೂರ್ಣನಾದ, ಅಗಾಧವಾದ ಸಂಸಾರವನ್ನು ದಾಟಿಸುವಂಥ ಶ್ರೀನಾರಾಯಣದೇವರು ಸುಪ್ರೀತನಾಗಲಿ ಎಂದು ಪ್ರಾರ್ಥನೆಮಾಡುತ್ತಾರೆ.

ವಿಶೇಷಾರ್ಥ.—ಅಧ್ಯಾಯದ ಮೊದಲಿನಿಂದ ರಮಾಬ್ರಹ್ಮಾದಿಗಳ ಅವತಾರರೂಪ, ಮೂಲರೂಪಗಳಲ್ಲಿಯೂ ಸಹ ತಾರತಮ್ಯ ತಿಳಿಯೋಣವು ಅತ್ಯಾವಶ್ಯಕವೆಂದು ನಿರೂಪಣೆ ಮಾಡಿ ಹೇಳಿದರೋ ಅದನ್ನೇ ಕೊನೆಯ ಶ್ಲೋಕದಲ್ಲಿಯೂ ತೋರಿಸುತ್ತಾರೆ.—ಹೇಗೆಂದರೆ.—ಪರಮಾದಸಂತಃ ಅಂದರೆ ರಮಾಬ್ರಹ್ಮಾದಿಗಳಿಗಿಂತಲೂ ಉತ್ತಮನೆಂದು ಹೇಳಿದ್ದರಿಂದ ಬ್ರಹ್ಮದೇವರಿಗಿಂತಲೂ ರಮಾದೇವಿಯುರು ಉತ್ತಮರು, ಅವರಿಗಿಂತಲೂ ಶ್ರೀನಾರಾಯಣನು ಉತ್ತಮನೆಂದು ತಿಳಿಯಬೇಕು. ಅನಂತಃ=ಎಂಬುವದರಿಂದ ಅತೀತಾನಾಗತ ಬ್ರಹ್ಮಾಂಡಗಳು ನಾಶವಾದರೂ ಶ್ರೀಹರಿ ಶಶ್ವದೇಕಪ್ರಕಾರನೆಂತಲೂ, ಸಂಸಾರಕ್ಕೆ ಕಾರಣವಾದ ಲಿಂಗ ಇವನ ಅನುಗ್ರಹದಿಂದಲೇ ನಾಶಹೊಂದಬೇಕೆಂತಲೂ, ಈ ರೀತಿಯಾದ ಪೂರ್ಣಾನುಗ್ರಹಕ್ಕೆ ಭಗವದ್ಭಕ್ತರಾದ ಪಾಂಡವರು ಅರ್ಹರೆಂತಲೂ ಅರ್ಥ- ಈ ಲೋಕದಲ್ಲಿ ಬೇಕಾದ ಸುಖ ವಿಷಯಗಳನ್ನು ಅಪೇಕ್ಷಿಸುವವರು ಶ್ರೀಹರಿಯನ್ನು ಬಿಟ್ಟು ಅನ್ಯದೇವತೆಗಳನ್ನು ಯಾಚಿಸುತ್ತಾರೆ. ಶ್ರೀಹರಿಯೇ ಶಾಶ್ವತವಾದ ಸರ್ವ ಪುರುಷಾರ್ಥಗಳನ್ನ ಕೊಡತಕ್ಕವನೆಂದು ತಿಳಿಯಬೇಕು.



## ಮೂರನೆಯ ಅಧ್ಯಾಯ ಪ್ರಾರಂಭ

ಅವತಾರಿಕೆ:—ಹಿಂದಿನ ಎರಡು ಅಧ್ಯಾಯಗಳಲ್ಲಿ ಸರ್ವಶಾಸ್ತ್ರಾರ್ಥ ನಿರ್ಣಯವನ್ನೂ ಭಾರತಾರ್ಥನಿರ್ಣಯವನ್ನೂ ಮಾಡಿ ಮುಂದಿನ ಅಧ್ಯಾಯದಲ್ಲಿ ಕಥಾವ್ಯತ್ಯಾಸಾದಿ ಸಂದೇಹಗಳನ್ನ ಪರಿಹಾರಮಾಡುತ್ತಾ ಹರಿಯ ಚರಿತ್ರೆಯನ್ನು ಹೇಳುತ್ತಾರೆ. ಅದರೊಳಗೂ ವೇದವ್ಯಾಸ, ರಾಮ ಕೃಷ್ಣ ಇವರ ಕಥೆಗಳನ್ನು ಕ್ರಮದಿಂದ ವಿಸ್ತಾರವಾಗಿ ಹೇಳುವುದಕ್ಕೆ ಉಪಕ್ರಮಮಾಡಿ ಆ ರೂಪತ್ರಯಗಳಿಗೆ ನಮಸ್ಕಾರಮಾಡುತ್ತಾರೆ:—

**ಶ್ಲೋಕ॥ ಜಯತ್ಯಜೋಽಖಂಡ ಗುಣೋರುಮಂಡಲಃ ಸದೋದಿತೋಜ್ಞಾನಮರೀಚಿಮಾಲೀ । ಸ್ವಭಕ್ತ ಹಾರ್ದೋಚ್ಛ ತಮೋನಿಹಂತಾವ್ಯಾಸಾವತಾರೋಹರಿರಾತ್ಮ ಭಾಸ್ಕರಃ ॥೧॥**

ಅರ್ಥ—ಅಜಃ=ಉತ್ಪತ್ತಿ ಸೂನ್ಯನಾದ, ಅಖಂಡಗುಣೋರುಮಂಡಲಃ=ಅಖಂಡ=ಅಭಿನ್ನವಾದ, ಗುಣ=ಜ್ಞಾನಾನಂದಾದಿಗುಣಗಳು, ಉರು=ಉತ್ಕೃಷ್ಟವಾದ, ಮಂಡಲಃ=ಸಮೂಹ ಉಳ್ಳ, ಸದೋದಿತಃ=ಸದಾ=ಸರ್ವಕಾಲದಲ್ಲಿಯೂ, ಉದಿತಃ=ಉದಯಿಸಿದಂಥ, ಜ್ಞಾನಮರೀಚಿಮಾಲೀ=ಜ್ಞಾನ=ಜ್ಞಾನವೆಂಬ, ಮರೀಚಿ=ಕಿರಣಗಳಿಂದ, ಮಾಲೀ=ಪ್ರಕಾಶನಾದ, ಸ್ವಭಕ್ತಹಾರ್ದೋಚ್ಛತಮೋನಿಹಂತಾ=ಸ್ವ=ತನ್ನ, ಭಕ್ತ=ಭಕ್ತರುಗಳ, ಹಾರ್ದ=ಮನಸ್ಸಂಬಂಧವಾದ, ತಮಃ=ಅಂಧಕಾರವನ್ನು, ನಿಹಂತಾ=ಪರಿಹರಿಸುವಂಥ, ವ್ಯಾಸಾವತಾರಃ=ವೇದವ್ಯಾಸರ ಅವತಾರನಾದ, ಹರಿಃ=ನಾರಾಯಣದೇವರು, ಆತ್ಮಭಾಸ್ಕರಃ=ಸ್ವಪ್ರಕಾಶನಾದವನಾಗಿ, ಜಯತಿ=ಉತ್ಕೃಷ್ಟನಾಗಿರುತ್ತಾನೆ.

ತಾತ್ಪರ್ಯ:––ಸೂರ್ಯದೇವರು ಉದಯಿಸಿ ಹೇಗೆ ಅಂಧಕಾರವನ್ನು ಪರಿಹರಿಸುತ್ತಾರೋ ಹಾಗೆ ವೇದವ್ಯಾಸದೇವರು ಈ ಭೂಲೋಕದಲ್ಲಿ ಅವತಾರಮಾಡಿ ಅಜ್ಞಾನವೆಂಬ ಅಂಧಕಾರವನ್ನು ಪರಿಹಾರಮಾಡಿದರು

ಎಂದು ಹೇಳಿದರು. ಅವರು ಎಂಥವರೆಂದರೆ ಜನನರಹಿತರು, ಭೇದವಿಲ್ಲದ ಗುಣಗಳಿಂದ ತುಂಬಿದವರು, ಶಶ್ವದೇಕಪ್ರಕಾರವಾದ ಜ್ಞಾನಾಖ್ಯ ಕಿರಣ ಗಳಿಂದ ಪ್ರಕಾಶರಾದವರು, ತಮ್ಮ ಭಕ್ತರ ಮನೋ ದೋಷಗಳನ್ನು ಪರಿಹರಿಸುವರು.

ವಿಶೇಷಾರ್ಥ:—ಸೂರ್ಯನು ಪರಾಧೀನವಾದ ಪ್ರಕಾಶಉಳ್ಳವನು, ಮತ್ತು ಬಾಹ್ಯ ಅಂಧಾಕಾರವನ್ನು ಮಾತ್ರ ಪರಿಹರಿಸುವನು. ವೇದ ವ್ಯಾಸರು ಹಾಗಲ್ಲ. ಸೂರ್ಯ, ಚಂದ್ರ, ನಕ್ಷತ್ರ, ಅಗ್ನಿ ಮೊದಲಾದ ಪ್ರಕಾ ಶವನ್ನುಂಟುಮಾಡುವ ವಸ್ತುಗಳಿಗೆ ಪ್ರಕಾಶವನ್ನು ಕೊಡತಕ್ಕವರೂ ಇವ ರೇ ಆದುದರಿಂದ ಹೊರಗಿನ ಅಂಧಕಾರವನ್ನೂ, ಒಳಗಿನ ಅಜ್ಞಾನಾಖ್ಯ ಅಂಧಕಾರವನ್ನೂ ಪರಿಹರಿಸುವ ಸಾಮರ್ಥ್ಯವೂ ಕೂಡ ಇವರಿಗೆ ಉಂ ಟೆಂದು ತಿಳಿಯಬೇಕು. ರಾಮ ಕೃಷ್ಣಾವತಾರಗಳನಂತರ ವೇದವ್ಯಾಸರ ಅವ ತಾರವಲ್ಲ. ರಾಮಾವತಾರಕ್ಕೆ ಮೊದಲೇ ವ್ಯಾಸಾವತಾರವಾದ್ದರಿಂದಮೊದಲು ವೇದವ್ಯಾಸರಿಗೆ ನಮಸ್ಕಾರಮಾಡಿದರು, ರಾಮಾವತಾರದ ಕಥೆ ಹೇಳಿದ ನಂತರ ತಾತ್ಪರ್ಯಗಾರರು ವೇದವ್ಯಾಸದೇವರ ಕಥಾಹೇಳಿದ್ದರಿಂದ ರಾಮಾ ವತಾರ ಕಥಾನಂತರದಲ್ಲಿಯೂ ವೇದವ್ಯಾಸಾವತಾರ ಉಂಟೆಂದು ತಿಳಿಯ ಬೇಕು.

ಇದಕ್ಕೆ ಪ್ರಮಾಣಗಳು:—

ಭಾಗವತ ತಾತ್ಪರ್ಯ.—ತೃತೀಯೇ ಸಪ್ತಮೇಚೈವ | ಶೋಡಶೇಪಂಚವಿಂಶಕೆ
ಅಸ್ಟಾವಿಂಶೇಯುಗೇ ಕೃಷ್ಣಃ | ಸತ್ಯವತ್ಯಾಮಜಾಯತ ||

ರಾಮಾವತಾರವಾದರು, ಹರಿವಂಶ:—

ಚತುರ್ವಿಂಶೆಯುಗೇಚಾಪಿ | ವಿಶ್ವಾಮಿತ್ರಪುರಃಸ್ಸರಃ
ಜಜ್ಞೆದಶರಥಶ್ಯಾಥ ಪುತ್ರಃ ಪದ್ಮಾಯತೇಕ್ಷಣಃ ||

ವಿಷ್ಣುಧರ್ಮೋತ್ತರ ವಚನ:—

ಸಪ್ತಮಶ್ಯಚತುರ್ವಿಂಶ ರಾಜಂಸ್ತ್ರೇತಾಯುಗೇತದಾ |
ಯರಾಮೇಣಸಮರೆ ಸಗಣೋ ರಾವಣೋಹತಃ |
ರಾಮೇಣೈವತದಾರಾಜ ಕುಂಭಕರ್ಣೋನಿಪಾತಿತಃ ||
ವರ್ತಮಾನಂತಯದ್ವೃತ್ತಂ ಕಲ್ಪೆ ಕಲ್ಪೆಯದುದ್ವಹ |
ರಾಮಶ್ಚಚರಿತಂಬದ್ಧಂ ತದಾವಾಲ್ಮೀಕಿನಾಶುಭಂ ||

ಬ್ರಹ್ಮವೈವರ್ತ ಪುರಾಣ:—

ತ್ರೇತಾಯುಗೆಪಂಚಮೇತು ರಾಜಾದಶರಥೋಽಭವತ್ ||

ಈ ಪ್ರಮಾಣಗಳ ರೀತ್ಯಾ ರಾಮಾವತಾರಕ್ಕೆ ಮೊದಲು ಶ್ರೀವೇದವ್ಯಾಸರ ಅವತಾರವಿತ್ತೆಂತಲೂ, ಇಪ್ಪತ್ತುನಾಲ್ಕನೆ ಮಹಾ ಯುಗಾಂತರ್ಗತ ತ್ರೇತಾ ಯುಗದಲ್ಲಿಯೇ ರಾಮಾವತಾರವೆಂತಲೂ ನಿರ್ಧಾರಮಾಡಿರುತ್ತಾರೆ.

ಅವತಾರಿಕೆ::—ಶ್ರೀರಾಮಚಂದ್ರದೇವರನ್ನ ಚಂದ್ರ ದೃಷ್ಟಾಂತ ದಿಂದ ಸ್ತೋತ್ರಮಾಡುತ್ತಾರೆ:—

**ಶ್ಲೋಕ|| ಜಯತ್ಯಜೋಽಕ್ಷೀಣಸುಖಾತ್ಮ ಬಿಂಬಃಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ|ಸ್ವಭಕ್ತ ಸಂತಾಪ ದುರಿಷ್ಟಹಂತಾ ರಾಮಾವತಾರೋ ಹರಿರೀಶಚಂದ್ರಮಾಃ ||೨||**

ಅಜಃ=ಜನನಾದಿಗಳಿಂದ ರಹಿತನಾದಂಥ, ಅಕ್ಷೀಣಸುಖಾತ್ಮ=ಅಕ್ಷೀಣ=ನಾಶವಿಲ್ಲದ, ಸುಖ=ಸುಖವೇ, ಆತ್ಮಬಿಂಬಃ–ದೇಹವಾಗಿ ಉಳ್ಳಂಥ, ಸ್ವೈಶ್ವರ್ಯಕಾಂತಿಪ್ರತತಃ- ಸ್ವೈಶ್ವರ್ಯ=ಸ್ವರೂಪಭೂತವಾದ, ಕಾಂತಿ=ಪ್ರಕಾಶದಿಂದ, ಪ್ರತತಃ–ವ್ಯಾಪ್ತನಾದ, ಸದೋದಿತಃ=ಸರ್ವದಾ ಉದಯಿಸಿದಂಥ, ಸ್ವಭಕ್ತಸಂತಾಪದುರಿಷ್ಟಹಂತಾ=ಸ್ವ=ತನ್ನ, ಭಕ್ತ=ಭಕ್ತರುಗಳ, ಸಂತಾಪ=ಮನಃಕ್ಲೇಶಗಳೆಂಬ, ದುರಿಷ್ಟ=ಪಾಪಗಳನ್ನು, ಹಂತಾ=ಪರಿಹಾರಕನಾದಂಥ, ಈಶಚಂದ್ರಮಾಃ=ಈಶ–ಸ್ವಾಮಿಯಾದ, ಚಂದ್ರಮಾಃ–ಚಂದ್ರನಿಗೆ ಸದೃಶನಾದಂಥ, ರಾಮಾವತಾರಃ – ರಾಮಾವತಾರನಾದಂಥ, ಹರಿಃ=ಶ್ರೀನಾರಾಯಣದೇವರು, ಜಯತಿ=ಪ್ರಕಾಶಮಾನನಾಗಿರುತ್ತಾನೆ.

ತಾತ್ಪರ್ಯ.—ಜನನಮರಣಾದಿ ದುಃಖದೂರನಾದ, ಶಶ್ವದೇಕಪ್ರಕಾರವಾದ ಸುಖಸ್ವರೂಪನಾದ, ಸ್ವಪ್ರಕಾಶದಿಂದ ಸರ್ವತ್ರ ವ್ಯಾಪ್ತನಾದ, ಸರ್ವದಾ ಉದಯಿಸಿದ ಚಂದ್ರನಂತೆ, ತನ್ನಭಕ್ತರುಗಳ ದುಃಖಗಳನ್ನು ಪರಿಹರಿಸುವ, ಸ್ವಾಮಿಯಾದ ಚಂದ್ರನೆಂಬ ಶ್ರೀರಾಮಾವತಾರ ಮಾಡಿದ ಶ್ರೀಹರಿಯು ಜಯಶೀಲನಾಗಿರುತ್ತಾನೆ.

ವಿಶೇಷಾರ್ಥ.—ಚಂದ್ರ ದೃಷ್ಟಾಂತದಿಂದ ಶ್ರೀರಾಮಾವತಾರನಾದ ಶ್ರೀಹರಿಯನ್ನು ವರ್ಣನೆಮಾಡುತ್ತಾರೆ. ನಾಶವಿಲ್ಲದ ಸುಖಸ್ವರೂಪಿಯಾದ ಸರ್ವದಾ ಉದಯಿಸಿದ ಚಂದ್ರನಂತೆ ಎಂಬುವುದರಿಂದ, ಚಂದ್ರನಂತೆ ಕೃಷ್ಣ ಪಕ್ಷದಲ್ಲಿ ಕಳಾಕ್ಷೀಣವಿಲ್ಲದವನೆಂತಲೂ ಮತ್ತು ಸರ್ವದಾ ಪ್ರಕಾಶ ಪೂರ್ಣನೆಂತಲೂ ತಿಳಿಯಬೇಕು. ಶ್ರೀಪರಮಾತ್ಮನು ದೋಷದೂರ ಮತ್ತು ಗುಣ ಪೂರ್ಣನೆಂತಲೂ ತಿಳಿಸುತ್ತಾರೆ.

ಅವತಾರಿಕೆ.—ಕೃಷ್ಣಾವತಾರ ಮಾಡಿದ ಶ್ರೀಹರಿಯನ್ನು ಸ್ತೋತ್ರ ಮಾಡುತ್ತಾರೆ:—

**ಶ್ಲೋಕ॥ ಜಯತ್ಯಸಂಖ್ಯೋರುಬಲಾಂಬುಪೂರೋಗುಣೋಚ್ಚರತ್ನಾಕರಆತ್ಮವೈಭವಃ। ಸದಾಸದಾತ್ಮಜ್ಞನದೀಭಿರಾಪ್ಯಃ ಕೃಷ್ಣಾವತಾರೋಹರಿರೇಕಸಾಗರಃ ॥೩॥**

ಅರ್ಥ.—ಅಸಂಖ್ಯೋರುಬಲಾಂಬುಪೂರಃ=ಅಸಂಖ್ಯ = ಲೆಖ್ಖವಿಲ್ಲದ, ಉರು=ಉತ್ಕೃಷ್ಟವಾದ, ಬಲ=ಬಲವೆಂಬ ಅಂಬು=ಉದಕದಿಂದ, ಪೂರಃ= ಪೂರ್ಣವಾದಂಥ, ಗುಣೋಚ್ಚರತ್ನಾಕರಃ=ಗುಣಃ=ಗುಣಗಳೆಂಬ, ಉಚ್ಚ= ಶ್ರೇಷ್ಠವಾದಂಥ, ರತ್ನಾ=ನವರತ್ನಗಳಿಗೆ, ಆಕರಃ=ಆಶ್ರಯವಾದಂಥ, ಆತ್ಮವೈಭವಃ = ನಿತ್ಯಮಹಿಮೋಪೇತನಾದಂಥ, ಸದಾ=ಸರ್ವಕಾಲದಲ್ಲಿಯೂ, ಸದಾತ್ಮಜ್ಞನದೀಭಿರಾಪ್ಯಃ=ಸತ್=ಸಜ್ಜನರೆಂಬ, ಆತ್ಮಜ್ಞ=ಪರಮಾತ್ಮನ ವಿಷಯಕ ಜ್ಞಾನಿಗಳೆಂಬ, ನದೀಭಿಃ=ನದಿಗಳಿಂದ, ಆಪ್ಯಃ= ಹೊಂದಲು ಯೋಗ್ಯನಾದಂಥ, ಕೃಷ್ಣಾವತಾರಃ=ಕೃಷ್ಣತ್ವೇನ ಅವತಾರ ಮಾಡಿದಂಥ, ಏಕಃ=ಮುಖ್ಯವಾಗಿ, ಸಾಗರಃ=ಸಮುದ್ರ ಸದೃಶನಾದಂಥ, ಹರಿಃ=ಶ್ರೀನಾರಾಯಣದೇವರು, ಜಯತಿ=ಜಯಶೀಲನಾಗಿದ್ದಾನೆ,

ತಾತ್ಪರ್ಯ.—ಅಪಾರವಾದ ಬಲವೆಂಬ ಉದಕದಿಂದ ತುಂಬಿರುವ, ಗುಣಗಳೆಂಬ ರತ್ನಗಳಿಗೆ ಆಶ್ರಯನಾದ, ಪೂರ್ಣಮಹಿಮೋಪೇತನಾದ, ಪರಮಾತ್ಮನ ವಿಷಯಕ ಜ್ಞಾನಿಗಳೆಂಬ ನದಿಗಳಿಂದ ಪ್ರಾಪ್ಯನಾದ, ಕೃಷ್ಣಾವತಾರಮಾಡಿದ ಶ್ರೀಹರಿಯು ಸಮುದ್ರದಂತೆ ಪ್ರಕಾಶಮಾನನಾಗಿರುತ್ತಾನೆ.

ವಿಶೇಷಾರ್ಥ.—ಸಮುದ್ರದ ದೃಷ್ಟಾಂತದಿಂದ ಸಮುದ್ರದ ಘಾತ ಅಂದರೆ ಒಳ ಆಯುರನ್ನು ಪೂರ್ತಿ ತಿಳಿಯಲು ಹೇಗೆ ಸಾಧ್ಯವಲ್ಲವೋ ಹಾಗೆ ಪರಮಾತ್ಮನ ಗುಣಗಳನ್ನು ಪೂರ್ತಿ ತಿಳಿಯಲು ರಮಾ ಬ್ರಹ್ಮಾದಿಗಳಿಂದ ಲೂ ಸಾಧ್ಯವಲ್ಲ. ಶ್ರೀಹರಿಯು ಗುಣಗಣ ಪರಿಪೂರ್ಣನೆಂದು **ಭಾವ.**

ಅವತಾರಿಕೆ.—ಪೂರ್ವದಲ್ಲಿ ಹೇಳಿದ, ರಾಮ ಕೃಷ್ಣ, ವೇದವ್ಯಾಸ ದೇವರ ಕಥಾ ಪ್ರಾರಂಭದಲ್ಲಿ ಈ ಕೆಳಗಿನ ಶ್ಲೋಕದಲ್ಲಿ ಹೇಳುವ ದೇವ ತೆಗಳನ್ನು ವಂದಿಸಬೇಕೆಂದು ತಿಳಿಸುತ್ತಾರೆ:—

**ಶ್ಲೋಕ|| ನಾರಾಯಣಂ ನಮಸ್ಕೃತ್ಯ ನರಂಚೈವನರೋತ್ತಮಂ ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇ ||೪||**

ಅರ್ಥ—ನಾರಾಯಣಂ=ನಾರಾಯಣದೇವರನ್ನು, ನಮಸ್ಕೃತ್ಯಾ= ನಮಸ್ಕಾರ ಮಾಡಿ, ದೇವೀಂ=ಭಾಗ್ಯಾತ್ಮಕಳಾದ ರಮಾದೇವಿಯನ್ನು, ನರೋತ್ತಮಂ-ಜೀವೋತ್ತಮರಾದ ವಾಯುದೇವರನ್ನು, ಸರಸ್ವತೀಂ= ವಾಕ್ಯರೂಪಳಾದ ಸರಸ್ವತಿಯನ್ನು, ನರಂ=ಉಪಸಾಧಕರಾದ ಶೇಷದೇವ ರನ್ನು, ವ್ಯಾಸಂಚ=ವಕ್ತೃ ಸ್ವರೂಪರಾದ ವೇದವ್ಯಾಸದೇವರನ್ನು, ನಮ ಸ್ಕೃತ್ಯ = ನಮಸ್ಕಾರಮಾಡಿ, ಜಯಂ, ಭಾರತಾಖ್ಯ ಇತಿಹಾಸವನ್ನು, ಉದೀರಯೇ=ಪ್ರತಿಪಾದನ ಮಾಡುತ್ತೇನೆ.

ತಾತ್ಪರ್ಯ.—ನಾರಾಯಣದೇವರಿಗೆ, ರಮಾದೇವಿಯರಿಗೆ, ವಾಯು ದೇವರಿಗೆ ಸರಸ್ವತೀದೇವಿಯರಿಗೆ, ಶೇಷದೇವರಿಗೆ, ವಕ್ತೃತ್ವ ರೂಪ ರಾದ ವ್ಯಾಸರಿಗೆ ನಮಸ್ಕಾರ ಮಾಡಿ ಭಾರತವೆಂಬ ಇತಿಹಾಸವನ್ನು ಹೇಳು ತ್ತೇನೆ.

ವಿಶೇಷಾರ್ಥ.—ಗ್ರಂಥಪ್ರತಿಪಾದ್ಯ ನಾರಾಯಣ, ಭಾಗ್ಯಾತ್ಮಕಳು ರಮಾದೇವಿ, ಸಾಧಕೇಶರು ವಾಯುದೇವರು, ವಾಕ್ಯರೂಪರು ಸರಸ್ವತೀ ದೇವಿಯರು, ಉಪಸಾಧಕರು ಶೇಷದೇವರು, ಇವರುಗಳಿಗೆ ನಮ ಸ್ಕಾರ ಅತ್ಯಾವಶ್ಯಕವೆಂದು ತಿಳಿಸಿ ವ್ಯಾಸರಿಗೆ ಕಡೆಯಲ್ಲಿ ನಮಸ್ಕಾರ ಮಾ

ಡಿದ್ದು ದೈತ್ಯ ಮೋಹನಾರ್ಥವಾಗಿ ತಾಮಸ ಪುರಾಣಗಳಲ್ಲಿ ವ್ಯಾಸರನ್ನು ಯಾವನೋ ಒಬ್ಬ ಋಷಿಯೆಂದು ಹೇಳಿದ್ದಾರೆ. ತಾಮಸರು ಹೀಗೆತಿಳಿದು ದುರ್ಗತಿ ಹೊಂದಲೆಂದು ವ್ಯಾಸರಿಗೆ ಕಡೆಯಲ್ಲಿ ನಮಸ್ಕರಿಸಿದ್ದಾರೆ. ಮತ್ತು ಶ್ರೀನಾರಾಯಣನೇ ವೇದವ್ಯಾಸರಾದುದರಿಂದ ಈ ಸ್ವಾಮಿಯಲ್ಲಿ ಯಾವ ದೋಷವೂ ಇಲ್ಲವೆಂದು ತಿಳಿಯಬೇಕು.

**ಅವತಾರಿಕೆ.**–ಮೇಲಿನ ಶ್ಲೋಕ ದುರ್ಗಮವಾದ ಅರ್ಥವುಳ್ಳದ್ದರಿಂದ ವ್ಯಾಖ್ಯಾನಮಾಡುತ್ತಾರೆ:—

**ಶ್ಲೋಕ॥ ಜಯೋನಾಮೇತಿಹಾಸೋಽಯಂ ಕೃಷ್ಣದ್ವೈಪಾಯನೇರಿತಃ ।**
**ವಾಯುರ್ನರೋತ್ತಮೋನಾಮಾ ದೇವೀತಿಶ್ರೀರುದೀರಿತಾ ॥೫॥**

ಅರ್ಥ.––ಅಯಂ=ಇಂಥ, ಇತಿಹಾಸಂ=ಇತಿಹಾಸವೂ, **ಜಯೋ** ನಾಮ = ಜಯ = ಜಯವೆಂಬ, ನಾಮ = ಹೆಸರುಳ್ಳದ್ದಾಗಿ, **ಕೃಷ್ಣದ್ವೈಪಾಯನ**=ವೇದವ್ಯಾಸದೇವರಿಂದ, ಈರಿತಃ=ಹೇಳಿಸಿಕೊಳ್ಳಲ್ಪಟ್ಟಿದೆ. **ವಾಯುಃ**=ವಾಯುದೇವರು, ನರೋತ್ತಮೋನಾಮ=(ಜೀವೋತ್ತಮರೆಂತಲೂ) ಮತ್ತು ನರೋತ್ತಮರೆಂತಲೂ, ಶ್ರೀ=ಲಕ್ಷ್ಮೀದೇವಿಯರು, ದೇವೀತಿ=ದೇವಿ **ಎಂತಲೂ,** ಉದೀರಿತಾ=ಹೇಳಿಸಿಕೊಳ್ಳುತ್ತಾರೆ.

ತಾತ್ಪರ್ಯ.—ಈ ಭಾರತವೆಂಬ ಇತಿಹಾಸವು ಜಯ ಎಂಬ ಹೆಸರುಳ್ಳದ್ದಾಗಿದೆ ಎಂಬುದಾಗಿ ವೇದವ್ಯಾಸರು ಹೇಳಿರುತ್ತಾರೆ, ವಾಯುದೇವರಿಗೆ **ನರೋತ್ತ**ಮರೆಂತಲೂ, ರಮಾದೇವಿಯರಿಗೆ ದೇವಿ ಎಂದೂ, ಭಾರತವಚನ **ಗಳು ತಿಳಿಸುತ್ತವೆ** ಎಂದು ತಾತ್ಪರ್ಯಗಾರರು ತಿಳಿಸುತ್ತಾರೆ,

ವಿಶೇಷಾರ್ಥ.––ಮಹತ್ವಾದ್ಭಾರವತ್ವಾಚ್ಚ ಮಹಾಭಾರತ ಮುಚ್ಯತೇ ಎಂತಲೂ, ಭಾರತಂ ಸರ್ವ ವೇದಾಂಶ್ಚ ತುಲಾಮಾರೋಪಿತಾಃ ಪುರಾ ॥ **ಈ** ಪ್ರಮಾಣಗಳಿಂದ ಭಾರತವು ಸರ್ವ ವೇದ ಪುರಾಣಗಳಿಗಿಂತಲೂ ಹೇಗೆ ಶ್ರೇಷ್ಠವಾದದ್ದೋ ಹಾಗೆಯೇ ಸರ್ವ ವಿಷಯದಿಂದಲೂ ದುರ್ಗಮವಾದ ಅರ್ಥವುಳ್ಳದ್ದರಿಂದಲೂ, ಜಯವುಳ್ಳದ್ದರಿಂದಲೂ, ಜಯವೆಂಬುದಾಗಿ

ವೇದವ್ಯಾಸರೇ ಹೇಳಿರುತ್ತಾರೆ. ಮತ್ತು ಭಾರತಂ ಪಂಚಮೋ ವೇದಃ ಎಂದು ಹೇಳಿರುವುದರಿಂದ ಸರ್ವ ವೇದಾರ್ಥವೂ ಸೂಚಿಸುತ್ತದೆಯಾದುದರಿಂದ ಜಯಭೂತವೆಂತಲೂ ತಿಳಿಯಬೇಕು, ಮತ್ತು ಭಗವದ್ಭಕ್ತರಾದ ಪಾಂಡವರು ಶ್ರೀಶಾನುಗ್ರಹದಿಂದ ಜಯವುಳ್ಳವರಾದರು. ಆದುದರಿಂದ ಜಯ ಎಂಬುದಾಗಿ ತಿಳಿಯಬೇಕೆಂದು ತಾತ್ಪರ್ಯ.

ಅವತಾರಿಕೆ.—ನಾರಾಯಣದೇವರೇ ವೇದವ್ಯಾಸ ದೇವರಾದ್ದರಿಂದ ಎರಡಾವರ್ತಿ ಒಬ್ಬರನ್ನೇ ಏಕೆ ನಮಸ್ಕಾರ ಮಾಡಿದ್ದಾರೆಂಬುವುದನ್ನು ಹೇಳುತ್ತಾರೆ.

**ಶ್ಲೋಕ || ನಾರಾಯಣೋವ್ಯಾಸಇತಿ ವಾಚ್ಯವಕ್ತೃಸ್ವರೂಪಕಃ ಏಕಃ ಸ ಭಗವಾನುಕ್ತಃ ಸಾಧಕೇಶೋ ನರೋತ್ತಮಃ . ಉಪಸಾಧಕೋ ನರಶ್ಚೋಕ್ತೋದೇವೀಭಾಗ್ಯಾತ್ಮಕಾನೃಣಾಂ ಸರಸ್ವತೀ ವಾಕ್ಯರೂಪಾ ತಸ್ಮಾನಮ್ಯಾಹಿತೇಖಿಲಾಃ ||೬||**

ಅರ್ಥ.—ಏಕಃ=ಒಬ್ಬನಾದ, ಭಗವಾನ್=ಅವ್ಯಾಹತಸಮಗ್ರ ಐಶ್ವರ್ಯಗುಣ ಪೂರ್ಣನಾದಂಥ ಶ್ರೀವಿಷ್ಣುವು, ವಾಚ್ಯವಕ್ತೃಸ್ವರೂಪಕಃ=ವಾಚ್ಯ=ಗ್ರಂಥಪ್ರತಿಪಾದ್ಯನೆಂತಲೂ, ವಕ್ತೃ=ಗ್ರಂಥ ಮಾಡಿದವನೆಂತಲೂ, ನಾರಾಯಣಃ–ನಾರಾಯಣನು, ವ್ಯಾಸಃ=ವೇದವ್ಯಾಸರು, ಇತಿ=ಹೀಗೆಂದು ಹೇಳಿ, ಉಕ್ತಃ=(ತಿಳಿಸುತ್ತಾರೆ) ಹೇಳಿಸಿಕೊಳ್ಳುತ್ತಾನೆ, ನರೋತ್ತಮಃ= ವಾಯುದೇವರು, ಸಾಧಕೇಶಃ=ಮೋಕ್ಷಾರ್ಥಿಯಾದ ಅಧಿಕಾರಿಯ ಜ್ಞಾನಕ್ಕೆ ಸಾಧಕರೆಂತಲೂ, ನರಶ್ಚ=ಶೇಷದೇವರು, ಉಪಸಾಧಕಃ=ವಾಯುದೇವರ ಅನಂತರದಲ್ಲಿ, ಸಹಕಾರಿಗಳೆಂತಲೂ, ಉಕ್ತಃ=ಹೇಳಿಸಿಕೊಳ್ಳುತ್ತಾರೆ. ನೃಣಾಂ=ಜೀತನರುಗಳಿಗೆ, ದೇವೀ=ರಮಾದೇವಿಯರು, ಭಾಗ್ಯಾತ್ಮಕಾಃ= ಐಶ್ವರ್ಯಮಾನಿ ಎಂತಲೂ, ಸರಸ್ವತೀ=ಸರಸ್ವತೀದೇವಿಯರು, ವಾಕ್ಯರೂಪಾ= ವಾಕ್ಯರೂಪರೆಂತಲೂ, ಉಕ್ತಃ=ಹೇಳಿಸಿಕೊಳ್ಳುತ್ತಾರೆ, ತಸ್ಮಾತ್ = ಆ ಕಾರಣದಿಂದ, (ತೇ=ಅಂಥ) ಅಖಿಲಾಃ=ಸರ್ವರೂ, ನಮ್ಯಾಃ=ನಮಸ್ಕಾರಕ್ಕೆ ಅರ್ಹರಷ್ಟೆ.

ತಾತ್ಪರ್ಯ.—ಸಮೋದ್ಯಮ ರಹಿತನಾದ, ಷಡ್ಗುಣೈಶ್ವರ್ಯ ಸಂಪನ್ನನಾದ, ನಾರಾಯಣನು ಗ್ರಂಥಪ್ರತಿಪಾದ್ಯನಾದ್ದರಿಂದ, ಪಾಚ್ಯನೆಂತಲೂ ವೇದವ್ಯಾಸದೇವರು ಗ್ರಂಥ ಮಾಡಿದವರಾದ್ದರಿಂದ ವಕ್ತೃತ್ವೇನನಮನಾರ್ಹರೆಂತಲೂ, ಶ್ರೀದೇವಿಯು ಭಾಗ್ಯಾತ್ಮಕರಾದ್ದರಿಂದಲೂ, ವಾಯುದೇವರು ಸಾಧಕೇಶರಾದ್ದರಿಂದಲೂ, ಶೇಷದೇವರು ಉಪಸಾಧಕರಾದ್ದರಿಂದಲೂ, ಸರಸ್ವತೀದೇವಿಯರು ವಾಕ್ಯರೂಪರಾದ್ದರಿಂದಲೂ, ಇವರೆಲ್ಲರೂ ನಮನಾರ್ಹರೆಂದು ತಿಳಿಯಬೇಕು.

ವಿಶೇಷಾರ್ಥ.–ಪ್ರತಿಪಾದ್ಯಜ್ಞಾನ ನಾರಾಯಣನಿಂದಲೂ, ಪ್ರಮಾಣ್ಯಜ್ಞಾನ ವ್ಯಾಸರಿಂದಲೂ, ರಮಾದೇವಿಯಿಂದ ಸಾಧನಕ್ಕೆ ಉಪಯುಕ್ತವಾದ ಐಶ್ವರ್ಯವೂ, ನಾಲಿಗೆ ವೇದ ವಚನಗಳಿಗೆ ಸಾಧಕವಾದ್ದರಿಂದ ಅದಕ್ಕೆ ಅಭಿಮಾನಿಗಳಾದ ಸರಸ್ವತಿಗೆ ತತ್ವದೇವತೆಗಳಿಗೆ ನಿಯಾಮಕರಾಗಿ ಸಾಧನ ಮಾಡಿಸುವರಾದ್ದರಿಂದ ವಾಯುದೇವರಿಗೂ, ಸ್ಮರಣಶಕ್ತಿ ಪ್ರದರಾದ್ದರಿಂದ ಶೇಷದೇವರಿಗೂ ನಮಸ್ಕಾರವೆಂದು ತಿಳಿಯಬೇಕು.

ಅವತಾರಿಕೆ—ಹಿಂದಿನ ಶ್ಲೋಕದಲ್ಲಿ ಹೇಳಿದ ನಾರಾಯಣ ರಮಾದಿಗಳು ವಂದನೀಯರೆಂಬುವುದನ್ನು ಭಾರತದಲ್ಲಿ ಹೇಳಿದ ವಚನಗಳಿಂದ ಹೇಳುತ್ತಾರೆ:—

**ಶ್ಲೋಕ|| ಕೃಷ್ಣೌಸತ್ಯಾಭೀಮಪಾರ್ಥೌ ಕೃಷ್ಣೇತ್ಯುಕ್ತಾಹಿಭಾರತೆ ||೭||**

ಅರ್ಥ—ಭಾರತೆ = ಭಾರತದಲ್ಲಿ, ಕೃಷ್ಣೌ=ವೇದವ್ಯಾಸದೇವರು, ವಾಸಿಷ್ಟ ಕೃಷ್ಣರೆಂತಲೂ, ಯಾದವ ಕೃಷ್ಣನೆಂತಲೂ, ಉಕ್ತಾ=ಹೇಳಿಸಿಕೊಳ್ಳುತ್ತಾರೆ, ಸತ್ಯಾ=ಸತ್ಯಭಾಮಾದೇವಿಯರು ಲಕ್ಷ್ಮೀ ಎಂತಲೂ, ಭೀಮ–ಭೀಮಸೇನದೇವರು, ನರೋತ್ತಮರಾದ ವಾಯುದೇವರೆಂತಲೂ, ಪಾರ್ಥಃ=ಅರ್ಜುನನು, ಉಪಸಾಧಕನಾದ ಶೇಷದೇವರೆಂತಲೂ, ಕೃಷ್ಣಾ=ದ್ರೌಪದೀದೇವಿಯರು ಕೃಷ್ಣಾ ಎಂತಲೂ, ಮತ್ತು ವಾಕ್ಯರೂಪರಾದ ಸರಸ್ವತೀ ದೇವಿಯರೆಂತಲೂ, ಉಕ್ತಾ=ಹೇಳಿಸಿಕೊಳ್ಳುತ್ತಾರೆ.

ತಾತ್ಪರ್ಯ.—ಭಾರತದಲ್ಲಿ ಪ್ರತಿಪಾದ್ಯರಾದ ವೇದವ್ಯಾಸ, ಕೃಷ್ಣ, ಸತ್ಯಭಾಮಾದೇವಿಯರು, ಭೀಮಸೇನದೇವರು, ನರಾವೇಶವುಳ್ಳ ಅರ್ಜುನನು, ದ್ರೌಪದೀದೇವಿಯರು ಇವರುಗಳನ್ನು ಅವಶ್ಯಕವಾಗಿ ನಮಸ್ಕಾರ ಮಾಡಬೇಕು. ಅವರಲ್ಲಿ ನಮಸ್ಕಾರ ಮಾಡುವುದು ಪ್ರಾರಂಭ ಮಾಡಿದ ಗ್ರಂಥವು ಪೂರ್ತಿಯಾಗಬೇಕೆಂಬ ಉದ್ದೇಶ್ಯದಿಂದ ಎಂದು ಹೇಳಿದ್ದಾರೆ.

ವಿಶೇಷಾರ್ಥ.—ಅಧ್ಯಾತ್ಮಾರ್ಥದಲ್ಲಿ ಭಾರತ ಪ್ರತಿಪಾದ್ಯರನ್ನು ನಮನಮಾಡುವುದರಿಂದ ಫಲವೇನೆಂದರೆ ಮಂಗಳಾಚರಣದ ಶ್ಲೋಕದಲ್ಲಿ ಹೇಳಿದ ನಾರಾಯಣನೆ ಕೃಷ್ಣನೆಂತಲೂ, ಭಾಗ್ಯಾತ್ಮಕಳಾದ ಶ್ರೀದೇವಿಯು ಸತ್ಯಭಾಮಾ, ಸಾಧಕೇಶರಾದ ವಾಯುದೇವರೇ ಭೀಮಸೇನರೆಂತಲೂ, ವಾಕ್ಯರೂಪರಾದ ಸರಸ್ವತೀ ದೇವಿಯರು ದ್ರೌಪದೀದೇವಿಯರು. ಅರ್ಜುನನು ನರಾವೇಶಯುಕ್ತನಾದ್ದರಿಂದ ಉಪಸಾಧಕರಾದ ಶೇಷಾವಿಶ್ಠರಾದ ನರನೆಂತಲೂ, ವಕ್ತೃಸ್ವರೂಪರು ವೇದವ್ಯಾಸರೆಂತಲೂ, ಇವುಗಳನ್ನು ತಿಳಿದು ಉಪಾಸನೆ ಮಾಡಬೇಕೆಂಬಲೂ ಹೇಳಿದ್ದಾರೆ. ಆದ್ದರಿಂದ ಉಪಾಸನೆಯೇ ಫಲವೆಂದು ತಿಳಿಯಬೇಕು.

ಅವತಾರಿಕೆ:—ಮುಂದೆ ತಿಳಿಸುವ ವಿಷಯವನ್ನು ಅವಶ್ಯಕವಾಗಿ ಹೇಳತಕ್ಕದ್ದೆಂದು ತಿಳಿಸುತ್ತಾರೆ:-

**ಶ್ಲೋಕ॥ ಸರ್ವಶ್ಯನಿರ್ಣಯಸುವಾಕ್ಯಸಮುದ್ಧೃತೀತು ಸ್ವಾಧ್ಯಾಯಯೋಃಹರಿಪದಸ್ಮರಣೇನಕೃತ್ವಾ । ಆನಂದತೀರ್ಥವರನಾಮವತೀ ತೃತೀಯಾ ಭೈಮೀತನುರ್ವರುತ ಆಹ ಕಥಾಃಪರಶ್ಚ ॥೮॥**

ಅರ್ಥ.—ಭೈಮೀ=ಭೀಮಸೇನದೇವರ, ತನುಃ=ಶರೀರವು, ತೃತೀಯಾ=ಮೂರನೆಯದಾದ, ಆನಂದತೀರ್ಥವರನಾಮವತೀ=ಆನಂದತೀರ್ಥ=ಆನಂದತೀರ್ಥಾಚಾರ್ಯರೆಂಬ, ವರ=ಉತ್ತಮವಾದ, ನಾಮವತೀ=ಹೆಸರುಳ್ಳದ್ದಾಗಿ, ಸರ್ವಶ್ಯ=ಸರ್ವ ಶಾಸ್ತ್ರಗಳ, ನಿರ್ಣಯಾ=ನಿರ್ಣಯಿಸೋಣವು, ಸುವಾಕ್ಯಸಮುದ್ಧೃತೀ=ಸಮೀಚೀನವಾದ ವಾಕ್ಯೋದ್ಧಾರವು, ಇವುಗಳನ್ನು, ಸ್ವಾಧ್ಯಾಯಯೋಃ=ಸಮೀಚೀನವಾದ, ಮೊದಲಿನ ಎರಡು ಅಧ್ಯಾಯಗಳಲ್ಲಿ

ಹರಿಪದಸ್ಮರಣೇನಕೃತ್ವಾ=ಶ್ರೀಹರಿಯ ಪಾದಸ್ಮರಣೆಮಾಡಿ, ಪರಸ್ಯ=ಸರ್ವ ಜೀವೋತ್ತಮರಾದ, ಮರುತಃ=ವಾಯುದೇವರ, ಕಥಾಃ=ಕಥೆಗಳನ್ನು, ಆಹ=ಹೇಳಿದರು.

ತಾತ್ಪರ್ಯ:—ಭೀಮಸೇನದೇವರೇ ಮಧ್ವಾಚಾರ್ಯರಾಗಿ ಅವತರಿಸಿ ಸರ್ವಶಾಸ್ತ್ರಾರ್ಥನಿರ್ಣಯ, ಮತ್ತು ಸುವಾಕ್ಯೋದ್ಧರಣ ಇವುಗಳನ್ನು ಮೊದಲಿನ ಎರಡು ಅಧ್ಯಾಯಗಳಲ್ಲಿ ಹೇಳಿ ಮೂರನೆಯ ಅಧ್ಯಾಯದಲ್ಲಿ ವಾಯುದೇವರ ಮಹಿಮೆಯನ್ನು ಪ್ರತಿಪಾದಿಸುವ ಕಥಾ ಹೇಳುತ್ತಾರೆ.

ವಿಶೇಷಾರ್ಥ.—"ತೃತೀಯಮಸ್ಯರುಷಭಸ್ಯದೋಹಸೆ" ಎಂಬುವ ಪ್ರಮಾಣಾನುಸಾರ ಎರಡನೆಯ ಅವತಾರರಾದ ಭೀಮಸೇನದೇವರೇ ಮಧ್ವಾಚಾರ್ಯರು. ಮತ್ತು ಭಗವದ್ಭಕ್ತರಕಥಾ ಭಗವತ್ಕಥಾಸಹಿತವಾದ್ದರಿಂದ ಆ ಶ್ರೀಹರಿಯ ಮಹಿಮಾ ಭೂತ, ಜೀವೋತ್ತಮರಾದ ವಾಯುದೇವರ ಮಹಿಮಾ ಪೂರ್ವಕ ಕಥಾವನ್ನು ಹೇಳುತ್ತಾರೆಂದು ತಿಳಿಯಬೇಕು.

ಅವತಾರಿಕೆ:—ಮೊದಲನೆಯ ಅಧ್ಯಾಯದಲ್ಲಿ ಸೂಕ್ಷ್ಮರೂಪವಾಗಿ ಸೃಷ್ಟರಾದ ದೇವತೆಗಳಿಗೆ ಈ ಅಧ್ಯಾಯದಲ್ಲಿ ಸ್ಥೂಲ ಸೃಷ್ಟಿಯನ್ನು ಹೇಳುವುದಕ್ಕೋಸ್ಕರ ಪೂರ್ವದ ಸೃಷ್ಟಿಯನ್ನು ಅನುವಾದಮಾಡಿ ಹಿಂದೆ ಹೇಳದೆ ಇರುವ ಸೃಷ್ಟಿಯನ್ನು ಹೇಳುತ್ತಾರೆ:—

**ಶ್ಲೋಕ॥ ವ್ಯೂಢಃಶ್ಚತುರ್ಧಾಭಗವಾನ್‌ಸಏಕೋ ಮಾಯಾಂಶ್ರಿಯಂ ಸೃಷ್ಟಿ ವಿಧಿತ್ಸಯಾರ ರೂಪೇಣ ಪೂರ್ವೇಣಸವಾಸುದೇವ ನಾಮ್ನಾವಿರಂಚಿಂಸುಷುವೇಚಸಾತಃ ॥೧॥**

ಅರ್ಥ:—ಭಗವಾನ್=ಅವ್ಯಾಹತಸಮಗ್ರೈಶ್ವರ್ಯ ಸಂಪನ್ನನಾದಂಥ, ಸಃ=ಅಂತಹ, ಚತುರ್ಧಾ=ನಾಲ್ಕು ವಿಧವಾದ, ವ್ಯೂಢಃ=ವ್ಯೂಹವನ್ನು ಹೊಂದಿದ, ಏಕಃ–ಒಬ್ಬನಾದ, ವಾಸುದೇವಃ=ವಾಸುದೇವಾವತಾರನಾದ ಶ್ರೀಹರಿಯು, ಪೂರ್ವೇಣ–ಮೊದಲಿನಲ್ಲಿ ಸೂಕ್ಷ್ಮ ಸೃಷ್ಟಿಗಾಗಿ ಅವತರಿಸಿದ, ರೂಪೇಣ=ರೂಪದಿಂದ, ಸೃಷ್ಟಿವಿಧಿತ್ಸಯಾ=ಸ್ಥೂಲ ಸೃಷ್ಟಿಮಾಡುವುದಕ್ಕಾಗಿ

ಶ್ರಿಯಂ=ರಮಾರೂಪರಾದ, ಮಾಯಾಂ=ಮಾಯಾದೇವಿಯನ್ನು, ಅಧ=ಹೊಂದಿದನು, ಸಾ=ಆ ಮಾಯಾದೇವಿಯು, ಅತಃ=ಆ ವಾಸುದೇವನ ಪತಿಯಿಂದ, ನಾಮ್ನಾ=ಹೆಸರಿನಿಂದ, ವಿರಿಂಚಿಂ=ವಿರಿಂಚನಾಮಕರಾದ ಬ್ರಹ್ಮದೇವರನ್ನು, ಸುಷುವೆ=ಹಡೆದಳು.

ತಾತ್ಪರ್ಯ.—ಸಮಗ್ರ ಐಶ್ವರ್ಯ ಪೂರ್ಣನಾದ ಸಮುಹತ್ತ್ವದ ಅವತರಿಸಿದ ನಾಲ್ಕು ಮೂರ್ತಿಗಳಲ್ಲಿ ಒಬ್ಬನಾದ ವಾಸುದೇವ ಶಬ್ದವಾಚ್ಯನಾದ ಶ್ರೀಹರಿಯು, ಸೂಕ್ಷ್ಮಸೃಷ್ಟಿಗೆ ಬಾಧ್ಯನಾಗಿ ಸೃಷ್ಟಿಸಿದನೋ, ಆ ವಾಸುದೇವನೇ ಸ್ಥೂಲ ಸೃಷ್ಟಿಗೋಸ್ಕರ ನಿಜ ಪತ್ನಿಯಾದ ರಮಾ ಸ್ವರೂಪಳಾದ ಮಾಯಾದೇವಿಯನ್ನು ಹೊಂದಿದನು. ಆ ಮಾಯಾದೇವಿಯು ಅದೇ ವಾಸುದೇವನಿಂದ ವಿರಿಂಚಶಬ್ದವಾಚ್ಯನಾದ ಬ್ರಹ್ಮದೇವರನ್ನು ಹಡೆದಳು.

ವಿಶೇಷಾರ್ಥ.— "ತಸ್ಮಾದ್ವಿರಾಳಜಾಯತ" ಎಂಬುವ ಪುರುಷಸೂಕ್ತಪ್ರತಿಪಾದ್ಯನಾದ ಶ್ರೀಹರಿಯು ಬ್ರಹ್ಮಾಂಡವನ್ನು ಸೃಷ್ಟಿಸಿದನು, ಅವನೇ ವಾಸುದೇವ ರೂಪಿಯಾದ ನಾರಾಯಣನೆಂದು ತಿಳಿಯಬೇಕು. ಈ ವಾಸುದೇವರೂಪ, ಸರ್ವತ್ರ ವಾಸಮಾಡುವ ಅಂದರೆ ಅಣುರೇಣು ಪದಾರ್ಥಗಳಲ್ಲಿಯೂ ಇರುವುದಾದ್ದರಿಂದ ವಾಸುದೇವನೆಂದು ಹೇಳಿಸಿಕೊಳ್ಳುತ್ತದೆ.

ಅವತಾರಿಕೆ:—ಹಿಂದಿನ ಶ್ಲೋಕದಲ್ಲಿ ಬ್ರಹ್ಮನ ಉತ್ಪತ್ತಿಯನ್ನು ಸೂಚಿಸಿ ಈಗ ವಾಯುದೇವರ ಉತ್ಪತ್ತಿಯನ್ನು ಸೂಚಿಸುತ್ತಾರೆ:—

**ಶ್ಲೋಕ॥ ಸಂಕರ್ಷಣಾಚ್ಚಾಪಿ ಜಯಾತನೂಜೋ ಬಭೂವ ಸಾಕ್ಷಾದ್ಬಲಸಂ**
**ವಿದಾತ್ಮಾ ವಾಯುರ್ವಿನಾಥವಿರಿಂಚನಾಮಾ ಭವಿಷ್ಯ ಆದ್ಯೋ**
**ನಪರಸ್ತತೋಹಿ ॥೧೦॥**

ಅರ್ಥ.—ಬಲಸಂವಿದಾತ್ಮಾ=ಬಲ=ಶರೀರ ಸಾಮರ್ಥ್ಯವು, ಸಂವಿತ್=ಜ್ಞಾನ ಸಾಮರ್ಥ್ಯವು, ಇವುಗಳೇ ಆತ್ಮ=ಶರೀರವಾಗಿ ಉಳ್ಳಂಥ, ವಾಯುಃ=ವಾಯುದೇವರು, ಸಾಕ್ಷಾತ್=ಮುಖ್ಯನಾಗಿ, ಸಂಕರ್ಷಣಾತ್=ಸಂಕರ್ಷಣರೂಪಿಯಾದ ನಾರಾಯಣನ ಮೂಲಕ, ಜಯಾ = ಜಯಾನಾಮಕ

ಜಯಾದೇವಿಯರ, ತನೂಜಃ=ಮಕ್ಕಳಾಗಿ. ಬಭೂವ=ಆದರು (ಅವತಾರ ಮಾಡಿದರು). ಅಥ=ಮತ್ತು. ಏಷಃ=ಆ ವಾಯುದೇವರೇನೆ, ಭವಿಷ್ಯೇ=ಮುಂದಿನ ಕಲ್ಪದಲ್ಲಿ, ವಿರಿಂಚನಾಮಾ. ವಿರಿಂಚ=ಬ್ರಹ್ಮದೇವರೆಂಬ, ನಾಮಾ=ಹೆಸರುಳ್ಳವರಾಗಿ, ಆಸ್ತೇ=ನೆಲಸಿರುವರೋ. ತತಃ=ಆ ಬ್ರಹ್ಮದೇವರ ಪದವಿಗೆ ಬರುವ ವಾಯುದೇವರಗಿಂತ, ಪರಃ=ಉತ್ತಮರಾದವರು ಮತ್ತೊಬ್ಬರು, ನ=ಇಲ್ಲ, ಹಿ=ಪ್ರಸಿದ್ಧವು.

ತಾತ್ಪರ್ಯ.—ಯಾವ ಬಲ ಜ್ಞಾನಾದಿಗಳಿಂದ ಯುಕ್ತರಾದ ವಾಯುದೇವರು ಸಂಕರ್ಷಣದೇವರಿಂದ ಜಯಾದೇವಿಯಲ್ಲಿ ಹುಟ್ಟಿದರೋ, ಆ ವಾಯುದೇವರೇ ಮುಂದಿನ ಕಲ್ಪದಲ್ಲಿ ವಿರಿಂಚಿ ಎಂಬ ಹೆಸರಿನಿಂದ ಬ್ರಹ್ಮಪದವಿಗೆ ಬರುವರು. ಅಂತಹ ವಾಯುದೇವರಿಗಿಂತಲೂ ಉತ್ತಮರಾದವರು ಈ ಪ್ರಪಂಚದ ಸೃಷ್ಟಿಯಲ್ಲಿಲ್ಲ. ಇದು ಪ್ರಸಿದ್ಧವು.

ವಿಶೇಷಾರ್ಥ.—ಪಂಚವ್ಯೂಹಸೃಷ್ಟಿಯಲ್ಲಿ ಅನಿರುದ್ಧಾದಿಗಳಿಂದ ಅಭಿವ್ಯಕ್ತಿಯನ್ನು ಹೊಂದಿದ ಜೀವರುಗಳ ಸೃಷ್ಟಿಯನ್ನು ತಿಳಿಯಬೇಕು. ಮತ್ತು ಆ ಜೀವರುಗಳಲ್ಲಿ ಉತ್ತಮರಾದ ವಾಯುದೇವರ ಜೀವೋತ್ತಮತ್ವಜ್ಞಾನವು ಮುಕ್ತಿಸಾಧಕವಾದ್ದರಿಂದ ಅದನ್ನೂ ತಿಳಿಯಬೇಕು.

ಅವತಾರಿಕೆ:—ವಾಸುದೇವನಿಂದ ಹುಟ್ಟಿದ ವಿರಿಂಚಿ, ಸಂಕರ್ಷಣನಿಂದ ಹುಟ್ಟಿದ ವಾಯುದೇವರು ಇವರುಗಳ ನಾಮಾಂತರಗಳನ್ನು ಹೇಳಿ ಪ್ರದ್ಯುಮ್ನನ ಸೃಷ್ಟಿಯನ್ನು ಹೇಳುತ್ತಾರೆ:—

**ಶ್ಲೋ॥ ಸೂತ್ರಂಸವಾಯುಃಪುರುಷೋವಿರಿಂಚಃ ಪ್ರದ್ಯುಮ್ನತಶ್ಚಾಥಕೃತೌ**
**ಸ್ತ್ರಿಯೌದ್ವೇಪ್ರಜಜ್ಞತುರ್ಯಮಳೇತತ್ರಪೂರ್ವಾಪ್ರಧಾನಸಂಜ್ಞಾ ಪ್ರ**
**ಕೃತಿರ್ಜನಿತ್ರೀ ॥೧೧॥**

ಅರ್ಥ.—ಸಃ=ಅಂತಹ, ವಾಯುಃ=ವಾಯುದೇವರು, ಸೂತ್ರಂ=ಸೂತ್ರನಾಮಕರು, ವಿರಿಂಚಃ=ವಿರಂಚಿಯು, ಪುರುಷಃ=ಪುರುಷಶಬ್ದವಾಚ್ಯನು, ಅಥ=ಅನಂತರದಲ್ಲಿ, ಪ್ರದ್ಯುಮ್ನತಃ=ಪ್ರದ್ಯುಮ್ನನ ದೆಸೆಯಿಂದ, ಕೃತೌ=ಕೃತೀದೇವಿಯಲ್ಲಿ, ಯಮಳೇ=ಅವಳಿಜವಳಿಯಾದಂಥ, ದ್ವೇ=ಎರಡಾದಂಥ

ಸ್ತ್ರೀಪುಂಸೌ=ಸ್ತ್ರೀಪುರುಷರುಗಳು, ಪ್ರಜಜ್ಞಾತೇ=ಹುಟ್ಟಿದರು, ತತ್ರ=ಅವರಿಬ್ಬರಲ್ಲಿ ಪೂರ್ವಾ=ಮೊದಲು ಹುಟ್ಟಿದವಳು, ಪ್ರಧಾನಸೌಜ್ಞಾ=ಪ್ರಧಾನ=ಪ್ರಧಾನನಾಮಕಳಾದ, ಸೌಜ್ಞಾ=ಸೌಜ್ಞಾ ಎಂದು ಹೆಸರುಳ್ಳವಳು, ಜನಿತ್ರೀ=ಋಷ್ಯಾದಿಗಳನ್ನು ಪಡೆದವಳು, ಅತಏವ=ಅದ್ದರಿಂದಲೇ, ಪ್ರಕೃತಿಃ=ಪ್ರಕೃತಿ ಎಂದು ಹೇಳಿಸಿಕೊಳ್ಳುತ್ತಾಳೆ.

ತಾತ್ಪರ್ಯ.—ವಾಸುದೇವನಿಂದ ಹುಟ್ಟಿದ ವಿರಿಂಚಿಗೆ ಪುರುಷನೆಂತಲೂ, ಸಂಕರ್ಷಣನಿಂದ ಹುಟ್ಟಿದ ವಾಯುದೇವರಿಗೆ ಸೂತ್ರನೆಂತಲೂ, ಹೆಸರು. ಕೃತೀದೇವಿಯಲ್ಲಿ ಪ್ರದ್ಯುಮ್ನನಿಂದ ಹುಟ್ಟಿದವರು ಇಬ್ಬರು ಹೆಣ್ಣು ಮಕ್ಕಳು. ಅವರಲ್ಲಿ ಮೊದಲನೆಯವಳಿಗೆ ಪ್ರಧಾನ ಎಂದು ಹೆಸರು. ಈಕೆಯು ಶಿವನೇವರೇ ಮೊದಲಾದವರನ್ನು ಪಡೆದವಳಾದ್ದರಿಂದ ಜನಿತ್ರೀ ಎಂತಲೂ ಪ್ರಕೃತೀ ಎಂತಲೂ ಹೇಳಿಸಿಕೊಳ್ಳುತ್ತಾಳೆ.

ವಿಶೇಷಾರ್ಥ.—ಅನಿರುದ್ಧಾದಿ ಪಂಚ ರೂಪಗಳಲ್ಲಿ ಜ್ಞಾನ, ಆನಂದ ಸುಖ, ಇವೇ ಮೊದಲಾದ ಗುಣಗಳು ಪೂರ್ಣವೇ ಹೊರತು ಬೇರೆ ಅಲ್ಲ. ಪರಮಾತ್ಮನ ಅಂಶ ಮತ್ತು ಅಂಶಗಳು ಪರಸ್ಪರ ಅಭೇಧವುಳ್ಳವುಗಳು, ಹೀಗಿರಲು ಒಂದು ರೂಪದಿಂದ ಪುರುಷರನ್ನೂ ಮತ್ತೊಂದು ರೂಪದಿಂದ ಸ್ತ್ರೀಯರನ್ನೂ ಪಡೆದು ಈ ಎರಡು ಅಧಿಷ್ಠಾನಗಳಲ್ಲಿಯೂ ತಾನೇ ನಿಂತು ಸಾಧನಮಾಡಿ ಅವರಿಂದ ಮಾಡಿಸಿ ಸೇವಾದಿಗಳನ್ನು ಕೈಕೊಂಡು ಅವರನ್ನ ಆನಂದಗೊಳಿಸುವ ಸ್ವಯಂ ಆನಂದಪೂರ್ಣನಾದ ಪರಬ್ರಹ್ಮನ ಲೀಲೆಯನ್ನು ಜ್ಞಾನಿಗಳು ತಿಳಿದು ಆನಂದಪಡುತ್ತಾರೆ.

ಅವತಾರಿಕೆ:—ಪ್ರಕೃತಿ, ಶ್ರದ್ಧಾ, ಇವರುಗಳಿಂದ ಆದ ಸೃಷ್ಟಿಯನ್ನು ತಿಳಿಸುತ್ತಾರೆ:—

**ಶ್ಲೋಕ॥ ಶ್ರದ್ಧಾದ್ವಿತೀಯಾಥತಯೋಃಸ್ತುಯೋಗೋ ಬಭೂವಪುಂಸ್ಯೈವ**
**ಚ ಸೂತ್ರನಾಮ್ನಾ । ಹರೇರ್ನಿಯೋಗಾದಥಸಂಪ್ರಸೂತೌ ಶೇಷಃ**
**ಸುಪರ್ಣಶ್ಚ ತಯೋಃಸಹೈವ ॥೧೨॥**

ಅರ್ಥ.—ಶ್ರದ್ಧಾ=ಶ್ರದ್ಧಾನಾಮಕಳಾದ ಭಾರತಿಯು, ದ್ವಿತೀಯಾ= ಎರಡನೆಯವಳು, ಅಥ=ಇವರಿಬ್ಬರ ಉತ್ಪತ್ತಿ ಆದನಂತರದಲ್ಲಿ, ಹರೇಃ= ಶ್ರೀನಾರಾಯಣನ, ನಿಯೋಗಾತ್=ಅಪ್ಪಣೆಯಿಂದ, ತಯೋಃ=ಪ್ರಧಾನ, ಶ್ರದ್ಧಾ ಇವರುಗಳಿಗೆ, ಅಂದರೆ, ಪ್ರಧಾನರೆಂಬ ಸರಸ್ವತೀಗೆ, ಪುಂಸಾ=ಪುರುಷನಾಮಕ ಬ್ರಹ್ಮನ ದೆಶೆಯಿಂದ, ಮತ್ತು ಶ್ರದ್ಧಾನಾಮಕಳಾದ ಭಾರತೀಗೆ, ಸೂತ್ರನಾಮ್ನಾ=ಸೂತ್ರಶಬ್ದವಾಚ್ಯನಾದ ವಾಯುದೇವರ ದೆಶೆಯಿಂದ, ಯೋಗಃ–ಸಂಬಂಧವು, ಬಭೂವ=ಆಯಿತು. ಅಥ=ಇವರುಗಳ ಸಂಬಂಧವಾದನಂತರದಲ್ಲಿ, ಸಹೈವ=ಒಂದೇ ಕಾಲದಲ್ಲಿ, ತಯೋಃ=ಅವರ ದೆಶೆಯಿಂದ, ಶೇಷಃ=ಶೇಷದೇವರು, ಸುಪರ್ಣಃ=ಗರುಡದೇವರು, ಸಂಪ್ರಸೂತೌ= ಉತ್ಪನ್ನರಾದರು.

ತಾತ್ಪರ್ಯ.—ಪ್ರದ್ಯುಮ್ನನ ದೆಶೆಯಿಂದ ಹುಟ್ಟಿದ ಅವಳಿಜವಳಿಗಳಲ್ಲಿ ಒಂದನೆಯವಳು ಪ್ರಧಾನ, ಶ್ರದ್ಧಾ ಎರಡನೆಯವಳು ಅನಂತರ ಪ್ರಧಾನಳೆಂಬ ಸರಸ್ವತಿಗೆ ಪುರುಷನಾಮಕ ಬ್ರಹ್ಮನಿಂದಲೂ, ಶ್ರದ್ಧಾನಾಮಕ ಭಾರತೀಗೆ ಸೂತ್ರನಾಮಕ ವಾಯುದೇವರಿಂದಲೂ, ಸಂಬಂಧವಾಯಿತು. ನಂತರ ಪುರುಷನಾಮಕ ಬ್ರಹ್ಮನಿಂದಲೂ, ಸೂತ್ರನಾಮಕ ವಾಯುದೇವರಿಂದಲೂ ಒಂದೇ ಕಾಲದಲ್ಲಿ ಗರುಡ ಶೇಷರು ಹುಟ್ಟಿದರು. ಇವರುಗಳ ಉತ್ಪತ್ತಿಗೂ ಮತ್ತು ಅವರ ಸಂಬಂಧಕ್ಕೂ ಸಹ ಹರಿಯ ಆಜ್ಞೆಯೇ ಕಾರಣವೆಂದು ತಿಳಿಯಬೇಕು.

ವಿಶೇಷಾರ್ಥ.—ಅನುವ್ಯಾಖ್ಯಾನ ಪ್ರಮಾಣ:—ತಸ್ಮಾಜ್ಜಾತಃ ಪುಮಾನ್ನಾಮಾ ಬ್ರಹ್ಮಾಽಸೀದ್ವಾಸುದೇವತಃ। ಸೂತ್ರಾತ್ಮಾ ಪ್ರಾಣನಾಮಾಽಥ ದೇವ್ಯೌ ಪ್ರಕೃತಿಮಾನಿನಿ ॥ ಎಂಬ ಪ್ರಮಾಣಾನುಸಾರ, ವಾಸುದೇವನಿಂದ ಹುಟ್ಟಿದ ಬ್ರಹ್ಮ ಪುರುಷನಾಮಕ, ಸಂಕರ್ಷಣನಿಂದ ಹುಟ್ಟಿದವರು ಸೂತ್ರನಾಮಕ ವಾಯುದೇವರು. ಇವರುಗಳಿಗೆ ಪ್ರದ್ಯುಮ್ನನಿಂದ ಹುಟ್ಟಿದ ಪ್ರಧಾನ ಶ್ರದ್ಧಾ, ಇವರು ಹೆಂಡತಿಯರುಗಳು, ಅದರಲ್ಲಿಯೂ ಪ್ರಧಾನಳೆಂಬ ಸರಸ್ವತೀ ಪುರುಷನಾಮಕ ಬ್ರಹ್ಮನ ಪತ್ನಿ, ಶ್ರದ್ಧಾ ನಾಮಕ ಭಾರತೀ ಸೂತ್ರನಾಮಕ ವಾಯು ಪತ್ನಿ, ಇವರಿಬ್ಬರಿಂದ ಒಂದೇ ಕಾಲದಲ್ಲಿ, (ಸಮಾನ ಕಾಲದಲ್ಲಿ) ಕಾಲ ನಿಯಾಮಕ ಪರಮಾತ್ಮನ ಆಜ್ಞಾನುಸಾರ ಗರುಡ, ಶೇಷರು ಹುಟ್ಟಿದರೆಂದು ತಾತ್ಪರ್ಯ.

ಅವತಾರಿಕೆ:—ಪುರುಷ ಸೂತ್ರರುಗಳ ಕಡೆಯಿಂದ ಜೀವ, ಕಾಲರು ಯಾವ ಕಾಲದಲ್ಲಿ ಹುಟ್ಟಿದರೆಂಬುವುದನ್ನು ತಿಳಿಸುತ್ತಾರೆ:—

**ಶ್ಲೋಕ॥ ಶೇಷಸ್ತಯೋರೇವಹಿ ಜೀವನಾಮಾ ಕಾಲಾತ್ಮಕಃ ಸೋಽಥ ಸುಪರ್ಣ ಆಸೀತ್ । ತೌ ವಾಹನಂ ಶಯನಂ ಚೈವ ವಿಷ್ಣೋಃ ಕಾಲಾ ಜಯಾದ್ಯಾಶ್ಚ ತತಃ ಪ್ರಸೂತಾಃ॥೧೪॥**

ಅರ್ಥ.—ತಯೋಃ=ಪೂರ್ವದಲ್ಲಿ ಹುಟ್ಟಿದ ಇಬ್ಬರಲ್ಲಿ, ಶೇಷ ಏವ=ಶೇಷದೇವರೇ, ಜೀವನಾಮಾ=ಜೀವ ಎಂದು ಹೆಸರುಳ್ಳವರು, ಅಥ=ಅನಂತರದಲ್ಲಿ ಎರಡನೆಯವರಾದ, ಸುಪರ್ಣಃ=ಗರುಡದೇವರು, ಕಾಲಾತ್ಮಕಃ=ಕಾಲ ಶಬ್ದವಾಚ್ಯರು, ಆಸೀತ್=ಅವತಾರವನ್ನಾಡಿದರು, ತೌ=ಆ ಗರುಡ ಶೇಷರುಗಳು, ವಿಷ್ಣೋಃ=ಶ್ರೀನಾರಾಯಣನಿಗೆ, ಶಯನಂ ಚ—ಹಾಸಿಗೆಯಾಗಿಯೂ, ವಾಹನಂ=ವಾಹನವಾಗಿಯೂ, ಆಸೀತ್=ಆದರು. ತತಃ=ಅನಂತರದಲ್ಲಿ, ತಯೋಃ=ಆ ಗರುಡಶೇಷರ ಕಡೆಯಿಂದ, ಕಾಲಾಃ=ಕಾಲನಾಮಕರಾದ ದ್ವಾರಪಾಲಕರು, ಜಯಾದ್ಯಾಃ=ಜಯ ವಿಜಯರೇ ಮೊದಲಾದವರು, ಪ್ರಸೂತಾಃ=ಹುಟ್ಟಿದರು.

ತಾತ್ಪರ್ಯ:—ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಧಾನತ್ರದ್ದಾದಿಗಳಲ್ಲಿ ಸೂತ್ರ ಪುರುಷರಿಂದ ಜನಿಸಿದ ಗರುಡ ಶೇಷರು ಜೀವಕಾಲ ಎಂಬ ನಾಮಾಂತರವನ್ನು ಹೊಂದಿ ಪರಮಾತ್ಮನಿಗೆ ಕಾಲಶಬ್ದ ವಾಚ್ಯರಾದ ಗರುಡದೇವರು ವಾಹನರಾಗಿಯೂ, ಜೀವಶಬ್ದವಾಚ್ಯರಾದ ಶೇಷದೇವರು ಹಾಸಿಗೆಯಾಗಿಯೂ ಆದರು. ಈ ಗರುಡಶೇಷರುಗಳಿಂದ ಪರಮಾತ್ಮನ ದ್ವಾರಪಾಲಕರಾದ ಜಯ ವಿಜಯರೇ ಮೊದಲಾದವರು ಹುಟ್ಟಿದರು.

ವಿಶೇಷಾರ್ಥ:—ಗರುಡಶೇಷಾದಿಗಳು ವಾಯು ಬ್ರಹ್ಮರಿಂದ ಹುಟ್ಟಿದವರು ಎಂದು ಸೂಚಿಸಿದ ಪ್ರಯುಕ್ತ ವಾಯುದೇವರಿಗಿಂತಲೂ ಗರುಡ ಶೇಷಾದಿಗಳು ತಾರತಮ್ಯದಲ್ಲಿ ಕಡಿಮೆಯೆಂತಲೂ, ಇತರ ಮತದಲ್ಲಿ ಗರುಡ ಶೇಷರಿಗೆ ವೆಷ್ಟಿ, ಸಮಿಷ್ಟಿ ಎಂಬ ಭೇದದಿಂದ ಸಮಿಷ್ಟಿಯೆಂಬ ಸಂಸಾರಾವಸ್ಥೆಗೆ ಸೇರಿದವರಾದ್ದರಿಂದ (ವೆಷ್ಟಿಯೆಂಬ) ನಿತ್ಯಮುಕ್ತರೆಂಬ ವಿಷಯವನ್ನು ಖಂಡಿಸಿ ಸಂಸಾರಾವಸ್ಥೆಯಲ್ಲಿಯೂ, ಮುಕ್ತ್ಯಾವಸ್ಥೆಯಲ್ಲಿಯೂ ಬ್ರಹ್ಮ ಸರಸ್ವತಿಯರಿಗಿಂತಲೂ ಸೂಪ ಗುಣ ಕಡಿಮೆಯೆಂತಲೂ ತಿಳಿಸುತ್ತಾರೆ.

ಅವತಾರಿಕೆ.—ಹಿಂದಿನ ಶ್ಲೋಕದಲ್ಲಿ ತಿಳಿಸಿದ ಕಾಲಾದಿಗಳು ಇಂದ್ರಾದಿ ದೇವತೆಗಳಿಗಿಂತಲೂ ಕಡಿಮೆಯೆಂದು ಸೂಚಿಸುತ್ತಾರೆ:—

**ಶ್ಲೋ॥ ಕಾಲಾಜ್ಜಯಾದ್ಯಾ ಅಪಿ ವಿಷ್ಣುಪಾರ್ಷದಾ ಯಸ್ಮಾದಂಡಾತ್ಪರತಸ್ಸಂಪ್ರಸೂತಾಃ । ನೀಚಾಸುರೇಭ್ಯಸ್ತತ ಏವ ತೇಽಖಿಲಾ ವಿಷ್ವಕ್ಸೇನೋ ವಾಯುಜಃ ಖೇನ ತುಲ್ಯಃ ॥೧೪॥**

ಅರ್ಥ:—ಯಸ್ಮಾತ್= ಯಾವ ಕಾರಣದ ದೆಸೆಯಿಂದ, ವಿಷ್ಣುಪಾರ್ಷದಾಃ= ಶ್ರೀನಾರಾಯಣನ ದ್ವಾರಪಾಲಕರಾದ. ಕಾಲಾಜ್ಜಯಾದ್ಯಾಃ= ಕಾಲ, ಜಯಾದಿಗಳೂ, ಅಂಡಾತ್= ಬ್ರಹ್ಮಾಂಡದಿಂದ, ಪರತಃ= ಹೊರಭಾಗದಲ್ಲಿ, ಸಂಪ್ರಸೂತಾಃ= ಹುಟ್ಟಿದರೋ, ತತಃ= ಆ ಕಾರಣದ ದೆಸೆಯಿಂದ, ತೇ= ಅಂಥ, ಅಖಿಲಾಃ= ಸಮಸ್ತರಾದ ಜಯಾದಿಗಳು, ಸುರೇಭ್ಯಃ= ಇಂದ್ರಾದಿ ದೇವತೆಗಳ ದೆಸೆಯಿಂದ, ನೀಚಾಃ= ಕಡಿಮೆಯಾದವರು, ವಾಯುಜಃ= ವಾಯುದೇವರಿಂದ ಹುಟ್ಟಿದ, ವಿಷ್ವಕ್ಸೇನಃ= ವಿಷ್ವಕ್ಸೇನರು, ಖೇನ= ಆಕಾಶಾಭಿಮಾನಿಯಾದ ಗಣಪತಿಗೆ ತುಲ್ಯಃ= ಸಮರು.

ತಾತ್ಪರ್ಯ.—ಸೃಷ್ಟಿಯು ಎರಡು ಪ್ರಕಾರ. ಬ್ರಹ್ಮಾಂಡದ ಒಳಭಾಗದಲ್ಲಿ ಪದ್ಮಸೃಷ್ಟಿಯೂ, ಹೊರಭಾಗದಲ್ಲಿ ಸೂಕ್ಷ್ಮಸೃಷ್ಟಿಯೂ, ಎಂದು ಪ್ರಥಮಾಧ್ಯಾಯದಲ್ಲಿ ಸೂಚಿಸಿರುತ್ತಾರೆ. ಪರಮಾತ್ಮನ ದ್ವಾರಪಾಲಕರಾದ ಜಯಾದಿಗಳು ಬ್ರಹ್ಮಾಂಡದ ಹೊರಭಾಗದಲ್ಲಿ ನಡೆದ ಸೂಕ್ಷ್ಮಸೃಷ್ಟಿಯಲ್ಲಿ ಸೃಷ್ಟರಾದ್ದರಿಂದ ಬ್ರಹ್ಮಾಂಡದ ಒಳಭಾಗದಲ್ಲಿ ನಡೆದ ಪದ್ಮಸೃಷ್ಟಿಯಲ್ಲಿ ಸೃಷ್ಟರಾದ ಇಂದ್ರಾದಿ ದೇವತೆಗಳಿಗಿಂತಲೂ ತಾರತಮ್ಯದಲ್ಲಿ ಕಡಿಮೆ ಎಂದು ತಿಳಿಯಬೇಕು. ವಾಯುದೇವರ ಮಕ್ಕಳಾದ ವಿಷ್ವಕ್ಸೇನರು ಆಕಾಶಾಭಿಮಾನಿಯಾದ ಗಣಪತಿಗೆ ಸಮರೆಂದು ತಿಳಿಯಬೇಕು.

ವಿಶೇಷಾರ್ಥ.—ಮೋಕ್ಷಸಾಧನೆಗೆ ತಾರತಮ್ಯಜ್ಞಾನವು ಅತ್ಯಾವಶ್ಯಕವೆಂದು ಹಿಂದೆ ತಿಳಿಸಿರುವುದರಿಂದ ಈಗ ಇಂದ್ರ, ಜಯ ವಿಜಯ, ವಿಷ್ವಕ್ಸೇನ ಇವರುಗಳ ತಾರತಮ್ಯವನ್ನು ತಿಳಿಸುತ್ತಾರೆ. ಜಯವಿಜಯಾದಿಗಳು ಇಂದ್ರಾದಿಗಳಿಗಿಂತಲೂ ಕಡಿಮೆಯೆಂದೂ, ವಿಷ್ವಕ್ಸೇನರು ಗಣಪತಿಗೆ ಸಮರೆಂದೂ ತಿಳಿಯಬೇಕು.

ಅವತಾರಿಕೆ.—ಅನಿರುದ್ಧದೇವರಿಂದ ನಡೆದ ಸ್ಥೂಲ ಸೃಷ್ಟಿಯನ್ನು ತಿಳಿಸುತ್ತಾರೆ:—

**ಶ್ಲೋಕ॥ ವ್ಯೂಹಾತ್ತೃತೀಯಾತ್ಪುನರೇವವಿಷ್ಣೋಃ ದೇವಾಂಶ್ಚತುರ್ವರ್ಣಗತಾನ್‌ಸಮಸ್ತಾನ್ । ಸಂಗೃಹ್ಯ ಬೀಜಾತ್ಮತಯಾನಿರುದ್ಧೋನ್ಯಧತ್ತ ಶಾಂತ್ಯಾಂತ್ರಿಗುಣಾತ್ಮಿಕಾಯಾಂ ॥೧೫॥**

ಅರ್ಥ.—ಅನಿರುದ್ಧಃ=ಅನಿರುದ್ಧ ರೂಪಿಯಾದ, ವಿಷ್ಣೋಃ=ಶ್ರೀನಾರಾಯಣನ, ವ್ಯೂಹಾತ್–ಪಂಚವ್ಯೂಹದಲ್ಲಿ, ತೃತೀಯಾತ್=ಪ್ರದ್ಯುಮ್ನರೂಪಿ ಚತುರ್ವರ್ಣಗತಾನ್=ನಾಲ್ಕುವರ್ಣದವರಾದಂಥ, ಸಮಸ್ತಾನ್=ಅಶೇಷರಾದ, ದೇವಾನ್=ದೇವತೆಗಳನ್ನು, ಭೀಜಾತ್ಮತಯಾ=ಬೀಜರೂಪದಿಂದ, ಸಂಗೃಹ್ಯ=ಸ್ವೀಕರಿಸಿ, ತ್ರಿಗುಣಾತ್ಮಕಾಯಾಂ=ಗುಣತ್ರಯಾತ್ಮಕಳಾದ, ಶಾಂತ್ಯಾಂ–ಶಾಂತಾ ಎಂಬುವ ರಮಾದೇವಿಯಲ್ಲಿ, ನ್ಯಧತ್ತ=ಬೀಜರೂಪವಾಗಿ ಇಟ್ಟನು.

ತಾತ್ಪರ್ಯ:—ಅನಿರುದ್ಧರೂಪಿಯಾದ ಶ್ರೀಹರಿಯು ಪಂಚವ್ಯೂಹದಲ್ಲಿ ಮೂರನೆಯದಾದ ಪ್ರದ್ಯುಮ್ನ ರೂಪದಿಂದ ನಾಲ್ಕು ವರ್ಣದವರಾದ ಸರ್ವ ದೇವತೆಗಳನ್ನ ಭೀಜ ರೂಪದಿಂದ ಸಂಗ್ರಹಿಸಿ ಗುಣತ್ರಯಾತ್ಮಕಳಾದ ಶಾಂತಾದೇವಿಯಲ್ಲಿ ಸಂಯೋಜನ ಮಾಡುವನಾಗಿದ್ದಾನೆ.

ವಿಶೇಷಾರ್ಥ.—ಭಗವದ್ರೂಪಗಳಿಂದ ನಡಿಯುವ ಸೃಷ್ಟಿ, ಸ್ಥಿತಿ, ಲಯ ಇವೇ ಮೊದಲಾದ ಕಾರ್ಯಗಳನ್ನ ತಿಳಿದು ತಾರತಮ್ಯ ಪಂಚಭೇದ ಜ್ಞಾನವನ್ನು ಸಂಪಾದಿಸುವರಿಗೆ ಮೋಕ್ಷ ಸಿದ್ಧಿ ಎಂದು ಅಧಿಕಾರಿಗಳಿಗೆ ತಿಳಿಸುವ ಉದ್ದಿಶ್ಯವಾಗಿ ಶ್ರಿಮದಾಚಾರ್ಯರು ಅನಿರುದ್ಧ ರೂಪಿಯಾದ ಭಗವಂತನ ಮತ್ತು ಅವನ ನಿಜ ಪತ್ನಿಯಾದ ಶಾಂತಾ ಎಂಬುವ ರಮಾ ರೂಪದಿಂದ ನಡೆದ ಸೃಷ್ಟಿಯನ್ನು ತಿಳಿಸುತ್ತಾರೆ.

ಅವತಾರಿಕೆ:—ಅನಿರುದ್ಧ ರೂಪನಾದ ಶ್ರೀಹರಿಯ ಸೃಷ್ಟಿ ವಿಧಾನವನ್ನು ತಿಳಿಸುತ್ತಾರೆ:—

**ಶ್ಲೋಕ॥ ತತೋಽಹಮತ್ತತ್ತ್ವ ತನುರ್ವಿರಿಂಚಃ ಸ್ಥೂಲಾತ್ಮನೈವಾಜನಿವಾಕ್ಚ ದೇವೀ। ತಸ್ಯಾಮಹಂಕಾರತನುಂಸರುದ್ರಂ ಸಸರ್ಜಬುದ್ಧಿಂಚತದರ್ಧದೇಹಾಂ॥೧೬॥**

ಅರ್ಥ.--ತತಃ=ಆ ಶಾಂತೀದೇವಿಯ ದೆಶೆಯಿಂದ, ಮಹತ್ತತ್ವತನುಃ=ಮಹತ್ತತ್ವ-ಮಹತ್ತತ್ವವೇ, ತನುಃ=ಶರೀರವಾಗಿ ಉಳ್ಳಂಥ, ವಿರಿಂಚಃ-ಚತುರ್ಮುಖರಾಯರು, ಸ್ಥೂಲಾತ್ಮನೈವ-ಸ್ಥೂಲ ಶರೀರದಿಂದಲೂ, ಚ=ಮತ್ತು, ವಾಕ್=ವಾಗಾಭಿಮಾನಿಗಳಾದ, ದೇವೀ=ಸರಸ್ವತೀದೇವಿಯರು, ಅಜನಿ=ಉತ್ಪನ್ನರಾದರು, ಸಃ=ಆ ಬ್ರಹ್ಮದೇವರು, ತಸ್ಯಾಂ-ಆ ಸರಸ್ವತೀದೇವಿಯರಲ್ಲಿ, ಅಹಂಕಾರತನುಂ=ಅಹಂಕಾರವೇ ಶರೀರವಾಗಿ ಉಳ್ಳಂಥ, ರುದ್ರಂ=ರುದ್ರದೇವರನ್ನು, ತದರ್ಧದೇಹಾಂ=ತತ್=ಆ ರುದ್ರದೇವರ, ಅರ್ಧದೇಹಾಂ-ಅರ್ಧಾಂಗಿಯಾದಂಥ, ಬುದ್ಧಿಂಚ=ಬುದ್ಧಿಗೆ ಅಭಿಮಾನಿಯಾದ ಪಾರ್ವತೀದೇವಿಯರನ್ನು, ಸಸರ್ಜ=ಸೃಷ್ಟಿಮಾಡಿದನು.

ತಾತ್ಪರ್ಯ.—ಶಾಂತಿಯಲ್ಲಿ ಮಹತ್ತತ್ವ ಶರೀರಿಯಾದ ಚತುರ್ಮುಖರಾಯರು ಸ್ಥೂಲ ಶರೀರದಿಂದ ಉತ್ಪನ್ನರಾದರು. ಆ ಚತುರ್ಮುಖರಾಯರನ್ನು ಅನುಸರಿಸಿ ವಾಗಭಿಮಾನಿಯಾದ ಸರಸ್ವತೀ ದೇವಿಯು ಶಾಂತಿಯಲ್ಲಿ ಅನಿರುದ್ಧನಿಂದಲೇ ಜನಿಸಿದಳು. ಆ ಸರಸ್ವತಿಯಲ್ಲಿ ಬ್ರಹ್ಮರಾಯರು ಅಹಂಕಾರ ಶರೀರ ಉಳ್ಳ ರುದ್ರದೇವರನ್ನು ಮತ್ತು ಆ ರುದ್ರರ ಅರ್ಧಾಂಗಿಯಾದ ಉಮಾದೇವಿಯನ್ನು ಪಡೆದರು.

ವಿಶೇಷಾರ್ಥ.--ಬ್ರಹ್ಮ, ಸರಸ್ವತೀ, ರುದ್ರ, ಉಮಾ ಇವರ ಉತ್ಪತ್ತಿಯನ್ನು ತಿಳಿಸಿದ್ದರಿಂದ ಅಧಿಕಾರಿಗಳು ಆತ್ಮತತ್ವ, ಶ್ರೀತತ್ವ, ಈ ಎರಡರ ಅಧೀನ ಮಹತ್ತತ್ವವೆಂತಲೂ, ಮತ್ತು ವಾಕ್‌ತತ್ವ ಮಹತ್ತತ್ವದ ಅಧೀನವೆಂತಲು, ಮತ್ತು ವಾಗಭಿಮಾನಿಯ ಅಧೀನ ಅಹಂಕಾರಿಕ ರುದ್ರನೆಂತಲು, ಅರ್ಧಾಂಗಿಯಾದ ಉಮಾದೇವಿಯರು ರುದ್ರನ ಅಧೀನವೆಂಬ ತಾರತಮ್ಯಗಳನ್ನು ತಿಳಿಯಬೇಕು.

ಅವತಾರಿಕೆ.—ರುದ್ರದೇವರಿಂದ ನಡೆದ ಸೃಷ್ಟಿಯನ್ನು ತಿಳಿಸುತ್ತಾರೆ:-

**ಶ್ಲೋಕ॥ ಬುಧ್ಯಾಮುಮಾಯಾಂಸಶಿವಸ್ತ್ರಿರೂಪೋ ಮನಶ್ಚ ವೈಕಾರಿಕ ದೇವಸಂಘಾನ್। ದಶೇಂದ್ರಿಯಾಣ್ಯೇವ ಚ ತೈಜಸಾನಿ ಕ್ರಮೇಣಖಾ ದೀನ್ವಿಷಯೈಶ್ಚ ಸಾರ್ಧಂ ॥೧೭॥**

ಅರ್ಥ.—ಸಃ-ಅಂಥ, ಶಿವಃ=ರುದ್ರದೇವರು, ತ್ರಿರೂಪಃ=ವೈಕಾರಿಕ. ತೈಜಸ, ತಾಮಸವೆಂಬ ಮೂರು ರೂಪ ಉಳ್ಳವರಾಗಿ, ಬುಧ್ಯಾಂ=ಬುದ್ಧಿಗೆ ಅಭಿಮಾನಿಯಾದ ಉಮಾಯಾಂ=ಉಮಾದೇವಿಯಲ್ಲಿ, ಮನಶ್ಚ=ಮನಸ್ಸನ್ನೂ. ವೈಕಾರಿಕದೇವಸಂಘಾನ್=ವೈಕಾರಿಕ ಸಂಬಂಧಿಗಳಾದ ದೇವತೆಗಳನ್ನೂ, ತೈಜಸಾನಿ-ತೇಜಸ್ಸಂಭಂದಿಯಾದ, ದಶೇಂದ್ರಿಯಾಣ್ಯೇವ=ಹತ್ತು ಇಂದ್ರಿಯಗಳನ್ನೂ. ಕ್ರಮೇಣ = ಹಾಗೆಯೇ, ವಿಷಯೈಶ್ಚ=ವಿಷಯಗಳಿಂದ, ಸಾರ್ಧಂ = ಕೂಡಿಕೊಂಡು, ಖಾದೀನ್=ಆಕಾಶಾದಿಗಳನ್ನು, ಸಸರ್ಜ= ಸೃಷ್ಟಿಸಿದರು.

ತಾತ್ಪರ್ಯ — ರುದ್ರದೇವರು ವೈಕಾರಿಕ, ತೈಜಸ, ತಾಮಸವೆಂಬ ಮೂರು ರೂಪದಿಂದ ಬುದ್ಧಿ ಅಭಿಮಾನಿಗಳಾದ ಉಮಾದೇವಿಯಲ್ಲಿ, ವೈಕಾರಿಕ ರೂಪದಿಂದ ಮನಸ್ಸು ಮತ್ತು ದೇವತೆಗಳನ್ನು, ತೈಜಸರೂಪದಿಂದ ಹತ್ತು ಇಂದ್ರಿಯಗಳನ್ನೂ, ತಾಮಸದಿಂದ ವಿಷಯಗಳನ್ನು ಮತ್ತು ಆಕಾಶವನ್ನೂ ಸಹ ಸೃಷ್ಟಿಸಿದರು.

ವಿಶೇಷಾರ್ಥ.—ರುದ್ರದೇವರಿಂದ ಉಮಾದೇವಿಯಲ್ಲಿ ದೇವತೆಗಳು ಜನಿಸಿದರೆಂದು ಹೇಳುವುದರಿಂದಲೂ, ಮತ್ತು ಹತ್ತು ಇಂದ್ರಿಯಗಳನ್ನು ಸೃಷ್ಟಿಸಿದರೆಂದು ಹೇಳುವುದರಿಂದಲೂ, ಆಕಾಶಾದಿಗಳು ಹುಟ್ಟಿದವೆಂದು ಹೇಳುವುದರಿಂದಲೂ, ತಾಮಸ ರುದ್ರ ರೂಪದಿಂದ ವ್ಯಕ್ತವಾದ ವಿಷಯಗಳು ಮತ್ತು ಆಕಾಶಾದಿಗಳು ಇಂದ್ರಿಯಗಳ ಅಧೀನರೆಂತಲೂ, ಇಂದ್ರಿಯಗಳು ತದಭಿಮಾನಿದೇವತೆಗಳ ಅಧೀನರೆಂತಲೂ, ಅಭಿಮಾನಿದೇವತೆಗಳು ತ್ರಿರೂಪರಾದ ಉಮಾಪತಿಗಳಾದ ರುದ್ರರ ಅಧೀನರೆಂದು ತಿಳಿಯಬೇಕೆಂಬ ತಾತ್ಪರ್ಯವನ್ನ ಸೂಚಿಸುತ್ತಾರೆ.

**ಅವತಾರಿಕೆ:—ಪುನಃ ಪುರುಷನಾಮಕ ಬ್ರಹ್ಮನಿಂದ ನಡೆದ ಸೃಷ್ಟಿ** ಯನ್ನು ತಿಳಿಸುತ್ತಾರೆ:—

**ಶ್ಲೋಕ॥ ಪುಂಸಃ ಪ್ರಕೃತ್ಯಾಂಚ ಪುನರ್ವಿರಿಂಚಾತ್ಶಿವೋಥತಸ್ಮಾದಖಿಲಾಃ ಸುರೇಶಾಃ । ಜಾತಾಃಸಶಕ್ರಾಃಪುನರೇವಸೂತ್ರಾ ಚ್ಛ್ರದ್ಧಾಸುತಾನಾಪ ಸುರಪ್ರವೀರಾನ್ ॥೧೮॥**

ಅರ್ಥ.— ಪುಂಸಃ= ಪುರುಷ ಶಬ್ದವಾಚ್ಯನಾದ, ವಿರಿಂಚಾತ್= ಬ್ರಹ್ಮನ ದೆಸೆಯಿಂದ, ಪ್ರಕೃತ್ಯಾಂಚ=ಪ್ರಕೃತಿಶಬ್ದವಾಚ್ಯಳಾದ ಸರಸ್ವತೀದೇವಿಯಲ್ಲಿ, ಪುನಃ=ತಿರುಗಿ, ಶಿವಃ=ರುದ್ರದೇವರು, ಜಜ್ಞೆ=ಹುಟ್ಟಿದರು, ಅಥ= ಅನಂತರದಲ್ಲಿ, ತಸ್ಮಾತ್= ಆ ರುದ್ರದೇವರ ದೆಸೆಯಿಂದ, ಅಖಿಲಾಃ=ಸಮಸ್ತರಾದಂಥ, ಸುರೇಶಾಃ=ದೇವಶ್ರೇಷ್ಠರಾದ, ಸಶಕ್ರಾಃ=ಇಂದ್ರನಿಂದ ಸಹಿತರಾದ ದೇವತೆಗಳು, ಜಾತಾಃ=ಹುಟ್ಟಿದರು, ಪುನರೇವ=ತಿರುಗಿ, ಸೂತ್ರಾತ್=ಸೂತ್ರನಾಮಕ ವಾಯುದೇವರ ದೆಸೆಯಿಂದ, ಶ್ರದ್ಧಾ=ಶ್ರದ್ಧಾನಾಮಕ ಭಾರತೀದೇವಿಯರು, ಸುರಪ್ರವೀರಾನ್=ದೇವಶ್ರೇಷ್ಠರಾದಂಥ, ಸುತಾನ್=ಮಕ್ಕಳನ್ನು, ಆಪ= ಹೊಂದಿದರು.

ತಾತ್ಪರ್ಯ:— ಪುರುಷನಾಮಕ ಬ್ರಹ್ಮನ ದೆಸೆಯಿಂದ (ಪ್ರಧಾನ) ಪ್ರಕೃತಿ, ಶಬ್ದವಾಚ್ಯಳಾದ ಸರಸ್ವತೀದೇವಿಯು ರುದ್ರದೇವರನ್ನ ಪುತ್ರತ್ವೇನ ಪಡೆದಳು, ಆ ರುದ್ರದೇವರ ದೆಸೆಯಿಂದ ಪುನಃ ದೇವತೆಗಳು ಹುಟ್ಟಿದರು. ಮತ್ತು ಸೂತ್ರನಾಮಕ ವಾಯುದೇವರ ದೆಸೆಯಿಂದ ಶ್ರದ್ಧಾನಾಮಕ ಭಾರತೀ ದೇವಿಯರು, ದೇವಶ್ರೇಷ್ಠರಾದ ಇಂದ್ರಾದಿದೇವತೆಗಳನ್ನು ಪಡೆದರು.

ವಿಶೇಷಾರ್ಥ.— ಸೃಷ್ಟಿಯೇ ಮೊದಲಾದ ಕಾರ್ಯಗಳನ್ನು ಮಾಡುವ ಶ್ರೀಹರಿಯು ತನ್ನ ಅಧೀನರಾದ ಬ್ರಹ್ಮ, ರುದ್ರ, ವಾಯು ಮೊದಲಾದ ದೇವತೆಗಳ ಕಡೆಯಿಂದ ಸೃಷ್ಟ್ಯಾದಿಗಳನ್ನು ನಡಿಸಿ ತಾನೇ ಒಳಗೆ ನಿಂತು ಸೃಷ್ಟಿಕರ್ತನೆಂದೆನಿಸಿಕೊಳ್ಳುತ್ತಾನೆ. ಸರ್ವಾಧಿಷ್ಠಾನದಲ್ಲಿ ಇರುವ ಬ್ರಹ್ಮ "ತತ್ರ ತತ್ರ ಸ್ಥಿತೋವಿಷ್ಣುಃ, ತತ್ತಚ್ಛಕ್ತೀಃ ಪ್ರಭೋಧಯನ್," ಎಂಬುವ ಪ್ರಮಾಣಾನುಸಾರ ಆಯಾ ಸ್ಥಳಗಳಲ್ಲಿ ಇರುವ ಶ್ರೀಹರಿಯು ಅದೇ ನಾಮಾಂತರದಿಂದ ಕರಿಸಿಕೊಳ್ಳುತ್ತಾನೆ.

ಅವತಾರಿಕೆ.— ಹಿಂದಿನ ಶ್ಲೋಕದಲ್ಲಿ ಶ್ರದ್ಧಾನಾಮಕ ಭಾರತೀದೇವಿಯರು ದೇವತೆಗಳನ್ನು ಪಡೆದರೆಂದು ಹೇಳಿದ ವಿಷಯವನ್ನು ವಿಸ್ತರಿಸುತ್ತಾರೆ.—

**ಶ್ಲೋಕ॥ ಶೇಷಂಶಿವಂಚೇಂದ್ರಮಥೇಂದ್ರತಶ್ಚ ಸರ್ವೇಸುರಾಯಜ್ಞಗಣಾಶ್ಚ ಜಾತಾಃ ॥೧೯॥**

ಅರ್ಥ.—ಶೇಷಂ=ಶೇಷದೇವರನ್ನು, ಶಿವಂ=ರುದ್ರದೇವರನ್ನು, ಚ=ಮತ್ತು, ಇಂದ್ರಂ=ಇಂದ್ರದೇವರನ್ನು, ಸುತಾ—ಮಕ್ಕಳನ್ನಾಗಿ, ಶ್ರದ್ಧಾ ದೇವಿಯರು ಪಡೆದರೆಂದು ಹಿಂದಿನ ಶ್ಲೋಕದ ಅರ್ಥ. ಅಥ=ಅನಂತರದಲ್ಲಿ, ಇಂದ್ರತಶ್ಚ=ಇಂದ್ರದೇವರಿಂದಲೂ, ಯಜ್ಞಗಣಾಃ=ಯಜ್ಞಾಭಿಮಾನಿಗಳಾದ, ಸರ್ವೇ=ಸಮಸ್ತರಾದ, ಸುರಾಃ=ದೇವತೆಗಳು, ಜಾತಾಃ—ಹುಟ್ಟಿದರು.

ತಾತ್ಪರ್ಯ—ಶ್ರದ್ಧಾನಾಮಕಳಾದ ಭಾರತೀದೇವಿಯು ಸೂತ್ರನಾಮಕ ವಾಯುದೇವರ ದೆಸೆಯಿಂದ ಇಂದ್ರ, ಶೇಷ, ಶಿವ, ಈ ಮೂರು ದೇವತೆಗಳನ್ನು ಪಡೆದಳೆಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಅನಂತರ ಇಂದ್ರದೇವರಿಂದ ಸರ್ವ ಯಜ್ಞಾಭಿಮಾನಿಗಳಾದ ದೇವತೆಗಳು ಅವತಾರ ಮಾಡಿದರೆಂದು ಹೇಳುತ್ತಾರೆ.

ವಿಶೇಷಾರ್ಥ.—ಇಂದ್ರದೇವರಿಗೆ ದೇವೇಂದ್ರತ್ವ ರೂಪವಾದ ನಾಮಾಂಕಿತವನ್ನೂ ಸರ್ವೈಶ್ವರ್ಯ ರೂಪವಾದ ಇಂದ್ರ ಪದವಿಯ ಸುಖಾನುಭವವನ್ನು ಕೊಟ್ಟು, ಸರ್ವ ಯಜ್ಞಗಳಲ್ಲಿ ಯಜ್ಞಮಾನಿಗಳೆಲ್ಲಾ ಇಂದ್ರಾಧೀನರಾಗಿ ಇರುವಂತೆಮಾಡಿ ಯಜ್ಞಗಳನ್ನು ಸಾಂಗವಾಗಿ ನಡಿಸಿ ಯಜಮಾನನ ಇಷ್ಟವನ್ನು ಕೊಡುವವನು ಶ್ರೀಹರಿಯೇ ಆದ್ದರಿಂದ ಸರ್ವ ಯಜ್ಞಮಾನಿಗಳು ಇಂದ್ರದೇವರ ಅಧೀನರೆಂತಲೂ ಇಂದ್ರನು ರುದ್ರಾಧೀನನೆಂತಲೂ ಸರ್ವರೂ ಪರಮಾತ್ಮನ ಅಧೀನರೆಂತಲೂ ತಿಳಿಯಬೇಕೆಂದು ತಾತ್ಪರ್ಯ.

ಅವತಾರಿಕೆ:—ಪುನಃ ವಾಸುದೇವನಿಂದ ನಡೆದ ಸೃಷ್ಟಿಯನ್ನು ತಿಳಿಸುತ್ತಾರೆ:—

**ಶ್ಲೋಕ॥ ಪುನಶ್ಚಮಾಯಾತ್ರಿವಿಧಾ ಬಭೂವಸತ್ವಾದಿ ರೂಪೈರಥವಾಸುದೇವಾತ್ ।ಸತ್ವಾತ್ಮಿಕಾಯಾಂಸಬಭೂವತಸ್ಮಾತ್ಸವಿಷ್ಣುನಾಮ್ನೈವ ನಿರಂತರೋಽಭೂ॥೨೦॥**

ಅರ್ಥ.—ಪುನಶ್ಚ=ತಿರುಗಿ, ಮಾಯಾ=ಮಾಯಾಶಬ್ದವಾಚ್ಯಳಾದ ದೇವಿಯು, ಸತ್ವಾದಿರೂಪೈವ=ಸತ್ವ, ರಜೋ, ತಮಾದಿ ರೂಪಗಳಿಂದ, ತ್ರಿವಿಧಾ=ಮೂರು ವಿಧವುಳ್ಳವಳಾಗಿ, ಬಭೂವ=ಆದಳು, ಅಥ=ಅನಂತರ ದಲ್ಲಿ, ಯಸ್ಮಾತ್=ಯಾವಕಾರಣದಿಂದ, ವಾಸುದೇವಾತ್=ವಾಸುದೇವ ನಿಂದ, ಸತ್ವಾತ್ಮಿಕಾಯಾಂ=ಸತ್ವಗುಣ ಪ್ರವರ್ತಕಳಾದ ಶ್ರೀರೂಪದಲ್ಲಿ, ಸಃ=ಆ ನಾರಾಯಣನೇ, ಬಭೂವ-ಹುಟ್ಟಿದನೋ, ತಸ್ಮಾತ್-ಆ ಕಾರಣ ದದೆಶೆಯಿಂದ, ಸಃ-ಶ್ರೀಹರಿಯು, ನಿರಂತರೋಪಿ-ಯಾವಾಗಲೂ, ವಿಷ್ಣು ನಾಮೈವ=ವಿಷ್ಣು ಎಂಬ ಹೆಸರುಳ್ಳವನೇ.

ತಾತ್ಪರ್ಯ.—ಪುನಃ ಆ ಮಾಯಾದೇವಿಯು, ಸತ್ವ, ರಜ, ತಮ ಎಂಬ ಮೂರು ಗುಣಗಳಿಗೆ ಅಭಿಮಾನಿಯಾಗಿ, ಶ್ರೀ, ಭೂ, ದುರ್ಗಾ ಎಂಬ ಮೂರು ರೂಪವುಳ್ಳವಳಾದಳು. ಆ ಸತ್ವಾಭಿಮಾನಿಯಾದ ಶ್ರೀ ಎಂಬುವ ರಮಾದೇವಿಯಲ್ಲಿ ಆ ವಾಸುದೇವನೇ (ಅಂದರೆ ನಾರಾಯಣನ ಅಭೇದ ರೂ ಪವೆಂದು ತಿಳಿಯಬೇಕು.) ಅವತಾರ ಮಾಡಿರುತ್ತಾನೆ. ಆ ರೂಪಕ್ಕೆ ವಿಷ್ಣು ಎಂದು ಹೆಸರು, ಈ ರೂಪವು ನಿರಂತರವಾದದ್ದು ಮತ್ತು ಅಭೇದವುಳ್ಳದ್ದು.

ವಿಶೇಷಾರ್ಥ.—ಈ ಶ್ಲೋಕದಲ್ಲಿ ವಾಸುದೇವನಿಂದ, ಸತ್ವಾಭಿಮಾನಿ ಯಲ್ಲಿ ವಿಷ್ಣುವು ತಾನೇ ಹುಟ್ಟಿದನೆಂದು ಹೇಳಿದ್ದರಿಂದ ಜನ್ಯ-ಜನಕ ಭೇದ ವನ್ನು ತಿಳಿಸಿದಹಾಗಾಯಿತು. ಪರಮಾತ್ಮನ ರೂಪಗಳಲ್ಲಿ ಈ ರೀತಿಯಾದ ಭೇದವನ್ನು ತಿಳಿಯಬಾರದು. ಅದಕ್ಕಾಗಿಯೇ ನಿರಂತರೋಪಿ ಎಂಬ ಅಭೇ ದವನ್ನು ತಿಳಿಸುವ ಪದವು ಉಪಯೋಗಿಸಲ್ಪಟ್ಟಿದೆ.

ಅವತಾರಿಕೆ.—ವಾಸುದೇವನಿಂದ ನಡೆದ ರಜಸ್ತಮ ಸೃಷ್ಟಿಯನ್ನು ಮತ್ತು ದೇವತೆಗಳ ಸ್ತೋತ್ರವನ್ನೂ ತಿಳಿಸುತ್ತಾರೆ:—

ಶ್ಲೋಕ|| ರಜಸ್ತನೌಚೈವವಿರಿಂಚಆಸೀ ತ್ತಮಸ್ತನೌಶರ್ವಇತಿ ತ್ರಯೋಸ್ಮಾ
ತ್ ಏತೇಹಿದೇವಾಃಪುನರಂಡಸೃಷ್ಟಾವಶಕ್ನುವಂತೋ ಹರಿಮೇ
ತ್ಯತುಷ್ಟುವುಃ ||೨೦||

ಅರ್ಥ.—ರಜಸ್ತಸೌ=ರಜೋಗುಣಾಭಿಮಾನಿಯಾದ ಭೂ ನಾಮಕ ಲಕ್ಷ್ಮೀದೇವಿಯರಲ್ಲಿ, ವಿರಿಂಚಃ=ಬ್ರಹ್ಮದೇವರು, ಆಸೀತ್=ಅವತರಿಸಿದರು. ತಮಸ್ತನೌಚ=ತಮೋಗುಣಾಭಿಮಾನಿಯಾದ ದುರ್ಗಾನಾಮಕ ಲಕ್ಷ್ಮೀದೇವಿಯಲ್ಲಿ, ಶರ್ವ ಇತಿ=ಋದ್ರನು, ಆಸೀತ್=ಅವತರಿಸಿದನು. ಅಸ್ಮಾತ್=ಆ ವಾಸುದೇವನ ದೆಶೆಯಿಂದ, ತ್ರಯಃ=ಬ್ರಹ್ಮ, ವಿಷ್ಣು, ಶಿವ ಎಂಬುವ ಮೂರು ಅವತಾರಗಳೂ, ಅಭವನ್=ಆದವು. ಪುನಃ=ತಿರುಗಿ, ಪೂರ್ವೇ=ಪೂರ್ವದಲ್ಲಿ ಸೃಷ್ಟರಾದ, ದೇವಾಃ=ದೇವತೆಗಳು, ಅಂಡಸೃಷ್ಟೌ=ಬ್ರಹ್ಮಾಂಡವನ್ನು ಸೃಷ್ಟಿಸುವುದಕ್ಕೆ, ಅಶಕ್ನುವಂತಃ=ಶಕ್ತಿಹೀನರಾಗಿ, ಹರಿಂ=ಶ್ರೀನಾರಾಯಣನನ್ನು, ಏತ್ಯ=ಹೊಂದಿ, ತುಷ್ಟುವುಃ=ಸ್ತೋತ್ರಮಾಡಿದರು.

ತಾತ್ಪರ್ಯ.—ರಜೋಭಿಮಾನಿಯಾದ ಭೂದೇವಿಯಲ್ಲಿ ವಾಸುದೇವನೇ ಬ್ರಹ್ಮನೆಂಬ ನಾಮಾಂತರದಿಂದ ಅವತರಿಸಿದನು. ತಮೋಭಿಮಾನಿಯಾದ ದುರ್ಗಾದೇವಿಯಲ್ಲಿ ಶಿವನು ಅವತರಿಸಿದನು. ಈ ವಾಸುದೇವನಿಂದ ಶ್ರೀ ಭೂ, ದುರ್ಗೆಯರೆಂಬ ರಮಾ ರೂಪಗಳಲ್ಲಿ ಪ್ರಾದುರ್ಭೂತವಾದ ಬ್ರಹ್ಮ, ವಿಷ್ಣು, ಶಿವನೆಂಬ ಮೂರು ರೂಪಗಳೂ, ಪರಬ್ರಹ್ಮನಾದ ನಾರಾಯಣನ ರೂಪವೇ ಹೊರತು ಬೇರೆ ಅಲ್ಲವೆಂದು ತಿಳಿಯಬೇಕು. ಈ ರೀತಿ ಆದನಂತರ ಹಿಂದೆ ಸೃಷ್ಟರಾದ ದೇವತೆಗಳು ಬ್ರಹ್ಮಾಂಡವನ್ನು ಸೃಷ್ಟಿಸಲು ಶಕ್ತಿಹೀನರಾಗಿ ಶ್ರೀಹರಿಯನ್ನು ಸ್ತೋತ್ರಮಾಡಿದರು.

ವಿಶೇಷಾರ್ಥ.—ದೇವತೆಗಳು ಬ್ರಹ್ಮಾಂಡವನ್ನು ಸೃಷ್ಟಿಸುವುದಕ್ಕೆ ತಮಗೆ ಶಕ್ತಿ ಇಲ್ಲದೆ ಶ್ರೀಹರಿಯನ್ನು ಸ್ತೋತ್ರ ಮಾಡಿದರೆಂದು ಹೇಳಿದ್ದರಿಂದ ಸೃಷ್ಟಿ, ಸ್ಥಿತಿ, ಲಯಾದಿಗಳು ಶ್ರೀಹರಿಯ ಅಧೀನವೆಂತಲೂ, ಹಿಂದೆ ಹೇಳಿದ ಬ್ರಹ್ಮ, ವಿಷ್ಣು, ಶಿವ ಎಂಬ ಮೂರು ರೂಪಗಳಲ್ಲಿ ಬ್ರಹ್ಮ ರೂಪದಿಂದ ಸೃಷ್ಟಿ, ವಿಷ್ಣು ರೂಪದಿಂದ ಪಾಲನೆ ಶಿವ ರೂಪದಿಂದ ಸಂಹಾರ ಇವುಗಳನ್ನು ಶ್ರೀಹರಿಯೇ ಸ್ವತಂತ್ರನಾಗಿ ಮಾಡುತ್ತಾನೆ ಎಂದು ಸ್ಪಷ್ಟವಾಯಿತು.

ಅವತಾರಿಕೆ.—ದೇವತೆಗಳು ಮಾಡಿದ ಸ್ತೋತ್ರವನ್ನು ತಿಳಿಸುತ್ತಾರೆ:

ಶ್ಲೋಕ || ತ್ವನ್ನೋಜಗಚ್ಚಿತ್ರವಿಚಿತ್ರಸರ್ಗನಿಸ್ಸೀಮಶಕ್ತಿಃಕುರುಸನ್ನಿಕೇತ
ನಂ| ಇತಿಸ್ತುತಸ್ತೈಃ ಪುರುಷೋತ್ತಮೋಽಸೌಸವಿಷ್ಣುನಾಮಾಪಶ್ರಿ
ಯಮಾಪಸೃಷ್ಟಯೇ ||೨೨||

ಅರ್ಥ.—ಹೇ ವಾಸುದೇವ=ಎಲೈ ವಾಸುದೇವನೇ, ತ್ವಂ=ನೀನು, ಜಗಚ್ಚಿತ್ರ ವಿಚಿತ್ರ ಸರ್ಗನಿಸ್ಸೀಮಶಕ್ತಿಃ=ಜಗತ್=ಪ್ರಪಂಚದ, ಚಿತ್ರ=ಆಶ್ಚರ್ಯಕರವಾದ, ವಿಚಿತ್ರ=ನಾನಾ ಪ್ರಕಾರವಾದ, ಸರ್ಗ—ಸೃಷ್ಟಿಮಾಡೋಣದರಲ್ಲಿ, ನಿಸ್ಸೀಮಶಕ್ತಿಃ—ಪೂರ್ಣ ಶಕ್ತಿ ಉಳ್ಳವನು, ತತಃ=ಆ ಕಾರಣದಿಂದ, ನಃ=ನಮ್ಮಗಳಿಗೆ, ಸನ್ನಿಕೇತನಂ=ಸಮೀಚೀನವಾದ ಮನೆಯನ್ನು, ಕುರು=ನಿರ್ಮಿಸು, ಇತಿ=ಹೀಗೆಂದು, ತೈಃ=ಆ ದೇವತೆಗಳಿಂದ, ಸ್ತುತಃ=ಸ್ತೋತ್ರಮಾಡಿಕೊಳ್ಳಲ್ಪಟ್ಟ, ಅಸೌ=ಅಂತಹ, ಪುರುಷೋತ್ತಮಃ=ಪುರುಷಃ=ಕ್ಷರಾಕ್ಷರ ಪುರುಷರುಗಳಿಂದ, ಉತ್ತಮಃ=ಶ್ರೇಷ್ಠನಾದ, ವಿಷ್ಣುನಾಮ, ವಿಷ್ಣು=ವಿಷ್ಣು—ವಿಷ್ಣು ಎಂದು, ನಾಮ=ಹೆಸರುಳ್ಳಂಥ, ಸಃ=ಆ ವಾಸುದೇವನು, ಸೃಷ್ಟಯೆ=ಬ್ರಹ್ಮಾಂಡ ಸೃಷ್ಟಿಗೋಸ್ಕರವಾಗಿ, ಶ್ರಿಯಂ=ರಮಾದೇವಿಯನ್ನು, ಆಪ=ಹೊಂದಿದನು.

ತಾತ್ಪರ್ಯ.—ದೇವತೆಗಳು ಪರಬ್ರಹ್ಮನನ್ನು " ಓ ಸ್ವಾಮಿಯೇ ನೀನು ನಾನಾ ಪ್ರಕಾರವಾದ ಸೃಷ್ಟಿ ಮಾಡುವುದರಲ್ಲಿ ಪೂರ್ಣ ಶಕ್ತಿಯುಳ್ಳವನು ಆದುದರಿಂದ ನಮಗಳಿಗೆ ಒಂದು ಮನೆಯನ್ನು ನಿರ್ಮಿಸು, " ಎಂದು ಸ್ತೋತ್ರ ಮಾಡಿದರು. ಈ ರೀತಿಯಾದ ಸ್ತೋತ್ರವನ್ನು ಮಾಡಿಸಿಕೊಳ್ಳಲ್ಪಟ್ಟ ಪುರುಷೋತ್ತಮನಾದ ವಿಷ್ಣುನಾಮಕನಾದ ಶ್ರೀಹರಿಯು ಬ್ರಹ್ಮಾಂಡವನ್ನು ಸೃಷ್ಟಿಸುವ ಇಚ್ಛೆಯುಳ್ಳವನಾಗಿ ತನಗೆ ನಿಜ ಪತ್ನಿಯಾಗಿ ಸೃಷ್ಟಿಸಾಧಕಳಾದ ಶ್ರೀದೇವಿಯನ್ನು ಹೊಂದಿದನು.

ವಿಶೇಷಾರ್ಥ.—ದೇವತೆಗಳು ಚಿತ್ರವಿಚಿತ್ರ ಶಕ್ತಿ ಉಳ್ಳವನೆಂದು ಸ್ತೋತ್ರಮಾಡಿದರು. ಚಿತ್ರವೆಂಬ ಶಬ್ದ ಪ್ರಯೋಗದಿಂದ, ಜೀವ ಜಡಭೇದ ಇವುಗಳಲ್ಲದೆ ಜೀವರುಗಳಿಗೆ ಇರುವ ಅನಾದಿಯಾದ ಲಿಂಗ, ಅವುಗಳ ಕಾರ್ಯರೂಪವಾದ ಸಂಚಿತ, ಆಗಾಮಿ, ಇವುಗಳಿಗೆ ಬೀಜ ರೂಪವಾದ ಪ್ರಾರಬ್ಧ ಕರ್ಮ ಇವು ನಾನಾ ವಿಧ ಚೇತನರುಗಳಲ್ಲಿಯೂ ಅನುಸರಿಸಿದೆ ಎಂತಲೂ

ಸ್ವತಂತ್ರನಾದ ಶ್ರೀಹರಿಯು ಪಕ್ಷಪಾತವಿಲ್ಲದೆ ಚೇತನರುಗಳನ್ನು ಅವರವರ ಕರ್ಮಾನುಸಾರಸೃಷ್ಟಿಸುವ ಪೂರ್ಣಶಕ್ತಿ ಉಳ್ಳವನೆಂತಲೂ ತಿಳಿಸುತ್ತಾರೆ.

ಅವತಾರಿಕೆ:—ಶ್ರೀಹರಿಯು ಬ್ರಹ್ಮಾಂಡವನ್ನು ಸೃಷ್ಟಿಸಿದ ಪ್ರಕಾರವನ್ನು ಸೂಚಿಸುತ್ತಾರೆ:—

**ಶ್ಲೋ॥ ಸುಷಾವಸ್ಯೈವಾಂಡಮಧೋಕ್ಷಜಸ್ಯ ಶುಷ್ಮಂಹಿರಣ್ಯಾತ್ಮಕಮಂಬು ಮಧ್ಯೇ ತಸ್ಮಿನ್ ಪ್ರವಿಷ್ಟಾ ಹರಿಣೈವ ಸಾರ್ಧಂ ಸರ್ವೇಸ್ಸುರಾಸ್ತಸ್ಯ ಬಭೂವ ನಾಭೇ॥ ಲೋಕಾತ್ಮಕಂಪದ್ಮಮಮುಷ್ಯಮಧ್ಯೆ ಪುನರ್ವಿರಿಂಚೋಜನಿಸದ್ಗುಣಾತ್ಮಾ ॥೨೩॥**

ಅರ್ಥ.—ಸ್ಯೈವ = ಆ ದೇವಿಯು, ಅಧೋಕ್ಷಜಸ್ಯ=ಅಧೋಕ್ಷಜ ಶಬ್ದವಾಚ್ಯನಾದ, ಶ್ರೀಹರಿಯ, ಹಿರಣ್ಯಾತ್ಮಕಂ=ಸ್ವರ್ಣಮಯವಾದ, ಸುಷ್ಮಂ=ವೀರ್ಯವನ್ನು, ಅಂಡಂ=ಬ್ರಹ್ಮಾಂಡರೂಪವಾಗಿ, ಅಂಬುಮಧ್ಯೆ—ಘನೋಧಕದ ಮಧ್ಯದಲ್ಲಿ, ಸುಷಾವ=ವಿಸರ್ಜಿಸಿದಳು, ತಸ್ಮಿನ್=ಆ ಬ್ರಹ್ಮಾಂಡದಲ್ಲಿ, ಹರಿಣೈವ = ಪರಮಾತ್ಮನಿಂದಲೇ, ಸಾರ್ಧಂ = ಕೂಡಿಕೊಂಡು, ಸರ್ವೇಸ್ಸುರಾಃ – ಸಕಲ ದೇವತೆಗಳು, ಪ್ರವಿಷ್ಟಾಃ = ಪ್ರವೇಶಿಸಿದರು. ತಸ್ಯ=ಆ ಹರಿಯ, ನಾಭೇ=ಹೊಕ್ಕಳಿನ ದೆಶೆಯಿಂದ, ಲೋಕಾತ್ಮಕಂ=ಹದಿನಾಲ್ಕು ಲೋಕಗಳಿಗೆ ಆಧಾರವಾದ, ಪದ್ಮಂ—ಕಮಲವು, ಬಭೂವ=ಹುಟ್ಟಿತು. ಅಮುಷ್ಯ—ಆ ಕಮಲದ, ಮಧ್ಯೇ=ಮಧ್ಯದಲ್ಲಿ, ಸದ್ಗುಣಾತ್ಮ, ಸತ್=ಸಮೀಚೀನವಾದ, ಗುಣ=ಗುಣಗಳಿಗೆ, ಆತ್ಮ=ಸ್ವಾಮಿಯಾದ, ವಿರಿಂಚಃ=ಚತುರ್ಮುಖ ಬ್ರಹ್ಮದೇವರು, ಪುನಃ=ತಿರುಗಿ, ಅಜನಿ=ಹುಟ್ಟಿದರು.

ತಾತ್ಪರ್ಯ:—ರಮಾಸಹಾಯನಾದ ದೇವರು ಬ್ರಹ್ಮಾಂಡವನ್ನು ಸೃಷ್ಟಿಸುವುದರಲ್ಲಿ ಹಿರಣ್ಮಯವಾದ ತಮ್ಮ ವೀರ್ಯವನ್ನು ಘನೋದಕದ ಮಧ್ಯದಲ್ಲಿ ವಿಸರ್ಜಿಸಲು ಅದು ಪಂಚಾಶತ್ಕೋಟಿ ವಿಸ್ತೀರ್ಣವುಳ್ಳ ಬ್ರಹ್ಮಾಂಡವಾಯಿತು. ಆ ಬ್ರಹ್ಮಾಂಡದೊಳಗಡೆ ದೇವತೆಗಳು ಹರಿಯಿಂದ ಸಹಿತರಾಗಿ ಪ್ರವೇಶಿಸಿದರು. ಆ ಹರಿಯ ನಾಭಿಯಿಂದ, ಹದಿನಾಲ್ಕು ಲೋಕಗಳಿಗೆ ಆಧಾರಭೂತವಾದ ಪದ್ಮವು ಹುಟ್ಟಿತು. ಆ ಪದ್ಮದೊಳಗೆ ಸಮೀಚೀನ ಗುಣಗಳಿಗೆ ಸ್ವಾಮಿಯಾದ ಚತುರ್ಮುಖಬ್ರಹ್ಮನು ಹುಟ್ಟಿದನು.

ವಿಶೇಷಾರ್ಥ.—ಹಿಂದೆ ಬ್ರಹ್ಮಾಂಡದ ಹೊರಭಾಗದ ಸೃಷ್ಟಿಯನ್ನು ಹೇಳಿ ಅನಂತರ ಬ್ರಹ್ಮಾಂಡವನ್ನ ಸೃಷ್ಟಿಸಿದ ಶ್ರೀಹರಿಯ ವೈಚಿತ್ರವನ್ನು ತಿಳಿಸಿ ತದನಂತರ ಬ್ರಹ್ಮಾಂಡವ ಒಳಗೆ ನಡೆದ ಪದ್ಮ ಸೃಷ್ಟಿಯನ್ನು ತಿಳಿಸಿದರು. ದೇವತೆಗಳು ಹರಿಯಿಂದ ಕೂಡಿ ಒಳಗೆ ಪ್ರವೇಶಿಸಿದರೆಂದು ಹೇಳುವುದರಿಂದ ಪರಬ್ರಹ್ಮನ ಉದರದೊಳಗೆ ಇದ್ದರೇ ಹೊರತು ಹೊರಭಾಗದಲ್ಲಿರಲಿಲ್ಲ. ಪದ್ಮಯೋನಿಯಾದ ಚತುರ್ಮುಖನ ದೇಹದಲ್ಲಿ ಸೇರಿ ಆವನಿಂದಲೇ ಸೃಷ್ಟರಾಗುತ್ತಾರೆ.

ಅವತಾರಿಕೆ:— ಚತುರ್ಮುಖಬ್ರಹ್ಮನ ದೆಶೆಯಿಂದ ಬ್ರಹ್ಮಾಂಡದೊಳಗಡೆ ಸರ್ವದೇವ ಸೃಷ್ಟಿಯನ್ನು ತಿಳಿಸುತ್ತಾರೆ:—

ಶ್ಲೋಕ॥ತಸ್ಮಾತ್ ಪುನಃಸರ್ವಸುರಃಪ್ರಸೂತಾಃ ತೇಜ್ಞಾನಮಾನಾಅಪಿನಿರ್ಣಯಾಯ । ನಿಸ್ಸೃತ್ಯಕಾಯಾದಥಪದ್ಮಯೋನೇಃ ಸಂಪ್ರಾವಿಶನ್ಕ್ರಮಶೋಮಾರುತಾಂತಾಃ ॥೨೪॥

ಅರ್ಥ.—ತಸ್ಮಾತ್=ಆ ಬ್ರಹ್ಮನ ದೆಶೆಯಿಂದ, ಪುನಃ=ತಿರುಗಿ, ಸರ್ವಸುರಾಃ=ಸಕಲದೇವತೆಗಳೂ, ಪ್ರಸೂತಾಃ-ಉತ್ಪನ್ನರಾದರು. ತೇ=ಆ ದೇವತೆಗಳು, ಜ್ಞಾನಮಾನಾಅಪಿ=ವಾಯುದೇವರಿಗೆ ಸರ್ವದೇವಶ್ರೇಷ್ಠತ್ವವನ್ನು ತಿಳಿದವರಾದರೂ, ನಿರ್ಣಯಾಯ=ಲೋಕದಲ್ಲಿ ತಿಳಿಸುವುದಕ್ಕೋಸ್ಕರ, ಪದ್ಮಯೋನೇಃ-ಬ್ರಹ್ಮದೇವರ, ಕಾಯಾತ್=ಶರೀರದಿಂದ, ನಿಸ್ಸೃತ್ಯ=ಹೊರಗೆ ಹೊರಟು, ಅಥ=ಅನಂತರದಲ್ಲಿ, ಕ್ರಮಶಃ=ವಾಗಾದಿ ಇಂದ್ರಿಯ ಮೊದಲು ಕ್ರಮವಾಗಿ, ಮಾರುತಾಂತಾಃ=ವಾಯುದೇವರೇ ಕೊನೆಯುಳ್ಳವರಾಗಿ, ಸಂಪ್ರಾವಿಶನ್=ಪ್ರವೇಶ ಮಾಡಿದರು.

ತಾತ್ಪರ್ಯ.—ಬ್ರಹ್ಮಾಂಡದೊಳಗಡೆ ವಾಸುದೇವನ ನಾಭಿಕಮಲದಲ್ಲಿ ಜನಿಸಿದ ಪದ್ಮದಲ್ಲಿ ಉತ್ಪನ್ನನಾದ ಬ್ರಹ್ಮನ ದೆಶೆಯಿಂದ ಸರ್ವ ದೇವತೆಗಳೂ ಅವತರಿಸಿ, ವಾಯುದೇವರ ಶ್ರೇಷ್ಟತ್ವವನ್ನು ತಿಳಿದವರಾದರೂ ಲೋಕನಿರ್ಣಯಕ್ಕೋಸ್ಕರವಾಗಿ, ಬ್ರಹ್ಮದೇವರ ಅವಯವಗಳಿಂದ ಹೊರಗೆ ಬಂದು ಪುನಃ ಬ್ರಹ್ಮದೇವರ ಶರೀರದಲ್ಲಿ ವಾಯುದೇವರೇ ಕೊನೆಯುಳ್ಳವರಾಗಿ ಅದೂ ಅವಯವಗಳಲ್ಲಿ ಪ್ರವೇಶಿಸಿದರು.

ವಿಶೇಷಾರ್ಥ.—" ಅನಾವೃತ್ತಿಃ ದೇಹಿನಾಂ ದೇಹಪಾತೇ ತಸ್ಮಾದ್ವಾಯುಃ ದೇವದೇವೋವಿಶಿಷ್ಟಃ " ಎಂಬುವ ಪ್ರಮಾಣಾನುಸಾರ ವಾಯುದೇವರಿಗೆ ಸರ್ವದೇವ ಶ್ರೇಷ್ಠತ್ವ ಮತ್ತು ಸರ್ವಜೀವೋತ್ತಮ ಇವುಗಳನ್ನು ಚೇತನರುಗಳಿಗೆ ತಿಳಿಸಿ ಮೋಕ್ಷಾದಿ ಪುರುಷಾರ್ಥವನ್ನು ಕೊಟ್ಟು ಉದ್ಧಾರ ಮಾಡುವುದಕ್ಕಾಗಿ ದೇವತೆಗಳು ದೇಹದಿಂದ ಹೊರಗೆ ಬಂದು ಪುನಃ ಪ್ರವೇಶಿಸಿದರು. ಮೋಕ್ಷಕ್ಕೆ ಹರಿಸರ್ವೋತ್ತಮತ್ವ ಜ್ಞಾನ ಹೇಗೆ ಸಾಧಕವೋ ಹಾಗೆ ವಾಯು ಜೀವೋತ್ತಮತ್ವ ಜ್ಞಾನವೂ ಸಾಧಕವೆಂದು ತಿಳಿಯಬೇಕು.

ಅವತಾರಿಕೆ.—ವಾಯುದೇವರು ದೇಹದಿಂದ ಹೊರಗೆ ಬಂದಮೇಲೆ ಏನು ನಡೆಯಿತು ಎಂಬುವುದನ್ನು ತಿಳಿಸುತ್ತಾರೆ:—

**ಶ್ಲೋಕ॥ ಪಪಾತವಾಯೋರ್ಗಮನಾತ್ ಶರೀರಂ ತಸ್ಯೈವಚಾವೇಶತಉತ್ಥಿತಂ
ಪುನಃ। ತಸ್ಮಾತ್ಸಯೇಕೋ ವಿಬುಧಪ್ರಧಾನ ಇತ್ಯಾಶ್ರಿತಾದೇವಗಣಾ
ಸ್ತಮೇವ ॥೨೫॥**

ಅರ್ಥ.—ವಾಯೋಃ=ವಾಯುದೇವರ, ಗಮನಾತ್=ಹೊರಗೆ ಹೊರಡೋಣದರಿಂದ, ಶರೀರಂ=ಬ್ರಹ್ಮನ ದೇಹವು, ಪಪಾತ=ಬಿದ್ದುಹೋಯಿತು. ತಸ್ಯೈವ=ಆ ವಾಯುದೇವರ, ಆವೇಶತಃ=ಪ್ರವೇಶದಿಂದ, ಪುನಃ=ತಿರುಗಿ, ಉತ್ಥಿತಂ=ಮೇಲಕ್ಕೆದ್ದಿತು. ತಸ್ಮಾತ್=ಆ ಕಾರಣದಿಂದ, ಸಃ=ಆ ವಾಯುದೇವರು, ಏಕಃ=ಒಬ್ಬರೇ, ವಿಬುಧಪ್ರಧಾನ ಇತಿ=ದೇವಶ್ರೇಷ್ಠರೆಂದು ಹೇಳಿ, ದೇವಗಣಾಃ=ದೇವತೆಗಳ ಸಮೂಹವು, ತಮೇವ=ಆ ವಾಯುದೇವರನ್ನೇ, ಆಶ್ರಿತಾಃ=ಹೊಂದಿದರು.

ತಾತ್ಪರ್ಯ.—ದೇಹವನ್ನು ಬಿಟ್ಟು ವಾಯುದೇವರು ಬಂದಮೇಲೆ ಅದು ಬಿದ್ದುಹೋಯಿತು. ತಿರಿಗೂ ಅವರು ಪ್ರವೇಶಿಸಲು ಶರೀರವು ಮೇಲಕ್ಕೆ ಎದ್ದಿತು. ಇದನ್ನು ದೇವತೆಗಳು ನೋಡಿ ಈ ವಾಯುದೇವರು ಒಬ್ಬರೇ ದೇವಶ್ರೇಷ್ಠರೆಂದು ತಿಳಿದು ಸರ್ವರೂ ಆ ವಾಯುದೇವರನ್ನೇ ಆಶ್ರಯಿಸಿದರು.

**ವಿಶೇಷಾರ್ಥ.**—ಬ್ರಹ್ಮವಾಯುಗಳು ಸಮರು, ಮಹತತ್ವಕ್ಕೆ ಇಬ್ಬರೂ ಅಭಿಮಾನಿಗಳು ಆದರೂ ಲೋಕದಲ್ಲಿ ದೇಹಧಾರಣ, ದೇಹ ಪೋಷಣ, ದೇಹದಿಂದ ನಡಿಯುವ ಸಾಧನಗಳು ಇವುಗಳಿಗೆ ಸಾಧಕರಾಗಿ ಪ್ರತಿಬಂಧಕವಿಲ್ಲದೇ ಪುಣ್ಯಪಾಪಾದಿ ಕರ್ಮಗಳನ್ನು, ಮಾಡಿಸಿ ಈಶನ ಅನುಗ್ರಹದಿಂದ ತಾವೂ ತಮ್ಮ ಯಜಮಾನರಂತೆ ಪುಣ್ಯ ಪಾಪಕ್ಕೆ ಸಂಬಂಧಿಸದೆ ಜೀವರುಗಳಿಗೆ ದೇಶ ಕಾಲಾನುಸಾರ ಅಂತಃ ಪ್ರೇರಕರಾಪವರು ಭಾರತೀಶರಾದ ವಾಯುದೇವರ ಹೊರತು ಮಿಕ್ಕವರಿಂದ ಸಾಧ್ಯವಿಲ್ಲ. ಮತ್ತು ದೇವತೆಗಳು ವಾಯುದೇವರನ್ನೇ ಆಶ್ರಯಿಸಿಪರು ಎಂದು ಸೂಚಿಸುವ್ರದರಿಂದ ಜೀವರುಗಳಿಂದ ಅಪೇಕ್ಷಿತವಾದ ಮೋಕ್ಷವನ್ನು ಹರಿಯಾಜ್ಞೆಯಿಂದ ಕೊಡತಕ್ಕವರೂ ಇವರೇ ಎಂದು ತಿಳಿಯಬೇಕು. ಮತ್ತು ಚೇತನರುಗಳು ಹರಿವಾಯುಗಳ ಹೊರತು ಇತರ ದೇವತೆಗಳಿಂದ ಪಡೆದ ವರಗಳು ಅವುಗಳ ಸಂಬಂಧದಿಂದ ಉಂಟಾದ ಫಲಗಳು ನಶ್ವರವೆಂದು ತಿಳಿಯಬೇಕು.

ಅವತಾರಿಕೆ:—ಬ್ರಹ್ಮನ ಶರೀರದಿಂದ ಹೊರಗೆ ವಾಯುದೇವರು ಬರೋಣ, ಒಳಗೆ ಹೋಗೋಣ ಇವುಗಳಿಂದ ವಾಯುದೇವರಿಗೆ ಆತ್ಮನಿಗಿಂತಲೂ, ಶ್ರೇಷ್ಠತ್ವವನ್ನು ತಿಳಿಯಬಾರದೆಂತಲೂ, ದೇಹ ರಕ್ಷಣ ಮಾಡುವ ಶ್ರೀಹರಿಯು ಇರಲಾಗಿ ವಾಯುದೇವರಗಮನದಿಂದ ದೇಹ ಪತನವೆಂದು ಹೇಳಿದ್ದರಿಂದ ದೇವರು, ಬ್ರಹ್ಮದೇವರು, ವಾಯುದೇವರು, ಇವರುಗಳ ಕರ್ತೃತ್ವವನ್ನು ಸೂಚಿಸುತ್ತಾರೆ.—

**ಶ್ಲೋಕ॥ ಹರೇರ್ವಿರಿಂಚಸ್ಯಚಮಧ್ಯಸಂಸ್ಥಿತೇ ಸ್ತದನ್ಯದೇವಾಧಿ ಪತಿಃಸಮಾರುತಃ। ತತೋವಿರಿಂಚೋಭುವನಾನಿಸಪ್ತ ಸಪ್ತಕಾನ್ಯಾಪುಚಕಾರ ಸೋಬ್ಜಾತ್ ॥೨೬॥**

**ಅರ್ಥ.**—ಹರೇಃ=ಶ್ರೀನಾರಾಯಣನು, ವಿರಿಂಚಸ್ಯಚ=ಬ್ರಹ್ಮದೇವರು, ಮಧ್ಯಸಂಸ್ಥಿತೇ=ಪರೀಕ್ಷಾರ್ಥವಾಗಿ ಉದಾಶೀನರಾಗಿರಲಾಗಿ, **ಸಃ**—ಅಂತಹ, ಮಾರುತಃ=ವಾಯುದೇವರು, ತದನ್ಯದೇವಾಧಿಪತಿಃ=ತದನ್ಯ=ಬ್ರಹ್ಮ ಹರಿ ಇವರುಗಳಿಂದ ಭಿನ್ನರಾದ ವಾಣಿ ಮುಂತಾದ, ದೇವಾ=ದೇವ

ತೆಗಳಿಗೆ, ಅಧಿಪತಿಃ=ಸ್ವಾಮಿಯಾದವರು (ಆದರು). ತತಃ=ದೇವತೆಗಳನ್ನು ಸೃಷ್ಟಿಸಿದನಂತರದಲ್ಲಿ, ವಿರಿಂಚಃ=ಬ್ರಹ್ಮದೇವರು, ಸಸಪ್ತಕಾನಿ-ಅಭಿಮಾನಿದೇವತೆಗಳಿಂದ ಸಹಿತವಾದ, ಭುವನಾನಿ=ಲೋಕಗಳನ್ನು, ಸಪ್ತ=ಏಳು ವಿಭಾಗಗಳುಳ್ಳದ್ದನ್ನಾಗಿ, ಅಬ್ಜಾತ್=ಕಮಲದ ದಳೆಯಿಂದ, ಆಸೂ=ಜಾಗ್ರತೆಯಾಗಿ, ಸಃ=ಆ ಬ್ರಹ್ಮದೇವರು, ಚಕಾರ-ಮಾಡಿದರು.

ತಾತ್ಪರ್ಯ.—ವಾಯುದೇವರಿಗೆ ವಾಣಿಯೇ ಮೊದಲಾದ ದೇವಸಮೂಹಕ್ಕೆ ಆಧಿಪತ್ಯವನ್ನು ಕೊಡಬೇಕೆಂದು ಬ್ರಹ್ಮದೇವರೂ ಅವರ ದೇಹದಲ್ಲಿರುವ ಶ್ರೀಹರಿಯೂ ಇವರಿಬ್ಬರೂ ಉದಾಶೀನರಾಗಿದ್ದುದರಿಂದ ದೇಹಪತನವಾಯಿತೆಂದು ತಿಳಿಯಬೇಕು. ಹಿಂದೆ ಬ್ರಹ್ಮದೇವರಿಂದ ದೇವತೆಗಳು ಹುಟ್ಟಿದರೆಂದು ಸೂಚಿಸಿದಮೇಲೆ ಆ ದೇವತೆಗಳನ್ನು ಸೃಷ್ಟಿಸಿದನಂತರವಲ್ಲಿ ಬ್ರಹ್ಮದೇವರು ತಮಗೆ ಆಧಾರವಾದ ಕಮಲದಿಂದ ಲೋಕಗಳನ್ನು ಅವುಗಳ ಅಭಿಮಾನಿದೇವತೆಗಳಿಂದ ಸಹಿತವಾಗಿ ಸೃಷ್ಟಿಸಿದರು.

ವಿಶೇಷಾರ್ಥ:—ಐತರೇಯ ಭಾಷ್ಯ ಪ್ರಮಾಣ:—

ಶ್ಲೋಕ|| ಉದಾಶೀನೌಚ ತಾವಾಸ್ತಾಂ ಕೇಶವಶ್ಚಾಬ್ಜಸಂಭವಃ ।
ತೇಷಾಂ ಬಲಪರೀಕ್ಷಾರ್ಥಮಿತಿ ||

ಭಾ|| ತೃತೀಯ ತಾತ್ಪರ್ಯ.— ಯಜ್ಞಾಂತಸ್ಥಃ ಸ್ವಯಂಪಾದೌ ವಿಸನ್ನೋತ್ಥಾಪಯದ್ಧಃ। ಏಕೋಽಪಿ ಬ್ರಹ್ಮವಾಯೋಸ್ತು ಬಲಜ್ಞಪ್ತ್ಯೈ ಜನಾರ್ದನಃ ತಸ್ಥ ಉತ್ಥಾಪಯಾಮಾಸ ಬ್ರಹ್ಮಾದೇಹಂವಿಶ್ವವಿಭುಃ ||

ಈ ಪ್ರಮಾಣಾನುಸಾರ ಹರಿಯೇ ಸರ್ವಶಕ್ತ ಪ್ರದನೆಂಬಲ್ಲೂ, ಬ್ರಹ್ಮದೇವರು ವಾಯುದೇವರಿಗಿಂತಲೂ ಪದವಿಯಿಂದ ಅಧಿಕರೆಂಬಲ್ಲೂ, ತಿಳಿಸುವುದಕ್ಕಾಗಿ ಬ್ರಹ್ಮ ಹರಿ ಇಬ್ಬರೂ ಉದಾಶೀನರಾಗಿದ್ದರೆಂದು ಹೇಳಿದರು.

ಅವತಾರಿಕೆ:—ಬ್ರಹ್ಮದೇವರು ಕಮಲದಿಂದ ಸೃಷ್ಟಿಸಿದ ಲೋಕಗಳಿಗೆ ಅಭಿಮಾನಿ ದೇವತೆಗಳು ಮತ್ತು ಅವರ ಸಂಬಂಧವನ್ನು ಸೂಚಿಸುತ್ತಾರೆ:—

**ಶ್ಲೋಕ॥ತಸ್ಮಾಚ್ಚ ದೇವಾ ಋಷಯಃ ಪುನಶ್ಚ ವೈಕಾರಿಕಾದ್ಯಾಸ್ಸಶಿವಾ ಬಭೂವುಃ ॥೨೭॥**

**ಅರ್ಥ;**—ತಸ್ಮಾತ್–ಆ ಬ್ರಹ್ಮನ ದೆಶೆಯಿಂದ, ದೇವಾ=ದೇವತೆಗಳು, ಋಷಯಃ=ಋಷಿಗಳು, ಪುನಶ್ಚ–ತಿರುಗಿ, ಸಶಿವಾ=ಶಿವದೇವರಿಂದ ಸಹಿತರಾಗಿ, ವೈಕಾರಿಕಾದ್ಯಾಃ-ವೈಕಾರಿಕ= ವೈಕಾರಿಕವೇ ಆದ್ಯಾಃ=ಮೊದಲಾಗಿಯುಳ್ಳಂಥಾವರುಗಳು, ಬಭೂವುಃ=ಹುಟ್ಟಿದರು.

ತಾತ್ಪರ್ಯ.—ಬ್ರಹ್ಮದೇವರ ದೆಶೆಯಿಂದ ವೈಕಾರಿಕಾಹಂಕಾರದಿಂದ ಉತ್ಪನ್ನರಾದ ಇಂದ್ರಿಯಮಾನಿಗಳಾದ ದೇವತೆಗಳೂ ತೈಜಸಾಹಂಕಾರಮಾನಿಗಳಾದ ಪ್ರಾಣಾದಿಗಳೂ ತಾಮಸಾಹಂಕಾರಮಾನಿಗಳಾದ ಗಣೇಶಾದಿಗಳೂ, ಶಿವದೇವರಿಂದ ಸಹಿತರಾಗಿ ಋಷಿಗಳೂ ಪುನಃ ಹುಟ್ಟಿದರು.

ವಿಶೇಷಾರ್ಥ.—ರುದ್ರದೇವರು ಮೊದಲು ಮನುಷ್ಯಾಂತವಾಗಿ ಸರ್ವಚೇತನರೂ ಪ್ರಾಣಾಧೀನರೆಂತಲೂ, ಪ್ರಾಣರಾಯರು ಶ್ರೀಹರಿಯ ಆಧೀನರೆಂತಲೂ ತಾರತಮ್ಯವನ್ನ ತಿಳಿಯಬೇಕು. ಅಹಂಕಾರ ತತ್ವವು ವೈಕಾರಿಕ, ತೈಜಸ, ತಾಮಸವೆಂದು ಮೂರು ವಿಧ. ತತ್ವಕ್ಕೆ ನಿಯಾಮಕರು ಮುಖ್ಯ ವೃತ್ತಿಯಲ್ಲಿ ವಿರಿಂಚಿ, ವಾಯು, ಅಮುಖ್ಯವೃತ್ತಿಯಲ್ಲಿ ರುದ್ರರು ಮೂರು ರೂಪದಿಂದ ಅಧಿಪತಿಗಳು. ಆದ್ದರಿಂದ ಅಭಿಮಾನಿ ದೇವತೆಗಳೆಲ್ಲರೂ ರುದ್ರಾಧೀನರೆಂದು ತಿಳಿಯಬೇಕು. ಮತ್ತು ತಾಮಸಾಹಂಕಾರಮಾನಿಗಳಿಗಿಂತಲೂ ತೈಜಸಾಹಂಕಾರಮಾನಿಗಳು ಉತ್ತಮರು. ತೈಜಸಾಹಂಕಾರಿಗಳಿಗಿಂತಲೂ ವೈಕಾರಿಕರು ಉತ್ತಮರು. ಈ ರೀತಿಯಾದ ತಾರತಮ್ಯಜ್ಞಾನವು ಮತ್ತು ಸೃಷ್ಟಿಸುವ ಪರಬ್ರಹ್ಮನ ವಿಚಿತ್ರ ಶಕ್ತಿ ಇವುಗಳ ಜ್ಞಾನವು ಅಧಿಕಾರಿಗಳಿಗೆ ಅತ್ಯಾವಶ್ಯಕವೆಂದು ಗ್ರಂಥಕಾರರು ಸೂಚಿಸುತ್ತಾರೆ.

ಅವತಾರಿಕೆ.—ಹಿಂದೆ ಸೃಷ್ಟರಾದರೆಂದು ಹೇಳಿದ ದೇವತೆಗಳ ಸ್ಥಾನಗಳನ್ನು ಸೂಚಿಸುತ್ತಾರೆ—

ಶ್ಲೋಕ॥ ಅಗ್ರೇ ಶಿವೋಽಹಂಭವ ಆಸ ಬುದ್ಧೇ ರುಮಾ ಮನೋಜೌ ಸಹಶಕ್ರಕಾಮೌ। ಗುರುರ್ಮನುರ್ದಕ್ಷ ಉತಾನಿರುದ್ಧಃ ಸ್ಸಹೈವ ಶಚ್ಯಾ ಮನಸಃ ಪ್ರಸೂತಾಃ ॥೨೮॥

ಅರ್ಥ.—ಅಗ್ರೇ=ಆದಿಭಾಗದಲ್ಲಿ, ಶಿವಃ=ರುದ್ರದೇವರು, ಅಹಂಭವ—ಅಹಂಕಾರ ತತ್ವದಿಂದ ಹುಟ್ಟಿದವರು. ಬುದ್ಧೇ—ಬುದ್ಧಿಯ ದೆಶೆಯಿಂದ, ಉಮಾ=ಪಾರ್ವತೀದೇವಿಯರು, ಶಕ್ರಕಾಮೌ-ಶಕ್ರ = ಇಂದ್ರದೇವರು, ಕಾಮ=ಮನ್ಮಥನು, ಸಹ—ಯಮಳರು, ಮನೋಜೌ=ಮನಸ್ಸಿನಿಂದ ಹುಟ್ಟಿದವರು, ಉತ=ಅನಂತರದಲ್ಲಿ, ಗುರು=ಬೃಹಸ್ಪತ್ಯಾಚಾರ್ಯರು, ಮನುಃ=ಸ್ವಾಯಂಭುಮನುಗಳು. ದಕ್ಷ=ದಕ್ಷಪ್ರಜೇಶ್ವರರು, ಅನಿರುದ್ಧ=ಅನಿರುದ್ಧನೂ, ಇವರುಗಳು. ಶಚ್ಯಾ=ಶಚೀದೇವಿಯರಿಂದ. ಸಹೈವ—ಯುಕ್ತರಾಗಿ, ಮನಸಃ—ಮನಸ್ಸಿನಿಂದ, ಪ್ರಸೂತಾಃ=ಹುಟ್ಟಿದರು.

ತಾತ್ಪರ್ಯ.—ಪದ್ಮಕಲ್ಪದಲ್ಲಿ ಚತುರ್ಮುಖರಾಯರಿಂದ ಸೃಷ್ಟಿಯ ಆದಿಭಾಗದಲ್ಲಿ ಮೊದಲು ರುದ್ರದೇವರು ಅಹಂಕಾರತತ್ವದಿಂದ ಹುಟ್ಟಿದರು. ಬುದ್ಧಿಯ ದೆಶೆಯಿಂದ ಉಮಾದೇವಿಯರು ಹುಟ್ಟಿದರು. ಇಂದ್ರಕಾಮರು ಯಮಳರಾಗಿ ಮನಸ್ಸಿನಿಂದ ಹುಟ್ಟಿದರು. ಅದೇ ಮನಸ್ಸಿನಿಂದಲೇ ಬೃಹಸ್ಪತ್ಯಾಚಾರ್ಯರು ಸ್ವಾಯಂಭುಮನುಗಳು, ದಕ್ಷಪ್ರಜೇಶ್ವರರು, ಅನಿರುದ್ಧ ಶಚಿಯಿಂದ ಯುಕ್ತರಾಗಿ ಹುಟ್ಟಿದರು.

ವಿಶೇಷಾರ್ಥ.—ಮನಸ್ಸಿಗೆ ನಿಯಾಮಕರು ರುದ್ರದೇವರು. ಮನಸ್ಸಿನಿಂದ ಹುಟ್ಟಿದವರು ಇಂದ್ರಕಾಮರು. ಈ ರೀತಿ ಹೇಳಿದ್ದರಲ್ಲಿ ಮನಸ್ತತ್ವವೇ ಶರೀರವಾಗಿ ಉಳ್ಳವರು ಇಂದ್ರಕಾಮರೆಂತಲೂ, ಜಡಮನಸ್ಸಿಗೆ ಅಂದರೆ ಮನೋ ಇಂದ್ರಿಯಕ್ಕೆ ನಿಯಾಮಕರು ರುದ್ರರೆಂತಲೂ ಅರ್ಥ- ಅಂದಮೇಲೆ ಇಂದ್ರಾದಿದೇವತೆಗಳಿಗೆ ಸ್ವಾಮಿಯೂ ರುದ್ರರೇ ಎಂದು ತಿಳಿಯಬೇಕು. ಉಮಾದೇವಿಯರು ಬುದ್ಧಿ ತತ್ವವೇ ಶರೀರವಾಗುಳ್ಳವರು, ಅರ್ಥಮಾನಿಗಳು, ವಾಕ್‌ತತ್ವಕ್ಕೆ ನಿಯಾಮಕರು, ಬೃಹಸ್ಪತಿ ಮುಂತಾದವರು ಇಂದ್ರಕಾಮರ ಅನಂತರದಲ್ಲಿ ಮನಸ್ತತ್ವದಿಂದ ಹುಟ್ಟಿದವರಾದರೂ, ಇಂದ್ರಕಾಮರಿಗೆ ಸಮರಲ್ಲವೆಂದು ತಿಳಿಯಬೇಕು.

ಅವತಾರಿಕೆ:—ಅನಂತರ ಸ್ಪಷ್ಟರಾದ ಅಭಿಮಾನಿದೇವತೆಗಳ ಉತ್ಪತ್ತಿಯನ್ನು ತಿಳಿಸುತ್ತಾರೆ:—

**ಶ್ಲೋಕ॥ ಚಕ್ಷುಃಶ್ರುತಿಭ್ಯಾಂಸ್ಪರ್ಶಾತ್ಸಹೈವ ರವಿಃಶಶೀಧರ್ಮ ಇಮೇ ಪ್ರಸೂತಾಃ। ಜಿಹ್ವಾಭವೋ ವಾರಿಪತಿರ್ನಸೋಶ್ಚ ನಾಸತ್ಯದಸ್ರೌ ಕ್ರಮಶಃ ಪ್ರಸೂತಾಃ। ತತಃಸನಾದ್ಯಾಶ್ಚ ಮರೀಚಿಮುಖ್ಯಾಃ ದೇವಾಶ್ಚ ಸರ್ವೇ ಕ್ರಮಶಃಪ್ರಸೂತಾಃ ॥೨೯॥**

ಅರ್ಥ.—ಚಕ್ಷುಃ=ಕಣ್ಣು. ಮತ್ತು, ಶ್ರುತಿಭ್ಯಾಂ=ಕಿವಿಗಳಿಂದ. ಸ್ಪರ್ಶಾತ್=ಶರ್ಶ್ಯಂದ್ರಿಯದಿಂದ. ಸಹೈವ=ಯುಕ್ತವಾಗಿ. ರವಿಃ=ಸೂರ್ಯದೇವರು, ಶಶೀ=ಚಂದ್ರದೇವರು, ಧರ್ಮ=ಧರ್ಮದೇವರು, ಇಮೇ=ಈ ಮೂರು ಮಂದಿಯು, ಪ್ರಸೂತಾಃ=ಹುಟ್ಟಿದರು, ವಾರಿಪತಿಃ=ವಾರಿ=ಉದಕಕ್ಕೆ, ಪತಿಃ=ಅಧಿಪತಿಯಾದ ವರುಣದೇವರು, ಜಿಹ್ವಾಭವಃ=ಜಿಹ್ವಾ= ನಾಲಿಗೆಯಿಂದ, ಭವಃ=ಉತ್ಪನ್ನರಾದರು, ನಾಸತ್ಯದಸ್ರೌ=ಅಶ್ವಿನೀದೇವತೆಗಳು, ನಸೋಶ್ಚ=ಮೂಗಿನಿಂದ, ಕ್ರಮಶಃ=ಅನುಸರಿಸಿಕೊಂಡು, ಪ್ರಸೂತಾಃ=ಹುಟ್ಟಿದರು ತತಃ=ಅನಂತರದಲ್ಲಿ, ಸನಾದ್ಯಾಶ್ಚ=ಸನಕಾದಿಗಳು, ಮರೀಚಿಮುಖ್ಯಾಃ=ಮರೀಚಿ=ಮರೀಚಿಋಷಿಗಳೇ, ಮುಖ್ಯಾಃ=ಮೊದಲಾದ ಋಷಿಗಳೂ, ಸರ್ವೇ=ಸಮಸ್ತರಾದ, ದೇವಾಶ್ಚ=ದೇವತೆಗಳೂ, ಕ್ರಮಶಃ=ಕ್ರಮವಾಗಿ, ಪ್ರಸೂತಾಃ=ಹುಟ್ಟಿದರು.

ತಾತ್ಪರ್ಯ.—ಕಣ್ಣಿನಿಂದ ಸೂರ್ಯನು, ಕಿವಿಯಿಂದ ಚಂದ್ರನೂ, ಶರ್ಶ್ಯಂದ್ರಿಯದಿಂದ ಯಮನೂ, ಹುಟ್ಟಿದರು. ನಾಲಿಗೆಯಿಂದ ವರುಣನೂ. ಮೂಗಿನಿಂದ ಅಶ್ವಿನೀದೇವತೆಗಳೂ ಕ್ರಮದಿಂದ ಹುಟ್ಟಿದರು. ಸನಕಾದಿ ಜ್ಞಾನಯೋಗಿಗಳು ಮರೀಚ್ಯಾದಿ ಋಷಿಗಳೂ, ದೇವತೆಗಳೂ ಸಹ ಹುಟ್ಟಿದರು.

ವಿಶೇಷಾರ್ಥ.—ಈ ಶ್ಲೋಕದಲ್ಲಿ ಅಶ್ವಿನೀ ದೇವತೆಗಳ ಪರ್ಯಂತರ ಹೇಳಿ ನಂತರದಲ್ಲಿ ಸನಕಾದಿಗಳೂ, ಮತ್ತು ಋಷಿಗಳೂ ದೇವತೆಗಳೂ ಹುಟ್ಟಿದರು ಎಂದು ಹೇಳಿದ್ದರಿಂದ ತತ್ವದೇವತೆಗಳಲ್ಲದ ಮತ್ತು ತತ್ವಕ್ಕೆ ಸೇರದ ಕರ್ಮಜ ಮತ್ತು ಆಜಾನಜ ಈ ಗುಂಪಿಗೆ ಸೇರಿದ ದೇವತೆಗಳೆಂದು ತಿಳಿಯಬೇಕು. ಆದರೆ ತತ್ವದೇವತೆಗಳಲ್ಲಿ ಒಬ್ಬರ ಹೆಸರು ಮಟ್ಟಿಗೆ ಹೇಳಿ,

ಮಿಶ್ರವಾದ ಹೆಸರನ್ನು ಹೇಳದೆ ಇರುವುದರಿಂದ ಇತರ ಸ್ಥಳಗಳಲ್ಲಿ ಹೇಳಿದ ವಚನಗಳಿಂದ ಒಂದೊಂದು ತತ್ವಕ್ಕೆ ನಿಯಾಮಕರಾದ ದೇವತೆಗಳೆಲ್ಲರೂ ಗ್ರಾಹ್ಯರೆಂದು ತಿಳಿಯಬೇಕು.

ಅವತಾರಿಕೆ.—ಕ್ರಮ ಪ್ರಾಪ್ತವಾದ ಸೃಷ್ಟಿಯನ್ನು ಸೂಚಿಸುತ್ತಾರೆ:-

**ಶ್ಲೋ॥ ತತೋಽಸುರಾದ್ಯಾ ಋಷಯೋಽಮನುಷ್ಯಾ ಜಗದ್ವಿಚಿತ್ರಂಚ ವಿರಿಂಚತೋಽಭೂತ್ ॥೩೦॥**

ಅರ್ಥ.—ತತಃ=ದೇವತೆಗಳ ಉತ್ಪತ್ತಿಯಾದನಂತರದಲ್ಲಿ, **ಅಸುರಾ** ದ್ಯಾಃ=ಅಸುರ=ದೈತ್ಯರುಗಳೇ, ಆದ್ಯಾ=ಮೊದಲಾಗಿ ಉಳ್ಳ, ಋಷಯಃ= ಋಷಿಗಳೂ, ಮನುಷ್ಯಾಃ=ಮನುಷ್ಯರುಗಳೂ, ಇವರೇ **ಮೊದ** ಲಾಗಿ ಉಳ್ಳ, ಜಗದ್ವಿಚಿತ್ರಂಚ-ಜಗತ್=ಪ್ರಪಂಚದ, ವಿಚಿತ್ರಂಚ=ಭಿನ್ನ ಸೃಷ್ಟಿಯು, ವಿರಿಂಚತಃ=ಬ್ರಹ್ಮದೇವರಿಂದ, ಅಭೂತ್=ಆಯಿತು.

ತಾತ್ಪರ್ಯ.—ದೇವತೆಗಳು ಸೃಷ್ಟಿಯಾದನಂತದಲ್ಲಿ ದೈತ್ಯರು, ರಾಕ್ಷಸರು, ಋಷಿಗಳು, ಮನುಷ್ಯರು, ಇವರೇ ಮೊದಲಾಗಿ ಉಳ್ಳ ಪ್ರಪಂಚದ ಭಿನ್ನಭಿನ್ನವಾದ ಸೃಷ್ಟಿಯು ಬ್ರಹ್ಮದೇವರಿಂದ ಆಯಿತು.

ವಿಶೇಷಾರ್ಥ.—ಬ್ರಹ್ಮದೇವರಿಂದ ಸೃಷ್ಟಿಯಾಯಿತೆಂದು ಹೇಳುವುದರಿಂದ ವಾಗೀಶನಾದ ಬ್ರಹ್ಮನೇ ಸೃಷ್ಟಿಸಿದನೆಂದು ತಿಳಿಯಬಾರದು. ಪ್ರಮಾಣ, ಶ್ಲೋಕ, “ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇಸ್ಥಿತಃ” ಈ ಪ್ರಮಾಣಾನುಸಾರ ಬ್ರಹ್ಮದೇವರಲ್ಲಿ, ಬ್ರಹ್ಮನೆಂಬ ವಾಸುದೇವ ರಜೋಭಿಮಾನಿಯಾದ, ಮಾಯಾದೇವಿಯಲ್ಲಿ ಅವತರಿಸಿದ ವಿಷ್ಣುವೇ ಬ್ರಹ್ಮರೂಪನೆಂದು ಮೇಲೆ ಹೇಳಿದ ಚತುರ್ಮುಖಬ್ರಹ್ಮನಲ್ಲಿ ಪ್ರವೇಶಿಸಿ ಸೃಷ್ಟಿಸಿದನೆಂದು ತಿಳಿಯಬೇಕು. ಸೃಷ್ಟಿಸುವುದಕ್ಕೆ ಬ್ರಹ್ಮನಲ್ಲಿ ಪ್ರವೇಶ ಮಾಡಿದಂತೆ ಶಿವರೂಪಿಯಾದ ರುದ್ರನಲ್ಲಿ ರುದ್ರಶಬ್ದ ವಾಚ್ಯನಾಗಿ ಪರಮಾತ್ಮನೇ ನಿಂತು ಸಂಹಾರ ಕಾರ್ಯವನ್ನು ಮಾಡುತ್ತಾನೆಂದು ತಿಳಿಯಬೇಕು.

**ಅವತಾರಿಕೆ.**—ಅಧಿಕಾರಿಗಳಿಗೆ ಸೃಷ್ಟಿ ಕರ್ತೃತ್ವ ಜ್ಞಾನ ಹೇಗೆ ಅಪೇಕ್ಷಿತವೋ ಹಾಗೆ ತಾರತಮ್ಯ ಜ್ಞಾನವು ಅಪೇಕ್ಷಿತವೆಂದು ತಿಳಿದು ಸೃಷ್ಟಿಯ ತಾರತಮ್ಯವನ್ನು ಸೂಚಿಸುತ್ತಾರೆ:—

**ಶ್ಲೋಕ॥ ಉಕ್ತ ಕ್ರಮಾತ್ಪೂರ್ವಭವಶ್ಚ ಯೋಯಃ ಶ್ರೇಷ್ಠಃಸಸಹ್ಯಾಸುರಕಾನೃತೇಚ। ಪೂರ್ವಶ್ಚ ಪಶ್ಚಾತ್ಪುನರೇವಜಾತೋ ನಾಶ್ರೇಷ್ಠತಾಮೇತಿಕಥಂಚಿದಸ್ಯ ।।ಗುಣಾಸ್ತು ಕಾಲಾತ್ಪಿತೃಮಾತೃ ದೋಷಾತ್ಸ್ವಕರ್ಮತೋವಾಭಿಭವಂಪ್ರಯಾಂತಿ ॥೩೧॥**

ಅರ್ಥ.—ಉಕ್ತ=ಹಿಂದೆ ಹೇಳಲ್ಪಟ್ಟ, ಕ್ರಮಾತ್=ಕ್ರಮದಿಂದ, ಯೋಯಃ=ಯಾರ್ಯಾರು, ಪೂರ್ವಭವಶ್ಚ—ಪೂರ್ವ=ಮೊದಲಿನಲ್ಲಿ, ಭವಶ್ಚ=ಉತ್ಪನ್ನರಾದವರೋ, ಸಸಃ=ಅವರು, ಅಸುರಕಾನ್=ದೈತ್ಯರುಗಳನ್ನು, ಋತೇಚ=ಬಿಟ್ಟು, ಶ್ರೇಷ್ಠಃ=ಉತ್ತಮರು. ಪೂರ್ವಶ್ಚ=ಮೊದಲು ಹುಟ್ಟಿದವರೇ, ಪುನರೇವ=ತಿರುಗೀನೂ, ಪಶ್ಚಾತ್=ಅನಂತರದಲ್ಲಿ, ಜಾತಃ=ಹುಟ್ಟಿತ್ತಾರೆಯೋ, ಅಸ್ಯ=ಆ ಹುಟ್ಟಿದವರಿಗೆ, ಕಥಂಚಿತ್=ಯಾವಾಗಲೂ, ಅಶ್ರೇಷ್ಠತಾಂ=ಶ್ರೇಷ್ಠತ್ವವಲ್ಲದೇ ಇರೋಣವನ್ನು, ನೇತಿ=ಹೋಗಲಾರದು. ಗುಣಾಸ್ತು—ಜ್ಞಾನಾನಂದಾದಿಗುಣಗಳಾದರೂ, ಕಾಲಾತ್=ಕೃತ, ತ್ರೇತಾದಿ ಕಾಲ ವಿಶೇಷಣಗಳಿಂದಲೂ, ಪಿತೃಮಾತೃದೋಷಾತ್=ತಾಯಿತಂದೆಗಳ ಸಂಬಂಧ ಮತ್ತು ಮಾನುಷಾನ್ನ ಭೋಜನದ ದೆಶೆಯಿಂದ, ಸ್ವಕರ್ಮತೋವ=ಪ್ರಾರಬ್ಧ ಕರ್ಮದ ದೆಶೆಯಿಂದಲೂನೂ, ಅಭಿಭವಂ—ವ್ಯಕ್ತವಾಗದೇ ಇರುವಂತೆ, ಪ್ರಯಾಂತಿ=ಆಗುತ್ತದೆ.

ತಾತ್ಪರ್ಯ.—ಪೂರ್ವದಲ್ಲಿ ಹೇಳಿದ ಕ್ರಮದಿಂದ ದೈತ್ಯರು ಹೊರತು ಯಾರು ಮೊದಲು ಹುಟ್ಟಿದವರೋ ಅವರೇ ಶ್ರೇಷ್ಠರು. ಒಂದು ಸೃಷ್ಟಿಯಲ್ಲಿ ಮೊದಲು ಹುಟ್ಟಿ ಅಂದರೆ ಪದ್ಮ ಸೃಷ್ಟಿಯಲ್ಲಿ ಮೊದಲು ಹುಟ್ಟಿ ಮನುಸೃಷ್ಟಿಯಲ್ಲಿ ತನಗಿಂತಲೂ, ಹಿಂದೆ ಹುಟ್ಟಿದವರ ಅನಂತರದಲ್ಲಿ ತಾನು ಹುಟ್ಟುವುದರಿಂದ ಪದ್ಮಸೃಷ್ಟಿಯಲ್ಲಿ ಹುಟ್ಟಿದ ಶ್ರೇಷ್ಠತ್ವ ಧರ್ಮ ಹೋಗುವುದಿಲ್ಲ. ಒಂದು ವೇಳೆ ಮನುಕಲ್ಪ ಸೃಷ್ಟಿಯಲ್ಲಿ ಜ್ಞಾನಾದಿಗಳು ಕಮ್ಮಿಯಾಗಿ ಕಂಡುಬರುವುದಲ್ಲಾ ಅಂದರೆ ಕಾಲ, ದೋಷದಿಂದಲೂ, ಮಾನುಷಾನ್ನಭುಕ್ತರಾದ ಮಾತಾಪಿತೃ ಸಂಬಂಧದಿಂದ ಕಡೆಮೆಯಾದಂತೆ ತಿಳಿಯುತ್ತದೆ.

ವಿಶೇಷಾರ್ಥ.—ದೇವತೆಗಳು ಸೃಷ್ಟಿಕ್ರಮಗಳಲ್ಲಿ ಅವತರಿಸಿದ ಕಾಲ ದಲ್ಲಿ ಜ್ಞಾನಾದಿಗಳು ಕಮ್ಮಿಯಾದದ್ದರಿಂದ ತಾರತಮ್ಯ ಜ್ಞಾನವು ಆ ಕಥೆ ಗಳು ಕೇಳುವುದರಿಂದ ಡೋಲಾಯಮಾನವಾಗಬಹುದು. ಅಧಿಕಾರಿಗಳು ಅದಕ್ಕೆ ಅವಕಾಶಕೊಡದೆ ಪದ್ಮಸೃಷ್ಟಿಯಲ್ಲಿ ಹೇಳಿದ ತಾರತಮ್ಯ ಯಾವ ಕಾಲದಲ್ಲೂ ಜ್ಞಾನಾದಿಗಳಿಂದ ಕಡಿಮೆಯಾಗುವುದಿಲ್ಲವೆಂದು ತಿಳಿಯಬೇಕು.

ಅವತಾರಿಕೆ:—ಲಯ ಕ್ರಮವೇ ಉತ್ಪತ್ತಿಕ್ರಮವೆಂದು ಏಕೆ ಹೇಳಬಾ ರದೆಂಬುವುದನ್ನು ತಿಳಿಸುತ್ತಾರೆ:-

**ಶ್ಲೋಕ॥ಲಯೋಭವೇದ್ವ್ಯುತ್ಕ್ರಮತೋಹಿತೇಷಾಂತತೋಹರಿಃ ಪ್ರಳಯೇ ಶ್ರೀಸಹಾಯಃ। ಶೇತೇನಿಜಾನಂದಮಮಂದಸಾಂದ್ರ ಸಂದೋಹ ಮೇಕೋಽನುಭವನ್ ಅನಂತಃ ॥೩೨॥**

ಅರ್ಥ.—ತೇಷಾಂ=ಪೂರ್ವದಲ್ಲಿ ಸೃಷ್ಟರಾದವರಿಗೆ, ವ್ಯುತ್ಕ್ರಮ ತಃ=ಭಿನ್ನಕ್ರಮದಿಂದ, ಲಯಃ = ನಾಶವು, ಭವೇತ್ = ಆಗುತ್ತದೆ, ತತಃ=ಅನಂತರದಲ್ಲಿ, ಶ್ರೀಸಹಾಯಃ=ರಮಾ ಸಹಾಯನಾದ, ಹರಿಃ-ಶ್ರೀ ನಾರಾಯಣದೇವರು, ಅಮಂದಸಾಂದ್ರಸಂದೋಹಂ=ಅಮಂದ = ಪೂರ್ಣ ವಾದ, ಸಾಂದ್ರ=ತುಂಬಿದ, ಸಂದೋಹಂ=ಸಮುದಾಯ ರೂಪವಾದ, ನಿಜಾನಂದಂ=ಸ್ವರೂಪಾನಂದವನ್ನು, ಅನುಭವನ್‌ಸನ್-ಅನುಭವಿಸತಕ್ಕವ ನಾಗಿ, ಅನಂತಃ=ಕಾಲದೇಶ ಗುಣಗಳಿಂದ ಪೂರ್ಣನಾದ ಶ್ರೀಹರಿಯು ಶೇತೆ-ಮಲಗಿರುತ್ತಾನೆ.

ತಾತ್ಪರ್ಯ.—ಜಗತ್ತಿನಲ್ಲಿ ಸೃಷ್ಟರಾದ ದೇವಾದಿ ಚೇತನರುಗಳಿಗೆ ಲಯವು ಹೇಗೆಂದರೆ:—ಕಾರ್ಯ ಪದಾರ್ಥಗಳಿಗೆ ಕಾರಣಗಳಲ್ಲಿ ಹೇಗೆ ಲಯು ವೋ ಹಾಗೆ, ಕೊನೆಯಲ್ಲಿ ಹುಟ್ಟಿದವರಿಗೆ ತಮಗಿಂತಲೂ ಪೂರ್ವದಲ್ಲಿ ಹು ಟ್ಟಿದವರಲ್ಲಿ ಬ್ರಹ್ಮಾದಿ ಪರ್ಯಂತವಾಗಿ ವಿರುದ್ಧ ಕ್ರಮದಿಂದ ಲಯವೆಂದು ತಿಳಿಯಬೇಕು. ಸರ್ವರನ್ನ ಲಯ ಮೂಲಕ ಹೊಂದಿದ ಬ್ರಹ್ಮ ಪರ ಬ್ರಹ್ಮನಲ್ಲಿ ಲಯ ಹೊಂದುವನು. ಪರಬ್ರಹ್ಮನು ರಮಾ ಸಹಾಯನಾಗಿ ಪೂರ್ಣಾನಂದದಿಂದ ಪ್ರಳಯದಲ್ಲಿ ತಾನೊಬ್ಬನೇ ಆನಂದ ರೂಪಿಯಾಗಿ ಮಲಗಿರುತ್ತಾನೆ.

**ವಿಶೇಷಾರ್ಥ.**—ಪ್ರಳಯಕಾಲದಲ್ಲಿ ಪರಬ್ರಹ್ಮನಾದ ನಾರಾಯಣನೊಬ್ಬನೇ ಇರುತ್ತಾನೆ. ಅವನು ನಾಶಹೊಂದುವ ದೇಹವುಳ್ಳವನಲ್ಲ. ಸರ್ವದಾ ಪೂರ್ಣನು. ಬ್ರಹ್ಮ ಮೊದಲಾದ ಅಶೇಷ ಚೇತನರುಗಳಿಗೆ ಸೃಷ್ಟಿಕರ್ತನು ಮತ್ತು ಸಂಹಾರಕರ್ತನು. ಈ ಜ್ಞಾನವು ಅತ್ಯಾವಶ್ಯಕವೆಂದು ತಿಳಿಯಬೇಕು. ಮತ್ತು ಲಯ ಕ್ರಮದಿಂದ ತಾರತಮ್ಯ ಕ್ರಮವನ್ನು ತಿಳಿಯಬಹುದಾದರೂ ಸೃಷ್ಟಿಕ್ರಮವನ್ನು ಬಿಟ್ಟು ಲಯ ಕ್ರಮವು ಪ್ರತ್ಯೇಕವಾದ್ದರಿಂದ ತಿಳಿಯಲು ಸಾಧ್ಯವಲ್ಲ.

ಅವತಾರಿಕೆ.—ಪ್ರಳಯಕಾಲದಲ್ಲಿ ಯಾವ ಪದಾರ್ಥವೂ ಇರುವುದಿಲ್ಲ ಶ್ರೀಪರಮಾತ್ಮನು ಆನಂದ ಉಳ್ಳವನಾಗಿರುತ್ತಾನೆ. ಇತರ ಕಾಲದಲ್ಲಿ ಶ್ರೀಪರಮಾತ್ಮನು ಆನಂದಾನುಭವ ಇಲ್ಲನೆಂದು ತಿಳಿಯಬಾರದು. ಶ್ರೀಹರಿಯು ಸರ್ವದಾ ಆನಂದ ಪೂರ್ಣನೆಂಬುವುದನ್ನು ತಿಳಿಸುತ್ತಾರೆ:—

**ಶ್ಲೋಕ ॥ ಅನಂತಶೀರ್ಷಾಸ್ಯಕರೋರುಪಾದಃಸೋಽನಂತಮೂರ್ತಿಃ ಸ್ವಗುಣಾನನಂತಾನ್ । ಅನಂತಶಕ್ತಿಃ ಪರಿಪೂರ್ಣಭೋಗೋ ಭುಂಜನ್ನಜಸ್ರಂನಿಜರೂಪಆಸ್ತೇ ॥೩೩॥**

ಅರ್ಥ.—ಯಃ=ಯಾವ ಪರಬ್ರಹ್ಮನು, ಅನಂತಶೀರ್ಷಾಸ್ಯಕರೋರುಪಾದಃ=ಅನಂತ=ಅಪಾರವಾದ, ಶೀರ್ಷಾ=ಶಿರಸ್ಸುಗಳು, ಆಸ್ಯ=ಮುಖಗಳು, ಕರ=ಕೈಗಳು, ಊರು=ತೊಡೆಗಳು, ಪಾದಃ=ಪಾದಗಳು, ಇವುಗಳನ್ನುಳ್ಳವನೋ, ಅನಂತಮೂರ್ತಿಃ=ಅನಂತ=ಅಪಾರವಾದ, ಮೂರ್ತಿ=ರೂಪ ಉಳ್ಳವನೋ, ಅನಂತಶಕ್ತಿಃ=ಅನಂತ=ಪೂರ್ಣವಾದ, ಶಕ್ತಿಃ=ಶಕ್ತಿಯುಳ್ಳವನೋ, ಪರಿಪೂರ್ಣಭೋಗಃ=ಪೂರ್ಣ ಸುಖ ಉಳ್ಳವನೋ, ಸಃ=ಆ ನಾರಾಯಣದೇವರು, ಅನಂತಾನ್=ಅಪಾರವಾದ, ಸ್ವಗುಣಾನ್=ಸ್ವರೂಪಭೂತವಾದ ಗುಣಗಳನ್ನು, ಅಜಸ್ರಂ=ನಿರಂತರದಲ್ಲಿಯೂ, ಭುಂಜನ್=ಅನುಭವಿಸತಕ್ಕವನಾಗಿ, ನಿಜರೂಪಃ = ಸ್ವ ಸ್ವರೂಪಿಯಾಗಿ, ಆಸ್ತೇ=ಇದ್ದಾನೆ.

ತಾತ್ಪರ್ಯ— ಯಾವ ಶ್ರೀ ಹರಿಯು ಅನಂತ ತಲೆಗಳೂ, ಮುಖ, ಕೈ, ತೊಡೆ, ಪಾದ, ಇವುಗಳನ್ನುಳ್ಳವನೋ, ಅಪಾರವಾದ ರೂಪಗಳುಳ್ಳವನೋ ಪೂರ್ಣ ಶಕ್ತನೋ, ನಿಬಿಡವಾದ ಆನಂದಾನುಭವ ಮಾಡತಕ್ಕವನೋ ಅಂತಹ ದೇವನು ಸ್ವರೂಪಭೂತವಾದ ಜ್ಞಾನಾನಂದಾದಿ ಗುಣಗಳನ್ನು ನಿರಂತರವಲ್ಲಿಯೂ ಅನುಭವಿಸುತ್ತಾ ಇರುತ್ತಾನೆ.

ವಿಶೇಷಾರ್ಥ.— ಈ ಶ್ಲೋಕದಲ್ಲಿ ಅನಂತ ಎಂಬ ಶಬ್ದ ಪ್ರಯೋಗದಿಂದ ಕಾಲತಃ, ದೇಶತಃ, ಗುಣತಃ, ವ್ಯಾಪ್ತನಾದ್ದರಿಂದ ಅನಂತಶಬ್ಧವಾಚ್ಯನೆಂದು ತಿಳಿಯಬೇಕು. “ ಸಹಸ್ರಶೀರ್ಷಾ ಪುರುಷಃ ” ಎಂದು ಪುರುಷಸೂಕ್ತದಲ್ಲಿ ಪ್ರತಿಪಾದ್ಯವಾದ ಮಹಿಮೆಯುಳ್ಳವನೆಂದು ತಿಳಿಯಬೇಕು.

ಅವತಾರಿಕೆ:— ಈ ರೀತಿ ಪ್ರಳಯಕಾಲದಲ್ಲಿ ಸಕಲ ಪದಾರ್ಥಗಳೂ ನಷ್ಟವಾಗಿರಲು ಪುನಃ ಸೃಷ್ಟಿಯುಂಟೇ ಇಲ್ಲವೇ ಎಂಬುವುದನ್ನು ತಿಳಿಸುತ್ತಾರೆ:—

**ಶ್ಲೋಕ॥ ಏವಂಪುನಃ ಸೃಜತೇಸರ್ವಮೇತ ದನಾದ್ಯನಂತೋಹಿಜಗತ್ ಪ್ರವಾಹಃ। ನಿತ್ಯಾಹಿಜೀವಾಃಪ್ರಕೃತಿಶ್ಚ ನಿತ್ಯಾಕಾಲಶ್ಚ ನಿತ್ಯಃ ಕಿಮುದೇವದೇವಃ॥೨೪॥**

ಅರ್ಥ.— ಏವಂ = ಪೂರ್ವೋಕ್ತಪ್ರಕಾರವಾಗಿ, ಪುನಃ = ಮತ್ತೆ, ಸರ್ವಂ—ಸಮಸ್ತವಾದ, ಏತತ್= ಈ ಜಗತ್ತು, ಸೃಜತೇ=ಸೃಷ್ಟಿಸಲ್ಪಡುತ್ತದೆ. ಜಗತ್ ಪ್ರವಾಹ=ಜಗತ್=ಜಗತ್ತಿನ, ಪ್ರವಾಹ = ಪ್ರವಾಹರೂಪವಾದ, ಸೃಷ್ಟಿ ಸ್ಥಿತಿಲಯಾದಿಗಳು, ಅನಾದ್ಯನಂತಃ—ಅನಾದಿಯಾಗಿ ಪ್ರವಾಹದಂತೆ ಇರತಕ್ಕದ್ದು. ಹಿ=ಇದು ಪ್ರಸಿದ್ಧವು, ಜೀವಾಃ=ಜೀವರುಗಳು, ನಿತ್ಯಾಹಿ= ನಿತ್ಯರು, ಪ್ರಕೃತಿಶ್ಚ=ಪ್ರಕೃತಿಯೂ ಕೂಡ, ನಿತ್ಯಾ=ನಿತ್ಯವಾದದ್ದು. ಕಾಲಶ್ಚ= ಕಾಲವೂ ಕೂಡ, ನಿತ್ಯ=ನಿತ್ಯವಾದದ್ದು. ದೇವದೇವಃ=ಬ್ರಹ್ಮಾದಿಗಳಿಂದ ವಂದ್ಯನಾದ ಶ್ರೀಹರಿಯು, ಕಿಮು=ನಿತ್ಯನೆಂದು ಹೇಳತಕ್ಕದ್ದೇನು ?

ತಾತ್ಪರ್ಯ.—ಜಗಜ್ಜನ್ಮಾದಿಕಾರಣನಾದ ಶ್ರೀಹರಿಯು ಪೂರ್ವೋಕ್ತ ಪ್ರಕಾರವಾಗಿ, ಸೃಷ್ಟಿ ಸ್ಥಿತ್ಯಾದಿಗಳನ್ನು ನಡಿಸುತ್ತಾನೆ. ಈ ಜಗಸ್ಸೃಷ್ಟಿಯು ಪ್ರವಾಹರೂಪವಾಗಿ ಅನಾದ್ಯನಂತಕಾಲದಿಂದಲೂ ನಡಿಯುತ್ತಲಿದೆ. ಇವಕ್ಕೆ ಕೊನೆ ಮತ್ತು ಮೊದಲಿಲ್ಲ. ಜೀವರುಗಳು ನಿತ್ಯರು, ಪ್ರಕೃತಿ ನಿತ್ಯ ಕಾಲ ನಿತ್ಯ, ಹೀಗಿರಲಿಕ್ಕೆ ಕಾಲ, ಜೀವ, ಪ್ರಕೃತಿ ಇವುಗಳನ್ನು ಅಧೀನದಲ್ಲಿಟ್ಟುಕೊಂಡು ಸೃಷ್ಟಿಸುವ ಶ್ರೀಹರಿಯು ನಿತ್ಯನೆಂದು ಹೇಳತಕ್ಕದ್ದೇನು ?

ವಿಶೇಷಾರ್ಥ.—ಮೊದಲು ಹೇಳಿದ ಕಾಲ, ಜೀವ, ಪ್ರಕೃತಿ ಇವುಗಳು ನಿತ್ಯವಾದರೂ, ಪರಬ್ರಹ್ಮನ ಅಧೀನವಾದ ನಿತ್ಯತ್ವ ಉಳ್ಳವುಗಳೇ ಹೊರತು ಸ್ವತಂತ್ರವಲ್ಲ. ಪ್ರಮಾಣ:—ದ್ರವ್ಯಂ ಕರ್ಮಚ ಕಾಲಶ್ಚ ಸ್ವಭಾವೋ ಜೀವಏವಚ। ಎದನುಗ್ರಹತಃಸಂತಿನಸಂತಿಯದುಪೇಕ್ಷಯ ।" ಈ ಪ್ರಮಾಣಾನುಸಾರ ನಿತ್ಯ ಪದಾರ್ಥಗಳಿಗೂ ಕೂಡ ಈಶಾನುಗ್ರಹವಿಲ್ಲದಿದ್ದರೆ ಅವುಗಳಿಗೂ ಸ್ಥಿತಿ ಇಲ್ಲವೆಂದು ತಿಳಿಯಬೇಕು.

ಅವತಾರಿಕೆ:—ಸೃಷ್ಟಿ ಲಯಾದಿಗಳನ್ನು ದೃಷ್ಟಾಂತದಿಂದ ತಿಳಿಸುತ್ತಾರೆ:—

**ಶ್ಲೋಕ॥ ಯಥಾಸಮುದ್ರಾತ್ಸರಿತಃಪ್ರಜಾತಾಃ ಪುನಸ್ತಮೇವಪ್ರವಿಶಂತಿಶಶ್ವತೇ । ಏವಂಹರೇರ್ನಿತ್ಯಜಗತ್ಪ್ರವಾಹ ಸ್ತಮೇವಚಾಸೌಪ್ರವಿಶಂತ್ಯಜಸ್ರಂ ॥೩೩॥**

ಅರ್ಥ.—ಯಥ=ಹೇಗೆ, ಸಮುದ್ರಾತ್=ಸಮುದ್ರದಿಂದ, ಪ್ರಜಾತಾಃ=ಹುಟ್ಟಿದ, ಸರಿತಃ=ನದಿಗಳು, ಪುನಃ=ತಿರುಗಿ, ಶಶ್ವತೇ=ನಿತ್ಯವಾದ, ಏತಮೇವ = ಆ ಸಮುದ್ರವನ್ನೇ, ಪ್ರವಿಶಂತಿ = ಪ್ರವೇಶಮಾಡುತ್ತವೋ, ತತಃ=ಅದೇ ರೀತಿಯಾಗಿ, ಹರೇಃ=ಶ್ರೀ ಹರಿಯಿಂದ ಉಂಟಾದ, ನಿತ್ಯ ಜಗತ್ ಪ್ರವಾಹಃ = ನಿತ್ಯ=ನಾಶರಹಿತವಾದ, ಜಗತ್ಪ್ರವಾಹ=ಜಗತ್ ಸೃಷ್ಟ್ಯಾದಿಗಳು, ತಮೇವ=ಆ ಪರಬ್ರಹ್ಮನನ್ನೇ, ಅಜಸ್ರಂ=ನಿರಂತರದಲ್ಲೂ, ಅಸೌ = ಈ ಚೇತನಾಚೇತನ ಪ್ರಪಂಚವು, ಪ್ರವಿಶಂತಿ=ಪ್ರವೇಶಿಸುತ್ತದೆ.

ತಾತ್ಪರ್ಯ.---ನದಿಗಳು ಸಮುದ್ರದಿಂದ ಹುಟ್ಟಿ ಪುನಃ ಸಮುದ್ರವನ್ನೇ ಹೇಗೆ ಸೇರುತ್ತವೆಯೋ ಅದೇ ರೀತಿಯಾಗಿ ಶ್ರೀಹರಿಯಿಂದ ಸೃಷ್ಟಿಸಲ್ಪಟ್ಟ ಚೇತನರಾಶಿಗಳು ಸ್ಥಿತ್ಯಾದಿಗಳನ್ನುಳ್ಳದ್ದಾಗಿ. ತಿರುಗೀ ಶ್ರೀಹರಿಯುಲ್ಲೇ ಪ್ರವೇಶಿಸುತ್ತವೆ.

ವಿಶೇಷಾರ್ಥ.— ಪ್ರಮಾಣ.—" ಯಥಾನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಪ್ರಾಪ್ಯ ಅಸ್ತಂಗಚ್ಛತಿ " ಈ ಪ್ರಮಾಣಾನುಸಾರ ನದಿಗಳು ನಿತ್ಯಭೂತವಾದವುಗಳು. ಸಮುದ್ರ ನಿತ್ಯವಾದದ್ದು ಆದರೂ ಸಮುದ್ರದಿಂದ ನದಿಗಳಿಗೆ ಅಭಿವ್ಯಕ್ತಿ ಎಂದು ತಿಳಿಯಬೇಕು. ಚೇತನರಾಶಿಗಳು ನಿತ್ಯರಾದ್ದರಿಂದ ಅವರಿಗೆ ಲಯವೆಂದರೇನು ? ಸೃಷ್ಟಿಯೆಂದರೇನು ? ಎಂದು ಸಂದೇಹಬಂದರೆ, ನಿತ್ಯರಾದ ಚೇತನರುಗಳಿಗೆ ಅನಿತ್ಯದೇಹವನ್ನು ಕೊಡುವುದೇ ಸೃಷ್ಟಿ. ಆ ದೇಹವನ್ನು ಬಿಡುವುದೇ ಲಯವು. ಈ ರೀತಿಯಾದ ಸೃಷ್ಟಿ ಸ್ಥಿತಿ, ಲಯಾದಿಗಳು ಯಾವ ಪರಬ್ರಹ್ಮನಿಂದ ನಡೆಯುತ್ತವೆಯೋ ಆತನೇ ಪುರುಷೋತ್ತಮನು, ಸರ್ವಜ್ಞನು, ಸರ್ವಾಧಾರಕನು, ಸಕಲ ಗುಣಪೂರ್ಣನು ಎಂದು ತಿಳಿಯಬೇಕು.

ಅವತಾರಿಕೆ.--ಸೃಷ್ಟಿ ಪ್ರಳಯಗಳನ್ನು ಅವಶ್ಯವಾಗಿ ತಿಳಿಯಬೇಕು. ಇವುಗಳ ತಿಳಿವಳಿಕೆಯಿಂದ ಪ್ರಯೋಜನವೇನೆಂಬುದನ್ನು ತಿಳಿಸುತ್ತಾರೆ.-

**ಶ್ಲೋಕ || ಏವಂವಿದುರ್ಯೇಪರಮಾಮನಂತಾ ಮಜಸ್ಯಶಕ್ತಿಂ ಪುರುಷೋತ್ತಮಸ್ಯ | ತಸ್ಯಪ್ರಸಾದಾದಥ ದಗ್ಧದೋಷಾಸ್ತ್ವಮಾಪ್ನುವಂತ್ಯಾಶು ಪರಂಸುರೇಶಂ ||೩೬||**

ಅರ್ಥ.--ಏ=ಯಾವ ಅಧಿಕಾರಿಗಳು, ಅಜಸ್ಯ-ಜನನ ಶೂನ್ಯನಾದಂಥ, ಪುರುಷೋತ್ತಮಸ್ಯ=ಪುರುಷ=ಕ್ಷರಾಕ್ಷರ ಪುರುಷರುಗಳಿಗೆ, ಉತ್ತಮಸ್ಯ=ಶ್ರೇಷ್ಠನಾದ ನಾರಾಯಣನ, ಪರಮಾಂ=ಉತ್ತಮವಾದ, ಅನಂತಾಂ ಅಪಾರವಾದ, ಶಕ್ತಿಂ=ಸಾಮರ್ಥ್ಯವನ್ನು, ಏವಂ=ಮೊದಲು ಹೇಳಿದ ರೀತಿಯಾಗಿ, ವಿದುಃ=ತಿಳಿಯಶಕ್ಯವಂತಾಗುತ್ತಾರೋ, ತೇ=ಅವರುಗಳು, ಅಥ=ಅನಂತರದಲ್ಲಿ, ತಸ್ಯ=ಆ ನಾರಾಯಣನ, ಪ್ರಸಾದಾತ್=ಅನುಗ್ರಹದಿಂದ, ದಗ್ಧದೋಷಾಃ-ನಾಶಹೊಂದಲ್ಪಟ್ಟ ಪಾಪವುಳ್ಳವರಾಗಿ, ಸುರೇಶಂ-ದೇವ

ಶ್ರೇಷ್ಠನಾದ, ಪರಂ-ಉತ್ತಮನಾದ, ತಂ=ಆ ನಾರಾಯಣನನ್ನು, ಅಶೂ-ಜಾಗ್ರತೆಯಾಗಿ, ಆಪ್ನುವಂತಿ=ಹೊಂದುತ್ತಾರೆ.

ತಾತ್ಪರ್ಯ.—ಮೊದಲು ಹೇಳಿದ ರೀತಿಯಾಗಿ ಯಾವ ಅಧಿಕಾರಿಗಳು ಶ್ರೇಷ್ಠನಾದ, ಮತ್ತು ಅಪಾರ ಶಕ್ತಿಯುಕ್ತನಾದ, ನಾಶರಹಿತನಾದ, ಕ್ಷರಾಕ್ಷರ ಪುರುಷರುಗಳಿಗಿಂತ ಉತ್ತಮನಾದ ನಾರಾಯಣನ ಶಕ್ತಿಯನ್ನು ತಿಳಿಯುತ್ತಾರೋ, ಅವರುಗಳು ಆ ಹರಿಯ ಅನುಗ್ರಹದಿಂದಲೇ ದೋಷರಹಿತರಾಗಿ ಬ್ರಹ್ಮಾದಿವಂದ್ಯನಾದ, ಉತ್ತಮನಾದ, ಆ ನಾರಾಯಣನನ್ನೇ ಹೊಂದುತ್ತಾರೆ.

ವಿಶೇಷಾರ್ಥ.—ಪರಮಾತ್ಮನ ವಿಷಯಕ ಜ್ಞಾನವು ಮೋಕ್ಷಕ್ಕೆ ಸಾಧಕವಾಧದ್ದು, ಈ ಜ್ಞಾನವು ಭಕ್ತಿ ಸಹಿತವಾಗಿದ್ದರೆ ಈಶನ ಅತ್ಯರ್ಥಪ್ರಸಾದಕ್ಕೆ ಕಾರಣನಾಗುತ್ತದೆ. ಆ ಅತ್ಯರ್ಥಪ್ರಸಾದದಿಂದ ಚೇತನರುಗಳ ಪಾಪಾದಿ ದೋಷಗಳಿಂದ ರಹಿತರಾಗಿ ಪುನಃ ಸೃಷ್ಟಿಗೆ ಬಾರದ ಆ ಬ್ರಹ್ಮನಿಂದ ಕೊಡಲ್ಪಡುವ ಪೂರ್ಣಾನಂದವನ್ನು ಅನುಭವಿಸುತ್ತಾರೆ.

ಅವತಾರಿಕೆ.—ದೇವತೆಗಳಿಗೆ ಮುಕ್ತಿಯನ್ನು ಕೊಟ್ಟರೆ ಆ ದೇವತೆಗಳ ಸ್ಥಾನದಲ್ಲಿ ಆಧಿಪತ್ಯವು ಹೇಗೆ ನಡಿಯುತ್ತದೆಂಬುವುದನ್ನು ತಿಳಿಸುತ್ತಾರೆ

**ಶ್ಲೋಕ ॥ ದೇವಾನಿವರ್ಾನ್ಮುಕ ಸಮಸ್ತದೋಷಾನ್ ಸ್ವಸನ್ನಿಧಾನೇವಿನಿವೇಶ್ಯದೇವಃ । ಪುನಸ್ತದನ್ಯಾನಧಿಕಾರಯೋಗ್ಯಾಂಸ್ತತ್ತದ್ಗಣಾನೇವ ಪದೇನಿಯುಂಗ್ತೇ ॥೩೭॥**

ಅರ್ಥ.—ದೇವಾಃ=ಕ್ರೀಡಾದಿ ಗುಣವಿಶಿಷ್ಟನಾದ ನಾರಾಯಣನು, ಇವರ್ಾನ್-ಪೂರ್ವದಲ್ಲಿ ಸೃಷ್ಠರಾದಂಥ, ಮುಕ್ತಸಮಸ್ತದೋಷಾನ್=ಸಮಸ್ತ ದೋಷಗಳಿಂದ ರಹಿತರಾದ, ದೇವಾನ್=ದೇವತೆಗಳನ್ನು, ಸ್ವಸನ್ನಿಧಾನೆ-ತನ್ನ ಸನ್ನಿಧಾನದಲ್ಲಿ, ವಿನಿವೇಶ್ಯ=ಇಟ್ಟುಕೊಂಡು, ಪುನಃ=ಮತ್ತೆ, ತದ ನ್ಯಾನ್-ಅವರಿಂದ ಭಿನ್ನರಾದಂಥ, ಅಧಿಕಾರಯೋಗ್ಯಾನ್=ಅಧಿಕಾರ=ಲೋಕಾಧಿಪತ್ಯಕ್ಕೆ, ಯೋಗ್ಯಾನ್=ಅರ್ಹರಾದಂಥ, ತತ್ತದ್ಗಣಾನೇವ=ಆಯಾ ಸಮೂಹದಲ್ಲಿರತಕ್ಕವರನ್ನೇ, ( ಋಜ್ವಾದಿ ಆಯಾ ಗಣಸ್ಥ ಜೀವರುಗಳನ್ನೇ ಪದೆ=ಆ ಪದವಿಯಲ್ಲಿ, ನಿಯುಂಗ್ತೆ=ಸ್ಥಾಪಿಸುತ್ತಾನೆ.

ತಾತ್ಪರ್ಯ.— ಸಾಧನಪೂರ್ಣರಾದ ದೇವತೆಗಳು ಮುಕ್ತರಾದನಂತರ ಸಮಸ್ತ ದೋಷರಹಿತರಾದ ಆ ದೇವತೆಗಳನ್ನು ತನ್ನ ಸನ್ನಿಧಾನದಲ್ಲಿಟ್ಟು ಕೊಂಡು ಪುನಃ ಆ ಅಧಿಕಾರ ಸ್ಥಾನಕ್ಕೆ ಅರ್ಹರಾದ ಋಜ್ವಾದಿ ಆಯಾ ಗಣಸ್ಥ ಜೀವರುಗಳನ್ನು ಅಯಾ ಪದವಿಯಲ್ಲಿ ಪರಮಾತ್ಮನು ಏರ್ಪಡಿಸು ತ್ತಾನೆ

ವಿಶೇಷಾರ್ಥ.—ದೇವತೆಗಳು, ಋಷಿಗಳು, ಪಿತೃಗಳು, ಚಕ್ರವ ರ್ತಿಗಳು, ಗಂಧರ್ವರು, ಮನುಷ್ಯೋತ್ತಮರೇ ಮೊದಲಾದ ಚೇತನರಾಶಿ ಗಳನ್ನು ಸೃಷ್ಟಿಸಿ, ಅವರುಗಳು ಮಾಡಿದ ಅಪರಾಧಗಳನ್ನು ಕ್ಷಮಿಸಿ, ಪಾ ಪಂಗಳಿಂದ ರಹಿತರನ್ನಾಗಿ ಮಾಡಿ, ತನ್ನ ಸನ್ನಿಧಾನದಲ್ಲಿ ನಿತ್ಯಾನಂದವನ್ನು ಪಡಿಸುತ್ತಾ ಇರುವ ಶ್ರೀಹರಿಯ ದಯಾಸಾರವೆಂಬ ಮಹಿಮೆಯನ್ನು ಎಷ್ಟು ಕೇಳಿದರೂ, ಎಷ್ಟು ತಿಳಿದರೂ, ಸಾಕೆಂಬುವ ಬುದ್ಧಿ ಹುಟ್ಟಲಾರದು. ಶ್ರೀ ಹರಿಯ ಈ ಬಗೆಯ ಅನುಗ್ರಹಕ್ಕೆ ಭಾದ್ಯರಾಗಬೇಕೆಂಬ ಇಚ್ಛೆಯುಳ್ಳ ಹಿಂ ದಿನ ಚೇತನರುಗಳ ಸ್ಥಾನಕ್ಕೆ ಬರಲು ಅರ್ಹರಾದ ದೇವತೆಗಳನ್ನು ಸೃಷ್ಟಿಗೆ ತಂದು ಅರ್ಹವಾದ ಸ್ಥಳಗಳಲ್ಲಿಟ್ಟು ಸಾಧನಮಾಡಿರುತ್ತಿರುತ್ತಾನೆ. ಅವ ರುಗಳಿಗೂ ಸಾಧನಾನಂತರದಲ್ಲಿ ಇದೇ ಬಗೆಯಾದ ಫಲ ಕೊಡುತ್ತಾನೆ.

ಅವತಾರಿಕೆ.—ಈಗ ಅಂದರೆ ಈ ಶ್ಲೋಕ ಮೊದಲು ಕಶ್ಯಪರಿಂದ ನಡೆದ ಅವಾಂತರ ಸೃಷ್ಟಿಯನ್ನು ಹೇಳುತ್ತಾರೆ.—

**ಶ್ಲೋಕ || ಪುನಶ್ಚ ಮಾರೀಚತಃ ಏವದೇವಾ ಜಾತಾ ಅದಿತ್ಯಾಮಸುರಾಶ್ಚ ದಿ ತ್ಯಾಂ | ಗಾವೋಮೃಗಾಃಪಕ್ಷ್ಯುರುಗಾದಿ ಸತ್ತ್ವಾ ದಾಕ್ಷಾಯಣೀಷ್ವೇ ವ ಸಮಸ್ತಶೋಽಪಿ ||೩೮||**

ಅರ್ಥ.— ಪುನಶ್ಚ=ಮತ್ತೆ, ಮಾರೀಚತಃ ಏವ=ಮರೀಚಿಋಷಿಗಳ ಮ ಕ್ಕಳಾದ ಕಶ್ಯಪರ ದೆಶೆಯಿಂದ, ಅದಿತ್ಯಾಂ=ಅದಿತೀದೇವಿಯಲ್ಲಿ, ದೇವಾಃ ದೇವತೆಗಳು, ಜಾತಾಃ=ಹುಟ್ಟಿದರು. ದಿತ್ಯಾಂ=ದಿತೀದೇವತೆಯಲ್ಲಿ, ಅ ಸುರಾಶ್ಚ=ದೈತ್ಯರುಗಳೂನೂ, ಜಾತಾಃ=ಹುಟ್ಟಿದರು. ಗಾವಃ=ಗೋವುಗ ಳು, ಮೃಗಾಃ=ಮೃಗಗಳು, ಪಕ್ಷ್ಯುರಗಾದಿಸತ್ವಾಃ=ಪಕ್ಷಿ=ಪಕ್ಷಿಗಳು, ಉ ರಗ-ಸರ್ಪಗಳು, ಇವುಗಳೇ, ಆದಿ=ಮೊದಲಾಗಿವುಳ್ಳಂಥ, ಸತ್ವಾ=ಚೇ ತನರಾಶಿಗಳು, ಸಮಸ್ತಶೋಽಪಿ=ಸರ್ವವೂ, ದಾಕ್ಷಾಯಣೀಷ್ವೇವ=ದಕ್ಷ ಪ್ರಜೇಶ್ವರನ ಮಕ್ಕಳೂ, ಕಶ್ಯಪರ ಹೆಂಡತಿಯರೂ ಆದ ವಿನುತಾದಿಗಳಲ್ಲಿ ಜಾತಾಃ=ಹುಟ್ಟಿದವು.

**ತಾತ್ಪರ್ಯ.**— ಬ್ರಹ್ಮನಿಂದ ಹುಟ್ಟಿದ ದೇವತೆಗಳು ಮತ್ತೆ ಮನುಕಲ್ಪ ದಲ್ಲಿ ಮರೀಚಿ ಮಕ್ಕಳಾದ ಕಶ್ಯಪರ ದೆಶೆಯಿಂದ ದಕ್ಷಪ್ರಜೇಶ್ವರನ ಮಕ್ಕ ಳಾಗಿ, ಕಶ್ಯಪರನ್ನು ಹೊಂದಿದ ಸ್ತ್ರೀಯರುಗಳಲ್ಲಿ ಅಂದರೆ ಅದಿತಿಯಲ್ಲಿ ದೇವತೆಗಳು, ದಿತಿಯಲ್ಲಿ ದೈತ್ಯರೂ, ಸುರಭಿಯಲ್ಲಿ ಗೋವುಗಳೂ, ವಿನುತೆ ಯಲ್ಲಿ ಪಕ್ಷಿಗಳೂ, ಕದ್ರುವಿನಲ್ಲಿ ಸರ್ಪಗಳೂ, ಇವೇ ಮೊದಲಾದ ಚೇತನ ರಾಶಿಗಳು ಸಮಸ್ತವೂ ಹುಟ್ಟಿದವು.

**ವಿಶೇಷಾರ್ಥ.**— ಕಶ್ಯಪರಿಂದ ದಾಕ್ಷಾಯಣೀರುಗಳಲ್ಲಿ ಸೃಷ್ಟಿಯನ್ನು ಹೇಳಿದ್ದರಿಂದ ಕಶ್ಯಪರು ಮತ್ತು ಅವನ ಹೆಂಡತಿಯರಿಂದಲೇ ಸೃಷ್ಟಿಯು ನಡೆಯಿತು ಎಂದು ಅಧಿಕಾರಿಗಳು ತಿಳಿಯಬಾರದು. ಕಶ್ಯಪರಲ್ಲಿ ಸೂರ್ಯ ನೂ, ಸೂರ್ಯನಲ್ಲಿ ವಾಯುದೇವರೂ, ವಾಯುದೇವರಲ್ಲಿ ಶ್ರೀಹರಿಯೂ ನಿಂ ತು, ದಾಕ್ಷಾಯಣಿಯಲ್ಲಿ ಚಂದ್ರನೂ, ಚಂದ್ರನಲ್ಲಿ ಭಾರತಿಯೂ, ಭಾರ ತಿಯಲ್ಲಿ ರಮಾದೇವಿಯರೂ ನಿಂತು ಸೃಷ್ಟಿಸುತ್ತಾರೆಂದು ತಿಳಿಯಬೇಕು. ದೇವಸೃಷ್ಟಿಯಲ್ಲಿ ಸೂರ್ಯಚಂದ್ರರನ್ನು ಬಿಟ್ಟು ದಂಪತಿಗಳಾದ ಕಶ್ಯಪ ಅದಿ ತೀಯರುಗಳಲ್ಲಿ ವಾಯು, ಭಾರತಿಯರು ರಮಾ ವಿಷ್ಣು ಸನ್ನಿಧಾನದಿಂದ ಯುಕ್ತರಾಗಿ ಸೃಷ್ಟಿಸುತ್ತಾರೆಂದು ತಿಳಿಯಬೇಕು.

**ಅವತಾರಿಕೆ.**— ಮನುಕಲ್ಪದ ಸೃಷ್ಟಿಯನ್ನು ಸೂಚಿಸಿ ವಿಭೂತಿರೂಪ ಗಳು ಕಥಾ ಹೇಳುವುದಕ್ಕಾಗಿ ಉಪಕ್ರಮಿಸುವ ಮೊದಲಿನಲ್ಲಿ ವರಾಹವ ತಾರದ ಕಥಾ ಹೇಳುತ್ತಾರೆ.—

**ಶ್ಲೋಕ || ತತಃಸ್ವಮಗ್ನಾಂ ಪ್ರಳಯೋಲಯೋದಧೌ ಮಹೀಂವಿಲೋಕ್ಯಸಹ ರಿಃವರಾಹಃ | ಭೂತ್ವಾವಿರಿಂಚಾರ್ಥಮಿಮಾಂಸ ಶೈಲಾಮುತ್ಕೃತ್ಯವಾ ರಾಮುಪರಿನ್ಯಧಾತ್ಸ್ವರಂ ||೩೯||**

**ಅರ್ಥ.**— ತತಃ-ಅನಂತರದಲ್ಲಿ, ಸಃ=ಅಂತಹ, ಹರಿಃ-ಶ್ರೀನಾರಾ ಯಣನು, ಪ್ರಳಯೇ-ಲಯಕಾಲೀನವಾದ, ಲಯೋದಧೌ-ಪ್ರಳಯೋದಕ ದಲ್ಲಿ, ಮಗ್ನಾಂ=ತಾನಾಗಿ ಮುಳುಗಿದಂಥ, ಮಹೀಂ=ಭೂಮಿಯನ್ನು, ವಿ ಲೋಕ್ಯ=ನೋಡಿ, ವರಾಹಃ=ವರಾಹರೂಪವುಳ್ಳವನು, ಭೂತ್ವಾ=ಆಗಿ, ವಿರಿಂಚಾರ್ಥಂ=ಬ್ರಹ್ಮದೇವರಿಗೋಸ್ಕರ, ಸಶೈಲಾಂ=ಪರ್ವತಗಳಿಂದ ಸಹಿ ತವಾದ, ಇಮಾಂ=ಈ ಭೂಮಿಯನ್ನು, ಉತ್ಕೃತ್ಯ-ಮೇಲಕ್ಕೆತ್ತಿ, ವಾರಾಂ

ಉದಕಗಳ, ಉಪರಿ=ಮೇಲ್ಭಾಗದಲ್ಲಿ, ಸ್ಥಿರಂ=ಧೃಢವಾಗಿರುವಂತೆ, ನ್ಯಧಾತ್=ಇಟ್ಟನು.

ತಾತ್ಪರ್ಯ.—ಶ್ರೀಹರಿಯು ಮನುಕಲ್ಪದ ಆದಿಭಾಗದಲ್ಲಿ ವರಾಹರೂಪವನ್ನು ತಾಳಿ ಪ್ರಳಯೋದಕದಲ್ಲಿ ತಾನಾಗಿ ಮುಳುಗಿದ್ದ ಭೂಮಿಯನ್ನು ನೋಡಿ ಬ್ರಹ್ಮದೇವರ ಪ್ರಾರ್ಥನೆಯ ಪ್ರಕಾರ ಆ ಭೂಮಿಯನ್ನು ಮೇಲಕ್ಕೆತ್ತಿ ಸ್ಥಿರವಾಗಿರುವಂತೆ ನಿಲ್ಲಿಸಿದನು.

ವಿಶೇಷಾರ್ಥ.—ಸ್ವಾಯಂಭುವಮನುಗಳನ್ನು ಸೃಷ್ಟಿಸುವ ಆದಿಭಾಗದಲ್ಲಿ ಚಿಂತಾಕ್ರಾಂತರಾದ ಬ್ರಹ್ಮದೇವರನ್ನು ನೋಡಿ ತಪಸ್ಸು ಮಾಡು ಎಂದು ವಾಸುದೇವನು ಆಜ್ಞಾಪಿಸಲು ತಪಸ್ಸಿನಿಂದ ಬ್ರಹ್ಮದೇವರು ತನ್ನ ದೇಹದಲ್ಲಿ ಸ್ವಾಯಂಭುವ ಶತರೂಪ ಇವರಿಬ್ಬರನ್ನು ಸೃಷ್ಟಿಸಿ ಸ್ವಾಯಂಭುವಮನುಗಳನ್ನು ಕುರಿತು ಸೃಷ್ಟಿಮಾಡೆಂದು ಹೇಳಿದರು. ಇವರು ತಂದೆಗಳಾದ ಬ್ರಹ್ಮದೇವರನ್ನು ಸರ್ವಚೇತನರುಗಳಿಗೆ ಆಧಾರಭೂತವಾದ ಭೂಮಿ ಇಲ್ಲದ್ದರಿಂದ ಹೇಗೆ ಸೃಷ್ಟಿಸಲಿ ಎಂದು ಕೇಳಿದರು. ಆಗ ಬ್ರಹ್ಮದೇವರ ಮೂಗಿನ ಹೊಳ್ಳೆಗಳಿಂದ ಶ್ರೀಹರಿಯು ಅಂಗುಷ್ಠ ಮಾತ್ರ ಪರಿಮಾಣ ದೇಹವುಳ್ಳವನಾಗಿ ಆದಿ ವರಾಹ ರೂಪದಿಂದ ಉದ್ಭವಿಸಿ ಭೂಮಿಯನ್ನು ಅಪಹರಿಸಿದ್ದ ಹಿರಣ್ಯಾಕ್ಷನನ್ನು ಸಂಹರಿಸಿ ಭೂಮಿಯನ್ನು ಸರ್ವಚೇತನರುಗಳಿಗೆ ಆಧಾರವಾಗುವಂತೆಯೂ, ಸ್ಥಿರವಾಗಿ ನಿಲ್ಲುವಂತೆಯೂ ಇಟ್ಟನು. ಈ ಅವತಾರಕ್ಕೆ ಆದಿ ಹಿರಣ್ಯಾಕ್ಷನ ವಧಾ ಮುಖ್ಯ ಪ್ರಯೋಜನವು.

ಅವತಾರಿಕೆ:—ಅದೇ ಅವತಾರದ ಎರಡನೆಯ ಪ್ರಯೋಜನವನ್ನು ಹೇಳುವುದಕ್ಕಾಗಿ ಕಥಾಂತರವನ್ನು ಹೇಳುತ್ತಾರೆ:—

**ಶ್ಲೋಕ|| ಅಥಾಬ್ಜನಾಭ ಪ್ರತಿಹಾರಪಾಲೌ ಶಾಪಾತ್ತ್ರಿಲೋಭೂಮಿತಳೇಷು ಜಾತೌ | ದಿತ್ಯಾಂಹಿರಣ್ಯಾವಥರಾಕ್ಷಸೌಚ ಪೈತೃಷ್ವಸೇಯೌಚ ಹರೇಃಪುರಸ್ತಾತ್ ||೪೦||**

ಅರ್ಥ:—ಅಥ=ಅನಂತರದಲ್ಲಿ, ಅಬ್ಜನಾಭಪ್ರತಿಹಾರಪಾಲೌ=ಅಬ್ಜನಾಭ=ಕಮಲವೇ ನಾಭಿಯಲ್ಲಿವುಳ್ಳ ಶ್ರೀಹರಿಯ, ಪ್ರತಿಹಾರಪಾಲೌ=ದ್ವಾರಪಾಲಕರಾದ ಜಯವಿಜಯರುಗಳು, ಶಾಪಾತ್=ಲಕ್ಷ್ಮೀ ಸನಕಾದಿಗಳ ಶಾ

ಪದಿಂದ, ತ್ರಿಶಃ=ಮೂರಾವರ್ತಿ, ಭೂಮಿತಳೇ=ಭೂಲೋಕದಲ್ಲಿ, ಪ್ರಜಾತೌ=ಹುಟ್ಟಿದರು. (ಹೇಗೆಂದರೆ) ದಿತ್ಯಾಂ=ದಿತಿದೇವಿಯಲ್ಲಿ, ಹಿರಣ್ಯಾ–ಹಿರಣ್ಯಾಕ್ಷ, ಹಿರಣ್ಯಕಶ್ಯಪುರುಗಳಾಗಿಯೂ, ಅಥ=ಅನಂತರದಲ್ಲಿ, (ರಾಮಾವತಾರದಲ್ಲಿ) ರಾಕ್ಷಸೌ=ರಾವಣ, ಕುಂಭಕರ್ಣರುಗಳಾಗಿಯೂ, ಚ=ಮತ್ತು, ಪರಸ್ತಾತ್=ಅನಂತರದಲ್ಲಿ ( ಕೃಷ್ಣಾವತಾರದಲ್ಲಿ ) ಹರೇ–ಶ್ರೀಕೃಷ್ಣನ, ಪೈತೃಷ್ವಸೇಯೌ ಚ=ಸೋದರತ್ತೆಯಲ್ಲಿ ಶಿಶುಪಾಲ, ದಂತವಕ್ರರಾಗಿಯೂ, ಪ್ರಜಾತೌ=ಹುಟ್ಟಿದರು.

ತಾತ್ಪರ್ಯ.—ಶ್ರೀಹರಿಯ ದ್ವಾರಪಾಲಕರಾದ ಜಯವಿಜಯರು ಸನಕಾದಿಗಳಿಂದ ಶಾಪಗ್ರಸ್ಥರಾಗಿ ಭೂಲೋಕದಲ್ಲಿ ಮೂರು ಜನ್ಮಗಳನ್ನೆತ್ತಿದರು. ಮೊದಲನೆಯ ಜನ್ಮ:—ದಿತಿದೇವಿಯಲ್ಲಿ ಹಿರಣ್ಯಾಕ್ಷ, ಹಿರಣ್ಯಕಶ್ಯಪುರುಗಳಾಗಿಯೂ, ಎರಡನೆಯದಾದ ರಾಕ್ಷಸ ಜನ್ಮದಲ್ಲಿ, ರಾವಣ, ಕುಂಭಕರ್ಣರಾಗಿಯೂ, ಮೂರನೆಯ ಜನ್ಮದಲ್ಲಿ ಶಿಶುಪಾಲ, ದಂತವಕ್ರರಾಗಿ ಕೃಷ್ಣಾವತಾರಮಾಡಿದ ಶ್ರೀಹರಿಯ ಸೋದರತ್ತೆಯಲ್ಲಿ ಜನಿಸಿದರು.

ವಿಶೇಷಾರ್ಥ.—ಜಯ ವಿಜಯರು ಪರಮಾತ್ಮನ ಅಮುಕ್ತ ಸ್ಥಾನದ ದ್ವಾರಪಾಲಕರು. ಇವರಿಗೆ ಸನಕಾದಿಗಳು ಶಾಪಕೊಡಲು ಕ್ಷಮಾಪಣೆಯನ್ನು ಕೇಳಿಕೊಂಡರು. ರಮಾಪತಿಯಾದ ಶ್ರೀಹರಿಯ ಸನ್ನಿಧಾನದಲ್ಲಿ ಸನಕಾದಿಗಳ ಮತ್ತು ರಮಾದೇವಿಯರ ವಿಶಾಪದಿಂದ ಮೂರು ಜನ್ಮಗಳನ್ನು ಭೂಮಿಯಲ್ಲಿ ಎತ್ತಿದರು. ಆದರೆ ಇವರು ಭೂಮಿಯಲ್ಲಿ ಹುಟ್ಟಿದ ಕಾಲದಲ್ಲಿ ಜಯವಿಜಯರು ಮೂಲರೂಪದಿಂದ ದ್ವಾರದಲ್ಲಿಯೇ ಇದ್ದರು. ಅಂಶದಿಂದ ಭೂಮಿಯಲ್ಲಿ ಅವತರಿಸಿದ್ದರು. ಆದರೆ ಭಗವಂತನ ಬಾಗಿಲಿನಲ್ಲಿರುವ ದಾಸರು ದರ್ಶನಕ್ಕೆ ಬಂದ ಭಕ್ತರುಗಳ ಯೋಗ್ಯತೆಯನ್ನು ತಿಳಿಯದೆ ತಡೆದರೇ ಅಥವಾ ತಿಳಿದು ತಡೆದರೆ ಅಂದರೆ ಅವರು ತಿಳಿದೇ ತಡೆದರು ಎಂದು ತಿಳಿಯಬೇಕು. ತಡೆಯುವ ಕಾಲದಲ್ಲಿ ಅವರಿಗೆ ಅಜ್ಞಾನವಿತ್ತು. ಇದಕ್ಕೆ ಕಾರಣ ಮುಂದೆ ನಡೆಯಬೇಕಾದ ಶ್ರೀಹರಿಯ ನೃಸಿಂಹ, ರಾಮ ಕೃಷ್ಣಾದಿ ಅವತಾರಕಾರ್ಯಗಳೇ ಅವತರಿಸುವ ಶ್ರೀಹರಿಯೇ ಅವರಿಗೆ ಪ್ರೇರಕನೆಂದು ತಿಳಿಯಬೇಕು.

ಅವತಾರಿಕೆ.—ಹಿರಣ್ಯಾಕ್ಷನ ವ್ಯಾಪಾರವನ್ನು ಹೇಳಿ ಅವನ ಸಂಹಾರವನ್ನು ಹೇಳುತ್ತಾರೆ:—

**ಶ್ಲೋಕ॥ ತತೋಹಿರಣ್ಯಾಕ್ಷ ಉದಾರವಿಕ್ರಮೋ ದಿತೇಃಸ್ಸುತೋಽವರಜಃ ಸುರಾರ್ದನಃ। ಧಾತ್ರಾರ್ಥಿತೇನೈವ ವರಾಹರೂಪಿಣಾ ಧರೋದ್ಧೃತೌ ಪೂರ್ವಹತೋಽಬ್ಜಜೋದ್ಭವಃ ॥೪೧॥**

ಅರ್ಥ.—ತತಃ=ಅನಂತರದಲ್ಲಿ, ಉದಾರವಿಕ್ರಮಃ=ಉದಾರ=ಉತ್ಕೃಷ್ಟನಾದ, ವಿಕ್ರಮಃ=ಪರಾಕ್ರಮ ಉಳ್ಳಂಥಾ, ಅವರಜಃ=ಕಿರಿಯವನಾದ ದಿತೇ=ದಿತೀದೇವಿಯ, ಸುತಃ=ಮಗನಾದ, ಹಿರಣ್ಯಾಕ್ಷಃ=ಹಿರಣ್ಯಾಕ್ಷನು, ಸುರಾರ್ದನಃ=ದೇವತೆಗಳಿಗೋಸ್ಕರ. ಧಾತ್ರಾರ್ಥಿತೇನ=ಬ್ರಹ್ಮದೇವರಿಂದ ಪ್ರಾರ್ಥಿತನಾದಂಥ, ವರಾಹರೂಪಿಣೈವ=ವರಾಹ ರೂಪಿಯಾದ ಹರಿಯಿಂದಲೇ ಹತಃ=ಸಂಹೆತನಾದವನು, ಧರೋದ್ಧೃತೌ=ಭೂಮಿಯನ್ನು ಉದ್ಧಾರಮಾಡತಕ್ಕ ಕಾಲದಲ್ಲಿ, ಅಬ್ಜಜೋದ್ಭವಃ=ಅಬ್ಜಜಃ=ಬ್ರಹ್ಮದೇವರಿಂದ, ಉದ್ಭವಃ=ಉತ್ಪನ್ನನಾದಂಥ ಹಿರಣ್ಯಾಕ್ಷನು, ಪೂರ್ವಹತಃ=ಮೊದಲು ಹತನಾದನು.

ತಾತ್ಪರ್ಯ.—ದಿತಿದೇವಿಯಲ್ಲಿ ಹುಟ್ಟಿದ ಎರಡನೆಯವನಾದ, ಬಹು ಪರಾಕ್ರಮಶಾಲಿಯಾದ, ಹಿರಣ್ಯಾಕ್ಷನು ಬ್ರಹ್ಮದೇವರಿಂದ ಪ್ರಾರ್ಥಿತನಾದ ವರಾಹರೂಪಿಯಾದ ಶ್ರೀಹರಿಯಿಂದಲೇ ಹತನಾದನು. ಬ್ರಹ್ಮದೇವರಿಂದ ಹುಟ್ಟಿದ ಹಿರಣ್ಯಾಕ್ಷನು ಧರೋದ್ಧಾರಕಾಲದಲ್ಲಿ ಮೊದಲು ಹತನಾದನು.

ವಿಶೇಷಾರ್ಥ.—ಬ್ರಹ್ಮಾಂಡ ಪುರಾಣದ ಪ್ರಮಾಣ.—"ಬ್ರಹ್ಮಜಸ್ತು ಹಿರಣ್ಯಾಕ್ಷಃ ಪ್ರಥಮಂದೌಂಷ್ಟ್ರರೂಪಾಹತಃ। ಸಯೇವ ಪಾರ್ಷದಾವಿಷ್ಣೋರ್ದ್ವಿತೀಯಃ ಕರ್ಣತಾಡನಾತ್ ॥ ಪೂರ್ವಂಲಯೋದಧೌಮಗ್ನಾಂ ದ್ವಿತೀಯಾಂತೇನಮಜ್ಜಿತಾಂ ॥ ಭೂಮಿಮುದ್ಧರತ್ಯೈವಾಸೌಹರಿಣಾಕ್ರೋಡಮೂರ್ತಿನ" ಈ ಪ್ರಮಾಣಗಳಿಂದ ಭೂಮಿಯು ಒಂದನೇಸಲ ತಾನಾಗಿ ಪ್ರಳಯೋದಕದಲ್ಲಿಮುಳುಗಿಹೋಗಿರಲು ಅದನ್ನುಮೇಲಕ್ಕೆತ್ತುತ್ತಿದ್ದ ವರಾಹರೂಪಿಯಾದ ಶ್ರೀಹರಿಗೆ ಎದುರುಬಿದ್ದ ಹಿರಣ್ಯಾಕ್ಷನನ್ನು ಶ್ರೀಹರಿಯು ತನ್ನ ಕೋರೆಹಲ್ಲಿನಿಂದ ಸಂಹರಿಸಿದನು. ಇವನು ಬ್ರಹ್ಮ ಪುತ್ರನಾದ ಹಿರಣ್ಯಾಕ್ಷ, ಎರಡನೇ

ಯಾವರ್ತಿ ದಿತಿಯಲ್ಲಿ ಹುಟ್ಟಿದ ಹಿರಣ್ಯಾಕ್ಷನು ಬ್ರಹ್ಮನ ವರದಿಂದ ಭೂಮಿಯನ್ನು ಅಪಹರಿಸಿ ಪಾತಾಳಕ್ಕೆ ತೆಗೆದುಕೊಂಡು ಹೋಗಲು ಬ್ರಹ್ಮದೇವರಿಂದ ಪ್ರಾರ್ಥಿತನಾದ ಶ್ರೀಹರಿಯು ತನ್ನ ಕೈಯಿಂದ ಕಪಾಲ ಭಾಗಕ್ಕೆ ಹೊಡೆದು ಅವನನ್ನ ಸಂಹರಿಸಿದನು. ಇದರಿಂದ ವರಾಹವತಾರ ಮಾಡಿದ ಶ್ರೀಹರಿಯು ಎರಡು ಸಲ ಹಿರಣ್ಯಾಕ್ಷನನ್ನು ಸಂಹರಿಸಿದನೆಂದು ತಿಳಿಯಬೇಕು.

ಅವತಾರಿಕೆ.—ಮತ್ಸ್ಯರೂಪಿಯಾದ ದೇವರ ಚರಿತ್ರೆಯನ್ನು ಸೂಚಿಸುತ್ತಾರೆ:—

ಶ್ಲೋಕ॥ ಅಥೋವಿಧಾತುರ್ಮುಖತೋವಿನಿಸ್ಸೃತಾನ್ ವೇದಾನ್ಹಯಾಸ್ಯೋಜಗೃಹೇಸುರೇಂದ್ರಃ । ನಿಹತ್ಯತಂಮತ್ಸ್ಯವಪುರ್ಜುಗೋಪ ಮನುಂ ಮುನೀಂಸ್ತಾಂಶ್ಚದದೌವಿಧಾತುಃ ॥೩೨॥

ಅರ್ಥ.—ಅಥ=ಅನಂತರದಲ್ಲಿ, ವಿಧಾತುಃ=ಚತುರ್ಮುಖದೇವರ, ಮುಖತಃ=ಮುಖದಿಂದ, ವಿನಿಸ್ಸೃತಾನ್=ಹೊರಗೆ ಬಂದ, ವೇದಾನ್=ವೇದಗಳನ್ನು, ಹಯಾಸ್ಯಃ=ಕುದುರೆಯಂತೆ ಮುಖವುಳ್ಳ ಅಸುರೇಂದ್ರಃ=ದೈತ್ಯಶ್ರೇಷ್ಠನು (ಹಯಗ್ರೀವಾಸುರನು), ಜಗೃಹೇ=ಅಪಹರಿಸಿದನು, ಆಗ ಮತ್ಸ್ಯವಪುಃ=ಮೀನಿನ ರೂಪಿಯಾದ ಶ್ರೀಹರಿಯು, ತಂ=ಆ ದೈತ್ಯನನ್ನು, ನಿಹತ್ಯ=ಸಂಹರಿಸಿ, ಮನುಂ=ಮನುಗಳನ್ನು, ಜುಗೋಪ=ಸಂರಕ್ಷಿಸಿದನು, ತಾನ್=ಆ ವೇದಗಳನ್ನು, ವಿಧಾತುಃ=ಬ್ರಹ್ಮದೇವರಿಗೆ, ದದೌ=ಕೊಟ್ಟನು.

ತಾತ್ಪರ್ಯ.—ಬ್ರಹ್ಮದೇವರ ಮುಖದಿಂದ ಪ್ರವೃತ್ತವಾದ ವೇದಗಳನ್ನು ಹಯಗ್ರೀವಾಸುರನು ಅಪಹರಿಸಿದನು. ಶ್ರೀಹರಿಯು ಮತ್ಸ್ಯಾವತಾರ ಮಾಡಿ ಹಯಗ್ರೀವಾಸುರನನ್ನು ಸಂಹರಿಸಿ ಮನುವನ್ನು ಮತ್ತು ಋಷಿಗಳನ್ನು ಸಂರಕ್ಷಿಸಿ ವೇದಗಳನ್ನು ಬ್ರಹ್ಮದೇವರಿಗೆ ಕೊಟ್ಟನು.

ವಿಶೇಷಾರ್ಥ.—ಶ್ರೀಹರಿಯು ಹಯಗ್ರೀವಾಸುರನ ಸಂಹಾರನಿಮಿತ್ತವಾಗಿ ಸ್ವೀಕರಿಸಿದ ಮತ್ಸ್ಯರೂಪವು ಚಿದಾನಂದ ರೂಪವುಳ್ಳದ್ದೇ ಹೊರತು ಬೇರೆಯಲ್ಲ. ವೇದಗಳು ದೈತ್ಯನ ವಶವಾಗಲು ವೇದಗಳಿಂದ ಕರ್ಮ ಮಾಡಲು ಶಕ್ತಿ ಇಲ್ಲದೆ ಇದ್ದ ಚೇತನರ ಸಾಧನಕ್ಕಾಗಿ ಶ್ರೀದೇವರು ಅವತಾರ

ಮಾಡಿ ಧರ್ಮೋದ್ಧಾರಮಾಡಿದನೆಂದು ತಿಳಿಯಬೇಕು. ಪ್ರಮಾಣ.- ಯದಾ ಯದಾಹಿ ಧರ್ಮಸ್ಯಗ್ಲಾನಿರ್ಭವತಿ ಭಾರತ·ಅಭ್ಯುತ್ಥಾನಾಯಧರ್ಮಸ್ಯ ತದಾತ್ಮಾನಂಸೃಜಾಮ್ಯಹಂ ||

ಅವತಾರಿಕೆ.- ಹಿಂದಿನ ಶ್ಲೋಕದಲ್ಲಿ ಮನುಗಳನ್ನು ರಕ್ಷಿಸಿದನೆಂದು ಹೇಳಿದ ಅರ್ಥವನ್ನು ವಿಶದಮಾಡುತ್ತಾರೆ.--

**ಶ್ಲೋಕ || ಮನ್ವಂತರಪ್ರಳಯೇ ಮತ್ಸ್ಯರೂಪೋವಿದ್ಯಾಮದಾನ್ಮನವೇ ದೇವದೇವಃ || ವೈವಸ್ವತಾಯೋತ್ತಮ ಸಂವಿದಾತ್ಮಾ ವಿಷ್ಣೋಸ್ಸ್ವರೂಪ ಪ್ರತಿಪತ್ತಿರೂಪಾಂ ||೪೩||**

ಅರ್ಥ.--ದೇವದೇವಃ- ಬ್ರಹ್ಮಾದಿ ದೇವತೆಗಳಿಗೆ ಸ್ವಾಮಿಯಾದ, ಮತ್ಸ್ಯರೂಪಃ=ಮತ್ಸ್ಯಾವತಾರಮಾಡಿದ, ಉತ್ತಮಸಂವಿದಾತ್ಮಾ=ಉತ್ತಮ=ಶ್ರೇಷ್ಠವಾದ, ಸಂವಿದಾತ್ಮಾ=ಜ್ಞಾನಾತ್ಮಕನಾದ ಶ್ರೀಹರಿಯು, ಮನ್ವಂತರಪ್ರಳಯೇ=ಚಾಕ್ಷುಷಕಳೆದು ವೈವಸ್ವತ ಪ್ರಾರಂಭದಲ್ಲಿ, ವೈವಸ್ವತಾಯ=ವೈವಸ್ವತವೆಂಬ, ಮನುವೇ=ಮನುವಿಗೋಸ್ಕರ, ವಿಷ್ಣೋಃ=ಶ್ರೀನಾರಾಯಣನ, ಸ್ವರೂಪಪ್ರತಿಪತ್ತಿರೂಪಾಂ=ಸ್ವರೂಪ=ಜ್ಞಾನಾನಂದ ಸ್ವರೂಪದ, ಪ್ರತಿಪತ್ತಿರೂಪಾಂ=ನಿಶ್ಚಯರೂಪವನ್ನು ತಿಳಿಸುವ, ವಿದ್ಯಾ=ವಿದ್ಯೆಯನ್ನು, ಅದಾತ್=ಕೊಟ್ಟನು.

ತಾತ್ಪರ್ಯ.--ಬ್ರಹ್ಮಾದಿಗಳಿಗೆ ಸ್ವಾಮಿಯಾದ ಮತ್ಸ್ಯರೂಪಿಯಾದ, ಜ್ಞಾನಾನಂದ ಸ್ವರೂಪಿಯಾದ ಶ್ರೀಹರಿಯು ಮನುಪ್ರಳಯದ ಆದಿಯಲ್ಲಿ ವೈವಸ್ವತಮನುಗಳಗೋಸ್ಕರ ತನ್ನ (ಶ್ರೀಪರಮಾತ್ಮನ) ಸ್ವರೂಪಜ್ಞಾನಪ್ರತಿಪಾದಕನಾದ ಅಧ್ಯಾತ್ಮ ವಿದ್ಯೆಯನ್ನು ಉಪದೇಶಿಸಿದನು.

ವಿಶೇಷಾರ್ಥ.--ಪ್ರಳಯಕಾಲದಲ್ಲಿ ನಷ್ಟವಾದ ಜ್ಞಾನವನ್ನು ಸಾಧನ ಚೇತನರುಗಳಿಗೆ, ಪುನಃ ಉಪದೇಶಕೊಟ್ಟು ಮನುಕಲ್ಪ ರಾಜ್ಯಭಾರಮಾಡುವ ಮನುವಿನಲ್ಲಿ ತಾನೇ ನಿಂತು ನಡಿಸುವನು. ಶ್ರೀನಾರಾಯಣನು ತಾನೆ ನಿಂತು ನಡಿಸುವನು. ಶ್ರೀನಾರಾಯಣನು ತಾನೇ ಮನುಗಳಿಗೆ ಅಧ್ಯಾತ್ಮ ಜ್ಞಾನವನ್ನು ಉಪದೇಶಿಸಿದನೆಂದು ಹೇಳಿದುದರಿಂದ ಜ್ಞಾನಪೂರ್ಣನೆಂತಲೂ ಆ ಶ್ರೀಹರಿಯ ಸ್ವರೂಪಜ್ಞಾನವಾಗಬೇಕಾದರೆ ಅವನ ಅನುಗ್ರಹದಿಂದಲೇ ಆಗಬೇಕೆಂದು ಸೂಚಿಸಿದಂತಾಯಿತು.

ಅವತಾರಿಕೆ — ಕ್ರಮಪ್ರಾಪ್ತವಾದ ನೃಸಿಂಹಾವತಾರ ಕಥಾ ಹೇಳು ತ್ತಾರೆ.-

**ಶ್ಲೋಕ ॥ ಅಥೋದಿತೇರ್ಜ್ಯೇಷ್ಠ ಸುತೇನಶಶ್ವತ್ಪ್ರಪೀಡಿತಾ ಬ್ರಹ್ಮವರಾತ್ಸು ರೇಶಾಃ ಹರಿಂವಿರಿಂಚೇನ ಸಹೋಪಜಗ್ಮುಃದೌರಾತ್ಮ್ಯಮಸ್ಯಾಪಿಶಶಂ ಸುರಸ್ಮೈ ॥೪೪॥**

ಅರ್ಥ.— ಅಥ- ಅನಂತರದಲ್ಲಿ, ದಿತೇಃ=ದಿತಿದೇವಿಯ, ಜ್ಯೇಷ್ಠಸು ತೇನ–ಹಿರೀಮಗನಾದ ಹಿರಣ್ಯಕಶ್ಯಪನಿಂದ, ಬ್ರಹ್ಮವರಾತ್=ಬ್ರಹ್ಮದೇವ ರ ವರದಿಂದ. ಶಶ್ವತ್ಪ್ರಪೀಡಿತಾಃ=ಬಹುಕಾಲ ಬಾಧೆಪಟ್ಟವರಾಗಿ, ಸುರೇ ಶಾಃ=ದೇವಶ್ರೇಷ್ಠರುಗಳು, ವಿರಂಚೇನ=ಬ್ರಹ್ಮದೇವರಿಂದ, ಕೂಡಿಕೊಂಡು ಹರಿಂ=ನಾರಾಯಣದೇವರನ್ನು, ಜಗ್ಮುಃ=ಹೊಂದಿದರು. ಅಸ್ಮೈ=ನಾರಾಯ ಣನಿಗೋಸ್ಕರ, ಅಸ್ಯ–ಆ ಹಿರಣ್ಯಕಶ್ಯಪನ, ದೌರಾತ್ಮ್ಯಃ–ದುಷ್ಟಕಾರ್ಯವ ನ್ನು, ಶಶಂಸುಃ–ಹೇಳಿದರು.

ತಾತ್ಪರ್ಯ.—ಅನಂತರದಲ್ಲಿ ದೇವತೆಗಳು ದಿತಿದೇವಿಯ ಜ್ಯೇಷ್ಠಪುತ್ರ ನಾದ ಬ್ರಹ್ಮನ ವರದಿಂದ ಗರ್ವಿತನಾದ ಹಿರಣ್ಯಕಶ್ಯಪನಿಂದ ಬಹುಕಾಲ ಪೀಡಿತರಾಗಿ ಬ್ರಹ್ಮದೇವರನ್ನು ಕರೆದುಕೊಂಡು ಶ್ರೀನಾರಾಯಣನನ್ನು ಹೊಂದಿ ಆ ದೈತ್ಯನ ದುಷ್ಟ ಸ್ವಭಾವವನ್ನು ಹೇಳಿದರು.

ವಿಶೇಷಾರ್ಥ.— ಪರಿಪಾಲನ ಕರ್ತೃತ್ವ ಶ್ರೀಹರಿಯ ಅಧೀನವೆಂದು ತಿ ಳಿದು ದೇವತೆಗಳು ತಮಗಿಂತಲೂ ಉತ್ತಮರಾದ ಬ್ರಹ್ಮದೇವರು ದೈತ್ಯಶ್ರೇ ಷ್ಠನಿಗೆ ಅಮೋಘವಾದ ವರ ಕೊಟ್ಟಿರಲು ಅವರನ್ನು ಬಿಟ್ಟುಹೋಗಬಾರ ದೆಂದು ತಿಳಿದು ಬ್ರಹ್ಮನಿಂದ ಸಹಿತರಾಗಿ ಪರಮಾತ್ಮನಲ್ಲಿ ಹೋದರು ಎಂದು ಹೇಳಿದ್ದರಿಂದ, ಶ್ರೀಹರಿಯು ಲೋಕಕಾರ್ಯವನ್ನು ನಡಿಸಬೇಕಾದರೆ ಮಂತ್ರಿ ಭೂತರಾದ ಬ್ರಹ್ಮರಾಯರ ವಿಜ್ಞಾಪನೆ ಹೊರತು ಯಾವ ಕಾರ್ಯವನ್ನೂ ಮಾಡುವುದಿಲ್ಲವೆಂದು ತಿಳಿಯಬೇಕು.

ಅವತಾರಿಕೆ.— ನೃಸಿಂಹಾವತಾರವನ್ನು ಮಾಡಿದ ಶ್ರೀಹರಿಯ ವ್ಯಾ ಪಾರವನ್ನು ಸೂಚಿಸುತ್ತಾರೆ.-

**ಶ್ಲೋಕ ॥ ಅಭೀಷ್ಟತಸ್ತೈರ್ಹರಿರುಗ್ರವೀರ್ಯೋನೃಸಿಂಹರೂಪೇಣ ಸ ಆವಿರಾ ಸೀತ್ । ಹತ್ವಾಹಿರಣ್ಯಾಕ್ಷ ಸುತಾಯ ತಸ್ಯಹತ್ವಾಭಯಂದೇವಗಣಾ ನುತೋಷಯತ್ ॥೪೫॥**

ಅರ್ಥ.— ಉಗ್ರವೀರ್ಯಃ=ಉಗ್ರ=ಕ್ರೂರವಾದ, ವೀರ್ಯ=ಸಾಮರ್ಥ್ಯವುಳ್ಳ, ಹರಿಃ-ಶ್ರೀನಾರಾಯಣದೇವರು, ತೈಃ=ಆ ದೇವತೆಗಳಿಂದ, ಅಭಿಷ್ಟುತಃ- ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನಾಗಿ, ನೃಸಿಂಹರೂಪೇಣ=ನರಸಿಂಹರೂಪದಿಂದ, ಆವಿರಾಸೀತ್=ಪ್ರಾದುರ್ಭೂತನಾದನು. ಸಃ=ಆ ನರಸಿಂಹದೇವರು, ಹಿರಣ್ಯಾಕ್ಷ=ಹಿರಣ್ಯಕಶ್ಯಪನನ್ನು, ಹತ್ವಾ = ಸಂಹಾರಮಾಡಿ, ತಸ್ಯ=ಆ ಹಿರಣ್ಯಕಶ್ಯಪನ, ಸಂತಾಯ=ಮಗನಾದ ಪ್ರಹ್ಲಾದನಿಗೆ ಅಭಯಂ=ಭಯಪರಿಹಾರಕವಾದ ವಚನವನ್ನು, ದತ್ವಾ=ಕೊಟ್ಟು, ದೇವಗಣಾನ್-ದೇವತೆಗಳ ಸಮೂಹವನ್ನು, ಅತೋಷಯತ್-ಸಂತೋಷಪಡಿಸಿದನು

ತಾತ್ಪರ್ಯ.—ಶ್ರೀನಾರಾಯಣನು ದೇವತೆಗಳಿಂದ ಪ್ರಾರ್ಥಿತನಾಗಿ ನರಸಿಂಹರೂಪವನ್ನು ಸ್ವೀಕರಿಸಿದನು, ಅನಂತರ ಹಿರಣ್ಯಕಶ್ಯಪನನ್ನು ಸಂಹರಿಸಿ ಅವನ ಮಗನಾದ ಪ್ರಹ್ಲಾದನಿಗೆ ಅಭಯಪ್ರಧಾನಮಾಡಿ ದೇವತೆಗಳನ್ನು ಸಂತೋಷಪಡಿಸಿದನು.

ವಿಶೇಷಾರ್ಥ.--ಸನಕಾದಿಗಳ ಶಾಪದಿಂದ ಭೂಮಿಯಲ್ಲಿ ಹುಟ್ಟಿ ಜಯವಿಜಯರು, ಮೂರು ಜನ್ಮಗಳಲ್ಲಿಯೂ ಶ್ರೀಹರಿಯಿಂದಲೇ ಸಂಹಾರವುಳ್ಳವರಾಗಬೇಕೆಂದು ಪ್ರಾರ್ಥಿಸಿದ್ದರಿಂದ, ಅದೇ ಹರಿಯು ಮೊದಲನೆಯ ಜನ್ಮದಲ್ಲಿ ನೃಸಿಂಹರೂಪದಿಂದ ಸಂಹರಿಸಿ, ಎರಡನೆಯ ಜನ್ಮದಲ್ಲಿ ರಾಮಾವತಾರಮಾಡಿ ದಶಕಂಠರಾದಿಗಳನ್ನು ಸಂಹರಿಸಿದನೆಂದು ತಿಳಿಯಬೇಕು.

ಅವತಾರಿಕೆ.-ಶ್ರೀಹರಿಯ ಕೂರ್ಮಾವತಾರವನ್ನು ಸೂಚಿಸುತ್ತಾರೆ.

**ಶ್ಲೋಕ || ಸುರಾಸುರಾಣಾಂ ಮುದಧಿಂ ವಿಮಥ್ನತಾಂದಧಾರ ಪೃಷ್ಠೇನಗಿರಿಂ ಸಮುಂದರಂ | ವರಪ್ರಧಾನದಪರ್ಯೈರಧಾರ್ಯಂ ಹರಸ್ಯಕೂರ್ಮೋಽಬೃಹದಂಡಓಧಾ ||೪೬||**

ಅರ್ಥ.---ಬೃಹದಂಡಓಧಾ=ಬೃಹತ್=ದೊಡ್ಡದಾದ, ಅಂಡ=ಬ್ರಹ್ಮಾಂಡವನ್ನು, ಓಧಾ=ಧಾರಣಮಾಡಿದಂಥಾ, ಕೂರ್ಮಃ=ಆಮೆಯರೂಪನಾದ ಶ್ರೀಹರಿಯು, ಹರಸ್ಯ=ರುದ್ರದೇವರ, ವರಪ್ರದಾನಾತ್=ವರ=ಸ್ವೀಕಾರದಿಂದ, ಅಪರ್ಯೈಃ=ಹರಿಯು ಹೊರ್ತು ಮತ್ತೊಬ್ಬರಿಂದ, ಅಧಾರ್ಯಂ=

ಧರಿಸಲು ಅಶಕ್ಯನಾದಂಥ, ಮಂದರಂ=ಮಂದರವೆಂಬ, ಗಿರಿಂ-ಪರ್ವತವನ್ನು, ಸುರಾಸುರೈಃ ಕಾಂ=ದೇವದೈತ್ಯರುಗಳು, ಉದಧಿಂ=ಸಮುದ್ರವನ್ನು, ವಿಮಥ್ಯತಾಂ=ವಿಶೇಷಾಕಾರವಾಗಿ ಮಥನಮಾಡುತ್ತಿರಲು, ಸಃ=ಕೂರ್ಮರೂಪನಾದ ಶ್ರೀಹರಿಯು, ಪೃಷ್ಠೇನ=ಬೆನ್ನಿನಿಂದ, ದಧಾರ=ಧರಿಸಿದನು.

ತಾತ್ಪರ್ಯ.—ಕೂರ್ಮರೂಪನಾದ ಶ್ರೀಹರಿಯು ರುದ್ರದೇವರ ವರದಿಂದ, ಶ್ರೀಹರಿಯ ಹೊರತು ಮತ್ತೊಬ್ಬರು ಧಾರಣಮಾಡಲು ಶಕ್ತರಾಗಬೇಡವೆಂದು ವರವನ್ನು ಪಡೆದ ಮಂದರಪರ್ವತವನ್ನು ದೇವದೈತ್ಯರುಗಳು ಸಮುದ್ರದಲ್ಲಿ ಹಾಕಿ ಕಡೆಯುತ್ತಿರಲು, ಭಾರದಿಂದ ಪ್ರತಿಕ್ಷಣದಲ್ಲಿಯೂ ಪಾತಾಳವನ್ನು ಕುರಿತು ಪ್ರವೇಶಿಸುತ್ತಿರುವ ಪರ್ವತವನ್ನು, ಅದೇ ಶ್ರೀಹರಿಯು ಆಮೆಯ ರೂಪದಿಂದ ಬೆನ್ನಿನಮೇಲೆ ಧರಿಸಿದನು.

ವಿಶೇಷಾರ್ಥ.—ಕ್ಷೀರಸಮುದ್ರವನ್ನು ಮಥನಮಾಡಿದಾಗ ಕೂರ್ಮರೂಪವನ್ನು ಸ್ವೀಕರಿಸಿದ ಶ್ರೀಹರಿಯು ಪರ್ವತ ಧಾರಣೆಯನ್ನು ಹೇಳುವುದರಿಂದ ಶ್ರೀಹರಿಯು ಬ್ರಹ್ಮಾಂಡವನ್ನು ವಾಯುಕೂರ್ಮನ ಕೆಳಭಾಗದಲ್ಲಿ ತಾನು ವಿಷ್ಣು ಕೂರ್ಮನೆಂಬ ನಾಮದಿಂದ ಧರಿಸಿರಲಿಕ್ಕೆ ಈ ಪರ್ವತಧಾರಣೆಯು ಅತಿಶಯವಲ್ಲವೆಂದು ತಿಳಿಯಬೇಕು.

ಅವತಾರಿಕೆ.—ಶ್ರೀಹರಿಯು ವಾಮನಾವತಾರದ ಮಹಿಮೆಯನ್ನು ಸೂಚಿಸುತ್ತಾರೆ.—

**ಶ್ಲೋಕ ॥ ವರಾದಜೇಯತ್ವಮವಾಪ ದೈತ್ಯರಾಟ್ ಚತುರ್ಮುಖಸ್ಯೈವ ಬಲಿರ್ಯದಾತದಾ ॥ ಅಜಾಯತೇಂದ್ರಾವರಜೋದಿತೇಃ ಸುತೋಮಹಾನಜೋಽಪ್ಯಬ್ಜಭವಾದಿಸಂಸ್ತುತಃ ॥೪೭॥**

ಅರ್ಥ.—ಯದಾ=ಯಾವಕಾಲದಲ್ಲಿ, ದೈತ್ಯರಾಟ್-ದೈತ್ಯಶ್ರೇಷ್ಠನಾದ, ಬಲಿಃ=ಬಲಿಚಕ್ರವರ್ತಿಯು, ಚತುರ್ಮುಖಸ್ಯ-ಬ್ರಹ್ಮದೇವರ, ವರಾತ್-ವರದಿಂದಲೇ, ಅಜೇಯತ್ವಂ=ಪರರಿಂದ ಜಯಿಸದೇ ಇರೋಣವನ್ನು ಅವಾಪ=ಹೊಂದಿದನೋ, ತದಾ-ಆಗ, ಅಬ್ಜಭವಾದಿಸಂಸ್ತುತಃ=ಅಬ್ಜ=ಬ್ರಹ್ಮದೇವರು, ಭವಾ-ರುದ್ರದೇವರು, ಇವರೇ, ಆದಿ=ಮೊದಲಾದವರಿಂದ, ಸಂಸ್ತುತಃ=ಸ್ತೋತ್ರಮಾಡಿಸಿಕೊಳ್ಳಲ್ಪಟ್ಟಂಥ, ಶ್ರೀಹರಿಯು

ಸಾಕ್ಷಾತ್ ಶ್ರೀಕೃಷ್ಣನಾಗಿ, ಅಜೋಽಪಿ=ಜನನಾದಿಗಳಿಂದ ರಹಿತನಾದರೂ, ಇಂದ್ರಾನುಜಃ=ಇಂದ್ರ=ಇಂದ್ರದೇವರಿಗೆ, ಅನುಜಃ=ತಮ್ಮನಾಗಿ, ಅದಿತೇಃ=ಅದಿತಿದೇವಿಯು, ಸುತಃ=ಮಗನಾದ ವಾಮನನೆಂಬ ಹೆಸರುಳ್ಳವನಾಗಿ, ಅಜಾಯತ=ಹುಟ್ಟಿದನು.

ತಾತ್ಪರ್ಯ.—ದೈತ್ಯೇಶ್ವರನಾದ ಬಲಿಚಕ್ರವರ್ತಿಯು ಬ್ರಹ್ಮದೇವರಿಂದ ಅಜೇಯತ್ವವನ್ನು ಯಾವಾಗ ಹೊಂದಿದನೋ ಆಗ ಬ್ರಹ್ಮಾದಿಗಳಿಂದ ಸ್ತುತ್ಯನಾದ ಶ್ರೀಹರಿಯು ತಾನು ಜನನರಹಿತನಾದರೂ ಬ್ರಹ್ಮಾದಿಗಳಿಂದ ಪ್ರಾರ್ಥಿತನಾಗಿ ಅದಿತಿದೇವಿಯಲ್ಲಿ ವಾಮನನೆಂಬ ಹೆಸರಿನಿಂದ ಇಂದ್ರದೇವರ ತಮ್ಮನಾಗಿ ಅವತರಿಸಿದನು.

ವಿಶೇಷಾರ್ಥ.—ಅದಿತಿದೇವಿಯು ತನ್ನ ಮಕ್ಕಳಾದ ಇಂದ್ರಾದಿಗಳು ದೈತ್ಯರಿಂದ ಬಾಧಿತರಾಗಿ ಸ್ವರ್ಗಾದಿ ಐಶ್ವರ್ಯಾದಿಗಳಿಂದ ರಹಿತರಾಗಲು ತನ್ನ ಗಂಡನಾದ ಕಶ್ಯಪರ ಬಳಿಗೆ ಹೋಗಿ ಪುತ್ರರು ಬಲಹೀನರಾಗಿ ತಮ್ಮ ಲೋಕವನ್ನು ಬಿಟ್ಟು ಪರ್ವತಗಳಲ್ಲಿ ಗೋಪ್ಯವಾಗಿ ಸಂಚರಿಸುತ್ತಿದ್ದಾರೆ, ಅವರು ತಮ್ಮ ತಮ್ಮ ಲೋಕಗಳ ಆಧಿಪತ್ಯವನ್ನು ಹೊಂದುವಂತೆ ಶ್ರೀಹರಿಯನುಗ್ರಹ ಸಂಪಾದಿಸುವುದಕ್ಕಾಗಿ ತಪಸ್ಸನ್ನು ಆಚರಿಸಲು ಆಜ್ಞೆ ಕೊಡಬೇಕೆಂದು ಪ್ರಾರ್ಥಿಸಿದಳು. ಆಗ ಕಶ್ಯಪರು "ಎಲೈ ದೇವಿ ! ಪಯೋವ್ರತವೆಂಬ ತಪಸ್ಸನ್ನು ಶ್ರೀಹರಿಯ ಪ್ರೀತ್ಯರ್ಥವಾಗಿ ಫಾಲ್ಗುಣಶುದ್ಧ ಪಾಡ್ಯಮಿ ಮೊದಲು ದ್ವಾದಶೀಪರ್ಯಂತರ ಹನ್ನೆರಡು ದಿವಸಗಳಾಚರಿಸು, ಶ್ರೀಹರಿಯು ಪ್ರಸನ್ನನಾಗುತ್ತಾನೆ," ಎನಲು ಅದಿತಿಯು ಅದೇ ರೀತಿಯಾಗಿ ಆಚರಿಸಿದಳು. ಸಂತುಷ್ಟನಾದ ಶ್ರೀಹರಿಯು ಜನನಮರಣಗಳಿಂದ ರಹಿತನಾದರೂ ಆ ದೇವಿಯ ಪ್ರಾರ್ಥನೆಯಂತೆ ಆಕೆಗೆ ಪುತ್ರನಾಗಿ ಸಂತೋಷಪಡಿಸಿದನು. ಆದರೆ ಗರ್ಭದಲ್ಲಿ ಹುಟ್ಟಿದನೆಂದು ತಿಳಿಯಬಾರದು. ನೃಸಿಂಹ ಗುರುಶುಕ್ಲಶೋಣಿತ ಸಂಬಂಧವಿಲ್ಲದೆ ಹೇಗೆ ಸ್ಥಂಭದಿಂದ ಉದ್ಭವಿಸಿದನೋ ಹಾಗೆ ವಾಮನರೂಪದಿಂದ ಶ್ರೀಹರಿಯು ಉದ್ಭವಿಸಿದನೆಂದು ತಿಳಿಯಬೇಕು.

ಅವತಾರಿಕೆ.—ಪುನಃ ವಾಮನರೂಪಿಯಾದ ದೇವರ ಮಹಿಮೆಯನ್ನು ಸೂಚಿಸುತ್ತಾರೆ.—

ಶ್ಲೋಕ !! ಸವಾಮನಾತ್ಮಾಸುರಭೂಭೃತೋಧ್ವರಂ ಜಗಾಮಗಾಂಸಂಯ
ಮಯಿರ್ಷ ಪದೇಪದೇಜಹಾರಚಾಸ್ಮಾಚ್ಛಲತ ಸ್ತ್ರಿವಿಷ್ಟಪಂತ್ರಿಭಿಕ್ರ
ಮೈಃಸ್ತಚ್ಚ ದದೌ ನಿಜಾಗ್ರಜೇ ॥೪೮॥

ಅರ್ಥ.— ಸಃ= ಅಂತಹ, ವಾಮನಾತ್ಮಾ=ವಾಮನರೂಪಿಯಾದ ಶ್ರೀಹರಿಯು, ಅಸುರಭೂಭೃತಃ=ದೈತ್ಯಶ್ರೇಷ್ಠನಾದ ಬಲಿಚಕ್ರವರ್ತಿಯು, ಅಧ್ವರಂ=ಅಶ್ವಮೇಧಯಜ್ಞವನ್ನು ಕುರಿತು, ಪದೇಪದೇ=ಪ್ರತಿಪ್ರತಿ ಹೆಜ್ಜೆಯಲ್ಲಿಯೂ, ಗಾಂ=ಭೂಮಿಯನ್ನು, ಯಮಯರ್ಷ=ನಿಗ್ರಹಿಸತಕ್ಕವನಾಗಿ, ಜಗಾಮ=ಹೊರಟನು. ಅಸ್ಮಾತ್=ಆ ಬಲಿಯ ದೆಸೆಯಿಂದ, ತ್ರಿವಿಷ್ಟಪಂ= ಸ್ವರ್ಗವನ್ನು, ಛಲತಃ=ಮೋಸದಿಂದ, ತ್ರಿಭಿಃ=ಮೂರಾದ, ಕ್ರಮೈಃ=ಹೆಜ್ಜೆಗಳಿಂದ, ಜಹಾರಚ=ಅಪಹಾರಮಾಡಿದನು. ತಚ್ಚ=ಆ ಸ್ವರ್ಗವನ್ನು, ನಿಜಾಗ್ರಜೇ= ನಿಜ=ತನ್ನ, ಅಗ್ರಜೇ=ಅಣ್ಣನಾದ ಇಂದ್ರನಲ್ಲಿ, ದದೌ=ಕೊಟ್ಟನು.

ತಾತ್ಪರ್ಯ.— ವಾಮನರೂಪಿಯಾದ ಶ್ರೀಹರಿಯು ದೈತ್ಯಶ್ರೇಷ್ಠನಾದ ಬಲಿಚಕ್ರವರ್ತಿಯ ಅಶ್ವಮೇಧಯಜ್ಞಮಂಟಪವನ್ನು ಕುರಿತು ಪ್ರತಿಪ್ರತಿ ಹೆಜ್ಜೆಯಿಂದಲೂ ಭೂಮಿಯ ಅಧರ್ಮವನ್ನು ನಿಗ್ರಹಿಸುತ್ತಾ ಹೋದನು. ಮೂರು ಹೆಜ್ಜೆ ಭೂಮಿಯನ್ನು ಬೇಡುವ ವ್ಯಾಜದಿಂದ ಸ್ವರ್ಗವನ್ನು ಅಪಹರಿಸಿ ಆ ಸ್ವರ್ಗವನ್ನು ಇಂದ್ರನಿಗೆ ಕೊಟ್ಟನು.

ವಿಶೇಷಾರ್ಥ.—ಭಗವದವತಾರಗಳು ಲೋಕದಲ್ಲಿ ಉಂಟಾದ ಅಧರ್ಮವನ್ನು ಕಳೆದು ಧರ್ಮವನ್ನು ಸ್ಥಾಪಿಸುವುದಕ್ಕಾಗಿಯೇ ಹೊರತು ಬೇರೆ ಅಲ್ಲ. ಹೀಗಿರಲು ಈ ಶ್ಲೋಕದಲ್ಲಿ ವಾಮನರೂಪಿಯಾದ ಪರಮಾತ್ಮನು ಬಲಿಚಕ್ರವರ್ತಿಗೆ ಮೋಸಮಾಡಿ ಸ್ವರ್ಗವನ್ನು ಅಪಹರಿಸಿದನೆಂದು ಹೇಳಿದ್ದರಿಂದ ದೋಷದೂರನಾದ ಶ್ರೀಹರಿಗೆ ವೈಷಮ್ಯ, ಪಕ್ಷಪಾತ, ಅಜ್ಞಾನ ಇವುಗಳು ಕಂಡುಬರುತ್ತವೆ. ಅಧಿಕಾರಿಗಳು ಹಾಗೆ ತಿಳಿಯಬಾರದು, ಸ್ವರ್ಗಾಧಿಪತ್ಯವು ಇಂದ್ರನಿಗೇ ಸೇರಿದ್ದೇ ಹೊರತು ಬಲಿಚಕ್ರವರ್ತಿಗಲ್ಲ. ಆದ್ದರಿಂದ ಇಂದ್ರನಿಗೆ ಅದನ್ನು ಕೊಟ್ಟನು. ಆದರೆ ಬಲಿಚಕ್ರವರ್ತಿಗೆ ಸಂಬಂಧಿಸದೇ ಇದ್ದರೆ ಯುದ್ಧಮಾಡಿ ತರಬಹುದಾಗಿತ್ತು. ಏಕೆ ತರಲಿಲ್ಲವೆಂದರೆ ಬಲಿಯು ಸ್ವರ್ಗವನ್ನು ಹೊಂದಿ ಹರಿಯನುಗ್ರಹಪಡೆಯಲು ಪ್ರಯತ್ನಿಸಿ ನೂರು ಯಜ್ಞಗಳನ್ನು ಮಾಡಿ ಇಂದ್ರಪದವಿಯ ಸಾಧನವನ್ನು ಮಾಡಿದನು. ಅದ್ದ

ರಿಂದ ಬಲಿಯು ಅರ್ಹನೆಂದು ತಿಳಿದು ದಯಾಸಮುದ್ರನಾದ ಶ್ರೀಹರಿಯು ಮುಂದಿನ ಇಂದ್ರಪದವಿಯನ್ನು ಬಲಿಚಕ್ರವರ್ತಿಗೆ ಕೊಟ್ಟು ಈಗಿನ ಆಧಿಪತ್ಯವನ್ನು ಇಂದ್ರನಿಗೆ ಕೊಟ್ಟನು. ಈ ರೀತಿಯಾಗಿ ಭಕ್ತವಾತ್ಸಲ್ಯವುಳ್ಳ ಶ್ರೀಹರಿಗೆ ಅಜ್ಞಾನಾದಿಗಳು ಹೇಗೆ ಕೂಡೀತು ? ಸರ್ವಥಾ ಕೂಡುವುದಿಲ್ಲ. ಮತ್ತು ಈ ಹರಿಯು ದಾನಕ್ಕೆ ವಾಮನರೂಪಿಯಾಗಿ, ಯಾಚಿಸಿ ನಂತರ ತ್ರಿವಿಕ್ರಮರೂಪಿಯಾಗಿ ಲೋಕದ ಅಂಥರೆ ಚೇತನರುಗಳು ಪಾಪವನ್ನ ದಹಿಸುವ ಮಹಿಮೋಪೇತಳಾದ ಭಾಗೀರಥಿಯನ್ನು ಪಡೆದು ಗಂಗಾಜನಕನೆಂಬುವ ನಾಮವನ್ನು ಪಡೆದನು. ಅನಂತರ ಬಲಿಯು ಭೂದಾನಕೊಡಲು ಸ್ವೀಕರಿಸಿ ಅಣ್ಣನಾದ ಇಂದ್ರನಿಗೆ ಕೊಟ್ಟು ಉಪೇಂದ್ರನೆಂಬ ಹೆಸರಿಗೆ ಅರ್ಹನಾದ ರೂಪವುಳ್ಳವನಾಗಿ ವ್ರತ, ಪುಣ್ಯ, ಧರ್ಮ, ಯಜ್ಞ ಇವುಗಳಿಗೆ ಸ್ವಾಮಿ ಎನಿಸಿ ಬ್ರಹ್ಮಾದಿ ಅಶೇಷದೇವತೆಗಳಿಂದ ಪೂಜಿತನಾಗಿ ಸ್ವರ್ಗದಲ್ಲಿ ಇಂದ್ರನ ಆಧಿಪತ್ಯವನ್ನು ನಡಿಸುತ್ತಾ ಪ್ರಕಾಶಮಾನನಾಗಿರುತ್ತಾನೆ.

ಅವತಾರಿಕೆ.--ಕಪಟದಿಂದ ಬಲಿಯನ್ನು ವಂಚಿಸಿ ಅವನ ಸರ್ವಸ್ವವನ್ನೂ ಸ್ವೀಕರಿಸಿದ್ದಕ್ಕೆ ಕಾರಣವನ್ನು ಹೇಳುತ್ತಾರೆ.--

**ಶ್ಲೋಕ ॥ ಪಿತಾಮಹೇನಾಸ್ಯಪುರಾಭಿಯಾಚಿತೋ ಬಲೇಃ ಕೃತೇ ಕೇಶವ ಆಹಯದ್ವಚಃ । ನಯಾಚ್ಞಯಾಹಂ ಪ್ರತಿಹನ್ಮಿತಂ ಬಲಿಂ ಶುಭಾನನೇತ್ಯೇವತತೋಭ್ಯಯಾಚತ ॥೪೯॥**

ಅರ್ಥ.-ಕೇಶವಃ=ಬ್ರಹ್ಮರುದ್ರಪದಪ್ರವರ್ತಕನಾದ ಶ್ರೀಹರಿಯು, ಬಲೇಃ=ಬಲಿಚಕ್ರವರ್ತಿಯ, ಕೃತೇ=ನಿಮಿತ್ತವಾಗಿ, ಅಸ್ಯ=ಆ ಬಲಿಯ, ಪಿತಾಮಹೇನ=ತಾತನಾದ ಪ್ರಹ್ಲಾದನಿಂದ, ಪುರ=ಪೂರ್ವದಲ್ಲಿ, ಅಭಿಯಾಚಿತಃ=ಪ್ರಾರ್ಥಿಸಿಕೊಳ್ಳಲ್ಪಟ್ಟವನಾಗಿ, ಯದ್ವಚಃ=ಯಾವ ವಚನವನ್ನು, ಅಹ ಹೇಳಿದನು. ಅಹಂ=ನಾನು, ತಂ=ಅಂತಹ, ಬಲಿಂ=ಬಲಿಚಕ್ರವರ್ತಿಯನ್ನು, ನಪ್ರತಿಹನ್ಮಿ=ಸಂಹಾರಮಾಡುವುದಿಲ್ಲ. ಹೇ ! ಶುಭಾನನ=ಓ ಮಂಗಳಕರನಾದ ಪ್ರಹ್ಲಾದನೇ, ಯಾಚ್ಞಯಾ=ಬೇಡುವಿಕೆಯಿಂದ, ಸ್ವೀಕರೋಮಿ=ಸ್ವೀಕರಿಸುತ್ತೇನೆ, ತತಃ=ಆದಕಾರಣದಿಂದ, ಅಭ್ಯಯಾಚತ=ಯಾಚನಮಾಡಿದನು.

ತಾತ್ಪರ್ಯ — ಬ್ರಹ್ಮ ರುದ್ರ ಪದಪ್ರವರ್ತಕನಾದ ಶ್ರೀಹರಿಯು ನೃಸಿಂಹಾವತಾರದಲ್ಲಿ ಪ್ರಹ್ಲಾದರಾಯರಿಂದ ಬಲಿಚಕ್ರವರ್ತಿ ನಿಮಿತ್ತವಾಗಿ ಪ್ರಾರ್ಥಿತನಾಗಿ " ಓ ಪ್ರಹ್ಲಾದನೇ ನಾನು ಸರ್ವಥಾ ಬಲಿಚಕ್ರವರ್ತಿಯನ್ನು ಸಂಹರಿಸುವುದಿಲ್ಲ. ದಾನದಿಂದ ಸ್ವೀಕರಿಸುತ್ತೇನೆ ' ಎಂದು ಹೇಳಿದ್ದನು. ಅದೇ ರೀತಿಯಾಗಿ ಈಗ ಯಾಚಿಸಿದನು.

ವಿಶೇಷಾರ್ಥ.— ಪ್ರಹ್ಲಾದರು ಕರ್ಮಜರು, ಬಲಿಯೂ ಕರ್ಮಜನೇ ಇವರು ಭೂಲೋಕದಲ್ಲಿ ಕರ್ಮಮಾಡಿ ಕರ್ಮದಿಂದಲೇ ದೇವಪದವಿಯನ್ನು ಹೊಂದತಕ್ಕವರು. ಹೀಗಿರಲು ಸರ್ವಜ್ಞಶಿಖಾಮಣಿಯಾದ ಶ್ರೀಹರಿಯು ಸರ್ವಚೇತನರುಗಳ ಸಾಧನಕ್ಕೆ ಬೇಕಾದ ಕಾಲ, ದೇಶ, ವಿಷಯ ಇವುಗಳನ್ನು ಪ್ರತಿಪ್ರತಿಕ್ಷಣದಲ್ಲಿಯೂ, ಚೇತನರಿಗೆ ಕೊಟ್ಟು ಸಲಹುವವನಾಗಿರಲಿಕ್ಕೆ ಪ್ರಹ್ಲಾದನ ಪ್ರಾರ್ಥನೆ ಅವನಿಗೆ ಬೇಕಾಗಿರಲಿಲ್ಲ. ಆದರೆ ಭಕ್ತವಾತ್ಸಲ್ಯವನ್ನು ತೋರಿಸುವುದಕ್ಕಾಗಿ ಯಾಚಿಸಿದನು ಮತ್ತು ನೃಸಿಂಹಾವತಾರಮಾಡಿದ ಕಾಲದಲ್ಲಿ ಕರಾಳರೂಪಿಯಾದ ನೃಸಿಂಹನ ರಭಸವನ್ನು ನೋಡಿ ಬ್ರಹ್ಮಾದಿಗಳು ಶಾಂತನಾಗಬೇಕೆಂದು ಪ್ರಾರ್ಥನೆಮಾಡಿದರೂ ಶಾಂತನಾಗದೆ ಪ್ರಹ್ಲಾದನ ಪ್ರಾರ್ಥನಾನಂತರ ಶಾಂತನಾದನೆಂದು ಭಾಗವತಾದಿಗಳು ಹೇಳುವವು. ಇದರಿಂದ ಶ್ರೀಹರಿಯು ಭಕ್ತಪರಾಧೀನನೆಂದು ತಿಳಿಯಬೇಕು.

ಅವತಾರಿಕೆ.— ಶ್ರೀಹರಿಯ ಪರಶುರಾಮಾವತಾರದ ಕಥೆಯನ್ನು ಹೇಳುತ್ತಾರೆ.—

**ಶ್ಲೋಕ || ಬಭೂವಿರೇ ಚಂದ್ರಲಲಾಮತೋ ವರಾತ್ಪುರಾಹ್ಯಜೇಯಾ ಅಸುರಾ ಧರಾತಳೇ | ತೈರರ್ದಿತಾವಾಸವನಾಯಕಾಸ್ಸುರಾಃ ಪುರೋನಿಧಾಯಾಬ್ಜಜಮುಸ್ತ್ವಾರ್ವಹರಿಂ ||೫೦||**

ಅರ್ಥ.—ಪುರ=ಪೂರ್ವದಲ್ಲಿ, ಅಸುರಾಃ=ದೈತ್ಯರುಗಳು, ಚಂದ್ರಲಲಾಮತಃ=ಮುಖದ ಹಣೆಯಲ್ಲುಳ್ಳ ರುದ್ರದೇವರ, ವರಾತ್=ವರದಿಂದ, ಅಜೇಯಾಃ—ಇತರರಿಂದ ಜಯಿಸಲು ಅಸಾಧ್ಯರಾಗಿ, ಧರಾತಳೇ=ಭೂಮಂಡಲದಲ್ಲಿ, ಬಭೂವಿರೇ=ಹುಟ್ಟಿದರು, ಹಿ=ಪ್ರಸಿದ್ಧವು, ವಾಸವನಾಯಕಾಃ ವಾಸವ=ಇಂದ್ರದೇವರೇ, ನಾಯಕಾಃ=ಯಜಮಾನನಾಗುಳ್ಳಂಥಾ, ಅಸುರ

ರಿಂದ, ಅರ್ದಿತಾಃ-ಭಾದಿತರಾಗಿ, ಅಬ್ಜಜಂ-ಕಮಲದಲ್ಲಿ ಹುಟ್ಟಿದ ಬ್ರಹ್ಮದೇವರನ್ನು, ಪುರಃ-ಮುಂಭಾಗದಲ್ಲಿ, ನಿಧಾಯ-ಇಟ್ಟುಕೊಂಡು, ಹರಿಂ-ಶ್ರೀನಾರಾಯಣನನ್ನು, ಅಸ್ತುವನ್-ಸ್ತೋತ್ರವಮಾಡಿದರು.

ತಾತ್ಪರ್ಯ:—ದೈತ್ಯರುಗಳು ಮುದ್ರದೇವರ ವರದಿಂದ ಗರ್ವಿತರಾಗಿ ಭೂಲೋಕದಲ್ಲಿ ಅವತರಿಸಿ ಸಜ್ಜನರು ಮಾಡುವ ಸತ್ಕರ್ಮಗಳಿಗೆ ವಿಘ್ನಮಾಡಲು ಇವರು ದೇವತೆಗಳನ್ನು ಪ್ರಾರ್ಥಿಸಿದರು. ದೇವತೆಗಳು ಸಜ್ಜನರ ಪ್ರಾರ್ಥನಾನುಸಾರ ಬ್ರಹ್ಮದೇವರನ್ನು ಮುಂದಿಟ್ಟುಕೊಂಡು ಶ್ರೀ ಹರಿಯನ್ನು ಪ್ರಾರ್ಥಿಸಿದರು.

ವಿಶೇಷಾರ್ಥ:—ಸಾಧನ ಜೇತನರುಗಳು ಮೂರು ವಿಧ—ಒಂದನೆಯುದು ಸಾತ್ವಿಕ, ಎರಡನೆಯುದು ರಾಜಸ, ಮೂರನೆಯುದು ತಾಮಸ ಇವುಗಳಲ್ಲಿ ಸಾತ್ವಿಕ ಚೇತನರು ಎಂದಿಗೂ ದೇವರಲ್ಲಿ ಭಕ್ತಿಯನ್ನು ಬಿಡದೆ ನೈರಂತರ ಭಕ್ತಿಯಿಂದ ಮೋಕ್ಷಹೊಂದುತ್ತಾರೆ. ರಾಜಸರು ವಿಶೇಷ ಭಕ್ತಿಯನ್ನು ಮಾಡದೇ ದ್ವೇಷವನ್ನೂ ಮಾಡದೇ ಉದಾಶೀನರಾಗಿರುತ್ತಾರೆ.. ತಾಮಸರು ಸಾತ್ವಿಕರು ಮಾಡುವ ಕರ್ಮಗಳಿಗೆ ಪ್ರತಿಬಂಧಿಸಿ ವಿಷ್ಣು ವೈಷ್ಣವ ದ್ವೇಷವನ್ನು ಮಾಡಿ ಪುನರುತ್ಥಾನವಿಲ್ಲದ ತಮಸ್ಸಿಗೆ ಹೋಗುತ್ತಾರೆ. ತಾಮಸರಲ್ಲಿ ದೈತ್ಯರು, ರಾಕ್ಷಸರು, ಪಿಶಾಚಗಳು ಮನುಷ್ಯಾಧಮರೆಂದು ನಾಲ್ಕು ಪ್ರಕಾರ, ಭೂಲೋಕದಲ್ಲಿ ಉತ್ತಮ ಸಾಧನ ಮಾಡತಕ್ಕವರು ಮಧ್ಯಮ ಸಾಧನ ಮಾಡತಕ್ಕವರು ಅಧಮ ಸಾಧನ ಮಾಡತಕ್ಕರು. ಎಂದು ಮೂರು ವಿಧ. ಎಲ್ಲರೂ ಈ ಕರ್ಮಭೂಮಿಯಲ್ಲಿ ಅವತರಿಸಿ ಸಾಧನೆ ಮಾಡಬೇಕೇ ಹೊರತು ಬೇರೆ ಇಲ್ಲ. ಆದ್ದರಿಂದ ದೈತ್ಯರು ತಮ್ಮ ಸಾಧನಕ್ಕಾಗಿ ಅವತರಿಸಲು ಧರ್ಮ ಕೆಡುವುದು. ಆ ಕಾಲದಲ್ಲಿ ಶ್ರೀ ಹರಿಯು ತಾನು ಅವತರಿಸಿ ಧರ್ಮೋದ್ಧಾರ ಮಾಡುತ್ತಾನೆ.

ಅವತರಿಕೆ:—ದೇವತೆಗಳು ಮಾಡಿದ ಸ್ತೋತ್ರವನ್ನು ತಿಳಿಸುತ್ತಾರೆ.

ಶ್ಲೋಕ|| ಪಂಚಸ್ವಪ್ನಾನಿತ ರಾಮಾಪಧ್ಯಾಸರಾದ್ವಿಧಾತುರ್ದಿತಿ ಜೌಹಿರಣ್ಯಕೌ||
ತಥಾಹಯಗ್ರೀವ ಉದಾರವಿಕ್ರಮಸ್ತ್ವಯಾ ಹತಾಬ್ರಹ್ಮಪುರಾತನೇನ ||೫೧

ಅರ್ಥ:—ವಿರಿಂಚಸೃಷ್ಟ್ಯಾ-ವಿರಿಂಚ-ಬ್ರಹ್ಮದೇವರ, ಸೃಷ್ಟ್ಯಾ-ಸೃಷ್ಟಿಯಲ್ಲಿ, ದಿತಿಜೌ ದಿತಿ-ದಿತಿದೇವಿಯಲ್ಲಿ, ಜೌ-ಕ ಟ್ಟಿದಂಥ, ಹಿರಣ್ಯಕೌ-ಹಿರಣ್ಯಾಕ್ಷ ಹಿರಣ್ಯಕಶ್ಯಪರುಗಳು, ವಿಧಾತುಃ-ಬ್ರಹ್ಮದೇವರ, ವರಾತ್-ವರದಿಂದ. ನಿತರಾಂ-ಅತ್ಯಂತವಾಗಿ, ಅವಧ್ಯೌ-ಸಂಹಾರಕ್ಕೆ ಸಾಧ್ಯರಲ್ಲದವರು, ತಥಾ-ಹಾಗೆಯೇ, ಉದಾರವಿಕ್ರಮಃ ಉದಾರ ಬಹಳವಾದ, ವಿಕ್ರಮಃ-ಪರಾಕ್ರಮವುಳ್ಳಂಥ, ಹಯಗ್ರೀವ-ಹಯಗ್ರೀವಾಸುರನು, ಇವರು ಮೂವರೂ, ಬ್ರಹ್ಮಪುರಾತನೇನ-ಬ್ರಹ್ಮದೇವರಿಗೆ, ಪುರಾತನೇನ-ತಂದೆಯಾದ, ತ್ವಯಾ-ನಿನ್ನಿಂದ, ಹತಾಃ-ಸಂಹರಿಸಲ್ಪಟ್ಟರು.

ತಾತ್ಪರ್ಯ:—ಓಹೋ! ಸ್ವಾಮಿಯೇ ಬ್ರಹ್ಮದೇವರ ಸೃಷ್ಟಿಯಲ್ಲಿ ದಿತಿಯಲ್ಲಿ ಅವತಾರಮಾಡಿದ ಹಿರಣ್ಯಾಕ್ಷ ಹಿರಣ್ಯಕಶ್ಯಪರುಗಳು ಯಾರಿಂದಲೂ ಸಂಹರಿಸಲ್ಪಡದೇ ಇರತಕ್ಕವರು, ಮಹಾ ಪರಾಕ್ರಮಶಾಲಿಯಾದ ಹಯಗ್ರೀವಾಸುರನು ಸಂಹಾರಕ್ಕೆ ಅರ್ಹನಲ್ಲದೇ ಇರತಕ್ಕವನು. ಹೀಗಿರಲು ಇವರು ಮೂವರೂ ಬ್ರಹ್ಮನ ತಂದೆಯಾದ ನಿನ್ನಿಂದಲೇ ಹತರಾದರು.

ವಿಶೇಷಾರ್ಥ:—ಶ್ರೀಹರಿಯ ಆಜ್ಞೆಯಿಂದ ಬ್ರಹ್ಮ ರುದ್ರಾದಿಗಳು ದೈತ್ಯರು, ರಾಕ್ಷಸರುಗಳಿಗೆ ವರಗಳನ್ನು ಕೊಡುತ್ತಾರೆ. ಇಂತಹ ವರಗಳನ್ನು ಉಲ್ಲಂಘಿಸಿ ದೈತ್ಯರನ್ನು ನಿಗ್ರಹಿಸುವ ಶಕ್ತಿಯು ಆ ಪರಬ್ರಹ್ಮನಾದ ನಾರಾಯಣನ ಹೊರತು ಮತ್ತಾರಿಗೂ ಇಲ್ಲ. ಶ್ರೀಹರಿಯು ಸಕಲ ಅವತಾರಗಳಲ್ಲಿಯೂ ಬಲಪೂರ್ಣನೆಂದು ಉಪಾಸನ ಮಾಡಬೇಕು.

ಪರಮಾತ್ಮನ ಸಕಲವತಾರಗಳು ಮತ್ತು ಅಂಗಗಳೂ ಸಹ ಸರ್ವಕಾಲದಲ್ಲಿಯೂ ಸಕಲ ದೇಶಗಳಲ್ಲಿಯೂ, ಸರ್ವ ಗುಣಗಳಿಂದಲೂ, ಪೂರ್ಣಗಳೆಂದು ತಿಳಿಯಬೇಕು

ಅವತಾರಿಕೆ:—ಇನ್ನೂ ಅದೇ ಸ್ತೋತ್ರ ಭಾಗವನ್ನೇ ತಿಳಿಸುತ್ತಾರೆ:—

ಶ್ಲೋಕ॥ ಸಚಾಸುರಾಃ ಖುದ್ರವರಾದವಧ್ಯಾ ಸಮಾಸ್ತ್ವದಾಸ್ತ್ರೈರಪಿದೇವ ದೇವಃ॥
ನಿಸ್ಸೀಮಶಕ್ತ್ಯಾತ್ವವನಿಹತ್ಯಸರ್ವಾನ್ ಕೃದಂಬುಜೇನೋ ನಿವಸಾಥಶಶ್ವತ್ ॥೫೨॥

ಅರ್ಥ:—ದೇವದೇವ-ಬ್ರಹ್ಮಾದಿಗಳಿಂದ ವಂದಿತನಾದ ನಾರಾಯಣನೇ, ಸಃ-ಅಂರಹ, ತ್ವಂ-ನೀನು, ರುದ್ರವರಾತ್-ರುದ್ರ-ರುದ್ರದೇವರ, ವರಾತ್ ವರದ

ದೆಶೆಯಿಂದ, ಶವ ಸ್ತ್ವೈರಪಿ-ಶರ್ವರಿಂದಲೂ ಅವಧ್ಯಾನ್-ಸಂಹಾರವಿಲ್ಲದೇ ಇರುವಂಥ ಇವರ್ಾ-ಇಂಥಾ, ಸರ್ವಾನ್-ಸಮಸ್ತರಾದ ಅಸುರಾನ್-ದೈತ್ಯರುಗಳನ್ನು, ನಿಸ್ಸೀಮಶಕ್ತ್ಯಾ-ಪೂರ್ಣಶಕ್ತಿಯಿಂಗಲೇ, ನಿಹತ್ಯ-ಸಂಹಾರಮಾಡಿ, ಅಥ-ಅನಂತರದಲ್ಲಿ, ನಃ-ನಮ್ಮಗಳ, ಹೃದಂಬುಜೇ ಹೃದಯಕಮಲದಲ್ಲಿ, ಶಶ್ವತ್-ನಿರಂತರವಾಗಿ, ನಿವಸ-ವಾಸಮಾಡು

ತಾತ್ಪರ್ಯ:—ಬ್ರಹ್ಮಾದಿಗಳಿಂದ ವಂದಿತನಾದಂಥ ಓ ಸ್ವಾಮಿಯೇ! ನೀನು ರುದ್ರದೇವರ ದೆಶೆಯಿಂದಲೂ ಇನ್ನೂ ಇತರರಿಂದಲೂ ಸಂಹರಿಸಲು ಅಶಕ್ಯರಾದ ದೈತ್ಯರುಗಳನ್ನು ಪೂರ್ಣಶಕ್ತಿಯಿಂದ ಸಂಹರಿಸಿ ನಮ್ಮ ಹೃದಯದಲ್ಲಿ ಶಾಶ್ವತವಾಗಿ ವಾಸಮಾಡು.

ವಿಶೇಷಾರ್ಥ:—ಈ ಶ್ಲೋಕದಲ್ಲಿ ನಮ್ಮ ಹೃದಯದಲ್ಲಿ ವಾಸಮಾಡೆಂದು ಪ್ರಾರ್ಥಿಸಿದ್ದಾರೆ. ವೇದ ಪ್ರಮಾಣ:—"ತತ್ಸೃಷ್ಟ್ವಾ ತದೇವಾನು ಪ್ರಾವಿಶತ್ ತದನುಪ್ರವಿಶ್ಯ" ಎಂಬುವ ತೈತ್ತಿರೀಯ ಶ್ರುತಿಯು ಶ್ರೀಹರಿಯು ಬ್ರಹ್ಮಾಂಡದಲ್ಲಿ ಸೃಷ್ಟಿಸಿದ ಅಣುರೇಣು ಪದಾರ್ಥದಲ್ಲಿ ವ್ಯಾಪ್ತನಾಗಿ ಪ್ರವೇಶಿಸಿದ್ದಾನೆಂದು ಹೇಳುತ್ತಾ ಇರಲಿಕ್ಕೆ ದೇವತೆಗಳು ನಮ್ಮ ಹೃದಯದಲ್ಲಿ ಶಾಶ್ವತವಾಗಿ ವಾಸಿಸೆಂದು ಕೇಳಿದ್ದರಿಂದ ಸರ್ವದೈತ್ಯರನ್ನು ನಿಗ್ರಹಿಸುವ ಬಲವೆಂಬ ಗುಣದಿಂದ ಪೂರ್ಣನಾಗಿ ನಮ್ಮಿಂದ ಆಚರಿಸುವ ಕರ್ಮ, ಜ್ಞಾನ ಮತ್ತು ಭಕ್ತ್ಯಾದಿಗಳಿಗೆ ಪ್ರತಿಬಂಧಕ ಬರದಂತೆ ಅನುಗ್ರಹಿಸುವ ದಯಾ-ಸಮುದ್ರತಾ ಸಂಬಂಧವಾದ ಪೂರ್ಣೇಚ್ಛೆಯಿಂದ ಸರ್ವದಾ ವಾಸಿಸುವ ನೀನು ಬಿಂಬನೆಂದೆನಿಸಿ ಪ್ರಕಾಶವುಳ್ಳವನಾಗಲೆಂದು ಪ್ರಾರ್ಥಿಸಿದರು ಎಂದು ತಿಳಿಯಬೇಕು.

ಅವತಾರಿಕೆ:—ದೇವತೆಗಳಿಂದ ಪ್ರಾರ್ಥಿತನಾದ ಶ್ರೀಹರಿಯು ಅವತಾರಕಾರ್ಯವನ್ನು ತಿಳಿಸುತ್ತಾರೆ:—

ಶ್ಲೋಕ॥ ಇತ್ಯಾದರೋಕ್ತ ಸ್ತುತಿಭಿಸ್ತ್ರಿದಶೈಃ ಅಜೇಯಃ ಶಾರ್ಙ್ಗಧನುಷ್ಪೃಥುಭೃಗೂ
ದ್ವಹೋಽಭೂತ್। ರಾಮೋ ನಿಹತ್ಯಾಸುರಪೂಗಮುಗ್ರಂ ಪ್ರದಾನ
ನಾದಿರ್ವಿದಧೇಽಸ್ಯ ಚೈವ ॥೩೩॥

ಅರ್ಥ:—ಇತಿ-ಪೂರ್ವೋಕ್ತ ಪ್ರಕಾರವಾಗಿ, ತ್ರಿದಶೈಃ-ದೇವತೆಗಳಿಂದ, ಆದರ ವಿಶ್ವಾಸದಿಂದ, ಉಕ್ತಃ-ಸ್ತೋತ್ರಮಾಡಿಸಿಕೊಳ್ಳಲ್ಪಟ್ಟಂಥ ಅಜೇಯಃ- ಇತರರಿಂದ ಜಯಿಸಲಶಕ್ಯನಾದ. ಸಃ-ಅಂತಹ, ಸಾಂಜಧನ್ವ-ಸಾಂಙ್ ಧನಸ್ಸನ್ನು ಹಿಡಿದಂಥಾ ಶ್ರೀಹರಿಯು, ಭೃಗೂದ್ವಃ-ಭೃಗು-ಭೃಗೂ ಕುಲದಲ್ಲಿ, ಉದ್ವಃ-ಅವತಾರಮಾಡಿದ, ರಾಮಃ-ಪರಶುರಾಮನೆಂದೂ, ಅಭೂತ್-ಅವತರಿಸಿದನು ಅಥ-ಅನಂತರದಲ್ಲಿ ಅನಾದಿಃ-ಅದ್ಯಂತ ಶೂನ್ಯನಾದ ಶ್ರೀಪರಶುರಾಮದೇವರು, ಉಗ್ರಂ-ಕ್ರೂರವಾದಂಥ ಅಸುರಪೂಗಂ—ಅರಸು—ದೈತ್ಯರುಗಳ, ಪೂಗಂ—ಸಮೂಹವನ್ನು, ನಿಹತ್ಯ-ಸಂಹಾರಮಾಡಿ, ಅಸೃಜೈವ-ಆ ರಕ್ತದಿಂದಲೇ ಹ್ರದಾನ್-ತೀರ್ಥ ತಟಾಕುಗಳನ್ನು, ವಿದಧೇ-ನಿರ್ಮಿಸಿದನು

ತಾತ್ಪರ್ಯ:—ದೇವತೆಗಳಿಂದ ಭಕ್ತಿಪೂರ್ವಕವಾಗಿ ಪ್ರಾರ್ಥಿಸಿಕೊಳ್ಳಲ್ಪಟ್ಟ ಅಜೇಯನಾದ ಶಸಜ ಧನಸ್ಸುಳ್ಳ ಶ್ರೀಹರಿಯು ಭಾರ್ಗವಕುಲದಲ್ಲಿ ಪರಶುರಾಮನೆಂಬ ಹೆಸರಿನಿಂದ ಅವತರಿಸಿದನು. ಅನಂತರ ಕ್ರೂರವಾದ ದೈತ್ಯರುಗಳ ಸಮೂಹವನ್ನು ಸಂಹರಿಸಿ ಆ ರಕ್ತದಿಂದಲೇ ಶಮಂತಪಂಚಕವೆಂಬ ಐದು ತೀರ್ಥಗಳನ್ನು ನಿರ್ಮಿಸಿದನು.

ವಿಶೇಷಾರ್ಥ:—ಪರಶುರಾಮದೇವರು ದೋಷದೂರನಾದ ಗುಣಪೂರ್ಣನಾದ ಚಿದಾನಂದಾತ್ಮಕನಾದ ಶ್ರೀಹರಿಯೇ ಹೊರತು ಬೇರೆ ಅಲ್ಲ. ಸರ್ವ ಕ್ಷತ್ರಿಯರ ಸಂಹಾರದಿಂದ ಪಾಪಸಂಬಂಧವೇನೂ ಇವನಿಗೆ ಇಲ್ಲ ಆದರೂ "ಮರ್ತ್ಯಾವತಾರ ಸ್ತ್ವಿಹಮರ್ತ್ಯ ಶಿಕ್ಷಣಂ" ಎಂಬುವ ಪ್ರಮಾಣಾನುಸಾರ ಲೋಕ ಶಿಕ್ಷಣಕ್ಕಾಗಿ ಅವತರಿಸಿದನಾದ್ದರಿಂದ ದೈತ್ಯ ಸಂಹಾರದಿಂದ ಸಂಭವಿಸಿದ ಪಾಪವು ಹೇಗೆ ಹೋದೀತೆಂದು ಚಿಂತಿಪಡತಕ್ಕವನಂತೆ ನಡಿಸಲು ಭಾರ್ಗವ ಕುಲೀನರಾದ ರಾಮನ ಪಿತೃಗಳು ರಾಮನೇ ನಿನಗೆ ಪಾಪಸಂಭವವಿಲ್ಲ. ಆದರೂ ಇಲ್ಲಿ ಐದು ತೀರ್ಥಗಳನ್ನು ನಿರ್ಮಿಸಿ ಅವುಗಳಲ್ಲಿ ನಮಗೆ ತರ್ಪಣ ಕೊಡು ಎನ್ನಲು ಆಗ ರಾಮರು ಮೇಲೆ ಹೇಳಿದ ತೀರ್ಥವನ್ನು ನಿರ್ಮಿಸಿ ಆ ತೀರ್ಥದಿಂದ ತರ್ಪಣ ಕೊಟ್ಟರು.

ಅವತಾರಿಕೆ.—ರಾಮಾವತಾರಕ್ಕೆ ಕಾರಣಗಳನ್ನು ಹೇಳುತ್ತಾರೆ:—

**ಶ್ಲೋಕ॥ ತತಃಪುಲಸ್ತ್ಯಸ್ಯಕುಲೇಪ್ರಜಾತೌ ತಾವಾದಿದೈತ್ಯೌಜಗದೇಕಶತ್ರೂ ॥ ಪರೈರವಧ್ಯೌ ವರತಃಪುರಾಹರೇಃ ಸುರೈರಜೇಯೌಚ ವರಾದ್ವಿಧಾತುಃ ॥೫॥**

ಅರ್ಥ.—ತತಃ=ಅನಂತರದಲ್ಲಿ. ಜಗದೇಕಶತ್ರೂ=ಜಗತ್=ಜಗತ್ತಿಗೆ, ಏಕಶತ್ರೂ=ಮುಖ್ಯ ಶತ್ರುಗಳಾದ, ಪುರಾ=ಪೂರ್ವದಲ್ಲಿ, ಹರೇಃ=ಶ್ರೀಹರಿಯ, ವರತಃ=ವರದಿಂದ, ಪರೈಃ=ಇತರರಿಂದ, ಅವಧ್ಯೌ=ವಧ್ಯರಲ್ಲದೇ ಇರುವ, ವಿಧಾತುಃ=ಬ್ರಹ್ಮದೇವರ, ವರಾತ್=ವರದಿಂದ. ಸುರೈಃ=ದೇವತೆಗಳಿಂದ, ಅಜೇಯೌ=ಜಯಿಸಲು ಅಶಕ್ಯರಾದಂಥ, ತೌ=ಅಂಥ, ಆದಿದೈತ್ಯೌ=ಆದಿಯಲ್ಲಿ ಅವತರಿಸಿದ ಹಿರಣ್ಯಾಕ್ಷ ಹಿರಣ್ಯಕಶ್ಯಪರು, ಪುಲಸ್ತ್ಯಸ್ಯ=ಪುಲಸ್ತ್ಯ ಬ್ರಹ್ಮರ, ಕುಲೇ=ಕುಲದಲ್ಲಿ, ಪ್ರಜಾತೌ=ಹುಟ್ಟಿದರು.

ತಾತ್ಪರ್ಯ.—ಆದಿಯಲ್ಲಿ ಅವತರಿಸಿದ ಜಗತ್ತಿಗೆ ಮುಖ್ಯ ಶತ್ರುಗಳಾದ ಪೂರ್ವದಲ್ಲಿ ಶ್ರೀ ಹರಿಯ ವರದಿಂದ ಇತರರಿಂದ ಸಂಹಾರಾರ್ಹರಲ್ಲದೆಯೂ, ಅನಂತರ ಬ್ರಹ್ಮದೇವರ ವರದಿಂದ ದೇವತೆಗಳಿಂದಲೂ ಅವಧ್ಯರಾಗಿಯೂ ಪುಲಸ್ತ್ಯಬ್ರಹ್ಮರ ವಂಶದಲ್ಲಿ ಆತನ ಪುತ್ರರಾಗಿ ಹಿರಣ್ಯಾಕ್ಷ ಹಿರಣ್ಯಕಶ್ಯಪರು ಅವತರಿಸಿದರು.

ವಿಶೇಷಾರ್ಥ.—ಸನಕಾದಿಗಳಿಂದ ಶಾಪಗ್ರಸ್ತರಾದ ಜಯವಿಜಯರು ದುಃಖಪಡಲು ಶ್ರೀ ಹರಿಯು ತಾನು ಏನೂ ತಿಳಿಯದವನಂತೆ ನಟಿಸಿ ಅನಂತರ ನಡೆದ ವಿಷಯವನ್ನು ವಿಚಾರಿಸಿ ಭಕ್ತರಾದ ಜಯವಿಜಯರಿಗೆ, ಮೂರು ಅವತಾರಗಳಲ್ಲಿಯೂ ತಾನೇ ಸಂಹರಿಸುತ್ತೇನೆಂದು ಅಭಯಪ್ರಧಾನ ಮಾಡಿದನು. ನಂತರ ಭೂಮಿಯಲ್ಲಿ ಅವತರಿಸಿದ ಮೇಲೆ ದೇವತೆಗಳ ಕಡೆ ಯಿಂದಲೂ ವಧೆ ಬೇಡವೆಂದು ಬ್ರಹ್ಮದೇವರಿಂದ ವರವನ್ನ ಪಡೆದು ಕೊಂಡರು. ಇವರಲ್ಲಿ, ಮೂರು ಜನ್ಮಗಳಲ್ಲಿಯೂ ದೈತರ ಆವೇಶವುಂಟು. ಜೀವದ್ವಯ ಆವೇಶ-ಪುಣ್ಯಕ್ಕೆ ಜಯವಿಜಯರು. ಪಾಪಕ್ಕೆ ದೈತ್ಯರೆಂದು ತಿಳಿಯಬೇಕು.

ಅವತಾರಿಕೆ.—ಬ್ರಹ್ಮನ ವರ ಯಾವ ರೀತಿಯಾಗಿ ರಾವಣ ಕುಂಭ

ಕರ್ಣರಿಗೆ ಒದಗಿತೆಂಬುವುದನ್ನ ತಿಳಿಸುತ್ತಾರೆ.—

**ಶ್ಲೋಕ|| ಸರ್ವೈರಜೇಯಃ ಸಚಕುಂಭಕರ್ಣಃ ಪುರಾತನೇ ಜನ್ಮನಿಧಾತು ರೇವ || ವರಾನ್ನರಾದೀನ್ನೃತಏವ ರಾವಣ ಸ್ತದಾತನಾತ್ತೌ ತ್ರಿದ ಶಾನಬಾಧತಾಂ ||೫೫||**

ಅರ್ಥ.-ಸಃ=ಅಂತಹ, ಕುಂಭಕರ್ಣಃ=ಕುಂಭಕರ್ಣನು ಪುರಾತನೇ= ಹಿಂದಿನ, ಜನ್ಮನಿ=ಹಿರಣ್ಯಾಕ್ಷನಾಗಿ ಹುಟ್ಟಿದ್ದಾಗ, ಧಾತುಃ ಬ್ರಹ್ಮದೇವರ ವರಾದೇವ=ವರದಿಂದ, ಸರ್ವೈಃ=ಸರ್ವರಿಂದಲೂ, ಅಜೇಯಃ=ಜಯಿಸಲು ಅಸಾಧ್ಯನು; ರಾವಣಃ=ರಾವಣನು, ನರಾದೀನ್=ಮಾನವರೇ ಮೊದಲಾದ ವರು, ಋತಏವ=ಹೊರ್ತಾಗಿ, ಸರ್ವೈಃ=ಸರ್ವರಿಂದಲೂ, ಅಜೇಯಃ=ಜಯಿ ಸಲು ಅಸಾಧ್ಯನು; ತದಾತನಾತ್=ಅದುಮೊದಲು ಮಾಡಿಕೊಂಡು. ತೌ= ರಾವಣ ಕುಂಭಕರ್ಣರು, ತ್ರಿದಶಾನ್=ದೇವತೆಗಳನ್ನ, ಅಬಾಧತಾಂ=ಬಾಧೆ ಪಡಿಸುತ್ತ ಇದ್ದರು.

ತಾತ್ಪರ್ಯ.—ಈ ಕುಂಭಕರ್ಣನು ಪೂರ್ವಜನ್ಮದಲ್ಲಿ ಹಿರಣ್ಯಾಕ್ಷನಾಗಿ ಹುಟ್ಟಿದ್ದಾಗ ಬ್ರಹ್ಮದೇವರ ವರದಿಂದ ಸರ್ವರಿಂದಲೂ ಜಯಿಸಲು ಅಶಕ್ಯ ನಾದನು. ರಾವಣನು ಮಾನವ ವಾನರಗಳ ಹೊರತು ಮಿಕ್ಕ ಸರ್ವರಿಂದಲೂ ಅಜೇಯನು. ಈ ರೀತಿಯಾದ ಬ್ರಹ್ಮದೇವರ ವರಬಲದಿಂದ ಇವರಿಬ್ಬರೂ (ರಾವಣ ಕುಂಭಕರ್ಣರು) ದೇವತೆಗಳನ್ನು ಬಹಳವಾಗಿ ಬಾಧಿಸುತ್ತಿದ್ದರು.

ವಿಶೇಷಾರ್ಥ.—"ಏಕಸ್ಮಿನ್ ಬ್ರಹ್ಮದಿವಸೇ ಅವತಾರಾಶ್ಚ ಯೋದಶ" ಎಂಬುವ ಭವಿಷ್ಯೋತ್ತರಪುರಾಣದ ಅನುಸಾರವಾಗಿ ಒಬ್ಬ ಬ್ರಹ್ಮದೇವರ ಹಗಲಿನಲ್ಲಿ ದೇವರ ಹತ್ತು ಅವತಾರಗಳು ಆಗುತ್ತವೆ ಎಂದು ಶ್ರೀ ಹರಿಯು ಸತ್ಯಸಂಕಲ್ಪನಾದ್ದರಿಂದ, ಅದಕ್ಕೆ ಅನುಸಾರವಾಗಿ ಶ್ರೀ ಹರಿಯ ಸತ್ಯ ಸಂಕಲ್ಪವನ್ನು ತಿಳಿದು ಬಹ್ಮದೇವರು ಕಪಿ ಮಾನವರನ್ನು ಬಿಟ್ಟು ಮಿಕ್ಕವ ರಿಂದ ಅಜೇಯತ್ವವರವನ್ನ ಕೊಟ್ಟರೆಂದು ತಿಳಿಯಬೇಕು.

ಅವತಾರಿಕೆ.—ದೇವತೆಗಳು ರಾವಣಾದಿಗಳ ಬಾಧೆಯನ್ನ ತಡೆಯಲಾ ರದೆ ಶ್ರೀಹರಿಯನ್ನ ಸ್ತೋತ್ರ ಮಾಡಿದರೆಂದು ತಿಳಿಸುತ್ತಾರೆ.-

**ಶ್ಲೋಕ|| ತದಾಬ್ಜಜಂಶೂಲಿನಮೇವಜಾಗ್ರತೋ ನಿಧಾಯದೇವಾಃ ಪುರು ಹೂತಪೂರ್ವಕಾಃ || ಪಯೋಂಬುಧೌ ಭೋಗಿಪಭೋಗಿಶಾಯಿ ನಂ ಸಮೇತ್ಯಯೋಗ್ಯಾಂಸ್ತುತಿಮಭ್ಯ ಯೋಜಯನ್ ||೫೬||**

ಅರ್ಥ.—ತದಾ=ಆ ಕಾಲದಲ್ಲಿ, ಪುರುಹೂತಪೂರ್ವಕಾಃ=ಇಂದ್ರನೇ ಮೊದಲಾದ, ದೇವಾಃ=ದೇವತೆಗಳು, ಅಬ್ಜಜಂ=ಬ್ರಹ್ಮದೇವರನ್ನೂ, ಶೂಲಿನಮೇವ=ರುದ್ರದೇವರನ್ನು, ಅಗ್ರತಃ=ಮುಂಭಾಗದಲ್ಲಿ, ನಿಧಾಯ=ಇಟ್ಟುಕೊಂಡು, ಪಯೋಂಬುಧೌ=ಕ್ಷೀರಸಮುದ್ರದಲ್ಲಿ, ಭೋಗಿಪಭೋಗಿಶಾಯಿನಂ=ಶೇಷಶಾಯಿಯಾದಂಥ ಶ್ರೀ ನಾರಾಯಣ ದೇವರನ್ನ, ಸಮೇತ್ಯ=ಹೊಂದಿ, ಯೋಗ್ಯಾಂ=ಅರ್ಹವಾದಂಥ, ಸ್ತುತಿಂ=ಸ್ತೋತ್ರವನ್ನ, ಅಭ್ಯಯೋಜಯನ್=ಮಾಡಿದರು.

ತಾತ್ಪರ್ಯ.—ದಾನವಾದಿಗಳಿಂದ ಬಾಧೆಯುಂಟಾದ ಕಾಲದಲ್ಲಿ ದೇವತೆಗಳು ಬ್ರಹ್ಮದೇವರು ರುದ್ರದೇವರು ಇವರನ್ನು ಮುಂದುಮಾಡಿಕೊಂಡು ಶೇಷಶಾಯಿಯಾಗಿ ಕ್ಷೀರಸಮುದ್ರದಲ್ಲಿ ಮಲಗಿರುವಂಥ ಶ್ರೀ ನಾರಾಯಣ ದೇವರನ್ನ ಕಾಲಾನುಗುಣ್ಯವಾಗಿ ತಮ್ಮ ಯೋಗ್ಯತಾನುಸಾರ ಸ್ತೋತ್ರ ಮಾಡಿದರು.

ವಿಶೇಷಾರ್ಥ.—ದೇವತೆಗಳು ಬ್ರಹ್ಮರುದ್ರಾದಿಗಳನ್ನ ಮುಂದು ಮಾಡಿಕೊಂಡು ಶ್ರೀಹರಿಯನ್ನ ಸ್ತೋತ್ರ ಮಾಡಿದರೆಂದು ತಿಳಿಸಿದ ಪ್ರಯುಕ್ತ, ಸರ್ವ ದೇವಾಪೇಕ್ಷಯಾ ರುದ್ರರು ಉತ್ತಮರೆಂತಲೂ, ಅವರಿಗಿಂತಲೂ ಬ್ರಹ್ಮದೇವರು ಉತ್ತಮರೆಂತಲೂ ತಿಳಿಯಬೇಕು. ಮತ್ತು ಭೂಲೋಕದಲ್ಲಿ ಅವತಾರಮಾಡುವ ಶ್ರೀಹರಿಯು ಎಲ್ಲಾ ಅವತಾರದಲ್ಲಿಯೂ ಬ್ರಹ್ಮದೇವರ ವಿಜ್ಞಾಪನೆಯನ್ನ ಕೇಳಿಯೇ ಅವತರಿಸುತ್ತಾನೆಂತಲೂ ತಾತ್ಪರ್ಯ. ಮತ್ತು ಜಗತ್ಸೃಷ್ಟಿಯಲ್ಲಿ ಶ್ರೀ ಹರಿಯ ಸತ್ಯಸಂಕಲ್ಪವನ್ನ ಬ್ರಹ್ಮದೇವರು ಪೂರ್ತಿಸಿದವರೆಂತಲೂ ತಿಳಿಯಬೇಕು.

ಅವತಾರಿಕೆ.—ದೇವತೆಗಳ ಸ್ತೋತ್ರ ಪ್ರಕಾರವನ್ನ ತಿಳಿಸುತ್ತಾರೆ:—

ಶ್ಲೋಕ॥ ತ್ವಮೇಕ ಈಶಃ ಪರಮಃ ಸ್ವತಂತ್ರಃ ಸ್ತ್ವಮಾದಿರಂತೋ ಜಗತಾಂ ನಿ
ಯೋಕ್ತಾ ॥ ತ್ವದಾಜ್ಞಯೈವಾಖಿಳಮಂಬುಜೋದ್ಭವಾದಿತೇ
ನಿರೀಗ್ರಾತ್ಯಕ್ಷರಮಾಕ್ಷಯೇನ್ನ ॥೫೭॥

ಅರ್ಥ.—ಹೇ! ವಾಸುದೇವ=ಓ! ವಾಸುದೇವನೆ, ತ್ವಂ=ನೀನೇ, ಏಕಃ=ಮುಖ್ಯವಾದ, ಈಶಃ=ಸ್ವಾಮಿಯು, ಪರಮಃ=ಸರ್ವೋತ್ತಮನು, ಸ್ವತಂತ್ರಃ=ಸ್ವತಂತ್ರನು, ಜಗತಾಂ=ಜಗತ್ತಿಗೆ, ಆದಿಃ=ಸೃಷ್ಟಿಕರ್ತನು,

ಅಂತಃ=ನಾಶಕನು, ನಿಯೋಕ್ತಾ=ನಿಯಾಮಕನು, ತ್ವದಾಜ್ಞಯೈವ=ನಿನ್ನ ಅಪ್ಪಣೆಯಿಂದಲೇ, ಅಗ್ರ್ಯಾಃ=ಹಿಂದೆ ಹುಟ್ಟಿದ್ದ ಬ್ರಹ್ಮರುಗಳೂ, ಅನ್ಯೇ-ಇತರರಾದ, ಯೇ=ಯಾವ, ಚರಮಾಃ=ಮುಂದೆ ಬ್ರಹ್ಮ ಪದವಿಗೆ ಬರುವ, ಅಂಬುಜೋದ್ಭವಾಃ=ಬ್ರಹ್ಮರುಗಳು ಸಹ, ಅಖಿಲಂ=ಸರ್ವಪ್ರಪಂಚವನ್ನ, ವಿತೇನಿರೇ-ಸೃಷ್ಟಿಮಾಡುತ್ತಾರೆ.

ತಾತ್ಪರ್ಯ.—ಹೇ! ವಾಸುದೇವನೆ, ನೀನು ಮುಖ್ಯವಾದ ಸ್ವಾಮಿಯು, ಸರ್ವಶ್ರೇಷ್ಠನು ಸರ್ವಸ್ವತಂತ್ರನು, ಜಗತ್ತಿಗೆ ಸೃಷ್ಟಿಕರ್ತನು ನಾಶಕರ್ತನು ನಿಯಾಮಕನು. ನಿನ್ನ ಆಜ್ಞೆಯಿಂದಲೇ ಈಗಿನ ಬ್ರಹ್ಮರು ಮುಂದಿನ ಬ್ರಹ್ಮರು ಸಹ ಸರ್ವ ಪ್ರಪಂಚವನ್ನ ಸೃಷ್ಟಿರೂಪವಾಗಿ ವಿಸ್ತಾರಮಾಡುತ್ತಾರೆ.

ವಿಶೇಷಾರ್ಥ.—ದೇವತೆಗಳ ತಾರತಮ್ಯದಲ್ಲಿ ಬ್ರಹ್ಮದೇವರಿಗಿಂತಲೂ ಉತ್ತಮರಾದವರು ಇಲ್ಲ. ಅಂತಹ ಬ್ರಹ್ಮದೇವರೇ ನಿನ್ನ ಆಜ್ಞಾಧಾರಕರೆಂದು ಸ್ತೋತ್ರಮಾಡಿದ್ದರಿಂದ ಬ್ರಹ್ಮಾದಿವಂದ್ಯತ್ವಸೂಚಿತವಾಯಿತು. ಮತ್ತು ನಿಯೋಕ್ತಾ ಎಂಬುವ ವಚನದಿಂದ ಬ್ರಹ್ಮಣಿ ಬ್ರಹ್ಮರೂಪೊ ಸೌಶಿವರೂಪೀ ಶಿವೇಸ್ಥಿತಃ- -ಎಂಬುವ ಪ್ರಮಾಣಾನುಸಾರ ಬ್ರಹ್ಮನಲ್ಲಿ ಇದ್ದು ಬ್ರಹ್ಮರೂಪದಿಂದ ಸೃಷ್ಟಿಮಾಡಿಸುತ್ತಾನೆಂತಲೂ, ಶಿವರೂಪದಿಂದ ರುದ್ರನಲ್ಲಿ ನಿಂತು ಸಂಹಾರಮಾಡುತ್ತಾನೆಂತಲೂ ಸಿದ್ಧವಾಯಿತು. ಭೂತಭವಿಷ್ಯತ್ ಬ್ರಹ್ಮರು ನಿನ್ನ ಆಜ್ಞಾಧಾರಕರೆಂದು ಹೇಳಿದ್ದರಿಂದ ಶ್ರೀಹರಿಯು ಶಶ್ವದೇಕಪ್ರಕಾರನೆಂದು ಸೂಚಿಸಿದ ಹಾಗಾಯಿತು.

ಅವತಾರಿಕೆ.— ಸೃಷ್ಟಿಸಲ್ಪಡುವ ಬ್ರಹ್ಮದೇವರಿಗೆ ಆಯುಸ್ಸು ಎಷ್ಟು? ಆಯುಸ್ಸು ಮುಗಿದ ಮೇಲೆ ಏನು ಮಾಡುತ್ತಾರೆ? ಎಂಬುವ ಶಂಕೆಪ್ರಾಪ್ತವಾದರೆ ಅವರ ಆಯುಃಪ್ರಮಾಣವನ್ನ ಹೇಳುವುದಕ್ಕಾಗಿ ಇತರ ದೇವತೆಗಳ ಆಯುಃಪ್ರಮಾಣವನ್ನ ತಿಳಿಸುತ್ತಾರೆ:—

ಶ್ಲೋಕ॥ ಮನುಷ್ಯಮಾನಾತ್ತ್ರಿಶತಂ ಸಷಷ್ಟಿಕಂದಿವೌಕಸಾಮೇಕಮುಶಂತಿ ವತ್ಸರಂ॥ ದ್ವಿಷಟ್ಸಹಸ್ರೈರಪಿತೈಶ್ಚತುರ್ಯುಗಂ ತ್ರೇತಾದಿಭಿಃ ಪಾದಶಏವಹೀನೈಃ ॥೫೦॥

ಅರ್ಥ.—ಮನುಷ್ಯಮನಾತ್=ಮನುಷ್ಯ=ಮಾನವರ, ಮಾನಾತ್=ಪ್ರಮಾಣದಿಂದ, ಸಷಷ್ಟಿಕಂ=ಅರವತ್ತರಿಂದ ಸಹಿತವಾದ, ತ್ರಿಶತಂ=ಮು

ನ್ನೊರಾದ, ವತ್ಸರಂ=ಸಂವತ್ಸರಗಳು, ದಿವೌಕಸಾಂ=ದೇವತೆಗಳಿಗೆ, ಏಕಂ=ಒಂದು ವತ್ಸರವಾಗಿ, ಉಶಂತಿ=ಇಚ್ಛಿಸುತ್ತಾರೆ (ಅಭಿಪ್ರಾಯಪಡುತ್ತಾರೆ) ತೈಃ=ಇಂತಹ, ದ್ವಿಷಟ್‌ಸಹಸ್ರೈರಪಿ, ದ್ವಿ=ಎರಡರಿಂದ ಕೂಡಿದ, ಷಟ್=ಸಹಸ್ರೈರಪಿ=ಆರುಸಾವಿರಗಳಿಂದಲೂ, ಚ=ಮತ್ತು, ಪಾದತಃ=ನಾಲ್ಕರಲ್ಲಿ ಒಂದು ಭಾಗದಿಂದ, ಹೀನೈಃ-ಕಡಿಮೆಯಾದ, ತ್ರೇತಾದಿಭಿಃ=ಕೃತ, ತ್ರೇತಾ, ದ್ವಾಪರ, ಕಲಿ ಇವುಗಳಿಂದಕೂಡಿದ, ಚತುರ್ಯುಗಂ=ನಾಲ್ಕು ಯುಗಗಳು, ಭವತಿ=ಆಗುತ್ತವೆ. ಇಂತಹ ೧೨ ಸಹಸ್ರ ವರ್ಷಗಳಾದರೆ ಒಂದು ಚತುರ್ಯುಗವಾಗುತ್ತದೆ.

ತಾತ್ಪರ್ಯ.— ಮನುಷ್ಯಮಾನದಿಂದ ೩೬೦ ವರ್ಷಗಳು ದೇವತೆಗಳಿಗೆ ೧ ವರ್ಷವೆಂತಲೂ, ಅಂತಹ ದೇವತೆಗಳ ವರ್ಷಗಳು ೧೨,೦೦೦ ವಾದರೆ ಒಂದು ಚತುರ್ಯುಗವಾಗುತ್ತದೆ. ಅದರಲ್ಲಿ—ಕೃತಯುಗದಲ್ಲಿ ತ್ರೇತಾಯುಗದ ಪ್ರಾರಂಭದ ಸಂಧಿಗೆ ೪೦೦ ವರ್ಷಗಳೆಂತಲೂ, ದ್ವಾಪರಕ್ಕೂ ತ್ರೇತಾಯುಗಕ್ಕೂ ೩೦೦ ವರ್ಷಗಳೆಂತಲೂ, ದ್ವಾಪರಕ್ಕೂ ಕಲೀಗೂ ೨೦೦ ವರ್ಷಗಳೆಂತಲೂ, ಕಲಿಯುಗಕ್ಕೂ ಕೃತಯುಗಕ್ಕೂ ೧೦೦ ವರ್ಷಗಳು ಸಂಧಿ ಎಂತಲೂ ಪಾದಭಾಗಗಳಿಂದ ಕಡಮೆಯಾಗಿ ಒಟ್ಟು ಮೇಲೆ ಹೇಳಿದ ದೇವತೆಗಳ ೧೨,೦೦೦ ಸಹಸ್ರ ವರ್ಷಗಳು, ಚತುರ್ಯುಗವೆಂದು ತಿಳಿಯಬೇಕು.

ವಿಶೇಷಾರ್ಥ.—ಮಾನವದಿನವೆಂದರೆ—ಹಗಲೂರಾತ್ರಿ ಒಟ್ಟುಗೂಡಿ ೮ ಯಾಮಗಳು, ಇಂತಹ ದಿನಗಳು ೩೦ ಆದರೆ ಒಂದು ಮಾಸ. ಈ ಮಾಸವು ಕೃಷ್ಣಪಕ್ಷ ಶುಕ್ಲಪಕ್ಷವೆಂಬ ಎರಡು ಭಾಗವಾಗಿ ಇರುತ್ತದೆ. ಅದರಲ್ಲಿ ಶುಕ್ಲಪಕ್ಷ ಪಿತೃಮಾನರೀತ್ಯ ಪಿತೃಗಳಿಗೆ ಹಗಲೆಂತಲೂ, ಕೃಷ್ಣಪಕ್ಷ ರಾತ್ರಿ ಎಂತಲೂ, ಹೇಳಿಸಿಕೊಳ್ಳುತ್ತದೆ. ಒಟ್ಟಿನಲ್ಲಿ ಮಾನವ ವರ್ಷವೆಂಬ ೧೨ ತಿಂಗಳುಗಳು ಪಿತೃಗಳಿಗೆ ೧೨ ದಿವಸವಾಗುತ್ತವೆ. ಈ ರೀತಿ ೩೬೦ ದಿವಸಗಳಾದರೆ ಪಿತೃಗಳಿಗೆ ಒಂದು ವರ್ಷವೆಂದು ತಿಳಿಯಬೇಕು. ಇದರಲ್ಲಿ ಪಿತೃಗಳ ಆರು ದಿನಗಳಿಗೆ ಒಂದು ಅಯನವೆಂತಲೂ ಮತ್ತಾರು ದಿನಗಳಿಗೆ ಇನ್ನೊಂದು ಅಯನವೆಂತಲೂ ಉತ್ತರಾಯನ ದಕ್ಷಿಣಾಯನವೆಂಬ ವಿಭಾಗದಿಂದ ಕೂಡಿದೆ. ಪಿತೃದೇವತೆಗಳ ಆಯನ

ವೆಂಬ ಆರು ದಿನಗಳ ಕಾಲವು ಅವರಿಗೆ ಉತ್ತರಾಯನವೆಂತಲೂ, ದೇವತೆಗಳಿಗೆ ಹಗಲೆಂತಲೂ, ಪಿತೃದೇವತೆಗಳ ದಕ್ಷಿಣಾಯನವೆಂಬ ಕಾಲವು ದೇವತೆಗಳಿಗೆ ರಾತ್ರಿ ಎಂತಲೂ ತಿಳಿಯಬೇಕು. ಈ ರೀತಿಯಾದ ರಾತ್ರಿ ಹಗಲು ಒಟ್ಟು ಕೂಡಿ ಒಂದು ದಿನ. ಈ ದಿನಗಳು ೩೬೦ ಆದರೆ ಒಂದು ವರ್ಷ. ಇಂತಹ ವರ್ಷಗಳು ಸಹಸ್ರವಾದರೆ ಯುಗ ಚತುಷ್ಟಯಗಳಿಂದ ಕೂಡಿದ ಚತುರ್ಯುಗವೆಂಬ ಕಾಲವೆಂದು ತಿಳಿಯಬೇಕು.

ಅವತಾರಿಕೆ.—ಮಾನವರ ಕಾಲಕ್ಕೂ ದೇವತೆಗಳ ಕಾಲಕ್ಕೂ ಇರುವ ವ್ಯತ್ಯಾಸವನ್ನು ತಿಳುಹಿಸಿ, ದೇವತೆಗಳ ಕಾಲಕ್ಕೂ ಸೃಷ್ಟಿಸುವ ಬ್ರಹ್ಮನ ಕಾಲಕ್ಕೂ ಇರುವ ವ್ಯತ್ಯಾಸವನ್ನು ತಿಳಿಸುತ್ತಾರೆ:—

**ಶ್ಲೋಕ|| ಸಹಸ್ರವೃತ್ತಸ್ತದಹಃಸ್ವಯಂಭುವೋಃ ನಿಶಾಚತನ್ಮಾನಮಿತಂ**
**ಶರಚ್ಛತಂ|| ತ್ವದಾಜ್ಞಯಾಸ್ವಾನನುಭೂಯಭೋಗಾ ನುಪೈತಿ**
**ಸೋಽಪಿ ತ್ವರಿತಸ್ತ್ವದಂತಿಕಂ ||೫೯||**

ಅರ್ಥ.—ತತೇ=ಆ ಚತುರ್ಯುಗಗಳು, ಸಹಸ್ರವೃತ್ತಃ=ಸಾವಿರಗಳಿಂದ ಯುಕ್ತವಾದದ್ದು, ಸ್ವಯಂಭುವಃ-ಬ್ರಹ್ಮದೇವರ, ಅಹಃ-ಒಂದು ಹಗಲು; ತನ್ಮಾನಮಿತಂ-ಅಷ್ಟೇ ಕಾಲವು, ನಿಶಾಚ=ರಾತ್ರಿಯು; ಇಂತಹ ದಿನವು, ಸಷಷ್ಟಿಕಂ=ಅರವತ್ತರಿಂದ ಕೂಡಿದ, ತ್ರಿಶತಂ=೩೦೦, ವತ್ಸರಂ=ಒಂದು ವರ್ಷವು; ಶರಚ್ಛತಂ=ಇಂತಹ ೧೦೦ ವರ್ಷಗಳು, ತದಾಜ್ಞಯಾ=ನಿನ್ನ ಅಪ್ಪಣೆಯಿಂದ, ಸೋಽಪಿ=ಆ ಬ್ರಹ್ಮದೇವರು, ಸ್ವಾನ್=ಸ್ವಕೀಯವಾದ, ಭೋಗಾನ್=ಸುಖಗಳನ್ನು, ಅನುಭೂಯ=ಅನುಭವಿಸಿ, ತ್ವರಿತಃ=ಜಾಗ್ರತೆಯಾಗಿ, ತ್ವದಂತಿಕಂ, ತ್ವತೇ-ನಿನ್ನ, ಅಂತಿಕಂ=ಸಮೀಪವನ್ನು ಕುರಿತು, ಉಪಇತಿ=ಹೊಂದುತ್ತಾನೆ.

ತಾತ್ಪರ್ಯ.—ಚತುರ್ಯುಗಗಳ ತಿರುಗೋಣವು ಒಂದು ಸಾವಿರ ಸಲವಾದರೆ ಬ್ರಹ್ಮನ ಒಂದು ಹಗಲೆಂತಲೂ ಅಷ್ಟೇ ಕಾಲ ರಾತ್ರಿ ಎಂತಲೂ, ಈ ರೀತಿಯಾದ ರಾತ್ರಿಹಗಲುಗಳಿಂದ ಕೂಡಿದ ಕಾಲವು ಒಂದು ದಿನವೆಂತಲೂ, ಇಂತಹ ದಿನಗಳು ೩೬೦ ಆದರೆ ಒಂದು ವರ್ಷವೆಂತಲೂ ಇಂತಹ ೧೦೦ ವರ್ಷಗಳು ಬ್ರಹ್ಮನ ಸಾಧನಕಾಲವೆಂತಲೂ ತಿಳಿಯಬೇಕು. ಸ್ವಾಮಿ

ಯೋ ನಿನ್ನ ಆಜ್ಞೆಯಿಂದ ಇಷ್ಟು ಕಾಲ ಸ್ವಕೀಯುವಾದ ಭೋಗಗಳನ್ನು ಅನುಭವಿಸಿ ಬ್ರಹ್ಮನು ಜಾಗ್ರತೆಯಾಗಿ ನಿನ್ನನ್ನು ಹೊಂದುತ್ತಾನೆ.

ವಿಶೇಷಾರ್ಥ.—ಬ್ರಹ್ಮದೇವರ ೧೦೦ ವರ್ಷಗಳ ಪೈಕಿ ೫೦ ವರ್ಷಗಳು ಆದಿಬ್ರಹ್ಮನೆಂಬ ಪರಬ್ರಹ್ಮನ ಮುಖದಿಂದ ಅವತರಿಸಿದ ಬ್ರಹ್ಮನ ಧ್ಯಾನಕಾಲ ಮಾತ್ರ ಬ್ರಹ್ಮಾಂಡದ ಸೃಷ್ಟಿಕಾಲವೆಂದು ತಿಳಿಯಬೇಕು. ನಂತರ ೫೧ನೆಯ ವರ್ಷದ ಮೊದಲು ಪದ್ಮಸೃಷ್ಟಿ ಎಂತಲೂ ಅವಾಂತರವಾದ ಮನುಸೃಷ್ಟಿ ಎಂತಲೂ ತಿಳಿಯಬೇಕು. ಬ್ರಹ್ಮನ ಹಗಲಿನಲ್ಲಿ ೧೪ ಜನಮನುಗಳ ಭೋಜ್ಯಕಾಲವಿರುತ್ತೆ. ಮನುಗಳ ಭೋಜ್ಯಕಾಲವೆಂದರೆ ಹಿಂದೆ ಹೇಳಿದ ಚತುರ್ಯುಗವೆಂಬ ಮಹಾಯುಗಗಳು ೭೧ ಕಳಿಯಬೇಕು. ಈ ರೀತಿಯಾದ ಅವಾಂತರ ಕಾಲಗಳಿಂದ ಒಡಕೂಡಿದ ಬ್ರಹ್ಮದೇವರ ೫೧ ಮೊದಲು ೭೫ ವರ್ಷದ ಪರಿಯಂತರ ಸೃಷ್ಟಿ ಮತ್ತು ಸ್ಥಿತಿಕಾಲವೆಂತಲೂ, ೭೫ರಿಂದ ೮೭॥ ವರ್ಷ ಪರ್ಯಂತ ಲಯಕಾಲವೆಂತಲೂ, ಉಳಿದ ೧೨॥ ವರ್ಷಗಳು ಸೂಕ್ಷ್ಮಸೃಷ್ಟಿಕಾಲವೆಂತಲೂ ತಿಳಿಯಬೇಕು, ಪ್ರಮಾಣ—"ಲಯಸ್ಯ, ಸ್ತ್ವಷ್ಟಮೋಭಾಗಃ ಸೃಷ್ಟಿಕಾಲ ಉದಾಹೃತಃ" ॥

ಅವತಾರಿಕೆ.—ಪ್ರಸಂಗಾನುಕೂಲವಾದ ಸ್ತೋತ್ರವನ್ನ ಮಾಡುತ್ತಾರೆ:—

**ಶ್ಲೋಕ॥ ತ್ವಯಾಪುರಾಕರ್ಣಪುಟಾದ್ವಿನಿರ್ಮಿತೌ ಮಹಾಸುರೌತೌ ಮಧುಕೈಟಭಾಖ್ಯೌ ॥ ಪ್ರಭಂಜನಾವೇಶವಶಾತ್ತ್ವದಾಜ್ಞಯಾ ಬಲೋದ್ಧತಾವಾಶು ಜಲೇಭ್ಯವರ್ಧತಾಂ ॥೬೦॥**

ಅರ್ಥ.—ಪುರಾ=ದೇವತಾಸೃಷ್ಟಿಗೆ ಪೂರ್ವದಲ್ಲಿ, ತ್ವಯಾ=ನಿನ್ನ, ಕರ್ಣಪುಟಾತ್=ಕಿವಿಗಳಿಂದ, ಯೌ=ಯಾವ, ಮಹಾಸುರೌ=ಮಹಾದೈತ್ಯರಾದಂಥ, ಮಧುಕೈಟಭೌ–ಮಧು, ಮತ್ತು ಕೈಟಭರೆಂಬವರು, ವಿನಿರ್ಮಿತೌ=ಸೃಷ್ಟರಾದರೋ=ತೌ=ಆದೈತ್ಯರು, ತ್ವದಾಜ್ಞಯಾ=ನಿನ್ನ ಅಪ್ಪಣೆಯಿಂದಲೆ, ಪ್ರಭಂಜನಾವೇಶವಶಾತ್=ಪ್ರಭಂಜನ–ವಾಯುದೇವರ, ಆವೇಶ ವಶಾತ್=ಆವೇಶದಿಂದಯುಕ್ತರಾಗಿ, ಬಲೋದ್ಧತೌ=ಬಲ-ಬಲದಿಂದ, ಉದ್ಧತೌ=ಗರ್ವಿತರಾಗಿ, ಆಶು=ಜಾಗ್ರತೆಯಾಗಿ, ಜಲೆ=ಪ್ರಳಯ ಜಲದಲ್ಲಿ, ಅಭ್ಯವರ್ಧತಾಂ=ಅಭಿವೃದ್ಧರಾದರು

ತಾತ್ಪರ್ಯ.—ಓ ಸ್ವಾಮಿಯೇ! ದೇವಸೃಷ್ಟಿಗೆ ಪೂರ್ವದಲ್ಲಿ ನಿನ್ನ ಕಿವಿಗಳ ದೆಶೆಯಿಂದ ಸೃಷ್ಟರಾದ ಮಹಾದೈತ್ಯರಾದ ಮಧುಕೈಟಭರು ನಿನ್ನ ಆಜ್ಞಾ ಪಡೆದ ವಾಯುದೇವರ ಆವೇಶದಿಂದಯುಕ್ತರಾದವರಾಗಿ ಅತಿ ಬಲಿಷ್ಠರಾಗಿ ಜಾಗ್ರತೆಯಾಗಿ ನೀರಿನಲ್ಲಿ ಅಭಿವೃದ್ಧರಾದರು.

ವಿಶೇಷಾರ್ಥ.—ಪ್ರಪಂಚದಲ್ಲಿ, ಸೃಷ್ಟಿಯು ಬ್ರಹ್ಮನಿಂದ ನಡೆಯುತ್ತದೆ ಎಂತಲೂ, ಋದ್ರನಿಂದಲೆ ನಡೆಯುತ್ತದೆ ಎಂತಲೂ, ಪ್ರಕೃತಿಯಿಂದ ನಡೆಯುತ್ತದೆ ಎಂತಲೂ ವಿಚಿತ್ರವಾದ ಮತಪ್ರಕ್ರಿಯೆಗಳಿಂದ ತಿಳಿದುಬರುತ್ತದೆ. ಹಾಗೆ ತಿಳಿಯದೇ ಪುರುಷಸೂಕ್ತಪ್ರತಿಪಾದ್ಯನಾದ ನಾರಾಯಣ ದೇವರು ತನ್ನ ನಿಜ ಪತ್ನಿಯಾದ ರಮಾದೇವಿಯು ಅವಲಂಬನೆ ಕೂಡ ಇಲ್ಲದೆ ತಾನೆ ಸೃಷ್ಟಿಸುತ್ತಾನೆಂದು ತಿಳಿದು ಸೃಸ್ಟ್ಯಾದ್ಯಷ್ಟಕರ್ತೃತ್ವಜ್ಞಾನವನ್ನು ಸಂಪಾದಿಸಿ ಶ್ರೀಹರಿಯ ಪೂರ್ಣಾನುಗ್ರಹಕ್ಕೆ ಅಧಿಕಾರಿಗಳು ಪಾತ್ರರಾಗಬೇಕೆಂಬುವ ಅಭಿಪ್ರಾಯದಿಂದ ತಾತ್ಪರ್ಯಗಾರರು ಮಧುಕೈಟಭರ ಸೃಷ್ಟಿಯನ್ನು ತಿಳಿಸುತ್ತಾರೆ.

ಅವತಾರಿಕೆ.—ಶ್ರೀಹರಿಯ ಹಯಗ್ರೀವ ಅವತಾರಕ್ಕೆ ಕಾರಣವನ್ನ ತಿಳಿಸುತ್ತಾರೆ:—

**ಶ್ಲೋಕ॥ ತ್ವದಾಜ್ಞಯಾಬ್ರಹ್ಮವರಾದವಧೌ ಚಿಕ್ರೀಡಿಷಾಸಂಭವಯಾಮುಖೋದ್ಗತಾನ್ ॥ ಸ್ವಯಂಭುವೋವೇದ ಗಣಾಸಹಾರ್ಷತಾಂ ತದಾಭವಸ್ತ್ವಂಹಯಶೀರ್ಷ ಈಶ್ವರಃ ॥೬೧॥**

ಅರ್ಥ.—ಚಿಕ್ರೀಡಿಷಾ=ಕ್ರೀಡಾಮಾಡಬೇಕೆಂಬ ಇಚ್ಛೆಯಿಂದ, ಸಂಭವಯಾ=ಉತ್ಪನ್ನರಾದ, ತ್ವದಾಜ್ಞಯಾ=ನಿನ್ನ ಅಪ್ಪಣೆಯಿಂದ, ಬ್ರಹ್ಮವರಾತ್=ಬ್ರಹ್ಮದೇವರ ವರದಿಂದ, ಅವಧ್ಯೌ=ವಧಕ್ಕೆ ಅರ್ಹರಲ್ಲದ, ಮಧು ಮತ್ತು ಕೈಟಭರು, ಸ್ವಯಂಭುವಃ=ಚತುರ್ಮುಖ ಬ್ರಹ್ಮನ, ಮುಖೋದ್ಗತಾನ್=ಮುಖ=ಮುಖದಿಂದ, ಉದ್ಗತಾನ್=ಹೊರಟಂಥ, ವೇದಗಣಾನ್=ವೇದ=ವೇದಗಳ, ಗಣಾನ್=ಸಮೂಹಗಳನ್ನ, ಅಥವಾ ವೇದದ ಅವಾಂತರಾಭಿಮಾನಿಗಳಾದ ದೇವತೆಗಳನ್ನ, ಆಹರ್ಷತಾಂ=ಅಪಹಾರ ಮಾಡಿದರು, ತದಾ=ಅಕಾಲದಲ್ಲಿ, ಈಶ್ವರಃ=ಸರ್ವೋತ್ತಮನಾದ, ತ್ವಂ=ನೀನು, ಹಯಶೀರ್ಷಃ=ಹಯಗ್ರೀವ ರೂಪವುಳ್ಳವನು, ಅಭವಃ=ಆಗಿರುತ್ತೀಯಷ್ಟೆ.

ತಾತ್ಪರ್ಯ:— ವಿಹಾರವನ್ನಾಡಬೇಕೆಂಬ ಇಚ್ಛೆಯಿಂದ ಉತ್ಪನ್ನವಾದ ನಿನ್ನ ಆಜ್ಞಾರೂಪವಾದ ಬ್ರಹ್ಮದೇವರ ವರದ ದೆಶೆಯಿಂದ ವಧೆಗೆ ಅರ್ಹರಲ್ಲದ ಮಧು ಮತ್ತು ಕೈಟಭರು, ಬ್ರಹ್ಮನ ಮುಖದಿಂದ ಹೊರಟ ವೇದಗಳ ಸಮೂಹಕ್ಕೆ ಅವು ಖ್ಯಾಭಿಮಾನಿಗಳಾದ ದೇವತೆಗಳನ್ನ ಕದ್ದೊಯ್ಯಲು ಆ ಕಾಲದಲ್ಲಿ ನೀನು ಸರ್ವಸ್ವಾಮಿಯಾದ್ದರಿಂದ ತಕ್ಷಣವೇ ಹಯಗ್ರೀವರೂಪವನ್ನ ಧರಿಸಿದಿ.

ವಿಶೇಷಾರ್ಥ:— ಅಭಿಮಾನಿವ್ಯಪದೇಶಾತ್—ಎಂಬುವ ಪ್ರಮಾಣಾನುಸಾರ ಮತ್ತು ಸರ್ವತಾಃ ಪಕ್ಷಿಷೋಽಭರ್ವ ಎಂಬುವ ರಾಮಾಯಣದ ವಚನಾನುಸಾರವಾಗಿ ಜಡಪದಾರ್ಥಗಳಿಗೆ ಈಶನಿಂದ ಸೃಷ್ಟರಾದ ಅಭಿಮಾನ ದೇವತೆಗಳು ಇದ್ದಾರೆಂದು ತಿಳಿಯಬೇಕು. ಮತ್ತು ಹಯಶೀರ್ಷಪಾಂಚರಾತ್ರಾಗಮದಲ್ಲಿ ಹೇಳುವ ಪ್ರಮಾಣಾನುಸಾರವಾಗಿ, ವೇದಾಭಿಮಾನಿಗಳು ಸದೇಹರಾಗಿ ವೇದಾಭ್ಯಾಸಮಾಡಿದರು. ಆ ಕಾಲದಲ್ಲಿ ಶ್ರೀ ಹರಿಯ ಕಿವಿಯ ಸಂಬಂಧವಾದ ಮಲೋದಕವನ್ನು ಕೊಟ್ಟರು. ಆ ಮಲೋದಕವು ಪದ್ಮಪತ್ರದಲ್ಲಿ ಬಿತ್ತು. ಅದರಿಂದ ಉತ್ಪನ್ನರಾದವರು ಮಧು ಕೈಟಭರು, ಇವರಿಬ್ಬರು ಆಗಲೇ ವೇದಾಭ್ಯಾಸ ಮಾಡುತ್ತಿದ್ದ ವೇದಾಭಿಮಾನಿಗಳಾದ ದೇವತೆಗಳನ್ನ ಅಪಹಾರಮಾಡಿದರು. ಇದಕ್ಕೆ ಪ್ರಮಾಣ

ಉಪಾಸಾಂಚಕ್ರಿರೆಮುಷ್ಯಂ ವೇದಾವೇಹ ಭೃತಸ್ತದಾ ವೇದಾಭ್ಯಾಸರತಸ್ತತ್ರ-ಧರ್ಮಬಿಂದುರಜಾಯತ ಸಪದ್ಮಪತ್ರಮಾಸಾದ್ಯದ್ವಿಧಾಭೂತ್ತ್ವೋಯತಃಸ್ತತಾ, ರಜಸ್ತಮೋಮಯೌತಸ್ಮಾಜ್ಜಾತಾವಿದವ್ಯಾಬಲೋತ್ಕಟೌ ಮಧುಕೈಟಭನಾಮಾನೌ ಮಹಾಬಲಪರಾಕ್ರಮೌ ತತಸ್ತಾವುಪಮವೇದಾರ್ನ್ವೈಜಹತುರ್ಃಪಾಪನಿಶ್ಚಯೌ, ಇತಿ—

ಅವತಾರಿಕೆ.—ದೇವತೆಗಳಸ್ತೋತ್ರಪ್ರಕಾರವನ್ನ ಹೇಳುತ್ತಾರೆ:—

**ಶ್ಲೋಕ॥ ಆಹೃತ್ಯವೇದಾನಖಿಲನ್ಪ್ರದಾಯ ಸ್ವಯಂಭುವೇತೌಚಜಘುಂಥದಸ್ಯೂ॥ ನಿಷ್ಪೀಡ್ಯತಾಊರುತಲೇಕರಾಭ್ಯಾಂತನ್ಮೇದಸೈವಾಶುಚಕರ್ಥಮೇದಿನೀಂ ॥೬೨॥**

ಅರ್ಥ:— ಹೇ! ಹಯಗ್ರೀವ=ಓ ಹಯಗ್ರೀವರೂಪನಾದ ನಾರಾಯಣನೆ,

ತ್ವಂ=ನೀನು, ಅಖಿಲಾರ್ನ=ಸಮಸ್ತವಾದ, ವೇದಾನ್=ವೇದಗಳನ್ನ, ಆಹೃತ್ಯ=ತಂದು, ಸ್ವಯಂಭುವೆ=ಬ್ರಹ್ಮದೇವರಿಗೋಸ್ಕರ, ಪ್ರದಾಯ=ಕೊಟ್ಟು, ದಸ್ಯೂ=ಕಳ್ಳರಾದ, ತೌ=ಆ ಮಧು ಮತ್ತು ಕೈಟಭರನ್ನು, ಕರಾಭ್ಯಾಂ=ಕೈಗಳಿಂದ. ಊರುತಳೆ=ತೊಡೆ ಯುಪ್ರದೇಶದಲ್ಲಿ, ನಿಷ್ಪೀಡ್ಯತಾ=ಬಾಧೆಪಡಿಸೋಣದರಿಂದ, ಜಘಂತ=ಸಂಹರಿಸಿದಿ, ಅಸು=ಜಾಗ್ರತೆಯಾಗಿ; ತನ್ಮೇದಸ್ಯೆವ=ಆವರ ಮೇದಸ್ಸಿನಿಂದ, ಮೇದಿನೀ=ಭೂಮಿ ಯನ್ನ, ಚಕರ್ಥ=ನಿರ್ಮಾಣಮಾಡಿದಿ.

ತಾತ್ಪರ್ಯ.—ಓ ಸ್ವಾಮಿಯೇ! ನೀನು ಸಮಸ್ತ ವೇದಗಳನ್ನ ತಂದು ಬ್ರಹ್ಮ ದೇವರಿಗೆ ಕೊಟ್ಟು ಕಳ್ಳರಾದ ಮಧುಕೈಟಭರನ್ನ ನಿನ್ನ ಕೈಗಳಿಂದ, ತೊಡೆಯುಪ್ರದೇಶ ದಲ್ಲಿ ಬಾಧೆಪಡಿಸಿ ಸಂಹರಿಸಿದಿ, ಮತ್ತು ಅವರ ಮೇದಸ್ಸಿನಿಂದಲೇ ಭೂಮಿಯನ್ನ ನಿರ್ಮಾಣಮಾಡಿದಿ.

ವಿಶೇಷಾರ್ಥ.—ಭೂಮಿಗೆ, ಊರ್ವಿ, ಮತ್ತು ಮೇದಿನಿ ಎಂಬುವ ಹೆಸರು ಗಳು ಬರುವದಕ್ಕೆ ಈ ಅವತಾರಕಾರ್ಯವೇ ಕಾರಣವೆಂದು ತಿಳಿಯಬೇಕು. ಮತ್ತು ಸಕಲ ವೇದಗಳನ್ನ ತಂದುಕೊಟ್ಟವನೆಂದು ಪರಮಾತ್ಮನನ್ನು ಸ್ತೋತ್ರಮಾಡಿದ್ದರಿಂದ ಜ್ಞಾನಪೂರ್ಣನೆಂತಲೂ, ಮತ್ತು ಬ್ರಹ್ಮದೇವರಿಗೆ ಮುಖ್ಯಗುರುವಾದನೆಂತಲೂ ತಿಳಿಯಬೇಕು.

ಅವತಾರಿಕೆ.—ದೇವತೆಗಳ ಸ್ತೋತ್ರವನ್ನೇ ಹೇಳುತ್ತಾರೆ-—

**ಶ್ಲೋಕ॥ ಏವಂಸುರಾಣಾಂಚ ನಿಸರ್ಗಜಂಬಲಂತಥಾಸುರಾಣಾಂವರದಾನ ಸಂಭವಂ॥ ವಶೇತವೈತದ್ದ್ವಯಮಪ್ಯತೋವಯಂ ನಿವೇದ ಯಾಮಃಪಿತುರೇವತೇಖಿಲಂ** ॥೬೩॥

ಅರ್ಥ.—ಏವಂ=ಪೂರ್ವೋಕ್ತವಾದ, ಸುರಾಣಾಂ=ದೇವತೆಗಳ, ನಿಸರ್ಗಜಂ= ಸ್ವಾಭಾವಿಕವಾದ, ಬಲಂ=ಸಾಮರ್ಥ್ಯವು, ತಥಾ=ಹಾಗೆಯೇ, ಅಸುರಾಣಾಂ=ದೈತ್ಯ ರುಗಳ, ವರದಾನಸಂಭವಂ=ವರದಾನ=ವರ ಸ್ವೀಕಾರದಿಂದ, ಸಂಭವಂ=ಉಂಟಾದ, ಏತದ್ವಿಯಮಪಿ=ನಿವೆರಡೂ, ತವ=ನಿನ್ನ, ವಸೆ=ಅಧೀನವು, ಅಥಃ=ಆದಕಾರಣ, ವಯಂ=ನಾವು. ಪಿತುಃ=ತಂದೆಯಾದ, ತೇ=ನಿನಗೆ, ಅಖಿಳಮೇವ=ಸಮಸ್ತವನ್ನು ನಿವೇದಯಾಮಃ=ವಿಜ್ಞಾಪಿಸಿಕೊಳ್ಳುತ್ತೇವೆ.

ತಾತ್ಪರ್ಯ—ದೇವತೆಗಳ ಸ್ವಾಭಾವಿಕವಾದ ಬಲ ಮತ್ತು ದೈತ್ಯರುಗಳ ವರ ಸ್ವೀಕಾರದಿಂದ ಉಂಟಾದ ಬಲ, ಇವೆರಡು ನಿನ್ನ ಅಧೀನವಾದ್ದರಿಂದ, ತಂದೆಯಾದ ನಿನ್ನ ಸಮೀಪದಲ್ಲಿ ನಾವು ವಿಜ್ಞಾಪಿಸುತ್ತೇವೆ

ವಿಶೇಷಾರ್ಥ —ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷನೆಂಬ ಅಷ್ಟಕರ್ತೃತ್ವವೂ ಪರಬ್ರಹ್ಮಾಧೀನವೆಂದು ತಿಳಿಯಬೇಕು. ಈ ಶ್ಲೋಕದಲ್ಲಿ ವರದಾನದಿಂದ ಹುಟ್ಟುವುದು ನಿನ್ನ ಅಧೀನವೆಂಬುದಾಗಿ ಹೇಳಿದ ಮೇಲೆ ವರವನ್ನು ಕೊಡತಕ್ಕ ದೇವತೆಗಳು ಅಸ್ವತಂತ್ರರೆಂತಲೂ ಮತ್ತು ಅವರು ಪರ ಬ್ರಹ್ಮನ ಅಧೀನರೆಂತಲೂ ಸೂಚಿಸಿದ ಹಾಗಾಯಿತು.

ಅವತಾರಿಕೆ.—ಈಗ ಪ್ರಕೃತವನ್ನು ಹೇಳುತ್ತಾರೆ:—

ಶ್ಲೋಕ॥ ಇಮೌ ಚ ರಕ್ಷೋಧಿಪತೀ ವರೋದ್ಧತೌ ಜಹಿ ಸ್ವವೀರ್ಯೇಣ
ನೃಷು ಪ್ರಜಾತಃ ॥ ಇತೀರಿತೇತ್ಯೈರಖಿಲೈಸ್ಸುರೇಶ್ವರೈರ್ಬಭೂ
ವ ರಾಮೋ ಜಗತೀಪತಿಃ ಪ್ರಭುಃ ॥೬೪॥

ಅರ್ಥ:—ಹೇ ಸ್ವಾಮಿನ್=ಓ ಸ್ವಾಮಿಯೇ ಇಮೌ=ಇಂಥಾ, ರಕ್ಷೋಧಿಪತೀ= ರಾಕ್ಷಸಶ್ರೇಷ್ಠರಾದ, ವರೋದ್ಧತೌ= ವರ=ವರದಿಂದ, ಉದತೌ=ಗರ್ವಿತರಾದ ರಾವಣಕುಂಭಕರ್ಣರನ್ನು, ತ್ವಂ=ನೀನು, ನೃಷು=ರಾಜರುಗಳಲ್ಲಿ ಅಥವ ಮನುಷ್ಯ ರುಗಳಲ್ಲಿ, ಪ್ರಜಾತಃ=ಹುಟ್ಟಿದವನಾಗಿ, ಸ್ವವೀರ್ಯೇಣ=ಸ್ವಕೀಯವಾದ ಸಾಮರ್ಥ್ಯ ದಿಂದ, ಜಹಿ= ಸಂಹರಿಸು, ಇತಿ=ಈ ರೀತಿಯಾಗಿ, ಅಖಿಲೈ=ಸಕಲರಾದ, ಸುರೇ ಶ್ವರೈ=ದೇವಶ್ರೇಷ್ಠರುಗಳಾದ, ತ್ಯೈಃ=ಅಂತಹ ಬ್ರಹ್ಮಾದಿಗಳಿಂದ, ಈ ತೀರಿತೇಸತಿ= ಸ್ತೋತ್ರಮಾಡಿಸಿಕೊಳ್ಳಲ್ಪಟ್ಟು, ಪ್ರಭುಃ=ಸ್ವಾಮಿಯಾದ, ಜಗತೀಪತಿಃ=ಜಗತ್ಪತಿ ಯಾದ ನಾರಾಯಣದೇವರು, ರಾಮಃ=ರಾಮಾವತಾರಮಾಡಿದವನಾಗಿ, ಬಭೂವ= ಆದನು.

ತಾತ್ಪರ್ಯ.—ಓ ಸ್ವಾಮಿಯೇ, ಈ ರಾಕ್ಷಸಶ್ರೇಷ್ಠರಾದ ಮತ್ತು ಬ್ರಹ್ಮಾದಿಗಳ ವರದಿಂದ ಗರ್ವಿತರಾದ ರಾವಣಕುಂಭಕರ್ಣರನ್ನು ನೀನು ಭೂಲೋಕದಲ್ಲಿ ಮಾನವ ನಾಗಿ ಅವತರಿಸಿ ನಿನ್ನ ಸಾಮರ್ಥ್ಯದಿಂದ ಅವರನ್ನು ಸಂಹರಿಸು ಎಂದು ದೇವತೆ ಗಳಿಂದ ಪ್ರಾರ್ಥಿತನಾದ ಜಗತ್ಪತಿಯಾದ ಶ್ರೀನಾರಾಯಣನು ರಾಮಾವತಾರ ಮಾಡಿದನು.

ವಿಶೇಷಾರ್ಥ.— ಈ ಶ್ಲೋಕದಲ್ಲಿ ನಿನ್ನ ಸಾಮರ್ಥ್ಯದಿಂದ ಸಂಹರಿಸು ಎಂಬುದಾಗಿ ಸ್ತೋತ್ರಮಾಡಿದ್ದರಿಂದ ಶ್ರೀಹರಿಯು ಸ್ವತಂತ್ರನೆಂತಲೂ, ನಿತ್ಯಪೂರ್ಣ ನೆಂತಲೂ ತಿಳಿದಹಾಗಾಯಿತು ಮತ್ತು ದೇವತೆಗಳಿಂದ ಪ್ರಾರ್ಥಿತನಾಗಿ ರಾಮಾ ವತಾರಮಾಡಿದನೆಂದು ತಿಳಿಸಿದ್ದರಿಂದ, ಶ್ರೀಹರಿಯು ತಾನು ಪ್ರಪಂಚದಿಂದ ಯಾವ ವಿಧವಾದ ಪ್ರಯೋಜನವನ್ನು ಹೊಂದತಕ್ಕವನಲ್ಲವೆಂದು ತಿಳಿಯಬೇಕು. ಮತ್ತು ಭಕ್ತರ ಇಚ್ಛಾಪೂರ್ಣ ಮಾಡತಕ್ಕವನೆಂದು ತಿಳಿಯಬೇಕು.

ಅವತಾರಿಕೆ.—ರಾಮಾವತಾರವನ್ನೇ ವಿಸ್ತರಿಸಿ ಹೇಳುತ್ತಾರೆ:—

**ಶ್ಲೋಕ॥ ಸ ಕಶ್ಯಪಸ್ಯಾದಿತಿಗರ್ಭಜನ್ಮನೋ ವಿವಸ್ವತಸ್ತಸ್ತು ಭವಸ್ಯ ಭೂಭೃತಃ॥ ಗೃಹೇ ದಶಸ್ಯಂದನನಾಮಿನೋಭೂತ್ ಕೌಶಲ್ಯಕಾನಾಮ್ನಿ ತದರ್ಥಿನೇಷ್ಟಃ** ॥೬೫॥

ಅರ್ಥ:— ಸಃ= ಆ ನಾರಾಯಣದೇವರು, ಕಶ್ಯಪಸ್ಯ ಕಶ್ಯಪ ಋಷಿಗಳ, ಅದಿತಿಗರ್ಭಜನ್ಮನಃ= ಅದಿತಿ-ಅದಿತೀದೇವಿಯು, ಗರ್ಭಜನ್ಮನಃ= ಗರ್ಭ=ಗರ್ಭದಲ್ಲಿ, ಜನ್ಮನಃ=ಉತ್ಪತ್ತಿ ಉಳ್ಳಂತ, ವಿವಸ್ವತಃ=ಸೂರ್ಯದೇವರ, ತಂತುಭವಸ್ಯ=ತಂತು= ವಂಶದಲ್ಲಿ, ಭವಸ್ಯ=ಉತ್ಪನ್ನನಾದಂಥ, ಭೂಭೃತ=ರಾಜನಾದಂಥ, ದಶಸ್ಯಂದನನಾ ಮಿನಃ=ದಶಸ್ಯಂದನ=ದಶರಥನೆಂಬ, ನಾಮಿನಃ=ಹೆಸರುಳ್ಳವನ, ಗೃಹೆ ಹೆಂಡತಿ ಯಾದ, ಕೌಶಲ್ಯಕಾನಾಮ್ನಿ=ಕೌಶಲ್ಯ ಎಂಬ ಹೆಸರುಳ್ಳವಳಲ್ಲಿ, ತದರ್ಥಿನೇಷ್ಟಃ= ಪುತ್ರಸ್ವರೂಪವಾದ ಧರ್ಮಕ್ಕೆ ಬಾಧ್ಯವಾದ ಯಜ್ಞಕಾರ್ಯದಿಂದ ತುಷ್ಟನಾಗಿ, ಅಭೂತ್=ಅವತರಿಸಿದನು.

ತಾತ್ಪರ್ಯ:—ಶ್ರೀಹರಿಯು ಕಶ್ಯಪರ ಹೆಂಡತಿಯಾದ ಅದಿತೀದೇವಿಯಲ್ಲಿ ಹು ಟ್ಟಿದ ಸೂರ್ಯವಂಶೀಯ ರಾಜರುಗಳಲ್ಲಿ ದಶರಥನೆಂಬ ಹೆಸರುಳ್ಳ ರಾಜನ ಹೆಂಡತಿ ಯಾದ ಕೌಸಲ್ಯಾದೇವಿಯಲ್ಲಿ ಪುತ್ರಕಾಮೇಷ್ಟಿಯಿಂದ ಪ್ರಸನ್ನನಾಗಿ ರಾಮನೆಂಬ ಹೆಸರಿನಿಂದ ಅವತರಿಸಿದನು.

ವಿಶೇಷಾರ್ಥ:—ವಾಮನ ಪುರಾಣದಲ್ಲಿ ದೇವರು ಕಶ್ಯಪರಿಗೆ ಹೇಳಿರುತ್ತಾರೆ. ಏನೆಂದರೆ, ನೀನು ವೈವಸ್ವತಮನ್ವಂತರದಲ್ಲಿ ದಶರಥನೆಂಬ ಹೆಸರಿನಿಂದ ಅವತರಿಸು. ನಾನು ನಿನಗೆ ಪುತ್ರನಾಗಿ ರಾಮನೆಂಬ ಹೆಸರಿನಿಂದ ಅವತರಿಸುತ್ತೇನೆ. ನಾನು ಕೊಡುವ, ಪಿತೃಶ್ರಾದ್ಧದ ಪಿಂಡದಾನದಿಂದ ನಿಮಗೆ ಮುಕ್ತಿಯಾಗುತ್ತದೆ.

ಇದಕ್ಕೆ ಪ್ರಮಾಣ:--ಪುನರ್ದಶರಥೋಽಭೂತ್ತ್ವಾತ್ತ್ವಮೇವಾಸಿ ಪಿತಾಮಹ॥ ಮದ್ದತ್ತ ಪಿಂಡದಾನೇನ ಮುಕ್ತಿಸ್ತೇಽಭವಿತಾಧ್ರುವಂ ॥೧॥ ಇದೇರೀತಿ ಪದ್ಮಪುರಾಣದಲ್ಲಿಯೂ ವಸುದೇವನನ್ನು ಕುರಿತುಹೇಳಿದಂತೆ ವಚನವಿದೆ. ಇದಕ್ಕೆ ಪ್ರಮಾಣ.—ರಘೂಣಾ ಅನ್ವಯೇ ಪೂರ್ವಂ ರಾಜಾ ದಶರಥೋಽಪ್ಯಭೂತ್॥ ದ್ವಿತಿಯೇ ವಸುದೇವೋಽಭೂತ್ ವೃಷ್ಣೀನಾಂ ಅನ್ವಯೇಽಪುನಃ ॥೧॥

ಅವತಾರಿಕೆ:—ಶ್ರೀಹರಿಯು ರಾಮಾವತಾರಮಾಡಿದ ಕಾಲದಲ್ಲಿ ದೇವತೆಗಳು ಮಾಡಿದ ಅವತಾರ ವಿಷಯವನ್ನು ತಿಳಿಸುತ್ತಾರೆ.

**ಶ್ಲೋಕ॥ ತದಾಜ್ಞಯಾದೇವಗಣಾಬಭೂವಿರೇ ಪುರೈವಪಶ್ಚಾದಪಿ ತಸ್ಯ ಭೂಮ್ನಃ ॥ ನಿಷೇವಣಾತೋಽರುಗುಣಸ್ಯವಾನರೇಷ್ವಥೋನರೇಷ್ವೇವಚಪಶ್ಚಿಮೋದ್ಭವಾಃ ॥೬೬॥**

ಅರ್ಥ:—ತದಾಜ್ಞಯಾ=ತತ್-ಆ ಪರಮಾತ್ಮನ, ಆಜ್ಞಯಾ=ಅಪ್ಪಣೆಯಿಂದ ದೇವಗಣಾಃ=ದೇವ=ದೇವತೆಗಳ, ಗಣಾಃ=ಸಮೂಹವು, ತಸ್ಯ=ಆ ಪರಮಾತ್ಮನ, ಪುರೈವ=ಪೂರ್ವದಲ್ಲಿಯೂ, ಪಶ್ಚಾದಪಿ=ಅನಂತರದಲ್ಲಿಯೂ, ಭೂಮ್ನಃ=ಪೂರ್ಣನಾದಂಥ, ಉರುಗಣಸ್ಯ=ಉರು=ಉತ್ಕೃಷ್ಟನಾದ, ಗುಣಸ್ಯ=ಗುಣವುಳ್ಳಂಥಾ ಶ್ರೀರಾಮಚಂದ್ರದೇವರ, ನಿಷೇವಣಾಯ=ಸೇವಾಕೈಂಕರ್ಯ, ವಾನರೇಷು=ಕಪಿಗಳ ಯೋನಿಗಳಲ್ಲಿ, ಬಭೂವಿರೇ=ಹುಟ್ಟಿದರು, ನರೇಷ್ವೇವ=ಮಾನವಯೋನಿಯಲ್ಲಿಯೂ, ಪಶ್ಚಿಮೋದ್ಭವಾಃ=ಅನಂತರದಲ್ಲಿ ಹುಟ್ಟಿದರು.

ತಾತ್ಪರ್ಯ.—ಆ ಶ್ರೀಹರಿಯ ಆಜ್ಞಾನುಸಾರ ದೇವತೆಗಳು ರಾಮಾವತಾರಕ್ಕೆ ಮೊದಲೂ ಮತ್ತು ಅನಂತರವೂ ಪೂರ್ಣನಾದ ಗುಣವಂತನಾದ ಶ್ರೀರಾಮನ ಸೇವಾಕೈಂಕರ್ಯ ಕಪಿಗಳಲ್ಲಿಯೂ ಅನಂತರ ಮಾನವರಲ್ಲಿಯೂ ಅವತಾರ ಮಾಡಿದರು.

ವಿಶೇಷಾರ್ಥ.—ಭಗವದಾಜ್ಞಾಧಾರಕರಾಗಿ ಭಗವತ್ಸೇವಾ ನಿಮಿತ್ಯವಾಗಿ ಯೆಂದು ಹೇಳಿದ್ದರಿಂದ ಯಾವ ಜನ್ಮದಲ್ಲಿಯೇ ಆಗಲಿ ಚೇತನರು ಮಾಡುವ ಸೇವಾದಿಗಳು ಶ್ರೀಹರಿಯ ಆಜ್ಞಾ ಮತ್ತು ಅವನ ಪ್ರೀತಿ ಇವುಗಳಿಂದ ಸಹಿತವಾದರೆ ಸಾರ್ಥಕವೇ ಹೊರ್ತು ಇಲ್ಲದಿದ್ದರೆ ಪ್ರಯೋಜನವಿಲ್ಲ ಮತ್ತು ದೇವತೆಗಳು ಶ್ರೀಹರಿಯ

ಅವತಾರಕಾಲದಲ್ಲಿ ತಾವು ಅವತರಿಸಿ ಅವತಾರಕಾರ್ಯವೆಂಬ ಸಿಷ್ಟಪರಿಪಾಲನ ದುಷ್ಟನ್ರಿಗಹ ಇವುಗಳನ್ನು ಮಾಡುವ ಶ್ರೀ ಹರಿಗೆ ದಾಸರಾಗಿರುತ್ತಾರೆ.

ಅವತಾರಿಕೆ:—ಯಾವ ಯಾವ ದೇವತೆಗಳು ಎಲ್ಲಿ ಅವತರಿಸಿದವೆಂಬುದನ್ನು ತಿಳಿಸುತ್ತಾರೆ.

**ಶ್ಲೋಕ॥ಸದೇವತಾನಾಂಪ್ರಥಮೋಗುಣಾಧಿಕೋ ಬಭೋವನಾಮ್ನಾಹನು ಮಾತ್ರ್ಪಭಂಜನಃ ॥ ಸ್ವಯಂಭುವಃಕೇಸರಿಣೋಗೃಹೆಪ್ರಭು ರ್ಬ ಭೂವವಾಲೀಸ್ವತಯೇವವಾಸವಃ ॥೬೭॥**

ಅರ್ಥ:—ಸಃ=ಅಂತಹ, ದೇವತಾನಾಂ=ದೇವತೆಗಳಿಗೆ, ಪ್ರಥಮಃ=ಶ್ರೇಷ್ಟವಾದ ಗುಣಾಧಿಕಃ=ಗಣವಂತರಾದ, ಪ್ರಭುಃ=ಸಮರ್ಥರಾದಂಥ, ಪ್ರಭಂಜನಃ=ವಾಯುದೇವರು, ನಾಮ್ನಾ=ಹೆಸರಿನಿಂದ, ಹನುಮಾನ್=ಹನುಮಂತನೆಂಬ (ಹೆಸರಿನಿಂದ), ಕೇಸರಿಣಃ=ಕೇಸರಿ ಎಂಬ ಕಪಿಯ, ಗೃಹೆ=ಹೆಂಡತಿಯಾದ, ಅಂಜನಾದೇವಿಯಲ್ಲಿ, ಸ್ವಯಂಭುವಃ=ವಾಯುದೇವರೆನೆ, ಬಭೂವ=ಅವತರಿಸಿದರು, ವಾಸವಃ=ಇಂದ್ರದೇವರು, ಸ್ವತಏವ=ತಾವೇನೆ, ವಾಲಿ=ವಾಲಿಯಾಗಿ, ಬಭೂವ=ಅವತಾರ ಮಾಡಿದರು.

ತಾತ್ಪರ್ಯ:—ದೇವತೆಗಳಲ್ಲಿ ಮೊದಲನೆಯವರಾದ ಗುಣವಂತರಾದ ಸಮರ್ಥರಾದ ವಾಯುದೇವರು, ಹನುಮಂತನೆಂಬ ಹೆಸರಿನಿಂದ ಕೇಸರಿ ಎಂಬುವ ಕಪಿಯ ಹೆಂಡತಿಯಾದ ಅಂಜನಾದೇವಿಯಲ್ಲಿ ವಾಯುದೇವರಿಂದಲೇ ಅವತರಿಸಿದರು ಮತ್ತು ವಾಲಿಯು ಇಂದ್ರನಿಂದಲೇ ಅವತರಿಸಿದನು.

ವಿಶೇಷಾರ್ಥ:— ಪ್ರಮಾಣ ಸಂಗ್ರಹರಾಮಾಯಣದಲ್ಲಿ-ಅಂಜನಾತ್ವೇನ ಸಂಜಾತಾ ಮಂಜುಳಾಪುಂಜಕಸ್ಥಳೀ, ಇಂತಹ ಅವತಾರಮಾಡಿದ ಅಂಜನಾದೇವಿಯು ಅಪ್ಸರ ಸ್ತ್ರೀ ಎಂತಲೂ ಹೇಳಿದ್ದಾರೆ. ಮತ್ತು ಭವಿಷ್ಯೋತ್ತರಪುರಾಣದಲ್ಲಿ ಈ ಅಂಜನಾದೇವಿಯು ಮತಂಗರ ಆಶ್ರಮದಲ್ಲಿ ಇದ್ದು ಆಕಾಶಗಂಗಾಸ್ನಾನದಿಂದ ಶುದ್ಧವಾದ ದೇಹ ಉಳ್ಳವಳಾಗಿರಲು ವಾಯುದೇವರು ಇವಳ ತಪೋಭಾವವನ್ನ ತಿಳಿದು ಫಲದಲ್ಲಿ ಬಲರೂಪ ವೀರ್ಯವನ್ನ ಅಭಿಮಂತ್ರಣಮಾಡಿಕೊಟ್ಟರೆಂದು ಹೇಳುತ್ತಾರೆ.

ಅವತಾರಿಕೆ.—ಸುಗ್ರೀವಾದಿಗಳ ಉತ್ಪತ್ತಿಯನ್ನು ತಿಳಿಸುತ್ತಾರೆ.—

**ಶ್ಲೋಕ|| ಸುಗ್ರೀವ ಆಸೀತ್ ಪರಮೇಷ್ಠಿತೇಜಸಾ ಯುತೋ ರವಿಃಸ್ವಾತ್ಮ ತಏವ ಜಾಂಬವಾನ್ ಯಏವಪೂರ್ವಂ ಪರಮೇಷ್ಠಿವಕ್ಷಸಃ ಸ್ತ್ವಗುದ್ಭವೋಧರ್ಮ ಇಹಾಸ್ಯತೋಭವತ್ ||೬೮||**

ಅರ್ಥ—ರವಿಃ=ಸೂರ್ಯದೇವರು, ಸ್ವಾತ್ಮತ ಏವ=ತಾವೇನೇ, ಪರಮೇಷ್ಠಿತೇಜಸಾ=ಪರಮೇಷ್ಠಿ=ಬ್ರಹ್ಮದೇವರ= ತೇಜಸಾ=ತೇಜಸ್ಸಿನಿಂದ, ಯುತಃ=ಯುಕ್ತರಾಗಿ, ಸುಗ್ರೀವಃ=ಸುಗ್ರೀವನಾಮಕರು, ಆಸೀತ್=ಆದರು, ಜಾಂಬವಾನ್=ಜಾಂಬವಂತರು, ಸ್ವಾತ್ಮತೆಏವ=ತಾವೇನೆ, ಬಭೂವ=ಆದರು. ಯಃ=ಯಾರು, ಪೂರ್ವಂ=ಪೂರ್ವದಲ್ಲಿ, ಪರಮೇಷ್ಠಿವಕ್ಷಸಃ ಬ್ರಹ್ಮದೇವರವಕ್ಷಸ್ಥಳದಿಂದ, ತ್ವಗುದ್ಭವಃ=ಶರೀರದಿಂದ ಹುಟ್ಟಿದ, ಧರ್ಮಏವ=ಯಮದೇವರೇನೆ, ಇಹ=ಇಲ್ಲಿ, ಆಸ್ಯತಃ=ಮುಖದಿಂದ, ಅಭವತ್=ಹುಟ್ಟಿದರು

ತಾತ್ಪರ್ಯ.—ಸೂರ್ಯದೇವರು ತಾವೇನೇ ಬ್ರಹ್ಮದೇವರ ಆವೇಶಯುಕ್ತರಾಗಿ ಸುಗ್ರೀವನೆಂಬ ಹೆಸರಿನಿಂದ ಅವತರಿಸಿದರು ಮತ್ತು ಪೂರ್ವದಲ್ಲಿ ಬ್ರಹ್ಮದೇವರ ಶರೀರದಿಂದ ಅಂದರೆ ವಕ್ಷಸ್ಥಳದಿಂದ ಹುಟ್ಟಿದ ಯಮದೇವರು ಈಗ ಜಾಂಬವಂತರಾಗಿ ಬ್ರಹ್ಮದೇವರ ಮುಖದಿಂದ ಹುಟ್ಟಿದರು.

ವಿಶೇಷಾರ್ಥ.—ಬ್ರಹ್ಮದೇವರಿಗೆ ಭೂಮಿಯಲ್ಲಿ ಅವತಾರವಿಲ್ಲ. ಆದರೆ ಆವೇಶವೆಂಬ ಶಕ್ತಿಯು ಮಾತ್ರ ಇರುತ್ತೆ. ಆ ಶಕ್ತಿಯು ಪರಮಾತ್ಮನ ಸೇವಾನಿಮಿತ್ತವಾಗಿ ಅವತರಿಸಿದ ದೇವತೆಗಳಲ್ಲಿ ಇದ್ದು, ಶ್ರೀಹರಿಯನ್ನ ಸಂತೋಷಪಡಿಸಿ ನಂತರ ಅವನಿಂದ ದೊರಕಲ್ಪಡುವ ಅನುಗ್ರಹಕ್ಕೆ ಬಾಧ್ಯವಾಗುತ್ತೆ.

ಅವತಾರಿಕೆ.—ಪೂರ್ವದಲ್ಲಿ ಹೇಳಿದ ಅರ್ಥವನ್ನೇ ವಿಸ್ತಾರವಾಗಿ ತಿಳಿಸುತ್ತಾರೆ:—

**ಶ್ಲೋಕ|| ಯಏವಸೂರ್ಯಾತ್ಪುನರೇವ ಸಂಜ್ಞಯಾ ನಾಮ್ನಾಯಮೋ ದಕ್ಷಿಣದಿಕ್ಪ ಆಸೀತ್ || ಸಜಾಂಬವಾನ್ ದೈವತಕಾರ್ಯದರ್ಶಿನಾ ಪುರೈವಸೃಷ್ಟೋಮುಖತಃ ಸ್ವಯಂಭುವಾ ||೬೯||**

ಅರ್ಥ.—ಯಏವ=ಬ್ರಹ್ಮನಿಂದ ಹುಟ್ಟಿದ ಯಮದೇವರೇ, ಪುನರೇವ=ಪುನಹ,

ಸೂರ್ಯಾತ್=ಸೂರ್ಯದೇವರಿಂದ, ಸಂಜ್ಞಾಯಾ=ಸಂಜ್ಞಾದೇವಿಯಲ್ಲಿ, ನಾಮ್ನಾ=ಹೆಸರಿನಿಂದ, ಯಮಃ=ಯಮನೆಂಬ (ಹೆಸರಿನಿಂದ,) ದಕ್ಷಿಣದಿಕ್ಪಃ=ದಕ್ಷಿಣದಿಕ್ಪಾಲಕನು, ಆಸೀತ್=ಆದನೋ, ಸಏವ=ಆ ಯಮದೇವರೇನೇ, ದೈವತಕಾರ್ಯದರ್ಶಿನಾ=ದೇವತಾಕಾರ್ಯವನ್ನ ತಿಳಿಸುವ, ಸ್ವಯಂಭುವಾ=ಬ್ರಹ್ಮದೇವರಿಂದ, ಪುರೈವ=ಮೊದಲೇ, ಮುಖತಃ=ಮುಖದಿಂದ, ಜಾಂಬವಾನ್=ಜಾಂಬವಂತನೆಂಬ ಹೆಸರಿನಿಂದ, ಸೃಷ್ಟಃ=ಸೃಷ್ಟನಾದನು.

ತಾತ್ಪರ್ಯ.--ಬ್ರಹ್ಮದೇವರಿಂದ, ಹುಟ್ಟಿದ ಯಮದೇವರು, ಮನುಕಲ್ಪದಲ್ಲಿ, ಸೂರ್ಯದೇವರಿಂದ, ಸಂಜ್ಞಾದೇವಿಯಲ್ಲಿ, ಯಮ ಎಂತ ಹುಟ್ಟಿ ದಕ್ಷಿಣದಿಕ್ಪಾಲಕನಾದನೋ, ಅವನೇ ಜಾಂಬವಂತನೆಂಬ ಹೆಸರಿನಿಂದ ದೇವತಾಕಾರ್ಯಪ್ರವರ್ತಕರಾದ ಬ್ರಹ್ಮದೇವರ ಮುಖದಿಂದ ಪೂರ್ವದಲ್ಲಿ ಸೃಷ್ಟನಾದನು.

ವಿಶೇಷಾರ್ಥ.—ದೇವತೆಗಳು ಸೂಕ್ಷ್ಮ ಸೃಷ್ಟಿಯಲ್ಲಿ ಪರಮಾತ್ಮನ ಶರೀರದಿಂದ ಉತ್ಪನ್ನರಾದರು. ಚತುರ್ಮುಖ ಬ್ರಹ್ಮನಿಂದ ಪದ್ಮಸೃಷ್ಟಿಯಲ್ಲಿ ಉತ್ಪನ್ನರಾದರು. ನಂತರ ಅವರೇನೆ ಮನುಕಲ್ಪದಲ್ಲಿಯೂ ಹುಟ್ಟಿ ಶ್ರೀಹರಿಯ ಸೇವೆಮಾಡಿ ಅವನ ಪೂರ್ಣಾನುಗ್ರಹಕ್ಕೆ ಬಾಧ್ಯರಾಗುತ್ತಾರೆ. ಇದರಲ್ಲಿ ಪರಬ್ರಹ್ಮನಿಂದ ಹುಟ್ಟಿದ ಕಾಲದಲ್ಲಿ ಪಾದದಿಂದ ಯಮನೆಂಬ ಹೆಸರಿನಿಂದ ಶೂದ್ರವರ್ಣಾಭಿಮಾನಿಯಾಗಿ ಹುಟ್ಟಿದನು. ಪದ್ಮಕಲ್ಪದಲ್ಲಿ ಬ್ರಹ್ಮನಿಂದ ವಕ್ಷಸ್ಥಳದಲ್ಲಿ ಧರ್ಮ ಎಂಬ ಹೆಸರಿನಿಂದ ಹುಟ್ಟಿದನು. ನಂತರ ಸೂರ್ಯನಿಂದ ಸಂಜ್ಞೆಯಲ್ಲಿ ಯಮನೆಂಬ ಹೆಸರಿನಿಂದ ಹುಟ್ಟಿರುತ್ತಾನೆ. ಯುಗಕಲ್ಪದಲ್ಲಿ ಶ್ರೀರಾಮರ ಸೇವಾಕ್ಕಾಗಿ ತ್ರಿವಿಕ್ರಮಾವತಾರಕ್ಕೆ ಮೊದಲಿನಲ್ಲಿ ಬ್ರಹ್ಮನ ಮುಖದಿಂದ ಜಾಂಬವಂತ ಎಂದು ಹುಟ್ಟಿದನು.

ಅವತಾರಿಕೆ. –ಕಪಿರೂಪದಿಂದ ಅವತರಿಸಿದ ದೇವತೆಗಳನ್ನು ತಿಳಿಸುತ್ತಾರೆ:—

**ಶ್ಲೋಕ॥ ಬ್ರಹ್ಮೋದ್ಭವಃ ಸೋಮ ಉತಾಸ್ಯಸೂನೋ ರತ್ರೇರಭೂತ್ಸೋಂಗದನಾಮ ಜಾತಃ ॥ ಬೃಹಸ್ಪತಿಸ್ತಾರ ಉತೋಶಚೀಚ ಶಕ್ರಸ್ಯಭಾರ್ಯೈವ ಬಭೂವತಾರಾ ॥೭೦॥**

ಅರ್ಥ.— ಬ್ರಹ್ಮೋದ್ಭವಃ=ಬ್ರಹ್ಮದೇವರಿಂದ ಹುಟ್ಟಿದ, ಸೋಮಃ=

ಚಂದ್ರದೇವರು, ಅಸ್ಯ=ಈ ಬ್ರಹ್ಮದೇವರ, ಸೂನೋಃ=ಮಕ್ಕಳಾದ, ಅತ್ರೇಃ= ಅತ್ರಿಋಷಿಗಳ ದೆಶೆಯಿಂದ, ಅಭೂತ್=ಅವತಾರ ಮಾಡಿದನು, ಉತ= ಮತ್ತು. ಸಏವ=ಆ ಅತ್ರಿ ಪುತ್ರನಾದ ಚಂದ್ರನೇ, ಅಂಗದಃ=ಅಂಗದನಾಗಿ, ಜಾತಃ=ಹುಟ್ಟಿದನು. ಉತ=ಮತ್ತು, ಬೃಹಸ್ಪತಿಃ=ಬೃಹಸ್ಪತ್ಯಾಚಾರ್ಯರು, ತಾರಃ-ತಾರಾನಾಮಕ ಕಪಿಯಾಗಿ, ಶಕ್ರಸ್ಯ=ಇಂದ್ರನ, ಭಾರ್ಯ್ಯಾ=ಹೆಂಡತಿಯಾದ, ಶಚೀಚ-ಶಚೀದೇವಿಯು, ತಾರಾ=ತಾರಾ ನಾಮಕಳು, ಬಭೂವ= ಆದಳು.

ತಾತ್ಪರ್ಯ.—ಬ್ರಹ್ಮದೇವರಿಂದ ಹುಟ್ಟಿದ ಚಂದ್ರನು, ಬ್ರಹ್ಮನ ಮಗನಾದ ಅತ್ರಿಯಿಂದ ಹುಟ್ಟಿದನು. ಅದೇ ಚಂದ್ರನೇ ಅಂಗದನಾಗಿ ಈಗ ಅವತರಿಸಿದನು. ಬೃಹಸ್ಪತ್ಯಾಚಾರ್ಯರು ತಾರಾನಾಮಕ ಕಪಿಯಾಗಿ ಹುಟ್ಟಿದರು. ಇಂದ್ರನ ಹೆಂಡತಿಯಾದ ಶಚೀದೇವಿಯು ತಾರಾನಾಮಕಳಾಗಿ ಅವತರಿಸಿದಳು.

ವಿಶೇಷಾರ್ಥ.—ಚಂದ್ರದೇವರು ಪರಬ್ರಹ್ಮನ ಮನಸ್ಸಿನಿಂದ ಹುಟ್ಟಿದರು, ಅನಂತರ ಚತುರ್ಮುಖ ಬ್ರಹ್ಮನ ಮನಸ್ಸಿನಿಂದಲು ಹುಟ್ಟಿದರು. ಅತ್ರಿ ಋಷಿಗಳಿಂದ ಅನುಸೂಯಾದೇವಿಯಲ್ಲಿಯೂ ಹುಟ್ಟಿದರು. ಅದೇ ಚಂದ್ರನೇ ವಾಲಿಪುತ್ರನಾದ ಅಂಗದನೆಂದು ತಿಳಿಯಬೇಕು. ಪರಬ್ರಹ್ಮನಿಂದ ಚಂದ್ರನೆಂಬ ಹೆಸರಿನಿಂದ ಹುಟ್ಟಿದ್ದು, ಚತುರ್ಮುಖ ಬ್ರಹ್ಮನಿಂದಲೂ ಚಂದ್ರನೆಂತಲೇ ಅವತರಿಸಿ ಅತ್ರಿಯಲ್ಲಿ ಸೋಮ ಎಂದು ಹುಟ್ಟಿದನು. ಬೃಹಸ್ಪತಿಗಳು ತಾರಾ ಎಂಬ ಕಪಿ ರೂಪದಿಂದ ಶ್ರೀರಾಮರ ಸೇವೆಗಾಗಿ ಅವತರಿಸಿದರು.

ಅವತಾರಿಕೆ.—ಬೃಹಸ್ಪತಿ ತಾರಾ ಇವರುಗಳ ಪೂರ್ವೋತ್ಪತ್ತಿಯನ್ನು ಹೇಳಿ ಈಗಿನ ಉತ್ಪತ್ತಿಯನ್ನೂ ಹೇಳುತ್ತಾರೆ:—

ಶ್ಲೋಕ॥ ಬೃಹಸ್ಪತಿ ಬ್ರಹ್ಮಸುತೋಽಪಿಪೂರ್ವಂ ಸಹೈವಶಚ್ಯಾಮನಸೋಽಭಿಜಾತಃ ॥ ಬ್ರಹ್ಮೋದ್ಭವಶ್ಯಾಂಗಿರಸಃ ಸುತೋಽಭೂತ್ ಸ್ಮರೀಚ ಜಶ್ಯೈವಶಚೀಪುಲೋಮ್ನಃ ॥೭೦॥

ಅರ್ಥ.—ಬೃಹಸ್ಪತಿಃ=ಬೃಹಸ್ಪತ್ಯಾಚಾರ್ಯರು, ಪೂರ್ವಂ=ಪೂರ್ವ

ದಲ್ಲಿ, ಶಚ್ಯಾ–ಶಚೀದೇವಿಯಿಂದ, ಸಹೈವ=ಯುಕ್ತರಾಗಿ, ಮನಸಃ=ಬ್ರಹ್ಮ ದೇವರ ಮನಸ್ಸಿನಿಂದ, ಜಾತಃ=ಹುಟ್ಟಿದರು, ಬ್ರಹ್ಮಸುತೋಽಪಿ–ಬ್ರಹ್ಮ ದೇವರ ಮಕ್ಕಳಾದರೂನು, ಬ್ರಹ್ಮೋದ್ಭವಸ್ಯ=ಬ್ರಹ್ಮದೇವರ ಮಕ್ಕಳಾದ, ಅಂಗಿರಸಃ=ಅಂಗಿರಸ ಋಷಿಗಳ, ಸುತಃ=ಮಕ್ಕಳು, ಅಭೂತ್=ಆದರು, ಶಚೀ–ಶಚೀದೇವಿಯು, ಪುಲೋಮ್ನಃ=ಪುಲೋಮಾ ಎಂಬ ಹೆಸರಿನಿಂದ, ಮಾರೀಚಜಸ್ಯೇನ=ಮರೀಚಿ ಮಕ್ಕಳಾದ ಕಶ್ಯಪರಿಗೆ ಹೆಣ್ಣು ಮಗಳಾಗಿ, ಅಭೂತ್=ಆದಳು.

ತಾತ್ಪರ್ಯ.—ಬ್ರಹ್ಮದೇವರಿಂದ ಹುಟ್ಟಿದ ಬೃಹಸ್ಪತ್ಯಾಚಾರ್ಯರು, ಬ್ರಹ್ಮನ ಮಕ್ಕಳಾದ ಅಂಗೀರಸರಿಂದ ಹುಟ್ಟಿದರು. ಶಚೀದೇವಿಯರು ಮರೀಚಿಯ ಮಕ್ಕಳಾದ ಕಶ್ಯಪರಿಂದ ಪುಲೋಮ ಎಂದು ಹುಟ್ಟಿದರು.

ವಿಶೇಷಾರ್ಥ.—ಬೃಹಸ್ಪತ್ಯಾಚಾರ್ಯರು ಶ್ರೀಹರಿಯಿಂದ ಸೂಕ್ಷ್ಮ ಸೃಷ್ಟಿಯಲ್ಲಿ ಬಲದ ಕಾಲಿನ ಹೆಬ್ಬೆಟ್ಟಿನಿಂದ ಶಬ್ದತತ್ವವೇ ಶರೀರ ಉಳ್ಳವ ರಾಗಿ ಹುಟ್ಟಿದರು. ಅವರೇ ಪದ್ಮಕಲ್ಪದಲ್ಲಿ ಬ್ರಹ್ಮನ ಮನಸ್ಸಿನಿಂದ ಹುಟ್ಟಿ ದರು, ಅನಂತರ ಮನುಕಲ್ಪದಲ್ಲಿ ಅಂಗೀರಸರಲ್ಲಿ ಹುಟ್ಟಿದರು. ಯುಗ ಕಲ್ಪದಲ್ಲಿ ರಾಮರ ಶೇವಾಕ್ಯೋಸ್ಕರ ತಾರಾ ಎಂಬ ಹೆಸರಿನಿಂದ ಅವತಾರ ಮಾಡಿದರು. ಶಚೀದೇವಿಯು ಬ್ರಹ್ಮನ ಮನಸ್ಸಿನಿಂದ ಹುಟ್ಟಿ ಮನುಕಲ್ಪ ದಲ್ಲಿ ಕಶ್ಯಪನಲ್ಲಿ ಪುಲೋಮ ಎಂತಲೂ, ಯುಗಕಲ್ಪದಲ್ಲಿ ವಾಲಿ ಹೆಂಡತಿ ತಾರಾ ಎಂತಲೂ ಅವತರಿಸಿರುತ್ತಾಳೆ.

ಅವತಾರಿಕೆ.—ಬೃಹಸ್ಪತಿಯ ಉತ್ಪತ್ತಿಯನ್ನ ತಿಳಿಸುತ್ತಾರೆ:—

ಶ್ಲೋಕ॥ ಸಏವ ಶಚ್ಯಾಸಹವಾನರೋಽಭೂತ್ಸ್ವಯಂಭುವೋದೇವಗುರು
ಬೃಹಸ್ಪತಿಃ ॥ ಅಭೂತ್ಸುಷೇಣಾ ವರುಣೋಽಶ್ವಿನೌಚ ಬಭೂವು
ತುಶ್ಚೌವಿವಿದಶ್ಚಮ್ಯಂದಃ ॥೭೨॥

ಅರ್ಥ.—ಸಃ=ಅಂಥ, ದೇವಗುರುಃ=ದೇವತೆಗಳಿಗೆ ಗುರುಗಳಾದಂಥ, ಬೃಹಸ್ಪತಿಃ=ಬ್ರಹಸ್ಪತ್ಯಾಚಾರ್ಯರು, ಸ್ವಯಂಭುವಃ=ತನ್ನಿಂದ ತಾನೇ ಉತ್ಪ ನ್ನನಾದವನಾಗಿ, ಶಚ್ಯಾ=ಶಚೀದೇವಿಯಿಂದ, ಸಹಃ=ಕೂಡಿಕೊಂಡು, ವಾ ನರಃ=ಕಪಿರೂಪನು, ಅಭೂತ್=ಆದನು, ವರುಣಃ=ವರುಣದೇವರು, ಸು ಷೇಣಃ=ಸುಷೇಣ ನಾಮಕನಾದ ಕಪಿಯು, ಅಭೂತ್–ಆದನು, ತೌ=ಅಂತಹ,

ಅಶ್ವಿನೌಚ=ಅಶ್ವಿನೀ ದೇವತೆಗಳು, ವಿವಿದಃ=ವಿವಿದ ನಾಮಕ, ಮೈಂದಃ= ಮೈಂದ ನಾಮಕ ವಾನರರಾಗಿ, ಬಭೂವತುಃ=ಅವತರಿಸಿದರು.

ತಾತ್ಪರ್ಯ.—ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು ಮೂಲರೂಪ ದಿಂದಲೇ ತಾರಾ ಎಂಬುವ ಹೆಸರಿನಿಂದ ಶಚೀ ಸಹಿತರಾಗಿ ಕಪಿರೂಪವನ್ನ ಧಾರಣಮಾಡಿದರು. ವರುಣದೇವರು ಸುಷೇಣನೆಂಬುವ ಹೆಸರಿನಿಂದ ವಾ ನರ ರೂಪವನ್ನ ತಾಳಿದರು. ಅಶ್ವನೀದೇವತೆಗಳು ವಿವಿದಮೈಂದರೆಂಬ ನಾಮಾಂತರದಿಂದ ಕಪಿರೂಪರಾದರು.

ವಿಶೇಷಾರ್ಥ.—ದೇವತೆಗಳು ಕಾಮರೂಪವುಳ್ಳವರು. ಆದರೆ ಶ್ರೀ ರಾಮಚಂದ್ರನ ಸೇವಾ ನಿಮಿತ್ತವಾಗಿ ತಮ್ಮ ತಮ್ಮ ಮೂಲರೂಪದಿಂದಲೆ ನಿಜಪತ್ನಿಯರಲ್ಲಿ ಅಂಶದಿಂದ ಕಪಿರೂಪರಾಗಿ ಅವತಾರ ಮಾಡುತ್ತಾರೆ. ಅಲ್ಲದೆ ಋಷಿವಂಶದಲ್ಲಿಯೂ ಕಪಿರೂಪದಿಂದ ಅವತಾರ ಮಾಡುತ್ತಾರೆಂತ ಲೂ ಪ್ರಮಾಣ ಉಂಟು. ಮತ್ತು ಬೃಹಸ್ಪತಿಗಳೂ ಶಚೀಸಮೇತರೆಂದು ಶ್ಲೋಕದಲ್ಲಿ ಹೇಳಿದ್ದರಿಂದ ಶಚೀ ಮತ್ತು ಗುರುಗಳು ಇಬ್ಬರೂ ಒಂದೇ ತತ್ವಾಭಿಮಾನಿಗಳೆಂತಲೂ ಮತ್ತು ಒಂದೇ ತಾರತಮ್ಯ ಉಳ್ಳವರೆಂತಲೂ ತಿಳಿಯಬೇಕೆಂಬ ಅಭಿಪ್ರಾಯ.

ಅವತಾರಿಕೆ.—ಅಶ್ವನೀದೇವತೆಗಳ ಪೂರ್ವಜನ್ಮಗಳನ್ನ ತಿಳಿಸಿ ಅವ ತಾರ ವಿಷಯವನ್ನ ತಿಳಿಸುತ್ತಾರೆ:—

**ಶ್ಲೋಕ॥ ಬ್ರಹ್ಮೋದ್ಭವೌತೌಪುನರೇವಸೂರ್ಯಾ ದ್ಬಭೂವತುಸ್ತತ್ರಕನೀ ಯಸಸ್ತು॥ ಆವೇಶಐಂದ್ರೋವರದಾನತೋಽಭೂತ್ ತತೋ ಬ ಲೀಯಾನಿವಿದೋಹಿಮೈಂದಾತ್ ॥೭೩॥**

ಅರ್ಥ.—ತೌ=ಆ ಅಶ್ವನೀದೇವತೆಗಳು, ಬ್ರಹ್ಮೋದ್ಭವೌ=ಬ್ರಹ್ಮ ದೇವರಿಂದ ಹುಟ್ಟಿದವರು, ಪುನರೇವ=ತಿರುಗಿ, ಸೂರ್ಯಾತ್=ಸೂರ್ಯ ದೇವರ ದೆಸೆಯಿಂದ, ಬಭೂವತುಃ=ಹುಟ್ಟಿದರು, ತತ್ರ=ಅದರಲ್ಲಿ, ಕನೀಯ ಸಸ್ತು=ಚಿಕ್ಕವನಾದ ವಿವಿದನು, ಐಂದ್ರ=ಇಂದ್ರಸಮ್ಮಂಧಿಯಾದ, ಆವೇ ಶಃ=ಆವೇಶ ಉಳ್ಳವರು, ವರದಾನತಃ=ವರದ ದೆಸೆಯಿಂದ, ಅಭೂತ್= ಆದರು, ತತಃ=ಅನಂತದಲ್ಲಿ, ಮೈಂದಾತ್=ಮೈಂದನಿಗಿಂತಲೂ, ವಿವಿದೋ ಹಿ=ವಿವಿದನಾದರೂ, ಬಲೀಯಾನ್=ಬಲಾಧಿಕ್ಯನು.

ತಾತ್ಪರ್ಯ.—ಅಶ್ವಿನೀದೇವತೆಗಳು ಪದ್ಮಕಲ್ಪದಲ್ಲಿ ಬ್ರಹ್ಮನಿಂದ ಉತ್ಪನ್ನರು. ಮನುಕಲ್ಪದಲ್ಲಿ ಸೂರ್ಯದೇವರಿಂದ ಹುಟ್ಟಿದರು. ಮತ್ತು ತ್ರೇತಾಯುಗದಲ್ಲಿ ಶ್ರೀರಾಮ ಸೇವಾರ್ಥವಾಗಿ ಕಪಿರೂಪರಾದರು. ಅವರಲ್ಲಿ ಚಿಕ್ಕವನಾದ ಮೈಂದನು ವರದ ದೆಶೆಯಿಂದ ಇಂದ್ರದೇವರ ಆವೇಶವುಳ್ಳವನಾಗಿ ಅಣ್ಣನಿಗಿಂತ ತಮ್ಮ ಬಲಿಷ್ಠನೆಂದು ತಿಳಿಸುತ್ತಾರೆ.

ವಿಶೇಷಾರ್ಥ.—ಇಂದ್ರನ ಆವೇಶದಿಂದಲೂ ಮತ್ತು ವರದ ಬಲದಿಂದಲೂ ಬಲಿಷ್ಠನೆಂದು ತಿಳಿಸಿದ್ದರಿಂದ ಅಶ್ವಿನೀದೇವತೆಗಳಿಗಿಂತಲೂ ಇಂದ್ರದೇವರು ಉತ್ತಮರೆಂತಲೂ ಮತ್ತು ಸ್ವೋತ್ತಮರ ಆವೇಶ ತನ್ನ ಸ್ವರೂಪಸಾಮರ್ಥ್ಯಕ್ಕಿಂತಲೂ ಹೆಚ್ಚಾದ ಬಲಕಾರ್ಯವನ್ನ ಮಾಡುತ್ತದೆಂತಲೂ ಅಭಿಪ್ರಾಯ.

ಅವತಾರಿಕೆ.—ಮನ್ಮಥನ ಉತ್ಪತ್ತಿಯನ್ನ ತಿಳಿಸುತ್ತಾರೆ:—

**ಶ್ಲೋಕ॥ ನೀಲೋಽಗ್ನಿರಾಸೀತ್ಕಮಲೋದ್ಭವೋತ್ಥಃ ಕಾಮಃಪುನಃ ಶ್ರೀರಮಣಾದ್ರಮಾಯಾಂ । ಪ್ರದ್ಯುಮ್ನ ನಾಮಾಭವದೇವಮೀಶಾತ್ಸಸ್ಕಂಧತಾಮಾಪಸ ಚಕ್ರತಾಂಚ ॥೭೪॥**

ಅರ್ಥ.—ಅಗ್ನಿಃ=ಅಗ್ನಿಯು, ನೀಲಃ=ನೀಲ ಎಂಬುವ ಕಪಿರೂಪವುಳ್ಳವನು, ಆಸೀತ್=ಆದನು, ಕಮಲೋದ್ಭವೋತ್ಥಃ-ಬ್ರಹ್ಮದೇವರಿಂದ ಹುಟ್ಟಿದ, ಕಾಮಃ=ಮನ್ಮಥನು, ಪುನಃ=ತಿರುಗಿ, ಶ್ರೀರಮಣಾತ್=ಶ್ರೀಕೃಷ್ಣನ ದೆಶೆಯಿಂದ, ರಮಾಯಾಂ=ರುಕ್ಮಿಣೀದೇವಿಯಲ್ಲಿ, ಪ್ರದ್ಯುಮ್ನನಾಮಾ=ಪ್ರದ್ಯುಮ್ನ ಎಂತ ಹೇಳಿ, ಅಭವತ್=ಆದನು, ಏವಂ=ಓಗೆ, ಈಶಾತ್=ರುದ್ರದೇವರ ದೆಶೆಯಿಂದ, ಸ್ಕಂದತಾಂ=ಷಣ್ಮುಖನೆಂಬುವನಾಗಿ, ಚಕ್ರತಾಂ=ಚಕ್ರಾಭಿಮಾನಿಯೂ ಚಕ್ರಶಬ್ದವಾಚ್ಯನೂ ಕೂಡ, ಆಪ=ಆದನು.

ತಾತ್ಪರ್ಯ.—ಅಗ್ನಿಯು ನೀಲ ಎಂಬುವ ಕಪಿರೂಪವುಳ್ಳವನಾದನು. ಬ್ರಹ್ಮದೇವರಿಂದ ಹುಟ್ಟಿದ ಮನ್ಮಥನು ಶ್ರೀಕೃಷ್ಣನಿಂದ ರುಕ್ಮಿಣೀದೇವಿಯಲ್ಲಿ ಪ್ರದ್ಯುಮ್ನನೆಂತ ಅವತರಿಸಿದನು. ರುದ್ರದೇವರಿಂದ ಷಣ್ಮುಖನೆಂಬ ನಾಮಾಂತರದಿಂದ ಹುಟ್ಟಿದನು. ಅವನೇ ಚಕ್ರಾಭಿಮನ್ಯನಾದನು.

ವಿಶೇಷಾರ್ಥ.—ಮನ್ಮಥನು ಸೂಕ್ಷ್ಮಸೃಷ್ಟಿಯಲ್ಲಿ ಶ್ರೀಹರಿಯ ಮನಸ್ಸಿನಿಂದ ಹುಟ್ಟಿದವನು. ಅದೇ ಮನ್ಮಥನು ಪದ್ಮಕಲ್ಪದಲ್ಲಿ ಬ್ರಹ್ಮನಿಂದ

ಹುಟ್ಟಿದನು. ಮನುಕಲ್ಪದಲ್ಲಿ ಷಣ್ಮುಖನೆಂಬ ನಾಮಾಂತರದಿಂದ ರುದ್ರ ದೇವರಿಂದ ಹುಟ್ಟಿದನು. ಪುನಃ ಶ್ರೀಹರಿಯ ಪುತ್ರನಾಗಿ ಕೃಷ್ಣಾವತಾರದಲ್ಲಿ ರುಕ್ಮಿಣೀದೇವಿಯಲ್ಲಿ ಪ್ರದ್ಯುಮ್ನನೆಂಬ ನಾಮದಿಂದ ಅವತಾರ ಮಾಡಿರುತ್ತಾನೆ. ಈ ಕಾಮನಿಗೆ ಶ್ರೀಹರಿಯ ಚಕ್ರದ ಅಭಿಮಾನಿತ್ವವು ಇದೆಯೆಂದು ತಿಳಿಯಬೇಕು. ದೇವತೆಗಳು ಈ ರೀತಿಯಾಗಿ ಪ್ರತಿ ಕಲ್ಪದಲ್ಲಿಯೂ ಅವತರಿಸಿ ಶ್ರೀಪರಮಾತ್ಮನ ಸೇವೆಮಾಡಿ ಆತನ ಪೂರ್ಣಾನುಗ್ರಹಕ್ಕೆ ಬಾಧ್ಯರಾಗುತ್ತಾರೆಂದು ತಿಳಿಯಬೇಕು.

ಅವತಾರಿಕೆ—ಚಕ್ರಾಭಿಮಾನಿ ಪ್ರಸಂಗದಿಂದ ಆಯುಧಗಳ ಅಭಿಮಾನಿಗಳನ್ನು ತಿಳಿಸುತ್ತಾರೆ—

**ಶ್ಲೋಕ॥ ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ ತಮಃಸ್ಥಿತಾ ಶ್ರೀರಿತಿ ಯಾಂ ವದಂತಿ। ಸತ್ವಾತ್ಮಿಕಾಂ ಶಂಖಮಥೋ ರಜಃಸ್ಥಾ ಭೂನಾಮಿಕಾ ಪದ್ಮಮಭೂದ್ಧರೇರ್ಹಿ ॥೭೫॥**

ಅರ್ಥ—ಪೂರ್ವಂ=ಪೂರ್ವದಲ್ಲಿ, ತಮಃಸ್ಥಿತಾ=ತಮೋಭಿಮಾನಿಯಾದ, ದುರ್ಗಾ=ದುರ್ಗಾದೇವಿಯು, ಹರೇಃ=ಶ್ರೀಹರಿಯ, ಚಕ್ರಂ=ಚಕ್ರವು ಮತ್ತು ಚಕ್ರಾಭಿಮಾನಿಯು, ಅಭೂತ್=ಆಗಿದ್ದಳು, ಹಿ=ಪ್ರಸಿದ್ಧವು. ಯಾಂ=ಯಾವ ರಮಾದೇವಿಯನ್ನು, ಶ್ರೀರಿತಿ=ಶ್ರೀ ಎಂದು, ವದಂತಿ=ಹೇಳುತ್ತಾರೋ, ತಾಂ=ಅಂತಹ, ಸತ್ವಾತ್ಮಿಕಾಂ=ಸತ್ವಾಭಿಮಾನಿಯಾದ ಶ್ರೀದೇವಿಯನ್ನು, ಶಂಖಂ=ಶಂಖವೆಂತಲೂ ಶಂಖಾಭಿಮಾನಿಯೆಂತಲೂ, ವದಂತಿ=ಹೇಳುತ್ತಾರೆ, ಅಥೋ=ಅನಂತರ, ರಜಃಸ್ಥಾ=ರಜೋಮಾನಿಯಾದ, ಭೂನಾಮಿಕಾ=ಭೂಶಬ್ದವಾಚ್ಯಳಾವ ದೇವಿಯು, ಹರೇಃ=ಶ್ರೀಹರಿಯ, ಪದ್ಮಂ=ಪದ್ಮವು ಮತ್ತು ಅಭಿಮಾನಿಯು ಕೂಡ, ಅಭೂತ್ = ಆದಳು, ಹಿ= ಪ್ರಸಿದ್ಧವು.

ತಾತ್ಪರ್ಯ—ತಮೋಭಿಮಾನಿಯಾದ ದುರ್ಗಾದೇವಿಯು ಶ್ರೀಹರಿಯ ಚಕ್ರ ಮತ್ತು ಅದರ ಅಭಿಮಾನಿಯಾದಳು. ಸತ್ವಾತ್ಮಕಳಾದ ಶ್ರೀದೇವಿಯು ಶಂಖ ಮತ್ತು ಶಂಖಾಭಿಮಾನಿಯೂ ಸಹ ಆದಳು. ರಜೋಭಿಮಾನಿಯಾದ ಭೂದೇವಿಯು ಶ್ರೀಹರಿಯ ಪದ್ಮ ಮತ್ತು ಪದ್ಮದ ಅಭಿಮಾನಿಯಾದಳು. ಇವುಗಳು ಪ್ರಸಿದ್ಧವೆಂದು ತಿಳಿಸುತ್ತಾರೆ.

ವಿಶೇಷಾರ್ಥ—ಶ್ರೀಹರಿಯ ನಿಜಪತ್ನಿಯಾದ ರಮಾದೇವಿಯು ನಿತ್ಯಾವಿಯೋಗಿನಿಯು ಅಂದರೆ ಕಾಲತಃ, ದೇಶತಃ, ವ್ಯಾಪ್ತಳು ಮತ್ತು ಅನಾದಿಕಾಲದಿಂದಲೂ ಶ್ರೀಹರಿಯ ಸಮೀಪದಲ್ಲಿ ಇದ್ದಾಗ್ಯೂ ಆಯುಧ ರೂಪಳಾಗಿ ಶ್ರೀಹರಿಯ ಸೇವೆಮಾಡಿ ಕೃತಾರ್ಥಳಾಗುತ್ತಾಳೆ. ಶ್ರೀಹರಿಯ ಚಕ್ರ, ಶಂಖ, ಪದ್ಮ ಈ ಮೂರು ಕೂಡ ಅನಿರುದ್ಧಾದಿ ರೂಪಗಳಿಂದಲೂ ಕೂಡ ಯುಕ್ತವೆಂತಲೂ ತಿಳಿಯಬೇಕು.

ಅವತಾರಿಕೆ:—ಮಿಕ್ಕ ಆಯುಧಗಳ ಅಭಿಮಾನಿಗಳನ್ನು ತಿಳಿಸುತ್ತಾರೆ.

**ಶ್ಲೋಕ|| ಗದಾ ತು ವಾಯುರ್ಬಲಸಂವಿದಾತ್ಮಾ ಶಾಂರ್ಗಂ ಚ ವಿದ್ಯೇತಿ ರಮ್ಯೈವ ಖಡ್ಗಃ । ದುರ್ಗಾತ್ಮಿಕಾ ಸೈವ ಚ ಚರ್ಮನಾಮ್ನೀ ಪಂಚಾತ್ಮಕೋ ಮಾರುತ ಏವ ಬಾಣಃ ||೭೬||**

ಅರ್ಥ—ಗದಾ ತು=ಗದೆಯಾದರು, ಬಲಸಂವಿದಾತ್ಮಾ=ಬಲ=ಬಲವು, ಸಂವಿತ್=ಜ್ಞಾನವು ಇವುಗಳೇ, ಆತ್ಮಾ=ಶರೀರವಾಗುಳ್ಳ ವಾಯುದೇವರು, ಶಾಂರ್ಗಂ ಚ=ಶಾರ್ಙಧನುಸ್ಸೂ ನು, ವಾಯುದೇವರು ಅಂದರೆ, ಧನುಸ್ಸಿನ ರೂಪ, ಮತ್ತು ಅಭಿಮಾನಿಗಳೆಂದು ತಿಳಿಯಬೇಕು. ವಿದ್ಯೇತಿ=ವಿದ್ಯಾಭಿಮಾನಿ ಎಂದು ಪ್ರಸಿದ್ಧರೋ, ರಮ್ಯೈವ=ಆ ರಮಾದೇವಿಯರೇ, ಖಡ್ಗಃ= ಖಡ್ಗಾಯುಧ ರೂಪರು ಮತ್ತು ಅಭಿಮಾನಿಗಳೂ, ದುರ್ಗಾತ್ಮಿಕಾ=ದುರ್ಗಾತ್ಮಕರಾದ, ಸೈವ=ಆ ರಮಾದೇವಿಯರೇ, ಚರ್ಮನಾಮ್ನೀ=ಚರ್ಮವೆಂಬ ಆಯುಧರೂಪರು ಮತ್ತು ಅಭಿಮಾನಿಯು, ಪಂಚಾತ್ಮಕಃ=ಐದು ರೂಪರಾದ ಅಂದರೆ, ಪ್ರಾಣಾಪಾನಾದಿ ಐದು ರೂಪರಾದ ವಾಯುದೇವರು, ಬಾಣಃ= ಬಾಣರೂಪರೆಂದು ತಿಳಿಯಬೇಕು.

ತಾತ್ಪರ್ಯ—ಬಲಜ್ಞಾನಾತ್ಮಕರಾದ ವಾಯುದೇವರು ಗದಾ ರೂಪರು ಮತ್ತು ಅಭಿಮಾನಿಗಳೂ, ಶಾಂರ್ಗಧನುಸ್ಸಿನ ರೂಪ ಮತ್ತು ಅಭಿಮಾನಿಗಳು ವಾಯುದೇವರು. ವಿದ್ಯಾಭಿಮಾನಿಯಾದ ರಮಾದೇವಿಯರು ಖಡ್ಗರೂಪ ಮತ್ತು ಅಭಿಮಾನಿಗಳೂ, ದುರ್ಗಾದೇವಿಯರು ಚರ್ಮನಾಮಕರು, ಮತ್ತು ಅಭಿಮಾನಿಗಳೂ, ಪ್ರಾಣಾದಿ ಪಂಚರೂಪರಾದ ವಾಯುದೇವರು ಬಾಣರೂಪರೆಂದು ತಿಳಿಯಬೇಕು.

ವಿಶೇಷಾರ್ಥ—ಮೇಲೆ ಹೇಳಿದ ಆಯುಧಗಳಿಗೆ ರೂಪ ಮತ್ತು ಅಭಿಮಾನಿಗಳನ್ನು ತಾತ್ಪರ್ಯಕಾರರು ತಿಳಿಸಿದ ಉದ್ದೇಶವೇನೆಂದರೆ—ನಿತ್ಯ

ಪೂರ್ಣನಾದ ಶ್ರೀಹರಿಗೆ ಇತರರಿಂದ ಯಾವ ವಿಧವಾದ ಪ್ರಯೋಜನವು ಇಲ್ಲದಿದ್ದರೂ ಮೇಲೆ ಹೇಳಿದ ರಮಾರೂಪಗಳು ಮತ್ತು ವಾಯುರೂಪ ಗಳೂ ಸಹ ಶ್ರೀಹರಿಯ ಸನ್ನಿಧಾನದಲ್ಲಿದ್ದು ಅವನ ಪೂರ್ಣಾನುಗ್ರಹಕ್ಕೆ ಪಾತ್ರರಾಗುತ್ತಾರೆಂದು ತಿಳಿಯಬೇಕು.

ಅವತಾರಿಕೆ:—ಅವಾಂತರಾಭಿಮಾನಿಗಳನ್ನು ತಿಳಿಸುತ್ತಾರೆ—

**ಶ್ಲೋಕ|| ಏವಂ ಸ್ಥಿತೇಷ್ವೇವ ಪುರಾತನೇಷು ವರಾದ್ರಥಾಂಗತ್ವಮವಾಪ ಕಾಮಃ| ತತ್ಸೂನುತಾಮಾಪ ಚ ಸೋಽನಿರುದ್ಧೋ ಬ್ರಹ್ಮೋದ್ಭವಃ ಶಂಖತನುಃ ಪುಮಾತ್ಮಾ ||೬೭||**

ಅರ್ಥ—ಏವಂ=ಪೂರ್ವೋಕ್ತಪ್ರಕಾರವಾಗಿ, ಪುರಾತನೇಷು=ಪ್ರಸಿದ್ಧ ರಾದ ರಮಾ ಮತ್ತು ವಾಯುದೇವರು, ಸ್ಥಿತೇಷ್ವೇವ= ಇರುತ್ತಿರಲಾಗಿ, ವರಾತ್=ಬ್ರಹ್ಮದೇವರ ವರದ ದೆಶೆಯಿಂದ, ರಥಾಂಗತ್ವಂ=ಚಕ್ರಮಾನಿತ್ವ ವನ್ನು, ಕಾಮಃ=ಮನ್ಮಥನು, ಅವಾಪ=ಹೊಂದಿದನು, ಬ್ರಹ್ಮೋದ್ಭವಃ= ಬ್ರಹ್ಮದೇವರಿಂದ ಹುಟ್ಟಿದ, ಪುಮಾತ್ಮಾ= ಪುರುಷಜೀವಮಾನಿಯಾದ ಅನಿ ರುದ್ಧನು, ಶಂಖತನುಃ=ಶಂಖಶಬ್ದವಾಚ್ಯ ಮತ್ತು ಶಂಖಾಭಿಮಾನಿಯು ಆದನು. ಸಃ=ಅಂತಹ, ಅನಿರುದ್ಧಃ=ಅನಿರುದ್ಧನು, ತತ್ಸೂನುತಾಂ=ತತ್= ಆ ಶ್ರೀಕೃಷ್ಣನ ಮಗನಾದ ಪ್ರದ್ಯುಮ್ನನ, ಸೂನುತಾಂ=ಪುತ್ರತ್ವವನ್ನು ಆಪಚ=ಹೊಂದಿದನು.

ತಾತ್ಪರ್ಯ—ಪೂರ್ವದಲ್ಲಿ ಹೇಳಿದ ಪುರಾತನರಾದ ರಮಾ ಮತ್ತು ವಾಯುದೇವರು ಸಹ ಅಭಿಮಾನಿಗಳಾದರೂ, ಬ್ರಹ್ಮದೇವರ ವರದ ದೆಶೆ ಯಿಂದ ಚಕ್ರಮಾನಿತ್ವವನ್ನು ಹೊಂದಿದರು. ಬ್ರಹ್ಮದೇವರಿಂದ ಹುಟ್ಟಿದ ಪುರುಷಜೀವಾಭಿಮಾನಿಯಾದ ಅನಿರುದ್ಧ ಶಂಖಾಭಿಮಾನಿಯಾದನು. ವರ ದಿಂದಲೇನೆ ಅದೇ ಅನಿರುದ್ಧ, ಶ್ರೀಕೃಷ್ಣನ ಪುತ್ರನಾದ ಪ್ರದ್ಯುಮ್ನನ ಮಗನಾಗಿ ಅವತರಿಸಿದನು.

ವಿಶೇಷಾರ್ಥ—ಶ್ರೀಹರಿಯ ಆಯುಧಗಳು ನಿತ್ಯವಾದವುಗಳು ಮತ್ತು ಅವನ ಆಜ್ಞಾನುಸಾರ ಭಕ್ತರ ಮನೆಗಳಲ್ಲಿದ್ದು, ಶತ್ರುಸಂಹಾರಾದಿ ಗಳನ್ನು ಮಾಡತಕ್ಕವುಗಳು. ಮುಖ್ಯಾಭಿಮಾನಿ, ಅಮುಖ್ಯಾಭಿಮಾನಿ,

ಅವಾಂತರಾಭಿಮಾನಿ ಎಂದು ಮೂರು ವಿಧ. ಅವಾಂತರಾಭಿಮಾನಿ, ಅನಿರುದ್ಧ, ಪ್ರದ್ಯುಮ್ನರು, ಅಮುಖ್ಯಾಭಿಮಾನಿಗಳು, ರಮಾ, ವಾಯುಗಳು ಮುಖ್ಯಾಭಿಮಾನಿ ಶ್ರೀಹರಿಯ ವಾಸುದೇವಾದಿ ರೂಪಗಳು ಈ ರೀತಿಯಾಗಿ ತಿಳಿಯಬೇಕು.

ಅವತಾರಿಕೆ:—ಚಕ್ರ ಶಂಖಾಭಿಮಾನಿಗಳವತಾರಗಳನ್ನು ತಿಳಿಸುತ್ತಾರೆ.

**ಶ್ಲೋಕ|| ತಾವೇವ ಜಾತೌ ಭರತಶ್ಚ ನಾಮ್ನಾ ಶತ್ರುಘ್ನ ಇತ್ಯೇವ ಚ ರಾಮತೋಽನು। ಪೂರ್ವಂ ಸುಮಿತ್ರಾತನಯಶ್ಚ ಶೇಷಃ ಸ ಲಕ್ಷ್ಮಣೋ ನಾಮ ರಘೂತ್ತಮಾದನು ||೭೮||**

ಅರ್ಥ—ರಾಮತೋಽನು=ಶ್ರೀಹರಿಯು ರಾಮಾವತಾರ ಮಾಡಿದಾಗ, ತಾವೇವ=ಆ ಚಕ್ರ ಮತ್ತು ಶಂಖಾಭಿಮಾನಿಗಳಾದ ಅನಿರುದ್ಧ ಪ್ರದ್ಯುಮ್ನರು, ಭರತಶ್ಚ=ಭರತನೆಂಬ ಮತ್ತು ಶತ್ರುಘ್ನ ಇತ್ಯೇವ=ಶತ್ರುಘ್ನ ಎಂಬ ನಾಮ್ನಾ=ಹೆಸರಿನಿಂದ, ಜಾತೌ=ಹುಟ್ಟಿದರು, ಪೂರ್ವಂ=ಭರತ ಶತ್ರುಘ್ನರಿಗಿಂತ ಮೊದಲು, ರಘೂತ್ತಮಾದನು=ರಾಮಚಂದ್ರದೇವರನ್ನು ಅನುಸರಿಸಿ ಸಃ=ಅಂತಹ, ಶೇಷಃ=ಶೇಷದೇವರು, ಲಕ್ಷ್ಮಣೋ ನಾಮ=ಲಕ್ಷ್ಮಣನೆಂಬ ಹೆಸರಿನಿಂದ, ಸುಮಿತ್ರಾತನಯಃ=ಸುಮಿತ್ರಾದೇವಿಯ ಮಗನಾಗಿ, ಬಭೂವ=ಅವತಾರಮಾಡಿದರು.

ತಾತ್ಪರ್ಯ—ಶ್ರೀರಾಮರನ್ನ ಅನುಸರಿಸಿ, ಚಕ್ರ, ಶಂಖಮಾನಿಗಳಾದ ಅನಿರುದ್ಧ ಪ್ರದ್ಯುಮ್ನರು ಭರತ, ಶತ್ರುಘ್ನರೆಂಬುವ ನಾಮದಿಂದ ಅವತರಿಸಿದರು. ಭರತ ಶತ್ರುಘ್ನರಿಗೆ ಮೊದಲು ಶೇಷದೇವರು ಲಕ್ಷ್ಮಣನೆಂಬ ಹೆಸರಿನಿಂದ ಸುಮಿತ್ರಾದೇವಿಯ ಮಗನಾಗಿ ಅವತರಿಸಿದನು. ಇವರೆಲ್ಲರೂ ರಾಮನ ಅನಂತರದಲ್ಲಿಯೇ ಹೊರತು ಬೇರೆ ಅಲ್ಲ.

ವಿಶೇಷಾರ್ಥ—ಪ್ರಮಾಣಸಂಗ್ರಹದಲ್ಲಿ ಹೇಳಿರುತ್ತಾರೆ. ಸೀತಾಯಾಃ ಲಕ್ಷ್ಮಣಸ್ಯಾಪಿ ವವಂದೇ ಚರಣಾವಸೌ, ಮತ್ತು ಉತ್ತರಕಾಂಡದಲ್ಲಿ ಶತ್ರುಘ್ನಃ ಪ್ರಾಂಜಲಿಃ ಪ್ರೋಚೇ ಪ್ರಸೀದ ಪುರುಷೋತ್ತಮ। ಆರ್ಯೋ ಮೇ ಮಧ್ಯಮೋ ಧನ್ಯಶ್ಚ್ವಚ್ಛುಶ್ರೂಷಾಂ ವನೇಽಕರೋತ್॥ ಭರತೇನ ಮಮಾರ್ಯೇಣ ಹ್ಯಧಿಜೀವತಿ ಕಿಂಕರೇ। ಚತುರ್ದಶಸಮಾಸ್ತಪ್ತಂ ತ್ವತ್ಪ್ರೀತ್ಯೈ ಭೂಮಿಶಾಯಿನಾ॥

ಬ್ರಹ್ಮಘ್ನಂ ಲವಣಂ ಹತ್ವಾತ್ವತ್ಪ್ರಸಾದೇನ ಕೇವಲಂ ಸಾರ್ಥಾ ಶತ್ರುಘ್ನತ ಶ್ಯಾಂಮ್ರುಪ್ರೋಜ್ಯೇತಿ ಪ್ರಣನಾಮಸಃ ಇತಿ

ಈ ಪ್ರಮಾಣಗಳಿಂದ ಭರತ ಶತ್ರುಘ್ನರಿಗಿಂತಲೂ ಲಕ್ಷ್ಮಣದೇವರು ಉತ್ತಮರೆಂತಲೂ ಮತ್ತು ಶ್ರೀರಾಮಚಂದ್ರದೇವರ ಪ್ರೀತಿಗೆ ಮುಖ್ಯಪಾತ್ರರೆಂತಲೂ ತಿಳಿಯುತ್ತದೆ. ಭರತ ಶತ್ರುಘ್ನರು ಹೇಗೆ ಶ್ರೀಹರಿಯ ಅನಿರುದ್ಧ ಪ್ರದ್ಯುಮ್ನ ರೂಪದಿಂದ ಸಹಿತರೋ ಹಾಗೆ ಲಕ್ಷ್ಮಣದೇವರೂ ಸಹ ಸಂಕರ್ಷಣ ರೂಪದಿಂದ ಯುಕ್ತರೆಂದು ತಿಳಿಯುಬೇಕು.

ಅವತಾರಿಕೆ:—ಸಾಮಾನ್ಯವಾಗಿ ನಾಲ್ಕು ಜನಗಳ ಉತ್ಪತ್ತಿಯನ್ನು ತಿಳುಹಿಸಿ ಈಗ ಅವರ ಮಾತೃಗಳನ್ನು ತಿಳಿಸುತ್ತಾರೆ:—

**ಶ್ಲೋಕ॥ ಕೌಸಲ್ಯಕಾ ಪುತ್ರ ಉರುಕ್ರಮೋ ಸಾವೇತಸ್ತಥೈಕೋ ಭರತಸ್ಯಮಾತುಃ । ಉಭೌ ಸುಮಿತ್ರಾ ತನಯೌ ನೃಪಸ್ಯ ಚತ್ವಾರ ಏತೇಽಹ್ಯಮರೋತ್ತಮಾಸುತಾಃ ॥೭॥**

ಅರ್ಥ:—ಅಸೌ=ಅಂತಹ, ಉರುಕ್ರಮಃ-ಪರಾಕ್ರಮಶಾಲಿಯಾದ ಶ್ರೀರಾಮಚಂದ್ರದೇವರು, ಏಕಃ=ಒಬ್ಬನೇ, ಕೌಸಲ್ಯಕಾಪುತ್ರಃ = ಕೌಸಲ್ಯಾದೇವಿಯ ಮಗನು, ತಥಾ=ಹಾಗೆಯೇ, ಭರತಸ್ಯ-ಭರತನ, ಮಾತೃಃ =ತಾಯಿಯಾದ ಕೈಕೇಯಿದೇವಿಗೆ, ಏಕಏವ=ಒಬ್ಬನೇ, ಸುಮಿತ್ರಾತನಯೌ=ಸುಮಿತ್ರಾ=ಸುಮಿತ್ರಾದೇವಿಯು, ತನಯೌ-ಮಕ್ಕಳು, ಉಭೌ- ಇಬ್ಬರು, ನೃಪಸ್ಯ=ದಶರಥರಾಯುನಿಗೆ, ಏತೆ-ಪೂರ್ವೋಕ್ತವಾದ, ಅಮರೋತ್ತಮಾ=ದೇವೋತ್ತಮರಾದ, ಚತ್ವಾರಃ=ನಾಲ್ಕು ಮಂದಿಗಳು, ಸುತಾಃ= ಮಕ್ಕಳು.

ತಾತ್ಪರ್ಯ:—ಕೌಸಲ್ಯಾದೇವಿಯರಿಗೆ ಶ್ರೀರಾಮಚಂದ್ರದೇವರೊಬ್ಬರೇ ಮಕ್ಕಳು. ಕೈಕೇಯಿಗೆ ಭರತನೊಬ್ಬನೇ ಮಗನು, ಸುಮಿತ್ರಾದೇವೀಗೆ ಲಕ್ಷ್ಮಣ ಶತ್ರುಘ್ನರೆಂಬ ಇಬ್ಬರು, ಈರೀತಿಯಾಗಿ ದೇವೋತ್ತಮರಾದ ನಾಲ್ಕು ಜನ ಮಕ್ಕಳು ದಶರಥರಾಯರಿಗೆ ಹುಟ್ಟಿದರು.

ವಿಶೇಷಾರ್ಥ:—ಶ್ರೀಹರಿಯು ರಾಮಾವತಾರ ಮಾಡಿದ್ದು ದುಷ್ಟನಿಗ್ರಹ, ಶಿಷ್ಟಪರಿಪಾಲನೆಗಾಗಿ, ಈ ಕಾರ್ಯಕ್ಕೆ ಲಕ್ಷ್ಮಣ, ಭರತ, ಶತ್ರುಘ್ನರು ಸಾಧಕರು. ಆದರೆ ಲೋಕ ಸಂಹಾರ ಮಾಡುವ ಶ್ರೀಸ್ವಾಮಿಗೆ

ಇವರ ಸಹಾಯ ಬೇಕೇ ಎಂದು ಕೇಳಿದರೆ—ಇವರಿಂದ ಶ್ರೀಹರಿಗೆ ಆಗಬೇಕ್ಕಾದ್ದೇನೂ ಇಲ್ಲ. ಆದರೂ ಶೇಷನೇ ಮೊದಲಾದವರು ಪರಮಾತ್ಮನ ಅವತಾರಕಾಲಗಳಲ್ಲಿ ಶ್ರೀಹರಿಯನ್ನು ಸೇವಿಸಿ ಅವನ ಪೂರ್ಣಾನುಗ್ರಹಕ್ಕೆ ಭಾದ್ಯರಾಗಬೇಕಾದ ಕರ್ತವ್ಯವಾದ್ದರಿಂದ ಈ ರೀತಿ ಸೇವೆ ಮಾಡುತ್ತಾರೆ. ದೇವತೆಗಳು ಅವತಾರ ರೂಪದಲ್ಲಿಯೂ, ಮೂಲ ರೂಪದಲ್ಲಿಯೂ ಪರಮಾತ್ಮನ ಅಖಂಡ ಸೇವೆ ಮಾಡುವುದರಿಂದ ಇತರರಿಗಿಂತಲೂ ಮೋಕ್ಷದಲ್ಲಿ ಆನಂದವನ್ನು ಅಧಿಕವಾಗಿ ಅಂದರೆ ಸಾಯುಜ್ಯಾದಿಗಳನ್ನು ಅನುಭವಿಸುತ್ತಾರೆ.

ಅವತಾರಿಕೆ:—ಶ್ರೀಪರಮಾತ್ಮನ ನಾಲ್ಕು ರೂಪಗಳು ಅವತರಿಸಿದವೆಂದು ಹೇಳಿ ಅವುಗಳ ಪ್ರಭೇದವನ್ನು ತಿಳಿಸುತ್ತಾರೆ:—

**ಶ್ಲೋ॥ ಸಂಕರ್ಷಣಾದ್ಯೈಸ್ತ್ರಿಭಿರೇವರೂಪೈ ರಾವಿಷ್ಟ ಆಸೀ ತ್ರಿಷುತೇಷು ವಿಷ್ಣುಃ ॥ ಇಂದ್ರೋಂಗದೇಚೈವ ತತೋಂಗದೋಹಿ ಬಲೀನಿತಾಂತಂ ಸಬಭೂವ ಶಶ್ವತ್ ॥೮೦॥**

ಅರ್ಥ:—ವಿಷ್ಣುಃ=ಶ್ರೀನಾರಾಯಣದೇವರು. ತ್ರಿಭಿಃ=ಮೂರಾದಂಥ ಸಂಕರ್ಷಣಾದ್ಯೈಃ-ಸಂಕರ್ಷಣನೇ ಮೊದಲಾದ, ರೂಪೈಃ-ರೂಪಗಳಿಂದ ತೇಷು=ಅಂತಹ, ತ್ರಿಷು=ಮೂರು ಮಂದಿಯರಾದ ಲಕ್ಷ್ಮಣ, ಭರತ, ಶತೃಘ್ನರಲ್ಲಿ, ಆವಿಷ್ಟಃ=ಪ್ರವೇಶಿಸಿದರು. ಅಂಗದೇಚ-ಅಂಗದನಲ್ಲಾದರೂ, ಇಂದ್ರಃ=ಇಂದ್ರದೇವರು, ಆವಿಷ್ಟಃ=ಪ್ರವೇಶಿಸಿದನು, ತತಃ-ಆದಕಾರಣದಿಂದ, ಸಃ=ಅಂಥ, ಅಂಗದೋಹಿ=ಅಂಗದನಾದರೂ, ಶಶ್ವತ್-ಶಾಶ್ವತವಾದ, ನಿತಾಂತಂ=ಅತ್ಯಂತವಾಗಿ, ಬಲೀ=ಬಲವುಳ್ಳವನು, ಬಭೂವ-ಆದನು.

ತಾತ್ಪರ್ಯ:—ಶ್ರೀಹರಿಯು ತನ್ನ ಸಂಕರ್ಷಣನೇ ಮೊದಲಾದ ಮೂರು ರೂಪಗಳಿಂದ ಲಕ್ಷ್ಮಣ, ಭರತ, ಶತೃಘ್ನ ಈ ಮೂರು ಮಂದಿಗಳಲ್ಲಿ ಆವಿಷ್ಟನಾದನು, ಮತ್ತು ಅಂಗದನಲ್ಲಿ ಇಂದ್ರನು ಆವಿಷ್ಟನಾದನು, ಆದ್ದರಿಂದ ಅಂಗದನು ಶಾಶ್ವತವಾದ ಬಲವುಳ್ಳವನಾದನು.

ವಿಶೇಷಾರ್ಥ:—ಪ್ರಮಾಣಗಳು:— ಜಾತೋರಘುಕುಲೇ ರಾಜಪುತ್ರೋ ದಶರಥಸ್ಯತು, ಅಂಶೇನವಾಸುದೇವಸ್ಯಜಾತೋ ರಾಮೋ ಮಹಾಯಶಾಃ ಸಂಕರ್ಷಣಶ್ಯಾಂಶೇನ ಲಕ್ಷ್ಮಣೋ ಪರವೀರಹ ಪ್ರದ್ಯುಮ್ನಶ್ಚರಥಾಂಶೇನ ಭರತೋ ಧರ್ಮ ವತ್ಸಲಃ ಅನಿರುದ್ಧಶ್ಚ ಚಾಂಶೇನ

ಶತ್ರುಘ್ನಸ್ತು ಮಹಾಬಲಃ || ಈ ಪ್ರಮಾಣಾನುಸಾರವಾಗಿ ಶ್ರೀರಾಮನಲ್ಲಿ ಅಂಶವಿಲ್ಲ, ಶ್ರೀಹರಿಯು ವಾಸುದೇವ ರೂಪದಿಂದ ತಾನೇ ಅವತರಿಸಿದ್ದಾನೆ ಮಿಕ್ಕವರಲ್ಲಿ ಅಂಶದಿಂದ ಅವತರಿಸಿದ್ದಾನೆ. ಆದರೆ ಶ್ರೀನಾರಾಯಣನಂಶ ಅಂಶಿಗಳು ಎಲ್ಲವೂ ಪೂರ್ಣವೇ ಹೊರತು ಬೇರೆಯಲ್ಲ. ಅಧಿಷ್ಠಾನವನ್ನು ಅನುಸರಿಸಿ ತಾನು ಬಲ, ಜ್ಞಾನ ಇವುಗಳನ್ನು ಪ್ರಕಟಪಡಿಸುತ್ತಾನೆಂದು ತಿಳಿಯಬೇಕು.

ಅವತಾರಿಕೆ:—ಆವೇಶ ಪ್ರಸಂಗದಿಂದ ವಿಶೇಷಾವೇಶ ಉಳ್ಳವರನ್ನು ತಿಳಿಸುತ್ತಾರೆ:—

**ಶ್ಲೋಕ|| ಯೇನ್ಯೇಚ ಭೂಪಾ ಕೃತವೀರ್ಯಜಾದ್ಯಾ ಬಲಾಧಿಕಾಃ ಸಂತಿ ಸಹಸ್ರಶೋಽಪಿ || ಸರ್ವೇಹರೇಃ ಸನ್ನಿಧಿ ಭಾವಯುಕ್ತಾಃ ಧರ್ಮ ಪ್ರಧಾನಾಶ್ಚ ಗುಣಪ್ರಧಾನಾಃ ||೮೧||**

ಅರ್ಥ:—ಯೇ-ಯಾವ, ಅನ್ಯೇ=ಮತ್ತೆ ಕೆಲವರಾದಂಥ, ಬಲಾಧಿಕಾಃ=ಬಲಶ್ರೇಷ್ಠರಾದಂಥ, ಸಹಸ್ರಶಃ-ಸಾವಿರಾರು ಮಂದಿಯರಾದಂಥ, ಧರ್ಮಪ್ರಧಾನಃ=ಧರ್ಮವೇ ಶ್ರೇಷ್ಠವಾದ ಸಾಧನವೆಂದು ನಂಬಿದ, ಗುಣಪ್ರಧಾನಶ್ಚ=ಜ್ಞಾನಾದಿಗಳೇ ಶ್ರೇಷ್ಟವಾದ ಧರ್ಮವೆಂದು ನಂಬಿದಂಥ, ಕೃತವೀರ್ಯಜಾದ್ಯಾಃ=ಕಾರ್ತವೀರ್ಯಾರ್ಜುನರೇ ಮೊದಲಾಗಿ ಉಳ್ಳಂಥ ಭೂಪಾಃ-ರಾಜರುಗಳೂ, ತೇಃ=ಅಂತಹ, ಸರ್ವೇ=ಸಮಸ್ತರೂ, ಹರೇಃ=ಶ್ರೀನಾರಾಯಣನ, ಸನ್ನಿಧಿಭಾವಯುಕ್ತಾಃ=ಸನ್ನಿಧಾನದಿಂದ ಯುಕ್ತರಾದವರು.

ತಾತ್ಪರ್ಯ;—ಬಲಕಾರ್ಯದಿಂದ ಶ್ರೀಹರಿಯು ಸೇವೆಮಾಡಬೇಕೆಂಬುದಾಗಿ ಪೃಥಿವಿಯಲ್ಲಿ ಅವತರಿಸಿದ್ದ ಗುಣವಂತರಾದ ಧರ್ಮವಂತರಾದ ಕಾರ್ತವೀರ್ಯಾರ್ಜುನರೇ ಮೊದಲಾದ ಸಾವಿರಾರು ಮಂದಿ ರಾಜರು ಶ್ರೀಹರಿಯು ಸನ್ನಿಧಾನದಿಂದ ಯುಕ್ತರಾದವರು.

ವಿಶೇಷಾರ್ಥ:—ಈ ಶ್ಲೋಕದಲ್ಲಿ ಭಲಾಧಿಕತ್ವ ಮತ್ತು ಗುಣಪ್ರಧಾನತ್ವ, ಧರ್ಮಪ್ರವರ್ತಕತ್ವ, ಈ ಮೂರು ಗುಣಗಳೂ ರಾಜರುಗಳಲ್ಲಿ ಪ್ರತಿಪಾದಿಸುತ್ತವೆ ಇದರಿಂದ ವಾಯು ಪುತ್ರರಾದ ಭೀಮಸೇನದೇವರು ಧರ್ಮರಾಜರಿಗೆ ವರ್ಣಧರ್ಮಗಳನ್ನು-ತಿಳಿಸುವ ಕಾಲದಲ್ಲಿ ಯೋಯವಿವ ಬಲಚ್ಯೇ

ಸ್ತ್ಃ ಕ್ಷತ್ರಿಯೇಷುಸ ಉತ್ತಮಃ ಎಂಬುವ ಪ್ರಮಾಣಾನುಸಾರ ಈ ರಾಜರುಗಳೆಲ್ಲಾ ಶ್ರೀಹರಿಯ ಬಲಪೂರ್ಣತ್ವ ಉಪಾಸನೆಯಿಂದ ಬಲವನ್ನು ಪಡೆದವರು ಮತ್ತು ವಾಯುದೇವರೇ ಬಲಪೂರ್ಣರು. ಜೀವಕೋಟಿಯಲ್ಲಿ ಅವರಿಗೆ ಸಮರಾದ ಬಲಿಷ್ಠರು ಇಲ್ಲದ್ದರಿಂದ ಅವರ ಅನಂತರದಲ್ಲಿ ಬಲಪ್ರಧಾನವೆಂತ ತಿಳಿಯಬೇಕು. ಸನ್ನಿಧಾನವೆಂದರೆ ಶ್ರೀಹರಿಯು ಬಲ ವಿಷಯಕವಾದ ಸನ್ನಿಧಾನವೆಂದು ತಿಳಿಯಬೇಕು.

ಅವತಾರಿಕೆ:—ಶ್ರೀಲಕ್ಷ್ಮೀದೇವಿಯರ ಅವತಾರವನ್ನು ತಿಳಿಸುತ್ತಾರೆ.

**ಶ್ಲೋಕ॥ ಸ್ವಯಂ ರಮಾ ಶೀರತ ಏವಜಾತಾ ಸೀತೇತಿ ರಾಮಾರ್ಥ ಮನೂಪಮಾಯಾ ॥ ವಿದೇಹರಾಜಸ್ಯಹಿಯಜ್ಞ ಭೂಮೌ ಸುತೇತಿತಸ್ಯೈವ ತುತಸ್ತು ಸಾಭೂತ್ ॥೮೨॥**

ಅರ್ಥ:—ಯಾ=ಯಾವ, ಅನೂಪಮಾ=ಅಸದೃಶರಾದಂಥ, ರಮಾ=ಲಕ್ಷ್ಮೀದೇವಿಯರು, ವಿದೇಹರಾಜಸ್ಯ=ಜನಕರಾಜನ, ಯಜ್ಞಭೂಮೌ=ಯಜ್ಞ ಭೂಮಿಯಲ್ಲಿ, ಸ್ವಯಂ=ತಾವೇ, ರಾಮಾರ್ಥಂ = ರಾಮಚಂದ್ರ ದೇವರಿಗೋಸ್ಕರ, ಸೀತೇತಿ=ಸೀತಾದೇವಿಯೆಂಬ ಹೆಸರಿನಿಂದ, ಶೀರತಏವ=ನೇಗಲಿನಿಂದಲೇ, ಜಾತಾ=ಹುಟ್ಟಿದರೋ, ತತಃ = ಆ ಕಾರಣದಿಂದ, ಸೌ–ಆ ಸೀತಾದೇವಿಯು, ತಸ್ಯೈವ=ಆ ಜನಕರಾಜನಿಗೆ, ಸುತೇತಿ=ಪುತ್ರಿ ಎಂದು, ಅಭೂತ್=ಆದರು.

ತಾತ್ಪರ್ಯ:—ಅಸದೃಶರಾದ ಯಾವ ರಮಾದೇವಿಯರು ಜನಕರಾಜನ ಯಜ್ಞ ಭೂಮಿಯಲ್ಲಿ ಸೀತಾ ಎಂಬುವ ಹೆಸರಿನಿಂದ ಶ್ರೀರಾಮರ ಸೇವಾರ್ಥಕ್ಕಾಗಿ ನೇಗಿಲಿನಿಂದ ತಾವಾಗಿ ಅವತರಿಸಿದರೋ ಅಂತಹ ಸೀತಾದೇವಿಯರು ಜನಕರಾಜನ ಪುತ್ರಿ ಎಂದು ಲೋಕದಲ್ಲಿ ಪ್ರಸಿದ್ಧರಾದರು.

ವಿಶೇಷಾರ್ಥ:—ರಮಾದೇವಿಯರು ತಾವೇ ಹುಟ್ಟಿದರೆಂದು ಹೇಳಿದ್ದರಿಂದ ಗರ್ಭವಾಸಾದಿ ದುಃಖವಿಲ್ಲವೆಂತಲೂ, ಅಯೋನಿಜರೆಂತಲೂ ಮತ್ತು ರಾಮದೇವರಿಗೋಸ್ಕರ ಎಂಬುವುದರಿಂದ ರಾಮಾವತಾರ ಮಾಡಿದ ಶ್ರೀಹರಿಯ ಸೇವಾರ್ಥಕ್ಕಾಗಿ ಹುಟ್ಟಿದರೆಂತಲೂ, ಜಗತ್ತಿನ ಪಾಲನೆಗೋಸ್ಕರ ನಾರಾಯಣನು ಯಾವಯಾವ ಅವತಾರ ಮಾಡುತ್ತಾನೋ ಅದಕ್ಕನುಗುಣವಾಗಿ ಲಕ್ಷ್ಮೀದೇವಿಯರು ಅವತರಿಸಿ ಶ್ರೀಹರಿಯವತಾರ ಕಾರ್ಯಕ್ಕೆ ಸಹಕಾರಿಗಳಾಗಿ ಅನುಗ್ರಹಕ್ಕೆ ಭಾಧ್ಯರಾಗುತ್ತಾರೆಂದು ತಿಳಿಯಬೇಕು.

ಅವತಾರಿಕೆ:—ಉಪಸಂಹಾರ ಮಾಡಬೇಕೆಂಬ ವ್ಯಾಜದಿಂದ ಪದ್ಮ

ಕಲ್ಪದ ಸೃಷ್ಟಿಯೇ ತಾರತಮ್ಯ ಜ್ಞಾಪಕವೆಂದು ತಿಳಿಸುತ್ತಾರೆ:—

ಶ್ಲೋಕ|| ಇತ್ಯಾದಿಕಲ್ಪೋದ್ಧಿತ ಏಷಸರ್ಗೋ ಮಯಾಸಮಸ್ತಾಗಮ ನಿರ್ಣಯೇನ | ಸಹಾನುಸರ್ಗಃ ಕಥಿತೋತ್ರ ಪೂರ್ವೋಯೋಯೋ ಗುಣೈಃ ನಿತ್ಯಮಸೌವರೋಹಿ ||೬೩||

ಅರ್ಥ.—ಇತಿ-ಪೂರ್ವೋಕ್ತಪ್ರಕಾರವಾಗಿ, ಆದಿಕಲ್ಪೋದ್ಧಿತಃ=ಆದಿಕಲ್ಪ=ಮೊದಲನೆಯ ಕಲ್ಪದಲ್ಲಿ, ಉದ್ಧಿತಃ=ಹುಟ್ಟಿದಂಥ, ಏಷಃ=ಇಂತಹ, ಸಹಾನುಸರ್ಗಃ-ತತ್ವಸೃಷ್ಟಿಯು, ಬ್ರಂಹ್ಮಾಂಡಾಂತರ್ಗತವಾದ ಅನುಸೃಷ್ಟಿಯಿಂದ, ಸಮಸ್ತಾಗಮನಿರ್ಣಯೇನ=ಸರ್ವ ವೇದಗಳ ನಿರ್ಣಯರೂಪವಾಗಿ. ಮಯಾ=ನನ್ನಿಂದ, ಅತ್ರ=ಈ ನಿರ್ಣಯ ಗ್ರಂಥದಲ್ಲಿ, ಕಥಿತಃ=ನಿರೂಪಿಸಲ್ಪಟ್ಟಿವೆ, ಯಃ=ಯಾವ, ತತ್ವ ಮತ್ತು ತತ್ವೇಶರು, ನಿತ್ಯಂ=ಪ್ರಥಮೋತ್ಪನ್ನರೋ, ಅಸೌ=ಅವರು, ಗುಣೈಃ=ಗುಣಗಳಿಂದಲೂ, ವರೋಹಿ-ಶ್ರೇಷ್ಠರು

ತಾತ್ಪರ್ಯ—ಈ ರೀತಿಯಾಗಿ ಆದಿಕಲ್ಪದಲ್ಲಿ ಉಂಟಾದ ತತ್ವಸೃಷ್ಟಿಯು ಬ್ರಹ್ಮಾಂಡಾತರ್ಗತವಾದ ಅನುಸೃಷ್ಟಿಯಿಂದ ಕೂಡಾ ಸಕಲ ಶಾಸ್ತ್ರಾರ್ಥನಿರ್ಣಯ ರೂಪವಾಗಿ ನಿರೂಪಿಸಲ್ಪಟ್ಟಿತು. ಈ ತತ್ವಸೃಷ್ಟಿ ಮತ್ತು ಬ್ರಹ್ಮಾಂಡಾಂತರ್ಗತ ಪದ್ಮಸೃಷ್ಟಿ ಇವುಗಳಲ್ಲಿ ಯಾವಯಾವ ತತ್ವ ಮತ್ತು ತತ್ವೇಶರು ಪ್ರಥಮೋತ್ಪನ್ನರೋ ಅವರು ಗುಣಗಳಿಂದ ಸದಾ ಶ್ರೇಷ್ಠರು.

ವಿಶೇಷಾರ್ಥ.—(ಸರ್ಗ ಅನುಸರ್ಗ) ತತ್ವಸೃಷ್ಟಿ, ಪದ್ಮಸೃಷ್ಟಿ, ಇದರಲ್ಲಿ ಪೂರ್ವ ತತ್ವಸೃಷ್ಟಿ, ಅದರ ಜ್ಞಾನ ಅತ್ಯಂತ ಅವಶ್ಯಕ. ಸೃಷ್ಟಿ, ಸ್ಥಿತಿ ಲಯಾದಿಗಳ ಜ್ಞಾನ ಹೊರತು ತತ್ವ ನಿಶ್ಚಯವಾಗುವುದಿಲ್ಲ. ಆದುದರಿಂದ ಗ್ರಂಥಕರ್ತೃಗಳಾದ ಆಚಾರ್ಯರು ಅಧಿಕಾರಿಗಳಿಗೋಸ್ಕರ ಶ್ರಮಪಟ್ಟು ಸಕಲ ವೇದ ಇತಿಹಾಸ ಪುರಾಣಗಳಲ್ಲಿನ ವಿಷಯಗಳನ್ನ ಉದಾಹರಿಸಿ, ಈ ನಿರ್ಣಯಗ್ರಂಥವನ್ನು ರಚಿಸಿದ್ದಾರೆ. ಇದರಲ್ಲಿ ಹೇಳಿದಂತೆ ತತ್ವ, ಮತ್ತು ಸೃಷ್ಟಿ ಇವುಗಳಲ್ಲಿ ನಡೆದ ಶ್ರೀಹರಿಯ ಅವತಾರ ವೈಚರಿತ್ರೆಗಳನ್ನು ತಿಳಿದು ಕೃತಾರ್ಥರಾಗಬೇಕು, ಮತ್ತೆ ಮನುಸೃಷ್ಟಿ ಮೊದಲಾದವುಗಳು ಅನೇಕ ವಿಧವಾಗಿ ಅನೇಕ ಗ್ರಂಥಗಳಲ್ಲಿ ಹೇಳಲ್ಪಟ್ಟಿವೆ. ಅವುಗಳನ್ನೆಲ್ಲಾ ಅಧಿಕಾರಿಗಳು ಇದಕ್ಕೆ ಅನುಗುಣವಾಗಿ ತಿಳಿಯಬೇಕು.

ಅವತಾರಿಕೆ.—ಪೂರ್ವ ಮತ್ತು ಪಾಶ್ಚಾತ್ ಎಂಬ ಶ್ಲೋಕಗಳಲ್ಲಿ ಹೇಳಲ್ಪಟ್ಟ ಅರ್ಥವನ್ನು ಉಪಸಂಹರಿಸುತ್ತಾರೆ:—

**ಶ್ಲೋಕ॥ ಪಾಶ್ಚಾತ್ತ್ಯ ಕಲ್ಪೇಷ್ವಪಿ ಸರ್ಗಭೇದಾಃ ಶೃತೌ ಪುರಾಣೇಷ್ವಪಿಚಾನ್ಯಥೋಕ್ತಾಃ । ನೋತ್ಕರ್ಷಹೇತುಃ ಪ್ರಥಮತ್ವಮೇಷು ವಿಶೇಷವಾಕ್ಯೈರವಗಮ್ಯತೇತತ್ ॥೮೪॥**

ಅರ್ಥ.— ಪಾಶ್ಚಾತ್ತ್ಯಕಲ್ಪೇಷು-ಪದ್ಮಕಲ್ಪಾ ಅತಿರಿಕ್ತ ಅವಾಂತರಕಲ್ಪಗಳಲ್ಲಿ, ಸರ್ಗಭೇದಾಃ=ಸೃಷ್ಟಿಯ ಭೇದಗಳು. ಶೃತೌ = ವೇದವಲ್ಲಿಯೂ, ಪುರಾಣೇಷ್ವಪಿ-ಪುರಾಣಗಳಲ್ಲಿಯೂ, ಅನ್ಯಥೋಕ್ತಾಃ=ವೈಪರಿತ್ಯೇನ ಹೇಳಲ್ಪಟ್ಟವೆ. ಏಷು=ಯಾವ ವೇದಪುರಾಣಗಳಲ್ಲಿ ಹೇಳಿದ, ಪ್ರಥಮತ್ವಂ=ಪೂರ್ವ ಸರ್ಗವಿಚಾರವು, ಉತ್ಕರ್ಷಹೇತುಃ-ಮೋಕ್ಷಕ್ಕೆ ಕಾರಣವು. ನ=ಇಲ್ಲ. ತತ್=ಆ ಪೂರ್ವ ಸೃಷ್ಟಿಯು. ವಿಶೇಷವಾಕ್ಯೈಃ = ವಿಶೇಷ ವಚನಗಳಿಂದ. ಅವಗಮ್ಯತೆ=ತಿಳಿಸಿಕೊಳ್ಳಲ್ಪಡುತ್ತದೆ

ತಾತ್ಪರ್ಯ.—ಪದ್ಮಕಲ್ಪ ಅತಿರಿಕ್ತ ಅವಾಂತರಕಲ್ಪಗಳಲ್ಲಿ ಸರ್ಗಭೇದಗಳು ಶೃತಿಗಳಲ್ಲಿ ಮತ್ತು ಪುರಾಣಗಳಲ್ಲಿ ಅನ್ಯಥಾ ತಿಳಿಸಲ್ಪಟ್ಟವೆ. ಅನೇಕಾಂಶಗಳು ಆ ರೀತಿಯಾಗಿ ಅವುಗಳನ್ನು ತಿಳಿವರೆ ಸಾಧಕನಾಗವುದಿಲ್ಲ ಆದ್ದರಿಂದ ವಿಶೇಷ ವಾಕ್ಯಗಳೆಂಬ ನಿರ್ಣಯದಿಂದಲೇ ತಿಳಿಯಬೇಕು.

ವಿಶೇಷಾರ್ಥ. —ಶೃತಿ, ಮತ್ತು ಪುರಾಣಗಳು ನಿರ್ಣಾಯಕ ಗ್ರಂಥಗಳು ನಿರ್ಣಯ ಮತ್ತು ನಿರ್ಣಾಯಕ ಗ್ರಂಥಗಳಲ್ಲಿ ನಿರ್ಣಯವೇ ಪ್ರಧಾನ. ಅದರಲ್ಲಿ ಹೇಳಿರುಂತೆ ತಿಳಿಯುವುದೇ ಸಾಧನಕ್ಕೆ ಅನುಕೂಲ, ಆದ್ದರಿಂದ ಅಧಿಕಾರಿಗಳು ಸಾಧ್ಯವಾದ ಮಟ್ಟಿಗೆ ನಿರ್ಣಯಗ್ರಂಥದಲ್ಲಿನ ವಿಷಯಗಳನ್ನು ಸಂಗ್ರಹಿಸಿ ಅವಲೋಕನ ಮಾಡಬೇಕೆಂಬುವುದೇ ತಾತ್ಪರ್ಯಗಾರರ ಆಶಯವೆಂದು ತಿಳಿಸುತ್ತಾರೆ.

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯೇ ಸರ್ಗಾನು ಸರ್ಗ ಪ್ರಾದುರ್ಭಾವನಿರ್ಣಯೋನಾಮ ॥ ತೃತೀಯೋಧ್ಯಾಯಃ ಓಂ**

**॥ ಶ್ರೀಕೃಷ್ಣಾರ್ಪಣಮಸ್ತು ॥**

— o —

## ನಾಲ್ಕನೆಯ ಅಧ್ಯಾಯ.

### ಶ್ರೀ ಸೀತಾ ಜಾನಯೆನಮಃ.

ಅವತಾರಿಕೆ.—ಈ ಪ್ರಪಂಚದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳಲ್ಲಿ ಜ್ಞಾನಿಗಳಿಗೆ ಅಭಿಮತವಾದುದು ಧರ್ಮ, ಮೋಕ್ಷಗಳೇ ಹೊರತು, ಅರ್ಥ ಕಾಮಗಳಲ್ಲ. ಆದರೂ ಈ ಎರಡು ಪುರುಷಾರ್ಥಗಳನ್ನು ಪಡೆಯಲು ಎತ್ನಿಸಿದಲ್ಲಿ ಮಧ್ಯದಲ್ಲಿರುವ ಅರ್ಥ, ಕಾಮಗಳು ತಾವಾಗಿಯೇ ಲಭಿಸುವುವು. ಆದ್ದರಿಂದಲೇ "ಧರ್ಮಾದರ್ಥಶ್ಚ ಕಾಮಶ್ಚ" ಎಂದು ನೀತಿಶಾಸ್ತ್ರದಲ್ಲಿ ಹೇಳಿರುವುದು. ಇಂತಹ ಮಹಾಪುರುಷಾರ್ಥವನ್ನು ಗಳಿಸಬೇಕಾದರೆ ಅವನ್ನು ದಯಪಾಲಿಸುವ ಶ್ರೀಹರಿಯ ಅನುಗ್ರಹವನ್ನು ಕೋರಲೇಬೇಕಾಗುವುದು. ಆ ಅನುಗ್ರಹವನ್ನಾದರೋ ಆತನು ಎಲ್ಲರಿಗೂ ಸುಲಭವಾಗಿ ಕೊಡತಕ್ಕವನಲ್ಲ. ತನ್ನ ಗುಣೋತ್ಕರ್ಷಗಳನ್ನರಿತ ಜ್ಞಾನಿಗೆ ಮಾತ್ರ ಕೊಡುವನೆಂದು ಶ್ರುತಿಯಲ್ಲಿ ಹೇಳಿರುವುದು. ಇದೇ ಅಭಿಪ್ರಾಯವನ್ನೇ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ "ಪ್ರಿಯೋಹಿ ಜ್ಞಾನಿನೋತ್ಯರ್ಥಮಹಂಸಚಮಮಪ್ರಿಯಃ" ಎಂಬ ವಚನದಿಂದ ಸ್ಪಷ್ಟಪಡಿಸಿರುವನು. ಇಂಥ ಭಗವನ್ಮಹಿಮಾ ಜ್ಞಾನವಾದರೋ ಪುರಾಣ ಶ್ರವಣದಿಂದಲೇ ಆಗಬೇಕು. ಆ ಪುರಾಣಗಳಲ್ಲೋ ಗ್ರಂಥ ಪ್ರಕ್ಷೇಪಾದಿಗಳು ಮತ್ತೆ ಕೆಲವೆಡೆಗಳಲ್ಲಿ ಮೋಹಕವಾದ ಕಥಾ ಭಾಗಗಳ ವಿಜೃಂಭಣೆ, ಈ ತೊಂದರೆಗಳು ಅಷ್ಟಾದಶ ಪುರಾಣಗಳಲ್ಲೂ, ರಾಮಾಯಣಾದಿಗಳಲ್ಲಿಯೂ, ಹೇರಳವಾಗಿವೆ. ಇಂಥಾದ್ದರಲ್ಲಿ ಯಥಾರ್ಥ ತತ್ವಾವಮರ್ಶಕ್ಕೆ ಅವಕಾಶವೆಲ್ಲಿಯದು ? ಹೀಗೆಂದು ಯೋಚಿಸಿಯೇ ಶ್ರೀಮದಾಚಾರ್ಯರು ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯ ಗ್ರಂಥದಿಂದ ಭಗವದವತಾರಕಥಾ, ಅವತಾರ ಕಾರ್ಯಗಳ ರಹಸ್ಯಗಳನ್ನು ಶಿಷ್ಯ ಜನರ ಅವಗಾಹನೆಗೆ ತಂದಿರುವರಾಗಿ, ಶ್ರೀಮದ್ರಾಮಾವತಾರ, ಶ್ರೀಕೃಷ್ಣಾವತಾರಗಳನ್ನು ಶ್ರೀಹರಿಯು ಪರಿಗ್ರಹಿಸಿದ್ದು, ಆ ರೂಪಗಳಿಂದ ನಡಿಸಿದ ಜಗತ್ಕಾರ್ಯ ನಿರ್ವಾಹಾದಿಗಳೂ ಈ ವಿಚಾರದಲ್ಲಿ

ಆಗಾಗ ಜನ ಸಮುದಾಯಕ್ಕೆ ಒದಗುವ ಸಂಶಯ, ವಿಪರ್ಯಾಸಾದಿಗಳ ಪರಿಹಾರಕ್ಕೆ ಈ ನಿರ್ಣಯ ಗ್ರಂಥಾವಲೋಕನವೇ ಪರಮೌಷಧವೆಂಬುದು ಸಿದ್ಧವಾದಂಶ. ಆದ್ದರಿಂದ ಶ್ರೀಮದಾಚಾರ್ಯರು ನಿರ್ಣಯ ಗ್ರಂಥದ ೩ನೇ ಅಧ್ಯಾಯದಲ್ಲಿ ಪ್ರಸಂಗ ಸಂಗತಿಯ ಮೂಲಕ ನಿರ್ಧರಿಸಿದ ಅವತಾರ ರೂಪಗಳ ಸ್ಪಷ್ಟತೆಯಲ್ಲಿ ಸೂಚಿತವಾದ ಶ್ರೀಮನ್ನಾರಾಯಣನ ಪೂರ್ಣಾವತಾರವೆನ್ನಿಸುವ ಶ್ರೀಮದ್ರಾಮ ಕಥಾ ಭಾಗದಲ್ಲಿ ನಿಸ್ಸಂದೇಹವಾಗಿ ತಿಳಿಯಬೇಕಾದ ಮುಖ್ಯಾಂಶಗಳನ್ನು ಸ್ವಮುಖತಃ ತಿಳಿಸಬೇಕೆಂಬೆಣಿಸಿಯೇ ೪ನೇ ಅಧ್ಯಾಯ ಮೊದಲು ಕೆಲವು ಅಧ್ಯಾಯಗಳಲ್ಲಿ ಬಾಲಕಾಂಡ ಮೊದಲ್ಗೊಂಡು ಉತ್ತರಕಾಂಡ ಪೂರ್ತಿಯಾಗಿ ಬಹು ಮಟ್ಟಿಗೆ ಮೂಲ ರಾಮಾಯಣವನ್ನನುಸರಿಸಿಯೇ ವಾಲ್ಮೀಕಿ ಪ್ರಭೃತಿಋಷಿವರ್ಯರಿಂದ ಮಹಾಕಾವ್ಯ ರೂಪದಲ್ಲಿ ಬರೆಯಲ್ಪಟ್ಟಿರುವ ಕಥಾ ಭಾಗಗಳಲ್ಲಿ ಜನರು ದಾರಿ ತಪ್ಪದಂತಿರುವುದಕ್ಕಾಗಿ ಅಲ್ಲಲ್ಲಿನ ಗುಟ್ಟುಗಳನ್ನೂ ಶ್ರೀಹರಿಯ ಸರ್ವೋತ್ತಮತ್ವ ವಾಯುಜೀವೋತ್ತಮತ್ವಗಳಿಗೆ ನ್ಯೂನತೆ ಬರದಂತೆಯೂ ಪಂಚಭೇದ ತಾರತಮ್ಯ ಜ್ಞಾನ ಪೂರ್ವಕ ಶ್ರೀ ಭಗವಂತನ ಮೂಲ ರೂಪ ಅವತಾರ ರೂಪಗಳ ಅಭೇದ ಜ್ಞಾನ ಬೋಧಕವಾದ ಪ್ರಮೇಯ ಸೂಚಕ ವಾಕ್ಯ ಪರಂಪರೆಗಳನ್ನು ಉದಾಹರಿಸಿ ಕೊಡಲೋಸುಗವೇ ಈ ೪ನೇ ಅಧ್ಯಾಯದ ಆರಂಭದಲ್ಲಿ ಶ್ರೀಮದ್ರಾಮಚಂದ್ರಮೂರ್ತಿಯ ಜಗದ್ವಿಡಂಬನ ವ್ಯಾಪಾರಗಳಲ್ಲಿ, ಬಾಲ್ಯ ಕೌಮಾರಾದ್ಯವಸ್ಥಾ ವಿಡಂಬನ ಪರವಾದ ಕಥಾಂಶಗಳನ್ನೇ ಗುರಿಯಾಗಿಟ್ಟುಕೊಂಡು ಮೊದಲು ಶ್ರೀರಾಮಚಂದ್ರನ ಅಭಿವೃದ್ಧಿಯು ಮೋಕ್ಷಾರ್ಥಿಯಾದ ಮಾನವನಿಂದ ಹೀಗೆ ತಿಳಿಯತಕ್ಕದ್ದೆಂಬಂಶಕ್ಕೆ ಉದಾಹರಣೆಯಾಗಿ:—

ಶ್ಲೋಕ॥ ಓಂ॥ ಅಥಾಭ್ಯವರ್ಧಂಸ್ತೇ ತುರಃ ಕುಮಾರಾ ನೃಪಸ್ಯ ಗೇಹೇ ಪುರುಷೋತ್ತಮಾದ್ಯಾಃ ॥ ನಿತ್ಯಪ್ರವೃದ್ಧಸ್ಯ ಚ ತಸ್ಯ ವೃದ್ಧಿರುಪೇಕ್ಷ್ಯ ಲೋಕಸ್ಯ ಹಿ ಮಂದದೃಷ್ಟಿಂ ॥ ೧॥

ತಾತ್ಪರ್ಯ.—ಶ್ರೀರಾಮಾಯಣಗಳ ಕಥಾ ಭಾಗದಲ್ಲಿ—ಬಾಲಕಾಂಡವೆಂಬ ಅನ್ವರ್ಥವಾದ ಕಥಾ ಭಾಗವನ್ನು, ನಿರ್ಣಯಿಸಲಾರಂಭಿಸಿರುವರು. ಇಲ್ಲಿ "ಅಥ" ಎಂಬ ಅವ್ಯಯವು ಮಂಗಳದ್ಯೋತಕವಾದುದರಿಂದ ಅದರ ಪ್ರಯೋಗದಿಂದ ಆರಂಭಿಸುವ ಈ ಗ್ರಂಥ ಭಾಗವು ಪಠಿಸುವ ಭಕ್ತರಿಗೆ

ಪರಮ ಮಂಗಳಪ್ರದವಾಗುವುದರಲ್ಲಿ ಸಂಶಯವಿಲ್ಲ. " ಸಂತತಿ ಸಂಪದ್ರಾ ಮಾಯುಣತಃ " ಎಂಬ ವಾಕ್ಯವು ಲೋಕದಲ್ಲಿ ರೂಢಿಯಲ್ಲಿದೆಯಾಗಿ ಯಾವ ಶ್ರೀಹರಿಯು ಬ್ರಹ್ಮಾದಿಗಳ ಪ್ರಾರ್ಥನೆಯಂತೆ ತನ್ನ ಪರಮ ಭಕ್ತರಾದ ಕಶ್ಯಪ ಅದಿತಿಗಳ ಅಂಶ ಸಂಭೂತರಾದ ಕೋಸಲ ದೇಶದ ಧೊರೆಯಾದ ದಶರಥ ಕೌಸಲ್ಯೆಯರಿಗೆ ಮನೋರಥ ಪೂರ್ತಿಗಾಗಿ ಅವರ ಪ್ರಾರ್ಥನೆಯಂತೆ ಪುತ್ರ ಭಾವದಿಂದ ಅವತರಿಸಿದ ಶ್ರೀಮನ್ನಾರಾಯಣಾಂಶ ಸಂಭೂತನಾದ ಶ್ರೀರಾಮಚಂದ್ರನು, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ವರು, ಮಕ್ಕಳು ಪರಮ ಕುಶಲರೆಂದು ಹೊಗಳಿಸಿಕೊಳ್ಳುತ್ತಾ ಆ ದಶರಥನ ಅರಮನೆಯಲ್ಲಿ ಅಭಿವೃದ್ಧಿಗೆ ಬಂದರು.

ವಿಶೇಷಾರ್ಥ.—ಇಲ್ಲಿ ಸಮುದ್ರಕ್ಕೆ ಹೇಗೆ ಹೊಸ ಪ್ರವಾಹಗಳ ಬರುವಿಕೆಯಿಂದಲೂ, ಬಾರದಿರುವಿಕೆಯಿಂದಲೂ, ವ್ಯತ್ಯಾಸವಿಲ್ಲವೋ ಹಾಗೆ ಶ್ರೀಹರಿಯು ನಿತ್ಯಾಭಿವೃದ್ಧಿಯಿಂದ ಬೆಳಗುವನು. ಇವನಿಗೆ ಅಭಿವೃದ್ಧಿ ಎಂಬುದು ಈ ಮಾನವರ ಅಲ್ಪ ದೃಷ್ಟಿಯಿಂದ ಹೇಳಬೇಕು, ತತ್ವತಃ ಸ್ವಾಮಿಗೆ ಇಂದು ಅಭಿವೃದ್ಧಿ, ಮುಂದು ಅಪಕ್ಷಯವೆಂಬ ವಿಕಾರಗಳುಂಟೋ ? ಇಲ್ಲ. ಆದ್ದರಿಂದ ಈ ಮಂದ ಮತಿಕರಾದ ಮಾನವರಿಗೆ ಸ್ವಾಮಿಯು ಅವತಾರ ರೂಪಗಳಲ್ಲಿ ಉಪಚಯಾಪ ಚಯಗಳನ್ನು ತೋರಿಸುತ್ತಾ ವಿಡಂಬಿಸುವನಾಗಿ ಇವನ್ನು ನೋಡಿ ಅಜ್ಞರು ಶ್ರೀರಾಮನು ಈ ದಿನ ಜನ್ಮಿಸಿದನು, ನಿನ್ನೆಗೆ ಈ ದಿನ ಬೆಳೆದನು ಮುಂದೆ ಬೆಳೆವನು, ಎಂಬಿತ್ಯಾದಿ ಭಾವಗಳನ್ನು ತಮ್ಮ ಅಜ್ಞತೆಯಿಂದ ಪಡೆಯುವರೆಂದು ಭಾವ. ಸ್ವಾಮಿಯಾದರೋ ಶಶ್ವದೇಕ ಪ್ರಕಾರನು. ಈ ಅಂಶವು ನಿರ್ವಿಕಾರೋಕ್ಷರಃ ಶುದ್ಧಃ ಎಂಬ ಪ್ರಮಾಣಸಿದ್ಧವಾಗಿದೆ. ನಿತ್ಯಾನಂದಪೂರ್ಣನು, ವೃದ್ಧಿಹ್ರಾಸರಹಿತನು, " ಅತೋಸ್ಮಿಲೋಕೇವೇದೇಚ ಪ್ರಥಿತಃ ಪುರುಷೋತ್ತಮಃ " ಎಂದು ಭಗವಂತನು ಗೀತೆಯಿಂದಲೂ ಈ ಅಂಶವನ್ನು ಸ್ಪಷ್ಟಪಡಿಸಿರುವನು. ಮತ್ತೂ ಹೀಗೆ ಭಗವಂತನನ್ನು ತಿಳಿಯುವ ಮಾನವನಿಗೆ ಮೋಕ್ಷ ರೂಪವಾದ ಫಲವನ್ನೂ " ಯೋಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ ॥ ಸಸರ್ವವಿದ್ಭಜತಿಮಾಂ ಸರ್ವಭಾವೇನ ಭಾರತ ॥ ಏತದ್ಬುದ್ಧ್ವಾಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ ॥ " ಎಂಬ ವಚನಗಳಿಂದಲೂ ಸಾರಿ ಹೇಳಿರುವನಾಗಿ

ಪ್ರಕೃತ ರಾಮಾದಿಗಳ ಅಭಿವೃದ್ಧಿ ಎಂಬುದನ್ನು ಲೋಕ ದೃಷ್ಟ್ಯಾ ಹೇಳ ಬೇಕೇ ವಿನಾ ನೈಜವಾದುದೆಂದಲ್ಲ, ಎಂದು ತಾತ್ಪರ್ಯವು.

**ಶ್ಲೋಕ॥ ನಿರೀಕ್ಷ್ಯನಿತ್ಯಂಚತುರಃ ಕುಮಾರಾನ್ ಪಿತಾಮುದಂಸಂತತಮಾಪಚೋಚ್ಚಾಂ ॥ ವಿಶೇಷತೋರಾಮಮುಖೇಂದುಬಿಂಬಮವೇಕ್ಷ್ಯರಾಜಾಕೃತಕೃತ್ಯಆಸೀತ್ ॥೨॥**

ತಾತ್ಪರ್ಯ.—ಇಂಥ ಶ್ರೀರಾಮಚಂದ್ರ ದೇವರ ತಂದೆ ಎನಿಸಿದ ದಶರಥರಾಯನು ಈ ನಾಲ್ವರು ಮಕ್ಕಳನ್ನು ನೋಡುತ್ತ ದಿನದಿನಕ್ಕೂ ಹೆಚ್ಚಾದ ಸಂತೋಷವನ್ನು ಪಡೆದನು. ಅದರಲ್ಲಿಯೂ ಶ್ರೀರಾಮದೇವರ ಮುಖಚಂದ್ರನನ್ನು ನೋಡಿದ ವೇಳೆಯಲ್ಲಿ ದಶರಥನ ಆನಂದಕ್ಕೆ ಪಾರವೇ ಇಲ್ಲದಂತಾಗಿ, ಆತನು ಈ ರಾಮದರ್ಶನ ಕಾಲಗಳಲ್ಲಿ ತನ್ನನ್ನು ಕೃತಕೃತ್ಯನೆಂದು ಭಾವಿಸುತ್ತಾ ಇದ್ದನು ಎಂದು ತಾತ್ಪರ್ಯ.

ವಿಶೇಷಾರ್ಥ.—ಆದ್ದರಿಂದ ತನ್ನ ಕರ್ತವ್ಯ ಕರ್ಮಗಳನ್ನು ಭಗವತ್ಸೇವೆ ಎಂದು ಭಾವಿಸಿ ಮಾಡಿ ಮುಗಿಸಿದ ಭಕ್ತನಿಗೆ ಆ ಸೇವಾ ಧರ್ಮಕ್ಕೆ ತಕ್ಕಂತೆ ಭಗವತ್ಸಾಕ್ಷಾತ್ಕಾರವೂ ಒದಗಿದರೆ ಆತನು ಹೇಗೆ ತನ್ನನ್ನು ಆಗ ಕೃತಕೃತ್ಯನೆಂದು ಭಾವಿಸತಕ್ಕದ್ದೋ ಹಾಗೆ ಮಗನನ್ನು ಕಂಡಾಗಲೆಲ್ಲಾ ದಶರಥನಿಗೆ ತಾನು ಕೃತಕೃತ್ಯನೆಂಬ ಭಾವನೆಯುಂಟಾಗುತ್ತಿತ್ತೆಂದು ತಾತ್ಪರ್ಯ. ಇದರಿಂದ ಆತನಿಗೆ ಶ್ರೀರಾಮ ದರ್ಶನವು ಭಗವತ್ಸಾಕ್ಷಾತ್ಕಾರವೆಂದೂ ಅದರಿಂದುಂಟಾದ ಆನಂದವು ಮೋಕ್ಷಾನಂದವೆಂಬ ಭಾವವು ಹುಟ್ಟುತ್ತಿದ್ದಿತು. ಎಂಬುದು ವ್ಯಕ್ತವಾಗುವುದು, ಮತ್ತೂ ಮುಕ್ತಿಯೋಗ್ಯರಾದ ಮನುಷ್ಯೋತ್ತಮರ ಯೋಗ್ಯತೆಯು ಸಹ ಇಂತಹುದು ಎಂಬುದು ಸಿದ್ಧವಾಗುವುದು. ಈ ತಾತ್ಪರ್ಯದಿಂದಲೇ " ವಿಶೇಷತೋ ರಾಮಮುಖೇಂದು ಬಿಂಬಮವೇಕ್ಷ್ಯರಾಜಾ ಕೃತಕೃತ್ಯ ಆಸೀತ್ " ಎಂದು ಈ ಶ್ಲೋಕದ ಎರಡನೇ ಅರ್ಧ ಭಾಗವನ್ನು ಶ್ರೀಮದಾಚಾರ್ಯರು ಉದಹರಿಸಿರುವರು.

**ಶ್ಲೋಕ॥ ತಸ್ಮಾತ್ತರಃಪೌರಜನಾಅಮಾತ್ಯಾಹ್ಯಂತಃ ಪುರಾವೈಷಯಿಕಾಶ್ಚ ಸರ್ವೇ ॥ ಅವೇಕ್ಷ್ಯಮಾಣಾಃ ಪರಮಂಪುಮಾಂಸಂ ಸ್ವಾನಂದ ತೃಪ್ತಾ ಇವಸಂಬಭೂವುಃ ॥೩॥**

ತಾತ್ಪರ್ಯ.—ಶ್ರೀರಾಮಾದಿಗಳ ದರ್ಶನದಿಂದ ದಶರಥನು ಮಾತ್ರ ಸಂತೋಷಿಸಿದನೆಂದು ಅಲ್ಲ. ಆತನ ಅನುಗ್ರಾಹ್ಯ ಕೋಟಿಗೆ ಸೇರಿದ ಮಾನವ

ಸಾಮಾನ್ಯರೂ ಆನಂದಕ್ಕೆ ಪಾತ್ರರಾದರು ಎಂಬುದನ್ನು ಈ ಶ್ಲೋಕವು ನಿರೂಪಿಸುವುದು. ದಶರಥನಂತೆ ಶ್ರೀರಾಮಚಂದ್ರನ ತಾಯಿಯರು (ಲೋಕ ದೃಷ್ಟಿಯಿಂದ) ಎಂದರೆ--ಹೊತ್ತು ಹೆತ್ತು ಸಲಹುತ್ತಿರುವ ಕೌಸಲ್ಯೆ, ಸುಮಿತ್ರಾ, ಕೈಕಯಿ, ಮತ್ತೂ ದಶರಥನ ಅಂತಃಪುರಕ್ಕೆ ಸೇರಿದ ಮಿಕ್ಕ ಸ್ತ್ರೀಯರು ಮತ್ತೂ ಸಾಕೇತ ಪಟ್ಟಣದಲ್ಲಿ ಆಗ ವಾಸಿಸುತ್ತಿದ್ದ ಪಟ್ಟಣಿಗರು, ದಶರಥನ ಆಸ್ಥಾನಕ್ಕೆ ಸೇರಿದ ಅಮಾತ್ಯ ವರ್ಗದವರು, ಒಟ್ಟು ಕೋಸಲ ದೇಶದ ಸರ್ವಪ್ರಜಾಮಂಡಲಿಯೂ, ಈ ರಾಜಪುತ್ರರ ಸಂದರ್ಶನದಿಂದ ಆನಂದಿಸಿದರು, ಎಂದು ತಾತ್ಪರ್ಯ. ಈ ಮೇಲಿನ ಜನಸಮುದಾಯವು ಆಗಾಗ ಶ್ರೀರಾಮಚಂದ್ರನನ್ನು ನೋಡಿ ನೋಡಿ ಹಿಗ್ಗುತ್ತಿದ್ದಿತು.

ವಿಶೇಷಾರ್ಥ.—ಹೇಗೆ ಪರಮಪುರುಷನ ಸೇವಾ ನಿಮಿತ್ತ ಜನ್ಮವನ್ನು ಪಡೆದ ಸಚ್ಚೇತನನು ಶ್ರುತಿ ಸ್ಮೃತಿಗಳಲ್ಲಿ ನಿರೂಪಿತವಾದ ಭಾಗವತ ಧರ್ಮಗಳನ್ನಾಚರಿಸಿ ಫಲವನ್ನಪೇಕ್ಷಿಸದೇ ಈಶನಲ್ಲಿ ಸರ್ವವನ್ನೂ ಸಮರ್ಪಿಸುತ್ತಾ ಮಾಡಬೇಕಾದ ಸಾಧನಗಳನ್ನು ಮಾಡಿ ಮುಗಿಸಿದ ಬಳಿಕ ಶ್ರೀ ಹರಿಯು ಸಂತುಷ್ಟನಾಗಿ ಆತನ ಸ್ವರೂಪಯೋಗ್ಯತೆಗನುಗುಣವಾಗಿ ಆತನಿಗೆ ಪ್ರತ್ಯಕ್ಷನಾಗಿ ದರ್ಶನ ಕೊಟ್ಟಲ್ಲಿ ಆ ಭಗವಂತನ ಆ ಪ್ರತ್ಯಕ್ಷ ದರ್ಶನವು ಒದಗಿದ ಕ್ಷಣದಲ್ಲಿಯೇ ಲಿಂಗ ದೇಹಾದಿ ಬಂಧಗಳಿಂದ ಬಿಡುಗಡೆ ಮಾಡಲ್ಪಟ್ಟವನಾಗಿ ಆ ಕೂಡಲೇ ಹರಿಯ ಅನುಗ್ರಹದಿಂದ ತನ್ನ ಜ್ಞಾನಕ್ಕೆ ಗೋಚರವಾಗುವ ಸೂಕ್ಷ್ಮತರವಾದ ತನ್ನ ಸ್ವರೂಪ ದೇಹವನ್ನು ಸಾಕ್ಷಾತ್ಕರಿಸಿಕೊಂಡವನಾದ ಭಕ್ತನು ಆ ಸ್ವಾಮಿಯ ಎದುರಿನಲ್ಲಿಯೇ ತನ್ನ ಯೋಗ್ಯತೆಗೆ ತಕ್ಕುದೆಂದು ನಿರ್ದಿಷ್ಟವಾದ ಆನಂದವನ್ನನುಭವಿಸುತ್ತಾ ಪರರು ತನಗಿಂತಲೂ ಹೆಚ್ಚು ಸುಖವನ್ನು ಪಡೆಯುತ್ತಿದ್ದರೂ ಅದನ್ನು ಕಂಡು ಆ ಸುಖವು ತನಗಿಲ್ಲವಲ್ಲಾ ಎಂಬ ಅತೃಪ್ತಿಯನ್ನೂ ಅಸಹನೆಯನ್ನೂ ಹೊಂದದೇ ಆಗ ತನಗೆ ಒದಗಿದ ಆ ಸುಖವನ್ನೇ ಶ್ರೀ ಹರಿಯು ಕೊಟ್ಟುದು ಎಂದು ನಿರ್ವಿವಾದವಾಗಿ ಪರಮಾನಂದದಿಂದನುಭವಿಸುವನೋ ಹಾಗೆ ಈ ಶ್ರೀರಾಮ ದರ್ಶನದ ಸುಖವು ಆ ಮೇಲಿನ ಭಕ್ತ ಮಂಡಲಿಗೆ ಈ ವಿವರಣೆಯಿಂದ ನಿರೂಪಿಸಿದ ಮೋಕ್ಷಾನಂದಕ್ಕೆ ಸಮವಾಗಿದ್ದಿತೆಂದು ತಾತ್ಪರ್ಯ.

ವಿಶೇಷ ವಿಷಯ.—ಈ ಶ್ಲೋಕದಲ್ಲಿರುವ “ಅಂತಃಪುರಾಃ” ಎಂಬುವ ಪದವು ದಶರಥನು ಭೋಗಕ್ಕಾಗಿ ಪಾಣಿಗ್ರಹಣ ಮಾಡಿದ್ದ ಸ್ತ್ರೀಯರು

(ಬಂಗಾರದವರು) ಎಂಬುದನ್ನು ತಿಳಿಸುವುದು. 'ರಾಜಾನೋ ಬಹುವಲ್ಲಭಾಃ' ಎಂಬ ಪ್ರಮಾಣದಿಂದ ಶ್ರೀಮಂತನು ಭೋಗಾರ್ಥವಾಗಿ ಬೇಕಾದ ಸ್ತ್ರೀಯರನ್ನು ಶೇಖರಿಸುವ ವಾಡಿಕೆಯು ಬಹು ಹಿಂದಿನ ಕಾಲದಿಂದಲೂ ಇದ್ದಿತೆಂದು ವ್ಯಕ್ತಗೊಳ್ಳುವುದು. ಹಾಗೆ ದಶರಥನ ಅಂತಃಪುರ ಸ್ತ್ರೀಯರೆನ್ನಿಸಿದವರೂ ಸಹ ಶ್ರೀರಾಮನ ಸಂದರ್ಶನದಿಂದ ಮೋಕ್ಷಾನಂದವನ್ನು ಪಡೆದರೆಂದ ಮೇಲೆ ವಿಶ್ವಾಮಿತ್ರ, ವಶಿಷ್ಠ, ವಾಮದೇವ, ಶರಭಂಗ, ಸುತೀಕ್ಷ್ಣ, ಇಧ್ಮವಾಹ, ಜಟಾಯು, ಶಬರಿ ಪ್ರಭೃತಿಗಳಾದ ಅನೇಕ ಯೋಗಿಗಳು ಈ ಸ್ವಾಮಿಯ ದರ್ಶನದಿಂದ ಆನಂದಾನುಭವ ಪಡೆದುದೇನಾಶ್ಚರ್ಯ? ರಾಮಚಂದ್ರನೊಡನೆ ಯುದ್ಧಕ್ಕೆ ಸೆಣಸಿದ ಘೋರ ರಾಕ್ಷಸರು, ಕಾಮ ರೂಪಿನಿಂದ ಬಯಸಿ ಬಂದ ಶೂರ್ಪಣಖಾದಿಗಳು ಮಾರೀಚ ಮೊದಲಾದವರು ಮಾತ್ರ ರಾಮನ ಸಂದರ್ಶನದಿಂದ ಮೋಕ್ಷಾನಂದವನ್ನು ಪಡೆಯಲಿಲ್ಲ, ಏಕೆ ? ಯೋಗ್ಯತೆಯು ಇಲ್ಲ. ಆದ್ದರಿಂದಲೆ ದರ್ಶನ ಪಡೆದವರೆಲ್ಲರೂ ಮುಕ್ತಿಗೆ ಅರ್ಹರಲ್ಲ, ಎಂಬುದು ಸ್ಪಷ್ಟವಾಗುವುದು. ಆದ್ದರಿಂದಲೇ ಅನುಗ್ರಾಹ್ಯ ಕೋಟಿಗೆ ಸೇರಿದವರು ಎಂದು ತಿಳಿಯಬೇಕಾಗಿದೆ. "ಯಶ್ಚರಾಮಂನಪಶ್ಯೇತ್ತು ಯಂಚರಾಮೋನಪಶ್ಯತಿ" ಎಂಬ ರಾಮಾಯಣ ಶ್ಲೋಕವೂ ಇದನ್ನೇ ಸಾಧಿಸಿರುವುದು.

**ಶ್ಲೋಕ|| ತತಃ ಸುವಂಶೇಶಶಿನಃಪ್ರಸೂತೋ ಗಾಧೀತಿಶಕ್ರಸ್ತನುಜೋಸ್ಯಚಾಸೀತ್ | ವರೇಣವಿಪ್ರತ್ವಮವಾಪಯೋಸೌ ವಿಶ್ವಸ್ಯಮಿತ್ರಂಸ ಇಹಾಜಗಾಮ ||೪||**

ತಾತ್ಪರ್ಯ.—ದೇವತಾಕಾರ್ಯ ಸಾಧನಕ್ಕಾಗಿ ಪ್ರಸಿದ್ಧವಾದ ಚಂದ್ರವಂಶದಲ್ಲಿ ಗಾಧಿ ಎಂಬ ಹೆಸರಿನಿಂದ ಜನಿಸಿದ ಸಾಕ್ಷಾದ್ದೇವೇಂದ್ರನಿಗೆ ಮಗನಾಗಿಯೂ, ಬೀಜ ಮತ್ತು ಕ್ಷೇತ್ರ ಸಂಬಂಧದಿಂದ ಹುಟ್ಟು ಕ್ಷತ್ರಿಯನಾದರೂ, ಬ್ರಹ್ಮನ ವರ ಲಾಭದಿಂದ ಒಂದೇ ಜನ್ಮದಲ್ಲಿಯೇ ಬ್ರಾಹ್ಮಣ್ಯವನ್ನು ಪಡೆದವನಾಗಿಯೂ, ತನ್ನ ನಡೆ ನುಡಿಗಳಿಂದ ಒಟ್ಟು ಜಗತ್ತಿಗೇ ಪ್ರಿಯನೆನಿಸಿದ್ದ ಕಾರಣ ವಿಶ್ವಾಮಿತ್ರನೆಂಬ ಅನ್ವರ್ಥ ನಾಮವನ್ನು ಪಡೆದವನಾಗಿಯೂ ಇದ್ದ ಒಬ್ಬ ಮಹರ್ಷಿಯು ರಾಮಾದಿ ಪುತ್ರ ಸಂದರ್ಶನಾನಂದಮಗ್ನನಾದ ಆ ದಶರಥನ ಸಭೆಗೆ ಅತರ್ಕಿತವಾಗಿ ಬಂದೊದಗಿದನು.

ವಿಶೇಷಾರ್ಥ.—ಪ್ರತಿಯೊಂದು ಯುಗದಲ್ಲಿಯೂ ಧರ್ಮ ಸಂಸ್ಥಾಪನಕ್ಕಾಗಿ ಅವತರಿಸುವ ಸಾಕ್ಷಾದ್ಭಗವಂತನ, ಇಚ್ಛೆಗೆ ಅನುಗುಣವಾಗಿ, ಅವನ ಅನುಗ್ರಾಹ್ಯ ಕೋಟಿಗೆ ಸೇರಿದ ದೇವತೆಗಳೂ ಈ ಸಾಧನ ಭೂಮಿ ಎಂದು ಪ್ರಸಿದ್ಧವಾದ ಭರತ ಖಂಡದಲ್ಲಿ ಜನ್ಮಿಸಿ ಭಗವದಾಜ್ಞೆಯಂತೆ ಉದ್ದಿಷ್ಟ ಕಾರ್ಯಗಳನ್ನು ನಡಿಸಿ ಅಂಥಾ ಸ್ವಧರ್ಮವನ್ನು ಶ್ರೀಹರಿಯಲ್ಲಿ ಸಮರ್ಪಿಸುವುದು ಅವರಿಗೆ ಕರ್ತವ್ಯ, ಈ ಕರ್ತವ್ಯವನ್ನು ನಡಿಸಿದ ಮೇಲೆಯೇ ಅವರಿಗೂ ಭಗವದನುಗ್ರಹ ಲಾಭವೆಂಬುದು ಶಾಸ್ತ್ರ ಸಿದ್ಧವಾಗಿದೆ. ಆದ್ದರಿಂದಲೇ ರಾಮಕೃಷ್ಣಾದ್ಯವತಾರಗಳಲ್ಲಿ ಆ ಸ್ವಾಮಿಯ ಉದ್ದಿಷ್ಟ ಕಾರ್ಯ ಸಾಧನದಲ್ಲಿ ಸಮಸ್ತ ದೇವತೆಗಳೂ ಭಾಗವನ್ನು ವಹಿಸಲೋಸುಗ ಕಪಿ ಪ್ರಭೃತಿ ತಿರ್ಯಗ್ಜನ್ಮವನ್ನೂ, ಗೋಪೀ ಗೋಪಾಲಕ, ಯಾದವವೃಷ್ಣಿ ಜನ್ಮಗಳನ್ನೂ ಪಾಂಡವ ಪ್ರಭೃತಿ, ರಾಜಕುಲ ಜನ್ಮಗಳನ್ನೂ ದೇವತೆಗಳೇ ಪಡೆದು ಭಗವತ್ಕಾರ್ಯ ಸಾಧಕರಾಗಿರುವ ಅಂಶ ಶ್ರೀಮನ್ಮಹಾಭಾರತ ಆದಿಪರ್ವದ ಅಂಶಾವತರಣ ಪರ್ವದಲ್ಲಿ ಸ್ಪಷ್ಟಪಟ್ಟಿರುವುದು.

ಇದರಂತೆ ಋಷ್ಯವತಾರಗಳಿಂದಲೂ ದೇವತೆಗಳು ಭಗವತ್ಕಾರ್ಯ ಸಾಧಕರಾಗತಕ್ಕದುಂಟು. ಆದ್ದರಿಂದ ಶ್ರೀರಾಮಾವತಾರ ಕಾಲದಲ್ಲಿ, ವಿಶ್ವಾಮಿತ್ರ, ಪ್ರಭೃತಿಗಳು ಸ್ವಾಮಿಯ ಕಾರ್ಯದಲ್ಲಿ ಸಹಕರಿಸಿದ್ದಾರೆ, ಎಂದು ಮೋಕ್ಷಾರ್ಥಿಯು ತತ್ವವನ್ನು ತಿಳಿಯಬೇಕಾಗಿದೆಯಾಗಿ ಶ್ರೀರಾಮ ಮೂರ್ತಿಯು ದಶರಥನ ಮನೋರಥ ಪೂರ್ತಿ ಮಾಡಿ ಬಾಲ್ಯವನ್ನು ಆತನ ಅರಮನೆಯಲ್ಲಿ ಸುಖದಿಂದ ಕಳೆದ ಬಳಿಕ ಕೌಮಾರ ವಯಸ್ಸಿಗೆ ಬಂದ ಒಡನೆಯೇ ಆತನ ಅವತಾರ ಕಾರ್ಯವನ್ನಾರಂಭಿಸುವುದಕ್ಕೆ ಮಾರ್ಗದರ್ಶಿಯಾಗಿ ಆಗಲು ಭಗವದಾಜ್ಞೆಯನ್ನು ಪಡೆದು ಆಗ ಈ ಲೋಕದಲ್ಲಿ ಪ್ರಸಿದ್ಧವಾದ ಚಂದ್ರವಂಶದ ರಾಜಪುತ್ರನಾಗಿ ಪ್ರಸಿದ್ಧಿ ಪಡೆದಿದ್ದ ಗಾಧಿ ಮಹಾರಾಜನಾಗಿ ಜನ್ಮಿಸಿದ್ದ ಸಾಕ್ಷಾದ್ದೇವೇಂದ್ರನಿಗೆ ಪುತ್ರನಾಗಿ, ವಿಶ್ವಾಮಿತ್ರನೆಂಬ ಋಷಿವರ್ಯನಾಗಿ ಹುಟ್ಟಿ ತನ್ನ ತಪಶ್ಚರಣೆಯಿಂದ ಲೋಕೋತ್ತರವಾದ ಯಶಸ್ಸನ್ನು ಪಡೆದಿದ್ದ ಮಹಾತ್ಮನು ಇದ್ದಕ್ಕಿದ್ದಹಾಗೆ ಅಕಸ್ಮಾತ್ ದಶರಥನ ಅರಮನೆಗೆ ಬಂದು ಸೇರಿದನು ಆತನ ಆ ಬರುವಿಕೆಯು ತತ್ಕಾಲದಲ್ಲಿ ದಶರಥನಿಗೆ ಮನಃ ಕಿಂಕೃತಿಗೆ ಕಾರಣವಾಗಿದ್ದರೂ ಪರಿಣಾಮದಲ್ಲಿ ಪರಮ ಸೌಖ್ಯಕ್ಕೂ ಸಂಪೂರ್ಣ ಯಶಸ್ಸಿಗೂ ಕಾರಣವಾಯಿತು.

ಇಂಥಾ ವಿಶ್ವಾಮಿತ್ರನು ಶ್ರೀರಾಮ, ಲಕ್ಷ್ಮಣರನ್ನು ಧನುರ್ವಿದ್ಯಾ ಪ್ರವೀಣರನ್ನಾಗಿ ಮಾಡಿ ಇವರ ಮೂಲಕ ಭೂಭಾರ ಭೂತರಾದ, ಪ್ರಜಾ ಕಂಟಕರಾದ, ಅನೇಕ ಘೋರ ರಾಕ್ಷಸರನ್ನು ಕೊಲ್ಲಿಸಿ ಪ್ರಜಾ ನೆಮ್ಮದಿಯನ್ನುಂಟು ಮಾಡಲು ಸ್ವಾಮಿಯ ಸಂಕಲ್ಪದಲ್ಲಿತ್ತಾಗಿ ಸಮಯಕ್ಕೆ ಸರಿಯಾಗಿ ಬಂದೊದಗಿದನೆಂದು ತಾತ್ಪರ್ಯ. ಇದು ವಾಸ್ತವಿಕ ಕಥಾಂಶವು. ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರು ವಿಶ್ವಾಮಿತ್ರರ ಮಹಿಮಾತಿಶಯವನ್ನು "ವರೇಣವಿಪ್ರತ್ವಮವಾಪ" ಎಂಬ ವಾಕ್ಯದಿಂದ ಪ್ರಸ್ತಾಪಿಸಿರುವ ಒಂದು ಮುಖ್ಯ ಸಂಗತಿಯನ್ನು ಈ ಗ್ರಂಥ ವ್ಯಾಸಂಗಿಗಳು ಅತ್ಯವಶ್ಯಕವಾಗಿ ತಿಳಿಯಬೇಕಾಗಿದೆ. ಒಬ್ಬ ಸಜ್ಜೀವಿಯು ತನ್ನ ತಪಃ ಪ್ರಭಾವದಿಂದ ದೇವೋತ್ತಮರನ್ನು ಮೆಚ್ಚಿಸಿದಲ್ಲಿ, ಅವರ ಅನುಗ್ರಹ ಲಾಭವಾಗಿ ಆ ಮೂಲಕ ತನಗಭಿಮತವಾದ ಬ್ರಾಹ್ಮಣ್ಯಾದಿಗಳನ್ನು ಪಡೆಯಬಹುದೆಂದು ನಿರ್ಧರಿಸಿರುವರು. ಎಂದರೆ ಹುಟ್ಟು ಕ್ಷತ್ರಿಯನೂ ಕೂಡ ತಪೋಬಲದಿಂದ (ಸಾಧನ ವಿಶೇಷದಿಂದ) ಅದೇ ಶರೀರದಲ್ಲಿಯೇ ಬ್ರಾಹ್ಮಣನಾಗಬಹುದು. ಆದರೆ ಈ ಪ್ರಯತ್ನವು ಹುಟ್ಟಬೇಕಾದರೆ ಬ್ರಾಹ್ಮಣ್ಯ ಲಾಭಕ್ಕೆ ಆ ಜೀವನಿಗೆ ಸ್ವರೂಪತಃ ಯೋಗ್ಯತೆಯು ಇದ್ದೇ ಇರಬೇಕು. ಯೋಗ್ಯತೆಯು ಇದ್ದೇ ಉತ್ಕಟ ಪ್ರಯತ್ನವು ಹುಟ್ಟುವುದು. ಇವರಂತೆ ಎಲ್ಲರೂ ಯತ್ನ ಮಾಡುವುದಾಗಲೀ ಎಲ್ಲರೂ ಬ್ರಾಹ್ಮಣ್ಯವನ್ನು ಪಡೆಯುವರೆಂದಾಗಲೀ ತಾತ್ಪರ್ಯವಲ್ಲಾ ಎಂಬ ಪ್ರಮೇಯವನ್ನು ಆಚಾರ್ಯರ ಈ ವಾಕ್ಯವು ಸ್ಪಷ್ಟಪಡಿಸಿದೆ. ವಿಶ್ವಾಮಿತ್ರರಂತೆ ಮತ್ತಾರಾದರೂ ಲೋಕದಲ್ಲಿ ಬ್ರಾಹ್ಮಣ್ಯ ಲಾಭಕ್ಕೆ ಉತ್ಕಟ ಪ್ರಯತ್ನಮಾಡಿರುವರೆ? ಇಲ್ಲ. ಆದ್ದರಿಂದಲೇ ಯೋಗ್ಯತೆಯು ಮೊದಲಿದ್ದರೆ ಆಮೇಲೆ ಪ್ರಯತ್ನವೆಂಬಂಶ ಸಿದ್ಧವಾಗುವುದು. ಇಂಥಾ ವಿಶ್ವಾಮಿತ್ರರ ನೈಜವಾದ ಜನ್ಮ ಚರಿತ್ರೆಯನ್ನು ಶ್ರೀಮದ್ಭಾರತಾಚಾರ್ಯರು ಮಹಾಭಾರತ ಅರಣ್ಯಪರ್ವದ ೧೧೭ನೇ ಅಧ್ಯಾಯದಿಂದ ಹೇಳಿರುವ ಶ್ರೀಪರಶುರಾಮರ ಜನ್ಮ ಕಥೆಯಿಂದಲೂ, ಮತ್ತೂ ಗದಾಪರ್ವದ ಮೂಲಕವೂ ಸ್ಪಷ್ಟಪಡಿಸಿರುತ್ತಾರೆಯಾಗಿ ವಾಚಕರು ಈ ಶ್ಲೋಕಾರ್ಥವನ್ನು ಗ್ರಹಿಸುವ ವೇಳೆಯಲ್ಲಿ ಆ ಕಥಾ ಭಾಗಕ್ಕೆ ಗಮನ ಕೊಡಬೇಕಾಗಿದೆಯಾಗಿ ಇಲ್ಲಿ ಆ ವಿಶ್ವಾಮಿತ್ರರ ಜನಕರಾದ ಗಾಧಿರಾಜರ ಚರಿತ್ರೆಯೊಡನೆ ವಿಶ್ವಾಮಿತ್ರರ ಹುಟ್ಟು ಬ್ರಾಹ್ಮಣ್ಯ ಪ್ರಾಪ್ತಿಗಳು ವಿವರಿಸಲಾಗಿವೆ.

ಶ್ಲೋಕ॥ ಕಾನ್ಯಕುಬ್ಜೇ ಮಹಾನಾಸೀತ್ಪಾರ್ಥಿವಃ ಸುಮಹಾಬಲಃ |
ಗಾಧೀತಿವಿಶ್ರುತೋಲೋಕೇವನವಾಸಂಜಗಾಮಹ ||
ವನೇತುತಸ್ಯವಸತಃ ಕನ್ಯಾಜಜ್ಞೆಅಪ್ಸರಃ ಸಮಾ |
ಋಚೀಕೋಭಾರ್ಗವಸ್ತಾಂಚವರಯಾಮಾಸಭಾರತ ||

ಬಹು ಕಾಲಕ್ಕೆ ಹಿಂದೆ ಈ ಭರತ ಖಂಡದ ಪ್ರಸಿದ್ಧ ಪಟ್ಟಣಗಳಲ್ಲೊಂದಾದ "ಕನ್ಯಕುಬ್ಜ" ಎಂಬ ಪಟ್ಟಣದಲ್ಲಿ ಚಂದ್ರ ವಂಶದ ರಾಜಕುಮಾರನಾದ ಗಾಧಿ ಎಂಬುವನು ಧೊರೆತನ ಮಾಡುತ್ತಿದ್ದನು. ಆತನು ಅಪುತ್ರವಂತನಾಗಿದ್ದುದರಿಂದ ಸಂಸಾರದಲ್ಲಿ ಬೇಸರ ಪಟ್ಟು ಮಹಿಷಿಯೊಡನೆ ತಪಸ್ಸಿಗಾಗಿ ಅರಣ್ಯವನ್ನು ಸೇರಿದನು. ಬಹುಕಾಲಾನಂತರ ಈತನ ಭಾರ್ಯೆಯು ತಪಸ್ಸಿಗೆ ಪ್ರತಿಫಲವೋ ಎಂಬಂತೆ ಅಪ್ಸರ ಸ್ತ್ರೀಯಂತೆ ರೂಪಿನಿಂದ ಬೆಳಗುವ ಒಬ್ಬ ಮಗಳನ್ನು ಪೆತ್ತಳು. ಆ ಬಳಿಕವೂ ಆ ರಾಜ ದಂಪತಿಗಳು ಆ ವನದಲ್ಲಿಯೇ (ಆಶ್ರಮ) ಕುಟೀರದಲ್ಲಿಯೇ ನಿಂತುಬಿಟ್ಟರು. ಆ ರಾಜಪುತ್ರಿಯು ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಗೆ ಬರುತ್ತಿದ್ದಳು ಹೀಗಿರಲು ಒಂದು ದಿನ ಭೃಗು ಕುಲದ ಋಷಿವರ್ಯರಾದ ಋಚೀಕರೆಂಬ ಬ್ರಾಹ್ಮಣೋತ್ತಮರು ಗೃಹಸ್ಥಾಶ್ರಮ ಸ್ವೀಕಾರದಲ್ಲಿ ಇಚ್ಛೆಯುಳ್ಳವರಾಗಿ (ವಿವಾಹವಾಗಬೇಕೆಂದೆಣಿಸಿ) ಕನ್ಯಾರ್ಥಿಯಾಗಿ ಈ ಗಾಧಿ ಮಹಾರಾಜರ್ಷಿಗಳ ಆಶ್ರಮಕ್ಕೆ ಬಂದಿಳಿದರು. ರಾಜರ್ಷಿಯು ಆ ಬ್ರಹ್ಮರ್ಷಿಗಳನ್ನು ವಿಧ್ಯುಕ್ತ ರೀತಿಯಲ್ಲಿ ಸತ್ಕರಿಸಿ ಕುಶಲ ಪ್ರಶ್ನೆಯೊಡನೆ ಬಂದ ಉದ್ದೇಶವೇನೆಂದು ಕೇಳಿದ ಕೂಡಲೆ ಋಚೀಕರು ತಮ್ಮ ಉದ್ದೇಶವನ್ನು ತಿಳಿಸಿ ಆ ರಾಜಪುತ್ರಿಯನ್ನು ವಿವಾಹ ಮಾಡಿಕೊಡೆಂದು ಬೇಡಲಾಗಿ ಗಾಧಿಯು, ತನ್ನ ಸಂಕೇತವನ್ನು ಋಚೀಕರಿಗೆ ಈ ತೆರನಾಗಿ ತಿಳಿಸಿಬಿಟ್ಟನು. ಮಹರ್ಷಿಯೆ! ನಮ್ಮ ಪ್ರಾಚೀನರ ಕಾಲದಿಂದಲೂ ಸಂಕಲ್ಪದಲ್ಲಿದ್ದ ಒಂದು ಪದಾರ್ಥವನ್ನು ಶೇಖರಿಸಲು ಸಮಯವನ್ನು ಕಾಯುತ್ತಿದ್ದ ನನಗೆ ಈಗ ತಮ್ಮಂಥ ಮಹನೀಯರ ಸಮಾಗಮವು ಒದಗಿದ್ದು ಒಳ್ಳೆಯ ಶುಭ ಸೂಚನೆ ಎಂಬುವರಲ್ಲಿ ಸಂದೇಹವಿಲ್ಲ. ಆದರೆ ಅಂತಹ ಅಪೇಕ್ಷಿತ ವಸ್ತುವನ್ನು ಕೊಡಿರೆಂದು ಬ್ರಾಹ್ಮಣರನ್ನು ಕ್ಷತ್ರಿಯನಾದ ನಾನು ಯಾಚಿಸುವುದು ಯುಕ್ತವಲ್ಲ. ಇದರಂತೆಯೇ ತಮ್ಮಂಥ ಮಹನೀಯರಿಗೆ ಕನ್ಯಾದಾನ ಸ್ವೀಕಾರ ಮಾಡಲು

ಇಚ್ಛೆ ಇರುವಾಗ ಕೊಡಲಾರೆನೆಂದು ತಿಳಿಸುವುದು ಕೂಡ ನ್ಯಾಯವಲ್ಲ. ಹೀಗೆ ದಾನ ಪ್ರತಿಗ್ರಹಗಳಿಗೆ ಪಾತ್ರತೆಯ ವಿಷಯದಲ್ಲಿ ಬಹಳ ತೊಡಕುಗಳಿವೆ, ನಿಜ. ಆದರೂ ಈಗ ತಾವಾಗಿಯೇ ಮನಮೆಚ್ಚಿ ಕನ್ಯಾರ್ಥಿತ್ವವನ್ನು ಸ್ಪಷ್ಟಪಡಿಸಿದ ಮೇಲೆ ನನ್ನ ಅಪೇಕ್ಷಿತವನ್ನು ತಮ್ಮಂಥ ಮಹನೀಯರಿಂದ ಸಾಧಿಸಿಕೊಳ್ಳಲು ಸುಸಮಯ ವದಗಿದೆಯಾಗಿ ನಿಯಮ ರೂಪವಾದವರ ದಾನವು ಉಭಯರಿಗೂ ನ್ಯಾಯವಾಗಿ ಧರ್ಮ ಸಮ್ಮತವೇ ಆಗುವುದಾಗಿ ಈಗ ನಿರ್ದಾಕ್ಷಿಣ್ಯವಾಗಿ ನಾನು ನನ್ನ ಅಪೇಕ್ಷಿತ ವಸ್ತುವನ್ನು ತಮ್ಮಿಂದ ಸಂಗ್ರಹಿಸಿಕೊಳ್ಳಲು ಆಶಿಸುವೆನಾಗಿ ತಾವು ಪೂರ್ಣ ಕೃಪೆ ಇಟ್ಟು ನನ್ನ ಮನೋರಥವನ್ನು ನಡಿಸಿಕೊಟ್ಟು ತಮ್ಮ ಮನೋರಥದಂತೆ ನನ್ನ ಪ್ರಿಯ ಪುತ್ರಿಯ ಪಾಣಿಗ್ರಹಣವನ್ನು ಪಡೆಯಬಹುದಾಗಿ ಕೋರುವೆನು.

ನನ್ನ ಮನೋರಥವಾದರೋ, ಮೈ ಆದ್ಯಂತವೂ ಬಿಳುಪಾಗಿರುವ ಎಡ ಬಲ ಭಾಗಗಳಲ್ಲಿರುವ ಕಿವಿಗಳಲ್ಲಿ ಯಾವುದಾದರೂ ಒಂದು ಭಾಗದ ಕಿವಿಯು ಮಾತ್ರ ಕಪ್ಪು ಬಣ್ಣದ್ದಾಗಿರುವ (ಎಲ್ಲಕ್ಕೂ) ಒಂದೇ ಭಾಗದಲ್ಲಿ ಕಪ್ಪು ಬಣ್ಣವಿರುವ ಒಂದು ಸಾವಿರ ಕುದುರೆಗಳು ಬೇಕೆಂದೆ, ಇಂತಹ ಪ್ರಾಣಿಗಳನ್ನು ಒದಗಿಸಿ ಕೊಟ್ಟ ಮಹನೀಯರಿಗೆ, ಕನ್ಯಾದಾನ ಮಾಡಬೇಕೆಂದು ನನ್ನ ಸಂಕಲ್ಪ, ಎಂದರೆ ಅಂಥಾ ಸಾವಿರ ಕುದುರೆಗಳೇ ಪ್ರಕೃತ ಕನ್ಯಾ ಶುಲ್ಕ, ಕ್ಷತ್ರಿಯರು ಸ್ವಯಂವರ ಪದ್ಧತಿಯಲ್ಲಿ ತಮ್ಮ ಅಪೇಕ್ಷೆಯಂತೆ ಕನ್ಯಾ ಶುಲ್ಕವನ್ನು ನಿಯಮಿಸಬಹುದಲ್ಲವೆ? ಆದ್ದರಿಂದ ಈ ನಮ್ಮ ಅಪೇಕ್ಷೆಯನ್ನು ನಡಿಸಿಕೊಟ್ಟು ತಾವು ತಮ್ಮ ಕೋರಿಕೆಯಂತೆ ರಾಜಪುತ್ರಿಯನ್ನು ಪಾಣಿಗ್ರಹಣ ಮಾಡಿಕೊಳ್ಳಬಹುದು ಎಂದು ಹೇಳಿಬಿಟ್ಟನು.

ಈ ಮಾತನ್ನು ಕೇಳಿದೊಡನೆಯೇ ಋಚೀಕರು ಆಗಬಹುದು, ತಮ್ಮ ಕೋರಿಕೆಯಂತೆ ಲಕ್ಷಣವಾದ ಒಂದು ಸಾವಿರ ಕುದುರೆಗಳನ್ನು ತಮಗೆ ಸಮರ್ಪಿಸುವೆನು ರಾಜಪುತ್ರಿಯಾದ ಸತ್ಯವತಿಯು ನನ್ನ ಧರ್ಮ ಪತ್ನಿಯಾಗಬಹುದಷ್ಟೆ? ಎಂದನು. ರಾಜನು ಆಗಬಹುದು ಎಂದುತ್ತರವಿತ್ತನು. ಒಡನೆಯೇ ಋಷಿಯು ಈ ಬಗೆಯ ಕುದುರೆಗಳಿಗಾಗಿ ವರುಣನನ್ನು ಕುರಿತು ತಪಸ್ಸು ಮಾಡಿ ಪ್ರಾರ್ಥಿಸಿಕೊಳ್ಳಲು ವರುಣನು ಮೆಚ್ಚಿ ಈ ಬ್ರಾಹ್ಮಣನ ಕೋರಿಕೆಯಂತೆ ಒಂದು ಸಾವಿರ ಕುದುರೆಗಳನ್ನು ಅನುಗ್ರಹಿಸಿದನು. ವರುಣನು

ದಯಪಾಲಿಸಿದ ಕುದುರೆಗಳು ಕನ್ಯಾಕುಬ್ಜದ ಸಮೀಪದಲ್ಲಿರುವ ಗಂಗಾ ನದಿಯ ಮೂಲಕ ಎದ್ದು ಬಂದು ದಡವನ್ನು ಸೇರಿದವು. ಮಹರ್ಷಿಯು ಅವುಗಳನ್ನು ಹೊಡೆದುಕೊಂಡು ಬಂದು ಗಾಧಿ ಮಹಾರಾಜನಿಗೆ ಅರ್ಪಿಸಿದನು. ಇದರಿಂದ ಸಂತುಷ್ಟನಾದ ರಾಜರ್ಷಿಯು ಋಚೀಕನಿಗೆ ಸತ್ಯವತಿಯನ್ನು ಕೊಟ್ಟು ಉಚಿತ ರೀತಿಯಲ್ಲಿ ವಿವಾಹ ಮಹೋತ್ಸವವನ್ನು ಮಾಡಿಕೊಟ್ಟನು. ಆಗ ವರುಣಾದಿ ದೇವತೆಗಳೆಲ್ಲರೂ ಈ ಬ್ರಾಹ್ಮಣನ ಕೋರಿಕೆಯಂತೆ ವರನ ಕಡೆಯ ಬಂಧುಗಳಾಗಿ ನಿಂತು ಉತ್ಸವವನ್ನು ನೆರವೇರಿಸಿದರು. ಹೀಗೆ ಗಾಧಿಯ ಕೋರಿಕೆಯನ್ನು ನೆರವೇರಿಸಿ ಕೊಟ್ಟ ಮಹರ್ಷಿಯನ್ನೂ, ಗಾಧಿಯನ್ನೂ ದೇವತೆಗಳು ಕೊಂಡಾಡಿದರು. ಅನಂತರ ಧರ್ಮ ಪತ್ನಿಯೊಡನೆ ಋಷಿಯು ಗೃಹಸ್ಥ ಧರ್ಮವನ್ನು ಆಚರಿಸುತ್ತಾ ಸುಖವಾಗಿದ್ದನು. ಕೆಲ ಕಾಲಾನಂತರ ತನ್ನ ವಂಶಜನಾದ ಋಚೀಕನ ಈ ಕಾರ್ಯ ಕಲಾಪಗಳನ್ನು ಕೇಳಿ ಸಂತೋಷದಿಂದ ಈ ನೂತನ ದಂಪತಿಗಳನ್ನು ನೋಡಲೆಣಿಸಿ ಈ ಕುಲದ ಮೂಲ ಪುರುಷನಾದ ಭೃಗು ಮಹರ್ಷಿಯು ಋಚೀಕನ ಆಶ್ರಮಕ್ಕೆ ಬಂದಿಳಿದನು. ದಂಪತಿಗಳು ಹಿರಿಯರನ್ನು ವಂದಿಸಿ ತಮ್ಮ ಭಕ್ತಿಯನ್ನು ಪ್ರಕಾಶಪಡಿಸಲು ಸಂತುಷ್ಟನಾದ ಭೃಗುವು, ಸೊಸೆಯಾದ ಸತ್ಯವತಿಗೆ ಬೇಕಾದ ವರಗಳನ್ನು ಕೊಡುವುದಾಗಿ ವಾಗ್ದಾನ ಮಾಡಲು ಆಕೆಯು ಗೌರವದಿಂದ ಅಂಗೀಕರಿಸಿ ತನಗೂ ತನ್ನ ಜನನಿಗೂ ಸಹಾ ಪುತ್ರ ಲಾಭವಾಗಬೇಕೆಂದು ಬೇಡಿದಳು. (ತಾನೊಬ್ಬಳೇ ಮಗಳಾಗಿದ್ದು ಈಗ ವಿವಾಹಿತಳಾಗಿ ಪತಿಯೊಡನೆ ಸೇರಿಬಿಟ್ಟಳಾಗಿ, ತನ್ನ ಮಾತೆಯು ಅಪುತ್ರವತಿಯಾದಳಲ್ಲಾ ಎಂದು ಭಾವಿಸಿ ತನ್ನೊಡನೆ ತಾಯಿಗೂ ವರವನ್ನು ಕೇಳಿಕೊಂಡಳು ಎಂದು ತಾತ್ಪರ್ಯ). ಆಗ ಭೃಗು ಮಹರ್ಷಿಯು ಇವಳ ಅಭಿಮತವನ್ನು ತಿಳಿದು ತಮ್ಮ ವಂಶದ ಅಭಿವೃದ್ಧಿಗೆ ಅನುರೂಪವಾದ ವರವನ್ನು ಕೊಡಲೆಣಿಸಿ ಆಕೆಗೆ ಹೀಗೆಂದು ಅಪ್ಪಣೆ ಕೊಟ್ಟರು

ಎಲೌ, ಪತ್ನೆ ! ನಿನ್ನ ಇಷ್ಟದಂತೆ ನಿನಗೂ ನಿನ್ನ ತಾಯಿಗೂ ಪುತ್ರ ಸಂತಾನವನ್ನು ದಯಪಾಲಿಸುವೆನು. ನೀವಿಬ್ಬರೂ ನಾನು ಹೇಳಿದಂತೆ ನಡಿಸಿದಲ್ಲಿ ಇಬ್ಬರೂ ಫಲವನ್ನು ಪಡೆಯುವಿರಿ. ನೀವು ಋತುಸ್ನಾನ ಮಾಡಿದ ಅನಂತರ ಸುಮುಹೂರ್ತದಲ್ಲಿ ನಿಮ್ಮ ತಾಯಿಯು ಅಶ್ವತ್ಥ ವೃಕ್ಷವನ್ನೂ

ನೀನು ಅತ್ತಿ ಮರವನ್ನೂ ಆಲಿಂಗಿಸತಕ್ಕದ್ದು, ಮತ್ತೂ ಪುಣ್ಯಾಹಾದಿಗಳನ್ನು ನಡಿಸಿ ಪತಿಯೊಡನೆ ಪೂಸವನ ವ್ರತವನ್ನು ನಡೆಯಿಸಿಕೊಳ್ಳಿರಿ. ಇನ್ನೂ ನಾನು ಬಹಳ ಪ್ರಯಾಸಪಟ್ಟು ವಿರಾಟ್ ಪುರುಷನನ್ನು ಸೇವಿಸಿ ಆತನ ಪೂರ್ಣ ಸನ್ನಿಧಾನವನ್ನೊಳಗೊಂಡ ಚರುವನ್ನು ನಿಮಿಗಾಗಿ ರಚಿಸಿದ್ದೇನೆ. ಈ ಚರುವನ್ನು ನೀವುಗಳು ಭಕ್ತಿಯೊಡನೆ ಶೇವಿಸಿರಿ, ನಿಮ್ಮಗಳ ಕೋರಿಕೆಯು ಕೈಗೂಡುವುದು ಎಂದು ತಿಳಿಸಿ ಋಷಿಗಳು ಮಾಯವಾದರು. ಆ ಬಳಿಕ ಅವರ ಆಜ್ಞೆಯಂತೆ ಪೂಸವನಾದಿ ವ್ರತಗಳನ್ನು ಯಥೋಕ್ತವಾಗಿ ನಡಿಸಿದರೂ ಈ ತಾಯಿ ಮಕ್ಕಳುಗಳು ವೃಕ್ಷಗಳನ್ನಾಲಿಂಗಿಸುವುದರಲ್ಲಿಯೂ, ಚರುಪ್ರಾಶನದಲ್ಲಿಯೂ ವ್ಯತ್ಯಾಸ ಮಾಡಿಬಿಟ್ಟರು. (ಭಗವತ್ಪ್ರೇರಣೆಯೇ ಕಾರಣ) ಬಹು ಕಾಲಾನಂತರ ಭೃಗು ಋಷಿಗಳು ಈ ಅಂಶವನ್ನು ದಿವ್ಯ ಜ್ಞಾನದಿಂದ ತಿಳಿದು ಪುನಃ ಪ್ರತ್ಯಕ್ಷರಾಗಿ ಸೊಸೆಯನ್ನು ಕುರಿತು ಎಲೌ ಮಗಳೆ ನೀವುಗಳು ನನ್ನಾಜ್ಞೆಗೆ ವಿರೋಧವಾಗಿ ನಡೆದುದು ನಿಮ್ಮ ಯತ್ನದ್ದಲ್ಲ. ಭಗವದಿಚ್ಛೆಯೇ ಕಾರಣ. ನಿಮ್ಮ ತಾಯಿಯು ಈ ವ್ಯತ್ಯಾಸಕ್ಕೆ ಅವಕಾಶ ಕೊಟ್ಟಳು ಮಾಡುವುದೇನು ? ಇದರಂತೆ ಫಲದಲ್ಲಿ ನಿಮ್ಮಿಬ್ಬರಿಗೂ ವ್ಯತ್ಯಾಸವಾಗುವುದಾಗಿದೆ. ನಿನ್ನಲ್ಲಿ ಹುಟ್ಟತಕ್ಕ ಮಗನು ಹುಟ್ಟಿನಲ್ಲಿ ಬ್ರಾಹ್ಮಣನಾದರೂ ಕ್ಷತ್ರಿಯ ವೃತ್ತಿಯನ್ನವಲಂಬಿಸಿ ಜಗದ್ವಿಖ್ಯಾತನಾಗುವನು. ನಿನ್ನ ಜನನಿಯಲ್ಲಿ ಹುಟ್ಟುವ ಮಗನಾದರೋ ಹುಟ್ಟಿ ಕ್ಷತ್ರಿಯನಾದರೂ ಬ್ರಾಹ್ಮಣ ವೃತ್ತಿಯನ್ನು ಪಡೆದು ಮಹಾತ್ಮನೆನ್ನಿಸಿಕೊಳ್ಳುವನು. ಮತ್ತೂ ಪರಮ ಸತ್ಪುರುಷನಾಗುವನು. ಎಂದು ಭೃಗುವು ನುಡಿಯಲು ಸೊಸೆಯು ಭೀತಳಾಗಿ ಮಾವಂದಿರಲ್ಲಿ ಹೀಗಾಗದಂತೆ ಬೇಡಿಕೊಂಡಳು. ಅವಳಿಗೆ ಬ್ರಾಹ್ಮಣೋತ್ತಮನಾದ ಮಗನನ್ನು ಪಡೆಯಬೇಕೆಂದಾಸೆ, ದೈವ ಸಂಕಲ್ಪವೋ ಹೀಗಾಗಿದೆ ಮಾಡುವುದೇನು ? ಇದು ಸಾಧ್ಯವಿಲ್ಲವೆಂದು ಮಾವನವರು ನುಡಿಯಲು, ಆಕೆ (ಸತ್ಯವತಿಯು) ಹಾಗಾದರೆ ನನ್ನ ಮೊಮ್ಮಗನು ಹೀಗೆ (ಹುಟ್ಟು ಬ್ರಾಹ್ಮಣನಾಗಿ ಕ್ಷತ್ರ ವೃತ್ತಿಯನ್ನು ಪಡೆಯಲಿ) ಅಷ್ಟಾದರೂ ಅನುಗ್ರಹ ಮಾಡಿಕೊಡಬೇಕೆಂದು ಬೇಡಿಕೊಂಡಳು. ಆಗ ಆ ಮಹರ್ಷಿಗಳು ಆಕೆಯ ಕೋರಿಕೆಯನ್ನು ಅನುಮೋದಿಸಿ ಆಗಬಹುದೆಂದು ಅಪ್ಪಣೆ ಕೊಟ್ಟರು. ಅದರಂತೆ ಕೆಲ ಕಾಲದ ಮೇಲೆ

ಸತ್ಯವತೀ ಗರ್ಭಾಂಬುಧಿಯಲ್ಲಿ ಋಚೀಕರಿಂದ, ಪೂಜ್ಯರಾದ ಜಮದಗ್ನಿ ಋಷಿಗಳು ಜನಿಸಿ, ಈವರವು ಸಾರ್ಥಕವಾಗಲಿಕ್ಕಾಗಿ ಆಜಮದಗ್ನಿಗೆ ರೇಣುಕಾದೇವಿಯಲ್ಲಿ ಸಾಕ್ಷಾತ್ಪರಶುರಾಮರು ಅವತರಿಸಿದರು. ದುಷ್ಟ ಕ್ಷತ್ರಿಯರನ್ನು ನಾಶಗೊಳಿಸಿ ಧರ್ಮ ಸಂಸ್ಥಾಪನ ಮಾಡಲೋಸುಗ ಸಾಕ್ಷಾದ್ಭಗವಂತನೇ ಬ್ರಹ್ಮಾದಿಗಳ ಪ್ರಾರ್ಥನಾನುಸಾರ ಪರಶುರಾಮನಾಗಿ ಅವತರಿಸಿದ ಕಾರಣ ಋಷ್ಯವತಾರಗಳಲ್ಲಿ ಪರಶುರಾಮನು ಪ್ರಖ್ಯಾತನಾದ ಭಗವತ್ಸ್ವರೂಪನೆಂದು ಭಾವಿಸಬೇಕೆಂದು ಶ್ರೀ ಬಾದರಾಯಣರು ಭಾಗವತ ಪ್ರಥಮಸ್ಕಂಧದಲ್ಲಿ ಸೂಚಿಸಿರುವರು. ಸಪ್ತಮಸ್ಕಂಧದಲ್ಲಿ ಸಹಾ ಪ್ರಹ್ಲಾದನು ಶ್ರೀನೃಸಿಂಹ ಮೂರ್ತಿಯನ್ನು ಸ್ತುತಿಸುವ ವೇಳೆಯಲ್ಲೂ " ಇತ್ಥಂನೃತಿರ್ಯಗೃಷಿದೇವಝಷಾವತಾರೈಃ ಲೋಕಾನ್ವಿಭಾವಯಸಿಹಂಸಿ ಜಗತ್ಪ್ರತೀಪಾನ್ । ಧರ್ಮಂಮಹಾಪುರುಷಪಾಸಿಯುಗಾನುವೃತ್ತಂಛನ್ನಃ ಕಲೌಯದಭವಸ್ತ್ರಿಯುಗೋಥಸತ್ವಂ" ಎಂದು ಈ ಋಷಿರೂಪವನ್ನು ಹೊಗಳಿರುವನು.

ಈರೀತಿಯಲ್ಲಿ, ಸತ್ಯವತಿಯ ತಾಯ (ಗಾಧಿರಾಜನ ಮಹಿಷಿಯ) ಗರ್ಭದಲ್ಲಿ ಭೃಗುವರ್ಯರ ವರ ಪ್ರಭಾವದಿಂದ ಹುಟ್ಟಿದ ಪುತ್ರನೇ ವಿಶ್ವಾಮಿತ್ರನು. ಆತನು ಬೀಜ ಕ್ಷೇತ್ರಗಳ ಕ್ರಮದಲ್ಲಿ ಹುಟ್ಟು ಕ್ಷತ್ರಿಯನಾದರೂ ವರವನ್ನು ಅನುಗ್ರಹಿಸಿದ ಭೃಗುವರ್ಯರು ರಚಿಸಿಕೊಟ್ಟಿದ್ದ ಪುಂಸವನ ವ್ರತೋಪಯೋಗಿಯಾದ ಬ್ರಾಹ್ಮಣ ತೇಜಸ್ಸಿನಿಂದ ತುಂಬಿದ್ದ ಚರುಪ್ರಾಶನವನ್ನು ಗಾಧಿಯ ಭಾರ್ಯೆಯು ಮಾಡಿದ್ದಳಾಗಿ, ಇಲ್ಲಿ ಜನಿಸಿದ ಪುತ್ರನಲ್ಲಿ ಬ್ರಹ್ಮಣ್ಯವು ಸ್ವರೂಪತಃ ತುಂಬಿದ್ದು, ಅನಂತರ ಕಾರಣ ಒದಗಿದ ಒಡನೆಯೇ ಹೊರಹೊಮ್ಮಿ ವಿಶ್ವಾಮಿತ್ರನು ಬ್ರಹ್ಮರ್ಷಿಯಾಗುವಂತೆ ಮಾಡಿತು, ಎಂದು ಮುಖ್ಯ ತಾತ್ಪರ್ಯ. ಆದ್ದರಿಂದ ಸ್ವರೂಪಯೋಗ್ಯತೆಯೊಡನೆ ವರಾದಿ ಪ್ರಯತ್ನ ಲಾಭವು ಎಂದು ನಿಷ್ಪನ್ನಾರ್ಥವಾಗಿದೆ, ಇಂತಹ ವಿಶ್ವಾಮಿತ್ರರು ಆರಂಭದಲ್ಲಿ ಸ್ವಲ್ಪಕಾಲ ಕ್ಷತ್ರಿಯರಂತೆ ರಾಜ್ಯದಲ್ಲಿದ್ದವೇಳೆ ಅಕಸ್ಮಾತ್ ಒದಗಿದ ಚೈತ್ರಯಾತ್ರೆಯ ವೇಳೆ ಮಹಾನುಭಾವರಾದ ವಶಿಷ್ಠರ ಆಶ್ರಮಕ್ಕೆ ಬರಲವಕಾಶವಾಯಿತು. ಹೀಗೆ ದಯಮಾಡಿಸಿರುವ ಇವರನ್ನು ಸತ್ಕರಿಸಲು ವಶಿಷ್ಠರು ತಮ್ಮಲ್ಲಿದ್ದ ಹೋಮಧೇನುವಾದ ಕಾಮಧೇನುವಿಗೆ ತಿಳಿಸಿ ಅದನ್ನು ಪೂಜಿಸಲು ಅದು ರಾಜಯೋಗ್ಯವಾದ ಪದಾರ್ಥಗಳನ್ನು ಅನುಗ್ರಹಿಸಿತು.

ವಶಿಷ್ಟರು ಅತಿಥಿಯನ್ನು ಉತ್ತಮ ವಿಧಿಯಿಂದ ಪೂಜಿಸಿದರು. ಆಗ ಈ ಬಡಬ್ರಾಹ್ಮಣನು ತನಗೆ ನಡಿಸಿದ ಆತಿಥ್ಯದ ವೈಖರಿಯನ್ನು ನೋಡಿ ಚಿರ ಗಾಗಿ, ಇದನ್ನು ಯಾವುದರ ಸಹಾಯದಿಂದ ನಡಿಸಿದನೆಂದು ಪರೀಕ್ಷಿಸಲು ಹೊರಟಾಗ ಆಶ್ರಮದ ಒಂದು ಮೂಲೆಯಲ್ಲಿ ಒಂದು ಚಪ್ಪರದಲ್ಲಿ ಕಟ್ಟಿ ಹಾಕಿದ್ದ ಒಂದು ಹಸುವನ್ನು ನೋಡಿ ಓಹೋ ಇದರ ಮಹಿಮೆಯಿಂದ ವಶಿಷ್ಠರು ಇಂಥಾ ಔತಣ ಮಾಡಿದರೆಂದು ತಿಳಿದು ಈ ಹಸುವಾದರೋ ರತ್ನಪ್ರಾಯವಾದುದು, ರತ್ನಗಳಿಗಾದರೋ ರಾಜನು ನಿಧಿ, ಆಶ್ರಯನು, ಎಂದಮೇಲೆ ಈ ಹಸುವನ್ನು ನಾವೇ ಪಡೆಯಬೇಕೆಂದೆಣಿಸಿ ತಮ್ಮ ಆಳುಗಳಿಗೆ ಅದನ್ನು ಹಿಡಿದುಕೊಂಡು ಬನ್ನಿರೆಂದು ಹೇಳಿ ಹೊರಟನು ಬಳಿಕ, ಆಳುಗಳು ರಾಜಾಜ್ಞೆಯಂತೆ ವಶಿಷ್ಠರ ಹಸುವನ್ನು ಬಲಾತ್ಕಾರದಿಂದ ಎಳೆಯಲಾರಂಭಿಸಲು ಅದು ಮಹರ್ಷಿಗಳ ಆಶ್ರಮವನ್ನು ಬಿಡಲೊಲ್ಲದೆ ರೋದಿಸಲಾರಂಭಿಸಿತು. ಕಡೆಯಲ್ಲಿ ವಶಿಷ್ಠರ ಆಜ್ಞೆಯಂತೆ ಸೈನ್ಯವನ್ನು ಸೃಷ್ಟಿಸಿಕೊಟ್ಟಿತು. ವಶಿಷ್ಠ ವಿಶ್ವಾಮಿತ್ರರಿಗೆ ಈ ಕಾಮಧೇನುವಿನ ನಿಮಿತ್ತವಾಗಿ ದೊಡ್ಡ ಯುದ್ಧವು ನಡೆದು ಪರಸ್ಪರ ವಿರೋಧವೇ ಬೆಳೆಯಿತು. ಆದರೂ ವಶಿಷ್ಠರಿಗೇ ಜಯವಾಯಿತು. ಅನಂತರ ವಿಶ್ವಾಮಿತ್ರರಿಗೆ ಕ್ಷಾತ್ರ ತೇಜಸ್ಸಿಗಿಂತ ಬ್ರಹ್ಮ ತೇಜಸ್ಸೇ ಮೇಲಾದುದೆಂಬ ಭಾವವು ಒಳಗೆ ಸಂಸ್ಕಾರ ರೂಪದಿಂದ ಅಡಗಿದ್ದುದು ವಶಿಷ್ಠರ ತೇಜೋ ವಿಶೇಷ ದರ್ಶನಾನಂತರ ಉದ್ಬುದ್ಧವಾಗಿ ನಾವು ನ್ಯಾಯವಾಗಿ ಇಂಥ ಬ್ರಹ್ಮ ತೇಜಸ್ಸನ್ನು ಪಡೆಯದ ಮೇಲೆ ಜೀವಿಸಿ ಫಲವಿಲ್ಲವೆಂದು ದೃಢವಾಗಿ ಸಂಕಲ್ಪಿಸಿ " ಧಿಗ್‌ಬಲಂ ಕ್ಷತ್ರಿಯಬಲಂ ಬ್ರಹ್ಮ ತೇಜೋಬಲಂ ಬಲಂ " ಎಂದು ಹಠ ಹಿಡಿದು ಬ್ರಾಹ್ಮಣ್ಯ ಲಾಭಕ್ಕಾ ಅದರಲ್ಲಿಯೂ ಬ್ರಹ್ಮರ್ಷಿ ಎನ್ನಿಸಿಕೊಳ್ಳಲು ಅತ್ಯದ್ಭುತ ತಪಸ್ಸುಗಳನ್ನಾಚರಿಸಿ ಆಗಾಗ ಒದಗಿದ ತಪೋವಿಘ್ನಗಳನ್ನೆಲ್ಲಾ ಸ್ವಶಕ್ತಿಯಿಂದ ಪರಿಹರಿಸಿಕೊಂಡು ಕಡೆಯಲ್ಲಿ ಬ್ರಹ್ಮದೇವರೇ ಪ್ರತ್ಯಕ್ಷರಾಗಿ ಬ್ರಾಹ್ಮಣ್ಯವನ್ನು ಪಡೆದಿದ್ದಿ, ವಶಿಷ್ಠರೂ ನಿನ್ನನ್ನು ಬ್ರಹ್ಮರ್ಷಿ ಎಂದು ಕರೆವರು ಎಂದು ವರವನ್ನು ಅನುಗ್ರಹಿಸಿದ ಮೇಲೆ ತಪಸ್ಸನ್ನು ಮುಗಿಸಿಕೊಂಡು ಬ್ರಹ್ಮರ್ಷಿಗಳಾದರು. ಹೀಗೆ ನಡೆದ ಇವರ ಮಹಾ ಚರಿತ್ರೆಯು ಶ್ರೀಮನ್ ಮಹಾಭಾರತ ರಾಮಾಯಣಗಳಲ್ಲಿ ಹೆಚ್ಚು ವಿಸ್ತಾರವಾಗಿ ನಿರೂಪಿತವಾಗಿದೆ. ಇಲ್ಲಿಗೆ ಆವಶ್ಯಕವಾದ

ಷ್ಟನ್ನು ಮಾತ್ರ ವಾಚಕರ ಅವಗಾಹನೆಗೆ ತರಲಾಗಿದೆ. ಇಂತಹ ವಿಶ್ವಾಮಿತ್ರರು ಶ್ರೀರಾಮ ಲಕ್ಷ್ಮಣರ ಮೂಲಕ ದುಷ್ಟನಿಗ್ರಹ ಕಾರ್ಯವನ್ನು ಮಾಡಿಸಬೇಕೆಂದೆಣಿಸಿ ಅವರನ್ನು ತಮ್ಮೊಡನೆ ಕರೆದೊಯ್ಯಲು ದಶರಥನ ಆಸ್ಥಾನಕ್ಕೆ ದಯಮಾಡಿಸಿದರೆಂದು ಮುಖ್ಯಾಭಿಪ್ರಾಯ, ಹೀಗೆ ಯೋಗ್ಯತೆಯು ಇದ್ದಲ್ಲಿ ಶಲ್ಪಾಪಕ್ಕೆ ಉತ್ಕಟ ಪ್ರಯತ್ನ. ಪ್ರಯತ್ನಕ್ಕೆ ತಕ್ಕ ಫಲಗಳುಂಟೆಂದು ಶಾಸ್ತ್ರ ಸಮ್ಮತವಾದ ಅಭಿಪ್ರಾಯವೆಂದು ತಾತ್ಪರ್ಯ. "ಸತುವವ್ರೈವರಂರಾಜನ್ ಸ್ಯಾಮಹಂಬ್ರಾಹ್ಮಣಸ್ತ್ವತಿ | ತಥೇತಿಚಾಬ್ರವೀತ್ ಬ್ರಹ್ಮಾ ಸರ್ವಲೋಕಪಿತಾಮಹಃ" ಎಂಬ ಮಹಾ ಭಾರತ ಗದಾಪರ್ವ ವಚನವೂ ಇದೇ ಅರ್ಥವನ್ನು ಸಾಧಿಸುತ್ತಿರುವುದು.

**ಶ್ಲೋಕ|| ತೇನಾರ್ಥಿತೋಯಜ್ಞರಿರಕ್ಷಯೈವ ಕೃಚ್ಛ್ರೇಣಪಿತ್ರಾಪ್ಯಭಯಾದ್ವಿಸೃಷ್ಟಃ | ಜಗಾಮರಾಮಃ ಸಹಲಕ್ಷ್ಮಣೇನ ಸಿದ್ಧಾಶ್ರಮಂಸಿದ್ಧಜನಾಭಿವಂದ್ಯಃ ||೫||**

ತಾತ್ಪರ್ಯ.—ದಶರಥನ ಸಭೆಗೆ ಬಂದ ವಿಶ್ವಾಮಿತ್ರರ ಉದ್ದೇಶ್ಯವೇನೆಂಬುದನ್ನು ಈ ಶ್ಲೋಕವು ನಿರೂಪಿಸುವುದು. ಮುಖ್ಯವಾಗಿ ಆಗ ವಿಶ್ವಾಮಿತ್ರರಿಂದ ಭಗವತ್ಪ್ರೀತಿಗಾಗಿ ಆಚರಿಸಲ್ಪಡುತ್ತಿದ್ದ ಯಜ್ಞಕಾರ್ಯಗಳಿಗೆ ಕೆಲವು ರಾಕ್ಷಸರು ವಿಘ್ನಮಾಡುತ್ತಿದ್ದುದರಿಂದ ಅವರನ್ನು ಶಿಕ್ಷಿಸಿ, ತಮ್ಮ ಯಜ್ಞ ಕಾರ್ಯವನ್ನು ಸುಸೂತ್ರವಾಗಿ ನೆರವೇರಿಸಿಕೊಳ್ಳಲು ಶ್ರೀರಾಮ ಲಕ್ಷ್ಮಣರನ್ನು ಸಹಾಯಕ್ಕಾಗಿ ಅಪೇಕ್ಷಿಸಿ ಬಂದ ವಿಶ್ವಾಮಿತ್ರರಿಂದ ರಾಮ ಲಕ್ಷ್ಮಣರನ್ನು ನನ್ನೊಡನೆ ಕಳುಹಿಸಿಕೊಡೆಂದು ಸೂಚಿಸಲ್ಪಟ್ಟ, ದಶರಥನಿಂದ ರಾಮ ಲಕ್ಷ್ಮಣರ ಅಗಲುವಿಕೆಯನ್ನು ಸಹಿಸಲಾರದ ನಿಮಿತ್ತ ಬಹು ಕಷ್ಟದಿಂದ (ವಿಶ್ವಾಮಿತ್ರರು ಕೋಪಗೊಂಡು ಶಾಪ ಕೊಟ್ಟಾರೆಂಬ ಭಯದಿಂದಲೂ) ಬೀಳ್ಕೊಟ್ಟವನಾದ, ಅಣಿಮಾದಿಯೋಗ ಸಿದ್ಧಿಯನ್ನು ಪಡೆದ ಯೋಗಿವರ್ಯರಿಂದ ಸೇವಿಸಲರ್ಹನಾದ ಶ್ರೀರಾಮನು ತಮ್ಮನಾದ ಲಕ್ಷ್ಮಣನೊಡನೆ ಸಿದ್ಧಾಶ್ರಮವನ್ನು ಕುರಿತು ಪ್ರಯಾಣ ಮಾಡಿದನು.

ವಿಶೇಷಾರ್ಥ.—'ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮವಿಭಾಗಶಃ' ಎಂಬ ಗೀತಾ ವಚನಾನುಸಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ,

ಶೂದ್ರಾದಿ ನಾಲ್ಕು ವರ್ಣಗಳೂ ಅವುಗಳಿಗೆ ತಕ್ಕ ಗುಣ, ಕ್ರಿಯಾದಿಗಳೂ ಸೃಷ್ಟಿಕಾಲ ಮೊದಲು ನಡೆದು ಬರುತ್ತಿವೆ. "ಯಜ್ಞದಾನತಪಃ ಕರ್ಮನತ್ಯಾಜ್ಯಂ ಕಾರ್ಯಮೇವತತ್ ॥ ಕುರ್ವನ್ನೇವೇಹಕರ್ಮಾಣಿಜಿಜೀವಿಷೇಚ್ಛತಂ ಸಮಾಃ" ಇತ್ಯಾದಿ ಪ್ರಮಾಣಗಳಿಂದ ವರ್ಣಾಶ್ರಮ ಧರ್ಮಗಳು ಅತ್ಯವಶ್ಯ ಕರ್ತವ್ಯಗಳೆಂದು ಸಾಧಿಸಲ್ಪಟ್ಟವೆಯಾಗಿ, ಪ್ರಾಚೀನರು ಈಗಿನಂತೆ ಈ ಧರ್ಮಗಳಿಗೆ ಲೋಪ ತರದೇ ಅನುಷ್ಠಿಸುತ್ತಿದ್ದರು. ಆಗಿನ ರಾಜರುಗಳೂ ವರ್ಣಾಶ್ರಮ ಧರ್ಮ ರಕ್ಷಕರಾಗಿದ್ದರು. ಬ್ರಾಹ್ಮಣ, ಕ್ಷತ್ರಿಯರಿಗೆ ಅಂಗಾಂಗಿ ಭಾವವು ಶಾಸ್ತ್ರಸಿದ್ಧವಾದುದಾಗಿ ಒಬ್ಬೊಬ್ಬರೇ ಆತ್ಮ ರಕ್ಷಣೆ, ಧರ್ಮ ರಕ್ಷಣೆಗಳನ್ನು ಮಾಡಿಕೊಳ್ಳಲಸಾಧ್ಯವಾದ್ದರಿಂದ ಧರ್ಮ ನಿರತರಾದ ಬ್ರಾಹ್ಮಣರನ್ನೂ ಅವರ ಧರ್ಮಗಳನ್ನೂ ರಾಜರು ರಕ್ಷಿಸಬೇಕಾದ್ದು ಅವರಿಗೆ ಕರ್ತವ್ಯ, ಆದ್ದರಿಂದಲೇ ಅವರು ಶಸ್ತ್ರಪಾಣಿಗಳಾಗಿ ಲೋಕದಲ್ಲಿ ಎಲ್ಲಾ ಕಡೆಯಲ್ಲಿಯೂ ಸುತ್ತುತ್ತಾ ಕಷ್ಟಕ್ಕೆ ಶಿಕ್ಕಿದವರನ್ನು ಕಷ್ಟದಿಂದ ತಪ್ಪಿಸಿ ಸಲಹುತ್ತಾ ದಸ್ಯುಗಳನ್ನೂ ಅಸುರರನ್ನೂ ದಂಡಿಸುತ್ತಾ ತಮಗೆ ಈಶ್ವರನಿಂದ ದಯಪಾಲಿಸಲ್ಪಟ್ಟ ದಂಡಾಧಿಕಾರವನ್ನು ಸಾರ್ಥಕಪಡಿಸಿಕೊಂಡು ಪ್ರತಿಯೊಂದು ವರ್ಣಾಶ್ರಮಕ್ಕೂ ಸಾಂಕರ್ಯವಿಲ್ಲದಂತೆ ಬಹು ಎಚ್ಚರಿಕೆಯಿಂದ ಮೇಲ್ವಿಚಾರಣೆಯನ್ನು ನಡಿಸುತ್ತಿದ್ದುದರಿಂದ ವರ್ಣಾಶ್ರಮಗಳಲ್ಲಿ ಪರಸ್ಪರ ವೈಮನಸ್ಯ ವಿವಾದಗಳಿಗೂ ಸಹ ಅವಕಾಶವಿರಲಿಲ್ಲ. ಈ ನಿಯಮವನ್ನನುಸರಿಸಿ ಸ್ವಧರ್ಮಾಚರಣೆಯಲ್ಲಿ ನಿರತರಾದ ವಿಶ್ವಾಮಿತ್ರರು ಭಗವತ್ಸೇವಾರ್ಥವಾಗಿ, ದರ್ಶೇಷ್ಟಿ ಪೌರ್ಣಿಮಾಸೇಷ್ಟಿ ಅತಿರಾತ್ರ, ಜ್ಯೋತಿಷ್ಟೋಮಾದಿ ಯಾಗಗಳನ್ನು ಆಗಾಗ ನಡಿಸುತ್ತಿದ್ದರು. ಈಸತ್ಕರ್ಮಗಳಿಗೆ ದಸ್ಯುಪ್ರಾಯರಾದ ಸುಬಾಹು, ಮಾರೀಚ ಮೊದಲಾದ ರಾಕ್ಷಸರು ವಿಘ್ನ ಮಾಡಲಾರಂಭಿಸಲು ಅದರ ಪರಿಹಾರಕ್ಕೆ ಅವರನ್ನು ಶಿಕ್ಷಿಸುವುದೂ ಕೊಲ್ಲುವುದೂ, ಆವಶ್ಯಕವಾಗಿ ಕಂಡುಬಂದು ಆ ಕೆಲಸವು ಕ್ಷತ್ರಿಯಸದಾದ್ದರಿಂದ ತಮ್ಮ ತಪೋರಣ್ಯ ಭಾಗವು ಯಾವ ರಾಜನ ಆಳ್ವಿಕೆಗೆ ಶೇರಿದ್ದೋ ಆ ರಾಜನನ್ನು ತಮ್ಮ ಸಹಾಯಕ್ಕೆ ಕೋರಬೇಕಾಗಿ ಬಂದುದರಿಂದ ಕೋಸಲ ದೇಶದ ಧೊರೆಯಾದ ದಶರಥನ ಬಳಿಗೆ ಬರಬೇಕಾಗಿ ಬಂತು. ಆದರೆ ದಶರಥನನ್ನು ಬಿಟ್ಟು ಬಾಲಕರಾದ ರಾಮಾದಿಗಳನ್ನು ಏಕೆ ಅಪೇಕ್ಷಿಸಿದರೆಂದಲ್ಲಿ, ಆಗ ದಶರಥನು ಬಹಳ ವಯೋವೃದ್ಧನಾ

ದ್ದರಿಂದಲೂ, ರಾಮಲಕ್ಷ್ಮಣರು ಬಾಲಕರಾದರೂ ದೇವಾಂಶರಾದ್ದರಿಂದ ರಾಕ್ಷಸರ ನಿಗ್ರಹ ವ್ಯಾಪಾರವು ಅವರಿಗೆ ನ್ಯಾಯಪ್ರಾಪ್ತವಾದ ಧರ್ಮವೆಂದೂ ಬಾಲ್ಯದಲ್ಲಿಯೇ ಜಯಶಾಲಿಗಳಾಗಿ ಪ್ರಸಿದ್ಧಿಗೆ ಬರುವುದರಿಂದ ಉತ್ತರತ್ರ ದುಷ್ಟನಿಗ್ರಹ ಶಿಷ್ಟಪರಿಪಾಲನಾ ರೂಪವಾದ ಕ್ಷಾತ್ರಧರ್ಮದಲ್ಲಿ ಅವರಿಗೆ ಉತ್ಸಾಹವು ಬೆಳೆಯುತ್ತಾ ಬರಲವಕಾಶವಾಗುವುದೆಂದೂ, ಈ ಶಿರನಾದ ಅದ್ಭುತ ಕಾರ್ಯವನ್ನು ನಡಿಸಿದರೆಂಬ ವಾರ್ತೆಯನ್ನು ಕೇಳಿದಮೇಲೆ ಇತರ ರಾಜರುಗಳಲೀ, ರಾಕ್ಷಸರುಗಳಾಗಲೀ ಇವರನ್ನು ಮುಂದಕ್ಕೆ ಎದುರಿಸಲಾರರಾಗಿ ಆ ಮೂಲಕ ಬಲಪ್ರಾಧಾನ್ಯದಿಂದ ಲೋಕದಲ್ಲಿ ಇವರುಗಳು ಸರ್ವೋತ್ತಮರೆನ್ನಿಸಿಕೊಳ್ಳಲೀ ಎಂಬ ಈ ಅನೇಕ ಭಾವಗಳಿಂದ ಕೂಡಿ ವಿಶ್ವಾಮಿತ್ರರು ರಾಮಲಕ್ಷ್ಮಣರನ್ನು ತಮ್ಮ ಕಾರ್ಯದಲ್ಲಿ ನೆರವಾಗಲೋಸುಗ ಕರೆದುಕೊಂಡು ಹೋಗಬೇಕೆಂದು ದಶರಥನನ್ನು ಪ್ರಾರ್ಥಿಸಿದ್ದಾರೆ. ಅಷ್ಟೇ ಅಲ್ಲದೆ, ತಮ್ಮ ಯಜ್ಞಾದಿ ಸದ್ಧರ್ಮಗಳನ್ನು ಪರೋಕ್ಷವಾಗಿ ಸ್ವಾಮಿಯಲ್ಲಿ ಇದು ವರಿವಿಗೂ ಸಮರ್ಪಿಸುತ್ತಿದ್ದೆವು, ಈಗ ಆ ನಮ್ಮ ಉಪಾಸ್ಯಮೂರ್ತಿಯು ಈ ಲೋಕದಲ್ಲಿ ಪ್ರತ್ಯಕ್ಷನಾಗಿ ಅವತರಿಸಿ ನಮ್ಮ ಸೇವೆಗೆ ಪಾತ್ರನಾಗಲು ಸಿದ್ಧನಾಗಿರುವನಾಗಿ ನಾವು ಅವನನ್ನು ಕರೆದು ತಂದಲ್ಲಿ, ಅನಿಷ್ಟನಿವೃತ್ತಿಯೊಡನೆ ಇಷ್ಟಪ್ರಾಪ್ತಿಗೂ ಅವಕಾಶವಾಗುವದೆಂಬ ಯೋಚನೆಗಳಿಂದಲೇ ವಿಶ್ವಾಮಿತ್ರರು ರಾಮಲಕ್ಷ್ಮಣರನ್ನಪೇಕ್ಷಿಸಿದರೆಂಬ ಭಾವ. ಆದ್ದರಿಂದಲೇ "ಅಹಂವೇದ್ಮಿಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ" ಎಂಬ ತಮ್ಮ ಮಾತಿನಿಂದ ಈ ಮನೋಭಾವವನ್ನು ಅವರು ಆ ರಾಜಸಭೆಯಲ್ಲಿ ವ್ಯಕ್ತಪಡಿಸಿದ್ದಾರೆಂಬುದು ಶ್ರೀಮದ್ರಾಮಾಯಣದಿಂದ ಸಿದ್ಧವಾಗಿರುವುದು. ಈ ಅಂಶಗಳನ್ನು "ಸಿದ್ಧಜನಾಭಿವಂದ್ಯಃ" ಎಂಬ ಶ್ರೀಮದಾಚಾರ್ಯರ ಒಂದೇಮಾತು ಸ್ಪಷ್ಟಪಡಿಸಿರುವುದು. ಯೋಗಶಾಸ್ತ್ರದಲ್ಲಿ—ಅಣಿಮಾ ಮಹಿಮಾ, ಗರಿಮಾ ಲಘಿಮಾ ಪ್ರಾಪ್ತಿಃಪ್ರಾಕಾಮ್ಯಂ, ಈಶಿತ್ವಂ ವಶಿತ್ವಂ ಮೊದಲಾದವುಗಳು ಸಿದ್ಧಿಸಬೇಕಾದರೆ ಯಮ ನಿಯಮಾದ್ಯಷ್ಟಾಂಗ ಯೋಗಕ್ರಮವು ಆವಶ್ಯಕವೆಂದು ಹೇಳಿದೆ. ವಿಶ್ವಾಮಿತ್ರಾದಿಗಳು ಅಂಥಾ ಯೋಗಾಭ್ಯಾಸ ಧುರೀಣರೆನ್ನುವುದರಲ್ಲಿ ಸಂಶಯವಿಲ್ಲ. ಅಂತಃವರಿಗೆ ಈ ಸ್ವಾಮಿಯು ವಶ

ವರ್ತಿಯಾದ ಬಳಿಕ ಯೋಗಸಿದ್ಧಿಯಲ್ಲಿ ಸಂದೇಹ ಉಂಟೇ ? ಇದೂ ಅಲ್ಲದೆ ದೈವಸಹಾಯವನ್ನು ಕೋರುವುದೇ ಸತ್ಪುರುಷರ ಸ್ವಭಾವ. ತಾವೇ ತಾವು ಎಂಬುದೇ ದುರ್ಜನರ ಸ್ವಭಾವ, ಈ ಎರಡು ಸ್ವಭಾವವೂ ಲೋಕದಲ್ಲುಂಟೆಂಬುದರ ಮೂಲಕ ನಾನು ನನ್ನದು ಎಂಬ ದುರಭಿನಿವೇಶವನ್ನು ಬಿಟ್ಟು ಸಕಲ ಕರ್ತವ್ಯಗಳಲ್ಲೂ " ನಾಹಂಕರ್ತಾ ಹರಿಃ ಕರ್ತಾ " ಎಂಬ ಭಾವನೆಯನ್ನು ಭಗವದ್ಭಕ್ತರು ಪಡೆದು ಸ್ವಧರ್ಮನಿರತರಾಗಲಿ ಎಂಬ ಭಾವನೆಯನ್ನು ಈ ವಿಶ್ವಾಮಿತ್ರರ ಯಜ್ಞ ರಕ್ಷಣಕಾರ್ಯಕ್ರಮದಿಂದ ತಿಳಿಸುತ್ತಾರೆಂದು ಮುಖ್ಯ ತಾತ್ಪರ್ಯ. " ಸ್ವಧರ್ಮೆ ನಿಧನಂ ಶ್ರೇಯಃ ಪರಧರ್ಮೋಭಯಾವಹಃ " ಎಂಬ ಗೀತಾ ವಚನವು ಯಾವ ಧರ್ಮವನ್ನು ಕರ್ತವ್ಯವೆಂದು ಸಾಧಿಸುತ್ತದೆಯೋ ಅಂಥಾ ಸ್ವಧರ್ಮಾಚರಣೆಯು ಈಚೆಗೆ ಕಲ್ಪಿತವಾದ್ದಲ್ಲ. ಅನಾದಿಕಾಲ ಸಿದ್ಧವು ಎಂಬುದನ್ನು ಬಹು ಯುಗಗಳ ಹಿಂದೆ ನಡೆದ ಈ ವಿಶ್ವಾಮಿತ್ರರ ಚರಿತ್ರವು ನಿರೂಪಿಸುತ್ತದೆಯಾಗಿ ರಾಮಾಯಣ ಕಥಾಭಾಗದ ನಿರ್ಣಯವು ಅತಿಶಯಾರ್ಥದ್ಯೋತಕವೆಂಬುದನ್ನು ಭಾವಿಸಿಯೇ ಈ ನಿರ್ಣಯದಲ್ಲಿ ಶ್ರೀಮದಾಚಾರ್ಯರು ಕೈಹಾಕಿರುತ್ತಾರಾಗಿ ಈ ಗ್ರಂಥೋಕ್ತಕ್ರಮದಿಂದ ತಾತ್ಪರ್ಯವನ್ನು ಗ್ರಹಿಸುವುದೇ ಶ್ರೀಹರಿಗೆ ಸಮ್ಮತವಾಗಿ ಈ ತೆರನಾದ ತಾತ್ಪರ್ಯ ಜ್ಞಾನಿಯು ಮುಕ್ತಿಯೋಗ್ಯನಾಗುವನೆಂದು ಅಭಿಪ್ರಾಯ.

**ಶ್ಲೋಕ ॥ ಅನುಗ್ರಹಾರ್ಥಂಸ ಋಷೇರವಾಪಸಲಕ್ಷ್ಮಣೋಸ್ತ್ರಂ ಮುನಿತೋಹಿಕೇವಲಂ । ವವಂದಿರೇ ಬ್ರಹ್ಮಮುಖಾಃ ಸುರೇಶಾಃ ತಮಸ್ತ್ರರೂಪಾಃ ಪ್ರಕಟಾಃ ಸಮೇತ್ಯ ॥೬॥**

ತಾತ್ಪರ್ಯ.—ವಿಶ್ವಾಮಿತ್ರರ ಪ್ರಾರ್ಥನೆಯಂತೆ ಅವರ ಸಿದ್ಧಾಶ್ರಮವನ್ನು ಕುರಿತು ಪ್ರಯಾಣಮಾಡಿ ಬರುತ್ತಿರುವ ಶ್ರೀರಾಮ ಲಕ್ಷ್ಮಣರು ಮಾರ್ಗದಲ್ಲಿ ಕ್ಷುತ್ ಪಿಪಾಸೆಗಳಿಂದ ಬಳಲಿಯಾರೆಂಬ ಶಂಕೆಯಿಂದ ಋಷಿವರ್ಯನು ಅವರೀರ್ವರಿಗೂ " ಬಲಾ—ಅತಿಬಲಾ " ಎಂಬ, ಎರಡು ಮಂತ್ರಗಳನ್ನುಪದೇಶಮಾಡಿದನು. ಅನಂತರ ರಾಕ್ಷಸರನ್ನು ಕೊಲ್ಲಲನುಕೂಲನಾದ, ದೇವತಾಭಿಮಾನಕ್ಕೆ ಪಾತ್ರವಾದ ಶಸ್ತ್ರಾಸ್ತ್ರಗಳ ಪ್ರಯೋಪಸಂಹಾರ

ವಿಧಿಗಳಿಂದ ಶಾಸ್ತ್ರರಹಸ್ಯಗಳೆನಿಸಿದ ದಿವ್ಯಮಂತ್ರಗಳನ್ನು ಉಪದೇಶಮಾಡತೊಡಗಲು, ಶ್ರೀರಾಮಚಂದ್ರನು ಲಕ್ಷ್ಮಣನಿಂದ ಕೂಡಿ ಆ ಮಂತ್ರಗಳನ್ನು ಋಷಿಗಳಲ್ಲಿ ತಾನು ಮಾಡಬೇಕಾದ ಅನುಗ್ರಹಗಳಲ್ಲಿ ಹೀಗೆ ಮಂತ್ರೋಪದೇಶವನ್ನು ಪಡೆಯುವದೂ ಒಂದು ಅನುಗ್ರಹವೆಂಬ ಉದ್ದೇಶದಿಂದ ಪರಿಗ್ರಹಿಸಿದನು ಎಂದು ತಾತ್ಪರ್ಯ, ಮತ್ತೂ ಆ ಕೂಡಲೇ ಸಕಲ ದೇವತಾ ಮಂತ್ರಪ್ರತಿಪಾದ್ಯರಾದ ದೇವತೆಗಳು ( ಬ್ರಹ್ಮಾದಿಗಳು ) ಮೂರ್ತಿಮಂತರಾಗಿ ಶ್ರೀರಾಮನ ಸನ್ನಿಧಿಗೆ ಬಂದು ಋಷಿಗಳ ಇದಿರಿನಲ್ಲಿಯೇ ತಮ್ಮ ಸಮಸ್ತದೇವತಾಮಂಡಲಿಗೂ ನಾಥನೆನಿಸಿ ತತ್ತದ್ರೂಪನಾಗಿ ಸಮಸ್ತ ಬ್ರಹ್ಮಾದಿಗಳಲ್ಲಿಯೂ ಸನ್ನಿಹಿತನಾಗಿದ್ದು, ಜಗದ್ರಕ್ಷಣೆಯನ್ನು ಮಾಡುವ, ಶ್ರೀಮನ್ನಾರಾಯಣನೇ ಈತನೆಂಬ ಭಾವನೆಯನ್ನುಂಟುಮಾಡುತ್ತಾ ಶ್ರೀರಾಮನನ್ನು ವಂದಿಸಿ ತಾವುಗಳು ಆತನ ಆಜ್ಞಾಧಾರಕರಾಗಿರುವೆವೆಂದು ವಿಜ್ಞಾಪಿಸಿದರು.

ವಿಶೇಷಾರ್ಥ.—ಲೋಕದಲ್ಲಿ ವಿದ್ಯೋಪದೇಶಕರಾದ ಮಹಾತ್ಮರು ತಮ್ಮೊಡನೆ ಶಿಷ್ಯರನ್ನು ಕರೆದೊಯ್ಯುವಾಗ ಮೊದಲು ಅವರಿಗೆ ದೇಹಶ್ರಮವಾಗದಿರಲಿಕ್ಕಾಗಿ ಉಪಹಾರಾದಿಗಳನ್ನೊದಗಿಸಿಕೊಟ್ಟು ಅನಂತರ ತಾವು ಕಲಿಸಬೇಕೆಂದಿರುವ ವಿದ್ಯೋಪದೇಶಮಾಡುವುದು ವಾಡಿಕೆ. ಹಾಗೆ ಲೋಕರೂಢಿಯನ್ನು ಅನುಸರಿಸಿ ವಿಶ್ವಾಮಿತ್ರರು ರಾಮಲಕ್ಷ್ಮಣರಿಗೆ " ಬಲಾ–ಅತಿಬಲ " ಎಂಬ ವಿದ್ಯಗಳನ್ನು ದಾನಮಾಡಿದ್ದಾಗಿಯೂ ಅನಂತರ ಜೃಂಭಕಾದ್ಯಸ್ತ್ರಗಳನ್ನುಪದೇಶಮಾಡಿದ್ದಾಗಿಯೂ ವಾಲ್ಮೀಕಿಗಳು ತಮ್ಮ ಗ್ರಂಥದಲ್ಲಿ ಹೇಳಿರುತ್ತಾರೆ. ಹಾಗೆ ಶ್ರೀರಾಮನ ವಿಷಯದಲ್ಲಿ ಲೋಕದ ಬಾಲಕರಂತೆ ಅಜ್ಞತೆಯನ್ನು ವಿಶ್ವಾಮಿತ್ರರು ಭಾವಿಸಿಯಾರೆ ? ಸ್ವತಃ ನಿತ್ಯತೃಪ್ತನೆನ್ನಿಸಿದ ಶ್ರೀಹರಿಗೆ ಕ್ಷುತ್ಪಿಪಾಸೆ ಶ್ರಮಾದಿಗಳುಂಟೆ ? ಎಂದಿಗೂ ಇಲ್ಲ. ಈ ಮಹಿಮೆಯು ವಿಶ್ವಾಮಿತ್ರರಿಗೆ ತಿಳಿಯದೊ ? ತಿಳಿದೇ ಇದೆ. ಆದ್ದರಿಂದಲೇ ರಾಜಸಭೆಯಲ್ಲಿ ಅವರು " ಅಹಂವೇದ್ಮಿ ವಶಿಷ್ಠಶ್ಚ ರಾಮಂ ಸತ್ಯ ಪರಾಕ್ರಮಂ " ಎಂದು ರಾಮನ ಸ್ವರೂಪವನ್ನು ತಾವು ಬಲ್ಲೆವೆಂದು ಮೊದಲೇ ಹೇಳಿದ್ದಾರೆ. ಅಂಥಾ ಸರ್ವ ಶಕ್ತನಾದ ಭಗವಂತನಿಗೆ ತಾನು ಉಪದೇಶ ಕೊಡಲು ಅರ್ಹನೇ ? ಎಂಥಿಗೂ ಅಲ್ಲ. ಅವತಾರ ಕಾರ್ಯಗಳಲ್ಲಿ ಭಗವಂ

ತನಿಗೆ ನೆರವಾಗುವ ಪ್ರತಿಯೊಬ್ಬರೂ ಸ್ವಾಮಿಗೆ ವಿದಿತವಾದ ಅಂಶವನ್ನು ಇದಿರಿನಲ್ಲಿದ್ದು ಸೂಚಿಸಿ ಜ್ಞಾಪಕಕ್ಕೆ ತಂದುಕೊಡುವುದು ಮಾತ್ರವೇ ದೇವತೆಗಳಿಗೆ ಕರ್ತವ್ಯ. ವ್ಯಾಸಾವತಾರದಲ್ಲಿ ಭಾಗವತ ರಚನೆಗೆ ನಾರದರು ಭಾಗವತದ ವಿಚಾರವನ್ನು ಜ್ಞಾಪಿಸಿಕೊಟ್ಟಂತೆ, ಶ್ರೀರಾಮನಿಗೆ ವಿಶ್ವಾಮಿತ್ರ ಪ್ರಭೃತಿಗಳ ಉಪದೇಶವೆಂಬುದು ಜ್ಞಾಪಕ ಕೊಡತಕ್ಕಷ್ಟು ಮಾತ್ರವೇ ಹೊರತು, ಶಿಷ್ಯನಿಗೆ ಗುರುವು ತಿಳಿಯದೇ ಇದ್ದ ಹೊಸ ವಿಷಯವನ್ನು ಉಪದೇಶಕೊಟ್ಟು ತಿಳಿಯಪಡಿಸುವಂತೆ ಎಂದುಮಾತ್ರ ಯಾರೂ ಭಾವಿಸಲಾಗದು. ಈ ಪ್ರಮೇಯದ ವ್ಯವಸ್ಥೆಗಾಗಿಯೇ ಶ್ರೀಮದಾಚಾರ್ಯರು "ಅನುಗ್ರಹಾರ್ಥಂಸಮುಪೇರವಾಪ" ಎಂಬ ವಾಕ್ಯದಿಂದ ವಿಶ್ವಾಮಿತ್ರರು ಶ್ರೀರಾಮನಲ್ಲಿ ಮಾಡಿದ ಮಂತ್ರೋಪದೇಶದ ಮರ್ಮವನ್ನು ಉದ್ಘಾಟಿಸಿರುವರು. ಸಾಕ್ಷಾದೇಕಾಂತ ಭಕ್ತರಾದ ವಾಯ್ವಂಶ ಸಂಭೂತರಾದ ಶ್ರೀಮದಾಚಾರ್ಯರಿಗಲ್ಲದೆ ಇಂಥಾ ಮರ್ಮವು ವಾಲ್ಮೀಕಿಪ್ರಭೃತಿಗಳಿಗೆಲ್ಲಿ ಗೋಚರವಾದೀತು ? ಎಂದಿಗೂ ಆಗದು. ಆದ್ಧರಿಂದ ಅವರುಗಳು ಹೇಳಿದ್ದರ ಮೇಲೆ ತಾತ್ಪರ್ಯವು ಹೀಗೆಂದು ಸ್ಪಷ್ಟಪಡಿಸಲಿಕ್ಕಾಗಿಯೇ ಈ ಗ್ರಂಥರಚನೆಯೆಂದು ಮೊದಲೇ ಹೇಳಿದೆ. ಜಗದ್ವಿಡಂಬನಾರ್ಥವಾಗಿ ಸ್ವಾಮಿಯು ಅವತಾರ ರೂಪಗಳಲ್ಲಿ ಹೀಗೆಲ್ಲಾ ಲೋಕವನ್ನು ಅನುಕರಿಸಿದ್ದಾನೆ. ಅವನ ಮಹಿಮೆಯನ್ನರಿಯದ ಪಾಮರರು ವಿರುದ್ಧವಾಗಿ ತಿಳಿಯುವರು. ಬ್ರಹ್ಮಜ್ಞಾನಿಗಳಾದರೋ ಹಾಗೆಂದಿಗೂ ತಿಳಿಯತಕ್ಕವರಲ್ಲ. ಇದೇ ವಿಶ್ವಾಮಿತ್ರರ ಉಪದೇಶದ ರಹಸ್ಯ, ಶ್ರೀಕೃಷ್ಣಾವತಾರದಲ್ಲಿ ಸಾಂದೀಪನಿಯ ಉಪದೇಶವನ್ನೂ ಹೀಗೆ ತಿಳಿಯಬೇಕು.

**ಶ್ಲೋಕ ॥ ಅಥೋಜಘಾನಾಶು ಶರೇಣ ತಾಟಕಾಂ ವರಾದ್ವಿಧಾತುಸ್ತದನನ್ಯವಧ್ಯಾಂ । ರರಕ್ಷಯಜ್ಞಂಚ ಮುನೇರ್ನಿಹತ್ಯ ಸುಬಾಹುಮೀಶಾನಗಿರಾವಿಮೃತ್ಯುಂ ॥೭॥**

ತಾತ್ಪರ್ಯ.— ಲೋಕದೃಷ್ಟ್ಯಾ ವಿಶ್ವಾಮಿತ್ರರಿಂದ ಶಾಸ್ತ್ರಾಸ್ತ್ರ ಮಂತ್ರವನ್ನುಪದೇಶಪಡೆದಬಳಿಕ ಶ್ರೀರಾಮನು ದುಷ್ಟನಿಗ್ರಹಕಾಲದಲ್ಲಿ ತೊಡಗಿದ ರೀತಿಯನ್ನು ಈ ಶ್ಲೋಕವು ಸ್ಪಷ್ಟಪಡಿಸುತ್ತದೆ. ಶಸ್ತ್ರಾಸ್ತ್ರಗಳ ಲಾಭಾನಂತರ ವಿಶ್ವಾಮಿತ್ರರ ಆಶ್ರಮದ ಸಮೀಪಕ್ಕೆ ಬರಬರುತ್ತಾ ಮಹರ್ಷಿಗಳ

ಶ್ರೀರಾಮ ಲಕ್ಷ್ಮಣರಿಗೆ ಒಂದು ಸ್ತ್ರೀ ವ್ಯಕ್ತಿಯನ್ನು ತೋರಿಸಿ, ಈಕೆಯನ್ನು ನೊದಲು ನಾಶ ಮಾಡು, ಜಗತ್ತಿಗೆ ಸಂಪೂರ್ಣ ಕ್ಷೇಮವಾಗುವುದು, ಎಂದು ನುಡಿದರು. ಈ ಮಾತನ್ನು ಕೇಳಿ ಆ ಕಡೆಗೆ ಗುರಿ ಇಟ್ಟು ಆ ಸ್ತ್ರೀಯನ್ನು ಕೊಲ್ಲಲು ಶ್ರೀರಾಮನು ಬಾಣವನ್ನು ಬಿಟ್ಟನು. ಆಕೆಯು ತಾಟಕಾ ಎಂಬ ರಾಕ್ಷಸಿಯು, ಬ್ರಹ್ಮನ ವರದಿಂದ ಶ್ರೀರಾಮನನ್ನು ಬಿಟ್ಟು ಉಳಿದವರಿಂದ ಕೊಲ್ಲಲಾಗದವಳಾಗಿದ್ದಳು. ಮೊದಲನೆ ಗುರಿಯಲ್ಲಿಯೇ ಶ್ರೀರಾಮನು ಅಂಥಾ ತಾಟಕೆಯನ್ನು ಸಂಹರಿಸಿ ಕೂಡಲೇ ಋದ್ರ ದೇವರ ವರದಿಂದ ಅವಧ್ಯ (ಮೃತ್ಯುವಿಲ್ಲ) ನೆನಿಸಿದ್ದ ಸುಬಾಹುವೆಂಬ ರಾಕ್ಷಸನನ್ನೂ ಸಂಹರಿಸಿ ಮಹ ರ್ಷಿಗಳು ಸಂಕಲ್ಪಿಸಿದ್ದ ಯಜ್ಞವನ್ನು ನಿರ್ವಿಘ್ನವಾಗಿ ನೆರವೇರಿಸಿ ಕೊಟ್ಟನು.

ವಿಶೇಷಾರ್ಥ.—ಈ ಜಗತ್ತಿನಲ್ಲಿ ಹುಟ್ಟಿದ ಪ್ರತಿಯೊಬ್ಬ ಮಾನವ ನಿಗೂ ವಿಧಿ (ಕರ್ತವ್ಯ), ನಿಷೇಧ (ಮಾಡಬಾರದ್ದು) ಎಂದು ಕೆಲಸಗಳಲ್ಲಿ ನಿಯಮ ಉಂಟು. ಬ್ರಹ್ಮದೇವರು ಮೊದಲುಗೊಂಡು ತೃಣ ಜೀವರ ಪರ್ಯಂತ ಸರ್ವರೂ ಈ ನಿಯಮಕ್ಕೆ ಕಟ್ಟುಬಿದ್ದೇ ನಡಿಯಬೇಕು. ಜಗದೀ ಶ್ವರನಾದರೋ ಸ್ವತಂತ್ರನು. ಈ ವಿಧಿಯನ್ನು ಮೀರಲೂಬಹುದು, ತನ್ನಿ ಷ್ಟದಂತೆ ಬೇಕಾದುದನ್ನು ಮಾಡಲೂಬಹುದು. ಈ ಕಾರಣದಿಂದಲೇ ಅವ ನನ್ನು ನಿತ್ಯ ಮುಕ್ತನೆಂದು ಶಾಸ್ತ್ರವು ಸಾರಿ ಹೇಳುತ್ತಿದೆ. ವಿಧಿ ನಿಷೇಧಗಳ ನ್ನು ಉಲ್ಲಂಘಿಸಿ ನಡೆದವರಿಗೆ ಶಿಕ್ಷೆಯುಂಟು. ಭಗವಂತನಿಗಾದರೋ ಎಲ್ಲಾ ವ್ಯಾಪಾರವೂ ಐಚ್ಛಿಕ, ಪುಣ್ಯ ಪಾಪಗಳ ಲೇಪವಂತೂ ಸುತರಾಂ ಇಲ್ಲವು. ಅಲ್ಲದೇ ಅವನು ನಡಿಸುವ ಸಕಲ ವ್ಯಾಪಾರವೂ ಪರಾರ್ಥವಾಗಿಯೇ ಹೊರ ತೂ ಸ್ವಾರ್ಥಕ್ಕಾಗಲ್ಲ, ಅದೂ ಅಲ್ಲದೆ ಆತನು ಕರುಣಾಮಯನು, ಜಗತ್ತು ಕ್ಷೇಮವಾಗಿರಬೇಕೆಂಬುದೇ ಅವನ ಇಚ್ಛೆ, ಇಂಥಾ ದಿವ್ಯ ಸ್ವರೂಪನಾದ ಶ್ರೀರಾಮನು ದುಷ್ಟನಿಗ್ರಹ ಕಾರ್ಯಕ್ಕೆ ತೊಡಗಿದ ಒಡನೆಯೇ ಲೋಕದಲ್ಲಿ ಅತಿ ನಿಂದ್ಯವಾದ ಸ್ತ್ರೀ ವಧವನ್ನು ಮಾಡಿ ತಾನು ನಿತ್ಯ ಶುದ್ಧನೆಂದೂ ಈ ವಧಾದಿಗಳಿಂದ ಅಣುಮಾತ್ರವೂ ದೋಷ ಸಂಪರ್ಕವು ತನಗಿಲ್ಲವೆಂದು ತೋರಿಸಿಕೊಟ್ಟಿರುವನು. ಆದ್ದರಿಂದಲೇ ವಾಲ್ಮೀಕಿ ಪ್ರಭೃತಿಗಳೂ ಹೀಗೆ ತಾಟಕಾ ಸಂಹಾರವನ್ನು ಸ್ವಾಮಿಯು ನಡಿಸಿದ್ದು ಜಗತ್ ಕ್ಷೇಮ ಪ್ರದಾನ ಕಾರ್ಯವೆಂದು ಶ್ಲಾಘಿಸಿರುತ್ತಾರೆ. ರಾಮನಲ್ಲದೇ ಇತರರು ಹೀಗೇನಾದರೂ

ಸ್ತ್ರೀಯರನ್ನು ಕೊಲ್ಲಲೆತ್ನಿಸಿದ್ದರೆ ಆ ಕಾರ್ಯವು ಅತಿ ಜುಗುಪ್ಸಾಕರವಾಗು ತ್ತಿತ್ತು. ಅಯೋಧ್ಯಾ ಕಾಂಡದಲ್ಲಿ ರಾಮನ ವನವಾಸಕ್ಕೆ ಕಾರಣರಾದ ಮಂಥರಾ, ಕೈಕೆಯರನ್ನು ಈಗಲೇ ದಂಡಿಸುತ್ತೇನೆಂದು ಭರತನು ಹೇಳಲು ವಶಿಷ್ಠಾದಿಗಳು ಅದು ಉಚಿತವಲ್ಲವೆಂದು ಆತನಿಗೆ ಬುದ್ಧಿ ಹೇಳಿರುವರು. ರಾಮನು ಮಾಡಿದ ತಾಟಕಾ ವಧವನ್ನು ಮಾತ್ರ ಸರ್ವರೂ ಅನುಮೋದಿಸಿ ರುವರು. ಆದ್ದರಿಂದ ಅನೇಕ ಮಹರ್ಷಿಗಳಿಗೆ ಶ್ರೀರಾಮನ ಸ್ವರೂಪ ಜ್ಞಾ ನವು ನಿಜವಾಗಿಯೂ ಇದ್ದಿತೆಂದು ಈ ಸಂದರ್ಭಗಳಿಂದ ತೋರಿಬರುವುದು. ಮುಖ್ಯವಾಗಿ ರಾಮ ಕೃಷ್ಣಾವತಾರಗಳೆರಡರಲ್ಲಿಯೂ ಸ್ವಾಮಿಯು ಜಗತ್ ಕ್ಷೇಮಾಭ್ಯುದಯಗಳಿಗಾಗಿ ಪರಮ ದುಷ್ಟಾಂತಃಕರಣರಾದ ಸ್ತ್ರೀಯರನ್ನು (ತಾಟಕಾ+ಪೂತನಾ) ಎಂಬುವರನ್ನು ಮೊದಲು ನಿಗ್ರಹಿಸಿದ್ದಾನೆ, ಇದೂ ಅಲ್ಲದೇ ಈ ಎರಡವತಾರಗಳಲ್ಲಿಯೂ ಊರ್ವಶಿ ಎಂಬ ಅಪ್ಸರಸ್ಸು ತಾಟಕಾ ಪೂತನಾ ಶರೀರಗಳಲ್ಲಿದ್ದು ಸ್ವಾಮಿಯ ಸೇವೆಯನ್ನು ನಡಿಸಿ, ಅನುಗ್ರಹ ಪಡೆದಿರುವಳೆಂದೂ ತಿಳಿಯಬೇಕಾಗಿದೆ, ಮತ್ತು ಈ ಸ್ತ್ರೀಯರಲ್ಲಿ ಜೀವ ದ್ವಯ ಸಮಾವೇಶವಿತ್ತೆಂಬುದಕ್ಕೆ ಆಚಾರ್ಯರೇ ಭಾಗವತ ತಾತ್ಪರ್ಯದಲ್ಲಿ "ಪೂತನಾಕಂಸನರಕಶಿಶುಪಾಲಾದಿಷ್ವಪಿದ್ವಿಧಾ । ಜೀವಾಃಸಂತಃಅಸಂತಶ್ಚ" ಎಂದು ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ ಜಗತ್ಪ್ರಭುವು, ತನ್ನ ಇಚ್ಛೆಯಂತೆ ನಡೆಯುವ ಸ್ವತಂತ್ರ ಶಿಖಾಮಣಿ ಎಂಬಂಶವನ್ನೂ, ವಿಧಿನಿಷೇಧಾತೀತನೆಂ ದೆಂಬಂಶವನ್ನೂ, ಬ್ರಹ್ಮ ರುದ್ರಾದಿ ದೇವತಾವಂದ್ಯನೆಂದೂ, ಅವರುಗಳ ವರಾದಿಗಳನ್ನೂ ಮೀರುವ ಸ್ವತಂತ್ರನೆಂದೂ, ಈ ಅವತಾರಗಳ ಕಾರ್ಯ ಕಲಾಪಗಳ ಮೂಲಕ ವ್ಯಕ್ತಪಡಿಸಿರುವನು. ಶ್ರೀಹರಿಯಲ್ಲದೆ ಅನ್ಯರಿಗೆ ಬ್ರಹ್ಮಾದಿ ದೇವತೆಗಳನ್ನೂ, ಅವರುಗಳಿತ್ತ ವರಾದಿಗಳನ್ನೂ ಮೀರುವ ಯೋಗ್ಯತೆಯು ಎಲ್ಲಿಯದು? ಈ ಸಂದರ್ಭಗಳಿಂದ ಶ್ರೀರಾಮ ಕೃಷ್ಣಾದಿ ರೂಪಗಳನ್ನು ಶ್ರೀಮನ್ನಾರಾಯಣನ ಪೂರ್ಣ ಅವತಾರ ರೂಪಗಳನ್ನಾಗಿ ಭಕ್ತರು ಭಾವಿಸಿ ಕೃತಕೃತ್ಯರಾಗಬೇಕು. ಈ ಭಾವನೆಯಿಂದಲೇ ಸ್ವಾಮಿ ಯು ಸ್ತ್ರೀ ವಧ ರೂಪವಾದ ಲೋಕ ಜುಗುಪ್ಸಿತ ಕಾರ್ಯವನ್ನು ಮಾಡಿರು ವನು. ಇಂಥಾ ತಾಟಕಾದಿ ಸ್ತ್ರೀಯರನ್ನೇ ಲಕ್ಷಿಸದೇ ಸಂಹರಿಸಿರುವ ವೇಳೆ ಪುರುಷರೆನ್ನಿಸಿ ಜಗತ್ಕಂಟಕರಾದ ದುಷ್ಟರನ್ನು ಶಿಕ್ಷಿಸದೇ ಬಿಡುವನೆ? ಎಂದಿ

ಗೂ ಬಿಡನು, ಎಂದು ಅಲ್ಲಲ್ಲಿರುವ ದುಷ್ಟರುಗಳು ಎಚ್ಚರಗೊಂಡು ಸತ್ಪು ರುಷರಿಗೂ ಲೋಕಕ್ಕೂ ವಿಧೇಯರಾಗಿ ನಡೆದುಕೊಳ್ಳಲಿ, ಎಂಬ ತಿಳಿವಳಿಕೆ ಯನ್ನು ಸಹಾ ಕೊಡುವ ಉದ್ದೇಶದಿಂದ ಶ್ರೀರಾಮನು ಜಗದಾದರ್ಶಕ್ಕಾಗಿ ಈ ತಾಟಕಾವಧವನ್ನು ನಡಿಸಿದನೆಂದು ಶ್ರೀಹರಿ ಭಕ್ತರು ನೆನಪಿನಲ್ಲಿಡಬೇಕು.

**ಶ್ಲೋಕ॥ ಶರೇಣಮಾರೀಚಮುಥಾರ್ಣವೇಕ್ಷಿಪದ್ವಚೋವಿರಂಚಸ್ಯಚಮಾನ ಯಾನಃ । ಅವಧ್ಯತಾತೇನಹಿಕಸ್ಯದತ್ತಾ ಜಘಾನಚಾನ್ಯಾ೯ರಜ ನೀಚರಾನಥ ॥೪॥**

ತಾತ್ಪರ್ಯ.—ವಿಶ್ವಾಮಿತ್ರರ ಯಜ್ಞ ರಕ್ಷಣೆಯಲ್ಲಿ ಪ್ರವೃತ್ತನಾದ ಶ್ರೀ ರಾಮನು ತಾಟಕಾ ಸುಬಾಹುಗಳನ್ನು ಸಂಹರಿಸುವಷ್ಟರಲ್ಲಿ ತಾಟಕೆಯ ಮಗನಾದ ಮಾರೀಚನೆಂಬ ಘೋರ ರಾಕ್ಷಸನು ಯಜ್ಞಶಾಲೆಗೆ ಬಂದು ಅಗ್ನಿಕುಂಡದಲ್ಲಿ ನಾನಾ ಕೆಟ್ಟ ಪದಾರ್ಥಗಳನ್ನು ಸುರಿಸಿ ಅಗ್ನಿಯನ್ನಾರಿಸಲು ಪಕ್ರಮಿಸಿದನು. ವೇದಿಕೆಯಲ್ಲಿ ಪೂಜಿಸಲ್ಪಟ್ಟ ದೇವತಾ ಕಲಶಗಳನ್ನು ಕಿತ್ತೆಸೆದನು, ಸಮಿತ್ತು ದರ್ಭಾದಿಗಳನ್ನು ಹಾಳು ಮಾಡಿದನು, ಹೀಗೆಲ್ಲಾ ಕೆಡುಕು ಮಾಡುತ್ತಿರುವುದನ್ನು ಕಂಡು ವಿಶ್ವಾಮಿತ್ರರು ಮಾರೀಚನನ್ನು ಹೊಡಿ ಎಂದು ನುಡಿಯಲು ಶ್ರೀರಾಮನು ಗುರಿ ಇಟ್ಟು ಒಂದು ಅದ್ಭುತ ವಾದ ಅಂಬನ್ನು ಪ್ರಯೋಗಿಸಲು ಅದು ಬಹು ವೇಗವಾಗಿ ಹೋಗಿ ಬ್ರಹ್ಮ ದೇವರ ವರದಿಂದ ತಾತ್ಕಾಲಿಕವಾಗಿ ಕೊಲೆ ಇಲ್ಲದ ಆ ಮಾರೀಚನನ್ನು ಎತ್ತಿಕೊಂಡು ಹೋಗಿ ಸಮುದ್ರದಲ್ಲಿ ಕೆಡಹಿತು. ಅವನು ಚೇತರಿಸಿಕೊ ಳ್ಳಲು ಬಹು ಕಾಲ ಹಿಡಿಯಿತು. ಅಂತೂ ಆಗ ಮಾರೀಚನು ಸಾಯಲಿಲ್ಲ. ಇದೇ ಬ್ರಹ್ಮನ ವರದ ಮಹಿಮಾ, ಅನಂತರ ಇವನ ಅನುಯಾಯಿಗಳಾದ ಮತ್ತೆ ಕೆಲವು ರಾಕ್ಷಸರನ್ನು ಸ್ವಾಮಿಯು ಕೊಂದನು.

ವಿಶೇಷಾರ್ಥ.—ಬ್ರಹ್ಮ ರುದ್ರಾದಿಗಳು ತಮ್ಮನ್ನು ಭಜಿಸುವ ಅಸು ರಾದಿಗಳಿಗೂ ದೀರ್ಘಾಯುಸ್ಸನ್ನೂ ಅನ್ಯರಿಂದ ಕೊಲೆ ಮೊದಲಾದ ಅಪಕಾ ರಗಳಿಲ್ಲದಿರುವಿಕೆಯನ್ನು ಕೊಡುವುದುಂಟು. ಅಷ್ಟು ಮಾತ್ರದಿಂದಲೇ ಆ ಅಸುರರು ಕೊಬ್ಬಿ ಮೈಮರೆತು ತಮಗೆ ವರ ದಾನ ಮಾಡಿದ ದೇವತೆಗಳ ಮೇಲೂ ಭಗವಂತನ ಮೇಲೂ ವಿರೋಧವನ್ನು ಬೆಳೆಸುವುದುಂಟು. ಇಂತಹ

ಸಂದರ್ಭಗಳಲ್ಲಿ ದೇವತೆಗಳು ಅವರುಗಳ ನಿಗ್ರಹಕ್ಕಾಗಿ ಭಗವಂತನನ್ನು ಶರಣು ಹೊಂದುವರು. ಆಗ ಕರುಣಾಳುವಾದ ಶ್ರೀಶನು ತನ್ನ ಅನುಚರರಿಗೆ ಬಂದ ತೊಂದರೆಯನ್ನು ತಪ್ಪಿಸಿ ತನ್ನ ಮಹಿಮಾ ಪ್ರದರ್ಶನ ಮಾಡಿ ಅಸುರರನ್ನು ನಿಗ್ರಹಿಸಿ ಆ ಕೀರ್ತಿಗೆ ತಾನು ಮುಖ್ಯ ಪಾತ್ರನಾಗತಕ್ಕದ್ದು, ಇದೇ ಭಗವಂತನ ಸಂಕಲ್ಪ. ಇದನ್ನರಿತೇ ಮಾರೀಚ, ರಾವಣ, ಕುಂಭಕರ್ಣಾದಿಗಳಿಗೆ ಅವಧ್ಯ ಭಾವವನ್ನು ವರವಾಗಿ ಬ್ರಹ್ಮನು ಕೊಟ್ಟಿದ್ದಾನೆ. ಆದ್ದರಿಂದಲೇ ಸಮಯ ನಿರೀಕ್ಷಣೆಯಲ್ಲಿದ್ದು ಸ್ವಾಮಿಯು ಕೆಲ ಕಾಲ ಅವರುಗಳ ವರವನ್ನು ನಡಿಸಿ ಕೊಟ್ಟು ಅನಂತರ ತನ್ನ ಸಾಮರ್ಥ್ಯದಿಂದ ಅಂಥ ದುಷ್ಟರನ್ನು ನಿಗ್ರಹ ಮಾಡಿದ್ದಾನೆ. ಬ್ರಹ್ಮಾದಿಗಳ ವರವನ್ನು ಮೀರುವ ಅಧಿಕಾರವು ಸ್ವಾಮಿಗೆ ಇದ್ದೇ ಇದೆ. ಪ್ರಕೃತ ಮಾರೀಚನು ಅತ್ಯುತ್ಕಟವಾದ ಅಪರಾಧವನ್ನು ಮಾಡಿಲ್ಲವಾಗಿ ಈಗ ಅವನನ್ನು ಸಂಹರಿಸಲಿಲ್ಲ. ಮುಂದಕ್ಕೆ ಇವನೇ ಮಾಯಾ ಮೃಗವಾಗಿ ಬಂದು ದೇವಿಯನ್ನು ವಂಚಿಸಬೇಕಾಗಿದೆ ಆ ಅವಸಿಷ್ಟ ಸಾಧನವನ್ನು ಮಾಡಿದಮೇಲಲ್ಲವೆ ಸಂಹರಿಸಬೇಕಾದ್ದು. ಹೀಗೆ ಸಂಹರಿಸದೇ ಬಿಟ್ಟದ್ದರಿಂದ ಬ್ರಹ್ಮನ ವರಕ್ಕೆ ಸಹಾ ಸ್ವಾಮಿಯು ಮರ್ಯಾದೆಯನ್ನು ಕೊಟ್ಟಂತಾಗುವುದು.

**ಶ್ಲೋಕ॥ ತದಾವಿದೇಹೇನಸುತಾಸ್ವಯಂವರೋ ವಿಘೋಷಿತೋದಿಕ್ಷುವಿದಿಕ್ಷು ಸರ್ವಶಃ । ನಿಧಾರ್ಯತದ್ಗಾಧಿಸುತಾನುಯಾಯಿನಾ ಯಯೌವಿದೇಹಾನನುಜಾನುಯಾತಃ ॥೯॥**

ತಾತ್ಪರ್ಯ.—ಹೀಗೆ ಶ್ರೀರಾಮನು ವಿಶ್ವಾಮಿತ್ರರ ಆಶ್ರಮದಲ್ಲಿ ಯಜ್ಞವಿಘ್ನಕರಾದ ರಾಕ್ಷಸರನ್ನು ಸಂಹರಿಸಿ ಮುನಿವರ್ಯರ ಉದ್ದೇಶಾನುಸಾರ ಭಗವತ್ಪೂಜಾತ್ಮಕವಾದ ಯಜ್ಞ ಕಾರ್ಯಗಳನ್ನು ಸಾಂಗವಾಗಿ ನೆರವೇರಿಸಿಕೊಟ್ಟ ತರುವಾಯ ವಿಶ್ವಾಮಿತ್ರರು ಅವಭೃತ ಸ್ನಾನವನ್ನು ಮಾಡಿ ಪರಿಪೂರ್ಣ ಮನೋರಥರಾದರು. ಇಷ್ಟರಲ್ಲಿ ಅವರ ಆಶ್ರಮಕ್ಕೆ ಸ್ವಲ್ಪ ದೂರದಲ್ಲಿದ್ದ ಮಿಥಿಲ ದೇಶಕ್ಕೆ ರಾಜನೆನಿಸಿದ ಜನಕ ಮಹಾರಾಜನು ಅಪುತ್ರವಂತನಾದ ತನಿಗೆ ಭಗವದನುಗ್ರಹದಿಂದ ಭೂ ಶೋಧನಾ ಸಮಯದಲ್ಲಿ ದೊರಕಿದ ಅತ್ಯದ್ಭುತ ರೂಪಲಾವಣ್ಯೋಪೇತಳಾದ ಸೀತೆ ಎಂಬ ಕನ್ಯಾಮಣಿಯನ್ನು

ಸ್ವಯಂವರಕ್ಕಾಗಿ ಇರಿಸಿರುವ ಶುಭವಾರ್ತೆಯನ್ನು ದೇಶ ದೇಶಗಳಲ್ಲಿ ದೂತರುಗಳ ಮೂಲಕ ಡಂಗುರ ಹಾಕಿ ಸಾರುತ್ತಾ ಇದ್ದಂತೆ ವಿಶ್ವಾಮಿತ್ರರ ಆಶ್ರಮದ ಸುತ್ತಮುತ್ತಲೂ ಡಂಗುರ ಹಾಕಲಾಗಿ ಈ ಶುಭ ಸಮಾಚಾರದ ಮರ್ಮವನ್ನು ತಿಳಿದ ವಿಶ್ವಾಮಿತ್ರರು ತಮ್ಮ ಋಷಿ ಮಂಡಲಿಯೊಡನೆ ಮಿಥಿಲ ದೇಶಕ್ಕೆ ಪ್ರಯಾಣ ಮಾಡಲು ಸಿದ್ಧರಾದರು. ಒಡನೆಯೇ ಲೋಕ ದೃಷ್ಟಿಯಿಂದ ಶಿಷ್ಯರೆನಿಸಿರುವ ಶ್ರೀರಾಮ ಲಕ್ಷ್ಮಣರೂ ಮಹರ್ಷಿಗಳ ಆಜ್ಞೆಯಂತೆ ಅವರನ್ನು ಹಿಂಬಾಲಿಸಿದರು.

ವಿಶೇಷಾರ್ಥ.—ವಿವಾಹವು ದೈವ ಮಾನುಷಾದಿ ಕ್ರಮಗಳಿಂದ ಎಂಟು ಬಗೆ ಎಂದು ಶಾಸ್ತ್ರಸಿದ್ಧವಾಗಿದೆ. ಜಾತಿಭೇದಗಳಿಂದ ಈ ಎಂಟರಲ್ಲಿ ಕೆಲವರು ಕೆಲವು ಕ್ರಮವನ್ನು ಮಾತ್ರ ಅನುಸರಿಸುವರು. ಆದರೆ ಅತಿ ಪುರಾತನ ಕಾಲದಿಂದಲೂ ಸಾಮಾನ್ಯವಾಗಿ ಕ್ಷತ್ರಿಯರಲ್ಲಿ ಸ್ವಯಂವರ ಕ್ರಮವೇ ರೂಢಿಯಲ್ಲಿರತಕ್ಕದ್ದು. ಕನ್ಯಾರ್ಥಿಗಳಾದ ರಾಜಪುತ್ರರು ಕನ್ಯಾಬಾಂಧವರು ಗೊತ್ತುಮಾಡಿರುವ ಕನ್ಯಾಶುಲ್ಕ (ಪರಾಕ್ರಮ ಪ್ರದರ್ಶನ, ವಸ್ತುಪ್ರದಾನ) ಮೊದಲಾದುವನ್ನು ಉಚಿತ ರೀತಿಯಲ್ಲಿ ನಡಿಸಿಕೊಟ್ಟು ರಾಜ ಸಭೆಯಲ್ಲಿ ಕನ್ಯಾ ಪಾಣಿಗ್ರಹಣವನ್ನು ಮಾಡಿಕೊಳ್ಳುವುದು ಎಂಬುದೇ ಸ್ವಯಂವರವೆನಿಸುವುದು. ಈ ತೆರನಾದ ವಿಧಿಯಿಂದ ಕ್ಷತ್ರಿಯರ ಪೈಕಿ ಯಾರೂ ಕನ್ಯೆಯನ್ನು ಪಡಿಯದೇ ಇದ್ದಲ್ಲಿ ಬ್ರಾಹ್ಮಣರಲ್ಲಿ ಶೂರರಾದವರು ಪಡೆಯಬಹುದು. ಅಂತೂ ಸ್ವಯಂವರ ಮಂಟಪದಲ್ಲಿ ಈ ಉಭಯ ವರ್ಣದವರೂ ಬಂದು ಶೇರಬೇಕಾದ್ದು ನಿಯಮ. ಆದ್ದರಿಂದಲೇ ಸ್ವಯಂವರದ ವಿಚಾರವನ್ನು ಸಾರುವಾಗ ಪಟ್ಟಣಗಳಲ್ಲಿ ಮಾತ್ರವಲ್ಲದೇ ಋಷ್ಯಾಶ್ರಮಗಳಲ್ಲಿಯೂ ಸಾರುವುದುಂಟು. ಒಂದುವೇಳೆ ಸ್ವಯಂವರದಲ್ಲಿ ಕ್ಷತ್ರಿಯರೇ ಗೆದ್ದರೆ ಆಗ ಬ್ರಾಹ್ಮಣರು ಆಶೀರ್ವಾದ ಮಾಡಲಿಕ್ಕಾಗಿ ಸಿದ್ಧರಾಗಿರಬೇಕು, ಬ್ರಾಹ್ಮಣರೇ ಗೆದ್ದರೆ ಆಗ ಅವರೇ ಬಾಂಧವರಾಗಬಹುದು ಅಂತೂ ಸ್ವಯಂವರ ಕಾಲದಲ್ಲಿ ಬ್ರಾಹ್ಮಣರ ಸಮಾಗಮವಿದ್ದೇ ಇರಬೇಕು. ಈ ಪದ್ಧತಿಯನ್ನನುಸರಿಸಿ ವಿಶ್ವಾಮಿತ್ರರು ಜನಕನ ಸ್ವಯಂವರ ಮಂಟಪಕ್ಕೆ ಸಶಿಷ್ಯರಾಗಿ ಪ್ರಯಾಣ ಮಾಡಿದರೆಂದು ಮುಖ್ಯಾಭಿಪ್ರಾಯ. ಭೂತಭವಿಷ್ಯದ್ವರ್ತಮಾನ ವಿಚಾರಗಳನ್ನು ಅರಿತ ಮಹರ್ಷಿಗಳಲ್ಲಿ ವಿಶ್ವಾಮಿತ್ರರೂ ಶೇರಿರುವುದರಿಂದ ಶ್ರೀರಾಮನ ಭವಿಷ್ಯವನ್ನು ಅರಿತೇ ಅವರು ತಮ್ಮೊಡನೆ ಶ್ರೀರಾಮ-ಲಕ್ಷ್ಮಣರನ್ನು ಕರೆದುಕೊಂಡು ಹೋದರೆಂದು ಹೇಳಲೂ ಅಡ್ಡಿಯಿಲ್ಲ.

**ಶ್ಲೋಕ|| ಅಥೋಽಅಹಲ್ಯಾಂಪತಿನಾಭಿಶಪ್ತಾಂ ಪ್ರಧರ್ಷಣಾದಿಂದ್ರಕೃತಾ ಚ್ಛಿಲೀಕೃತಾಂ। ಸ್ವದರ್ಶನಾನ್ಮಾನುಷತಾಮುಪೇತಾಂ ಸುಯೋಜಯಾಮಾಸಸಗೌತಮೇನ ||೧೦||**

ಅರ್ಥ.—ಅಥೋ=ಹೀಗೆ ಪ್ರಯಾಣ ಮಾಡಿದ ಬಳಿಕ, ಸಃ=ಶ್ರೀ ರಾಮನು, ಇಂದ್ರಕೃತಾತ್=ಇಂದ್ರನಿಂದ ಮಾಡಲ್ಪಟ್ಟ, ಪ್ರಧರ್ಷಣಾತ್=ಸಂಪರ್ಕದ ನಿಮಿತ್ತವಾಗಿ, ಪತಿನಾಭಿಶಪ್ತಾಂ=ಪತಿ ಎನಿಸಿದ ಗೌತಮಮುನಿಯಿಂದ, ಶಪಿಸಲ್ಪಟ್ಟಂಥಾ, ಆದ್ದರಿಂದಲೇ, ಶಿಲೀಕೃತಾಂ=ಶಿಲಾವಿಗ್ರಹ ಹಂತಾಗಿದ್ದ, ಅಹಲ್ಯಾಂ=ಅಹಲ್ಯಾದೇವಿಯನ್ನು, ಸ್ವದರ್ಶನಾತ್=ಸ್ವ=ತನ್ನ ದರ್ಶನಾತ್ = ಸಂದರ್ಶನದ ಮೂಲಕ, ಮಾನುಷತಾಂ=ಮನುಷ್ಯಭಾವವನ್ನು, ಉಪೇತಾಂ=ಹೊಂದಿದವಳಾದ, ಆಕೆಯನ್ನು, ಗೌತಮೇನ=ಗೌತಮ ಮಹರ್ಷಿಯೊಡನೆ, ಸು=ನ್ಯಾಯವಾದ ರೀತಿಯಲ್ಲಿ, ಯೋಜಯಾಮಾಸ=ಸೇರಿಸಿಬಿಟ್ಟನು.

ತಾತ್ಪರ್ಯ.—ಹೀಗೆ ವಿಶ್ವಾಮಿತ್ರರ ಸಂಗಡ ಶ್ರೀರಾಮ-ಲಕ್ಷ್ಮಣರು ಮಿಥಿಲಾಪುರಿಗೆ ಪ್ರಯಾಣ ಮಾಡಿ ಬರುತ್ತಾ ದಾರಿಯಲ್ಲಿ ಅಕಸ್ಮಾತ್ತಾಗಿ ಗೌತಮರ ಆಶ್ರಮವನ್ನು ಹೊಕ್ಕರು. ಅಲ್ಲಿ ಬಹುಕಾಲಕ್ಕೆ ಹಿಂದೆ ಗೌತಮರ ಧರ್ಮ ಪತ್ನಿಯಾದ ಅಹಲ್ಯಾ ದೇವಿಯು ಇಂದ್ರನ ಸಂಬಂಧವನ್ನು ಮಾಡಿದಳೆಂಬ ಅಪರಾಧಕ್ಕಾಗಿ ಪತಿಯಿಂದ ಕೊಡಲ್ಪಟ್ಟ ಶಾಪ ನಿಮಿತ್ತ ಶಿಲೆಯಾಗಿದ್ದ ಆ ಋಷಿ ಪತ್ನಿಯನ್ನು ಸ್ವಾಮಿಯು ತನ್ನ ದರ್ಶನವನ್ನಿತ್ತು ಆ ಶಾಪದಿಂದ ಬಿಡುಗಡೆ ಮಾಡಿ ಹಿಂದಿನಂತೆಯೇ ಮಾನುಷ ಸ್ತ್ರೀಯಾಗಿ ಏರ್ಪಟ್ಟ ಆಕೆಯನ್ನು ಒಡನೆಯೇ ಗೌತಮರಿಗೆ ಸಮರ್ಪಿಸಿ ಆ ದಂಪತಿಗಳು ಪರಸ್ಪರಾನುರಾಗವಂತರಾಗುವಂತೆ ಮಾಡಿದನು.

ವಿಶೇಷಾರ್ಥ.—ಈ ಶ್ಲೋಕದಲ್ಲಿ " ಪ್ರಧರ್ಷಣಾದಿಂದ್ರಕೃತಾಚ್ಛಿಲೀಕೃತಾಂ" ಎಂಬ ವಾಕ್ಯದಿಂದ ಶ್ರೀಮದಾಚಾರ್ಯರು ಇಂದ್ರಿಯ ನಿಗ್ರಹವು ಅತಿ ದುಸ್ಸಾಧ್ಯವೆಂಬುದನ್ನೂ ದೇವತೆಗಳೂ ಸಹ ಇಂದ್ರಿಯ ಪರವಶರಾಗಿ ಮಾಡಬಾರದ ಕೃತ್ಯಗಳನ್ನು ಮಾಡಿಬಿಡುತ್ತಾರಾದ್ದರಿಂದ ಇಂತಹ ಇತಿಹಾಸಗಳನ್ನು ತಿಳಿದುಕೊಂಡು ಮುಕ್ತಿಯೋಗ್ಯನಾದ ಜೀವನು ಇಂದ್ರಿಯ ವ್ಯಾಪಾರಗಳಲ್ಲಿ ಬಹಳ ಜಾಗರೂಕನಾಗಿರಬೇಕೆಂಬಂಶವನ್ನು ದೃಢಪಡಿಸಿರು

ತ್ತಾರೆ. ಈ ಅಹಲ್ಯಾ ವೃತ್ತಾಂತಕ್ಕೆ ಸಂಬಂಧಪಟ್ಟ ಒಂದು ಇತಿಹಾಸ ವನ್ನು ಇಲ್ಲಿ ಕೊಡಲಾಗುವುದು ಅದನ್ನು ವಾಚಕರು ಸಾವಧಾನವಾಗಿ ಗಮನಿಸಬೇಕಾಗಿದೆ:—

ಅಹಲ್ಯಾದೇವಿಯು ಗೌತಮರ ಹೆಂಡತಿ, ಈ ದಂಪತಿಗಳು ತಮ್ಮಾಶ್ರಮದಲ್ಲಿ ಗೃಹಸ್ಥ ಧರ್ಮಗಳನ್ನಾಚರಿಸಿಕೊಳ್ಳುತ್ತಾ ಸುಖದಿಂದ ಇರಲು ಒಂದಾನೊಂದು ದಿನ ದೇವೇಂದ್ರನು ಆ ಆಶ್ರಮದ ಮಾರ್ಗವಾಗಿ ಹೋಗುತ್ತಿರುವಾಗ ಋಷಿ ಪತ್ನಿಯ ರೂಪಾತಿಶಯವನ್ನು ನೋಡಿ ವ್ಯಾಮೋಹಿತನಾಗಿ ಆಕೆಯನ್ನು ಹೇಗಾದರೂ ಉಪಾಯದಿಂದ ಸಂಬಂಧ ಮಾಡಬೇಕೆಂದೆಣಿಸಿ ಋಷಿಗಳ ಶಾಪಕ್ಕೆ ಅಂಜಿ ಉಪಾಯವನ್ನು ಹುಡುಕುತ್ತಿದ್ದನು. ಇಂದ್ರನಿಗೆ ಅಧಿಕಾರಕ್ಕೆ ಕಡಿಮೆಯೆ? ಐಶ್ವರ್ಯಕ್ಕೆ ಕಡಿಮೆಯೆ ? ಇಲ್ಲ, ಆದರೂ ಋಷಿಪತ್ನಿಯ ವಿಚಾರ! ಒಂದುವೇಳೆ ತೇಜೋವಂತರಾದ ಗೌತಮರು ಕಂಡಲ್ಲಿ ತನ್ನನ್ನಾಗಲೀ ಹೆಂಡತಿಯನ್ನಾಗಲಿ ಶಿಕ್ಷಿಸದೇ ಬಿಡರು. ಎಂದು ಯೋಚಿಸಿ ಮರೆಯಲ್ಲಿ ಈ ಅತಿಕ್ರಮ ನಡಿಸಿದಲ್ಲಿ ಸಾಧ್ಯವಾದಷ್ಟು ದಿನ ಆಕೆಯನ್ನ ಅನುಭವಿಸಬಹುದು ಎಂದು ನಿರ್ಧರಿಸಿ ಋಷಿಗಳು ಪ್ರಾತಃ ಸ್ನಾನಕ್ಕಾಗಿ ಪ್ರತಿ ದಿನವೂ ಅರುಣೋದಯಕ್ಕೆ ಮುಂಚೆಯೇ ತೆರಳುವುದನ್ನು ಕಂಡು ತಾನು ಆಕೆಯನ್ನು ಕಾಮಿಸಿದ ವೇಳೆಗಳಲ್ಲಿ ಅರುಣೋದಯಕ್ಕಿಂತ ಬಹು ಮುಂಚಿತವಾಗಿಯೇ ಕೋಗೆಯಂತೆ ವೇಷ ಹಾಕಿಕೊಂಡು ಇವರ ಆಶ್ರಮಕ್ಕೆ ಬಂದು ಗಿಡದ ಮೇಲೆ ಕುಳಿತು ಕರ್ರೆಂದು ಶಬ್ದ ಮಾಡುತ್ತಿದ್ದನು. ಆ ಸಂದರ್ಭಗಳಲ್ಲಿ ಗೌತಮರು ಓಹೋ ಅರುಣೋದಯವಾಯ್ತು ಹಕ್ಕಿಗಳು ಶಬ್ದ ಮಾಡುತ್ತಿವೆ ಸ್ನಾನದ ಹೊತ್ತು ಮೀರುವುದು! ಎಂದುಕೊಂಡು ಆತುರದಿಂದ ಸ್ನಾನಕ್ಕೆ ಹೊರಡುವರು. ಅವರು ಹೊರಕ್ಕೆ ಹೊರಟಕೂಡಲೇ ದೇವೇಂದ್ರನು ನಿಜರೂಪಿನಿಂದ ಅಹಲ್ಯೆ ಬಳಿಗೆ ಬಂದು ತನ್ನ ಕೆಲಸವನ್ನು ತೀರಿಸಿಕೊಂಡು ಹೋಗುವುದು, ಹೀಗೆಯೇ ಕಟ್ಟಳೆಯಾಗಿ ಬಿಟ್ಟಿತು. ಕೆಲ ಕಾಲ ಕಳೆಯಿತು ಸ್ನಾನಾಹ್ನಿಕಗಳನ್ನು ಎಷ್ಟು ನಿಧಾನದಿಂದ ಮಾಡಿದರೂ ಬೆಳಗೇ ಆಗುತ್ತಿರಲಿಲ್ಲ ಆಗ ಗೌತಮರು ಇದೇನು ಅಸಮಯದಲ್ಲಿನಾನು ನಿತ್ಯವೂ ಸ್ನಾನ ಮಾಡುವೆನೆ? ಎಂದಾಲೋಚಿಸಿ ಪಕ್ಷಿ ಧ್ವನಿಯಿಂದಲ್ಲವೆ ನಾನು ಎಚ್ಚರಗೊಳ್ಳುವುದು ಆ ಪಕ್ಷಿಗಳು ನಿಜವೇ ? ಎಂಬುದನ್ನು

ಪರೀಕ್ಷಿಸಲೇಬೇಕೆಂದು ನಿರ್ಧರಿಸಿದರು. ಒಂದು ದಿನ ಇವರ ದೃಷ್ಟಿಗೆ ಇಂದ್ರನ ಕಳ್ಳತನವು ಬಿದ್ದುಬಿಟ್ಟಿತು. ಒಡನೆಯೇ ತತ್ವವನ್ನು ತಿಳಿದ ಮಹರ್ಷಿಗಳು ಹೆಂಡತಿಗೆ ಶಿಲೆಯಾಗುವಂತೆಯೂ, ಇಂದ್ರನಿಗೆ ಮೈಯೆಲ್ಲಾ ಮೋಹ ರೋಗದ ಮಚ್ಚೆಗಳುಂಟಾಗುವಂತೆಯೂ ಶಾಪವನ್ನು ಕೊಟ್ಟರು. ಕೂಡಲೆ ಶಾಪವು ಫಲಿಸಿತು. ಆದರೆ ಯೋಗ್ಯತೆಯಲ್ಲಿ ಇಂದ್ರನು ದೇವತೆಯಾದ್ದರಿಂದ ಅವನಿಗೆ ಶಾಪದ ಪ್ರಭಾವವು ಹೆಚ್ಚು ತೊಂದರೆಯನ್ನು ಕೊಡಲಿಲ್ಲ, ಬ್ರಹ್ಮಾದಿಗಳೂ ಇಂದ್ರನ ಕೃತ್ಯವನ್ನು ಅನುಮೋದಿಸಿ ಅವನನ್ನು ಅಹಲ್ಯಾಯೈಜಾರ" ಎಂಬ ವೇದ ವಚನದಿಂದ ಹೊಗಳಿದರು. ಈ ಶ್ಲಾಘನೆಯು ಇಂದ್ರನಲ್ಲಿ ಸನ್ನಿಹಿತನಾಗಿರುವ ಪರಮೈಶ್ವರ್ಯ ಭೂಷಿತನಾದ ಶ್ರೀ ಹರಿಗೆ ಶೇರಿತು. ಹೆಚ್ಚು ಸಾಧನವನ್ನು ನಡಿಸಿದ್ದ ಇಂದ್ರನಿಗೆ ಈ ದುಷ್ಕಾರ್ಯದಿಂದ ಸಾಧನದ ಫಲವು ತಗ್ಗಿಹೋಯಿತು. ಇಂದ್ರಿಯ ಪರವಶರಾಗಿ ದುಷ್ಕಾರ್ಯವನ್ನು ಮಾಡುವ ಮಾನವರಿಗೆ ದುಷ್ಫಲವು ಎಂದಿಗಾದರೂ ತಪ್ಪುವುದೇ? ತಪ್ಪುವುದಿಲ್ಲ, ಅಲ್ಲದೆ ಮಾನವರಿಗಿಂತ ದೇವತೆಗಳು ಸ್ವರೂಪ ಯೋಗ್ಯತೆಯಲ್ಲಿ ಶ್ರೇಷ್ಠರು, ಅಂಥಾ ದೇವತೆಗಳಲ್ಲಿ ಪರಿಗಣಿತರಾದ ಪುರುಷರು ಮಾನುಷ ಸ್ತ್ರೀಯರನ್ನು ಸಂಪರ್ಕ ಮಾಡಿದಲ್ಲಿ ಅದು ಅಷ್ಟು ನಿಷಿದ್ಧವಲ್ಲ. ಈ ಸಂಬಂಧವು ಅನುಲೋಮವಿಧಿ ಎನ್ನಿಸುವುದು. ಮಾನುಷ ಪುರುಷರು ದೇವಸ್ತ್ರೀಯರನ್ನಪೇಕ್ಷಿಸುವುದು ಪ್ರತಿ ಲೋಮ (ವಿರುದ್ಧ) ವೆನ್ನಿಸುವುದು. ಋಷಿ ಸ್ತ್ರೀಯರು ಮಾನುಷ ಸ್ತ್ರೀಯರಿಗಿಂತ ತಾರತಮ್ಯದಲ್ಲಿ ಉತ್ತಮರು. ಈ ಸಂದರ್ಭಗಳನ್ನು ತಿಳಿದು ಮಾನವರು ಎಂದಿಗೂ ಸ್ವೋತ್ತಮ ಸ್ತ್ರೀಯರನ್ನ ಬಯಸಬಾರದು. ಬಯಸಿದರೆ ಅಂಥವರಿಗೆ ಇಹಪರಗಳಲ್ಲಿ ಖಂಡಿತವಾಗಿಯೂ ಹಾನಿಯುಂಟೆಂಬ ಪ್ರಮೇಯವು ಈ ಅಹಲ್ಯಾ ವೃತ್ತಾಂತದಿಂದ ತಿಳಿದುಬರುವುದು.

ಗೌತಮರು ಈ ಪ್ರಮೇಯಗಳನ್ನು ಬಲ್ಲವರಾದ್ದರಿಂದ ತಮ್ಮ ಹೆಂಡತಿಗೂ ಇಂದ್ರನಿಗೂ ಶಾಪ ಕೊಟ್ಟ ತರುವಾಯ ಯುಕ್ತಾ ಯುಕ್ತಗಳನ್ನು ಯೋಚಿಸಿ ಅಹಲ್ಯೆಯಿಂದ ತಮ್ಮ ಗಾರ್ಹಸ್ಥ್ಯ ಧರ್ಮಕ್ಕೆ ಸಹಾಯವು ಬೇಕಾಗಿದ್ದಿತಾಗಿಯೂ, ಈ ಅತಿಕ್ರಮಕ್ಕೆ ಮುಖ್ಯ ಪ್ರವರ್ತಕಳು ಅಹಲ್ಯೆಯಲ್ಲವಾದ್ದರಿಂದಲೂ ಪರಮಪುರುಷನ ಅವತಾರ ರೂಪವಾದ ಶ್ರೀರಾಮ ರೂಪ

ದಲ್ಲಿ ಆ ಸ್ವಾಮಿಯನ್ನು ತಮ್ಮಾಶ್ರಮದಲ್ಲಿ ದಂಪತಿಗಳಿಬ್ಬರೂ ಸೇರಿ ದರ್ಶನ ಪಡೆದು ಕೃತಾರ್ಥರಾಗಿ ಶ್ರೀರಾಮ ಮೂರ್ತಿಯನ್ನು ಸತ್ಕರಿಸಬೇಕಾದ ಸಂಕಲ್ಪವು ಭಗವದಿಚ್ಛೆಯಲ್ಲಿದ್ದಿತಾಗಿ ದೇವತಾ ಶ್ರೇಷ್ಠನಾದ ಇಂದ್ರನ ಈ ಅಕೃತ್ಯಕ್ಕೆ ಪಾತ್ರಳಾಗಿದ್ದ ದೇವಿಯನ್ನು ಅನುಗ್ರಹಿಸಿ ವಿಶಾಪವನ್ನಿತ್ತು ಶ್ರೀ ದಾಶರಥಿಯ ಆಗಮನ ಕಾಲ ಪರ್ಯಂತವು ಮಾತ್ರ ಶಿಲೆಯಾಗಿದ್ದು ಸ್ವಾಮಿಯ ದರ್ಶನವು ಲಭಿಸಿದ ಒಡನೆಯೇ ಅಹಲ್ಯೆಯಾಗಲೆಂದು ನುಡಿದಿದ್ದರಾಗಿ ಭಕ್ತರಾದ ಗೌತಮರ ಮನೋರಥದಂತೆ ಶ್ರೀರಾಮನು ಅವರ ಆಶ್ರಮಕ್ಕೆ ಬಂದು ದರ್ಶನವನ್ನಿತ್ತು ಅಹಲ್ಯೆಗೆ ಶಿಲಾ ರೂಪವನ್ನು ತಪ್ಪಿಸಿ ಮಾನುಷ ರೂಪವನ್ನು ದಯಪಾಲಿಸಿ ಆ ದಂಪತಿಗಳನ್ನು ಗೃಹಸ್ಥ ಧರ್ಮದಲ್ಲಿ ಸ್ಥಾಪಿಸಿ ಅವರಿಂದ ಸತ್ಕೃತನಾಗಿ ಮುಂದೆ ಮಿಥಿಲಾಪುರಿಗೆ ತೆರಳಿದನೆಂದು ಭಾವ.

ಅಹಲ್ಯಾ ವೃತ್ತಾಂತದ ಅನುಬಂಧ.

ಶ್ರೀಮದ್ರಾಮಾಯಣ ಬಾಲಕಾಂಡ ೪೮ನೆಯ ಸರ್ಗದಲ್ಲಿ ವಾಲ್ಮೀಕಿಗಳು ಗೌತಮರ ಆಶ್ರಮಕ್ಕೆ ವಿಶ್ವಾಮಿತ್ರರೊಡನೆ ರಾಮ-ಲಕ್ಷ್ಮಣರು ಬಂದಾಗ ಆ ಆಶ್ರಮವು ಶೂನ್ಯಾರಣ್ಯವಾಗಿತ್ತು. ಅದು ಹಾಗೆ ಶೂನ್ಯವಾಗಿರುವುದನ್ನು ಕುರಿತು ಶ್ರೀರಾಮನೇ ಹೇಗಿರಲು ಕಾರಣವೇನೆಂದು ಕೇಳಲು, ವಿಶ್ವಾಮಿತ್ರರು ಇಂದ್ರ ಅಹಲ್ಯೆಯರ ವೃತ್ತಾಂತವನ್ನು ವರ್ಣಿಸಿರುವ ಕ್ರಮವನ್ನು ಸ್ಪಷ್ಟಪಡಿಸಿರುತ್ತಾರೆ. ಅದನ್ನು ವಾಚಕರು ಗಮನಿಸಬೇಕಾಗಿದೆ. ಶಚೀಪತಿಯಾದ ಇಂದ್ರನು ಅಹಲ್ಯೆಯನ್ನು ಕಾಮಿಸಲು, ಅಹಲ್ಯೆಯು ಶಚೀ ದೇವಿಗಿಂತಲೂ ಸುಂದರಿಯು, ಋಷಿಗಳ ಅಸಮಕ್ಷಮದಲ್ಲಿ (ಅವರು ಎದುರಿಗೆ ಇಲ್ಲದೆ) ಇರುವಾಗ ಇಂದ್ರನು ಆಕೆಯನ್ನು ಉಪಭೋಗಿಸಬೇಕಾಗಿ ಬಂದುದರಿಂದ ಅವಳು ಒಪ್ಪುವಳೋ ಇಲ್ಲವೋ ಎಂಬ ಸಂದೇಹ ಉಂಟಾಗಿ ಇಂದ್ರನು ಅವಳನ್ನು ಒಡಂಬಡಿಸಲಿಕ್ಕನುಕೂಲವಾಗಿ ಮೊದಲನೆಯ ಸಲ ಗೌತಮರಂತೆ ವೇಷವನ್ನು ಧರಿಸಿ ಸಂಬಂಧ ಮಾಡಿದನು. ಆಗ ಅನ್ಯೋನ್ಯ ಪ್ರೇಮವು ಹುಟ್ಟಿ ಇಂದ್ರನು ತಾನು ಸ್ವರ್ಗಾಧಿಪತಿಯಾದ ಇಂದ್ರನೆಂಬುದನ್ನು ಆಕೆಗೆ ಹೇಳಿ, ನಿನ್ನ ರೂಪಿನಿಂದ ನನಗೆ ನಿನ್ನ ಮೇಲೆ ಶಚಿಗಿಂತಲೂ ಕಾಮವು ಅತ್ಯಧಿಕವಾಗಿ ಹುಟ್ಟಿದ್ದರಿಂದ ನಾನು ಬಂದೆನೆಂದು ತಿಳಿಸಲು, ಆಕೆಯು ಇಂದ್ರನೆಂಬ ಗೌರವದಿಂದ ಲೋಕ ನ್ಯಾಯದಲ್ಲಿ ಐಶ್ವರ್ಯವಂತನ

ಸಂಬಂಧವು ಸ್ತ್ರೀಯರಿಗೆ ಪರಮ ಭಾಗ್ಯ ಲಾಭವೆಂಬುದಾಗಿ ಭಾವಿಸಿ, ಆತನಲ್ಲಿ ತಾನೂ ಹೆಚ್ಚಾದ ಅನುರಾಗವನ್ನು ಮಾಡಿದಳು. ಆದರೆ ಈ ಗುಟ್ಟು ಎಲ್ಲಿ ಹೊರಬೀಳುವುದೋ ಎಂಬ ಭಯವು ಈ ಇಬ್ಬರಲ್ಲಿಯೂ ಇದ್ದೇ ಇದ್ದಿತು. ಆದ್ದರಿಂದಲೇ ಆಕೆಯು ಇಂದ್ರನೊಡನೆ ಈ ವಿಚಾರದಲ್ಲಿ ಮಾತನಾಡುವಾಗ " ಆತ್ಮಾನಂಮಾಂಚದೇವೇಶ ಸರ್ವದಾ ರಕ್ಷ ಗೌತಮಾತ್ " ಎಂದು ಹೇಳಿ ಆತನ ಸಂಗದಲ್ಲಿ ಸಂಪೂರ್ಣ ಒಪ್ಪಿಗೆಯನ್ನು ಕೊಟ್ಟಿರುವಳು. ಈ ಸಂದರ್ಭದಲ್ಲಿ ಉಭಯತ್ರರಿಗೂ ಗೌತಮರ ದೃಷ್ಟಿಗೆ ಬಿದ್ದಲ್ಲಿ ಶಾಪವು ಖಂಡಿತವಾಗಿಯೂ ತಪ್ಪದೆಂಬ ನಿಶ್ಚಯವು ಇದ್ದಂತೆ ವ್ಯಕ್ತಪಡುವುದು. ಆದ್ದರಿಂದ ಅಹಲ್ಯಾದೇವಿಗೂ, ಇಂದ್ರನಿಗೂ ಸಂಬಂಧವು ಎಲ್ಲಿಯೋ ಆಕಸ್ಮಾತ್ ಒಂದು ಸಲ ನಡೆದು ಅದು ತತ್‌ಕ್ಷಣವೇ ಗೌತಮರ ದೃಷ್ಟಿಗೆ ಬಿದ್ದು ಅವರಿಂದ ಶಾಪವು ಬಂದಿತೆಂದು ಹೇಳುವುದು ಅಷ್ಟು ಸ್ವಾರಸ್ಯವಲ್ಲ. ಮತ್ತು ದೇವೋತ್ತಮನಾದ ಇಂದ್ರನ ಕಾಮವು ಒಂದು ಸಲ ಮಾತ್ರ ವಿಷಯಾನುಭವ ಮಾಡಿ ನಿವೃತ್ತವಾಯಿತೆಂದು ಹೇಳುವುದು, ಸಂಭಾವಿತವಾಗಲಾರದು. ಇದಕ್ಕೆ ತಕ್ಕಂತೆ ಋಷಿ ಪತ್ನಿಯ ರೂಪವೂ ಸಹಾ ಲೋಕಾದ್ಭುತವಾಗಿತ್ತೆಂದು ವರ್ಣಿತವಾಗಿದೆ. ಆದ್ದರಿಂದ ಈ ಉಭಯರ ಯೋಗ್ಯತೆ, ಅನುರಾಗ, ಶ್ರೀಮಂತತನ, ಪರರನ್ನು ವಂಚಿಸುವುದಕ್ಕೆ ತಕ್ಕಂತೆ ಅತಿಶಯವಾದ ಅಧಿಕಾರ, (ಇಂದ್ರಾಧಿಪತ್ಯ), ಉತ್ತೇಜಕ ಸಾಮಗ್ರಿಗಳ ಪೂರ್ಣತೆ, ಎಂದರೆ– ಏಕಾಂತ ಪ್ರದೇಶ, ವನಸೌಕುಮಾರ್‍ಯ, ಮಂದಮಾರುತಾದಿ ಕಾಮೋದ್ದೀಪಕ ಸಾಮಗ್ರಿಗಳು, ಮಕ್ಕಳು ಮರಿಗಳು, ಹೆಚ್ಚು ಬಂಧು ವರ್ಗಾದಿಗಳು ಎಂಪರೆ ಅವರ ಆಶ್ರಮದಲ್ಲಿ ಹೆಚ್ಚು ಗದ್ದಲಕ್ಕವಕಾಶವಿಲ್ಲದಿರುವಿಕೆ (ದಂಪತಿಗಳಿಬ್ಬರೇ ಇದ್ದುದು). ಈ ಸನ್ನಿವೇಶಗಳನ್ನೆಲ್ಲಾ ರಸಿಕರು ಆಲೋಚಿಸಿ ನೋಡಿದಲ್ಲಿ ಈ ಅಹಲ್ಯಾ ಸಂಬಂಧದಲ್ಲಿ ಇಂದ್ರನಿಗೆ ಬಹುಕಾಲದ ವರಿವಿಗೂ ಯಾವ ವಿಘ್ನವೂ ಇರಲಿಲ್ಲವೆಂದು ಸ್ಪಷ್ಟವಾಗಿ ತಿಳಿದುಬರುತ್ತೆ. ಇದಕ್ಕೆ ತಕ್ಕಂತೆ ಆ ಜೀವರಿಗೆ ಪರಸ್ಪರ ಸಂಬಂಧವು ಪದಗಿದ್ದು ಪ್ರಾರಬ್ಧ ಕರ್ಮಫಲ ರೂಪವೆಂಬದಾಗಿಯೂ ಹೇಳಲವಕಾಶವಿರುವುದರಿಂದ ಈ ಸಂಬಂಧವು ಬಹುಕಾಲ ನಡೆಸು ಅನಂತರ ಶಾಪ ರೂಪ ವಿಪತ್ಕಾಲವು ಪದಗಿ, ಗೌತಮರ ದೃಷ್ಟಿಗೆ ಈ ಅಂಶವು ಬಿದ್ದಿತೆಂದು ಭಾವ. ಇಂಥಾ ಅಕಾರ್‍ಯವು ದೃ

ಷ್ಟಿಗೆ ಬಿದ್ದ ಮೇಲೆ ಮನುಷ್ಯನಿಗೆ ಕೋಪವು ಬಾರದೆ ಇದ್ದೀತೆ? ಆದ್ದರಿಂದ ಈ ಸಂಪರ್ಭದಲ್ಲಿ ಲೋಕ ನ್ಯಾಯದಂತೆ ನೋಡಿದಲ್ಲಿ, ಕೊಲೆಗಳೇ ನಡೆಯ ಬೇಕು. ಆದರೆ ಗೌತಮರು ಪರಮ ಜ್ಞಾನಿಗಳಾದ್ದರಿಂದ ಈ ಅಪರಾಧಕ್ಕೆ ತಕ್ಕಂತೆ ಇಬ್ಬರಿಗೂ ಶಾಪವನ್ನು ಮಾತ್ರ ಕೊಟ್ಟರು. ಅವರ ಶಾಪದಿಂದ ಇಂದ್ರನಿಗೆ ವೈ ಕೆಟ್ಟಿತು. ಅಹಲ್ಯೆಯು ಶಿಲಾವಿಗ್ರಹವಾಗಿ, ನಿರಾಹಾರಿ ಯಾಗಿ ವಿಜನಾರಣ್ಯದಲ್ಲಿ ಶ್ರೀದಾಶರಥಿಯು ಅನುಗ್ರಹಾರ್ಥವಾಗಿ ತಮ್ಮಾ ಶ್ರಮಕ್ಕೆ ಬರುವವರಿವಿಗೂ ತಪಸ್ಸು ಮಾಡಿಕೊಂಡಿರಬೇಕಾಗಿ ಬಂತು. ಇಂ ದ್ರನಿಗೆ ಪುರುಷೇಂದ್ರಿಯಾಧಾರ ಭೂತವಾದ ಬೀಜಗಳೇ ಕಳಚಿಹೋದುವು. (ಲೋಕದಲ್ಲಿ ಅಕೃತ್ಯ ಮಾಡುವ ಪುರುಷರಿಗೆ ಹೀಗೆ ಶರೀರದಲ್ಲಿ ವ್ಯತ್ಯಾಸ ವಾಗುವುದೂ ಉಂಟಷ್ಟೆ?) ಅನಂತರ ಬ್ರಹ್ಮಾದಿ ದೇವತೆಗಳು ಶೇರಿ ಆಲೋಚಿಸಿ, ಸ್ವರ್ಗಾಧಿಪತಿ ಎಂಬ ಗೌರವದಿಂದ ಆತನಿಗೆ ಯಜ್ಞ ಪಶು ವಾದ ಮೇಕೆಯ ಶರೀರದಿಂದ ಬೀಜಗಳನ್ನು ತೆಗೆದು ಶರೀರದಲ್ಲಿ ನಾಟಿಸಿ ದರು, ಮತ್ತು ಆ ಮೊದಲು ಆತನನ್ನು "ಮೇಷವೃಷಣ" ನೆಂಬ ಹೆಸರಿ ನಿಂದ ಕರೆಯಲಾರಂಭಿಸಿದರು. (ಈಗಲೂ ಲೋಕದಲ್ಲಿ ಜನರಿಗೆ ಕೆಲವು ವೇಳೆ ಬೇರೆ ಪ್ರಾಣಿಗಳ ಶರೀರದಿಂದ ಕೆಲವು ವಸ್ತುಗಳನ್ನು ತೆಗೆದು ಸಂಧಾನ ಮಾಡುವುದು ರೂಢಿಯಲ್ಲಿದ್ದೇ ಇದೆ) ಹೀಗೆ ಒಬ್ಬ ದೇವತೆಯ ಕೃತ್ಯವು ನಾನಾ ದುಷ್ಟ ಪರಿಣಾಮಗಳನ್ನುಂಟುಮಾಡಿತೆಂದ ಮೇಲೆ ಅಲ್ಪರಾದ ಈ ಮಾನವರು ಯಾವುದಾದರೂ ಒಂದು ದುಷ್ಕೃತ್ಯವನ್ನು ಮಾಡಿದರೆ ಅವರಿಂದ ಎಷ್ಟು ತೊಂದರೆಗಳುಂಟಾಗುವುದೆಂಬುದನ್ನು ನಿದರ್ಶಿಸಲಿಕ್ಕಾಗಿ ಇಂಥಾ ಅದ್ಭುತ ಕಥಾ ವಸ್ತುವನ್ನು ಮಹಾ ಕವಿಗಳು ತಮ್ಮ ಗ್ರಂಥದಿಂದ ಸೂಚಿಸಿ ದ್ದಾರೆ. ಒಂದೇ ಅಂಶವು ವಕ್ತೃ ಭೇದದಿಂದ ಬೇರೆಬೇರೆ ರೀತಿಗಳಲ್ಲಿ ಪ್ರಚ ಲಿತವಾಗುವುದು. ಆದ್ದರಿಂದ ಈ ಅಹಲ್ಯಾ ವೃತ್ತಾಂತವನ್ನು ಒಂದೊಂದು ಗ್ರಂಥಗಳಲ್ಲಿ ಒಂದೊಂದು ತೆರನಾಗಿ ಹೇಳಿದೆಯಾಗಿ ನಿಶ್ಚಿತಾರ್ಥವನ್ನು ಭಗ ವದ್ಭಕ್ತರು ತಿಳಿಯಬೇಕೆಂಬ ಭಾವನೆಯಿಂದ ದೇವ ಮಾನುಷ ಸ್ವಭಾವಗಳ ವೈಚಿತ್ರ್ಯವನ್ನು ಪರ್ಯಾಲೋಚಿಸಿ ಶ್ರೀಮದಾಚಾರ್ಯರು ಒಂದು ಶ್ಲೋಕದಿಂದ ಹೇಳಿದ ಅಂಶವನ್ನು ಪುನಃ ವತ್ತಾಯದಿಂದ "ಬಲಂ ಸ್ವಭಕ್ತೇರಧಿಕಂಪ್ರ ಕಾಶಯನ್" ಎಂಬ ಎರಡನೇ ಶ್ಲೋಕದ ಮೂಲಕವೂ ಪ್ರಸ್ತಾಪಿಸಿ ನಿರ್ಣ

ಯ ಮಾಡಿರುತ್ತಾರಾಗಿ ಹರಿ ಭಕ್ತರು ರಾಮಾಯಣ, ಪದ್ಮಪುರಾಣ, ಭಾರತಾದಿಗಳಲ್ಲಿ ಉಕ್ತವಾದ ಅಂಶಗಳನ್ನೆಲ್ಲಾ ಆಚಾರ್ಯರು ಕ್ರೋಢೀಕರಿಸಿ ಹೀಗೆಯೇ ವಸ್ತು ಸ್ಥಿತಿ ಎಂದು ನಿರೂಪಿಸಿದ್ದಾರೆಂದು ತಿಳಿದು ಸಂತೋಷಿಸಬೇಕು.

ಮತ್ತೂ ಅಹಲ್ಯೆಗೆ ಶಾಪ ಕೊಟ್ಟ ಮೇಲೆ ಗೌತಮರು ಹಿಮಾಲಯ ಪ್ರಾಂತ ಹೋಗಿ ತಪಸ್ಸಿಗೆ ಕುಳಿತರು. ಅವರಿಗೆ ಇಂಥಾ ಹೆಂಡತಿಯಿಂದ ಅಪಕೀರ್ತಿ ಬಂದಿತಲ್ಲಾ ಎಂಬ ಭಯ ಹುಟ್ಟಿತಾಗಿ ಬಹುಕಾಲದ ವರಿವಿಗೂ ಅವರು ಕೂಡ, ಜನಗಳ ದೃಷ್ಟಿಗೆ ಬೀಳದೆ ಮರೆಯಲ್ಲಿದ್ದರು. ಆದರೆ ಶ್ರೀ ರಾಮಚಂದ್ರನ ಮಹಾ ದರ್ಶನ ಸೌಖ್ಯವನ್ನು ಪಡೆದ ಬಳಿಕ ತಾವು ದಂಪತಿಗಳು ಶೇರಿ ಪುನಃ ಗೃಹಸ್ಥಧರ್ಮಾನುಷ್ಠಾನ ಮಾಡಿಕೊಂಡಿರಲು ಶ್ರೀ ಹರ್ಯಾಜ್ಞೆಯಿತ್ತಾಗಿ ಶ್ರೀರಾಮನು ಇವರ ಶೂನ್ಯಾಶ್ರಮಕ್ಕೆ ಬಂದೊಡನೆಯೇ ಅಹಲ್ಯೆಯನ್ನು ವ್ಯಭಿಚಾರ ದೋಷದಿಂದ ಮುಕ್ತಳನ್ನಾಗಿ ಮಾಡಿ ಶಾಪವನ್ನು ಪರಿಹರಿಸಿ ನಿಜರೂಪಿನಿಂದ ಆಕೆಯು ಬೆಳಗುವಂತೆ ಮಾಡಿದ ಮೇಲೆ ಅತರ್ಕಿತವಾಗಿ ಗೌತಮರೂ ತಪಸ್ಸಿನಿಂದ ಹಿಂತಿರುಗಿ ತಮ್ಮ ಆಶ್ರಮಕ್ಕೆ ಸ್ವಾಮಿಯು ದಯಮಾಡಿರುವ ಅಂಶವನ್ನು ತಿಳಿದು ಕೂಡಲೇ ತಾವೂ ಬಂದು ಶೇರಿದರು. ಬಳಿಕ ಆ ದಂಪತಿಗಳನ್ನು ಪರಸ್ಪರ ಸಮಾಧಾನದಿಂದ ಶ್ರೀರಾಮನು ಶೇರಿಸಿಬಿಟ್ಟನು. ದಾಶರಥಿಯ ಆಜ್ಞೆಯಂತೆ ಉಭಯರೂ ಹಿಂದಿನಂತೆ ಸ್ನೇಹ ಭಾವವನ್ನು ಪಡೆದು ಒಮ್ಮನಸ್ಸಿನಿಂದ ಶ್ರೀರಾಮ-ಲಕ್ಷ್ಮಣರನ್ನು ಸತ್ಕರಿಸಿದರು. ಈ ಸಂದರ್ಭಗಳನ್ನು ಸಕಲ ಸತ್ಪುರುಷರೂ ಅಂಗೀಕರಿಸಿದರು. ಗೌತಮರಿಗೂ ಮನಸ್ಸಮಾಧಾನವಾಯಿತು, ಮುಖ್ಯವಾಗಿ ಶ್ರೀಭಗವಂತನ ರಾಮಾವತಾರ ಕಾರ್ಯಗಳಲ್ಲಿ ಇದು ಒಂದು ಮುಖ್ಯ ಕಾರ್ಯವಾಗಿ ಜ್ಞಾನಿಗಳಿಂದ ಭಾವಿಸಲ್ಪಟ್ಟಿತು. ಆದ್ದರಿಂದಲೇ ಜನಕನ ಸಭೆಯಲ್ಲಿ ಈ ಗೌತಮರ ಮಕ್ಕಳಾದ ಶತಾನಂದರು ವಿಶ್ವಾಮಿತ್ರರ ದರ್ಶನಾನಂತರ ರಾಮಲಕ್ಷ್ಮಣರೊಡನೆ ಸಂಭಾಷಿಸುವಾಗ ತಮ್ಮ ತಾಯಿ ತಂದೆಗಳನ್ನುದ್ಧರಿಸಿ ದಯಮಾಡಿದಿರಾ ಎಂದು ಪ್ರಸ್ತಾಪ ಮಾಡಿ ಮಾತನಾಡಿದಂತೆ ವರ್ಣಿಸಲಾಗಿದೆ, ಎಂದು ಮುಖ್ಯಾಭಿಪ್ರಾಯವು.

**ಶ್ಲೋಕ॥ ಬಲಂಸ್ವಭಕ್ತೇರಧಿಕಂಪ್ರಕಾಶಯನ್ನನುಗ್ರಹಂಚತ್ರಿದಶೇಷ್ವತುಲ್ಯಂ । ಅನನ್ಯಭಕ್ತಾಂಚಸುರೇಶಕಾಂಕ್ಷಯಾ ವಿಧಾಯನಾರೀಂಪ್ರಯಯೌತಯಾರ್ಚಿತಃ ॥೧೧॥**

ಅರ್ಥ.—ಸಃ=ಆ=ಶ್ರೀರಾಮನು, ಸ್ವಭಕ್ತೇಃ=ತನ್ನಲ್ಲಿ ಮಾಡುವ ಭಕ್ತಿಗಿರುವ, ಅಧಿಕಂ ಬಲಂ, ಅತಿಶಯವಾದ ಸಾಮರ್ಥ್ಯವನ್ನು, ಪ್ರಕಾಶಯನ್=ಪ್ರಕಟಿಸುತ್ತಾ, ತ್ರಿದಶೇಷು=ದೇವತೆಗಳಲ್ಲಿ ತಾನಿಟ್ಟಿರುವ, ಅತುಲ್ಯಂ=ಅಸದೃಶವಾದಂಥಾ, ಅನುಗ್ರಹಂಚ=ಅನುಗ್ರಹವನ್ನೂ ಕೂಡ, ಪ್ರಕಾಶಯನ್=ಪ್ರಕಟಿಸುತ್ತಾ, ಅನನ್ಯಭಕ್ತ್ಯಾಂಚ=ತನ್ನ ಹೊರತು ಮತ್ತೊಬ್ಬರಲ್ಲಿ ಈ ತೆರನಾದ ಭಕ್ತಿಯನ್ನಿಡದ, ತಾಂ = ಆ ಅಹಲ್ಯೆಯನ್ನು, ಸುರೇಶಕಾಂಕ್ಷಯಾ=ಸುರೇಶ=ದೇವೇಂದ್ರನ, ಕಾಂಕ್ಷಯಾ=ಇಚ್ಛೆಯಂತೆ, ನಾರೀಂ=ಸ್ತ್ರೀಯನ್ನಾಗಿ, ವಿಧಾಯ=ಮಾಡಿ, ತಯಾ=ಆಕೆಯಿಂದ, ಆರ್ಚಿತಃ = ಆರಾಧಿಸಲ್ಪಟ್ಟವನಾಗಿ, ಯಯೌ=ಹೊರಟನು.

ತಾತ್ಪರ್ಯ.—ಶ್ರೀರಾಮನು ಮೇಲೆ ಹೇಳಿದ ತೆರನಾಗಿ ಗೌತಮರ ಧರ್ಮ ಪತ್ನಿಯಾದ ಅಹಲ್ಯೆಯನ್ನು ಉದ್ಧಾರ ಮಾಡಿ ಸಲಹಿದ ಅಂಶವಲ್ಲಿ ಶ್ರೀಮದಾಚಾರ್ಯರು ಪ್ರಬಲವಾದ ಕಾರಣಗಳನ್ನು ಕೊಡಲು ಈ ಶ್ಲೋಕದಲ್ಲಿ ಸಹಾ ಶಿಲೆಯಾಗಿದ್ದುದನ್ನು ತಪ್ಪಿಸಿ ಮಾನುಷಳನ್ನಾಗಿ ಮಾಡಿ ಅವಳಿಂದಾರಾಧಿತನಾದನೆಂದು ಒತ್ತಿ ಹೇಳುವರು. ಧರ್ಮಶಾಸ್ತ್ರಗಳಲ್ಲಿ “ಪಾಪೀ ಪ್ರಾಯಶ್ಚಿತ್ತಂ ಕುರ್ಯಾತ್” ಎಂದು ವಿಧಾನ ವಾಕ್ಯವಿರುವುದರಿಂದ ಪಾಪ ಮಾಡಿದವನು ಅದರ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವೆಂಬ ಕರ್ಮ ವಿಶೇಷವನ್ನು ಮಾಡಬೇಕೆಂದು ಹೇಳಿದೆ. ಕೆಲವು ಮಹಾ ಪಾಪಗಳು ಅಂಥಾ ಪ್ರಾಯಶ್ಚಿತ್ತಗಳಿಂದಲೂ ಪರಿಹಾರ್ಯವಲ್ಲವೆಂದೂ ಗೊತ್ತಾಗಿದೆ. ಆದರೆ, ಭಗವಂತನ ಚರಣ ಕಮಲಗಳಲ್ಲಿ ಅವ್ಯಾಜವಾದ ಭಕ್ತಿಯನ್ನು ಮಾಡುವುದಾದರೆ ಆ ಭಕ್ತಿ ಎಂಬುದು ಧರ್ಮ ಶಾಸ್ತ್ರದಲ್ಲಿ ಹೇಳಿರುವ ಪ್ರಾಯಶ್ಚಿತ್ತಗಳಿಗಿಂತಲೂ ಹೆಚ್ಚು ಮಹಿಮೆಯನ್ನು ತೋರಿಸಿ ಭಕ್ತನಲ್ಲಿ ಪ್ರಮಾದ ವಶದಿಂದ ಶೇಖರಿಸಲ್ಪಟ್ಟ ಪಾತಕಗಳನ್ನು ಹೋಗಲಾಡಿಸಿ ಅವನನ್ನು ಶುದ್ಧನನ್ನಾಗಿ ಮಾಡುವುದು. ಆದ್ದರಿಂದ ಭಗವದ್ಭಕ್ತಿಯೇ ಸರ್ವ ಪಾಪಗಳಿಗೂ ಮುಖ್ಯ ಪ್ರಾಯಶ್ಚಿತ್ತವೆಂಬುದನ್ನು ಲೋಕಾನುಭವಕ್ಕೆ ತರಲಿಕ್ಕೂ, ಮತ್ತೂ ದೇವತೆಗಳಲ್ಲಿ ಸ್ವಾಮಿಗೆ ನೈಜವಾದ ಅನುಗ್ರಹವುಂಟೆಂಬುದನ್ನು ಪ್ರಕಾಶಪಡಿಸಲಿಕ್ಕೂ, ಅಹಲ್ಯೆಯನ್ನು ನಾನು ಬಲಾತ್ಕಾರದಿಂದ ಸಂಬಂಧ ಮಾಡಿದ್ದಕ್ಕಾಗಿ ಆಕೆಯು ಶಿಲೆಯಾದಳು ಅವಳು ಶಾಪ ಮುಕ್ತಳಾಗಿ ಎಂದಿಗೆ ಅಹ

ಲ್ಯೆಯಾಡಾಳು ? ಆ ರೀತಿಯಾಗದಿದ್ದರೆ ಆ ದಂಪತಿಗಳನ್ನಗಲಿಸಿದ ದೋಷಕ್ಕೆ ದೇವೇಂದ್ರನಾದ ನಾನು ಗುರಿಯಾಗಬೇಕಾಗುವುದಲ್ಲಾ ! ದೇವರೇನು ಮಾಡಲಿ–ಎಂಬಿತ್ಯಾದಿ ಪಶ್ಚಾತ್ತಾಪಗಳಿಂದ ನರಳುತ್ತಿರುವ ದೇವೇಂದ್ರನ ಸಾಧು ಭಾವದಿಂದ ಕೂಡಿದ ಇಚ್ಛೆಯನ್ನು ತಿಳಿದು, ಅವನ ಈ ತೆರನಾದ ಇಚ್ಛೆಯನ್ನನುಮೋದಿಸಿ ಸ್ವಾಮಿಯು ಕಲ್ಲಾಗಿದ್ದ ಅಹಲ್ಯೆಯನ್ನು ಹೆಣ್ಣಾಗುವಂತೆ ಮಾಡಿ ಬಳಿಕ ಆ ದಂಪತಿಗಳಿಂದಾರಾಧಿತನಾದನೆಂದು ಮುಖ್ಯ ತಾತ್ಪರ್ಯ.

ವಿಶೇಷಾರ್ಥ.––"ಧರ್ಮೋಽಭವತ್ಯಧರ್ಮೋಽಪಿಕೃತೋಽಭಕ್ತೈಸ್ತ್ವಯಾಚ್ಯುತ" ಎಂಬ ಪ್ರಮಾಣಗಳನ್ನು ಆಚಾರ್ಯರು ಹಿಂದಿನ ಅಧ್ಯಾಯಗಳಲ್ಲಿ ಕೊಟ್ಟೇ ಇರುವರು. ಪ್ರಾರಬ್ಧ ಕರ್ಮ ಭೋಗವು ದೇವಾದಿಗಳಿಗೂ ನಿಯಮ ಸಿದ್ಧವಾಗಿದೆ. ಅವರು ಅದನ್ನು ಭೋಗ ಮಾಡಿದ ಮೇಲೆಯೇ ಹರಿ ಸಾಕ್ಷಾತ್ಕಾರವಾಗಬೇಕು. ಈ ಕಾರಣಗಳಿಂದ ಇಂದ್ರ ಜೀವನು ಅಹಲ್ಯಾ ದೇವಿಯ ಸಂಬಂಧ ಮಾಡಬೇಕಾದ್ದು ಆ ಜೀವನ ಪ್ರಾರಬ್ಧ ಕರ್ಮ ಫಲವು, ಅದನ್ನು ತಪ್ಪಿಸಲಿಕ್ಕೆ ಯಾರಿಗೆ ಸಾಧ್ಯ? ಅದು ನಮ್ಮಂಥಾ ಪಾಮರರ ದೃಷ್ಟಿಯಿಂದ ದೋಷ ರೂಪವಾಗಿ ಗಣಿಸಲ್ಪಟ್ಟರೂ ಜ್ಞಾನಿ ದೃಷ್ಟಿಯಿಂದ ಮೇಲಿನ ಪ್ರಮಾಣಾನುಸಾರ ವಿಮರ್ಶಿಸಿದಲ್ಲಿ ಇಂದ್ರಾದಿಗಳೂ ಅಹಲ್ಯಾದಿ ಸ್ತ್ರೀಯರೂ ಅನನ್ಯ ಮನೋಭಾವದಿಂದ ಭಗವಂತನಲ್ಲಿ ಸ್ವಯೋಗ್ಯತಾನುಗುಣ ಪೂರ್ಣ ಭಕ್ತರಾದ ಪ್ರಯುಕ್ತ ಪ್ರಾರಬ್ಧ ಕರ್ಮ ನಿಯಾಮಕ ಶ್ರೀಹರಿ ಪ್ರೇರಣೆಯಿಂದ ತಾತ್ಕಾಲಿಕವಾಗಿ ಲೋಕ ಜುಗುಪ್ಸಿತ ಕಾರ್ಯವನ್ನೆಸಗಿದ್ದರಿಂದ ಅವರಿಗೆ ಅದು ಅಷ್ಟು ಬಾಧಕವನ್ನುಂಟು ಮಾಡದೇ ಭಗವದ್ದರ್ಶನಕ್ಕೆ ಸಾಮಗ್ರಿಯಾಗಿ ಏರ್ಪಟ್ಟು ಶ್ರೀರಾಮಾಭಿನ್ನನಾದ ಪರಬ್ರಹ್ಮನ ಸಾಕ್ಷಾತ್ಕಾರವನ್ನು ಕೊಟ್ಟು ಆ ಕ್ಷಣದಲ್ಲಿಯೇ ಸ್ವಾಮಿಯನ್ನು ಭಕ್ತಿಯೋಗದಿಂದಾರಾಧಿಸಿ ಅವನ ಪೂರ್ಣಾನುಗ್ರಹಕ್ಕೆ ಪಾತ್ರರಾಗುವಂತೆ ಮಾಡಿತೆಂದು ತಾತ್ಪರ್ಯ. ಆದ್ದರಿಂದ ಭಗವಂತನಲ್ಲಿ ಪೂರ್ಣ ಭಕ್ತರಾದ ಅನುಗ್ರಾಹ್ಯ ಕೋಟಿ ಪ್ರವಿಷ್ಟರಾದ ದೇವತೆಗಳು ನಡಿಸುವ ಅಧರ್ಮಗಳೂ ಕೆಲವು ವೇಳೆ ಭಗವಂತನಿಂದ ಧರ್ಮಗಳಾಗಿ ಪರಿಗಣಿಸಲ್ಪಡುವವು. ಅದೇ ಭಕ್ತನಲ್ಲದವನಿಂದ ಮಾಡಲ್ಪಡುವ ನ್ಯಾಯವಾದ ಧರ್ಮ ಕಾರ್ಯಗಳೂ ಕೆಲವು ವೇಳೆ ಭಗವದಿಚ್ಛೆಗೆ ಅಧರ್ಮ

ಗಳಾಗಿ ತೋರಿ ಬಂದು ಅವನಿಗೆ ಹಾನಿಯೂ ಉಂಟಾಗುವುದು ಎಂಬ ಶಾಸ್ತ್ರಾರ್ಥವನ್ನು ಈ ಕಥಾ ಸಂದರ್ಭದಿಂದ ಶ್ರೀಮದಾಚಾರ್ಯರು ನೆನಪಿಗೆ ತಂದು ಕೊಟ್ಟಿರುವರೆಂದು ಭಾವಿಸಬೇಕು. ಇದಕ್ಕೆ ಉದಾಹರಣೆಯಾಗಿ ಶ್ರೀಮದ್ಭಾಗವತ ಷಷ್ಟ ಸ್ಕಂಧದಲ್ಲಿ ನಿರೂಪಿತವಾದ ಅಜಾಮಿಳೋಪಾಖ್ಯಾನವನ್ನು ಸತ್ಪುರುಷರು ನೆನಪಿಗೆ ತಂದುಕೊಳ್ಳಬಹುದು. ಭಕ್ತನಾದ ಅಜಾಮಿಳನು ಲೋಕ ದೃಷ್ಟಿಯಿಂದ ಅನುಚಿತ ಕಾರ್ಯ ಪರಂಪರೆಗಳನ್ನು ಮಾಡುತ್ತಿದ್ದರೂ ಅಂತ್ಯಕಾಲದಲ್ಲಿ ಇತರರಿಗೆ ಪ್ರಯತ್ನ ಪೂರ್ವಕವಾಗಿ ಮಾಡಬೇಕೆಂದರೂ ನೆನಪಿಗೆ ಬಾರದ ನಾರಾಯಣ ಸ್ಮರಣೆಯನ್ನು ಆತನು ಲೀಲಾಜಾಲವಾಗಿ ಅಪ್ರಯತ್ನದಿಂದ ಮಾಡಿದವನಾಗಿ ಶ್ರೀಹರಿಯ ಪೂರ್ಣ ಕರುಣಾ ಕಟಾಕ್ಷಕ್ಕೆ ಪಾತ್ರನಾಗಿ ತಾನು ಮುಕ್ತನಾದುದಲ್ಲದೆ, ನಾಮ ಸ್ಮರಣದ ಮಹಿಮಾತಿಶಯವನ್ನು ಆ ಚಂದ್ರಾರ್ಕವಾಗಿ ಮುಕ್ತಿಯೋಗ್ಯರಾದ ಜೀವ ಸಮುದಾಯಕ್ಕೆ ವ್ಯಕ್ತ ಮಾಡಿ ಕೊಟ್ಟಿರುವನು. ಆದ್ದರಿಂದಲೇ ಶ್ರೀಮದಾಚಾರ್ಯರು "ಧರ್ಮೋಭವತ್ಯಧರ್ಮೋಽಪಿ" ಎಂಬ ಪ್ರಮಾಣವನ್ನು ಇಂಥಾ ತೊಡಕುಗಳನ್ನು ಬಿಡಿಸಲನುಕೂಲವಾಗಬೇಕೆಂಬ ಇಚ್ಛೆಯಿಂದಲೇ ಘಂಟಾ ಘೋಷವಾಗಿ ಹೇಳಿರುವರು. ಲೋಕೇಶರುಗಳಾದ ಇಂದ್ರಾದಿಗಳಲ್ಲಿ ಸ್ವಾಮಿಗಿರುವ ಪ್ರೇಮವೆಂಥದು? ಅನನ್ಯ ಭಾವದಿಂದ ಭಜಿಸುವ ಭಕ್ತರನ್ನು ದ್ರಗಿಸುವುದರಲ್ಲಿ ಸ್ವಾಮಿಗೆ ಇರುವ ಔದಾರ್ಯವು ಎಂತಹುದು, ಸಹನೆಯಾದರೋ ಎಂತಹುದು? ಇವುಗಳನ್ನೆಲ್ಲಾ ಯೋಚಿಸಿಯೇ ಶ್ರೀಮದ್ ಮಂತ್ರಾಲಯ ರಾಯರು ಕೂಡ ದೇವರನ್ನು ಕೊಂಡಾಡುವಾಗ "ಭಕ್ತವತ್ಸಲ, ಭಕ್ತಾಪರಾಧ ಸಹಿಷ್ಣು" ಎಂಬಿತ್ಯಾದಿ ಗುಣಗಳನ್ನೇ ಕೊಂಡಾಡಿರುವರು. ಇವುಗಳನ್ನೆಲ್ಲಾ ತಿಳಿದು ನಾವುಗಳು ಅಂಥಾ ಶ್ರೀಶನ ಪೂರ್ಣಾನುಗ್ರಹಕ್ಕಾಗಿ ಸರ್ವದಾ ಅವನ ಚರಣಾರವಿಂದಗಳಲ್ಲಿ ನಿರತಿಶಯವಾದ ಮಾಹಾತ್ಮ್ಯಜ್ಞಾನಪೂರ್ವಕ ಸುದೃಢವಾದ ಭಕ್ತಿಯುಳ್ಳವರಾಗಬೇಕು.

**ಶ್ಲೋಕ|| ಶ್ಯಾಮಾವದಾತೇಜಗದೇಕಸಾರೆ ಸ್ವನಂತಚಂದ್ರಾಧಿಕಕಾಂತಿ ಕಾಂತೆ । ಸಹಾನುಜೇಕಾರ್ಮುಕಬಾಣಪಾಣೌ ಪುರೀಂಪ್ರವಿಷ್ಟೇ ತುತುಷುರ್ವಿದೇಹಜಾಃ ||೧೨||**

ಅರ್ಥ.—ಶ್ಯಾಮಾವದಾತೆ=ಬಿಳಪು, ಕಪ್ಪು ಮಿಶ್ರವಾದ ದೇಹ ಬಣ್ಣವುಳ್ಳ, ಶ್ಯಾಮ=ನೀಲವರ್ಣದಲ್ಲಿ, ಅವದಾತೆ=ಶುದ್ಧ ನೀಲ ವರ್ಣವೆನ್ನಿಸಿದ (ಇಂದ್ರನೀಲ) ಮಣಿಯಂತಿರುವ, ಜಗದೇಕಸಾರೆ=ಜಗತ್ತಿನಲ್ಲೆಲ್ಲಾ ಅತಿ ಬಲಿಷ್ಠನೆನ್ನಿಸಿರುವ, ಸ್ವನಂತಚಂದ್ರ=ಶ್ರೇಷ್ಠರೆನ್ನಿಸಿದ ಅನೇಕ ಚಂದ್ರರುಗಳಿಗಿಂತ, ಅಧಿಕ=ಹೆಚ್ಚಾದ, ಕಾಂತಿ=ಕಾಂತಿಯಿಂದ, ಕಾಂತೇ=ಮನೋಹರನಾದ, ಸಹಾನಜೆ=ತಮ್ಮನಿಂದೊಡಗೂಡಿರುವ, ಕಾರ್ಮುಕಬಾಣಪಾಣೌ=ಬಿಲ್ಲು ಬಾಣಗಳನ್ನು ಕೈಯ್ಯಲ್ಲಿ ಹಿಡಿದಿರುವ ಶ್ರೀರಾಮನು, ಪುರೀಂ=ಮಿಥಿಲಾಪುರಿಯನ್ನು, ಪ್ರವಿಷ್ಟೇ=ಪ್ರವೇಶಿಸುತ್ತಿರಲಾಗಿ, ವಿದೇಹಜಾಃ = ವಿದೇಹ ದೇಶದ ಜನರೆಲ್ಲರೂ, ತುತುಷುಃ=ಸಂತೋಷಪಟ್ಟರು.

ತಾತ್ಪರ್ಯ.—ಅಹಲ್ಯಾ ಗೌತಮರಿಂದ ಆರಾಧನೆಯನ್ನು ಪರಿಗ್ರಹಿಸಿದ ಬಳಿಕ ಶ್ರೀರಾಮ ಲಕ್ಷ್ಮಣರಿಂದೊಡಗೂಡಿದ ವಿಶ್ವಾಮಿತ್ರರು ಮಿಥಿಲಾಪುರದ ಕಡೆಗೆ ಪ್ರಯಾಣ ಮಾಡಿ, ನಾನಾ ವನ ಸೌಂದರ್ಯಗಳನ್ನು ನೋಡುತ್ತಾ, ಅಲ್ಲಲ್ಲಿ ವಾಸ ಮಾಡುತ್ತಿರುವ ಋಷಿ ಮಂಡಲಿಯವರಿಂದ ಸತ್ಕೃತರಾಗುತ್ತಾ ಕ್ರಮೇಣ ಜನಕನ ರಾಜಧಾನಿಗೆ ಬಂದು ಸೇರಿದರು. ಈ ರೀತಿಯಾಗಿ ವಿಶ್ವಾಮಿತ್ರರ ಸಂಗಡ ವಿದೇಹ ಪಟ್ಟಣಕ್ಕೆ ಬಂದ ಈ ರಾಜಪುತ್ರರಲ್ಲಿ, ಬಿಳಪು ಮಿಶ್ರವಾದ ಕಪ್ಪು ಬಣ್ಣದಿಂದ ಕೂಡಿದ ಮೈಬಣ್ಣದಿಂದ ಶುದ್ಧವಾದ ಇಂದ್ರ ನೀಲ ರತ್ನದಿಂದ ಮಾಡಿದ ಮಣಿ ವಿಗ್ರಹದಂತೆ ಬೆಳಗುತ್ತಿರುವ, ಏಕಕಾಲದಲ್ಲಿ ಉದಯಿಸಿದ ಅನೇಕ ಚಂದ್ರ ಮಂಡಲಗಳ ಕಾಂತಿಯನ್ನೂ ಮೀರುವಂತಿರುವ ಮುಖ ಕಾಂತಿಯಿಂದ ಶೋಭಿಸುತ್ತಿರುವ, ಜಗತ್ತಿನಲ್ಲಿರುವ ಎಲ್ಲಾ ವಸ್ತುಗಳಲ್ಲೂ ತದ್ರೂಪನಾಗಿ ತಾನೇ ಅಡಗಿಕೊಂಡಿದ್ದು ಆಯಾ ವಸ್ತುಗಳಿಗೆ ಶ್ರೇಷ್ಠತೆಯನ್ನುಂಟು ಮಾಡುವ ನಿಮಿತ್ತ ಸರ್ವಶ್ರೇಷ್ಠನೆನ್ನಿಸಿರುವ, ಬಲ ಜ್ಞಾನಾದಿ ಸದ್ಗುಣ ಸಾರಭೂತನಾದ, ಕೈಗಳಲ್ಲಿ ಕ್ಷತ್ರಿಯರಿಗೆ ಯೋಗ್ಯವಾದ ಧನುರ್ಬಾಣಗಳನ್ನು ಹಿಡಿದು, ಮೇಲಿನ ಎಲ್ಲಾ ಅಂಶಗಳಲ್ಲಿಯೂ ತನ್ನನ್ನೇ ಹೋಲುವ ತಮ್ಮನಿಂದ ಒಡಗೂಡಿದ ಶ್ರೀರಾಮಚಂದ್ರನು ತಮ್ಮ ರಾಜಧಾನಿಗೆ ಬರುತ್ತಿರುವುದನ್ನು ಕಂಡು ವಿದೇಹ ರಾಜನ ಪ್ರಜಾಕೋಟಿಯೇ ಪರಮಾನಂದ ಭರಿತವಾಯಿತು.

ವಿಶೇಷಾರ್ಥ.—ಶ್ರೀ ಭಗವಂತನು, ಯಾವ ಸಂದರ್ಭದಲ್ಲಿ ಭಕ್ತರಿಗೆ ದರ್ಶನ ಕೊಟ್ಟಾಗ್ಯೂ ಪರಮ ಸೌಂದರ್ಯದಿಂದ ಶೋಭಿಸುವ ತನ್ನ ದಿವ್ಯ ಮೂರ್ತಿಯನ್ನೆ ತೋರಿಸುವುದು ಪದ್ಧತಿ. ಸಂದರ್ಭಗಳನ್ನನುಸರಿಸಿಯೂ ದರ್ಶನವನ್ನು ಹೊಂದುವ ಅಧಿಕಾರಿಗಳ ಯೋಗ್ಯತೆಗೆ ತಕ್ಕಂತೆಯೂ ಅವಸ್ಥಾ ವಿಶೇಷಗಳನ್ನು ತೋರ್ಪಡಿಸುವುದುಂಟು. ಧ್ರುವ ರಾಜನಿಗೆ ದರ್ಶನ ಕೊಡಬಂದಾಗ ಚಕ್ರ ಶಂಖಾದಿ ಸ್ವಲಕ್ಷಣಗಳಿಂದ ಶೋಭಿಸುವ ಮೂರ್ತಿಯನ್ನು ಪ್ರಕಟಿಸಿದ್ದಾನೆ, ಗಜೇಂದ್ರನಿಗೆ ಗರುಡಾರೂಢವಾದ ಮೂರ್ತಿ ದರ್ಶನವಾಗಿದೆ. ಪ್ರಹ್ಲಾದನಿಗೆ–ದುಷ್ಟ ನಿಗ್ರಹ ಕಾರ್ಯಾಸಕ್ತವಾದ ದುರಿತ ಪರಿಹಾರಕ ಶ್ರೀಮನ್ನೃಸಿಂಹ ರೂಪ ದರ್ಶನವಾಗಿದೆ. ವಿಶ್ವಾಮಿತ್ರ ವಿದೇಹ ಪ್ರಭೃತಿಗಳಿಗೆ ಸುಕುಮಾರವಾದ ಮತ್ತು ಕನ್ಯಾ ಪಾಣಿಗ್ರಹಣ ಯೋಗ್ಯವಾದ ಶ್ರೀಧರ ರೂಪ ವಿಶಿಷ್ಟನಾಗಿ ದರ್ಶನ ಕೊಟ್ಟಿರುವನು. ಈ ದರ್ಶನವನ್ನು ಮಾಡಿದ ವಿದೇಹ ದೇಶದ ಪ್ರಜಾ ಮಂಡಲಿಯಲ್ಲವೂ ಮಹಾ ಸುಕೃತ ಉಳ್ಳದ್ದು ಆದ್ದರಿಂದಲೇ ಇಂಥಾ ಲಕ್ಷ್ಮಣ ಸಮೇತನಾದ ಶ್ರೀರಾಮ ಚಂದ್ರನ ಸಂದರ್ಶನವು ಸೌಮ್ಯ ರೀತಿಯಲ್ಲಿ ಅವರುಗಳಿಗೆ ಒದಗಿತು. ಮತ್ತೂ ಈ ಸಂದರ್ಭದಲ್ಲಿ ಧನುರ್ಬಾಣ ಸಮೇತವಾದ ರಾಜರಾಜೇಶ್ವರ ರೂಪದಿಂದ ಸ್ವಾಮಿಯ ದರ್ಶನವನ್ನು ಪಡೆದ ಆ ಪಟ್ಟಣಿಗರು ಈತನು ನಮ್ಮ ರಾಜನು ವೀರ್ಯ ಶುಲ್ಕವಾಗಿ ಇಟ್ಟಿರುವ ಶೈವ ಧನುರ್ಭಂಗವನ್ನು ಮಾಡಿ ಜನಕ ಪುತ್ರಿಯನ್ನು ಖಂಡಿತವಾಗಿಯೂ ಪಾಣಿಗ್ರಹಣ ಮಾಡಿಕೊಳ್ಳುವನು, ಈ ನೂತನ ದಂಪತಿಗಳನ್ನು ನೋಡುವ ಭಾಗ್ಯವು ಪರಿಪಕ್ವವಾಗಿ ಈ ಅಣ್ಣ ತಮ್ಮಂದಿರನ್ನು ವಿಧಿಯು ನಮ್ಮ ಪಟ್ಟಣಕ್ಕೆ ತಂದು ಬಿಟ್ಟಿರುವನು ಎಂದು ಪ್ರಜಾವರ್ಗವೇ ಆನಂದ ಸಾಗರದಲ್ಲಿ ಓಲಾಡಿತು.

**ಶ್ಲೋಕ|| ಪಪುರ್ನಿಕಾಂತಂಸರಸಾಕ್ಷಿಭೃಂಗೈ ರ್ವರಾನನಾಬ್ಜಂಪುರುಷೋತ್ತಮಸ್ಯ| ವಿದೇಹನಾರೀನರವರ್ಯಸಂಘಾಃಯಥಾಮಹಾಪೌರುಷಿಕಾಸ್ತದಂಘ್ರಿಂ ||೧೩||**

ಅರ್ಥ.—ವಿದೇಹನಾರೀನರವರ್ಯಸಂಘಾಃ=ವಿದೇಹ=ವಿದೇಹ ದೇಶದ, ನಾರೀ=ಹೆಣ್ಣು ಮಕ್ಕಳು, ನರ=ಗಂಡಸರು, ವರ್ಯ = ಇವರುಗಳಲ್ಲಿ

ಶ್ರೇಷ್ಠರಾದವರ, ಸಂಘಾಃ=ಗುಂಪುಗಳು, ಪುರುಷೋತ್ತಮಸ್ಯ'= ಕ್ಷರಾಕ್ಷರ ಪುರುಷ ಶ್ರೇಷ್ಠನಾದ ಶ್ರೀರಾಮಚಂದ್ರನ, ವರಾನನಾಬ್ಜಂ=ವರ = ಶ್ರೇಷ್ಠ ವಾದ, ಆನನ=ಮುಖವೆಂಬ, ಅಬ್ಜಂ=ಕಮಲವನ್ನು, ಸರಸಾಕ್ಷಿಭೃಂಗೈಃ= ಸರಸ=ಸ್ನೇಹ ಪುರಸ್ಸರವಾದ, ಅಕ್ಷಿ=ನೇತ್ರಗಳೆಂಬ, ಭೃಂಗೈಃ=ದುಂಬಿಗ ಳಿಂದ, ನಿತಾಂತಂ=ಬಹಳವಾಗಿ, ಪಪುಃ=ಕುಡಿದರು, ಮಹಾಪೌರುಷಿಕಾಃ= ಮಹಾ ಪುರುಷನಾದ ಶ್ರೀ ಹರಿಯ ಭಕ್ತರು, ತದಂಘ್ರಿಂ ಯಥಾ=ಆ ಭಗ ವಂತನ ಪಾದವನ್ನು ಹೇಗೋ ಹಾಗೆ, ಪಪುಃ=ಕುಡಿದರು.

ತಾತ್ಪರ್ಯ.— ಶ್ರೀರಾಮನು ವಿದೇಹ ನಗರವನ್ನು ಪ್ರವೇಶಿಸಿದ ಕೂಡಲೆ ಆ ಪಟ್ಟಣಿಗರಾದ ಸತ್ಪುರುಷರೆಲ್ಲರೂ, ಪರಮಾನಂದದಿಂದ ಪೂರ್ಣ ವಿಶ್ವಾ ಸದಿಂದ ಕೂಡಿದ ಕಸ್ಪಾದ ತಮ್ಮ ಕಣ್ಣುಗಳಿಂದ ಪುರುಷರಲ್ಲಿ ಅತ್ಯುತ್ತಮ ನಾದ (ಮಹಾ ಪುರುಷನಾದ) ಆ ಶ್ರೀರಾಮಚಂದ್ರನ ತಾವರೆಯಂತೆ ಸುಂದ ರವಾದ ಮುಖವನ್ನು ಎಡೆಬಿಡದೇ ನೋಡಿ ಹರ್ಷಪಟ್ಟರು. ಈ ಹರ್ಷದಲ್ಲಿ ಆ ಪಟ್ಟಣದ ಸ್ತ್ರೀ ಪುರುಷರೆಲ್ಲರೂ ಭಾಗಿಗಳಾಗಿದ್ದರು. ಪರಮಾತ್ಮನ ಅನಂತ ಮಹಿಮಗಳನ್ನರಿತ ಹರಿ ಭಕ್ತರು ಅತರ್ಕಿತವಾಗಿ ಬಂದೊದಗುವ ಸ್ವಾಮಿಯನ್ನು ಕಂಡರೆ ಹೇಗೆ ಪರಮಾನಂದದಿಂದ ಎವೆಯಿಕ್ಕದೇ ನೋಡಿ ಆನಂದಿಸುವರೋ ಹಾಗೆ ಮಿಥಿಲಾಪುರದ ಸ್ತ್ರೀ ಪುರುಷರೆಲ್ಲರೂ ರಾಮ ಮು ಖಾಂಬುಜವನ್ನು ಆನಂದದಿಂದ ದರ್ಶನ ಮಾಡಿದರು.

ವಿಶೇಷಾರ್ಥ.—ಮಹತ್ತರವಾದ ಲೋಕಾನುಭವವುಳ್ಳ ಕವಿಗಳು ಯಾವ ಒಂದಂಶವನ್ನು ಹೇಳಲೀ ಸದೃಷ್ಟಾಂತವಾಗಿಯೂ, ಸರಸವಾಗಿ ಯೂ, ಪಂಡಿತ ಪಾಮರ ಮನೋರಂಜಕವಾಗಿಯೂ, ಹೇಳುವುದು ವಾಡಿಕೆ. ಇತರರ ಆನಂದಕ್ಕಾಗಿ ಹೇಳಬೇಕೆಂದಿರುವ ಅಂಶವನ್ನು ತಾವು ಮೊದಲು ಅನುಭವಿಸಿರುವುದರಿಂದ ಲೋಕವೆಲ್ಲವೂ ಇಂಥಾ ರಸಾನುಭವವನ್ನು ಮಾ ಡಲಿ ಎಂಬ ಉದಾರ ಭಾವದಿಂದ ಅದನ್ನು ಹೊರಗೆಡಹುವುದು. ಕವಿಸಮೂ ಹ ಸಿದ್ಧವಾದಂಶ, ಪ್ರಕೃತ ಶ್ರೀಮದಾಚಾರ್ಯರು ಮಿಥಿಲಾಪುರವನ್ನು ಪ್ರ ವೇಶಿಸಿದ ಶ್ರೀರಾಮಚಂದ್ರನನ್ನು ಆ ಪಟ್ಟಣಿಗರು ಹೇಗೆ ನೋಡಿದರೆಂದು ಹೇಳಬೇಕಾಗಿ ಬರಲು, ಅತ್ಯುತ್ತಮರಾದ ಭಕ್ತವರ್ಯರು ತಮ್ಮ ಉಪಾಸ್ಯ ಮೂರ್ತಿಯ ಪಾದ ದರ್ಶನವನ್ನು ಹೊಂದಿದಾಗ ಆ ಮೀರಿದ ಭಕ್ತಿಯಿಂದ

ಮೂರ್ತಿಯ ಮಹಿಮಾತಿಶಯಾನುಭವವು ಅವರ ಹೃದಯದಲ್ಲಿ, ಹೊಸ ಹೊಸ ಕ್ರಮದಲ್ಲಿ ಪ್ರೇಮ ವಿಶೇಷಗಳನ್ನುಂಟು ಮಾಡುವುದು. ಈ ರೀತಿಯಾಗಿ ಎಲ್ಲಾ ಒಟ್ಟುಗೂಡಿದ ಪ್ರೇಮ ಭಾವವನ್ನೇ ಶಾಸ್ತ್ರಕಾರರು ರಸವೆಂದು" ಹೇಳುವರು. ಇದಕ್ಕೆ ಪ್ರಮಾಣ "ಬಾಹ್ಯಾರ್ಥಾಲಂಬನೋ ಯಸ್ತು ವಿಕಾರೋಮಾನಸೋಭವೇತ್, ಸಭಾವಃ ಕಥ್ಯತೆಸದ್ಭಿಃ ತಸ್ಯೋ ತ್ಕರ್ಷೋರಸಃ ಸ್ಮೃತಃ" ಎಂದು ಇಂಥಾ ರಸವನ್ನನುಭವಿಸುವ ಇಚ್ಛೆ ಯಿಂದ ಆ ಪ್ರತ್ಯಕ್ಷನಾದ ಭಗವಂತನನ್ನು ನೂತನ ನೂತನ ರೀತಿಗಳಿಂದ ಮಹಿಮೆಗಳಿಗಾಕರನೆಂದು ತದ್ಯೈಕ ನಿರತ ಮನೋಭಾವದಿಂದ ನೋಡಿ ಹೇಗೆ ದಣಿವರೋ ಹಾಗೆ ಮಿಥಿಲೆಯ ಸ್ತ್ರೀ ಪುರುಷರೆಲ್ಲರೂ ಶ್ರೀರಾಮ ಮೂರ್ತಿಯ ಮುಖವೆಂಬ ತಾವರೆಯನ್ನು ದುಂಬಿಗಳಂತಿರುವ ತಮ್ಮ ಕಣ್ಣು ಗಳಿಂದ ಎವೆ ಬಿಡದೇ ನೋಡುತ್ತಾ, ಈತನು ಪುರುಷೋತ್ತಮನೆಂದೂ, ನಮ್ಮ ಭಕ್ತಿ ಎಂಬ ಕನ್ಯಾ ಮಣಿಗೆ ಪಾಣಿಗ್ರಹಣಾರ್ಥವಾಗಿ ದಯಮಾಡಿ ಬಂದಿರುವ ವರನೇ ಸರಿ, ಎಂಬ ಸ್ನೇಹ ಪೂರಿತವಾದ ಮನಸ್ಸಿನಿಂದ ಪದೇ ಪದೇ ನೋಡಬೇಕೆಂಬ ಆತುರದಿಂದ ದುಂಬಿಗಳು, ಬಂದು ಪದೇ ಪದೇ ತೃಪ್ತಿ ಇಲ್ಲದೇ ತಾವರೆಯಲ್ಲಿ ಕುಳಿತು ಅಲ್ಲಿನ ಮಕರಂದವನ್ನಾಸ್ವಾದಿಸುವಂತೆ ಸೌಂದರ್ಯ ಸೌಕುಮಾರ್ಯ ಸೌಶೀಲ್ಯಲಾಲಿತ್ಯಾದಿ ಗುಣ ಪರಂಪರೆಗಳಿಂದ ಬೆಳ ಗುವ ರಾಮನ ಮುಖ ಪಂಕಜವನ್ನು ತಮ್ಮ ಕಣ್ಮನಗಳಿಗೆ ಇನ್ನಷ್ಟು ಮತ್ತ ಷ್ಟು ಈ ಮುಖವನ್ನು ನೋಡಬೇಕೆಂಬ ಪ್ರೇಮಾತಿಶಯದಿಂದ ಕೂಡಿದವ ರಾಗಿ ನೋಡಿದರೆಂದು ಭಾವ. ಭಕ್ತವರ್ಯರು ಭಗವತ್ಪಾದ ಕಮಲವನ್ನು ನೋಡುವಾಗಲೂ ಅವರುಗಳ ಮನೋಭಾವವು ಹೀಗೆಯೇ ತದ್ಯೈಕ ನಿರತ ವಾಗುವುದು. ಇದನ್ನು ಭಾಗವತದಲ್ಲಿ ಗೋಪೀ ಜನರು ಶ್ರೀ ಕೃಷ್ಣನನ್ನು ಅಗಲಿ ಪುನಃ ಸಂಧಿಸಿದಾಗ ಅನುಭವಿಸಿದ ಆನಂದದಿಂದ ತಿಳಿಯಬಹುದು. ಇದು ಗೂಢ ತಾತ್ಪರ್ಯ, ಶ್ರೀಮದಾಚಾರ್ಯರು "ಮಹಾಪೌರುಷಿಕಾಸ್ತದಂ ಘ್ರಿಂ" ಎಂದು ಉಪಮಾನವನ್ನು ನುಡಿಯಲು ಇನ್ನೊಂದು ಕಾರಣವೂ ಉಂಟು. ಇವರಿಗೆ ಉಪಾಸ್ಯ ಮೂರ್ತಿಯು ಶ್ರೀರಾಮಚಂದ್ರನೇ, ಇವರು ಮಾನಸ ಪೂಜೆಯನ್ನು ಮಾಡುವ ವೇಳೆ ಆ ಸ್ವಾಮಿಯ ಆಪಾದ ಮಸ್ತಕ ರೂಪವನ್ನು ಮನಸಾ ಒಂದಾವ ಮೇಲೊಂದನ್ನು ಧ್ಯಾನ ಯೋಗದಿಂದ

ದರ್ಶನ ಮಾಡುವುದು ನಿತ್ಯವೂ ಪದ್ಧತಿ. ಆ ಸಮಯಗಳಲ್ಲಿ ಪೂರ್ಣ ಭಕ್ತಿಯಿಂದ ರುದ್ರಾದಿ ದೇವತೆಗಳಿಗೆ ಸಹಾ ಉಪಾಸನೆಗೆ ಮೀರಿದ ಗುಣೋತ್ಕರ್ಷವನ್ನು ಭಗವಂತನಲ್ಲಿ ದರ್ಶನಪಡೆಯುವ ಮಹಾಧಿಕಾರಿಗಳು ತಾವು ಆಗಿರುವುದರಿಂದ, ಹಾಗೆ ಸ್ವಾಮಿಯ ಪಾದಕಮಲ ದರ್ಶನಾನಂದವನ್ನು ಸರಸವಾಗಿ ಸರ್ವದಾ ಪಡೆಯುತ್ತಿರುವ ಅಭ್ಯಾಸದಿಂದ ಕೂಡಿದ ಇವರ ಮನಸ್ಸು ಈ ಶ್ಲೋಕದಿಂದ ವಿದೇಹಪಟ್ಟಣದ ಜನರು ಶ್ರೀರಾಮಮೂರ್ತಿಯನ್ನು ಸಂದರ್ಶನ ಮಾಡಿದರೆಂದು ಹೇಳುವ ನೆಪದಲ್ಲಿ ತಮ್ಮ ರಸಾ ಸ್ವಾದನ ಕ್ರಮವನ್ನು ಹೊರಗೆಡವಿತೆಂದು ತಾತ್ಪರ್ಯ, ಇದೇ ಪರಮ ಭಾಗವತರ ಭಕ್ತಿ ಪ್ರಸರಣಕ್ರಮವೆಂದು ಆಶಯವು.

**ಶ್ಲೋಕ|| ತದಾವಿದೇಹಃ ಪ್ರತಿಲಭ್ಯರಾಮಂ ಸಹಸ್ರನೇತ್ರಾವರಜಂಗವಿಷ್ಟಂ | ಸಮರ್ಚಯಾಮಾಸ ಸಹಾನುಜಂತಂ ಋಷಿಂಚಸಾಕ್ಷಾಜ್ವಲನಪ್ರಕಾಶಂ ||೧೪||**

ಅರ್ಥ.—ತದಾ=ಆಗ, ವಿದೇಹ=ವಿದೇಹಾಧಿಪತಿಯಾದ ಜನಕನು, ಸಹಸ್ರನೇತ್ರಾವರಜಂ=ಸಹಸ್ರನೇತ್ರ=ದೇವೇಂದ್ರನಿಗೆ, ಅವರಜಂ=ತಮ್ಮನಾದ ಉಪೇಂದ್ರಾಭಿನ್ನನಾದ, ಗವಿಷ್ಟಂ = ಭೂಮಿಯಲ್ಲಿ ಅವತರಿಸಿರುವ, ರಾಮಂ=ಶ್ರೀರಾಮನನ್ನು, ಪ್ರತಿಲಭ್ಯ=ಅತಿಥಿಯನ್ನಾಗಿ ದೊರಕಿಸಿಕೊಂಡು, ಸಹಾನುಜಂ=ತಮ್ಮನಿಂದ ಕೂಡಿದ, ತಂ= ಆ ರಾಮನನ್ನು, ಸಾಕ್ಷಾತ್=ಪ್ರತ್ಯಕ್ಷನಾದ, ಜ್ವಲನ=ಅಗ್ನಿಯಂತೆ, ಪ್ರಕಾಶಂ=ತೇಜಸ್ವಿಯಾದ, ಋಷಿಂಚ=ವಿಶ್ವಾಮಿತ್ರ ಋಷಿಯನ್ನೂ ಕೂಡ, ಸಮರ್ಚಯಾಮಾಸ=ಪೂಜಿಸಿದನು.

ತಾತ್ಪರ್ಯ.—ಈ ರೀತಿಯಲ್ಲಿ ಶ್ರೀರಾಮ ಲಕ್ಷ್ಮಣರನ್ನು ಮಿಥಿಲೆಯ ಜನರೆಲ್ಲಾ ನೋಡಿ ಆನಂದಿಸಿದಮೇಲೆ ಆ ರಾಜಕುವರರು ಕ್ರಮವಾಗಿ ಅರಮನೆಗೆ ಬಂದು ಸೇರಲು ದೊರೆಯಾದ ಜನಕ ಭೂಪಾಲಕನು, ಈ ಮನೋಹರರಾದ ಅಣ್ಣತಮ್ಮಂದಿರನ್ನು ಪ್ರೇಮ ಪುರಸ್ಸರವಾಗಿ ಸಂದರ್ಶಿಸಿದ್ದಲ್ಲದೆ ಕಸ್ಯಪ ಪುತ್ರರಾಗಿ ಅವತರಿಸಿದ್ದ ಇಂದ್ರಾದಿ ದೇವತೆಗಳಿಗೆ ತಮ್ಮನಾಗಿ ಹಿಂದೆ ಪ್ರಸಿದ್ಧಿಪಡೆದಿದ್ದ ಸಾಕ್ಷಾದ್ವಾಮನಮೂರ್ತಿಯೇ ಈ ರೂಪದಿಂದ ಈಗ ಈ

ಭೂಮಂಡಲದಲ್ಲಿ ಅವತರಿಸಿರುವನೋ ಏನೋ ಎಂಬ ಭಾವನೆಯಿಂದ ಕೂಡಿ ಸುಮಿತ್ರಾ ಪುತ್ರನಾದ ಲಕ್ಷ್ಮಣನೊಡನೆ ತನ್ನ ಆಸ್ಥಾನಕ್ಕೆ ದಯಮಾಡಿ ತಮ್ಮಗಳನ್ನು ಅನುಗ್ರಹಿಸಲು ಸಿದ್ಧನಾಗಿರುವ ಶ್ರೀರಾಮಮೂರ್ತಿಯನ್ನು ನಾನಾ ಸಾಧನಗಳಿಂದ ಪೂಜಿಸಿದನು. ಮತ್ತೂ ಅದೇ ಸಂದರ್ಭದಲ್ಲಿ ತನ್ನ ಅತಿಥಿಗಳಾಗಿ ಬಂದಿರುವ ವಿಶ್ವಾಮಿತ್ರರನ್ನು ಆಗಲೇ ಅವರು ಮಾಡಿದ ಯಜ್ಞಾದಿ ಆರಾಧನಗಳಿಂದ ಪೂರ್ಣತೃಪ್ತನಾದ ಆ ಯಜ್ಞೇಶ್ವರನಿಂದ ಪಡೆದ ದಿವ್ಯಾನುಗ್ರಹವುಳ್ಳವರಾದ್ದರಿಂದ ಎರಡನೇ ಅಗ್ನಿಯಂತೆ ತೇಜಸ್ಸಿನಿಂದ ಬೆಳಗುತ್ತಿರುವರಾಗಿ ಆ ಅದ್ಭುತ ತೇಜಸ್ಸಿನಿಂದಾಶ್ಚರ್ಯಪಟ್ಟ ಆ ಜನಕಭೂಪಾಲಕನು ಒಡನೆಯೇ ವಿಶ್ವಾಮಿತ್ರರನ್ನು ಉತ್ತಮ ವಿಧಿಯಿಂದ ಆರಾಧಿಸಿದನೆಂದು ತಾತ್ಪರ್ಯ.

ವಿಶೇಷಾರ್ಥ.—ಲೋಕದಲ್ಲಿ ಭಕ್ತರ ಯೋಗ್ಯತೆ ಅವರ ಜ್ಞಾನ ಯಾವಾಗಲೂ ಅತ್ಯದ್ಭುತವಾಗಿರುವುದು. ಅವರಿಗೆ ಅನಂತಾನಂತ ಭಗವದ್ರೂಪಗಳು ಯಾವಾಗಲು ಕಣ್ಣೆದಿರಿಗೆ ಕಂಗೊಳಿಸುವುವು. ಮಿಥಿಲೆಯ ಅರಸನಾದ ಜನಕನು ಕರ್ಮಯೋಗಿ, ಮಹಾ ಅದ್ಭುತ ಕ್ರಮದಿಂದ ಯಜ್ಞಾದಿಗಳನ್ನು ಆಗಾಗ ನಡಿಸಿ ಭಗವಂತನಲ್ಲಿ ಅರ್ಪಿಸುತ್ತಿರುವುದೇ ಈತನ ಸ್ವಧರ್ಮವು. ಶ್ರೀಸ್ವಾಮಿಯು ವಿಶ್ವಾಮಿತ್ರಮಹರ್ಷಿಯ ಸಂಕಲ್ಪಾನುಸಾರ ಯಜ್ಞ ಕಾರ್ಯಗಳನ್ನು ನಿರ್ವಹಿಸಿಕೊಟ್ಟು ಗುಪ್ತನಾಗಿ ತಾನೇ ಯಜ್ಞಪುರುಷಾಂತರ್ಯಾಮಿಯಾಗಿದ್ದು ಅವರು ಸಮರ್ಪಿಸಿದ ಹವಿಸ್ಸು ಮೊದಲಾದುವುಗಳನ್ನುಂಡು ತೃಪ್ತಿ ಪಡೆದು ಬಾಹ್ಯದಲ್ಲಿ ಅವರೊಡನೆ ಶಿಷ್ಯನಾಗಿ ಬಂದಿರುವ ವಿಧಾನವನ್ನು ನೋಡಿ ಜನಕನಿಗೆ ಭಗವಂತನ ಅಪಾರ ಮಹಿಮಾತಿಶಯಗಳು ಮನದಲ್ಲಿ ತೋರಲಾರಂಭವಾಗಲು ಈ ಸುಸಮಯವನ್ನು ಸಾರ್ಥಕಮಾಡಿಕೊಳ್ಳಲುದ್ಯುಕ್ತನಾಗಿ, ಈ ಶ್ರೀರಾಮನನ್ನು ನೋಡಿ ಹಿಂದೆ ತಾನುಪಯೋವ್ರತಾದಿ ವಿಶೇಷ ನಿಯಮಗಳನ್ನು ಆಚರಿಸಿದ ಬಳಿಕ ಯಾವ ಪ್ರಭುವು ಕಶ್ಯಪರಲ್ಲಿ ಪುತ್ರಭಾವದಿಂದವತರಿಸಿ ವಾಮನನೆಂಬ ದಿವ್ಯ ಮೂರ್ತಿಯಿಂದ ಬೆಳಗುತ್ತಾ ತನ್ನ ತೇಜೋವಿಶೇಷವನ್ನು ಜಗತ್ತಿನಲ್ಲಿ ಹರಡಬೇಕೆಂದೆಣಿಸಿ ಭಕ್ತನಾದ ಬಲಿಚಕ್ರವರ್ತಿ ಎಂಬ ಅಸುರವರ್ಯನ ಯಜ್ಞವಾಟವನ್ನು ಕುರಿತು ಪ್ರಯಾಣಮಾಡಿ ಬಂದು ಆತನಿಂದ ಲೋಕೋತ್ತರವಾದ

ಭೂದಾನವನ್ನು ಕೈಕೊಂಡು ಆತನನ್ನನುಗ್ರಹಿಸಿದಂತೆ, ಪ್ರಕೃತ ನನ್ನಿಂದ ಕನ್ಯಾದಾನವನ್ನು ಪಡೆಯಲೋಸುಗ ಈ ಸ್ವಾಮಿಯು ಇಲ್ಲಿಗೆ ದಯಮಾಡಿ ಸಿರುವನೆಂದು ತಿಳಿದು, ಆ ಸ್ವಾಮಿಗೆ ವಿಧ್ಯುಕ್ತ ಕ್ರಮದಿಂದ ಅರ್ಘ್ಯಪಾದ್ಯಾ ಚಮನಗಳನ್ನು ಮಧುಪರ್ಕಾದಿಗಳನ್ನು ಸಮರ್ಪಿಸಿ ಅನಂತರ ಅಭ್ಯಾಗತ ರಾದ ಋಷಿವರ್ಯರಾದ ವಿಶ್ವಾಮಿತ್ರರಿಗೆ ಸಹಾ ಉಚಿತಕ್ರಮದಲ್ಲಿ ಪೂಜಿಸಿ ದನು. ಬ್ರಾಹ್ಮಣರಿಗೆ ಯಾವಾಗಲೂ ಭಗವತ್ಪೂಜಾಧಿಷ್ಠಾನವು. ಸೂರ್ಯಾ ಗ್ನಿಗಳು "ಕುರ್ಯಾದನ್ಯನ್ನವಾಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೆ," ಎಂದು ಶಾಸ್ತ್ರವಿರುವುದು. ಯಾವ ಸತ್ಕರ್ಮಗಳನ್ನು ಉದಾಶೀನತೆಯಿಂದ ಬ್ರಾಹ್ಮಣನು ಬಿಟ್ಟಾಗ್ಯೂ, ಸೂರ್ಯಾಂತರ್ಯಾಮಿಯಾದ ಶ್ರೀಮನ್ನಾರಾ ಯಣನನ್ನು ಪ್ರತಿದಿನ ತ್ರಿಕಾಲದಲ್ಲಿ, ಹತ್ತು ಗಾಯತ್ರೀ ಮಂತ್ರದಿಂದ ಜಪ ಮಾಡಿ ಪೂಜಿಸಿದಲ್ಲಿ ಅವನು ಬ್ರಾಹ್ಮಣ್ಯದಲ್ಲಿರುತ್ತಾನೆಂದು ಸ್ಪಷ್ಟವಾಗಿ ಹೇಳಿದೆಯಾಗಿ, ಮೊದಲು ಸೂರ್ಯೋಪಾಸನೆ, ಆಮೇಲೆ ಅಗ್ನಿಯ ಪೂಜಾ ಈ ಎರಡನ್ನೂ ಬಿಡದೇ ಮಾಡುತ್ತಿದ್ದಲ್ಲಿ ವರ್ಣತ್ರಯದವರಿಗೂ ಒಳ್ಳೆಯ ತೇಜಸ್ಸಿರುತ್ತೆ- ಈ ಆಚರಣೆಗಳನ್ನು ಬಿಟ್ಟಮೇಲೆ ತೇಜಸ್ಸೆಲ್ಲಿರುವುದು? ಆದ್ದರಿಂದ ಮೇಲೆ ಹೇಳಿದಂತೆ ವಿಶ್ವಾಮಿತ್ರರಲ್ಲಿ ಬ್ರಾಹ್ಮಣ್ಯವು ಉತ್ತಮ ರೀತಿಯಲ್ಲಿತ್ತಾಗಿ ಮಿಥಿಲನ ಅತಿಥಿಗಳಾದ ವಿಶ್ವಾಮಿತ್ರರ ತೇಜಸ್ಸೂ ಅಗ್ನಿ ಯಂತಿದ್ದಿತೆಂದೂ ಅಂಥಾ ತೇಜೋ ವಿಶೇಷದಿಂದ ಗೌರವ ಬುದ್ಧಿಯುಂ ಟಾಗಿ ಜನಕನು ಶ್ರೀರಾಮ ಲಕ್ಷ್ಮಣ ಆರಾಧನಾನಂತರ ಅವರನ್ನು ಪೂಜಿಸಿ ದನೆಂದು ತಾತ್ಪರ್ಯ. ಆದ್ದರಿಂದ ಮೊದಲು ದೇವತಾರಾಧನ ಅನಂತರ ಬ್ರಾಹ್ಮಣಾರಾಧನೆಗಳು ಎಂದು ಆರಾಧನೆಯಲ್ಲಿಯೂ ತಾರತಮ್ಯವು ಉಂ ಟೆಂದು ಇದರಿಂದ ಸ್ಪಷ್ಟವಾಗುವುದು.

**ಶ್ಲೋಕ ॥ ಮೇನೇಚಜಾಮಾತರಮಾತ್ಮಕನ್ಯಾ ಗುಣೋಚಿತಂರೂಪನವಾವ ತಾರಂ । ಉವಾಚಚಾಸ್ಮಾಋಷಿರುಗ್ರತೇಜಾಃ ಕುರುಷ್ವಜಾಮಾತರ ಮೇನಾಮಾಶ್ವಿತಿ ॥೧೫॥**

ಅರ್ಥ.—ರೂಪ-ರೂಪದಿಂದ, ನವ-ನೂತನವಾದ, ಅವತಾರಂ= ದೇವಾವತಾರನಾಗಿರುವ, ತಂ=ಶ್ರೀರಾಮನನ್ನು, ಆತ್ಮ=ತನ್ನ, ಕನ್ಯಾ=ಮ

ಗಳ, ಗುಣ=ಸದ್ಗುಣಗಳಿಂದ, ಉಚಿತಂ=ತಕ್ಕವನಾದ ವರನಾಗಿರುವ ಕಾರಣ, ಜಾಮಾತರಂ-ಅಳಿಯನೆಂದೇ, ಮೇ=ತಿಳಿದನು, ಉಗ್ರತೇಜಾಃ-ಉಗ್ರ=ಅತಿಶಯವಾದ, ತೇಜಾಃ=ತೇಜಸ್ಸುಳ್ಳ, ಋಷಿಃ-ವಿಶ್ವಾಮಿತ್ರನು, ಕೂಡ, ಅಸ್ಮೈ-ಈ ಜನಕನಿಗೆ, ಏನಂ-ಈ ಶ್ರೀರಾಮನನ್ನು, ಆಶು=ಬೇಗನೆ, ಜಾಮಾತರಂ-ಅಳಿಯನನ್ನಾಗಿ, ಕುರುಷ್ವ=ಮಾಡಿಕೊ, ಚ=ಎಂಬುದಾಗಿ, ಉವಾಚಾ=ಹೇಳಿದನು.

ತಾತ್ಪರ್ಯ.—ತನ್ನ ಮನೆಗೆ ಅತಿಥಿಗಳಾಗಿ ಬಂದ ವಿಶ್ವಾಮಿತ್ರರ ಸಂಗಡ ಅತರ್ಕಿತವಾಗಿ ಬಂದಿರುವ ಶ್ರೀರಾಮ ಲಕ್ಷ್ಮಣರನ್ನು ರಾಜಪುತ್ರರೆಂಬ ಗೌರವದಿಂದಲೂ ಋಷಿ ವೇಷದಿಂದ ಕೂಡಿ ಮಹರ್ಷಿಗಳಿಗೆ ಶಿಷ್ಯರಾಗಿ ಬಂದಿರುವುದರಿಂದಲೂ ಅವರುಗಳನ್ನು ಸತ್ಕರಿಸಬೇಕಾದ್ದು ನ್ಯಾಯವೆಂದು ಭಾವಿಸಿ ಜನಕನು ಭಕ್ತಿ ಪುರಸ್ಸರವಾಗಿ ಅವರನ್ನು ಸತ್ಕರಿಸಿದನು, ಆ ಮೇಲೆ ಆ ರಾಜಪುತ್ರರಲ್ಲ ಹಿರಿಯವನಾದ ಶ್ರೀರಾಮನ ರೂಪೌದಾರ್ಯಾದಿಗಳನ್ನು ಕಂಡ ಜನಕನ ಮನದಲ್ಲಿ ಇದ್ದಕ್ಕಿದ್ದ ಹಾಗೆಯೇ ಈತನು ನ್ಯಾಯವಾಗಿ ತನಗೆ ಅಳಿಯನಾಗಲು ಅರ್ಹನಾಗಿದ್ದಾನೆ ಎಂಬುದಾಗಿಯೂ ತೋರಿತು. ಕೂಡಲೆ ಆತನು ರಾಮನ ರೂಪವನ್ನು ಬಣ್ಣಿಸುತ್ತಾ ಈತನು ಲೋಕಹಿತಾರ್ಥವಾಗಿ ನೂತನವಾಗಿ ಅವತರಿಸಿದ ಪರಮ ಪುರುಷನೇ ಇರಬಹುದು, ನನ್ನ ಪುತ್ರಿಯಾದ ಶ್ರೀಸೀತಾದೇವಿಗೆ ಎಲ್ಲಾ ಗುಣಗಳಿಂದಲೂ ಅನುರೂಪನಾದ ವರನಾಗಿ ಕಂಗೊಳಿಸುವನು. ಆದ್ದರಿಂದ ಈತನಿಗೆ ಜಾನಕಿಯನ್ನು ಕೊಡುವುದಕ್ಕೆ ಅಡ್ಡಿಯುಂಟೆ ? ಆದರೆ ಈ ವಿಚಾರಗಳನ್ನು ನಾನು ಮನಸ್ಸಿನಲ್ಲಿ ಅಂದುಕೊಂಡು ಸುಮ್ಮನಾಗುವುದುಂಟೆ ? ಇವರ ಗುರುಗಳಾದ ವಿಶ್ವಾಮಿತ್ರರಲ್ಲಿ ಈ ವಿಚಾರವನ್ನು ಕುರಿತು ಪ್ರಸ್ತಾಪಿಸಿದ್ದೇ ಆದರೆ ಅವರು ಏನುತ್ತರವನ್ನು ಕೊಡುವರೋ ? ಎಂಬೀ ಕ್ರಮದಲ್ಲಿ ಶ್ರೀರಾಮಚಂದ್ರನ ದರ್ಶನದಿಂದ ನಾನಾ ಮನೋರಥಗಳನ್ನು ಮಾಡಿಕೊಳ್ಳುತ್ತಾ ಮಿಥಿಲಾಧಿಪತಿಯು, ಋಷಿಗಳಲ್ಲಿ ಪ್ರಸ್ತಾಪಿಸಲು ಹೆದರುತ್ತಾ ಸಂಕೋಚದಿಂದಿರುವಾಗ ಸರ್ವರ ಚಿತ್ತ ಪ್ರೇರಕನಾದ ಶ್ರೀಹರಿಯೇ ಜನಕನ ಸಾಧುವಾದ ಈ ಸಂಕಲ್ಪವನ್ನು ಅನುಮೋದಿಸಿ ವಿಶ್ವಾಮಿತ್ರರ ಚಿತ್ತವನ್ನು ಈ ಜನಕನಿಗೆ ಸದುತ್ತರ ಕೊಡುವಂತೆ ವಿಕಾಸ ಪಡೆಯುವಂತೆ ಮಾಡಿದನು. ಶ್ರೀತನ

ಪ್ರೇರಣೆಯಂತೆ ವಿಶ್ವಾಮಿತ್ರರು ಸ್ವಪ್ರತಿಭಾ ಬಲದಿಂದ ಜನಕನನ್ನು ಕುರಿತು ಎಲೈ ಜನಕಾ ! ಏನು ಇಷ್ಟೊಂದು ಯೋಚಿಸುತ್ತಿದ್ದೀ ! ನಮ್ಮ ಶಿಷ್ಯನಾದ ಶ್ರೀರಾಮಚಂದ್ರನನ್ನು ಬೇಗ ಅಳಿಯನನ್ನಾಗಿ ಮಾಡಿಕೋ, ನೀನು ಯೋಚಿಸಿದಂತೆ ಈತನು ಶ್ರೀಸೀತಾದೇವಿಗೆ ಸರ್ವ ವಿಷಯಗಳಲ್ಲಿಯೂ ಅನುರೂಪನಾಗಿದ್ದಾನೆ. ಈಗಲೇ ವಿವಾಹ ಮಹೋತ್ಸವವು ನಡೆಯಲಿ, ನಾವು ನೂತನ ದಂಪತಿಗಳನ್ನು ನೋಡಿ ಆನಂದಿಸಿ ಆಶೀರ್ವಾದ ಮಾಡಿ ತಪಸ್ಸಿಗೆ ತೆರಳುವೆವು ಎಂದು ಹೇಳಿದರೆಂದು ತಾತ್ಪರ್ಯ.

ವಿಶೇಷಾರ್ಥ.—ಲೋಕದಲ್ಲಿ ಸತ್ಪುರುಷರ ಮನೆಗೆ ಅತಿಥಿ ಅಭ್ಯಾಗತರು ಬಂದರೆ ಅವರನ್ನು ಕಂಡು ಪರಮಾದರದಿಂದ ಸೇವಿಸಬೇಕೆಂದು ವಿಧಿಯುಂಟು. ಅಲ್ಲದೆ ಹಾಗೆ ಬಂದ ಅತಿಥಿಗಳು ವಿಷ್ಣುಭಕ್ತರಾಗಿದ್ದಲ್ಲಿ, ಅಂಥವರನ್ನು ಗೃಹಸ್ಥನು ಅಳಿಯನನ್ನು ಉಪಚರಿಸುವಂತೆ ಪರಮ ಸಂಭ್ರಮದಿಂದ ಸತ್ಕರಿಸಬೇಕೆಂದು ಸಾಕ್ಷಾತ್ಕೃಷ್ಣನು ಏಕಾದಶಸ್ಕಂಧ ಭಾಗವತದಲ್ಲಿ ಉದ್ಧವನಿಗೆ ಉಪದೇಶಿಸಿರುವನು. "ವೈಷ್ಣವೇಬಂಧುಸತ್ಕೃತ್ಯಾ" ಎಂದು ಇಂಥಾ ಭಾಗವತ ಧರ್ಮ ರಹಸ್ಯವನ್ನರಿತ ಮಿಥಿಲಾಧಿಪನು ವೈಷ್ಣವಾಗ್ರೇಸರರಾದ ವಿಶ್ವಾಮಿತ್ರರನ್ನು ಅಳಿಯನಿಗಿಂತ ಹೆಚ್ಚಾದ ಆದರದಿಂದ ಕಂಡು ಸೇವಿಸಿದನು. ಬಾಹ್ಯದೃಷ್ಟಿಯಿಂದ ಅಂಥಾ ವಿಶ್ವಾಮಿತ್ರರಿಗೆ ಅಧೀನನಾಗಿ ಶಿಷ್ಯನಂತೆ ಕಂಡು ಬಂದರೂ, ಸಾಕ್ಷಾದ್ವಿಷ್ಣುವೇ ಅಲ್ಲವೆ, ಈ ಶ್ರೀರಾಮನೆಂಬ ಅತಿಥಿಯು ಎಂಬ ಭಾವದಿಂದ ಕೂಡಿದ ಜನಕನು, ಮಹಾಪ್ರತಿಭಾಶಾಲಿಯಾದ್ದರಿಂದ ಶ್ರೀರಾಮನದೇಹ ಲಕ್ಷಣ ತೇಜೋವಿಶೇಷಾದಿಗಳನ್ನು ಕಂಡು ಇವನು ಸಾಕ್ಷಾನ್ನಾರಾಯಣಾಂಶನೆಂಬ ದೃಢಭಾವವನ್ನು ಪಡೆದು ಇವನಿಗೆ ಅನುರೂಪವಾಗಿ ಪಾಣಿಗ್ರಹಣಪಡೆಯಲು ಭಾಗ್ಯಾದಿದೇವತೆಯಾದ ಶ್ರೀಮಹಾಲಕ್ಷ್ಮಿಯೇ ನನ್ನ ಮನೆಯಲ್ಲಿ ಸೀತಾರೂಪಳಾಗಿ ಬಂದಿರುವಳಾದಪ್ರಯುಕ್ತ ಇವರಿಬ್ಬರಿಗೆ ಸಾದೃಶ್ಯವು ಬೆಳಗುತ್ತಿದೆಯಾಗಿ, ಈ ಸೀತೆಯನ್ನು ರಾಮನಿಗೆ ಸಮರ್ಪಿಸುವೆನು. ಭಗವತ್ಸಂಕಲ್ಪಕ್ಕೆ ಬಂದಿದ್ದಲ್ಲಿ ನನ್ನ ಈ ಮನೋರಥವು ಖಂಡಿತವಾಗಿಯೂ ನೆರವೇರುವದರಲ್ಲಿ ಅಡ್ಡಿಯಿಲ್ಲ. ಆದ್ದರಿಂದ ಈ ರಾಜಪುತ್ರರುಗಳಿಗೆ ಅಳಿಯಂದಿರಿಗೆ ಮಾಡುವ ಕ್ರಮದಿಂದ ಉಪಚಾರಗಳನ್ನು ಮಾಡುವೆನು, ಶ್ರೀಹರಿ ಸಂಕಲ್ಪಾನುಸಾರ ಉಂಟಾದ ಮನೋ

ವೃತ್ತಿಯಿಂದ ಜನಕನು ಇವರುಗಳನ್ನು ಪೂಜಿಸಿದನು. ಪರಮ ಜ್ಞಾನಿಗ ಳಾದ ಮಹರ್ಷಿಗಳು ಜನಕನ ಮಾನಸಿಕ ಸಂಕಲ್ಪವನ್ನು ಹೇಗೋ ಅರಿತೇ ಈ ಉತ್ತರವನ್ನು ಹೇಳಿರಬಹುದೆಂಬ ಶಂಕೆಯುಂಟಾಗುವಂತೆ ವಿಶ್ವಾಮಿ ತ್ರರು ಆತನೊಡನೆ ಮೇಲೆ ಹೇಳಿದಂತೆ ಈ ರಾಮಮೂರ್ತಿಯನು ನೀನು ಅಳಿಯನನ್ನಾಗಿ ಮಾಡಿಕೊಂಡರೆ ಕೃತಾರ್ಥನಾಗುವೆ ಎಂದು ಇದ್ದಕ್ಕಿದ್ದ ಹಾಗೆ ನುಡಿದರೆಂದು ತಾತ್ಪರ್ಯ. ಮತ್ತೂ ಜನಕನು ಇದಕ್ಕೆ ಮುಂಚೆ ಎಷ್ಟೋ ಜನ ರಾಜಪುತ್ರರನ್ನು ತನ್ನಾಸ್ಥಾನಕ್ಕೆ ಕರಿಸಿಕೊಂಡು ಅವರುಗಳು ಸೀತೆಗೆ ತಕ್ಕವರೇ ಎಂಬುದನ್ನು ಅನೇಕ ಕ್ರಮಗಳಲ್ಲಿ ಪರೀಕ್ಷಿಸಿ ನೋಡಲಾಗಿ ಅವನ ಮನಸ್ಸಿಗೆ ಅಂಥಾ ರಾಜಪುತ್ರರಲ್ಲಿ ಯಾರೂ ಸೀತೆಗೆ ಅರ್ಹರೆಂಬದಾಗಿ ಕಂಡು ಬರಲಿಲ್ಲ. ಅವರುಗಳ ವಿಷಯದಲ್ಲಿ ಮೇಲೆ ಹೇಳಿದ ಭಾವನೆಯು ಜನಕನಿಗೆ ಉಂಟಾಗಿಯೇ ಇರಲಿಲ್ಲ. "ಗುಣವತೇ ಕನ್ಯಕಾ ಪ್ರತಿಪಾದನೀಯಾ" ಎಂಬ ಧರ್ಮ ಶಾಸ್ತ್ರ ವಚನಾನುಸಾರ ಗುಣವಂತನಾದ ವರನು ದೇವಿಗೆ ಯಾವಾಗ ದೊರೆಯುವನೋ ? ಎಂದು ವರ ವಿಚಾರದಲ್ಲಿ ತೊಡಗಿದಾಗಲೆಲ್ಲಾ ಗುಣವಂತನಿಗೆ ಮಗಳನ್ನು ಕೊಡಬೇಕು ಅಂಥಾ ಗುಣವಂತನು ಎಲ್ಲಿರುವನೋ, ಏನು ಮಾಡಲಿ ದೇವರೇ ಅಂಥವನನ್ನು ಒದಗಿಸಿಕೊಡಬೇಕು ಮಾನವರಾದ ನಾವು ಅಸ್ವತಂತ್ರರು, ಹುಡುಕುವುದು ನಮ್ಮ ಕರ್ತವ್ಯ, ದೊರಕಿಸುವುದು ಶ್ರೀ ಭಗವಂತನ ಕಾರ್ಯ, ಸೀತೆಗೆ ಅನುರೂಪನಾದ ವರನ ಲಾಭದಲ್ಲಿ ಹೀಗೆ ನಾನಾ ಮುಖವಾಗಿ ಯೋಚನೆಯಿಂದ ಕೂಡಿದ್ದ ಮಿಥಿಲ ನಿಗೆ ಮನೋರಥವು ಪರಿಪೂರ್ಣವಾಗುವ ಕಾಲವು ಒದಗಿದ್ದರಿಂದ ಆ ಭಗವಂತನೇ ಪ್ರೀತನಾಗಿ ರಾಮಚಂದ್ರನಾಗಿ ಅವತರಿಸಿ "ರಾಘವತ್ವೇಭವೇತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ" ಎಂಬ ಆಚಾರ್ಯರ ಉಕ್ತಿಯಂತೆ ತನ್ನ ಪಾಣಿಗ್ರಹಣಾರ್ಥವಾಗಿ ಭೂಮಿಯಿಂದ ಆವಿರ್ಭವಿಸಿ, ಪೋಷಿಸಿದ ನಿಮಿತ್ತ ಜನಕನಿಗೆ ಪುತ್ರಿ ಎಂದೆನ್ನಿಸುವ ಸೀತಾದೇವಿಯನ್ನು, ವಿಶ್ವಾಮಿತ್ರರಿಗೆ ಪೂರ್ಣ ಕೀರ್ತಿಯನ್ನು ತಂದುಕೊಡುವ ಉದ್ದಿಶ್ಯದಿಂದ ಅವರ ಮಾತಿನಂತೆ ಪಾಣಿಗ್ರಹಣ ಮಾಡಿಕೊಂಡಂತೆ ಲೋಕದಲ್ಲಿ ಪ್ರಕಟಿಸಿದನು. ತಮ್ಮಗಳ ನೈಜ ದಾಂಪತ್ಯವನ್ನು ಈ ತೆರನಾಗಿ ಅಂಗೀಕರಿಸುವ ಸತ್ಯ ಸಂಕಲ್ಪ ಉಳ್ಳ ಸ್ವಾಮಿಯ ಇಚ್ಛಾನುಸಾರ ಪ್ರೇರಿತರಾದ ವಿಶ್ವಾಮಿತ್ರರು ಅಳಿಯನನ್ನು ಮಾಡಿ

ಕೊಳ್ಳುವಂತೆ ಜನಕನಿಗೆ ಹೇಳಿದ್ದರಿಂದ ಈ ವಿಚಾರದಲ್ಲಿ ಜನಕನ ಮನೋರಥೋದಯ ವಿಶ್ವಾಮಿತ್ರರವಾಗುಡಯಗಳೆರಡೂ ಒಂದೇ ಉದ್ದೇಶವನ್ನೊಳಗೊಂಡುದಾಗಿ ಅಭಿವ್ಯಕ್ತವಾದುವು. ಆದ್ದರಿಂದ ಭಗವಂತನಲ್ಲಿರುವ ಅಘಟಿತಘಟನಾ ಶಕ್ತಿಯು ಇಂಥಾ ಅದ್ಭುತವಾದುದೆಂದು ಭಾವಿಸಿ ಜನರು ತಾವು ಮಾಡುವ ಸಂಕಲ್ಪಗಳನ್ನು ಶ್ರೀ ಹರಿ ಪ್ರೀತಿಕರವಾಗಿ, ಮಾಡಿದಲ್ಲಿ ಪರೋಕ್ಷದಲ್ಲಿ ತತ್ವೇಶರಾದ ದೇವತೆಗಳೂ ಅವರಿಗೆ ನಿಯಾಮಕನಾದ ಶ್ರೀಹರಿಯೂ ಇದ್ದು ಇವರ ಉದ್ದಿಷ್ಟ ಕಾರ್‍ಯವನ್ನು ಜಯಪ್ರದವಾಗುವಂತೆ ಮಾಡುವರೆಂದು ಮುಖ್ಯ ಶಾಸ್ತ್ರಾರ್ಥವು ಎಂಬುದನ್ನು ಈ ಸಂದರ್ಭದಿಂದ ಶ್ರೀಮದಾಚಾರ್‍ಯರು ಸ್ಪಷ್ಟಪಡಿಸಿರುವರು.

**ಶ್ಲೋಕ॥ ಸಆಹಚೈನಂ ಪರಮಂವಚಸ್ತೇ ಕರೋಮಿನಾತ್ರಾಸ್ತಿವಿಚಾರಣಾ**
**ಮೇ । ಶೃಣುಷ್ವನೋಥಾಪಿಯಥಾಪ್ರತಿಜ್ಞಾ ಸುತಾಪ್ರದಾನಾ**
**ಯಕೃತಾಪುರಸ್ತಾತ್ ॥೧೬॥**

ಅರ್ಥ.—ಸಃ= ಆ ಜನಕನು, ಏನಂ = ವಿಶ್ವಾಮಿತ್ರನನ್ನು ಕುರಿತು, ಆಹಚ= ಹೀಗೆಂದು ಹೇಳಿದನು, ತೇ=ನಿಮ್ಮ, ವಚ= ಮಾತು, ಪರಮಂ= ಉತ್ತಮವಾದುದು, (ಪರ= ಪರಮಾತ್ಮನನ್ನು, ಮಂ = ವಿಷಯೀಕರಿಸಿದ್ದಾಗಿದೆ) ಎಂದರೆ ಈತನು ಸಾಕ್ಷಾತ್ಪರಮಾತ್ಮನು ಎಂದು ದೃಢಪಡಿಸತಕ್ಕುದಾಗಿದೆ, ಕರೋಮಿ= ತಮ್ಮ ಮಾತಿನಂತೆ ಮಾಡುತ್ತೇನೆ, ಅತ್ರ = ಇವನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು, ವಿಚಾರಣಾ= ಸರಿಯೆ? ಅಲ್ಲವೆ? ಎಂಬ ವಿಮರ್ಶೆಯು ಕೂಡ, ಮೇ= ನನಗೆ, ನಾಸ್ತಿ= ಇಲ್ಲ, ಅಥಾಪಿ = ಆದರೂ, ಪುರಸ್ತಾತ್= ಬಹುಕಾಲದ ಹಿಂದೆಯೇ, ಸುತಾಪ್ರದಾನಾಯ= ಸುತಾ= ಈ ಮಗಳನ್ನು, ಪ್ರದಾನಾಯ= ದಾನ ಮಾಡುವುದಕ್ಕೋಸ್ಕರ, ಪ್ರತಿಜ್ಞಾ= ಪ್ರತಿಜ್ಞೆಯು, ಯಥಾ= ಹೇಗೆ, ಕೃತಾ= ಮಾಡಲ್ಪಟ್ಟಿರುವುದೋ, ತಾಂ = ಆ ಪ್ರತಿಜ್ಞೆಯನ್ನು, ಶೃಣುಷ್ವ= ಕೇಳಿರಿ.

ತಾತ್ಪರ್ಯ.—ಶ್ರೀರಾಮಚಂದ್ರನಿಗೆ ಸೀತಾದೇವಿಯನ್ನು ಸಮರ್ಪಿಸಿ ಕಲ್ಯಾಣವನ್ನು ನಡಿಸೆಂದು ನುಡಿದ ವಿಶ್ವಾಮಿತ್ರರನ್ನು ಕುರಿತು ಜನಕನು ಹೀಗೆಂದು ಹೇಳಿದನು. ಹೇ ಋಷಿವರ್‍ಯಾ, ತಮ್ಮ ಮಾತು ಪರಮ ಶ್ಲಾಘ್ಯ

ವಾದುದೇ ಸರಿ. ಸೀತೆಯನ್ನು ಅನುರೂಪ ಗುಣಾಕರನಾದ ಶ್ರೀರಾಮನಿಗೆ ಸಮರ್ಪಿಸುವ ಅಂಶದಲ್ಲಿ ನಾವು ಯಾವವಿಚಾರವನ್ನೂ ಮಾಡಬೇಕಾಗಿಲ್ಲಾ, ಆ ಕಾರ್ಯವು ಪರಮ ಮಂಗಳವು ಎಂದು ನಾನು ಬಲ್ಲೆನು. ಆದರೂ ಈ ಮಗಳನ್ನು ವರನಿಗೆ ದಾನ ಮಾಡುವ ವಿಚಾರದಲ್ಲಿ ನಾನು ಬಹುಕಾಲಕ್ಕೆ ಹಿಂದೆ ದೈವ ಪ್ರೇರಣೆಯಿಂದ ಮಾಡಿರುವ ಒಂದಾನೊಂದು ಪ್ರತಿಜ್ಞೆ ಯುಂಟು. "ಆ ಪ್ರತಿಜ್ಞೆ" ಯು ಏನೆಂಬುದನ್ನು ತಮ್ಮಲ್ಲಿ ಅರಿಕೆ ಮಾಡು ವೆನು, ತಾವು ಅದನ್ನು ಕೇಳಿ, ಅನಂತರ ಹೇಗೆ ಅಪ್ಪಣೆ ಕೊಟ್ಟರೆ ಹಾಗೆ ನಡೆದುಕೊಳ್ಳುವೆನು.

ವಿಶೇಷಾರ್ಥ.—ಲೋಕದಲ್ಲಿ ವಧೂವರರಿಗೆ ಸಮಾಗಮವಾಗಬೇಕಾ ದರೆ ಪುರೋಹಿತರೇ ಆಗಲೀ ಅಥವಾ ಬಾಂಧವರೇ ಆಗಲೀ ಮಧ್ಯಸ್ಥಿಗೆ ಮಾಡಿ ಸುಳ್ಳು ಸಟೆಯನ್ನಾದರೂ ಹೇಳಿ ಸಂಬಂಧವನ್ನು ಉಂಟು ಮಾಡು ವುದು ಪದ್ಧತಿ. ಆಮೇಲೆ ಅವರವರು ಕಲೆತು ಪಾಲಿಗೆ ಬಂದದ್ದು ಪಂಚಾ ಮೃತವೆಂದು ತೃಪ್ತಿ ಪಟ್ಟುಕೊಳ್ಳುವುದು, ಒಡವೆವಸ್ತುಗಳಲ್ಲಿ ಆಗಲೀ, ಉಪಚಾರಾದಿಗಳಲ್ಲಿಯಾಗಲೀ, ನ್ಯೂನತೆ ಬಂದರೆ ಬಾಂಧವ್ಯವು ಬೆಳಸಿದ್ದಾ ಯಿತು ಮಾಡುವುದೇನೆಂದು ಸಮಾಧಾನ ಮಾಡಿಕೊಳ್ಳುವುದೂ, ಯೋಗ್ಯರ ನಡವಳಿಕೆಯಾಗಿದೆ. ಒಂದು ವೇಳೆ ಬಾಂಧವರಿಗೊ ಕನ್ಯಗೋ ಅಸಮಾ ಧಾನವಾದಲ್ಲಿ ಈ ಸಂಬಂಧ ಬೇಡವೆಂದು ಹೇಳುವುದೂ ಕೆಲವರಲ್ಲಿ ಉಂಟು. ಈ ಸಂದರ್ಭಗಳನ್ನೆಲ್ಲಾ ಯೋಚಿಸಿ ನೋಡಿದರೆ ಜನಕನು ವಿಶ್ವಾಮಿತ್ರರಿಗೆ ಆಗ ಇನ್ನೇನು ಉತ್ತರವನ್ನು ಕೊಡಬಹುದು? ರಾಮನಲ್ಲಿ ಸೀತೆಗೆ ತಕ್ಕ ರೂಪವಿಲ್ಲವೆ? ನವ ಮನ್ಮಥಾಕಾರನು ಎಂದು ಹೇಳಿಯೇ ಇವೆ. ನಗನಾ ಣ್ಯಗಳಿಗೆ ಅವಕಾಶವಿಲ್ಲವೆ? ಕೋಸಲ ದೇಶಾಧಿಪತಿಯ ಮಗನು ವಿದ್ಯಾ ಬುದ್ಧಿಗಳಿಲ್ಲವೆ? ವಶಿಷ್ಠ—ವಿಶ್ವಾಮಿತ್ರರ ಶಿಷ್ಯನು. ಅಲ್ಲದೇ ಸಕಲ ವೇದ ವೇದ್ಯನು. ಕುಲ ಗೋತ್ರಗಳಿಲ್ಲವೆ? ಸಕಲ ದೇವತಾ ವಂದ್ಯನು. ಮಿಕ್ಕ ಗುಣಗಳಿಲ್ಲವೆ? ಸಕಲ ಸದ್ಗುಣಪೂರ್ಣನು ಇಂಥವನಿಗೆ ಮಗಳನ್ನು ಕೊಡ ಲಿಕ್ಕೆ ಜನಕನು ಸಂಶಯ ಪಡಬೇಕೆ? ಇವಕ್ಕೆ ಮಧ್ಯಸ್ಥಿಕೆಗಾಗಿ ಸುಳ್ಳನ್ನು ವಿಶ್ವಾಮಿತ್ರರು ಹೇಳಬೇಕೆ? ಅವರು ಮಹಾ ಸತ್ಯಸಂಧರು. ಅಲ್ಲದೇ ಮಹಾ ಹಠವುಳ್ಳವರು. "ಅನ್ಯಮಾಪ್ರಂಕರಿಷ್ಯಾಮಿ" ಎಂದು ಬೇರೆ ಸೃಷ್ಟಿ

ಯನ್ನೇ ಆರಂಭಿಸಿದವರು. ಬ್ರಾಹ್ಮಣ್ಯ ಲಾಭಕ್ಕೋಸ್ಕರ ಅಸದೃಶ ಪ್ರಯತ್ನ ಮಾಡಿದವರು, ಇಂಥಾ ಮಹನೀಯರ ಮಾತನ್ನು ಮೀರಲಾದೀತೆ? ಸಾಧ್ಯವಲ್ಲಾ, ಆದ್ದರಿಂದ ಜನಕನು ಬಹಳ ಆಲೋಚಿಸಿ ತನ್ನ ಮನೋಭಿಪ್ರಾಯವನ್ನು ವಿಶ್ವಾಮಿತ್ರರಿಗೆ ತಿಳಿಸುವ ವೇಳೆಯಲ್ಲಿ, ಹಿಂದೆ ಬಹುಕಾಲಕ್ಕೆ ಮುಂಚೆ ಮಾಡಿದ ಒಂದು ಪ್ರತಿಜ್ಞೆ ಇದೆ ಅದನ್ನು ಮೀರುವುದು ಧರ್ಮಿಷ್ಠರಿಗೆ ನ್ಯಾಯವಾದುದಲ್ಲ. ಎಂದು ಒಂದು ವಿಜಾತೀಯವಾದ ಉತ್ತರವನ್ನು ಹೇಳಿದನು. ಮುಖ್ಯವಾಗಿ ಶ್ರೀರಾಮಚಂದ್ರನು ಧರ್ಮ ಸಂಸ್ಥಾಪನೆಗಾಗಿ ಕ್ಷತ್ರಿಯ ಕುಲದಲ್ಲಿ ಅವತರಿಸಿ ಕ್ಷಾತ್ರ ಧರ್ಮವನ್ನು ನಾನಾ ಮುಖವಾಗಿ ಪ್ರಕಾಶಕ್ಕೆ ತರುತ್ತಿದ್ದಾನಾದ್ದರಿಂದ ಆತನು ತನ್ನ ಮಗಳನ್ನಪೇಕ್ಷಿಸುವುದಾದರೆ ತನ್ನ ಬಾಹು ಬಲವನ್ನು ಪ್ರಕಾಶ ಪಡಿಸಬೇಕೆಂದು ನುಡಿದನು. ಬ್ರಾಹ್ಮಣರಲ್ಲಿ ಜ್ಞಾನವು ಹೇಗೆ ಪೂಜ್ಯತೆಗೆ ಕಾರಣವೋ ಹಾಗೆ ಕ್ಷತ್ರಿಯರಲ್ಲಿ ಬಲವ, ವೈಶ್ಯಯರಿಗೆ-ಧನವು, ಶೂದ್ರರಿಗೆ-ವಯಸ್ಸು ಗೌರವಪ್ರದವು ಎಂದು ಶಾಸ್ತ್ರ ಸಿದ್ಧವು, ಪ್ರಕೃತ ಶ್ರೀರಾಮ ಮೂರ್ತಿಯು ಬಾಹು ಬಲವನ್ನು ತೋರಿಸಿ ಗೌರವವನ್ನು ಪಡೆಯಲಿ ಎಂದು ಭಗವದಿಚ್ಛೆಯಲ್ಲಿರುವದನ್ನ ಸೂಚಿಸುವಂತೆ ತನ್ನ ಸಂಕಲ್ಪವನ್ನು ಹೇಳುವುದಕ್ಕಾರಂಭಿಸಿ ಪುರಾತನವಾದ ಒಂದು ಕುಲ ಧರ್ಮವು ತಮ್ಮಲ್ಲಿ ರೂಢಿಯಲ್ಲಿದೆ ಎಂದು ಐತಿಹಾಸಿಕ ಕ್ರಮದಿಂದ ತನ್ನ ಉದ್ದೇಶವನ್ನು ವಿಶ್ವಾಮಿತ್ರರಲ್ಲಿ ವಿಜ್ಞಾಪಿಸಿದನು. ಅವರು ಅದನ್ನು ಅವಶ್ಯಾನುಷ್ಠೇಯವೆಂದು ನಿರ್ಧರಿಸಿ ರಾಮನಿಗೆ ಅದರಂತೆ ನಡೆಯಲು ಅಪ್ಪಣೆಯನ್ನಿತ್ತರು. ಆ ಅಂಶವನ್ನು ಮುಂದೆ ಆಚಾರ್ಯರ ವಾಕ್ಯಿನಿಂದಲೇ ಸ್ಪಷ್ಟ ಪಡಿಸಲಾಗುವುದು.

ಶ್ಲೋಕ|| ತಪೋಮಯಾಜೀರ್ಣಮುಮಾಪತೇಃ ಪುರಾ ವರಾಯುಧಾವಾಪ್ತಿಧೃತೇನಚೇತಸಾ | ಸವೋದದೌ ದಿವ್ಯಮಿದಂಧನುಸ್ತದಾ ಕಥಂಚನಾಚಾಲ್ಯಮೃತೇಪಿನಾಕಿನಂ ||೧೭||

ಅರ್ಥ.—ಉಮಾಪತೇಃ=ಉಮಾದೇವಿಯ ಗಂಡನಾದ ಮಹೇಶ್ವರನ ದೆಶೆಯಿಂದ, ಪುರಾ=ಪೂರ್ವದಲ್ಲಿ, ವರಾ=ಶ್ರೇಷ್ಠವಾದ, ಆಯುಧ=ಆಯುಧವನ್ನು, ಅವಾಪ್ತಿ=ಹೊಂದುವುದರಲ್ಲಿ, ಧೃತೇನ = ಉದ್ದೇಶಿಸಿದ,

ಚೇತಸಾ=ಮನಸ್ಸಿನಿಂದ ಕೂಡಿದ, ಮಯಾ=ನನ್ನಿಂದ, ತಪಃ = ತಪಸ್ಸು, ಚೀರ್ಣಂ=ಮಾಡಲ್ಪಟ್ಟಿತು. ಪಿನಾಕಿನಂ=ಪಿನಾಕವೆಂಬ ಧನುಸ್ಸನ್ನು ಹಿಡಿದಿರುವ ಈಶ್ವರನನ್ನು, ಋತೇ=ಬಿಟ್ಟು, ಮತ್ತಾರಿಂದಲೂ, ಕಥಂಚನ=ಯಾವರೀತಿಯಿಂದಲೂ, ಅಚಾಲ್ಯಂ=ಕದಲಿಸಲಿಕ್ಕಾಗದಂಥಾ, ದಿವ್ಯಂ = ದೇವಲೋಕದ, ಇದಂ=ಈ, ಧನುಃ=ಬಿಲ್ಲನ್ನು, ತದಾ=ಆ ತಪಸ್ಸು ಮಾಡಿದಾಗ, ಸಃ=ಆ ಮಹೇಶ್ವರನು, ಮೇ=ನನಗೆ, ದದೌ=ಕೊಟ್ಟನು.

ತಾತ್ಪರ್ಯ.—ಮಹರ್ಷಿಗಳೇ! ಬಹು ಕಾಲದ ಹಿಂದೆ ನಾನು ದೇವತಾವರವನ್ನು ಪಡೆಯಬೇಕೆಂದು ಸಂಕಲ್ಪಿಸಿದೆನು. ವರವನ್ನು ದಯಪಾಲಿಸುವುದರಲ್ಲಿ ದೇವತಾ ಮಂಡಲಿಯಲ್ಲಿ ಮಹೇಶ್ವರನು ಸುಲಭನು, ಅವನನ್ನಾರಾಧಿಸುವುದೂ ಸುಲಭವು. ಆತನು ಕ್ಷಿಪ್ರ ಪ್ರಸಾದನು, ಇದನ್ನೆಲ್ಲಾ ಯೋಚಿಸಿ ನಾನು ಕ್ಷತ್ರಿಯನಾದ್ದರಿಂದ ನನಗೆ ಆಯುಧಗಳ ಉಪಯೋಗವು ಹೆಚ್ಚು, ಆದ್ದರಿಂದ ಆತನನ್ನು ಮೆಚ್ಚಿಸಿ ಒಂದುತ್ತಮವಾದ ದೇವತಾಂಶವುಳ್ಳ ಧನುಸ್ಸನ್ನು (ಬಿಲ್ಲನ್ನು) ಪಡೆದುಕೊಳ್ಳಬೇಕು ಎಂಬಿಚ್ಛೆಯಿಂದ ಉತ್ತಮ ವಿಧಿಯಿಂದ ಈಶ್ವರನನ್ನು ಕುರಿತು ಘೋರವಾದ ತಪಸ್ಸು ಮಾಡಿದೆನು. ತಪಸ್ಸೆಲ್ಲಾ ಪರಿಪೂರ್ಣವಾಗಲು ಪರಮೇಶ್ವರನು ನನ್ನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ವರವನ್ನು ಕೇಳಿಕೊಳ್ಳುವಂತೆ ಆಜ್ಞಾಪಿಸಲು ನಾನು ಉತ್ತಮವಾದ ದೇವತಾ ಯೋಗ್ಯವಾದ ಒಂದು ಧನುಸ್ಸನ್ನು ಅನುಗ್ರಹಿಸಬೇಕೆಂದು ಕೇಳಿದೆನು. ಆ ಸ್ವಾಮಿಯು ನನ್ನಭಿಪ್ರಾಯವನ್ನು ಅಂಗೀಕರಿಸಿ ಈ ಧನುಸ್ಸನ್ನು ನನಗೆ ಕೊಟ್ಟಿರುವನು. ಈ ಧನುಸ್ಸಿನ ಮಹಿಮೆಯಾದರೋ ಅತ್ಯದ್ಭುತವು, ಅದೇನೆನ್ನುವಿರೋ? ಆ ರುದ್ರದೇವನಲ್ಲದೆ ಮತ್ತೊಬ್ಬ ಪುರುಷನು ಅದನ್ನು ಸ್ಥಳದಿಂದ ಸ್ಥಳಕ್ಕೆ ಎಳ್ಳಷ್ಟೂ ಜರುಗಿಸಲಸಾಧ್ಯವಾದ ಭಾರವುಳ್ಳದು. ಇಂಥಾ ಧನುಸ್ಸಿಗೆ ಹೆದೆ ಏರಿಸಿ ಅಂಬನ್ನು ಜೋಡಿಸಿ ಉಪಯೋಗಿಸುವರಾರು? ಇಂಥಾ ಅದ್ಭುತ ಧನುಸ್ಸು ನನ್ನಲ್ಲಿ ದೈವ ಕೃಪೆಯಿಂದ ವದಗಿದೆ. ಅದು ಇರುವುದರಿಂದ ನನ್ನ ಗೌರವವು ಇನ್ನೆಂಥಾದ್ದೆಂಬುದನ್ನು ತಾವುಗಳು ಯೋಚಿಸಬೇಕೆಂದು ಜನಕನ ಮುಖ್ಯ ಮನೋಭಿಪ್ರಾಯ.

ವಿಶೇಷಾರ್ಥ.—ಪಾಂಡವಾಗ್ರೇಸರನಾದ ಅರ್ಜುನನು ಭೂಭಾರ ಪರಿಹಾರಾರ್ಥವಾಗಿ ನಡಿಸಬೇಕಾಗಿದ್ದ ಭಾರತ ಯುದ್ಧಕ್ಕೆ ಅನುಕೂಲವಾದ

ಸಾಮಗ್ರಿಯನ್ನೊದಗಿಸಲು ಭಗವತ್ಪ್ರೇರಿತನಾಗಿ ಇಂದ್ರಕೀಲ ಪರ್ವತದಲ್ಲಿ ಮಹೇಶ್ವರನನ್ನು ಕುರಿತು ಮಹಾ ಘೋರವಾದ ತಪಸ್ಸನ್ನು ಮಾಡಿ ಆ ದೇವರಿಂದ ಪೂರ್ಣ ಪ್ರೇಮ ಪುರಸ್ಸರವಾಗಿ ಕೊಡಲ್ಪಟ್ಟ ಪಾಶುಪತಾಸ್ತ್ರ (ಪಶುಪತಿಯೇ ಅಧಿದೇವತೆಯಾಗಿ) ವುಳ್ಳ ಅಸ್ತ್ರವನ್ನು ಪಡೆದು ಆ ಮೂಲಕ ಗೌರವಾಢ್ಯನಾದನು. ಮತ್ತು ಖಾಂಡವವನವನ್ನು ಅಗ್ನಿದೇವನಿಗೆ ಆಹುತಿಯಾಗಿ ಕೊಟ್ಟುದರಿಂದ ಪ್ರೀತಿ ಪಡೆದ ಆ ದೇವನು ಗಾಂಡೀವವೆಂಬ ದಿವ್ಯ ಧನುಸ್ಸನ್ನು ದಯಪಾಲಿಸಿದನು. ಅವರ ಬಲದಿಂದಲೇ ಪಾರ್ಥನು ಲೋಕ ಪ್ರಖ್ಯಾತನಾದನು. ಅದೇ ರೀತಿಯಾಗಿ ಜನಕನೂ ಈಶ್ವರನಿಂದ ಪಡೆದ ದಿವ್ಯ ಧನುಸ್ಸಿನಿಂದ ಆಗಿನ ಕ್ಷತ್ರಿಯ ಮಂಡಲಿಯುಲ್ಲಿ ಒಳ್ಳೆಯ ಪ್ರಬಲನೆಂದು ಪ್ರಖ್ಯಾತಿ ಪಡೆದಿದ್ದನೆಂದು ತಾತ್ಪರ್ಯವು.

ಅವತಾರಿಕೆ— ಹಿಂದಿನ ಶ್ಲೋಕದಲ್ಲಿ ಜನಕನು ತನ್ನದೊಂದು ಪ್ರತಿಜ್ಞೆ ಇದೆ, ದಯವಿಟ್ಟು ಲಾಲಿಸಬೇಕೆಂದು ವಿಶ್ವಾಮಿತ್ರರ ಸಂಗಡ ಹೇಳಿದ್ದನಷ್ಟೆ, ಮುಂದಿನ ಎರಡು ಶ್ಲೋಕಗಳಲ್ಲಿ ಆಪ್ರತಿಜ್ಞೆಯ ವಿವರವನ್ನು ವರ್ಣಿಸುತ್ತಾರೆ :—

**ಶ್ಲೋಕ|| ನದೇವದೈತ್ಯೋರಗದೇವಗಾಯಕಾಅಲಂಧನುಶ್ಚಾಲಯಿತುಂಸಮಾಸವಾಃ | ಕುತೋನರಾಸ್ತದ್ವರತೋಹಿಕಿಂಕರಾಃ ಸಹಾನಸ್ಯೈವಾತ್ರಕೃಷಂತಿಕೃಚ್ಛ್ರತಃ ||೧೮||**

ಅರ್ಥ.—ಸವಾಸವಾಃ=ಇಂದ್ರನಿಂದೊಡಗೂಡಿದ, ದೇವದೈತ್ಯೋರಗದೇವಗಾಯಕಾಃ=ದೇವ=ದೇವತೆಗಳು, ದೈತ್ಯ=ದೈತ್ಯರು, ಉರಗ=ಸರ್ಪಗಳು, ದೇವಗಾಯಕಾಃ=ದೇವ ಲೋಕವ ಗಾಯಕರೆನಿಸಿದ ಗಂಧರ್ವರು ಕೂಡ, ಧನುಃ=ಈ ಬಿಲ್ಲನ್ನು, ಚಾಲಯಿತುಂ=ಅಲ್ಲಾಡಿಸಲು, ನಾಅಲಂ=ಸಮರ್ಥರಲ್ಲವು, ಹೀಗೆ ದೇವತೆಗಳೇ ಅಸಮರ್ಥರಾದಮೇಲೆ, ನರಾಃ = ಮನುಷ್ಯರು, ಕುತಃ=ಹೇಗೆ ಸಮರ್ಥರಾದಾರು, ಕಿಂಕರಾಃ = ನನ್ನ ಆಳುಗಳು, ತದ್ವರತಃ=ತತ್=ಆ ಈಶ್ವರನ, ವರತಃ=ಅನುಗ್ರಹದಿಂದ, ಅನಸ್ಯೈವಸಹ=ಗಾಡಿಯ ಮೂಲಕ ಮಾತ್ರ, ಕೃಚ್ಛ್ರತಃ=ಕಷ್ಟದಿಂದ (ಶ್ರಮಪಟ್ಟು), ಅತ್ರ=ಈ ಸ್ಥಳದಿಂದ, ಕೃಷಂತಿಹಿ=ಎಳೆದು ತರುತ್ತಾರೆ.

ತಾತ್ಪರ್ಯ.— ಮೇಲೆ ಹೇಳಿದ ಧನುಸ್ಸನ್ನು ದೇವತೆಗಳಾಗಲೀ, ದೈತ್ಯರೇ ಆಗಲಿ, ಸರ್ಪಗಳಾಗಲಿ, ದೇವ ಲೋಕದ ಗಾಯಕರೆನ್ನಿಸಿದ ಗಂಧರ್ವರಾಗಲಿ, ಇವರೆಲ್ಲರಿಗೂ ಅಧಿಪತಿಯೆನ್ನಿಸಿದ ದೇವೇಂದ್ರನಾಗಲೀ, ಕದಲಿಸಲಾರರೆಂದು ತಿಳಿಯಿರಿ. ಲೋಕದಲ್ಲಿ ಈ ಮೇಲೆ ಹೇಳಿರುವವರೆಲ್ಲರೂ ಪರಮ ಸಮರ್ಥರೆಂದು ಪ್ರಸಿದ್ಧರಾಗಿದ್ದಾರಷ್ಟೆ. ಇಂಥವರೇ ಈ ಧನುಸ್ಸನ್ನು ಕದಲಿಸಲಸಮರ್ಥರೆಂದ ಮೇಲೆ ಮನುಷ್ಯರ ಪಾಡೇನು? ಎಂದರೆ ಮನುಷ್ಯರು ಇದನ್ನು ಕದಲಿಸಲಾರರೆಂದು ಹೇಳಬೇಕಾಗಿಯೇ ಇಲ್ಲಾ. ಹೀಗೆ ಬಹು ಭಾರವಾದ ಈ ಬಿಲ್ಲನ್ನು ಲೋಕದಲ್ಲಿ ಯಾರೂ ಕದಲಿಸಲಿಕ್ಕೆ ಶಕ್ತರಲ್ಲವೆಂದ ಮೇಲೆ ಇನ್ನು ಹೆದೆ ಏರಿಸುವ ಸಮರ್ಥರಾರಿದ್ದಾರೆ? ಎಂದು ಲೋಕದ ವೀರರನ್ನೆಲ್ಲಾ ಜನಕನು ಅಲ್ಲಗಳೆದನೆಂದು ತಾತ್ಪರ್ಯ. ಆದರೆ ಇಂಥಾ ಭಾರವಾದ ಧನುಸ್ಸನ್ನು ಜನಕನು ಹೇಗೆ ಹೊತ್ತು ತಂದನೆಂಬ ಪ್ರಶ್ನೆ ಹುಟ್ಟುವುದು. ಆತನು ಇಂಥಾ ಪ್ರಶ್ನೆಗೆ ಅವಕಾಶ ಕೊಡದಿರಲು ತಾನೇ ಸಮಾಧಾನವನ್ನು ಹೇಳಿರುವನು. ಏನೆಂದರೆ :— ಈ ಧನುಸ್ಸನ್ನು ಕೆಲವು ಆಳುಗಳು ಮಾತ್ರ ಎತ್ತಿ ಬಂಡಿಯ ಮೇಲೆ ಇಡಲಿಕ್ಕೂ ಅದನ್ನು ಹೇರಿರುವ ಭಂಡಿಯನ್ನು ಎಲ್ಲಿಗಾದರೂ ನನ್ನ ಇಷ್ಟದಂತೆ ಎಳೆದುಕೊಂಡು ಹೋಗಬೇಕಾಗಿ ಬಂದಲ್ಲಿ ಆಗ ಮಾತ್ರ ನನ್ನ ಆಳುಗಳಿಗೆ ಅದನ್ನು ಸಾಗಿಸಿಕೊಡಲು ತಕ್ಕಶಕ್ತಿಯುಂಟಾಗಲಿ, ಎಂದು ಆ ಪರಮೇಶ್ವರನೇ ವರವನ್ನು ದಯಪಾಲಿಸಿರುವನಾಗಿ ನನ್ನ ಆಳುಗಳು ಭಂಡಿಯನ್ನು ಎಳೆದು ತರುತ್ತಾರೆ. ಅಷ್ಟು ಹೊರ್ತು ಇತರರು ಯಾರೇ ಆಗಲೀ ಈ ಶೈವ ಧನುಸ್ಸನ್ನಲ್ಲಾಡಿಸಲಾರರೆಂಬುದಾಗಿ ಆ ಧನುಸ್ಸಿನ ಮಹಾಮಹಿಮೆಯನ್ನು ಜನಕನು ವಿಶ್ವಾಮಿತ್ರರಿಗೆ ತಿಳಿಸಿದನೆಂದು ತಾತ್ಪರ್ಯ.

ವಿಶೇಷಾರ್ಥ.—ಈ ಮಾತುಗಳನ್ನು ಕೇಳಿ ಕ್ಷತ್ರಿಯರುಗಳಿಗೆ ಜನಕನಿಗಿಂತಲೂ ನಾವುಗಳು ದುರ್ಬಲರೆಂದು ತೋರಿ, ಅವರು ಆತನ ಮೇಲೆ ಬೀಳವಂತೆ ಇದ್ದರೆಂಬು ಭಾವ. ರಾಮ ಲಕ್ಷ್ಮಣರು ಕ್ಷತ್ರಿಯ ಬಾಲಕರಾದ್ದರಿಂದ ಅವರುಗಳ ಇದಿರಿನಲ್ಲಿ ಈ ಮಾತುಗಳನ್ನಾಡಿದರೆ ಅವರಿಗೆ ವೀರಾವೇಶವೇನಾದರೂ ಹುಟ್ಟಿದಲ್ಲಿ ಅವರು ತಮ್ಮ ಸಾಮರ್ಥ್ಯವನ್ನು

ತೋರಿಸಬಂದರೂ ಸಂತೋಷವೆಂಬ ಭಾವದಿಂದ ಜನಕನು ಧನುಸ್ಸಿನ ವಿಚಾರದಲ್ಲಿ ಇಷ್ಟು ಪ್ರತಾಪವನ್ನು ಪ್ರಕಟಿಸಿದನೆಂದು ತಾತ್ಪರ್ಯ.

**ಶ್ಲೋಕ॥ ಅಧಾರ್ಯಮೇತದ್ಧನುರಾಪ್ಯಶಂಕರಾದಹಂ ನೃಣಾಂವೀರ್ಯಪರೀಕ್ಷಣೇಧೃತಃ । ಸುತಾರ್ಥಮೇತಾಂಚಕರಪ್ರತಿಜ್ಞಾಂದದಾಮಿಕನ್ಯಾಂಯಇದಂಹಿಪೂರಯೇತ್ ॥೧೯॥**

ಅರ್ಥ.—ಅಹಂ=ನಾನು, ಅಧಾರ್ಯಂ=ಇತರರಿಂದ ಹಿಡಿಯಲಾಗದ, ಏತತ್=ಈ, ಧನುಃ=ಧನುಸ್ಸನ್ನು, ಶಂಕರಾತ್=ರುದ್ರದೇವರ ದೆಸೆಯಿಂದ ಆಪ್ಯ=ಪಡೆದುಕೊಂಡು, ನೃಣಾಂ=ಮಾನವರ, ವೀರ್ಯ = ಸಾಮರ್ಥ್ಯವನ್ನು, ಪರೀಕ್ಷಣೇ=ಪರೀಕ್ಷೆಗೆಂದು, ಧೃತಃ=ಸಂಕಲ್ಪ ಉಳ್ಳವನಾಗಿ, ಸುತಾರ್ಥಂ= ನನ್ನ ಮಗಳಿಗೋಸ್ಕರ, ಏತಾಂ=ಈ ಮುಂದೆ ಹೇಳುವ, ಪ್ರತಿಜ್ಞಾಂ=ಪ್ರತಿಜ್ಞೆಯನ್ನು, ಚಕರ=ಮಾಡಿರುವೆನು, ಯಃ=ಯಾವ ವೀರನು, ಇದಂ = ಈ ಬಿಲ್ಲನ್ನು, ಪೂರಯೇತ್=ಹೆದೆ ಏರಿಸುವನೋ, ತಸ್ಮೈ = ಅಂಥಾವನಿಗೆ, ಕನ್ಯಾಂ=ನನ್ನ ಮಗಳನ್ನು, ದದಾಮಿ=ಕೊಡುವೆನು, ಹಿ=ಪ್ರಸಿದ್ಧವು, ಇತಿ= ಹೀಗೆಂದು, ನನ್ನಪ್ರತಿಜ್ಞೆಯು.

ತಾತ್ಪರ್ಯ.—ಮೇಲಿನ ಶ್ಲೋಕದಲ್ಲಿ ಹೇಳಿದಂತೆ ಅತಿ ಭಾರವಾಗಿರುವ ಇಂಥಾ ಧನುಸ್ಸನ್ನು ಮನುಷ್ಯ ಮಾತ್ರರು ತಮ್ಮಲ್ಲಿಟ್ಟುಕೊಂಡು ಆಗಾಗ ಉಪಯೋಗಿಸಿಕೊಳ್ಳಲಾದೀತೆ? ನೋಡಿ! ಇಂಥಾ ಅದ್ಭುತ ವಸ್ತುವನ್ನು ಆ ಮಹೇಶ್ವರನು ನನ್ನ ಮೇಲಿನ ಪ್ರೀತಿ ವಿಶೇಷದಿಂದ ಇದನ್ನು ಧರಿಸಲು ತಕ್ಕ ಶಕ್ತಿಯೊಡನೆ ನನಗೆ ಕರುಣಿಸಿದ್ದರಿಂದ ಅಂಥಾ ಪರಮೇಶ್ವರನ ವಿಶೇಷಾನುಗ್ರಹಕ್ಕೆ ನಾನು ಪಾತ್ರನಾಗಿ, ಆ ಮೊದಲು ನನ್ನ ಸಭೆಗೆ ಬರುವ ಮನುಷ್ಯರನ್ನೆಲ್ಲಾ ಎಷ್ಟು ಮಾತ್ರ ಸಮರ್ಥರಾಗಿರುವರೆಂದು ಪರೀಕ್ಷಿಸಲಾರಂಭಿಸಿ ಬಂದ ಬಂದವರನ್ನು ಈ ಧನುಸ್ಸನ್ನು ಎತ್ತಿರಿ ಶಕ್ತಿ ಇದ್ದಲ್ಲಿ ಇದಕ್ಕೆ ಹೆದೆ ಏರಿಸಿ ಎಂದು ಹೇಳಿ ಪರೀಕ್ಷಿಸುತ್ತಾ ಬಂದೆನು, ಒಂದುವೇಳೆ ಯಾವ

ನಾದರೂ ಒಬ್ಬನು ಧನುಸ್ಸನ್ನು ಎತ್ತಿದರಾಗಲೀ ಹೆದೆ ಏರಿಸಿದರಾಗಲೀ ಅವನು ಸಮರ್ಥನೆನಿಸಿಕೊಳ್ಳುವನು. ಮತ್ತೂ ಈ ಪರಾಕ್ರಮಪರೀಕ್ಷೆಯಲ್ಲಿ ಉತ್ತೀರ್ಣನಾದ ಮನುಷ್ಯನಿಗೆ ನನ್ನ ಮಗಳನ್ನು ಕೊಟ್ಟು ವಿವಾಹೋತ್ಸವವನ್ನು ಬೆಳೆಯಿಸುವೆನು ಎಂಬೀ ಪ್ರತಿಜ್ಞೆಯನ್ನು ಮಾಡಿರುವೆನು ಎಂದನು.

**ಶ್ಲೋಕ॥ ಇತೀರಿತಾಂಮೇಗಿರಮಭ್ಯವೇತ್ಯ ದಿತೇಃ ಸುತಾ ದಾನವಯಕ್ಷರಾಕ್ಷಸಾಃ । ಸಮೇತ್ಯ ಭೂಪಾಶ್ಚ ಸಮೀಪಮಾಶುಪ್ರಗೃಹ್ಯತಚ್ಚಾಲಯಿತುಂನಶೇಕುಃ ॥೨೦॥**

ಅರ್ಥ.—ಇತಿ=ಈ ರೀತಿಯಾಗಿ, ಈರಿತಾಂ=ಹೇಳಲ್ಪಟ್ಟ, ಮೇ=ನನ್ನ, ಗಿರಂ=ಮಾತನ್ನು, ಅಭ್ಯವೇತ್ಯ=ಕೇಳಿ ತಿಳಿದು, ದಿತೇಃಸುತಾಃ=ದೈತ್ಯರು, ದಾನವ=ದಾನವರು, ಯಕ್ಷ-ಯಕ್ಷರೆಂಬುವರು, ರಾಕ್ಷಸಾಃ=ರಾಕ್ಷಸರೂ, ಚ=ಮತ್ತೂ, ಭೂಪಾಃ=ರಾಜರೂ, ಸಮೀಪಂ=ಬಿಲ್ಲಿನ ಹತ್ತಿರ, ಆಶು=ಬೇಗನೆ, ಸಮೇತ್ಯ=ಬಂದು, ತತ್=ಆ ಬಿಲ್ಲನ್ನು, ಪ್ರಗೃಹ್ಯ=ಹಿಡಿದು, ಚಾಲಯಿತುಂ=ಅಲುಗಿಸಲಿಕ್ಕೆ ಕೂಡ, ನಶೇಕುಃ=ಶಕ್ತರಾಗಲಿಲ್ಲವು.

ತಾತ್ಪರ್ಯ.—ಹೀಗೆ ಈಶ್ವರನಿಂದ ಉತ್ತಮ ಧನುಸ್ಸನ್ನು ಪಡೆದು ಕ್ಷತ್ರಿಯಾಗ್ರೇಸರನೆಂದು ಹೆಸರುಗೊಂಡ ನಾನು ಅದನ್ನು ಬಗ್ಗಿಸಿದವನಿಗೆ ಕನ್ಯೆಯನ್ನು ಕೊಡುವೆನೆಂದು ಮಾಡಿರುವ ಈ ಪ್ರತಿಜ್ಞೆಯನ್ನು ನಾನೇ ದಿಕ್ಕು ದಿಕ್ಕುಗಳಲ್ಲಿ ಡಂಗುರ ಹಾಕಿಸಿದೆನು. ಈ ವಿಚಾರವನ್ನು ಕೇಳಿದ ಪ್ರತಿಯೊಬ್ಬರೂ, ಧನುರ್ದರ್ಶನಾಕಾಂಕ್ಷೆಯಿಂದಲೂ, ಕನ್ಯಾಕಾಂಕ್ಷೆಯಿಂದಲೂ, ನನ್ನಂಥಾ ಪ್ರಬಲನ ಬಾಂಧವ್ಯವನ್ನು ಪಡೆಯಬೇಕೆಂಬ ಇಚ್ಛೆಯಿಂದಲೂ ತಂಡೋಪತಂಡವಾಗಿ ಬರಲುಪಕ್ರಮಿಸಿದರು. ಹಾಗೆ ಬಂದ ವೀರ ಪುರುಷರು ಯಾರು ? ಎನ್ನುವಿರೋ ? ಕೇಳಿ, ದೈತ್ಯ ಕುಲದವರು, ದಾನವರು, ಯಕ್ಷರು, ರಾಕ್ಷಸರು, ಮತ್ತೂ ಭೂಪಾಲಕರೆನ್ನಿಸಿರುವ ರಾಜಪುತ್ರರು, ಈ ಬಗೆಯ ಮಾನವರೆಲ್ಲರೂ ನನ್ನ ಸಭೆಗೆ ಬಂದು, ನನ್ನ ಸತ್ಕಾರವನ್ನು ಪಡೆದು, ಪರಾಕ್ರಮ ಪ್ರದರ್ಶನಕ್ಕಾಗಿ ಧನುಃಶಾಲೆಗೆ ಹೋಗಿ, ಧನುಸ್ಸನ್ನು ನೋಡಿ, ಸಂತೋಷದಿಂದ ಅದನ್ನು ಎತ್ತಲು ಪ್ರಯ

ತ್ನಿಸಿ ಸಾಧ್ಯವಿಲ್ಲದೆ ಮೌನದಿಂದ ಹಿಂದಿರುಗಿ ಹೋಗಿರುತ್ತಾರೆ. ಮತ್ತೆ ಕೆಲವರು, ಅದನ್ನು ಕೈಗಳಿಂದ ಹಿಡಿದು, ಅಲ್ಲಾಡಿಸಲಿಕ್ಕಾದರೂ ಅವಕಾಶವಾಗದಿರಲು ತಾವು ಅಸಮರ್ಥರೆಂದು ಭಾವಿಸಿ ತೆರಳಿರುವರು. ಇದೇ ಧನುಸ್ಸಿನ ಮಹಿಮೆಯು.

ವಿಶೇಷಾರ್ಥ.-ಲೋಕದಲ್ಲಿ, ಕುಲ ಶೀಲ, ರೂಪ, ಸೌಭಾಗ್ಯಾದಿಗಳುಳ್ಳ ಕನ್ಯಾ ಎಂದರೆ, ಎಂಥವನಿಗೂ ಆಶೆ, ಲೋಕಾದ್ಭುತ ವಸ್ತುವನ್ನು ಗಳಿಸಿದರೆ ಯಶೋವಂತರಾಗಿ ಬಾಳಬಹುದೆಂಬುದು ಎಲ್ಲರಿಗೂ ಇಚ್ಛೆ, ಆದರೆ ಈ ಸಂಕಲ್ಪವು ನೆರವೇರುವುದು ಮಾತ್ರ ಭಗವದಧೀನ. ಆದರೂ " ಷಡ್ಭಿರ್ಮನುಷ್ಯಚಿಂತಾನಾಂ " ಎಂದು ನೀತಿಯುಂಟು. ಮನುಷ್ಯನು ತನ್ನ ಉದ್ದೇಶಾನುಸಾರ ಆರು ವಿಧದಲ್ಲಿ ಪ್ರಯತ್ನ ಮಾಡಲು ಅಧಿಕಾರವುಂಟು. ಆದ್ದರಿಂದಲೇ ಗೀತೆಯಲ್ಲಿ ಕರ್ಮಣ್ಯೇವಾಧಿಕಾರಸ್ತೇಮಾಫಲೇಷುಕದಾಚನ " ಪ್ರತಿಯೊಬ್ಬನೂ ತಾನು ಮಾಡಬೇಕಾದಷ್ಟು ಕೆಲಸವನ್ನು ಮಾಡಿಯೇ ತೀರಬೇಕು ಎಂದು ನಿರ್ಧಾರ ಮಾಡಿ ಸ್ವಾಮಿಯು ಹೇಳಿರುವನು, ಇದನ್ನೆಲ್ಲಾ ಯೋಚಿಸಿನೋಡಿದಲ್ಲಿ, ಜನಕನ ಮಗಳೆಂದರೆ ಯಾರಿಗೆ ತಾನೇ ಆಶೆ ಹುಟ್ಟುವುದಿಲ್ಲ. ಆದ್ದರಿಂದ ಆ ಕಾಲದ ವೀರರಾದ ಮೇಲೆಹೇಳಿದ ಜನರೆಲ್ಲರೂ ಯತ್ನಮಾಡಿ ನೋಡೋಣನೆಂದು ಆತನ ಬಳಿಗೆ ಬಂದು ಧನುಸ್ಸಿನ ವಿಚಾರದಲ್ಲಿ ತಂತಮ್ಮ ಕೈಸಾಮರ್ಥ್ಯವನ್ನು ತೋರಿಸಿದರು. ಫಲವು ಈಶ್ವರಾಧೀನನೆಂದು ಹೇಳಿ ತಮ್ಮ ಕೈಸಾಗದಿರಲು ಹಿಂದಿರುಗಿ ಹೊರಟುಹೋದರು. ಇಲ್ಲಿ ದೈತ್ಯ ದಾನವ, ಯಕ್ಷ, ರಾಕ್ಷಸರುಗಳಲ್ಲಿ ಸೇರಿದ ಶೂರರೆಲ್ಲರೂ ಧನುರ್ಭಂಗದಲ್ಲಿ ಯತ್ನಿಸಿದರೆಂದೂ, ಅಂಥ ಘಟ್ಟಿಗರೂ ಕೂಡ ಸಮರ್ಥರಾಗಲಿಲ್ಲಾ ಎಂದ ಮೇಲೆ, ಜನಕನು ಹೇಳಿದಂತೆ ಧನುಸ್ಸಿನಮಹಿಮೆಯು ಅದ್ಭುತವೆಂದು, ಮುಖ್ಯಾಭಿಪ್ರಾಯವು. ಈ ಶ್ಲೋಕದಲ್ಲಿ, ದೈತ್ಯದಾನವಾದಿಗಳೆಂದು ಹೇಳಿದೆಯಲ್ಲ. ಅವರು ಯಾರು ? ಎಂದರೆ " ಕಶ್ಯಪರೆಂಬ ಮಹರ್ಷಿಗಳಿಗೆ, ಹದಿಮೂರು ಜನ ಹೆಂಡತಿಯರು, (ದಕ್ಷಬ್ರಹ್ಮನ ಮಕ್ಕಳು) ಇವರಲ್ಲಿ ಒಬ್ಬಳಾದ ದಿತೀದೇವಿಯ ಗರ್ಭದಲ್ಲಿ ಹುಟ್ಟಿದ ಮಕ್ಕಳೆಲ್ಲಾ ದೈತ್ಯರೆನ್ನಿಸಿದರು, ದನೂದೇವಿಯ ಮಕ್ಕಳು ದಾನವರೆನ್ನಿಸಿದರು, ಕುಬೇರನ ಭೃತ್ಯವರ್ಗದವರಿಗೆ ಯಕ್ಷರೆಂದು ಹೆಸರು,

ಹುಟ್ಟಿನಿಂದ ಮಾನವರಾಗಿದ್ದರೂ ಕೃತ್ಯಗಳಲ್ಲಿ ಕ್ರೂರರಾಗಿ ಪರರನ್ನ ವಂಚಿಸುವುದು, ತಾನೇ ತಾನೆಂದು ಭಾವಿಸಿ, ಸಂಪೂರ್ಣ ಸ್ವಾರ್ಥಪರರಾಗುವುದು, ಇಂದ್ರಿಯ ಪ್ರೀತಿಯೇ ಪ್ರಯೋಜನವೆಂದು ತಿಳಿದು ಅದಕ್ಕಾಗಿಯೇ ಯಾವಾಗಲೂ ಯತ್ನಿಸುವುದು, ಇಂತಹ ಗುಣಗಳುಳ್ಳವರು ರಾಕ್ಷಸರು, ಅಸುರರು, ಎಂದು ಕರೆಯಲ್ಪಡುವದುಂಟು, ಅಂತೂ ಈ ಮೇಲೆ ಹೇಳಿದ ಮಂಡಲಿಯವರೆಲ್ಲಾ ಬಂದು ಧನುಸ್ಸನ್ನು ಬಗ್ಗಿಸಲಾರದೇ ಸೋತುಹೋದರೆಂದು ಜನಕನು ವಿಶ್ವಾಮಿತ್ರರಿಗೆ ರಾಮ ಲಕ್ಷ್ಮಣರ ಸಮಕ್ಷಮ ತಿಳಿಸಿದನೆಂದು ಮುಖ್ಯಾಶಯವು.

ಅವತಾರಿಕೆ.—ಮೇಲಿನ ಶ್ಲೋಕಗಳಲ್ಲಿ ಶೈವಧನುಸ್ಸನ್ನು ಬಗ್ಗಿಸಿ ಪರಾಕ್ರಮವನ್ನು ಪ್ರಕಟಿಸಿ, ಜಾನಕಿಯನ್ನು ವಿವಾಹಮಾಡಿಕೊಳ್ಳುವುದಕ್ಕಾಗಿ ಬಂದಿದ್ದ ಶೂರರ ಪಾಡನ್ನು ಸ್ವಲ್ಪ ಮಟ್ಟಿಗೆ ವಿವರಿಸಿ ತಿಳಿಸಿದರು, ಈ ಶ್ಲೋಕದಲ್ಲಿ ಧನುರ್ವಿಚಾರವಾಗಿ ಮತ್ತೊಂದು ಸಂಗತಿಯನ್ನು ಹೇಳುವರು.

**ಶ್ಲೋಕ|| ಸಂಸ್ವಿನ್ನಗಾತ್ರಾಃ ಪರಿವೃತ್ತನೇತ್ರಾಃ ದಶಾನನಾದ್ಯಾಃ ಪತಿತಾವಿಮೂರ್ಛಿತಾಃ । ತಥಾಪಿಮಾಂಧರ್ಷಯಿತುಂನಶೇಕುಃ ಸುತಾಕೃತೇತೇವಚನಾತ್ ಸ್ವಯಂಭುವಃ ||೨೧||**

ಅರ್ಥ.—ದಶಾನನಾದ್ಯಾಃ=ದಶಕಂಠನೇ ಮೊದಲಾದವರು, ಸಂಸ್ವಿನ್ನ-ಬೆವರಿಟ್ಟಿದ್ದ, ಗಾತ್ರಾಃ=ಶರೀರವುಳ್ಳವರಾಗಿ, ಪರಿವೃತ್ತ=ತಿರುಗಿಹೋದ, ನೇತ್ರಾಃ=ಕಣ್ಣುಳ್ಳವರಾಗಿ, ವಿಮೂರ್ಛಿತಾಃ=ಸಂಪೂರ್ಣ ಮೂರ್ಛೆ ಹೋದವರಾಗಿ, ಪತಿತಾಃ=ಬಿದ್ದುಬಿಟ್ಟರು. ತಥಾಪಿ-ಆದಾಗ್ಯೂ, ತೇ=ಆ ರಾವಣಾದಿಗಳು, ಸ್ವಯಂಭುವಃ=ಬ್ರಹ್ಮನ, ವಚನಾತ್—ಆಜ್ಞಾಬಲದಿಂದ, ಸುತಾಕೃತೇ=ಈ ಮಗಳ ವಿಚಾರಕ್ಕಾಗಿ, ಮಾಂ=ನನ್ನನ್ನು, ಧರ್ಷಯಿತುಂ=ಎದುರಿಸಲಿಕ್ಕೆ ನಶೇಕುಃ=ಸಮರ್ಥರಾಗಲಿಲ್ಲವು.

ತಾತ್ಪರ್ಯ.—ಮಹರ್ಷಿಗಳೇ! ಹೀಗೆ ಅನೇಕ ವೀರರು ಧನುರ್ದರ್ಶನಕ್ಕಾಗಿ ನನ್ನಲ್ಲಿ ಬರುತ್ತಿದ್ದರಲ್ಲವೆ? ಒಂದುಸಲ ಲಂಕೆಯ ಅರಸನಾದ ಹತ್ತುತಲೆಯ ರಾವಣನೇ, ಕುಂಭಕರ್ಣಾದಿ ಘೋರರಾಕ್ಷಸರು ಬಂದುಸೇರಿ

ದರು. ಅವರನ್ನು ಸತ್ಕರಿಸಿದೆನು, ಅವರುಗಳಾದರೋ ಬಹು ಘಟ್ಟಿಗರು, ವಂಚಕರೂ ಹೌದು. ಅಂಥವರಿಗೂ ಈ ಬಿಲ್ಲನ್ನು ತೋರಿಸಬೇಕಾಯ್ತು ಅವರುಗಳು ಅದನ್ನು ಎತ್ತಲೂ ಹೆದೆ ಏರಿಸಲೂ ಬಹು ಸಾಹಸವನ್ನು ಮಾಡಿದರು, ಆದರೂ ಅವರ ಸಾಹಸವು ಫಲಕಾರಿಯಾಗಲಿಲ್ಲ, ಅವರ ಮೈ ಬೆವರಿಟ್ಟಿತು. ಕಣ್ಣುಗಳೆಲ್ಲಾ ತಿರುಗಿ ಹೋದುವು, ಶರೀರಕ್ಕೆ ಬಹಳ ಶ್ರಮವುಂಟಾಯ್ತು. ಬಿಲ್ಲೇನೋ ಕದಲಲಿಲ್ಲಾ. ಅಲ್ಲಿಗೂ ಬಿಡದೆ ಅಡಿಗಡಿಗೆ ಯತ್ನಿಸಿದರು. ಕಡೆಯಲ್ಲಿ ಕೈಸೋತು ಕೆಳಕ್ಕೆ ಬಿದ್ದು ಮೂರ್ಛೆಹೋದರು. ಆಮೇಲೆ ಹೇಗೋ ಚೇತರಿಸಿಕೊಂಡು, ಅವರಷ್ಟಕ್ಕೆ ಅವರೇ ಹಿಂದಿರುಗಿದರು. ಹೀಗಾದ ಅಪಮಾನವನ್ನ ಸಹಿಸಿಕೊಂಡು ಅವರು ಹೋಗತಕ್ಕವರಲ್ಲ, ನನ್ನ ಮಗಳನ್ನು ಅವರುಗಳು ನೋಡಿಯೂ ಇದ್ದರು ಹೆಣ್ಣಿನ ಮೇಲಿನ ಆಶೆಯು ಕೈಗೂಡದ ಮೇಲೆ ಅವರಂಥ ಪ್ರಬಲರಾದ ರಾಕ್ಷಸರು ಸುಮ್ಮನೇ ಹೋಗುವುದೆಂದರೇನು ? ನ್ಯಾಯವಾಗಿ ನನ್ನ ಮೇಲೆ ಬಿದ್ದು ಯುದ್ಧಮಾಡಿ ನನ್ನನ್ನು ಸೋಲಿಸಿ ಬಲಾತ್ಕಾರದಿಂದ ಜಾನಕಿಯನ್ನು ಎತ್ತಿಕೊಂಡೇಹೋಗಬೇಕಾಗಿತ್ತು. ಆದರೆ, ಹಾಗೆ ಯಾವುದೊಂದು ಅತಿಕ್ರಮವನ್ನು ನಡಿಸದೇ ಸುಮ್ಮನಾದುದು ಆಶ್ಚರ್ಯದ ಸಂಗತಿಯೇ ಸರಿ. ಈ ರೀತಿಯಾಗಿ ಸುಮ್ಮನೆ ಹೊರಟುಹೋಗಲು ಒಂದು ಗುಟ್ಟಾದ ಕಾರಣವಿದೆ, ಅದನ್ನು ತಮ್ಮಲ್ಲಿ ನನಗಿರುವ ವಿಶ್ವಾಸಕ್ಕೆ ತಕ್ಕಂತೆ ಹೇಳುವೆನು. ಮತ್ತೊಬ್ಬರಿಗಾದರೆ ಹೇಳೆನು. ಅದೇನೆಂದರೆ ಹಿಂದೆ ಬ್ರಹ್ಮದೇವರು ನನ್ನನ್ನು ಕುರಿತು "ಜನಕಾ ನಿನ್ನ ಮಗಳ ನಿಮಿತ್ತ ಅನೇಕ ರಾಕ್ಷಸರು ಬಹು ಹಠದಿಂದ ಬಂದು ಧನುರ್ಭಂಗಕ್ಕೆ ಯತ್ನಿಸುವರು, ಅವರ್‍ಯಾರಿಗೂ ಧನುಸ್ಸು ಬಗ್ಗುವುದಿಲ್ಲ. ಅಲ್ಲದೆ ನಿನ್ನ ಮಗಳನ್ನು ನೋಡಿ ಮೋಹಪಟ್ಟು ಬಲಾತ್ಕಾರದಿಂದ ಎತ್ತಿಕೊಂಡು ಹೋಗೋಣವೆಂದರೆ, ಆಗ ಈ ನನ್ನ ವರವು ಅವರಿಗೆ ಅಡ್ಡಿಯಾಗುವುದು. ಎಂದು ಹೇಳಿ, ನನ್ನ ಮತ್ತು ನನ್ನ ಮಗಳ ಕ್ಷೇಮಕ್ಕಾಗಿ ಅನುಗ್ರಹಮಾಡಿ ಎಂಥಾ ವೀರರೂ ನಮ್ಮನ್ನು ಧಿಕ್ಕರಿಸಲಾಗದಂತೆ ವರವನ್ನು ಕೊಟ್ಟಿರುವರು. ಆ ವರದ ಬಲದಿಂದ ನಾನೂ, ನನ್ನ ಮಗಳೂ, ಪರರ ತಿರಸ್ಕಾರಕ್ಕೆ ಅರ್ಹರಾಗಲವಕಾಶವಿಲ್ಲ. ಆದ್ದರಿಂದ ಉಳಿದುಕೊಂಡಿದ್ದೇವೆಂದು ಜನಕನು ಮತ್ತೊಂದು ಕ್ರಮದಲ್ಲಿ ಧನುಸ್ಸಿನ ಮಹಿಮೆಯನ್ನು ಕೊಂಡಾಡಿದನೆಂದು ತಾತ್ಪರ್ಯ.

ವಿಶೇಷಾರ್ಥ.— ದೇಹ ಸಾಮರ್ಥ್ಯದಲ್ಲಿ ಮನುಷ್ಯರಿಗಿಂತ ರಾಕ್ಷಸರು ಪ್ರಬಲರು, ಅವರಿಗಿಂತ ದೇವತೆಗಳು ಪ್ರಬಲರು. ಪ್ರಬಲರಾದವರು ದುರ್ಬಲರನ್ನು ಹಿಡಿದು ಹಿಂಸಿಸುವುದು ಸುಲಭ. ಆದರೆ ದುರ್ಬಲರು ದೇವತಾ ವರಪ್ರಸಾದಗಳನ್ನು ಪಡೆದಿದ್ದಲ್ಲಿ ಅದರ ಬಲದಿಂದ ಅವರಿಗೆ ಪ್ರಬಲರಿಂದ ಒದಗುವ ಹಾನಿಯು ತಪ್ಪಲವಕಾಶವುಂಟು. ವರವಾದರೋ ಭಕ್ತಿ ಸಹಿತವಾದ ಸೇವಾದಿಗಳಿಂದ ಸಂಪಾದನೀಯವು. ಹಾಗೆ ನಾನು ವಿಶೇಷಾರಾಧನೆಯಿಂದ ಬ್ರಹ್ಮನನ್ನು ಮೆಚ್ಚಿಸಿ ಇತರರು ನಿನ್ನನ್ನು ಎದುರಿಸಿ ಧಿಕ್ಕರಿಸದಂತೆ ವರವನ್ನು ಪಡೆದಿರುವೆನೆಂದೂ ಆ ಕಾರಣದಿಂದ ಅಂಥಾ ಪ್ರಬಲರಾದ ರಾವಣಾದಿಗಳು ನನ್ನನ್ನು ಹನನ ಮಾಡಲಾರದೆ ಹಿಂದಿರುಗಿ ಹೋದರೆಂದು ತನ್ನ ಗೌರವವನ್ನು ಮಾತ್ರೋದು ಕ್ರಮದಲ್ಲಿ ಹೇಳಿಕೊಂಡನೆಂದು ಭಾವ.

ಅವತಾರಿಕೆ.— ಮೇಲಿನ ಶ್ಲೋಕದಲ್ಲಿ ಹೇಳಿರುವ ಬ್ರಹ್ಮನ ವರದ ರೀತಿಯನ್ನು ಈ ಶ್ಲೋಕವು ವಿವರಿಸುವುದು.

**ಶ್ಲೋಕ ॥ ಪುರಾಹಿಮೇದಾತ್ ಪ್ರಭುರಬ್ಜಜೋವರಂ ಪ್ರಸಾದಿತೋಮೇ ತಪಸಾಕಥಂಥಂಚನ । ಬಲಾನ್ನತೇಕಶ್ಚಿದುಪೈತಿ ಕನ್ಯಕಾಂ ತದಿಚ್ಛುಭಿಸ್ತೇನಚಧರ್ಷಣೇತಿ ॥೨೨॥**

ಅರ್ಥ.— ಪುರಾ=ಪೂರ್ವದಲ್ಲಿ, ಮೇ=ನನ್ನ, ತಪಸಾ=ತಪಸ್ಸಿನಿಂದ ಪ್ರಸಾದಿತಃ=ಸಂತೋಷಪಡಿಸಲ್ಪಟ್ಟ, ಅಬ್ಜಜಃ=ಭಗವಂತನ ನಾಭಿಕಮಲದಲ್ಲಿ ಹುಟ್ಟಿದ, ಬ್ರಹ್ಮನು, ಮೇ=ನಿನಗೆ, ವರಂ=ವರವನ್ನು, ಅದಾತ್=ಕೊಟ್ಟಿರುವನು. ಅದೇನೆಂದರೆ.— ಕಶ್ಚಿತ್-ಯಾವನೊಬ್ಬನೂ, ತೇ=ನಿನ್ನ, ಕನ್ಯಕಾಂ=ಮಗಳನ್ನು, ಕಥಂಚನ=ಯಾವ ಸಂದರ್ಭದಲ್ಲಿಯೂ, ಬಲಾತ್-ಬಲಾತ್ಕಾರವಾಗಿ, ನೋಪೈತಿ-ಪಡೆಯುವುದಿಲ್ಲ. ತದಿಚ್ಛುಭಿಃ= ಅಂಥಾ ಕನ್ಯಾರ್ಥಿಗಳಿಂದ, ತೇ=ನಿನಗೆ, ಧರ್ಷಣಾ=ತಿರಸ್ಕಾರವು, ನಚ=ಇಲ್ಲವು, (ಆಗುವುದಿಲ್ಲವು) ಇತಿ=ಹೀಗೆಂದು, ವರಂ=ವರವನ್ನು, ಅದಾತ್=ಕೊಟ್ಟನು.

ತಾತ್ಪರ್ಯ.— ಪೂರ್ವದಲ್ಲಿ ನನ್ನ ತಪಸ್ಸಿನಿಂದ ಸಂತುಷ್ಟನಾದ ಚತುರ್ಮುಖನು ಈ ಧನುಸ್ಸಿನ ನಿಮಿತ್ತ ಸೋತು ಕೋಪಗೊಂಡ ಯಾವ ಮನು

ಷ್ಯನಿಂದಲೂ ನಿನಗೆ ಕೇಡಕಾಗುವುದಿಲ್ಲವೆಂತಲೂ ನಿನ್ನ ಮಗಳನ್ನು ಧನು ರ್ಭಂಗಮಾಡದೆ ಯಾವನೊಬ್ಬನೂ ಬಲಾತ್ಕಾರವಾಗಿ ಎತ್ತಿಕೊಂಡು ಹೋ ಗುವುದಿಲ್ಲವೆಂತಲೂ ಎರಡು ವರಗಳನ್ನು ದಯಪಾಲಿಸಿರುವನು.

**ಶ್ಲೋಕ || ತತಸ್ತು ತೇ ನಷ್ಟಮದಾ ಇತೋಗತಾಃ ಸಮಸ್ತ ಶೋಹ್ಯಸ್ತನ ಏವ ಪಾರ್ಥಿವಾಃ | ತತೋಮಮಾಯಾಂ ಪರಿಪೂರ್ಣಮಾನಸಂ ವೃ ಣೋತು ಕನ್ಯಾಮಿವಮೇವಮೇರ್ಥಿತಂ ||೨೩||**

ಅರ್ಥ.—ತತಸ್ತು=ಹೀಗೆ ಸೋತುಹೋದ್ದರಿಂದ, ನಷ್ಟ = ಕಳೆದು ಹೋದ, ಮದಾಃ=ನಾವೇ ವೀರರೆಂಬ ಗರ್ವವುಳ್ಳವರಾದ, ಸಮಸ್ತಶಃ= ಎಲ್ಲಾ, ಪಾರ್ಥಿವಾಃ-ರಾಜರೂ, ಹ್ಯಸ್ತನಏವ=ನಿನ್ನೆಯದಿವಸವೇ, ಇತಃ- ಇಲ್ಲಿಂದ, ಗತಾಃ=ಹೊರಟುಹೋಗಿದ್ದಾರೆ. ತತಃ=ಆದಕಾರಣ, ಮೇ=ನ ನಗೆ, ಅರ್ಥಿತಃ=ಅಪೇಕ್ಷಿತನಾದವನು, ಅಯಮೇವ-ಈ ನಿಮ್ಮ ಶಿಷ್ಯನಾದ ರಾಮನೇ ಆಗಿದ್ದಾನೆ, ಅಯಮೇವ-ಇವನೇ, ಮಮ-ನನ್ನ, ಮಾನಸಂ= ಮನಸ್ಸನ್ನು, ಪರಿಪೂರ್ಯ=ಪೂರ್ಣಮಾಡಿ, ಕನ್ಯಾಂ = ನನ್ನ ಮಗಳನ್ನು, ವೃಣೋತು=ವರಿಸಲಿ.

ತಾತ್ಪರ್ಯ.—ಆದಕಾರಣ ತಾವು ವೀರರೆಂಬ ಹೆಮ್ಮೆಯುಳ್ಳ ಅನೇಕ ರಾಜರುಗಳು ಕನ್ಯಾರ್ಥಿಗಳಾಗಿ ನಮ್ಮ ಸ್ವಯಂವರ ಮಂಟಪಕ್ಕೆ ನಿನ್ನಿನವ ರೆವಿಗೂ ಬಂದು ಧನುರ್ಭಂಗ ವಿಚಾರದಲ್ಲಿ ಕೈಲಾದಷ್ಟು ಯತ್ನಮಾಡಿದರು. ಅವರಿಗ್ಯಾರಿಗೂ ಕೈಸಾಗದ ಪ್ರಯುಕ್ತ ತಮಗೆ ತಾವೇ ಗರ್ವವನ್ನು ಬಿಟ್ಟು ಶಾಂತ ಮನಸ್ಸಿನಿಂದ ಹೊರಟುಹೋಗಿರುತ್ತಾರೆ. ಈಗ ತಮ್ಮ ಶಿಷ್ಯನಾಗಿ ಬಂದಿರುವ ದಾಶರಥಿಯು ನನ್ನ ಕೋರಿಕೆಯನ್ನು ನಡಿಸಿಕೊಟ್ಟು (ಧನುರ್ಭಂ ಗಮಾಡಿ) ನನ್ನ ಮಗಳನ್ನು ಪಾಣಿಗ್ರಹಣ ಮಾಡಿಕೊಳ್ಳಲಿ. ಆತನು ನನಗೆ ಅಭಿಮತವಾದ ವರನು ಎಂದು ಜನಕನು ಹೇಳಿದನು.

ವಿಶೇಷಾರ್ಥ.—ಇದುವರಿವಿಗೂ ಕನ್ಯಾರ್ಥಿಗಳಾಗಿ ಬಂದ ರಾಜಪು ತ್ರರುಗಳಲ್ಲೆಲ್ಲಾ ಈ ನಿಮ್ಮ ಶಿಷ್ಯನು ಬಹು ಲಕ್ಷಣನಾಗಿಯೂ, ಕನ್ಯೆಗೆ ಅನು ರೂಪನಾಗಿಯೂ ಇರುವನು. ಈತನು ಪರಾಕ್ರಮವನ್ನು ತೋರಿಸಿ ಮಗ ಳನ್ನು ಪಾಣಿಗ್ರಹಣಮಾಡಿಕೊಳ್ಳಲಿ ಮತ್ತು ಈ ಅಣ್ಣತಮ್ಮಂದಿರಿಬ್ಬರೂ

ಎಲ್ಲಾ ಭಾಗವಲ್ಲಿಯೂ ಒಬ್ಬರನ್ನೊಬ್ಬರು ಹೋಲುತ್ತಿರುವುದರಿಂದ ಅವರಲ್ಲಿ ಯಾರಾದರೂ ಈ ಕೆಲಸವನ್ನು ಮಾಡಿ ನನ್ನ ಮಗಳನ್ನು ಪಡೆಯಬಹುದೋ ಎಂದು ತಾವು ಕೇಳುವುದಾದರೆ ಅದಕ್ಕೆ ಶ್ರೀರಾಮಚಂದ್ರನೇ ನನ್ನ ಮಗಳ ವಿಚಾರದಲ್ಲಿ ನನಗೆ ತುಂಬಾ ಇಷ್ಟನಾದ ವರನೆಂದು ತೋರಿಸಲು (ಶ್ಲೋಕದಲ್ಲಿ) "ಅಯಮೇವಮೇರ್ಥಿತಃ" ಎಂಬ ಪದವು ಜನಕನ ಅಭಿಪ್ರಾಯಕ್ಕೆ ತಕ್ಕಂತೆ ಆಚಾರ್ಯರಿಂದ ಪ್ರಯೋಗಿಸಲಾಗಿದೆ ಎಂದು ಮುಖ್ಯಾಶಯವು. ಒಟ್ಟಿನಲ್ಲಿ ಶ್ರೀರಾಮಚಂದ್ರನೇ ಪರಾಕ್ರಮವನ್ನು ತೋರಿಸಿ ನನ್ನ ಮಗಳನ್ನು ಪಾಣಿಗ್ರಹಣ ಮಾಡಿಕೊಳ್ಳುವಂತೆ, ತಾವೇ ಈತನಿಗೆ ಆಜ್ಞೆಯನ್ನಿತ್ತು, ತಮ್ಮ ಮತ್ತೂ ನನ್ನ ಮನೋರಥಗಳನ್ನು ನಡಿಸಬಹುದೆಂದು ವಿಶ್ವಾಮಿತ್ರರಲ್ಲಿ ಜನಕನು ವಿಜ್ಞಾಪಿಸಿದನೆಂದು ತಾತ್ಪರ್ಯವು. ಇಲ್ಲಿಗೆ ಜನಕನಿಗೂ ವಿಶ್ವಾಮಿತ್ರರಿಗೂ ಧನುಸ್ಸಿನ ವಿಚಾರವಾಗಿಯೂ ಮತ್ತು ಶ್ರೀರಾಮನು ಸೀತಾದೇವಿಗೆ ಅರ್ಹನೆಂಬ ವಿಷಯದಲ್ಲಿ ಜನಕನು ಮಾಡಿದ ಸಂಕಲ್ಪವು ಸರ್ವೋತ್ತಮವಾದುದೆಂದು ಸಾಧಿಸಲವಶ್ಯವಾದ ಸಂಭಾಷಣೆಯೂ ಮುಗಿದಂತಾಯಿತು. ಈ ಧನುಸ್ಸು ಜನಕನು ಸ್ವಪ್ರಯತ್ನದಿಂದ ಸಂಪಾದಿಸಿದ್ದೆಂದೂ ಮೇಲಿನ ಸಂಭಾಷಣೆಯಿಂದ ಸ್ಪಷ್ಟಪಡುವುದು. ಶ್ರೀಮದಾಚಾರ್ಯರೇ ತಮ್ಮ ಶ್ಲೋಕಗಳಿಂದ ಜನಕ ವಿಶ್ವಾಮಿತ್ರರ ಸಂಭಾಷಣೆಯ ವಿವರಗಳನ್ನು ಕಂಠೋಕ್ತವಾಗಿ ಹೇಳಿರುತ್ತಾರಾಗಿ ಈ ಶೈವಧನುಸ್ಸಿನ ಸಂಪಾದನಾಕ್ರಮ ಬೋಧಕವಾದ ಕಥೆಯು ಸರ್ವರಿಂದಲೂ ಅಂಗೀಕಾರಾರ್ಹವೇ ಸರಿ. ಆದರೆ ಶ್ರೀಮದ್ವಾಲ್ಮೀಕಿ ರಾಮಾಯಣದಲ್ಲಿ ಬಾಲಕಾಂಡ ೬೬ನೆಯ ಸರ್ಗದಲ್ಲಿ ಧನುಸ್ಸಿನ ವಿಚಾರದಲ್ಲಿ ರಾಮ ಲಕ್ಷ್ಮಣರಿಗೆ ಅದನ್ನು ತೋರಿಸೆಂದು ವಿಶ್ವಾಮಿತ್ರರು ನುಡಿಯಲು ಅವರಿಗೆ ಉತ್ತರವನ್ನು ಹೇಳಲುದ್ಯುಕ್ತನಾದ ಜನಕನು ಹೀಗೆ ಹೇಳಿರುವನು.—

ಶ್ರೂಯತಾಮಸ್ಯ ಧನುಷೋ ಯದರ್ಥ ಮಹತಿಷ್ಠತಿ"

ಎಂದು ಆರಂಭಿಸಿ ಹೇಳುತ್ತಾನೆ. "ದೇವರಾತ ಇತಿಖ್ಯಾತೋನಿಮಿರ್ಜ್ಯೇಷ್ಠೋಮಹೀಪತಿಃ। ನ್ಯಾಸೋಽಯಂತಸ್ಯ ಭಗವನ್ ಹಸ್ತೇದತ್ತೋಮಹಾತ್ಮನಃ। ದಕ್ಷಯಜ್ಞವಧೆಪೂರ್ವಂ ಧನುರಾಯಮ್ಯವೀರ್ಯವಾನ್" ಇತ್ಯಾದಿ ಮೇಲಿನ ಶ್ಲೋಕಗಳರ್ಥ. ಮಹರ್ಷಿಗಳೇ ನಮ್ಮ ವಂಶಕ್ಕೆ ಮೂಲ ಪುರುಷನಾದ

ಮಹನೀಯನು ನಿಮಿಮಹಾರಾಜನು. ಆತನು ಬಹು ಧರ್ಮಿಷ್ಠನು. ದೇವತೆಗಳಿಗೂ ಆತನಲ್ಲಿ ಪೂರ್ಣ ಗೌರವವಿದ್ದಿತು. ಒಂದು ಸಲ ದಕ್ಷಬ್ರಹ್ಮನು ರುದ್ರಭಾಗವಿಲ್ಲದಂತೆ ಯಜ್ಞವನ್ನು ಮಾಡಲಾರಂಭಿಸಿದನು. ಅಲ್ಲಿ ಎಲ್ಲಾ ದೇವತೆಗಳೂ ಹವಿರ್ಭಾಗಕ್ಕಾಗಿ ಬಂದು ಸೇರಿದ್ದರು, ದಕ್ಷನು ರುದ್ರದೇವರಿಗೆ ಮಾವನು, ಒಂದು ದೇವತಾ ಸಭೆಯಲ್ಲಿ ರುದ್ರದೇವನು ತನಗೆ ಪ್ರತ್ಯುತ್ಥಾನ ಮಾಡಲಿಲ್ಲವೆಂದು ಕೋಪದಿಂದ ವಿದ್ಯುಕ್ತವಾದ ಯಜ್ಞದಲ್ಲಿ ಆತನಿಗೆ ಭಾಗವನ್ನು ನಾನು ತಪ್ಪಿಸಿಬಿಡುವೆನೆಂದು ರುದ್ರದೇವರಿಗೆ ಅಪಮಾನಮಾಡಲಿಕ್ಕಾಗಿಯೇ ಈ ಯಜ್ಞವನ್ನು ಹೂಡಿದನು. ಯಜ್ಞವು ನಡೆಯುತ್ತಾ ಇತ್ತು. ರುದ್ರದೇವರಿಗೆ ಹವಿಸ್ಸು ಕೊಡುವ ವೇಳೆಯು ಒದಗಿತು. ಆದರೆ ಹಠಕ್ಕೆ ಕುಳಿತ ದಕ್ಷನು ಭಾಗವನ್ನು ಕೊಡಲಿಲ್ಲ. ಮುಂದೆ ಸಾಗಲಿ ಎಂದು ನುಡಿದನು. ಯಜಮಾನನ ಇಷ್ಟದಂತೆಯೇ ಯಜ್ಞವು ಮುಂದುವರಿಸಲಾಯ್ತು. ಋತ್ವಿಜರೇನು ಮಾಡಿಯಾರು ? ಅಸ್ವತಂತ್ರರು, ಈ ಸಂಗತಿಯು ಸರ್ವಜ್ಞನಾದ ಮಹದೇವರಿಗೆ ಗೊತ್ತಾಯಿತು. ಕೂಡಲೆ ಮಾವನ ಮೇಲೂ ತಮಗೆ ಭಾಗವಿಲ್ಲದೆ ನಡಿಸುತ್ತಿರುವ ಯಜ್ಞದಮೇಲೂ ಕೋಪಗೊಂಡು ವೀರಭದ್ರರೂಪದಿಂದ ದಕ್ಷಯಜ್ಞ ಧ್ವಂಸಾರ್ಥವಾಗಿ ಆಯುಧಪಾಣಿಗಳಾಗಿ ರುದ್ರದೇವರು ಹೊರಟು ಬಂದರು. ಇವರ ಪರಿವಾರವೂ ಯಜ್ಞಶಾಲೆಗೆ ಬಂದು ಸೇರಿತು. ಕ್ಷಣಮಾತ್ರದಲ್ಲಿ ಯಜ್ಞವನ್ನು ನಾಶಮಾಡಿದರು. ದೇವತೆಗಳನ್ನು ಹಿಡಿದು ಹೊಡೆಯಲಾರಂಭಿಸಿದರು. ಹೆದರಿ ಆ ದೇವತೆಗಳೆಲ್ಲರೂ ರುದ್ರದೇವರನ್ನು ಪ್ರಾರ್ಥಿಸಲಾರಂಭಿಸಿ ಅಪರಾಧವನ್ನು ಮನ್ನಿಸಿ ಈ ಯಜ್ಞಶಾಲೆಯಲ್ಲಿ ಮಿಕ್ಕಿರುವ ಸಮಸ್ತ ವಸ್ತುಗಳನ್ನು ತಮಗೆ ಭಾಗವಾಗಿ ಸಮರ್ಪಿಸುತ್ತೇವೆ, ಕರುಣಿಸಿರೆಂದು ಬೇಡಿಕೊಂಡರು. ಆಗ ಮಹದೇವರು ಪ್ರಸನ್ನರಾಗಿ ಆ ದೇವತೆಗಳಿಂದ ಪೂಜಿತರಾಗಿ ಅವಶಿಷ್ಟಹೋಮ ದ್ರವ್ಯಗಳನ್ನು ತೆಗೆದುಕೊಂಡು ತೃಪ್ತರಾಗಿ ತಮ್ಮ ಕೈಲಿದ್ದ ಶ್ರೇಷ್ಠವಾದ ಧನುಸ್ಸನ್ನು ದೇವತೆಗಳಿಗೆ ಕೊಟ್ಟು ಅನುಗ್ರಹಿಸಿ ಕೈಲಾಸಕ್ಕೆ ತೆರಳಿದರು. ಅನಂತರ ದೇವತೆಗಳು ಮಹೇಶ್ವರನು ತಮ್ಮ ವಶಕ್ಕೆ ಕೊಟ್ಟಿದ್ದ ರತ್ನಪ್ರಾಯವಾದ ಧನುಸ್ಸನ್ನು ಪ್ರೀತಿಯಿಂದ ನಮ್ಮ ಪೂರ್ವಿಕನಾದ ನಿಮಿಮಹಾರಾಜನಿಗೆ ಪೂಜಿಸಿಕೊಂಡಿರು

ಇದರಿಂದ ನಿನಗೆ ಕ್ಷತ್ರಿಯ ಮಂಡಲಿಯಲ್ಲಿ ತುಂಬಾ ಗೌರವವು ಬರುತ್ತೆಂದು ಹೇಳಿ ಅನುಗ್ರಹಿಸಿ ಕೊಟ್ಟರು. ಆತನ ಅನಂತರ ಈ ಕುಲದಲ್ಲಿ ಹುಟ್ಟಿದ ರಾಜರುಗಳೆಲ್ಲರೂ ಈ ಶೈವ ಧನುಸ್ಸನ್ನು ಬಹು ಗೌರವದಿಂದ ಪೂಜಿಸುತ್ತಾ ಬಂದಿದ್ದಾರೆ, ಹೀಗೆ ದೇವತಾನುಗ್ರಹಕ್ಕೆ ಪಾತ್ರನಾದ ಆತನಿಗೆ ದೇವರಾತನೆಂದೂ ಹೆಸರುಂಟು. ಈ ಧನುಸ್ಸು ಆತನ ಕಾಲದಲ್ಲಿ ಬಂದದ್ದು ಎಂದು ಹೇಳಿದೆ. ಮತ್ತೂ ಕೂರ್ಮಪುರಾಣದಲ್ಲಿ ಈ ಧನುಸ್ಸಿನ ವಿಚಾರದಲ್ಲಿ ೨೧ನೇ ಅಧ್ಯಾಯದಲ್ಲಿ " ಪ್ರೀತಶ್ಚ ಭಗವಾನೀಶಃ ತ್ರಿಶೂಲೀನೀಲಲೋಹಿತಃ | ಪ್ರದದೌ ಶತ್ರುನಾಶಾರ್ಥಂ ಜನಕಾಯಾದ್ಭುತಂಧನುಃ " ಎಂದು ಸಾಕ್ಷಾನ್ಮಹೇಶ್ವರನು ಜನಕನಿಗೆ ಪೂರ್ಣ ವಿಶ್ವಾಸವನ್ನು ತೋರಿಸಿ ನಿನ್ನ ಶತ್ರುಗಳ ನಾಶಕ್ಕೆ ಅನುಕೂಲಿಸಲು ಈ ಅದ್ಭುತವಾದ ಧನುಸ್ಸನ್ನು ನಿನಗೆ ಕೊಡುವೆನೆಂದು ಹೇಳಿ ಕೊಟ್ಟಂತೆ ವರ್ಣಿತವಾಗಿದೆ. ಇನ್ನೂ ಪದ್ಮಪುರಾಣದಲ್ಲಿಯಾದರೋ " ಚಾಪಂಶಂಭೋರ್ದಯಾದತ್ತಂ ಕನ್ಯಾಶುಲ್ಕೀಕೃತಂಮಯಾ " ಎಂದೂ, ರಾಮಾಯಣದಲ್ಲಿ "ಯದರ್ಥಮಿಹತಿಷ್ಠತಿ" ಎಂದು ಧನುಸ್ಸನ್ನು ತನ್ನಲ್ಲಿ ಏತಕ್ಕಾಗಿ ಇಟ್ಟುಕೊಂಡಿರುವೆನೆಂದರೆ, ನನ್ನ ಮಗಳಿಗೆ " ವೀರ್ಯಶುಲ್ಕ " ಕ್ಕಾಗಿಟ್ಟುಕೊಂಡಿರುವೆನೆಂದು ಜನಕನು ಹೇಳಿದಂತೆ ವರ್ಣಿತವಾಗಿದೆ. ಆದರೆ ಕನ್ಯಾಶುಲ್ಕವೆಂದು ಇಷ್ಟು ಹಠವಾದರೂ ಜನಕನು ಏಕೆ ಮಾಡಿರಬಹುದು ? ಎಂದು ಪ್ರಶ್ನೆ ಹುಟ್ಟುವುದು, ಅದಕ್ಕೂ ಉತ್ತರವುಂಟು. ಮುಖ್ಯವಾಗಿ ಧನುಸ್ಸು ದೇವರಾತನಿಗೆ ಬಂದುದೇ ? ಜನಕನಿಗೆ ಬಂದುದೇ ? ಇದನ್ನು ಮೊದಲು ನಿರ್ಧರಿಸಬೇಕಾಗಿದೆ. ದೇವರಾತನಿಗೆ ಬಂದುದೆಂದು ಹೇಳಲು ಮೇಲಿನ ರಾಮಾಯಣ ಶ್ಲೋಕಗಳೇ ಆಧಾರವಾಗಿವೆ. ಕೂರ್ಮಪುರಾಣ ಪದ್ಮಪುರಾಣ ಶ್ಲೋಕಗಳಾದರೋ ಜನಕನಿಗೆ ಬಂದಂತೆ ಹೇಳುವವು. ಶ್ರೀಮದಾಚಾರ್ಯರೂ ಜನಕನೇ ತಪಸ್ಸನ್ನು ಮಾಡಿ ಪಡೆದನೆಂದು ಈ ನಿರ್ಣಯ ಗ್ರಂಥದಲ್ಲಿ ಕಂಠೋಕ್ತವಾಗಿ ಹೇಳುವರು. ಈ ತೊಡಕನ್ನು ಬಿಡಿಸಬೇಕಾದರೆ ಒಂದು ಅಪೂರ್ವ ಕಲ್ಪನೆಯು ಬೇಕಾಗುವುದು. ಅದು ಏನೆಂದರೆ, ಪ್ರತಿ ಒಬ್ಬನೂ ತನ್ನ ಕುಲಕ್ಕೂ ಕುಲದ ಮೂಲಪುರುಷರಿಗೂ ಗೌರವವನ್ನು ಕೊಡಬೇಕು. ಆತ್ಮಗೌರವವಂತೂ ಎಲ್ಲರಿಗೂ ಬೇಕೇಬೇಕು, ಎರಡಕ್ಕೂ ಅವಕಾಶವಿದ್ದರೆ ಇನ್ನೂ ಅನುಕೂಲವಲ್ಲವೇ ?

ಪ್ರಕೃತ ಮಿಥಿಲ ದೇಶಾಧಿಪತಿಯಾದ ನಿಮಿಯು ಪ್ರಸಿದ್ಧನು. ಅವನು ಒಂದು ದೇವತಾಕಾರ್ಯಾರ್ಥವಾಗಿ ಕೊಲ್ಲಲ್ಪಟ್ಟು ಪ್ರಾಣಿಗಳ ರೆಪ್ಪೆಯಲ್ಲಿ ಸೇರಿಕೊಂಡು ಜೀವಿಸುವಂತೆ ಅಜ್ಞೆಯಾಯ್ತು. ಆ ವರದ ಪ್ರಭಾವದಿಂದ ಆತನು ಎಲ್ಲರ ರೆಪ್ಪೆಗಳಲ್ಲಿ ವಾಸಮಾಡಿಕೊಂಡಿರಲಾರಂಭಿಸಿದನು. ಇವನ ಅನಂತರ ದೇವರಾತನು (ಈತನ ಮಗನು) ರಾಜ್ಯಕ್ಕೆ ಬಂದನು. ಅವನಿಗೆ ದೇವತೆಗಳು ಪ್ರಸನ್ನರಾಗಿ ಒಂದು ಧನುಸ್ಸನ್ನು ಕೊಟ್ಟಿದ್ದರು. ಆ ಧನುಸ್ಸನ್ನು ಧರಿಸಿ ಅವನು ವಿಜಯಯಾತ್ರೆಗೆ ಹೊರಟರೆ ಶತ್ರುಗಳೆಲ್ಲಾ ಅಡಗಿ ಹೋಗುತ್ತಿದ್ದರು. ಅವನ ಮಹಿಮೆಯು ಈ ಧನುಸ್ಸಿನಿಂದ ವಿಶೇಷವಾಗಿ ಪ್ರಖ್ಯಾತವಾಯ್ತು. ಆತನು ಅದರಲ್ಲಿ ತುಂಬಾ ಭಕ್ತಿಯನ್ನಿಟ್ಟು ಬಹುಕಾಲ ಅದನ್ನು ಪೂಜಿಸಿ ತಾನು ತಪೋರಣ್ಯಕ್ಕೆ ತೆರಳುವಾಗ ತನ್ನ ಮಗನಾದ ಜನಕನಿಗೆ ಅದರ ಮಹಿಮೆಯನ್ನು ತಿಳಿಸಿ ನೀನೂ ಪೂಜಿಸಿಕೊಂಡಿರೆಂದು ಹೇಳಿ ಅದನ್ನು ಅವನ ವಶಕ್ಕೆ ಕೊಟ್ಟು ಹೊರಟುಹೋದನು. ಜನಕನು ತನ್ನ ಹಿಂದಿನವರಂತೆ ಭಕ್ತಿಯಿಂದ ಪೂಜಿಸುತ್ತಾ ಬಹುಕಾಲ ಕಳೆದನು. ಇವನಿಗೆ ದೀರ್ಘಕಾಲದವರೆವಿಗೂ ಮಕ್ಕಳಾಗಲಿಲ್ಲ. ಪುತ್ರಾರ್ಥವಾಗಿ "ಅಗ್ನಿಚಯನ" ವೆಂಬ ಯಾಗಕ್ಕಾರಂಭಿಸಿ ಆ ವಿಧಿಗನುಸಾರವಾಗಿ "ಷಡ್ವೇನಕೃಷತಿ" ಎಂಬ ಮೀಮಾಂಸಾ ಶಾಸ್ತ್ರೋಕ್ತವಾಗಿ ಯಜ್ಞಶಾಲಾ ನಿರ್ಮಾಣಯೋಗ್ಯವಾದ ಭೂಶೋಧನೆಗೆ ಪ್ರಾರಂಭಿಸಿ ಬಂಗಾರದ ನೇಗಿಲಿಗೆ ಆರು ಎತ್ತುಗಳನ್ನು (೩ ಜೋಡಿ) ಹೂಡಿ ಸುಮುಹೂರ್ತದಲ್ಲಿ ನೆಲವನ್ನು ಉಳುವುದಕ್ಕೆ ಆರಂಭಿಸಿ ಉತ್ತುತ್ತಾ ಬಂದನು. ಉಳುತ್ತಿರುವವೇಳೆ ಆ ನೇಗಿಲಿನ ಸಾಲಿನಲ್ಲಿ ಒಂದು ಅದ್ಭುತ ಕನ್ಯಾರತ್ನವು ದೊರಕಿತು. ಅದು ಆಗಲೇ ಜನನವಾಗಿದ್ದ ಮಗುವಿನಂತೆ ಕಂಡುಬಂದಿತು. ಅಲ್ಲಿ ಆ ಮಗುವನ್ನು ಹೆತ್ತವರಾರು? ನೇಗಿಲಿನ ತುದಿಯೇ ಈ ಮಗುವಿಗೆ ಉತ್ಪತ್ತಿಸ್ಥಾನವೆಂದು ಶಾಸ್ತ್ರಜ್ಞನಾದ ಜನಕನು ಮಹರ್ಷಿಗಳ ವಾಕ್ಯಸಿಂದ ನಿರ್ಧರಿಸಿ ಮಾತೃಗರ್ಭ ಸಂಪರ್ಕವಿಲ್ಲದೇ ಜನ್ಮಿಸಿದ ಈ ಕನ್ಯೆಗೆ "ಸೀತಾ" ಎಂದು ನಾಮಕರಣಮಾಡಿ ಆಕೆಯನ್ನು ಬಹು ಪ್ರೇಮದಿಂದ ಸಾಕುತ್ತಾ ಅಭಿವೃದ್ಧಿಗೆ ತಂದನು. ಈ ಅಂಶವನ್ನು ಪದ್ಮಪುರಾಣದಲ್ಲಿರುವ ಮುಂದಿನ ಶ್ಲೋಕಗಳು ಸ್ಪಷ್ಟಪಡಿಸುವವು ಆ ಕನ್ಯೆಯು ಸಾಕ್ಷಾಲ್ಲೋಕೇಶ್ವರಿ ಎಂದರೆ ಮಹಾಲಕ್ಷ್ಮೀ

ಎಂಬುದನ್ನು ಸಾರುತ್ತಿವೆ. " ಅಥಲೋಕೇಶ್ವರೀಲಕ್ಷ್ಮೀ ರ್ಜನಕಸ್ಯಪುರೇ ಸ್ವತಃ | ಶುಭಕ್ಷೇತ್ರೇಹಲೋತ್ಖಾತೇ ತಾರೇಚೋತ್ತರಫಾಲ್ಗುನೆ | ಅಯೋನಿಜಾಪದ್ಮಕರಾ ಬಾಲಾರ್ಕಶತಸನ್ನಿಭಾ || ಸೀತಾಮುಖೇಸಮುತ್ಪನ್ನಾ ಬಾಲಭಾವೇನಸುಂದರೀ | ಸೀತಾಮುಖೋದ್ಭವಾತ್ ಸೀತಾ ಇತ್ಯಸ್ಯೈನಾಮಚಾಕರೋತ್ | ತತೋಭೂದೌರಸೀತಸ್ಯ ಊರ್ಮಿಳಾನಾಮಕನ್ಯಕಾ " ಎಂದು ಹೇಳಿರುವುದು. ಈ ಪ್ರಕಾರವಾಗಿ ಜನಕನಿಗೆ ಈ ಧನುಸ್ಸು ಹಿರಿಯರಿಂದ ಬಂದುದು, ಹಿರಿಯರಿಗೆ ದೇವತೆಗಳು ಕೊಟ್ಟಿದ್ದು, ದೇವತೆಗಳಿಗೆ ಮಹೇಶ್ವರನು ದಯಪಾಲಿಸಿದ್ದು ಎಂಬುದು ಸ್ಪಷ್ಟವಾಯಿತು. ಹೀಗೆ ಶತ್ರುನಿಗ್ರಹ ಕಾರ್ಯಕ್ಕಾಗಿ ತಮ್ಮ ವಂಶದ ಪ್ರಾಚೀನರಿಗೆ ಬಂದಿದ್ದ ಈ ಧನುಸ್ಸನ್ನು ಜನಕನು ಬಹು ಗೌರವದಿಂದ ಪೂಜಿಸುತ್ತಾ ಇದ್ದು ತನ್ನ ಕಾಲದಲ್ಲಿ ಅದರ ಉಪಯೋಗಕ್ಕೆ ಅವಕಾಶವಿಲ್ಲವಲ್ಲಾ ಎಂದು ಯೋಚಿಸುತ್ತಿರುವಾಗ ಮೇಲೆ ಹೇಳಿದಂತೆ ಲೋಕಾದ್ಭುತವಾದ ಕನ್ಯಾರತ್ನವು ಈತನಿಗೆ ಲಭಿಸಿತು. ಆತನು ಬಹಳ ಚತುರನಾದ್ದರಿಂದ ಈ ಮಗಳಿಗೆ ಆ ಧನುಸ್ಸನ್ನು ವೀರ್ಯಶುಲ್ಕವಾಗಿ ಮಾಡುವೆನೆಂದು ಏಕಾಂತದಲ್ಲಿ ಯೋಚಿಸಿ, ಅದಕ್ಕೂ ಪರಮೇಶ್ವರನ ಆಜ್ಞೆಯು ಆವಶ್ಯಕವೆಂದು ತಿಳಿದು, ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿದನು. ಆತನ ವರವನ್ನು ಪಡೆದು ಅಂದಿನಿಂದ ಈ ಶೈವಧನುಸ್ಸನ್ನು ಮಗಳಿಗಾಗಿ ಇಟ್ಟಿದ್ದೇನೆ, ಯಾವ ವೀರನು ಬಂದು ಈ ಧನುಸ್ಸಿನ ಮೇಲೆ ತನ್ನ ಬಾಹುಬಲವನ್ನು ತೋರಿಸುವನೋ ಅವನಿಗೆ ಈ ಕನ್ಯಾರತ್ನವನ್ನು ಕೊಡುವೆನೆಂದು ಸಮರ್ಥಿಸುತ್ತಾ ಬಂದನೆಂದು ಪದ್ಮಪುರಾಣದ ಈ ಶ್ಲೋಕದಿಂದ ತಿಳಿದುಬರುತ್ತದೆ. " ಚಾಪಂಶಂಭೋರ್ವರಯಾದತ್ತಂ ಕನ್ಯಾಶುಲ್ಕೀಕೃತಂಮಯಾ " ಎಂದರೆ ನಮ್ಮ ಪೂರ್ವಿಕರಿಗೆ ಶಂಭುವು ದಯಮಾಡಿ ಕೊಟ್ಟ ಈ ಧನುಸ್ಸು ಈಗ ನನ್ನ ಮಗಳಿಗೆ ವೀರ್ಯಶುಲ್ಕವಾಗಿ ಮಾಡಲ್ಪಟ್ಟಿರುವುದು. ಇದನ್ನು ಯಾರು ಹೆದೆಯೇರಿಸುವರೋ ಅವರಿಗೆ ಸೀತಾದೇವಿಯು ಹೆಂಡತಿಯಾಗುವಳು ಎಂದು ಡಂಗುರ ಹಾಕಿಸಿದನು. ಹೀಗೆ ಧನುಸ್ಸು ಬಂದ ಕ್ರಮ ಉಪಯೋಗ ಕ್ರಮಗಳಲ್ಲಿ ಜನಕನ ಹಿಂದಿನವರು ಜನಕನು ಇಬ್ಬರೂ ಕಾರಣರಾಗಿರುತ್ತಾರೆ ಎಂಬುದಾಗಿ ತಿಳಿಯಬರುತ್ತದೆ. ನಮ್ಮಲ್ಲಿ ಜನ್ಮಾಂತರವುಂಟೆಂದು ಒಪ್ಪುವುದರಿಂದ ಈ ಜನಕನೇ

ಹಿಂದೆ ದೇವರಾತನಾಗಿ ಹುಟ್ಟಿ ಈ ಧನುಸ್ಸನ್ನು ಪಡೆದು ಪುನಃ ಜನಕನಾಗಿ ಹುಟ್ಟಿ ಸೀತಾದೇವಿಗೋಸ್ಕರ, ಅದೇ ಧನುಸ್ಸನ್ನು ವೀರ್ಯಶುಲ್ಕವಾಗುವಂತೆ ಪರಮೇಶ್ವರನಿಂದ ವರಪಡೆದನೆಂದು ಹೇಳಿದರೂ ಹೇಳಬಹುದು. ಒಬ್ಬ ಜೀವನು ತನ್ನ ಸಂಕಲ್ಪವು ಒಂದು ಜನ್ಮದಲ್ಲಿ ನೆರವೇರದಿದ್ದರೆ ಮತ್ತೊಂದು ಜನ್ಮದಲ್ಲಿ ಪುನಃ ಅದನ್ನು ಸಾಧಿಸಿಕೊಳ್ಳುವುದೂ ಉಂಟಷ್ಟೆ? ಮಹಾಯೋಗಿಯಾದ ಭರತನಿಗೆ ಮನಸ್ಸಂಕಲ್ಪವಲ್ಲವೇ ಜಿಂಕೆಯ ಜನ್ಮವನ್ನು ಕೊಟ್ಟದ್ದು? ಹಾಗೆಯೇ ಇಂಥಾ ಲೋಕಾದ್ಭುತ ಧನುಸ್ಸನ್ನು ಪಡೆದ ನಾನು ಲೋಕಾದ್ಭುತ ಮಗಳನ್ನು ಪಡೆದು ಧನುಸ್ಸಿನ ಪೂರ್ಣಫಲವನ್ನು ಪಡೆಯಬೇಕೆಂದು ಒಬ್ಬ ಜನಕನೆಂಬ ಆತ್ಮನೇ ಮನಸ್ಸಂಕಲ್ಪ ವಿಶೇಷದಿಂದ ಪುನರ್ಜನ್ಮ ಪಡೆದು ಈ ಧನುರ್ಭಂಗವನ್ನು ಮಾಡಿದ ರಾಮನ ಪರಾಕ್ರಮ ದರ್ಶನದಿಂದ ಸಂತೋಷಪಟ್ಟು ಆತನಿಗೆ ಮಗಳನ್ನು ಸಮರ್ಪಿಸಿ ತನ್ನ ಜನ್ಮವನ್ನು ಸಫಲಮಾಡಿಕ್ಕೊಳ್ಳುವುದಕ್ಕಾಗಿ, ಅವಶಿಷ್ಟಸಾಧನಾರ್ಥ ಜನ್ಮಿಸಿದ್ದರೂ ಇರಬಹುದು. ಈ ರೀತಿಯಲ್ಲಿ ಮಹಾಯೋಗಿಗಳಿಗೆ ಕೂಡ ಸಾಧನ ಪರಿಪೂರ್ತಿಗಾಗಿ ಜನ್ಮಾಂತರಗಳು ಲಭಿಸುವುವೆಂದು ಹೇಳಲಿಕ್ಕೂ ಅವಕಾಶವನ್ನು ಕೊಡುವಂತೆ ಈ ಧನುಸ್ಸಿನ ಕಥೆಯು ಹೊರಟಿದೆ ಎಂದು ತೋರುವುದು. ಜನಕ, ದೇವರಾತ, ಎಂಬ ಹೆಸರುಗಳಿಂದ ಕರಿಸಿಕೊಂಡ ಶರೀರಗಳು ಬೇರೆಯಾದರೂ ಆ ಆತ್ಮರುಗಳು ಒಬ್ಬರೇ ಎಂಬ ತಾತ್ಪರ್ಯವನ್ನಿಟ್ಟುಕೊಂಡೇ ಆಚಾರ್ಯರು ಕೂಡ ಪುರಾಣಾಂತರಗಳಲ್ಲಿ ಬೇರೆಬೇರೆ ಹೆಸರಿನಿಂದ ಹೇಳಿದ ಪ್ರಕರಣವನ್ನು ನಿರ್ಣಯಿಸುವ ವೇಳೆ ಧನುಸ್ಸನ್ನು ಆರ್ಜಿಸಿದವನೂ ಜನಕ, ಸೀತಾದೇವಿಯನ್ನು ಪಡೆದವನೂ ಜನಕ, ಅವಳಿಗಾಗಿ ವೀರ್ಯಶುಲ್ಕವಾಗಿ ಅದೇ ಧನುಸ್ಸನ್ನು ಏರ್ಪಡಿಸಿದವನೂ ಜನಕನೆಂದು, "ಆತ್ಮವಿವಕ್ಷೆಯಿಂದ" ಒಬ್ಬನೇ ಈ ಮೂರು ಕಾರ್ಯಗಳಿಗೂ ಕರ್ತನೆಂದು ಸ್ಪಷ್ಟವಾಗಿ ಹೇಳಿರುತ್ತಾರೆಂದು ಭಾವಿಸಬೇಕಾಗಿದೆ. ಇದಕ್ಕಾಧಾರವಾಗಿ ಭಗವದ್ಗೀತೆಯಲ್ಲಿ "ಯಂಯಂವಾಪಿಸ್ಮರನ್ ಭಾವಂ ತ್ಯಜತ್ಯಂತೇಕಳೇಬರಂ। ತಂತಮೇವೇತಿಕೌಂತೇಯ ಸದಾತದ್ಭಾವಭಾವಿತಃ" ಎಂದು ಹೇಳಿರುವುದು. ಜೀವನು ಯಾವುದರಮೇಲೆ ಮನೋಭಿಲಾಷೆಯನ್ನಿಟ್ಟುಕೊಂಡು ಅದರ ವಿಚಾರವನ್ನೇ ಮನಸಾ ಧ್ಯಾನಿಸುತ್ತಾ ಕಡೆಯಲ್ಲಿ ಶರೀರವನ್ನು ಬಿಡುವನೋ

ಆ ಆತ್ಮನು ಸಂಕಲ್ಪಕ್ಕೆ ವಿಷಯವಾದ (ಗುರಿಯಾದ) ವಸ್ತುವನ್ನು ಮತ್ತೊಂದು ಜನ್ಮದಲ್ಲಿ ಹೊಂದುವನೆಂದು ಗೀತಾಶ್ಲೋಕವು ನಿರೂಪಿಸುವುದು. ಭರತ ಚಕ್ರವರ್ತಿಗೆ ಜಿಂಕೆಯಮೇಲೆ ಇದ್ದ ಮನೋಭಾವದಂತೆ ಉತ್ತರಜನ್ಮದಲ್ಲಿ ಜಿಂಕೆಯೇ ಆಗಿ ಜನ್ಮಿಸಿದನಲ್ಲವೆ ? ಈ ಅಂಶವು ಶ್ರೀಮದ್ಭಾಗವತ ಚತುರ್ಥಸ್ಕಂಧದಲ್ಲಿ ಸಂಪೂರ್ಣವಾಗಿ ವಿವರಿಸಲ್ಪಟ್ಟಿದೆ. ಹೀಗೆಯೇ ದೇವರಾತನೆಂಬುವನು ಮಹೇಶ್ವರನಿಂದ ಬಿಲ್ಲು ಪಡೆದು ಇಟ್ಟುಕೊಂಡರೂ ಅದನ್ನು ಭಂಜಿಸಿದ ಶೂರನಿಗೆ ತನ್ನ ಮಗಳನ್ನು ಕೊಡೋಣವೆಂದರೆ ಅವನಿಗೆ ಮಗಳೇ ಹುಟ್ಟಲಿಲ್ಲ. ಮಗಳನ್ನು ಪಡೆಯಬೇಕೆಂಬ ಅಭಿಲಾಷೆಯು ಆತನ ಮನಸ್ಸಿನಲ್ಲಿ ದೃಢತಮವಾಗಿ ಕೂತಿತ್ತು. ಆ ಅಭಿಲಾಷೆಯನ್ನು ನೆರವೇರಿಸಿಕೊಳ್ಳಲು ಉತ್ತರಜನ್ಮದಲ್ಲಿ ಜನಕನಾಗಿ ತಾನೇ ಹುಟ್ಟಿದನು. ಆಗ ಶ್ರೀಹರಿಯ ಕೃಪೆಯು ಪವಗಿದ್ದರಿಂದ ಅವನಿಗೆ ಪ್ರದಾನಮಾಡಲನುಕೂಲಳಾಗಿ ಸಾಕ್ಷಾಲ್ಲಕ್ಷ್ಮಿಯೇ ಮಗಳೆನಿಸಿ ಆತನ ಸತ್ಸಂಕಲ್ಪವನ್ನು ಈಡೇರಿಸಿಕೊಟ್ಟಿರುವಳು ಎಂದು ಸಮಾಧಾನ ಹೇಳಬಹುದಾಗಿದೆ. ಜನ್ಮಾಂತರವನ್ನೂ ಸಾಧನಗಳನ್ನೂ ಒಪ್ಪುವ ಎಲ್ಲಾಮತದವರೂ ಈ ಶೈವಧನುಸ್ಸಿನ ವಿಚಾರದಲ್ಲಿ ಸಾಮಂಜಸ್ಯವನ್ನುಂಟುಮಾಡಿಕೊಳ್ಳಲಿಕ್ಕೆ ಸಂಪೂರ್ಣ ಅವಕಾಶವಿದೆಯೆಂದು ಧಾರಾಳವಾಗಿ ಹೇಳಬಹುದು. ಆತ್ಮನಿತ್ಯತ್ವವನ್ನು ಶ್ರೀಮದಾಚಾರ್ಯರು ಘಂಟಾಘೋಷವಾಗಿ ಹೇಳಿರುತ್ತಾರೆ. ಮತ್ತೆ ಕೆಲವು ಮತದವರು ಜೀವನಿತ್ಯತ್ವವನ್ನು ಒಡಂಬಟ್ಟಿರುತ್ತಾರೆಯಾಗಿ ಹೀಗೆ ಹೇಳುವ ಅಂಶದಲ್ಲಿ ಯಾವ ಆಕ್ಷೇಪಣೆಗಳೂ ಬರಲಾರವೆಂದು ನಂಬಬಹುದಾಗಿದೆ.

**ಶ್ಲೋಕ || ತಥೇತಿಚೋಕ್ತೋಮುನಿನಾಸಕಿಂಕರೈ ರನಂತಭೋಗೋಪಮ ಮಾಶ್ವಥಾನಯತ್ | ಸಮೀಕ್ಷ್ಯತದ್ವಾಮಕರೇಣ ರಾಘವಃಸ ಲೀಲಮುದ್ಧೃತ್ಯಹಸನ್ನಪೂರಯತ್ ||೨೪||**

ಅರ್ಥ.—ತಥೇತಿ=ಹಾಗೆಯೇ ಆಗಲಿ ಎಂದು, ಮುನಿನಾ=ವಿಶ್ವಾಮಿತ್ರರಿಂದ, ಉಕ್ತಶ್ಚ=ಹೇಳಲ್ಪಟ್ಟವನಾದ, ಸಃ=ಆ ಜನಕನು, ಅಥ=ಕೂಡಲೇ, ಕಿಂಕರೈಃ=ಸೇವಕರಿಂದ, ಅನಂತ=ಆದಿಶೇಷನ, ಭೋಗ=ಶರೀರಕ್ಕೆ, ಉಪಮಂ=ಹೋಲುವಂತಿರುವ ಆ ಧನುಸ್ಸನ್ನು, ಆಶು=ಶೀಘ್ರವಾಗಿ, ಆನಯತ್-ತರಿಸಿದನು, ರಾಘವಃ=ಶ್ರೀ ರಘುನಾಥನು, ತತ್=ಆ ಬಿಲ್ಲನ್ನು,

ಸಮೀಕ್ಷ್ಯ=ಚೆನ್ನಾಗಿ ನೋಡಿ, ವಾಮಕರೇಣ=ಎಡಗೈಯಿಂದ, ಉದ್ಧೃತ್ಯ= ಎತ್ತಿ ಹಿಡಿದುಕೊಂಡು, ಹರ್ಸ=ನಗುತ್ತಾ, ಸಲೀಲಂ=ಲೀಲಾಜಾಲವಾಗಿ, ಅಪೂರಯತ್=ಹೆದೆ ಏರಿಸಿದನು.

ತಾತ್ಪರ್ಯ.—ಜನಕನು ಹೇಳಿದ ಈಶ್ವರ ಧನುಸ್ಸಿನ ಮಹಾಮಹಿಮೆಯನ್ನು ಲಾಲಿಸಿ ಕೇಳಿದ ವಿಶ್ವಾಮಿತ್ರಮಹರ್ಷಿಗಳು ನಿನ್ನಭಿಪ್ರಾಯದಂತೆಯೇ ಆಗಬಹುದು. ನಾವೂ ನಿನ್ನ ಸಂಕಲ್ಪವನ್ನು ಅನುಮೋದಿಸುತ್ತೇವೆ, ಅಂಥಾ ಪೂಜ್ಯವಾದ ಚಾಪವನ್ನು ತರಿಸು, ನಮ್ಮ ಶ್ರೀ ರಾಮಚಂದ್ರನು ಅದನ್ನು ಬಗ್ಗಿಸಲಿ, ಎಂದು ಉತ್ತರವನ್ನು ಕೊಟ್ಟರು. ಇದಕ್ಕೆ ಮಿಥಿಲಾಧಿಪತಿಯು ಸಂತೋಷಪಟ್ಟು ತನ್ನ ಸೇವಕರನ್ನು ಕರೆದು ಆಯುಧಶಾಲೆಯಿಂದ ಧನುಸ್ಸನ್ನು ರಾಜಸಭೆಗೆ ಸಾಗಿಸಿಕೊಂಡು ಬರುವಂತೆ ಆಜ್ಞಾಪಿಸಲು ರಾಜಭಟರು ತಡಮಾಡದೇ ಅಗಾಧವಾದ ಆ ಬಿಲ್ಲನ್ನು ಹೇರಿಟ್ಟದ್ದ ದೊಡ್ಡ ಭಂಡಿಯನ್ನೇ ಸಭೆಗೆ ಎಳೆದುತಂದರು (ಸುಮಾರು ಐನೂರುಜನರು) ಆ ಬಿಲ್ಲು ಆದಿಶೇಷನ ಶರೀರದಂತೆ ಬಹು ನೀಳವಾಗಿಯೂ ತೂಕವಾಗಿಯೂ ಇತ್ತೆಂದು "ಅನಂತಭೋಗೋಪಮಂ" ಎಂಬ ಪದದಿಂದ ವರ್ಣಿಸಿದ್ದಾರೆ. ಈ ರೀತಿಯಾಗಿ ಭಂಡಿಯ ಮೂಲಕ ಸಭೆಗೆ ಎಳೆದುತಂದ ಆ ದೊಡ್ಡ ಬಿಲ್ಲನ್ನು ಶ್ರೀ ರಾಮನು ಗುರುಗಳಾದ ವಿಶ್ವಾಮಿತ್ರರ ಆಜ್ಞೆಯಂತೆ ನೋಡಿ ಲೀಲಾಜಾಲವಾಗಿ ತನ್ನ ಎಡಗೈಯಿಂದ ಹಿಡಿದೆತ್ತಿ ನಿಲ್ಲಿಸಿಕೊಂಡು ಅದರ ಒಂದು ತುದಿಯಲ್ಲಿ ಕಟ್ಟಿದ್ದ ಹುರಿ (ಹೆದೆ) ಯನ್ನು ಎಳೆದು ಮತ್ತೊಂದು ತುದಿಗೆ ಆ ಹುರಿಯ ಮತ್ತೊಂದು ತುದಿಯನ್ನು ತಂದು ಕಟ್ಟಿದನು. ಈ ಕೆಲಸವನ್ನೆ ಧನುಷ್ಪೂರಣ [ಹೆದೆ ಏರಿಸೋಣ] ವೆಂದು ರೂಢಿಯಿಂದ ಕರೆಯುವರು. ಶ್ರೀ ರಾಮಚಂದ್ರನು ಈ ಕೆಲಸವನ್ನು ಮಂದಹಾಸದಿಂದ ಕೂಡಿದವನಾಗಿ ಮಾಡುತ್ತಿದ್ದನು.

ವಿಶೇಷಾರ್ಥ.—ಶ್ರೀಮದಾಚಾರ್ಯರು ಈ ಶ್ಲೋಕದಿಂದ ಧನುಸ್ಸು ಆದಿಶೇಷನ ಶರೀರದಂತೆ ಶೋಭಿಸುತ್ತಿತ್ತೆಂದು ವರ್ಣಿಸಲು ಅವರಿಗೆ ಒಂದು ವಿಶೇಷಾಭಿಪ್ರಾಯವಿತ್ತೆಂದು ತೋರುವುದು. ಅದೇನೆಂದರೆ:—ಆದಿಶೇಷನ ಶರೀರವು ಶ್ರೀಹರಿಯ ಸ್ಪರ್ಶಕ್ಕೆ ಮಾತ್ರ ಯೋಗ್ಯವು. ಅನ್ಯರು ಅದನ್ನು

ದರ್ಶನಮಾಡಲಿಕ್ಕೆ ಕೂಡ ಸಾಧ್ಯವಲ್ಲವು. ಶ್ರೀಹರಿಯಾದರೋ ಪೂರ್ಣ ಬಲಿಷ್ಟನು. "ಬಲಮಿಂದ್ರಸ್ಯಗಿರಿಶೋ ಗಿರೀಶಸ್ಯಬಲಂಮರುತ್ | ಬಲಂ ತಸ್ಯಹರಿಃಸಾಕ್ಷಾ ನ್ನಹರೇರ್ಬಲಮನ್ಯತಃ" ಎಂಬ ಪ್ರಮಾಣದಿಂದ ಸ್ವಾಮಿಯ ಬಲವು ಸ್ವರೂಪಸಿದ್ಧವೆಂದೂ ಅನನ್ಯಾಶ್ರಯವಾದುದೆಂದೂ ಸ್ಪಷ್ಟವಾಗಿದೆ. ಇಂಥವನಾದ್ದರಿಂದಲೆ ಆದಿಶೇಷನನ್ನು ಒಂದುರೂಪದಿಂದ ತನಗೆ ಹಾಸಿಗೆಯಾಗುವಂತೆ ಮಾಡಿಕೊಂಡಿರುವನು, ಮತ್ತೊಂದುರೂಪಿನಿಂದ ಆದೇಶೇಷನು ಈ ಭೂಮಂಡಲವನ್ನು ತನ್ನ ಹೆಡೆಯಮೇಲೆ ಹೊತ್ತುಕೊಂಡಿರುವಂತೆ ಕಟ್ಟಳೆ ಮಾಡಿರುವನು. ಭಗವದಾಜ್ಞೆಯಂತೆ ಆದಿಶೇಷನ ತಲೆಯಮೇಲೆ ಕುಳಿತಿರುವ ಈ ಭೂಮಂಡಲವು ಅವನ ಒಟ್ಟು ಶರೀರದ ಮೇಲೆ ಒಂದು ಸಾಸಿವೇಕಾಳಿನ ತೂಕವಾಗಿ ಕುಳಿತಿದೆ ಎಂದು ಶ್ರೀಮದ್ಭಾಗವತದಲ್ಲಿ ಹೇಳಿದೆ. ಇಂಥ ಬಲವಾದ ಶೇಷದೇವರ ಶರೀರವನ್ನು ಈ ಬಿಲ್ಲು ಹೋಲುತ್ತಿತ್ತೆಂದಮೇಲೆ ಇದನ್ನು ನೋಡಲಿಕ್ಕಾಗಲೀ ಕೈಗಳಿಂದ ಮುಟ್ಟಲಿಕ್ಕಾಗಲೀ ಮನುಷ್ಯಮಾತ್ರರಿಗೆ ಹೇಗೆ ಸಾಧ್ಯ ? ದೇವಾದಿಗಳಾಗಲೀ ದೈತ್ಯದಾನವರಾಗಲೀ ಗಂಧರ್ವಾದಿಗಳಾಗಲೀ ಆದಿಶೇಷನ ಶರೀರವನ್ನು ಮುಟ್ಟಲಾಪರೆ? ಆದ್ದರಿಂದಲೆ ಇಂಥಾ ಉಪಮೆಯುಳ್ಳ ಆ ಹರಧನುಸ್ಸನ್ನು ಯಾರೂ ಬಗ್ಗಿಸಲವಕಾಶವಾಗಲಿಲ್ಲಾ ಮತ್ತು ಸ್ಪರ್ಶಮಾತ್ರದಿಂದಲೇ ಭೀತರಾಗಿ ಅನೇಕರು ಮೂರ್ಛಿತರಾದರು. ಶ್ರೀ ರಾಮಮೂರ್ತಿಯಾದರೋ ಶ್ರೀಮನ್ನಾರಾಯಣಾವತಾರನು, ಮೇಲಿನ ಪ್ರಮಾಣದಂತೆ ಪೂರ್ಣ ಬಲಿಷ್ಠನು ಆದಿಶೇಷನು, ಅವನ ಸೇವಾವೃತ್ತಿಯಿಂದ ಸರ್ವದಾ ಅಂತರಂಗಕ್ಕೆ ಶೇರಿದವನು. ಅನುಗ್ರಹಪೂರ್ವಕ ನಿತ್ಯವೂ ಆತನ ದಿವ್ಯಶರೀರವನ್ನು ಸ್ವಾಮಿಯು ಸ್ಪರ್ಶಿಸುವುದು ಅದರಮೇಲೆ ಮಲಗುವುದು ತುಳಿಯುವುದು ಮುಂತಾದ ಕ್ರಮಗಳಿಂದ ತನ್ನ ವಶವರ್ತಿಯಾಗಿ ಮಾಡಿಕೊಂಡಿರುವನು. ಆದ್ದರಿಂದಲೇ ಈ ಅವತಾರದಲ್ಲಿ ಅವನ ಶರೀರವನ್ನು ಹೋಲುತ್ತಿದ್ದ ಹರಧನುಸ್ಸನ್ನು ಲೀಲಾಜಾಲವಾಗಿ ಎತ್ತುವ ತನ್ನ ಅನನ್ಯ ಸಾಧಾರಣವಾದ ಸಾಮರ್ಥ್ಯವನ್ನು ಈ ಪಾಮರಲೋಕಕ್ಕೆ ಅನುಭವಕ್ಕೆ ತರಬೇಕೆಂತಲೂ ಶ್ರೀರಾಮನು ತನ್ನಕುಲದ ಘನತೆಗಾಗಿಯೂ ತನ್ನ ಎಡಗೈಯಿಂದ ಹಿಡಿದೆತ್ತಿ ಹೆದೆ ಏರಿಸಿದನೆಂದು ಹೇಳಿರುವರು. ಧನುಸ್ಸು ಹೇಗೆ ಲೋಕಾದ್ಭುತವೋ

ಅದನ್ನು ಎತ್ತಿ ಬಗ್ಗಿಸುವ ಈ ಸ್ವಾಮಿಯೂ ಲೋಕಾದ್ಭುತನೆಂದು ಭಕ್ತರು ಭಾವಿಸಬೇಕೆಂದು ಮುಖ್ಯ ತಾತ್ಪರ್ಯವು,

ಅವತಾರಿಕೆ.—ಶ್ರೀ ರಘುನಂದನನು ಶೈವಧನುಸ್ಸನ್ನು ಹೆದೆ ಏರಿಸಿದ ಕ್ರಮವನ್ನು ಹಿಂದಿನ ಶ್ಲೋಕದಿಂದ ವರ್ಣಿಸಲಾಯಿತಷ್ಟೆ? ಅದರ ಫಲಿತಾಂಶವೇನಾಯಿತು? ಹಿಂದಿನ ಮಹಾವೀರರ ಪಾಡನ್ನೇ ಈತನೂ ಪಡೆವನೋ ಏನೋ ಎಂಬ ಸಂಶಯವು ಪಾಮರ ಮಂಡಲಿಗೆ ಅವರ ಅಲ್ಪಯೋಗ್ಯತೆಗೆ ತಕ್ಕಂತೆ ಉಂಟಾದೀತೆಂದು ತಿಳಿದು ಶ್ರೀಮದಾಚಾರ್ಯರು ಶ್ರೀ ರಘುನಂದನನ ಪರಶಕ್ತಿಯ ಮಹಿಮಾವರ್ಣನೆಯೊಡನೆ ಫಲಿತಾಂಶವನ್ನು ಸ್ಪಷ್ಟಪಡಿಸಲು ಈ ಶ್ಲೋಕವನ್ನಾರಂಭಿಸಿರುವರು.

**ಶ್ಲೋಕ ॥ ವಿಕೃಷ್ಯಮಾಣಂತದನಂತರಾಧಸಾ ಪರೇಣನಿಃಶೀಮಬಲೇನಲೀಲಯಾ । ಅಭಜ್ಯತಾಸಹ್ಯಮಮುಷ್ಯತದ್ಬಲಂ ಪ್ರಸೋಢುಮಾಶಂಕುತಏವತದ್ಭವೇತ್ ॥೨೫॥**

ಅರ್ಥ.—ಅನಂತರಾಧಸಾ=ಅನಂತಾಭೀಷ್ಟಸಿದ್ಧಿಯುಳ್ಳಂಥ, ನಿಸ್ಸೀಮ=ಮೇರೆಯಿಲ್ಲದ, ಬಲೇನ=ಬಲವುಳ್ಳ, ಪರೇಣ=ಸರ್ವೋತ್ತಮನಾದ ಆ ರಾಮನಿಂದ, ಲೀಲಯಾ=ವಿನೋದದಿಂದ, (ಅನಾಯಾಸವಾಗಿ) ವಿಕೃಷ್ಯಮಾಣಂ=ಎಳೆಯಲ್ಪಟ್ಟಂಥ, ತತ್=ಆ ಹರಧನುಸ್ಸು, ಅಭಜ್ಯತ=ಮುರಿದುಹೋಯಿತು, ತತ್=ಆ ಬಿಲ್ಲು, ಅಸಹ್ಯಂ=ಸಹಿಸಲಸಾಧ್ಯವಾದ, ಅಮುಷ್ಯ=ಈ ಶ್ರೀರಾಮನ, ತದ್ಬಲಂ=ಆಗ ಪ್ರಕಟಿಸಿದ ಬಲವನ್ನು, ಸೋಢುಂ=ಸಹಿಸಲು, (ತಡೆದುಕೊಳ್ಳಲು) ಕುತಏವ=ಹೇಗೆತಾನೆ, ಈಶಂಭವೇತ್=ಸಮರ್ಥವಾದೀತು ?

ತಾತ್ಪರ್ಯ.—ಈತನು ಭಾಗ್ಯಾಧಿದೇವತೆಗೆ ಪತಿಯು. ಅನಂತವಾದ ಮನೋಭೀಷ್ಟಸಿದ್ಧಿಯನ್ನು ಭಕ್ತರಿಗೆ ಕೊಡಲು ಸಮರ್ಥನು ಎಂದಮೇಲೆ ತನ್ನ ಮನೋಭೀಷ್ಟಸಿದ್ಧಿಗೆ ಕೊರತೆಯುಂಟೆ? ಸ್ವತಃ ಫಲಕಾರಿಯಾಗಿ ಅಖಿಲಾಭೀಷ್ಟಗಳುಳ್ಳವನಾಗಿಯೂ, ಸಕಲ ಜಗದಪೇಕ್ಷಯಾ ಉತ್ತಮರೆನಿಸಿದ ಈಶ್ವರಕೋಟಿ ಪ್ರವಿಷ್ಟರಾದ ರಮಾ ಬ್ರಹ್ಮಾದಿ ಸಮಸ್ತ ದೇವತಾಪೇಕ್ಷಯಾ ಉತ್ತಮನೆನಿಸಿದ ಪ್ರಯುಕ್ತ ಶ್ರುತಿಪ್ರಮಾಣದಿಂದ ಪರನೆಂದು

ಪ್ರಸಿದ್ಧ ಪಡೆದಿರುವನು, ಮೇರೆಯಿಲ್ಲದ ಬಲದಿಂದ ಪೂರ್ಣ ಸಮರ್ಥನೆನ್ನಿಸಿರುವ ಶ್ರೀರಾಮಚಂದ್ರನು ಹಿಡಿದು ಎಳೆದಕೂಡಲೇ ಆ ಬಿಲ್ಲು ಬಗ್ಗಿ ಎರಡು ತುದಿಗಳಲ್ಲಿಯೂ ಹುರಿಯು ಜೋಡಿಸಿ ಕಟ್ಟಲ್ಪಟ್ಟಿತು. ಅಪಾರ ಬಲವುಳ್ಳ ಶ್ರೀರಾಮನ ಹಸ್ತಸ್ಪರ್ಶ ಗೌರವವನ್ನು ಆ ಬಿಲ್ಲು ಸಹಿಸಲು ಸಾಧ್ಯವಿಲ್ಲದೇ ಮಧ್ಯದಲ್ಲಿ ಎರಡು ಭಾಗವಾಯಿತು.

ವಿಶೇಷಾರ್ಥ.—"ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯಕಾ ಸ್ಪೃಹಾ" ಎಂದು ವೇದದಲ್ಲಿ ಹೇಳಿದೆ. ಎಂದರೆ ಭಗವಂತನು ಯಾವಾಗಲೂ ಪೂರ್ಣಕಾಮನು, ಈಡೇರಿದ ಮನೋರಥವುಳ್ಳವನೇ ವಿನಃ, ಈಡೇರಬೇಕಾಗಿರುವ ಮನೋರಥವುಳ್ಳವನಲ್ಲವು. ಈ ಪ್ರಪಂಚದಲ್ಲಿ ಆ ಪ್ರಭುವು ನಡಿಸುವ ಸೃಷ್ಟ್ಯಾದಿ ವ್ಯಾಪಾರಗಳೆಲ್ಲವೂ ಲೀಲಾನಿಮಿತ್ತವಾಗಿಯೇ ಹೊರತು, ಪ್ರಯೋಜನಾಕಾಂಕ್ಷೆಯಿಂದಾಗಲೀ ಶ್ರಮದಿಂದಾಗಲೀ ನಡಿಸಲ್ಪಡತಕ್ಕವುಗಳಲ್ಲ. ಆತನ ಶಕ್ತಿ ಸಾಮರ್ಥ್ಯ ವಿಚಾರದಲ್ಲಿ ಅದೇ ವೇದವೇ "ಸ್ವಾಭಾವಿಕೀಜ್ಞಾನಬಲಕ್ರಿಯಾಚ" ಎಂದು "ಇಚ್ಛಾಶಕ್ತಿರ್ಜ್ಞಾನಶಕ್ತಿಃ ಕ್ರಿಯಾಶಕ್ತಿಸ್ತಥೈವಚ | ಶಕ್ತಿಶಕ್ತಿಮತೋಶ್ಚೈವ ನಭೇದಃಕಶ್ಚನೇಷ್ಯತೆ" ಎಂಬ ಸ್ಮೃತಿಯಲ್ಲಿ ಆ ಸ್ವಾಮಿಯ ಸಾಮರ್ಥ್ಯವು ಅಪಾರವಾದುದೆಂದೂ ಅವನಿಂದ ಅಭಿನ್ನವಾದುದೆಂದೂ, ಈ ಮೂರು ತೆರನಾದ ಶಕ್ತಿಗಳೂ ಭಗವಂತನಿಗೆ ಸ್ವರೂಪಭೂತವಾದುವೆಂದೂ ಸಾರಿ ಹೇಳುತ್ತಿವೆ. ಮತ್ತೂ "ಪರ" ಸರ್ವೋತ್ತಮನೆಂದೂ ಅದೇ ವೇದವು ಹೊಗಳುತ್ತಿದೆ. ಇಂಥಾ ಸ್ವಾಮಿಯ ಮಹಿಮೆಯನ್ನು ಆಚಾರ್ಯರೂ ಸಹ "ನಿಜಪೂರ್ಣಸುಖಾಮಿತಬೋಧತನುಃ ಪರಶಕ್ತಿರನಂತ ಗುಣಃ ಪರಮಃ" ಎಂದು ಸ್ತುತಿಸಿರುವರು. ಆದ್ದರಿಂದ ಮೂಲರೂಪದಂತೆಯೇ ಅವತಾರರೂಪಗಳಲ್ಲಿಯೂ ಈ ಮಹಿಮೆಗಳು ಆ ಸ್ವಾಮಿಗೆ ಸ್ವತಃ ಸಿದ್ಧವು. ಅಂಥಾ ಪೂರ್ಣಸಮರ್ಥನಾದ ಶ್ರೀರಾಮಮೂರ್ತಿಯು ಹಿಡಿದು ಬಗ್ಗಿಸದೊಡನೆಯೇ ಆ ಪ್ರಸಿದ್ಧವಾದ ಹರಧನುಸ್ಸು ಮುರಿದುಹೋಯಿತು. ಈ ಕೃತ್ಯವನ್ನು ನೋಡಿದ ಜನರು ಆ ಭಗವಂತನ ಅಪಾರ ಬಾಹುಬಲವನ್ನು ಸ್ವ ಸ್ವಯೋಗ್ಯತಾನುಸಾರ ಸಾಕ್ಷಾತ್ಕಾರ ಪಡೆಯುತ್ತಾ ಈ ಮಹಾಪ್ರಭುವಿನ ರೋಷಪೂರ್ವಕವಾದ ಬಾಹುಪ್ರತಾಪಕ್ಕೆ ಗುರಿಯಾದವರ ಪಾಡು ( ಮುಂದೆ ಲೋಕಕಂಟಕರಾದ ರಾಕ್ಷಸರ ಪಾಡು )

ಈ ಬಿಲ್ಲಿನಂತೆ ಆಗುವುದೆಂದು ಲೋಕಕ್ಕೆ ಪ್ರದರ್ಶನ ಕೊಡುವತೆರನಾಗಿ, ಸ್ವಾಮಿಯ ಬಲವು ಮಹಾಪ್ರಖ್ಯಾತ, ಬಲಿಷ್ಠರ ಬಲವನ್ನು ಕೂಡಾ ಕುಗ್ಗಿಸುವುದರಲ್ಲಿ ಸಂಶಯವಿಲ್ಲವೆಂದು ಹೇಳುವಂತೆ ತತ್ಕ್ಷಣವೇ ಶೀಳಿ ಶಬ್ಧ ಮಾಡುತ್ತಾ ನೆಲಕ್ಕೆ ಬಿದ್ದಿತು. ಇಲ್ಲಿ ಹೀಗೆ ಶ್ರೀರಾಮನ ಕೈಚಳಕವನ್ನು ವರ್ಣಿಸುವ ನೆಪದಿಂದ ಪರಮ ಶಕ್ತಿಪೂರ್ಣನಾದ ಭಗವಂತನ ಮೂಲರೂಪ ಅವತಾರ ರೂಪಗಳಲ್ಲಿ ಗುಣಕ್ರಿಯಾದಿಗಳಿಂದ ಪರಸ್ಪರ ಅಭೇದವನ್ನು ತಿಳಿಯಬೇಕೆಂದೂ, ಯಾವ ಚೇತನವರ್ಗವಾಗಲೀ ಯಾವ ಪ್ರದೇಶದಲ್ಲಿಯಾಗಲೀ ಯಾವ ಕಾಲದಲ್ಲಿಯಾಗಲೀ ಅವನನ್ನು ಮೀರಲಾರರೆಂದೂ, ಸರ್ವರನ್ನೂ ಮೀರಿ ನಡೆಯುವ ಶಕ್ತಿಯೂ, ಅಧಿಕಾರವೂ, ಶ್ರೀಹರಿಗೆ ಸ್ವತಃ ಸಿದ್ಧವೆಂದೂ " ಕರ್ತುಮಕರ್ತುಮನ್ಯಥಾ ಕರ್ತುಂ " ಶಕ್ತಿಯು ಅವನೊಬ್ಬನಿಗೇ ಇರತಕ್ಕುದೆಂದೂ, ಆದ್ದರಿಂದಲೇ ಅಶೇಷಜಗನ್ನಿಯಾಮಕನಾಗಿ ಆ ಪ್ರಭುವು ಏರ್ಪಟ್ಟಿರುವನೆಂದೂ ಮುಕ್ತಿಯೋಗ್ಯರಾದ ಜೀವವರ್ಗವು ಗ್ರಹಿಸಬೇಕೆಂದೂ ಈ ಶ್ಲೋಕವು ಈ ಜಗತ್ತಿಗೆ ಸಾರಿ ಹೇಳುವಂತಿದೆ. ಅಲ್ಲದೇ ಶ್ರೀಹರಿಯ ಶ್ರೀರಾಮಾವತಾರ ಕಾರ್ಯಗಳಲ್ಲಿ ಈ ಧನುರ್ಭಂಗ ಕಾರ್ಯವು ಒಂದು ಮುಖ್ಯ ಕಾರ್ಯವೆಂಬುದನ್ನೂ, ವಿಶ್ವಾಮಿತ್ರಜನಕ ಪ್ರಭೃತಿಗಳು ಈ ಭಗವತ್ಕಾರ್ಯದಲ್ಲಿ ಸಾಧಕರೆಂದೂ ಈ ತೆರನಾದ ಸಾಧನಾರ್ಥವೇ ಅವರುಗಳಿಗೆ ಜನ್ಮವೆಂದೂ ಹರಿಭಕ್ತಿಯುಳ್ಳ ಪ್ರತಿಯೊಬ್ಬ ಮನುಜನೂ ನೆನಪಿನಲ್ಲಿಡಬೇಕು. ಅಲ್ಲದೆ ಪರರ (ಸಾಮಾನ್ಯ ಜನರು) ಯಾವುದಾದರೊಂದು ಮನೋರಥವನ್ನು ಮಾಡಿದಲ್ಲಿ, ಅದನ್ನು ಸಾಧಿಸಿಕೊಳ್ಳುವ ಚೈತನ್ಯವು ಅವರಿಗೆ ಸ್ವತಃ ಉಂಟೋ ? ಇಲ್ಲಾ. ಅಂಥವರು ಆ ಮನೋರಥವನ್ನು ಪಡೆಯುವ ಯೋಗ್ಯತೆಯುಳ್ಳವರಾಗಿದ್ದಲ್ಲಿ ಅದನ್ನು ನಡಿಸಿಕೊಡೆಂದು ಸ್ವಾಮಿಯನ್ನು ಬೇಡಿಕೊಂಡಮೇಲೆ ಆ ಸ್ವಾಮಿಯು ಒಂದುವೇಳೆ ಪ್ರಸನ್ನನಾಗಿ ಆ ಮನೋರಥವನ್ನು ನಡಿಸಿಕೊಟ್ಟರೆ ಆಗ ಅದು ಸಿದ್ಧಿಸಿತೆಂದು ಹೇಳಬಹುದು. ಆದ್ದರಿಂದಲೇ " ಉತ್ಪದ್ಯಂತೆ ವಿಲೀಯಂತೆ ದರಿದ್ರಾಣಾಂ ಮನೋರಥಾಃ " ಎಂದು ನೀತಿಯುಂಟು. ಈ ಜಗತ್ಪ್ರಭುವಿಗಾದರೋ ಯಾವ ಮನೋರಥವಾಗಲೀ ಯಾವಾಗಲಾಗಲೀ ಸ್ವೇಚ್ಛೆಯಿಂದಲೇ ಪರಿಪೂರ್ಣವಾಗಿ ವದಗಿರು

ವದಲ್ಲದೇ ಪರಾಪೇಕ್ಷೆಯು ಸ್ವಾಮಿಗೆ ಉಂಟೆ? ಅವನು ತನ್ನ ಮನೋರಥ ವನ್ನು ನಡಿಸಿಕೊಡೆಂದು ಯಾರನ್ನಾದರೂ ಬೇಡುವುದುಂಟೆ? ಇಲ್ಲವು. ಪೂರ್ಣಮಿದಃ ಪೂರ್ಣಮಿದಂ" ಎಂಬ ಶ್ರುತ್ಯುಕ್ತಮಹಿಮಾಶರನು ಈ ತನೇ ಎಂಬುದನ್ನು ಈ ಶ್ಲೋಕದ "ಅನಂತರಾಧಸಾ" ಎಂಬ ಪದವು ವ್ಯಕ್ತಪಡಿಸುತ್ತಿದೆ.

ಅವತಾರಿಕೆ.—ಮೇಲಿನ ಎರಡು ಶ್ಲೋಕಗಳಿಂದ ಶ್ರೀರಾಮನು ಹರ ಧನುಸ್ಸನ್ನು ಭಂಜಿಸಿದ ಕ್ರಮವನ್ನು ವರ್ಣಿಸುವುದರ ಮೂಲಕ ಧನುಸ್ಸಿನ ಮತ್ತೂ ಶ್ರೀರಾಮನ ಘನತೆಗಳನ್ನು ಸ್ಪಷ್ಟಪಡಿಸಿದ್ದಾಯಿತು. ಆದರೆ ಮೂರ್ತಿಭವಿಸಿದ ಕ್ಷಾತ್ರತೇಜಸ್ಸು ಆ ಸಮಯದಲ್ಲಿ ಸ್ವಾಮಿಯಲ್ಲಿ ಉಕ್ಕುತ್ತಿದ್ದುದರಿಂದ ಧನುರ್ಭಂಜನದ ವ್ಯಾಪಾರದಲ್ಲಿ ಲೋಕಾದ್ಭುತ ಮಹಿಮೆಯುಂಟೆಂಬುದನ್ನು ಭಕ್ತರಿಗೆ ತಿಳಿಯಪಡಿಸಲು ಶ್ರೀಮದಾಚಾರ್ಯರು ಈ ಶ್ಲೋಕದಲ್ಲಿ ಅದ್ಭುತೋಪಮಾನಗಳನ್ನು ಉದಹರಿಸಿ ತಮ್ಮ ಭಕ್ತಿಪಾರವಶ್ಯವನ್ನು ತೋರ್ಪಡಿಸುವರು.

**ಶ್ಲೋಕ || ಸಮಧ್ಯತಃ ತತ್ಪ್ರವಿಭಜ್ಯ ಲೀಲಯಾ ಯಥೇಕ್ಷುದಂಡಂ ಶತಮನ್ಯು ಕುಂಜರಃ । ವಿಲೋಕಯನ್ ವಕ್ತ್ರಮೃಷೇರವಸ್ಥಿತಃ ಸಲಕ್ಷ್ಮಣಃ ಪೂರ್ಣತನುರ್ಯಥಾಶಶೀ ||೨೬||**

ಅರ್ಥ.—ಸಃ-ಆ ಶ್ರೀರಾಮನು ಶತಮನ್ಯು=ದೇವೇಂದ್ರನ ಕುಂಜರಃ=ಐರಾವತವೆಂಬ ಆನೆಯು ಇಕ್ಷುದಂಡಂಯಥಾ=ಕಬ್ಬಿನ ಜಲ್ಲೆಯನ್ನು ಹೇಗೋ ಹಾಗೆ ಲೀಲಯಾ-ಅನಾಯಾಸವಾಗಿ ಮಧ್ಯತಃ - ಮಧ್ಯಭಾಗದಲ್ಲಿ ತತ್=ಆ ಬಿಲ್ಲನ್ನು ಪ್ರವಿಭಜ್ಯ=ಚನ್ನಾಗಿ ಮುರಿದು ಋಷೇಃ=ವಿಶ್ವಾಮಿತ್ರರ ವಕ್ತ್ರಂ-ಮುಖವನ್ನು ವಿಲೋಕಯನ್=ನೋಡುತ್ತಾ ಸಲಕ್ಷ್ಮಣಃ=ಲಕ್ಷ್ಮಣನಿಂದೊಡಗೂಡಿ ಪೂರ್ಣತನುಃ=ಷೋಡಶಕಲಾಪರಿಪೂರ್ಣನಾದ (ಮೂರ್ತಿಮಂತನಾದ) ಶಶೀಯಥಾ=ಚಂದ್ರನೋಪಾದಿಯಲ್ಲಿ ಬೆಳಗುತ್ತಾ ಅವಸ್ಥಿತಃ=ನಿಂತುಕೊಂಡನು.

ತಾತ್ಪರ್ಯ.—ಆ ಶೈವಧನುಸ್ಸನ್ನು ಹೆದೆ ಏರಿದೊಡನೆಯೇ ಅದು ಅತರ್ಕಿತವಾಗಿ ಎರಡಾಗಿ ಶೀಳಿತಲ್ಲವೆ? ಆದು ಹೇಗಿದ್ದಿತೆಂದರೆ ಸ್ವರ್ಗ

ಲೋಕಕ್ಕೆ ಒಡೆಯನಾದ ನೂರು ಅಶ್ವಮೇಧಕ್ರತುಗಳನ್ನು ಮಾಡಿದ ಪ್ರಯುಕ್ತ ಶತಮನ್ಯುವೆಂದು ಹೊಗಳಲ್ಪಡುವ ಸಾಕ್ಷಾದ್ದೇವೇಂದ್ರನ ಐಶ್ವರ್ಯಕ್ಕೆ ತಕ್ಕಂತೆ ಅವನ ಆಸ್ಥಾನದಲ್ಲಿ ಬೆಳಗುವ ಐರಾವತವೆಂಬ ಗಜರಾಜನು ಅಕಸ್ಮಾತ್ ಸಿಕ್ಕಿದ ಒಂದು ಕಬ್ಬಿನಜಲ್ಲೆಯನ್ನು ಮುರಿದುಹಾಕುವುದು ಎಷ್ಟು ಲೀಲಾಜಾಲವೋ ಅಷ್ಟು ಲೀಲಾಜಾಲವಾಗಿ ಶ್ರೀರಾಮನು ಆ ಧನುಸ್ಸನ್ನು ಮುರಿದುಬಿಟ್ಟನೆಂದು ತಾತ್ಪರ್ಯ. ಇಷ್ಟಾದಬಳಿಕ ಶ್ರೀರಾಮನು ತನ್ನ ತಮ್ಮನಾದ ಲಕ್ಷ್ಮಣನೊಡನೆ ಸಭೆಯಲ್ಲಿ ಗುರುಗಳಾದ ವಿಶ್ವಾಮಿತ್ರರ ಮುಖವನ್ನು ನೋಡುತ್ತಾ ಪೂರ್ಣಚಂದ್ರನಂತೆ ಶೋಭಿಸುತ್ತಾ ನಿಂತನೆಂದು ತಾತ್ಪರ್ಯ.

**ಅವತಾರಿಕೆ.**—ರಾಜಪುತ್ರಿಯಾದ ಶ್ರೀಸೀತಾದೇವಿಯು ತನಗೆ ಈ ರಾಘವನು ಅನುರೂಪನಾದವನೇ ? ಅಲ್ಲವೆ ? ಎಂಬುವನ್ನು ನೋಡಿ ಒಪ್ಪಿಗೆಯನ್ನು ಕೊಡಬೇಕಾಗಿರುವುದರಿಂದ ಜನಕನ ಅನುಮತಿಯಂತೆ ವರಾವಲೋಕನಕ್ಕಾಗಿ ಸಭೆಗೆ ಬೆಡಗಿನಿಂದ ಸೀತಾದೇವಿಯು ಬಂದಳೆಂಬುದನ್ನು ಈ ಮುಂದಿನ ಶ್ಲೋಕವು ವಿವರಿಸುವುದು.

**ಶ್ಲೋಕ ||** ತಮಬ್ಜನೇತ್ರಂ ಪೃಥು ತುಂಗವಕ್ಷಸಂ ಶ್ಯಾಮಾವದಾತಂಚಲ
ಕುಂಡಲೋಜ್ವಲಂ । ಶಶಕ್ಷತೋದ್ಧೋಪಮ ಚಂದನೋಕ್ಷಿತಂದ
ದರ್ಶ ವಿದ್ಯುದ್ವಸನಂ ನೃಪಾತ್ಮಜಾ ||೦೭||

**ಅರ್ಥ.**—ನೃಪಾತ್ಮಜಾ=ಜನಕನ ಪುತ್ರಿಯು, ಅಬ್ಜನೇತ್ರಂ=ತಾವರೆಯ ಎಸಳಿನಂತೆ ಕಣ್ಣುಗಳುಳ್ಳ, ಪೃತು=ವಿಶಾಲವಾದ, ತುಂಗ=ಉಬ್ಬಿದ, ವಕ್ಷಸಂ=ಎದೆಯುಳ್ಳ, ಶ್ಯಾಮಾವದಾತಂ=ಬಿಳುಪು ಮಿಶ್ರವಾದ ನೀಲಿಯ ಬಣ್ಣವುಳ್ಳ, ಚಲ=ಅಲಗುತ್ತಿರುವ, ಕುಂಡಲ=ಕರ್ಣಕುಂಡಲಗಳಿಂದ, ಉಜ್ವಲಂ=ವಿರಾಜಿಸುತ್ತಿರುವ, ಶಶ=ಮೊಲದ, ಕ್ಷತ-ಘಾಯದಿಂದ, ಉತ್ಥ=ಜಿನುಗುತ್ತಿರುವ ರಕ್ತಕ್ಕೆ, ಉಪಮ=ಸದೃಶವಾದ ಕೆಂಪುಳ್ಳ, ಚಂದನ-ಶ್ರೀಗಂಧದಿಂದ, ಉಕ್ಷಿತಂ=ಬಳಿಯಲ್ಪಟ್ಟಿರುವ, ವಿದ್ಯುತ್ = ಮಿಂಚಿನಂತೆ ಹೊಳೆಯುತ್ತಿರುವ, ವಸನಂ=ವಸ್ತ್ರವುಳ್ಳವನಾದ, ತಂ=ಆ ಶ್ರೀರಾಮಚಂದ್ರನನ್ನು, ದದರ್ಶ=ನೋಡಿದಳು.

ತಾತ್ಪರ್ಯ.—ತಾವರೆಯ ಎಸಳಿನಂತೆ ವಿಶಾಲವಾದ ನೇತ್ರಗಳುಳ್ಳವನಾಗಿಯೂ, ವಿಶಾಲವಾಗಿಯೂ ಉನ್ನತವಾಗಿಯೂ ಇರುವ ವಕ್ಷಸ್ಸು (ಎದೆ) ಯುಳ್ಳವನಾಗಿಯೂ, ನೀಲಿ ಮತ್ತೂ ಬಿಳುಪು ಮಿಶ್ರವಾದ ಮೈಬಣ್ಣವುಳ್ಳವನಾಗಿಯೂ, ಆಗಾಗ ಅಲುಗುತ್ತಿರುವ ರತ್ನಕುಂಡಲಗಳಿಂದ ಶೋಭಿಸುತ್ತಿರುವ (ಕಿವಿಯಲ್ಲಿ ಧರಿಸಿರುವ ರತ್ನಕುಂಡಲಗಳಿಂದ ಸ್ವಾಮಿಯು ಅಲುಗಿದಾಗೆಲ್ಲಾ ರತ್ನಕಾಂತಿಯು ಪಳಚ್ಚೆಂದು ಹೊರಸೂಸುತ್ತಿರುವುದರಿಂದ ವಿಶೇಷ ಕಾಂತಿಯುಳ್ಳುದಾಗಿ ತೋರುವ ಮುಖವುಳ್ಳ) ಎಂದರ್ಥ, ಮೊಲವೆಂಬ ಪ್ರಾಣಿಯ ದೇಹದಲ್ಲಿರುವ ರಕ್ತದಂತೆ ಅತಿ ಕೆಂಪಾದ ಶ್ರೀಗಂಧವನ್ನು ಮೈಗೆ ಬಳಿದುಕೊಂಡಿರುವ ಪ್ರಯುಕ್ತ, ಸುಗಂಧವು ಸೂಸುತ್ತಿರುವ, ಮಿಂಚಿನಂತೆ ಪ್ರಕಾಶವುಳ್ಳ ಬೆಳ್ಳಿ ಮತ್ತೂ ಚಿನ್ನದ ಎಳೆಗಳಿಂದ ರಚಿಸಿದ ಅಂಚುಗಳು ಮತ್ತೂ ಸೆರಗುಗಳಿಂದ ರಂಜಿಸುತ್ತಿರುವ ಪೀತಾಂಬರವನ್ನುಟ್ಟಿರುವ ಶ್ರೀ ರಘುವೀರನನ್ನು, ಜನಕರಾಜನ ಪುತ್ರಿಯಾದ ಜಾನಕಿಯು ಅನುರಾಗಪೂರ್ವಕವಾಗಿ ತನ್ನ ಸುಂದರನೇತ್ರಗಳಿಂದ ನೋಡಿದಳೆಂದು ತಾತ್ಪರ್ಯ.

ವಿಶೇಷಾರ್ಥ.—ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರು ಶ್ರೀ ರಾಮನ ದೇಹವು ದಿವ್ಯಚಂದನದಿಂದ ಬಳಿಯಲ್ಪಟ್ಟು ಸುಗಂಧವನ್ನು ಬೀರುತ್ತಿದ್ದಿತೆಂದು ಹೇಳಿರುವರು, ಮತ್ತು ಆ ಶ್ರೀಗಂಧದ ಬಣ್ಣವನ್ನು ಮೊಲದ ಶರೀರದ ರಕ್ತಕ್ಕೆ ಹೋಲಿಸಿರುವರು. ಇದಕ್ಕೆ ಕಾರಣವುಂಟು, ಶ್ರೀಗಂಧದಲ್ಲಿ ನಾಗ, ನವಿಲು, ಬಿಳಿದು ಮುಂತಾದ ಅನೇಕ ಜಾತಿಗಳಿವೆ, ಅವುಗಳಲ್ಲಿ ನಾಗವೂ ನವಿಲೂ ತುಂಬಾ ಶ್ರೇಷ್ಠವು. ಅದರ ಸೇಗು ಅತಿ ಕೆಂಪು ಮತ್ತು ಬಹಳ ಸುವಾಸನೆಯುಳ್ಳದ್ದು, ಆದ್ದರಿಂದ ಶ್ರೀಮಂತರು ಅಂಥಾ ಬೆಲೆ ಬಾಳುವ ಸುಗಂಧ ದ್ರವ್ಯವನ್ನುಪಯೋಗಿಸುವರು. ಅಲ್ಲದೆ ಕೆಲವು ಪ್ರಾಣಿಗಳ ಶರೀರದ ರಕ್ತವನ್ನೂ ಮಾನವರು ಕೆಲವು ಸಂದರ್ಭಗಳಲ್ಲಿ ಉಪಯೋಗಿಸುವುದೂ ಉಂಟು, ಹಣೆಗೆ ಹಚ್ಚಿಕೊಳ್ಳುವ ತಿಲಕಕ್ಕೆ ಕಸ್ತೂರೀಮೃಗದ ರಕ್ತವನ್ನುಪಯೋಗಿಸುವರು, ಆದ್ದರಿಂದ ಆ ಗಂಧವು ಈ ರಕ್ತದ ಹೋಲಿಕೆಯುಳ್ಳುದಾಗಿತ್ತೆಂದು ಹೇಳುವುದು ನ್ಯಾಯವೇ ಸರಿ. ಮತ್ತೂ ಮೊಲ ಮೊದಲಾದ ಪ್ರಾಣಿಗಳನ್ನು ಬೇಟೆಯಲ್ಲಿ ಆಗಿನ ಕ್ಷತ್ರಿಯರು ಕೊಂದು ಉಪ

ಯೋಗಿಸುವುದೂ ರೂಢಿಯಲ್ಲಿತ್ತಾಗಿ ಆ ಅಂಶವನ್ನು ಸೂಚಿಸಲಿಕ್ಕಾಗಿಯೂ ಈ ಉಪಮೆಯವನ್ನು ಕೊಟ್ಟಿದ್ದಾರೆಂದು ಹೇಳಬಹುದಾಗಿದೆ. ಈ ಸ್ವಾಮಿಯು ಭಕ್ತರ ಅನುಗ್ರಹಕ್ಕಾಗಿ ಅನೇಕಾವತಾರಗಳನ್ನು ಗ್ರಹಿಸಿರುವನು, ಅದರಲ್ಲಿ ಭಕ್ತನಾದ ಪ್ರಹ್ಲಾದನಲ್ಲಿ ಹೆಚ್ಚು ವಾತ್ಸಲ್ಯವನ್ನು ತೋರಿಸಲು ಸ್ವೀಕರಿಸಿದ ನರಸಿಂಹರೂಪದಲ್ಲಿ ಪರಮ ಲೋಕಕಂಟಕನಾದ ಹಿರಣ್ಯಕಶಿಪುವೆಂಬ ದೈತ್ಯನನ್ನು ಕೊಂದು ಆತನ ಶರೀರದಲ್ಲಿದ್ದ ಕರುಳುಗಳನ್ನು ತನ್ನ ಕಂಠದಲ್ಲಿ ಮಾಲೆಯಾಗಿ ಧರಿಸಿ ಅವನ ಮೈರಕ್ತವನ್ನು ತನ್ನ ಮೈಗೆ ಗಂಧದಂತೆ ಬಳಿದುಕೊಂಡಿದ್ದ ಪ್ರಭುವೇ ಈ ಸ್ವಾಮಿಯು. ಆಗ ಒಬ್ಬ ಕಂಟಕನನ್ನು ಸಂಹರಿಸಿದ್ದನು, ಆ ಕಂಟಕನೇ ಈಗ ಪುನಃದ್ವೇಷಾತಿಶಯದಿಂದ ರಾವಣನೆನ್ನಿಸಿ ಹುಟ್ಟಿರುವನಾದ್ದರಿಂದ ಅವನನ್ನೂ ತಾನೇ ಕೊಲ್ಲುವೆನೆಂಬಂಶವನ್ನು ದೇವಿಗೆ ಜ್ಞಾಪಕಕ್ಕೆ ತಂದುಕೊಡುವುದರಿಂದ ಆಕೆಯೂ ಈ ಅಸುರನಿಗ್ರಹ ಕಾರ್ಯಕ್ಕೆ ಕಾರಣಳಾಗಲು ತನ್ನೊಡನೆ ಶೇರಬೇಕಾಗಿದೆ ಎಂಬುದನ್ನು ನೆನಪಿಗೆ ಬರುವುದಕ್ಕಾಗಿಯೂ ಸ್ವಾಮಿಯು ಲೇಪಿಸಿಕ್ಕೊಂಡಿದ್ದ ಗಂಧವು ಹೀಗೆ ಹೆಚ್ಚು ಕೆಂಪಾಗಿದ್ದಿತೆಂದು ಹೇಳಿದ್ದಾರೆ. 'ಶಕಕ್ಷತೋತ್ಥೋಪಮಚಂದನೋಕ್ಷಿತಂ' ಎಂಬ ಪದದಿಂದ ಕ್ಷಾತ್ರವೃತ್ತಿಯ ಪೂರ್ಣಾಭಿಸಂಧಿಯು ಸ್ವಾಮಿಯ ಹೃದಯದಲ್ಲಿ ಪರಿಪೂರ್ಣವಾಗಿ ತುಂಬಿದೆ ಎಂಬುದನ್ನೂ ತಿಳಿಸಲೋಸುಗ ಮೊಲದ ರಕ್ತದಂತಿರುವ ದಿವ್ಯ ಗಂಧವನ್ನು ಲೇಪಿಸಿಕ್ಕೊಂಡಿರುವ ಸ್ವಾಮಿಯನ್ನು ದೇವಿಯು ನೋಡಿದಳೆಂದು ಹೇಳಿದ್ದಾರೆ. ಮತ್ತೂ ರಘುವಂಶಕ್ಕೆ ಮೂಲಪುರುಷನು ಸೂರ್ಯನು, ಆ ದೇವರಿಗೆ ಬೇಕಾದ ಪೂಜಾದ್ರವ್ಯಗಳೆಲ್ಲಾ ಕೆಂಪಾಗಿರಬೇಕಾದ್ದು ವೈದಿಕವಿಧಿ, ಆದ್ದರಿಂದ ಸೂರ್ಯೋಪಾಸಕರು ಕೆಂಪುಗಂಧ ಕೆಂಪು ಮಂತ್ರಾಕ್ಷತೆ ಕೆಂಪು ಪುಷ್ಪಗಳನ್ನು ಆ ದೇವರಿಗೆ ಸಮರ್ಪಿಸುವರು. ಸೂರ್ಯಾಂತರ್ಯಾಮಿಯಾಗಿ, ಅಂಥಾ ಗಂಧಾದಿ ಲೇಪನವನ್ನು ಪಡೆಯುವ ಪ್ರಭುವೂ ತಾನೇ ಎಂಬುವ ಸರ್ವಾಂತರ್ಯಾಮಿತೆಯನ್ನು ತೋರಿಸುತ್ತಾ ಆ ವಂಶದ ಮೂಲಪುರುಷನಿಗಿಷ್ಟವಾದ ಕೆಂಪುಗಂಧವನ್ನು ತಾನೂ ಲೇಪಿಸಿಕ್ಕೊಂಡಿದ್ದನೆಂದೂ ಭಾವಗರ್ಭಿತವಾದ ಹೋಲಿಕೆಯನ್ನು ಕೊಟ್ಟಿರುತ್ತಾರೆಂದು ತಾತ್ಪರ್ಯ. ಅಲ್ಲದೇ ಶ್ರೀಮದಾಚಾರ್ಯರಿಗೆ ದಿವ್ಯಗಂಧಾನುಲೇಪನವು ಅಭಿಮತವಾಗಿದ್ದಿತು. ಅವರು

ನಿತ್ಯವೂ ದೇವರ ಪೂಜಾನಂತರ ಶ್ರೀ ಹರಿಗೆ ಸಮರ್ಪಿಸಿದ ದಿವ್ಯ ಶ್ರೀಗಂಧವನ್ನು ತಮ್ಮ ವಕ್ಷಸ್ಸಿಗೂ ಭುಜಗಳಿಗೂ ಲೇಪಿಸಿಕೊಂಡು ದಿವ್ಯ ಪೀತಾಂಬರವನ್ನುಟ್ಟು ಶೋಭಿಸುತ್ತಿದ್ದರೆಂಬಂಶವನ್ನು ಶ್ರೀ ಕವಿಕುಲತಿಲಕ ಶ್ರೀಮನ್ನಾರಾಯಣ ಪಂಡಿತಾಚಾರ್ಯರವರು ಶ್ರೀಮನ್ ಮಧ್ವವಿಜಯ ೧೪ನೇ ಸರ್ಗದ ಈ ಮುಂದೆ ಕೊಡುವ ಶ್ಲೋಕದಿಂದ ವರ್ಣಿಸಿದ್ದಾರೆ. ಶ್ಲೋಕ:- ಕೃತಪರಮಸಪರ್ಯಃ ಸಾಂದ್ರಸಚ್ಚಂದನಾಂಭಃ ಪರಿಮಳಿತಭುಜೋರೋಮಂಡಲಾಂಸೋಮುನೀಷೀ | ಸ್ಮಿತರುಚಿರಮುಖೇಂದುಃ ಸ್ನಿಗ್ಧಕೌಶೇಯವಾಸಾಃ ಸಸುರಮುನಿನರಾಣಾಂ ಚಕ್ಷುಷಾಮುತ್ಸವೋಽಭೂತ್ || ಸ್ವಯಂ ಇಂಥಾ ಅನಿಷಿದ್ಧವಾದ ದಿವ್ಯಾಲಂಕಾರದಿಂದ ಶೋಭಿಸುತ್ತಾ ಸರ್ವದಾ ಶ್ರೀ ಹರಿಯ ಸುಖಾನುಭವಕ್ಕೆ ಸಮಾನವಾದ ಸುಖಾನುಭವವುಳ್ಳ ಜೀವೋತ್ತಮರಾದ ವಾಯುದೇವರು ಶ್ರೀ ಹರಿಯ ದಿವ್ಯಸ್ವರೂಪವನ್ನು ಪ್ರತಿಕ್ಷಣವೂ ಅಪರೋಕ್ಷದಿಂದ (ಪ್ರತ್ಯಕ್ಷದಿಂದ) ನೋಡಿ ನಲಿಯುವರಾದ್ದರಿಂದ ಜಗನ್ಮಾತೆಯಾದ ಶ್ರೀ ದೇವಿಯೇ ಸೀತೆಯಾಗಿ ಶ್ರೀ ರಾಮಚಂದ್ರನನ್ನು ನೋಡಿ ನಲಿದಾಡಲಾರಂಭಿಸಿದಳೆಂದು ಹೇಳುವ ಸಂದರ್ಭವು ಒದಗಿದರೆ ಆ ಸ್ವಾಮಿಯ ಅಪ್ರಾಕೃತ ಸೌಂದರ್ಯವನ್ನು ವರ್ಣಿಸಲಿಕ್ಕೆ ಅವರು ಸಂಕೋಚಪಟ್ಟಾರೆ? ಆದರೆ ಅವರು ಶ್ರೀಹರಿಯ ದರ್ಶನ ಪಡೆವ ವೇಳೆಗಳಲ್ಲಿ ಅನುಭವಿಸುವಷ್ಟು ಆನಂದವನ್ನು ತಮ್ಮ ಭಕ್ತರೂ ಅವರ ಯೋಗ್ಯತಾನುಗುಣವಾಗಿ ಅನುಭವಿಸಲಿ ಎಂಬ ಕರುಣೆಯಿಂದ ಹೀಗೆ ವರ್ಣಿಸಿದ್ದಾರೆ. ಭಕ್ತರು ಅವರ ಗ್ರಂಥಗಳನ್ನವಲೋಕಿಸುತ್ತಾ ಬಂದರೆ ಶ್ರೀ ಹರಿವಾಯುದೇವರುಗಳ ಮಹಿಮೆಗಳು ಗೋಚರವಾಗುವುವು. ಇಂಥಾ ಆನಂದದಾಯಕವಾದ ಪ್ರಮೇಯವನ್ನು ಈ ಅಲ್ಪವಾದ ನನ್ನ ಲೇಖಣಿಯು ತನ್ನ ಯೋಗ್ಯತೆಗೆ ತಕ್ಕಷ್ಟನ್ನು ಮಾತ್ರ ಚಿತ್ರಿಸಿರುತ್ತೆಂದು ವಾಚಕರು ಸಂತೋಷಿಸಬೇಕಾಗಿ ಕೋರಿ, ಮುಂದಿನ ಶ್ಲೋಕಕ್ಕೆ ಕೈಹಾಕುವೆನು.

ಅವತಾರಿಕೆ.—ಮೇಲಿನ ಶ್ಲೋಕದಿಂದ ಶ್ರೀ ಸೀತಾದೇವಿಯು ತನಗೆ ವರನಾಗಿ ದಯಮಾಡಿರುವ ಶ್ರೀ ರಾಮಮೂರ್ತಿಯನ್ನು ಪೂರ್ಣಾನುರಾಗದಿಂದ ದೃಷ್ಟಿಸಿ ನೋಡಿ, ಆತನನ್ನು ಪಾಣಿಗ್ರಹಣಮಾಡಿಕೊಳ್ಳುವುದು ತನ್ನ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಫಲವೆಂಬ ಭಾವನೆಯಿಂದ ಮನಸಾ

ಅಂಗೀಕರಿಸಿ, ಮುಗುಳುನಗೆಯಿಂದ ತನ್ನ ಒಪ್ಪಿಗೆಯನ್ನು ವ್ಯಕ್ತಪಡಿಸಿದಳು. ಒಡನೆಯೇ ಈ ದೇವಿಯ ಮನೋಗತವನ್ನು ಅರಿತ ಸಖಿಯರು ವರನಿಗೆ ಸಮರ್ಪಿಸಲು ಯೋಗ್ಯವಾದ ದಿವ್ಯ ಕುಸುಮಮಾಲೆಯನ್ನು ತಂದು ಜಾನಕಿಯ ಕೈಗೆ ಕೊಡಲು ಜಾನಕಿಯು ಆ ಪುಷ್ಪಮಾಲೆಯನ್ನು ಶ್ರೀ ರಾಮನ ದಿವ್ಯಕಂಠದಲ್ಲಿ ಸಮರ್ಪಿಸಿ ಸ್ವಯಂವರ ಪದ್ಧತಿಯಂತೆ ಆತನನ್ನು ವರಿಸಿದಳೆಂಬುದನ್ನು ಈ ಶ್ಲೋಕವು ಸ್ಪಷ್ಟಪಡಿಸುವುದು.

**ಶ್ಲೋಕ || ಅಥೋಕರಾಭ್ಯಾಂ ಪ್ರತಿಗುಹ್ಯಮಾಲಾ ಮಮ್ಲಾನಪದ್ಮಾಂ ಜಲಜಾಯತಾಕ್ಷೀ। ಉಪೇತ್ಯಮಂದಂ ಲಲಿತೈಃಪದೈಸ್ತಾಂ ತದಂಸ ಆಸಜ್ಯಚ ಪಾರ್ಶ್ವತೋಽಭವತ್ ||೨೮||**

ಅರ್ಥ.— ಅಥೋ=ಅನಂತರ, ಜಲಜ=ತಾವರೆಯಂತೆ, ಆಯತ=ವಿಶಾಲವಾದ, ಅಕ್ಷೀ=ಕಣ್ಣುಗಳುಳ್ಳ, (ಆ ಸೀತಾದೇವಿಯು) ಕರಾಭ್ಯಾಂ=ತನ್ನ ಎರಡು ಕೈಗಳಿಂದ, ಅಮ್ಲಾನ=ಸ್ವಲ್ಪವೂ ನಲುಗದ, ಪದ್ಮಾಂ=ಕಮಲ ಪುಷ್ಪಗಳ, ಮಾಲಾ = ಮಾಲೆಯನ್ನು, ಪ್ರತಿಗುಹ್ಯ = ಹಿಡಿದುಕೊಂಡು, ಲಲಿತೈಃ = ಕೋಮಲವಾದ, ಪದೈಃ = ಹೆಜ್ಜೆಗಳಿಂದ, ಮಂದಂ = ಮೆಲ್ಲನೆ, ಉಪೇತ್ಯ = ಬಂದು, ತಾಂ=ಆ ಹೂಮಾಲೆಯನ್ನು, ತತ್ = ಶ್ರೀ ರಾಮನ, ಅಂಸೆ=ಕಂಠದಲ್ಲಿ, ಆಸಜ್ಯ=ಹಾಕಿದವಳಾಗಿ, ಪಾರ್ಶ್ವತಃ=ಆತನ ಪಕ್ಕದಲ್ಲಿ, ಅಭವಚ್ಚ=ನಿಂತಳು.

ತಾತ್ಪರ್ಯ.—ನಂತರ ಸಖಿಯರು ಪದಗಿಸಿಕೊಟ್ಟ, ಆಗಲೇ ಅರಳಿದುದರಿಂದ ಅತಿ ಕೋಮಲವಾದ, ಪದ್ಮ ಕುಸುಮಗಳಿಂದ ಕಟ್ಟಿರುವ ದಿವ್ಯ ಮಾಲೆಯನ್ನು ಲಲಿತವಾದ ತನ್ನೆರಡು ಕೈಗಳಿಂದ ಹಿಡಿದು ಲೋಕೋತ್ತಮನಾದ ಪತಿಯ ಲಾವಣ್ಯ ತರಂಗಗಳನ್ನು ತಾವರೆಯಂತಿರುವ ವಿಶಾಲವಾದ ತನ್ನ ಎರಡು ಕಣ್ಣುಗಳಿಂದ ಎಡೆಬಿಡದೇ ನೋಡುತ್ತಾ, ಲಲಿತವಾದ ಹೆಜ್ಜೆಗಳನ್ನಿಡುತ್ತಾ ಶ್ರೀ ರಾಮಮೂರ್ತಿಯ ಬಳಿಗೆ ಮೆಲ್ಲನೆ ಬಂದು ಆತನ ದಿವ್ಯ ಕಂಠದಲ್ಲಿ ಆ ಮಾಲೆಯನ್ನು ಸಮರ್ಪಿಸಿ ಆ ಪ್ರಭುವಿನ ಎಡಪಾರ್ಶ್ವದಲ್ಲಿ ಬಂದು ನಿಂತಳು.

ಅವತಾರಿಕೆ. — ಹೀಗೆ ಶ್ರೀಸೀತಾರಾಮರುಗಳಿಗೆ ಲೋಕಪದ್ಧತಿಯಂತೆ ಸ್ವಯಂವರ ಮಹೋತ್ಸವವು ನೆರವೇರಿದುದನ್ನು ನೋಡಿ ಆ ಪಟ್ಟಣಿಗರೆಲ್ಲರಿಗೂ ಪೂರ್ಣಾನಂದವಾಯಿತೆಂಬುವುದನ್ನು ಈ ಶ್ಲೋಕವು ತಿಳಿಸುವುದು.

**ಶ್ಲೋಕ॥ ತತಃಪ್ರಮೋದೋನಿತರಾಂಜನಾನಾಂ ವಿದೇಹಪುರ್ಯಾಮಭವತ್ ಸಮಂತಾತ್ ರಾಮಂಸಮಾಲೋಕ್ಯ ನರೇಂದ್ರಪುತ್ರ್ಯಾ ಸಮೇತಮಾನಂದನಿಧಿಂಪರೇಶಂ ॥೨೯॥**

ಅರ್ಥ.—ತತಃ=ಹೀಗೆ ದೇವಿಯು ರಾಮನನ್ನು ವರಿಸಿದ ಮೇಲೆ, ವಿದೇಹಪುರ್ಯಾಂ = ಮಿಥಿಲಾಪುರಿಯಲ್ಲಿ, ಸಮಂತಾತ್ = ಎಲ್ಲಾ ಕಡೆಯಲ್ಲಿಯೂ, ನರೇಂದ್ರಪುತ್ರ್ಯಾ=ರಾಜಪುತ್ರಿಯಿಂದ, ಸಮೇತಂ=ಕೂಡಿರುವ, ಆನಂದನಿಧಿಂ=ಆನಂದ=ಸಂತೋಷಕ್ಕೆ, ನಿಧಿಂ–ಆಶ್ರಯನಾದ, ಪರೇಶಂ= ಸರ್ವ ಜಗತ್ಪತಿಯಾದ, ರಾಮಂ=ಶ್ರೀರಾಮನನ್ನು. ಸಮಾಲೋಕ್ಯ=ನೋಡಿ, ಜನಾನಾಂ=ಜನಗಳಿಗೆ, ನಿತರಾಂ=ಅತಿಶಯವಾದ, ಪ್ರಮೋದಃ=ಪರಿಪೂರ್ಣಾನಂದವು, ಅಭವತ್=ಉಂಟಾಯಿತು.

ತಾತ್ಪರ್ಯ.—ಮಿಥಿಲಾಪುರಿಯ ವಾಸಿಗಳೂ ಮತ್ತು ಈ ಮಹೋತ್ಸವದಲ್ಲಿ ಭಾಗಿಗಳಾಗಿದ್ದ ಪ್ರಜಾಮಂಡಲಿಯೂ ಶ್ರೀರಾಮಚಂದ್ರನು ರಾಜಪುತ್ರಿಯಾದ ಜಾನಕಿಯಿಂದೊಡಗೂಡಿ ಹರ್ಷಭರಿತನಾದುದನ್ನು ನೋಡಿ ವಿಶೇಷ ಆನಂದಭರಿತರಾದರು.

ವಿಶೇಷಾರ್ಥ.—ಪ್ರಮೋದಃ ಎಂಬ ಪದವು ಅಲ್ಲಿ ನೆರದಿದ್ದ ಜನರಿಗೆ ಈ ದಂಪತಿಗಳ ದರ್ಶನವೇ ನಮಗಳಿಗೆ ಪರಮ ಭಾಗ್ಯಲಾಭಕಾರಿ ಮತ್ತು ಇದರಿಂದ ನಮ್ಮಗಳ ಅಖಿಲಾಭೀಷ್ಟ ಸಿದ್ಧಿಯಾಗುವುದೆಂಬ ದೃಢಭಾವನೆಯನ್ನುಂಟುಮಾಡಿತು ಎಂಬುದನ್ನು ತೋರಿಸುತ್ತದೆ, ಮತ್ತು "ಪರೇಶಂ" "ಆನಂದನಿಧಿಂ" ಎಂಬ ಪದಗಳು "ಸಂತುಷ್ಟಾ ದೇವತಾ" ಎಂಬಂಶವನ್ನು ಸಮರ್ಥಿಸುತ್ತವೆ. ಆದ್ದರಿಂದ ವಧೂವರರಲ್ಲಿ ಶ್ರೀಲಕ್ಷ್ಮೀನಾರಾಯಣರ ಸನ್ನಿಧಾನ ಉಂಟೆಂಬುವುದು ಸ್ಪಷ್ಟವಾಗುವುದು, ಶ್ರೀಮದಾಚಾರ್ಯರು "ದಂಪತ್ಯೋಃಭಗವಾನ್ ವಿಷ್ಣುಃ ಭಾರ್ಯಾಸ್ಥಾತುಸರಸ್ವತಿಭರ್ತೃಸಂಸ್ಥಸ್ವಯಂವಾಯುರೇವಂ ಜಾನನಿಮುಚ್ಯತೆ" ಎಂದು ಷಟ್‌ಪ್ರಶ್ನೋಪನಿಷದ್ಭಾಷ್ಯದಲ್ಲಿ ಹೇಳಿರುವರು.

ಅವತಾರಿಕೆ.—ಇದುವರಿವಿಗೂ ಸೀತಾರಾಮರುಗಳು ಗುಣಶೀಲಾದಿಗಳಿಂದ ಪರಸ್ಪರಾನುರೂಪರೆಂಬುವುದನ್ನು ಸಂದರ್ಭಾನುಸಾರ ಹೇಳಿದರು. ಇವರು ಲಕ್ಷ್ಮೀನಾರಾಯಣರೇ ಎಂಬುವದನ್ನು ಆಚಾರ್ಯರು ಕಂಠೋಕ್ತವಾಗಿ ಹೇಳಲಿಲ್ಲವಾಗಿ ಪಾಮರರು ಈ ವಿಚಾರದಲ್ಲಿ ಸಂದೇಹಪಡಲವಕಾಶವಾದೀತೆಂದು ತಿಳಿದು, ಅದನ್ನೂ ಸ್ಪಷ್ಟವಾಗಿ ಹೇಳಲಿಕ್ಕಾಗಿ, ಈ ಶ್ಲೋಕವನ್ನಾರಂಭಿಸುವುದರಲ್ಲಿಯೇ "ಲಕ್ಷ್ಮ್ಯಾಸಮೇತೆ ಪ್ರಕಟಂರಮೇಶೆ" ಎಂದು ಸೀತಾರಾಮರುಗಳ ಸ್ವರೂಪವನ್ನು ಸ್ಪಷ್ಟವಾಗಿ ಹೇಳುತ್ತಾರೆ.

**ಶ್ಲೋ॥ ಲಕ್ಷ್ಮ್ಯಾಸಮೇತೆಪ್ರಕಟಂರಮೇಶೆ ಸಂಪ್ರೇಷಯಾಮಾಸತದಾಶುಪಿತ್ರೇ । ವಿದೇಹರಾಜೋದಶದಿಗ್ರಥಾಯ ಸತಂನಿಶಮ್ಯಾಶುತುತೋಷಭೂಮಿಪಃ ॥೩೦॥**

ಅರ್ಥ.—ರಮೇಶೆ=ರಮಾಪತಿಯಾದ ಶ್ರೀರಾಮನು, ಪ್ರಕಟಂ=ಎಲ್ಲರ ಸಮಕ್ಷಮದಲ್ಲಿ, ಲಕ್ಷ್ಮ್ಯಾ=ಸೀತಾ ರೂಪಳಾದ ಲಕ್ಷ್ಮೀದೇವಿಯಿಂದ, ಸಮೇತೇಸತಿ = ಸಮಾಗಮವನ್ನು ಪಡೆಯಲಾಗಿ, ತದಾ=ಆ ಕೂಡಲೆ, ವಿದೇಹರಾಜಃ=ಜನಕರಾಜನು, ಪಿತ್ರೇ–ರಾಮನಿಗೆ ತಂದೆಯಾದ, ದಶದಿಗ್ರಥಾಯ–ದಶರಥನಿಗೋಸ್ಕರ, ಸಂಪ್ರೇಷಯಾಮಾಸ=ಆಹ್ವಾನವನ್ನು ಕಳುಹಿಸಿದನು. ಸಃಭೂಮಿಪಃ=ಆ ದಶರಥರಾಜನು, ತಂ=ಆ ಸೀತಾ ಸ್ವಯಂವರವಾದುದನ್ನು, ನಿಶಮ್ಯ=ಕೇಳಿ, ಆಶು=ಒಡನೆಯೇ, ತುತೋಷ–ಸಂತೋಷಿಸಿದನು.

ತಾತ್ಪರ್ಯ.—ಸಾಕ್ಷಾದ್ರಮಾ ಕಾಂತನಾದ ಶ್ರೀಹರಿಯೇ ರಾಮರೂಪನಾಗಿ ಬಂದು, ಮೂಲರೂಪ ಅವತಾರ ರೂಪಗಳೆರಡರಲ್ಲಿಯೂ, ತನಗೆ ಭಾರ್ಯೆಯಾದ ಸಾಕ್ಷಾಲ್ಲಕ್ಷ್ಮಿಯನ್ನೇ ಸೀತಾದೇವಿಯಾಗಿ ಮಾಡಿಕೊಂಡು, ಮಾನುಷ ರೂಪದಿಂದ ಅನುಸರಿಸಬೇಕಾದ ಕ್ರಮದಿಂದ ಸ್ವಯಂವರ ಮಹೋತ್ಸವವನ್ನು ನಡಸಿದನು, ಬಳಿಕ ಜನಕನು ಲೋಕ ಪದ್ಧತಿಯಂತೆ, ವರನ ಬಂಧುಗಳನ್ನು ಕರೆಯಿಸಿಕೊಂಡು ಕ್ರಮವಾಗಿ ಕನ್ಯಾ ದಾನಮಾಡಿ ಸತ್ಕೀರ್ತಿಯನ್ನು ಪಡೆಯಬೇಕಾದ್ದು ನ್ಯಾಯವೆಂದು ತನ್ನ ಕಡೆಯ ರಾಯ

ಭಾರಿಗಳನ್ನು ಕೋಸಲದೇಶದ ಧೊರೆಯಾದ ಮತ್ತು ಹತ್ತು ದಿಕ್ಕುಗಳಲ್ಲಿ ಯೂ ತಡೆಯಿಲ್ಲದ ರಥಗತಿಯುಳ್ಳವನಾದ ಪ್ರಯುಕ್ತ ದಶರಥನೆಂದು ಪ್ರಸಿದ್ಧನಾದ ಮಹಾರಾಜನ ಬಳಿಗೆ ಕಳುಹಿಸಿದನು. ದಶರಥನು ಅತರ್ಕಿತವಾಗಿ ಬಂದೊದಗಿದ ಈ ಶುಭ ಸಮಾಚಾರಗಳನ್ನು ಕೇಳಿ ಪೂರ್ಣ ಹರ್ಷಪಡುತ್ತಾ ಸಂತುಷ್ಟನಾದನೆಂದು ತಾತ್ಪರ್ಯ.

ವಿಶೇಷಾರ್ಥ.—ದಶರಥನು ಕೋಸಲ ದೇಶಕ್ಕೆ ಮಾತ್ರ ಧೊರೆಯಲ್ಲ, ಈ ಭರತ ಖಂಡಕ್ಕೇ ಆ ಕಾಲದಲ್ಲಿ ಚಕ್ರವರ್ತಿಯಾಗಿದ್ದನೆಂಬುವುದನ್ನು "ದಶದಿಗ್ರಥಾಯ" ಎಂಬ ಪದವು ಸ್ಪಷ್ಟಪಡಿಸುತ್ತದೆ. "ಮನುಷ್ಯತ್ವೇತು ಮಾನುಷೀ" ಎಂಬ ಶಾಸ್ತ್ರವನ್ನನುಸರಿಸಿ ಅವತಾರ ರೂಪಗಳಲ್ಲಿ ಶ್ರೀರಮಾನಾರಾಯಣರು, ಸಕಲ ಕಾರ್ಯಗಳನ್ನು ಮನುಷ್ಯರಂತೆ ನಡಿಸುವುದೇ ಅವರೀರ್ವರ ಸಂಕಲ್ಪ. ತಮ್ಮ ಅನುಗ್ರಹಕ್ಕೆ ಅರ್ಹರಾದ ಕೆಲವು ಚಕ್ರವರ್ತಿಗಳು ಮತ್ತೂ ಮನುಷ್ಯೋತ್ತಮರು ಪುತ್ರ ಮಿತ್ರಾದಿ ಬಾಂಧವ್ಯರಿಂದ ಕೂಡಿ ಬಂದು ಶೇರಿರಲು ಅಂಥವರಿಗೆ ತಮ್ಮ ದರ್ಶನ ಸ್ಪರ್ಶನ ಸಲ್ಲಾಪಾದ್ಯನುಗ್ರಹಗಳನ್ನಿತ್ತು ಕಾಪಾಡುವುದಕ್ಕಾಗಿಯೇ ಈ ಉತ್ಸಾವದಿಗಳ ಏರ್ಪಾಟೆಂದು ಭಕ್ತರು ಭಾವಿಸಬೇಕು. ಒಟ್ಟಿನಲ್ಲಿ ಈ ದಂಪತಿಗಳು ಅನುಸರಿಸುವ ಚೇಷ್ಟೆಗಳೆಲ್ಲಾ ಜಗದ್ವಿಡಂಬನಾರ್ಥವೆಂದು ತಿಳಿಯಬೇಕೇ ವಿನಃ ವಿಧಿಬದ್ಧರಾದ ಮಾನವರಂತೆ ಕರ್ಮ ಫಲಾನುಭವಾರ್ಥವಾಗಿಯಾಗಲೀ ಋಣಋಣೀಭಾವದಿಂದ ನಡೆದುವೆಂದಾಗಲೀ ಭಾವಿಸಬಾರದೆಂದು ತಾತ್ಪರ್ಯವು.

ಅವತಾರಿಕೆ.—ಶ್ರೀರಾಮಚಂದ್ರನ ವಿವಾಹ ಮಹೋತ್ಸವಕ್ಕಾಗಿ ಜನಕನ ರಾಯಭಾರಿಗಳಿಂದ ಆಹ್ವಾನಿಸಲ್ಪಟ್ಟ ದಶರಥನು ಮಿಥಿಲಾಪುರಿಗೆ ಪ್ರಯಾಣಮಾಡಿದ ವೈಖರಿಯನ್ನು ಈ ಶ್ಲೋಕದಿಂದ ವರ್ಣಿಸುತ್ತಾರೆ.

**ಶ್ಲೋಕ॥ ಅಥಾತ್ಮಜಾಭ್ಯಾಂಸಹಿತಃ ಸಭಾರ್ಯಃ ಯಯೌಗಜಸ್ಯಂದನಪತ್ತಿ ಯುಕ್ತೆಯಾಸ್ವಸೇನಯಾಗ್ರೇಪ್ರಣಿಧಾಯಧಾತೃಜಂ ವಶಿಷ್ಠಮಾಶ್ವೇವಸಯತ್ರಮೈಥಿಲಃ ॥೩೧॥**

ಅರ್ಥ.—ಅಥ=ಅನಂತರ, ಸಃ=ಆ ದಶರಥನು, ಆತ್ಮಜಾಭ್ಯಾಂ=ಭರತಶತೃಘ್ನರೆಂಬ ಇಬ್ಬರು ಮಕ್ಕಳಿಂದ, ಸಹಿತಃ=ಒಡಗೂಡಿ, ಸಭಾರ್ಯಃ=ಹೆಂಡತಿಯರಿಂದ ಕೂಡಿದವನಾಗಿ, ಗಜ=ಆನೆಯು, ಸ್ಯಂದನ=ರಥವು, ಪತ್ತಿ=ಕಾಲಾಳುಗಳು, ಇವುಗಳಿಂದ, ಯುಕ್ತಯಾ=ಕೂಡಿದ, ಸ್ವ=ತನ್ನ ಸೇನಯಾ=ಸೈನ್ಯದಿಂದ, ಸಹ=ಒಡಗೂಡಿ, ಧಾತೃಜಂ=ಬ್ರಹ್ಮ ಪುತ್ರರಾದ, ವಶಿಷ್ಠಂ=ವಶಿಷ್ಠ ಮಹರ್ಷಿಯನ್ನು, ಅಗ್ರೇಪ್ರಣಿಧಾಯ=ಮುಂದು ಮಾಡಿಕೊಂಡು, ಆಶ್ವೇವ=ಜಾಗ್ರತೆಯಾಗಿಯೇ, ಯತ್ರ=ಎಲ್ಲಿ, ಮೈಥಿಲ=ಮಿಥಿಲ ರಾಜನು, ಆಸೀತ್=ಇದ್ದನೋ, ತತ್ರ=ಅಲ್ಲಿಗೆ, ಯಯೌ=ಬಂದು ಸೇರಿದನು.

ತಾತ್ಪರ್ಯ.—ಅನಂತರ ಭರತ ಶತೃಘ್ನರುಗಳಿಂದಲೂ ಚತುರಂಗ ಸೈನ್ಯದಿಂದಲೂ ಯುಕ್ತನಾದ ದಶರಥನು ತನ್ನ ಪಟ್ಟಮಹಿಷಿಯರಿಂದ ಒಡಗೂಡಿ ಬ್ರಹ್ಮ ಪುತ್ರರಾದ ವಶಿಷ್ಠರನ್ನು ಮುಂದುಮಾಡಿಕೊಂಡು ತ್ವರೆಯಿಂದ ಮಿಥಿಲಾ ಪಟ್ಟಣವನ್ನು ಸೇರಿದನು.

ವಿಶೇಷಾರ್ಥ.—ದಶರಥನು ಚಕ್ರವರ್ತಿಯಾದ ಕಾರಣ ರಾಜ ಚಿನ್ಹೆಗಳೂ, ಬಿರುದಾವಲಿಗಳೂ ಅತ್ಯವಶ್ಯಕವೆಂಬುದನ್ನು " ಸೇನಯಾ " ಎಂಬ ಪದವು ಸೂಚಿಸುವುದು. ಪರರಾಷ್ಟ್ರಕ್ಕೆ ಪ್ರಯಾಣ ಮಾಡುವಾಗ ರಾಜನ ಅಂಗರಕ್ಷಣೆಗಾಗಿ ಸೈನ್ಯವು ಅವಶ್ಯಕ. " ಧಾತೃಜಂ ವಶಿಷ್ಠಂಅಗ್ರೇಪ್ರಣಿಧಾಯ " ಎಂಬ ವಾಕ್ಯದಿಂದ ರಾಜ ಪುರೋಹಿತರು ಸಾಮಾನ್ಯರಲ್ಲ. ಮಹಾ ಮಹಿಮೆಯುಳ್ಳವರು. ಅವರು ಸಾಕ್ಷಾತ್ ಬ್ರಹ್ಮದೇವರ ಮಕ್ಕಳಾದ್ದರಿಂದ ವೈದಿಕ ಲೌಕಿಕೋಭಯ ವಿದ್ಯಾ ಪಾರಂಗತರೆಂದೂ ಅಂಥವರು ಈತನ ಕುಲಕ್ಕೆ ಪುರೋಹಿತರಾಗಬೇಕಾದರೆ ಈ ಕುಲವು ಅದ್ಭುತ ಮಹಿಮೆಯುಳ್ಳದ್ದೆಂಬುವುದನ್ನು ತಿಳಿಸುತ್ತದೆ. ಅವರನ್ನು ಮುಂದಿಟ್ಟುಕೊಂಡು ಹೊರಟನೆಂಬುವುದರಿಂದ ಪ್ರತಿಯೊಂದು ಕಾರ್ಯದಲ್ಲಿಯೂ ಅವರೇ ಈತನಿಗೆ ಮಾರ್ಗದರ್ಶಿಗಳಾಗಿದ್ದರೆಂಬುದು ವ್ಯಕ್ತಪಡುವುದು.

ಅವತಾರಿಕೆ.—ಶ್ರೀರಾಮಚಂದ್ರನ ವಿವಾಹ ಮಹೋತ್ಸವಕ್ಕಾಗಿ ಮಿಥಿಲಾಪುರಿಗೆ ಬಂದು ಶೇರಿದ ದಶರಥ ಮಹಾರಾಜನನ್ನು ಜನಕನು ಸತ್ಕರಿಸಿದ ಕ್ರಮವನ್ನೂ ಅನಂತರ ನಡೆದ ವಿವಾಹಮಹೋತ್ಸವ ಕ್ರಮವನ್ನೂ ಈ ಮುಂದಿನ ಶ್ಲೋಕವು ವಿವರಿಸುತ್ತದೆ.

**ಶ್ಲೋಕ|| ಸಮೈಥಿಲೇನಾತಿತರಾಂಸಮರ್ಚಿತೋ ವಿವಾಹಯಾಮಾಸಸುತಂ ಮುದಂಭರಃ । ಪುರೋಹಿತೋಗಾಧಿಸುತಾನುಮೋದಿತೋ ಜುಹಾವವಹ್ನಿಂವಿಧಿನಾವಸಿಷ್ಠಃ ||೩೨||**

ಅರ್ಥ.—ಸಃ=ಆ ದಶರಥನು, ಮೈಥಿಲೇನ = ಮಿಥಿಲ ರಾಜನಿಂದ, ಅತಿತರಾಂ=ಅತಿಶಯವಾಗಿ, ಸಮರ್ಚಿತಃ=ಪೂಜಿತನಾಗಿ, ಮುದಂಭರಃ= ಹರ್ಷಾತಿಶಯವುಳ್ಳವನಾಗಿ, ಸುತಂ=ಮಗನನ್ನು, ವಿವಾಹಯಾಮಾಸ= ವಿವಾಹೋತ್ಸವಕ್ಕೀಡು ಮಾಡಿದನು. ಗಾಧಿಸುತಾನುಮೋದಿತಃ=ವಿಶ್ವಾಮಿತ್ರರ ಒಪ್ಪಿಗೆಯನ್ನುಪಡೆದಂಥ, ಪುರೋಹಿತಃ=ಪುರೋಹಿತರಾದ, ವಸಿಷ್ಠಃ= ವಸಿಷ್ಠರು, ವಿಧಿನಾ=ವಿಧ್ಯುಕ್ತವಾಗಿ, ವಹ್ನಿಂ=ಅಗ್ನಿದೇವನನ್ನು, ಜುಹಾವ-ಆರಾಧಿಸಿದರು.

ತಾತ್ಪರ್ಯ.—ಸಂತೋಷಯುಕ್ತನಾದ ದಶರಥನು ಜನಕರಾಜನಿಂದ ಪೂಜಿತನಾಗಿ ತನ್ನ ಪುತ್ರರಿಗೆ ವಿವಾಹ ಮಹೋತ್ಸವವನ್ನು ವಿದ್ಯುಕ್ತವಾಗಿ ನಡಿಸಿದನು. ಪುರೋಹಿತರಾದ ವಸಿಷ್ಠರು ಗಾಧಿ ಪುತ್ರರಾದ ವಿಶ್ವಾಮಿತ್ರರಿಂದ ಅನುಮೋದಿತರಾಗಿ ವಿಧಿಪ್ರಕಾರ ಅಗ್ನಿಯಲ್ಲಿ ಹೋಮ ನಡಿಸಿದರು.

ವಿಶೇಷಾರ್ಥ.—ಪ್ರಪಂಚದಲ್ಲಿ ಒಬ್ಬರನೊಬ್ಬರು ಗೌರವಿಸಬೇಕಾದರೆ ಅವರಲ್ಲಿರುವ ಗುಣಗಳೇ ಕಾರಣ. ಆ ಗುಣಗಳಿಂದ ಮೆಚ್ಚಿ ಸನ್ಮಾನಿಸುವುದು ವಿವೇಕಿಗಳ ಪದ್ಧತಿ. ಸಾಮಾನ್ಯರಾದ ಜನರು ಆ ಗುಣಗಳನ್ನು ಗ್ರಹಿಸುವುದು ಕಷ್ಟ. ಆದ್ದರಿಂದ ಶಾಸ್ತ್ರಕಾರರು ಜ್ಞಾನಿಗಳಿಗಾಗಲೀ ಸಾಮಾನ್ಯರಿಗಾಗಲೀ ಸನ್ಮಾನಕ್ಕೆ ಅರ್ಹವಾದ ಗುಣಗಳನ್ನು ತಿಳಿಯಲಿಕ್ಕನುಕೂಲವಾದ ಐದು ಸಾಮುಗ್ರಿಗಳನ್ನು ಗೊತ್ತುಮಾಡಿದ್ದಾರೆ. ಆ ಸಾಮುಗ್ರಿಗಳು ಇವರಲ್ಲುಂಟೆ ಇಲ್ಲವೆ ಎಂಬುದನ್ನು ಯಾರಾದರೂ ಜಾಗ್ರತೆಯುಲ್ಲಿಯೇ ತಿಳಿಯಬಹುದು. ಅವು ಯಾವುವೆಂದರೆ—(೧) ಧನ. (೨) ಬಾಂಧವ್ಯ,

(೩)ವಯಸ್ಸು. (೪) ಆಚಾರ. (೫)ವಿದ್ಯಾ. ಈ ಸಾಮಗ್ರಿಗಳು ಪ್ರಾಯಶಃ ಎಲ್ಲರಿಗೂ ಗೋಚರಕ್ಕೆ ಬರುವವು. ಅನಂತರ ಅವುಗಳಿಗೆ ತಕ್ಕಂತೆ ಒಬ್ಬರ ನ್ನೊಬ್ಬರು ಸನ್ಮಾನಿಸಬಹುದು, ಇವುಗಳನ್ನರಿತೂ ಗೌರವಿಸದಿರಬೇಕಾದರೆ ದ್ವೇಷ, ಅಸೂಯೆಗಳೇ ಕಾರಣ, ಆಸಂದರ್ಭದಲ್ಲಿ ದ್ವೇಷಾಸೂಯೆಗಳನ್ನು ಮುಂದಿಟ್ಟುಕೊಂಡಿರುವವರು ಜನರ ದೂಷಣೆಗೆ ಪಾತ್ರರಾಗುವರು. ಪ್ರಕೃತ ಜನಕನು, ಈ ಶಾಸ್ತ್ರಗಳನ್ನರಿತವನಾದ್ದರಿಂದ ವಿಶ್ವಾಮಿತ್ರರ ಪ್ರೇರಣೆಯಾ ದೊಡನೆಯೇ ದಶರಥನಲ್ಲಿ ಮೇಲಿನ ಐದು ಸಾಮಗ್ರಿಗಳೂ ಇವೆಯೆಂದು ತಿಳಿದು, ಅತಿಶಯವಾದ ಬಹುಮಾನವನ್ನು ನಡಿಸಿದನೆಂದು ತಾತ್ಪರ್ಯ. ಈ ಅಭಿಪ್ರಾಯವನ್ನು ಸ್ಪಷ್ಟಪಡಿಸಲು "ಅತಿತರಾಂಸಮರ್ಚಿತಃ" ಎಂಬ ಮಾತ ನ್ನು ಆಚಾರ್ಯರು ಪ್ರಯೋಗಿಸಿದ್ದಾರೆ, ಮತ್ತೂ ಲಾಜಾಹೋಮಾದಿ ಕಾರ್ಯಗ ಳನ್ನು ವಿಶ್ವಾಮಿತ್ರರ ಹೇಳಿಕೆಯಂತೆ ವಶಿಷ್ಠರು ನೆರವೇರಿಸಿದ್ದಾರೆಂದು ಹೇಳ ಲು ಅವರುಭಯರೂ ಶ್ರೀರಾಮನ ಸ್ವರೂಪವನ್ನು ಚೆನ್ನಾಗಿ ಅರಿತವರು. ಈ ಮಂಗಳಕಾರ್ಯವನ್ನು ನಡಿಸಿ ಪುಣ್ಯಕೀರ್ತಿಗಳಿಗೆ ಭಾಗಿಗಳಾಗಬೇಕೆಂದು ಹರೀಚ್ಛೆಗೆ ಬಂದಿತ್ತಾಗಿ ಈ ಸಂದರ್ಭದಲ್ಲಿ ಏಕ ಮನಸ್ಕರಾಗಿ ಈ ಕಾರ್ಯವನ್ನು ನೆರವೇರಿಸಿದರು. ಇದರಿಂದ ಅವರವರಿಗೆ ಪರಸ್ಪರಹುಟ್ಟಿದ್ದ ಕೋಪತಾಪ ಗಳು ಪರಿಹಾರವಾಗಿ ಇಬ್ಬರೂ ಅನ್ಯೋನ್ಯವಾಗಿದ್ದರೆಂಬುದನ್ನು ತಿಳಿಯ ಬಹುದು, ಮತ್ತೂ ಜ್ಞಾನಿಗಳಿಗೆ ಯಾವುದಾದರೊಂದು ವಿಚಾರದಲ್ಲಿ ಭಿನ್ನಾಭಿಪ್ರಾಯ ಹುಟ್ಟಿದರೆ ಅದು ಸ್ವಲ್ಪ ಕಾಲದಲ್ಲಿಯೇ ಪರಿಹಾರವಾಗಿ ಉಭಯರೂ ನೆಮ್ಮದಿಯನ್ನು ಪಡೆಯುವರೆಂಬುದನ್ನೂ ತಿಳಿಯಬಹುದು. ವಿಶ್ವಾಮಿತ್ರರು ರಾಮ ಲಕ್ಷ್ಮಣರನ್ನು ನಿರ್ಬಂದಮಾಡಿ ಕಳುಹೆಂದು ಕೇಳಿ ದಾಗ ದಶರಥನಿಗೆ ಉಂಟಾಗಿದ್ದ ಮನಃ ಕ್ಲೇಶವು ಈಗ ಸಂಪೂರ್ಣವಾಗಿ ಪರಿಹಾರವಾಗಿ, ಇಂಥಾ ಜ್ಞಾನಿಗಳು ಮಾಡುವ ಕಾರ್ಯಗಳು ಉತ್ತರೋ ತ್ತರ ಉತ್ತಮ ಫಲಕಾರಿಯಾಗುವವೆಂಬ ದೃಢವಾದ ನಂಬಿಕೆಯು ಕೂಡ ದಶರಥನಿಗೆ ಹುಟ್ಟಿ ಅವರುಗಳಲ್ಲಿ ಗುರುಭಾವನೆಯು ಅಭಿವೃದ್ಧಿಯಾಯಿತು. ಮತ್ತು ಹೋಮಾದಿ ಕಾರ್ಯದಲ್ಲಿ ಇವರು ಆಹ್ವಾನಿಸಿದ ಕೂಡಲೇ ದೇವತೆ ಗಳು ಸಾಕ್ಷಾತ್ತಾಗಿ ಬಂದು ಹವಿರ್ಭಾಗವನ್ನು ಪ್ರತ್ಯಕ್ಷವಾಗಿ ಪಡೆದುದು

ಕೂಡಾ ಈ ಪುರೋಹಿತರ ಮಹಿಮೆಯುನ್ನು ವ್ಯಕ್ತಪಡಿಸುವುದು. ಆ ಮಹಿಮೆಯೂ ಪರೋ ಇವರುಗಳಲ್ಲಿ ಕುಲಕ್ರಮಾಗತವಾದುದು. ಇಂಥಾ ಮಹಿಮೆಯನ್ನು ಪುರೋಹಿತ ವರ್ಗದವರು ರಕ್ಷಿಸಿಕೊಂಡು ಬಂದಲ್ಲಿ ನ್ಯಾಯವಾಗಿ ಅವರು ಪುರೋಹಿತರೆನ್ನಿಸಿಕೊಳ್ಳುವರು ಎಂಬ ಅಂಶವನ್ನು ಈ ಶ್ಲೋಕವು ಸ್ಪಷ್ಟಪಡಿಸಿವೆ. ಹೀಗೆ ಅನುಕೂಲವಾದ ಬಾಂಧವ್ಯ, ಅನುರೂಪವಾದ ವರಸಾಮ್ಯ. ಪರಮೋತ್ತಮರಾದ ಪುರೋಹಿತರು, ವಿಧ್ಯುಕ್ತವಾದ ಕಾರ್ಯಗಳು, ಎಲ್ಲಾ ಒಟ್ಟಿಗೆ ಒದಗಿದ್ದುದರಿಂದ ದಶರಥನು ಪರಮಾನಂದಭರಿತನಾಗಿ ಶ್ರೀರಾಮನ ವಿವಾಹಮಹೋತ್ಸವವನ್ನು ನೆರವೇರಿಸಿದನೆಂದು ಹೇಳಿರುವರು.

ಅವತಾರಿಕೆ.—ಮೇಲೆ ನಿರೂಪಿಸಿದಂತೆ ಶ್ರೀಸೀತಾರಾಮರ ವಿವಾಹ ಮಹೋತ್ಸವದ ಸಡಗರವನ್ನು ಉಭಯಪಕ್ಷದ ಬಾಂಧವರು, ಪುರೋಹಿತರು, ಪರಿವಾರದವರು ಮಾತ್ರ ಅನುಭವಿಸಿದರೆಂದಲ್ಲ. ಇವರುಗಳ ಮಹಾ ಮಹಿಮೆಯನ್ನರಿತ ದೇವತೆಗಳೂ ಈ ಸಂಭ್ರಮವನ್ನು ನೋಡಿ ಆನಂದಿಸಿದರೆಂಬುದನ್ನು ಈಗ ಸ್ಪಷ್ಟಪಡಿಸುವರು.

**ಶ್ಲೋ॥ತದಾವಿಮಾನಾವಳಿಭಿರ್ನಭ (ಸ್ಥಳಂ)ಸ್ತಲಂ ದಿದೃಕ್ಷತಾಂಸಂಕುಲ**
**ಮಾಸನಾಕಿನಾಂ ಸುರಾನಕಾದುಂದುಭಯೋವಿನೇದಿರೇಜಗುಶ್ಚ ಗಂ**
**ಧರ್ವವರಾಃಸಹಸ್ರಶಃ ॥೩೩॥**

ಅರ್ಥ.—ತದಾ=ಈ ರಾಮಚಂದ್ರನ ವಿವಾಹ ಸಮಯದಲ್ಲಿ, ದಿದೃಕ್ಷತಾಂ=ಈ ಉತ್ಸವ ದರ್ಶನಾಪೇಕ್ಷೆಯುಳ್ಳ, ನಾಕಿನಾಂ=ದೇವತೆಗಳ, ವಿಮಾನಾವಳಿಭಿಃ=ವಿಮಾನ ಪಂಗ್ತಿಗಳಿಂದ, ನಭಸ್ಥಲಂ = ಅಂತರಿಕ್ಷವು, ಸಂಕುಲಂ=ಆಕ್ರಮಿಸಲ್ಪಟ್ಟಿದ್ದಾಗಿ, ಆಸ=ಆಯಿತು, ಸಹಸ್ರಶಃ=ಸಾವಿರಾರು, ಸುರಾನಕಾಃ=ದೇವಲೋಕದ ತಮಟೆಗಳೂ, ದುಂದುಭಯಃ-ನಗಾರಿಗಳೂ, ವಿನೇದಿರೆ=ಬಾರಿಸಲ್ಪಟ್ಟವು. ಗಂಧರ್ವವರಾಃ-ಗಂಧರ್ವ ಶ್ರೇಷ್ಠರು, ಸಹಸ್ರಶಃ=ಸಾವಿರಾರು ಜನರು, ಜಗುಶ್ಚ=ಗಾಯನ ಮಾಡಿದರು.

ತಾತ್ಪರ್ಯ:—ಈ ರೀತಿಯಾಗಿ ಬೆಳಗುತ್ತಿದ್ದ ಆ ದಂಪತಿಗಳ ಮುಖ ತೇಜಸ್ಸು ಮತ್ತೂ ವಿಧ್ಯುಕ್ತ ಕರ್ಮದಲ್ಲಿ ಅವರಿಗಿರುವ ಶ್ರದ್ಧೆ ಇವುಗಳನ್ನು ನೋಡಲೆಳಿಸಿ ಸ್ವರ್ಗಲೋಕದ ಅನೇಕ ದೇವತೆಗಳು ತಮ್ಮ ತಮ್ಮ ವಿಮಾನ ಗಳಲ್ಲಿ ಕುಳಿತು ಜನಕನ ಸಭೆಯ ಮೇಲ್ಭಾಗದಲ್ಲಿ ಬಂದು ನಿಂತರು. ಈ ದೇವತೆಗಳ ವಿಮಾನ ಪಂಗ್ತಿಗಳಿಂದ ಆಕಾಶವು ತುಂಬಿತ್ತು. ಅನೇಕ ಭೇರಿ ಮೊದಲಾದ ದೇವತೆಗಳ ವಾದ್ಯಗಳು ಬಾರಿಸಲ್ಪಟ್ಟವು. ಸಹಸ್ರಾರು ಗಂಧರ್ವರು ಗಾನಮಾಡಿದರು.

ಅವತಾರಿಕೆ.—ಹೀಗೆ ಶ್ರೀರಾಮನ ಸ್ವಯಂವರ ಮಹೋತ್ಸವವು ನಡೆದು ಆ ಸೀತಾರಾಮರುಗಳು ದಾಂಪತ್ಯವನ್ನು ಪಡೆದ ಬಳಿಕ ಅವರು ಗಳನ್ನು ಅಭಿನಂದಿಸಿ ಹರ್ಷಪಡಲು ದೇವತಾಮಂಡಲಿಯು ಬಂದಿತ್ತೆಂದು ಹೇಳಿದಂತಾಯಿತು. ಈ ದೇವತಾಮಂಡಲಿಯು ಜನಕನು ಸ್ವಯಂವರವನ್ನು ಡಂಗುರ ಹಾಕಿಸಿದವೇಳೆ ಏತಕ್ಕೆ ಬರಲಿಲ್ಲವೆಂಬುವುದಕ್ಕೆ ಉತ್ತರವನ್ನು ಹೇಳಬೇಕೆಂದೆಣಿಸಿ ಆಚಾರ್ಯರು ಈ ಶ್ಲೋಕವನ್ನಾರಂಭಿಸುವರು.

ಶ್ಲೋಕ|| ವಿಜಾನಮಾನಾಜಗತಾಂಹಿಮಾತರಂ ಪುರಾರ್ಥಿತುಂನಾಯಯುರ
ತ್ರದೇವತಾಃ | ತದಾತುರಾಮಂ ರಮಯಾಯುತಂಪ್ರಭುಂ ದಿ
ದೃಕ್ಷವಶ್ಚಕ್ರುರಲಂನಭಸ್ತಲಂ ||೩೪||

ಅರ್ಥ.—ಅತ್ರ=ಈ ಸ್ವಯಂವರ ವಿಷಯದಲ್ಲಿ, ತಾಂ=ಆ ಸೀತೆಯನ್ನು, ಜಗತಾಂ=ಎಲ್ಲಾ ಜಗತ್ತಿಗೂ, ಮಾತರಂ = ಜನನಿ ಎಂಬುವುದನ್ನು, ವಿಜಾನಮಾನಾ–ಚೆನ್ನಾಗಿ ತಿಳಿದವರಾದ, ದೇವತಾಃ=ದೇವತೆಗಳು, ಪುರಾ= ಪೂರ್ವದಲ್ಲಿ ಡಂಗುರ ಹಾಕಿದಾಗ, ಅರ್ಥಿತುಂ = ಕನ್ಯೆಯನ್ನು ಯಾಚಿಸುವುದಕ್ಕೆ, ನಾಯಯುಃ=ಬರಲಿಲ್ಲ, ತದಾತು = ವಿವಾಹೋತ್ಸವಕಾಲದಲ್ಲಾದರೋ, ರಮಯಾ=ಸೀತಾದೇವಿಯಿಂದ, ಯುತಂ–ಕೂಡಿರುವ, ಪ್ರಭುಂ= ಲೋಕೇಶನಾದ, ರಾಮಂ = ರಾಮಚಂದ್ರನನ್ನು, ದಿದೃಕ್ಷವಃ = ನೋಡಲಿಚ್ಛೆಯುಳ್ಳವರಾಗಿ, ನಭಸ್ತಲಂ=ಅಂತರಿಕ್ಷಮಂಡಲವನ್ನು, ಅಲಂಚಕ್ರುಃ= ಅಲಂಕರಿಸಿದರು (ತಮ್ಮಾಗಮನದಿಂದ).

ತಾತ್ಪರ್ಯ.—ಮಾನವರಲ್ಲಿ ಹೇಗೆ ಅಜ್ಞ ಪ್ರಾಜ್ಞರೆಂಬ ತಾರತಮ್ಯ ಗಳುಂಟೋ ಹಾಗೆಯೇ ದೇವತೆಗಳಲ್ಲಿಯೂ ಉಂಟು. ಅವರಲ್ಲಿಯೂ ಉತ್ತಮರು, ಮಧ್ಯಮರು, ಸಾಮಾನ್ಯರು, ಅಧಮರು ಎಂಬ ಬೇಧ ಗಳುಂಟು. ಅಧಮರಿಗೆ ಸ್ವೋತ್ತಮರ ಮಹಿಮಾ ಜ್ಞಾನವೇ ಇಲ್ಲ. ಇಂಥಾ ದ್ದರಲ್ಲಿ ರಮಾನಾರಾಯಣರ ಮಹಿಮೆಯನ್ನು ಅವರು ಎಷ್ಟುಮಟ್ಟಿಗೆ ತಿಳಿ ದಾರು ? ಅಂಥಾ ಕೆಲವು ಅಧಮ ದೇವತೆಗಳು ಮಾತ್ರ ಧನುರ್ಭಂಜನೋ ದ್ದೇಶದಿಂದ ಜನಕನ ಸಭೆಗೆ ಬಂದಿದ್ದಂತೆ “ನದೇವದೈತ್ಯೋರಗದೇವ ಗಾಯಕಾಅಲಂಧನುಶ್ಚಾಲಯಿತುಂಸ ವಾಸವಾಃ” ಎಂಬ ಇದೇ ಅಧ್ಯಾಯ ದ ೧೮ನೇ ಶ್ಲೋಕದಲ್ಲಿ ಜನಕನ ಮಾತಿನಿಂದ ಸೂಚಿಸಿದ್ದಾರೆ. ಅಲ್ಲದೇ ಆ ಸಂದರ್ಭದಲ್ಲಿ ಬಂದಿದ್ದ ದೇವತೆಗಳು ಈ ಧನುರ್ಭಂಗಕ್ಕೆ ನಾವೇ ಅಸ ಮರ್ಥರು ಇನ್ನು ಮಾನವರು ಹೇಗೆ ಇದನ್ನು ಭಂಜಿಸಿಯಾರು ? ಎಂಬು ದನ್ನು ಲೋಕಕ್ಕೆ ತಿಳಿಸಲೋಸುಗ ಎಲ್ಲರಂತೆ ತಾವೂ ಹೋಗಿ ಯತ್ನಿಸಿ ಬಂ ದೆವು, ಆದರೆ ಕೈಸಾಗಲಿಲ್ಲವೆಂಬುದನ್ನು ತಿಳಿಸಿದ್ದಾರೆ ದೇವತಾ ಮಂಡ ಲಿಯವರು ಸೀತೆಯನ್ನು ಕಾಮಿಸಿ ಸ್ವಯಂವರಕ್ಕೆ ಬರಲಿಲ್ಲ, ಅವರುಗಳಲ್ಲಿ ಪ್ರಧಾನರಾದ ಇಂದ್ರಾದಿಗಳು ಬಂದಿದ್ದುದು ಕೂಡಾ ಸ್ವಾರ್ಥತೆಯಿಂದಲ್ಲ. ಅವರು ಜನಕನನ್ನು ಕುರಿತು, ಮಾತನಾಡಿದಾಗ ತಾವು ಕನ್ಯಾರ್ಥಿಗಳಾಗಿ ಬಂದಿರುವಂತೆ ಹೇಳಿಕೊಳ್ಳಲಿಲ್ಲ. ಈ ಕನ್ಯಾ ಸ್ವರೂಪವು ಅವರುಗಳಿಗೆ ಆಗಲೇ ಗೊತ್ತಿದ್ದಿತು. ಆದ್ದರಿಂದಲೇ ಜನಕನು, ಧನುರ್ಭಂಗದಲ್ಲಿ ಯತ್ನಿಸಲು ಬಂದ ಜನರ ಗುಂಪಿನಲ್ಲಿ, ಈ ದೇವತೆಗಳ ಹೆಸರನ್ನೇ ಎತ್ತದೆ, “ದಿತೇಃಸುತಾಃ ದಾನವಯಕ್ಷರಾಕ್ಷಸಾಃ | ಸಮೇತ್ಯಭೂಪಾಶ್ಚ ಸಮೀಪ ಮಾಶು ಪ್ರಗೃಹ್ಯತಚ್ಚಾಲಯಿತುಂನಶೇಕುಃ ||” ಎಂಬ ಇದೇ ಅಧ್ಯಾಯದ ೨೦ನೇ ಶ್ಲೋಕದಿಂದ ವಿಶ್ವಾಮಿತ್ರರೊಡನೆ ಹೇಳಿದಾಗ ಸ್ಪಷ್ಟವಾಗಿ ದೈ ತ್ಯಾದಿಗಳು ಮಾತ್ರ ಬಂದು ಕನ್ಯಾರ್ಥಿಗಳಾಗಿ ಧನುರ್ಭಂಗಕ್ಕೆ ಯತ್ನಿಸಿ ಸೋತುಹೋದರೆಂದು ವರ್ಣಿಸಿರುತ್ತಾನೆ. ಒಟ್ಟಿನಲ್ಲಿ ಈ ಎರಡು ಶ್ಲೋಕ ಗಳ ಅರ್ಥವನ್ನು ಪರಿಗ್ರಹಿಸುವಾಗ ದೇವತೆಗಳು ಕನ್ಯಾರ್ಥಿಗಳಾಗಿ ಬರಲಿ ಲ್ಲವೆ ? ಅಥವಾ ಬಂದಿದ್ದರೆ ? ಬಂದಿದ್ದಲ್ಲಿ, ಅವರು ಬಂದುದು ತಪ್ಪಲ್ಲವೆ ?

ಬಾರದಿದ್ದಲ್ಲಿ, ಜನಕನ ಡಂಗುರವು ಅವರಿಗೆ ತಿಳಿಯಲಿಲ್ಲವೇ? ದೇವತೆಗಳಲ್ಲಿ ಕೂಡಾ ಕಾಮಾದಿಗಳಿಗೆ ಅವಕಾಶವುಂಟು, ವಿಧಿ ನಿಷೇಧಗಳಿಲ್ಲದೇಹೆಣ್ಣು, ಹೊನ್ನು, ಮಣ್ಣುಗಳಲ್ಲಿ ಎಂಥವರೂ ವ್ಯಾಮೋಹಪಡುವರು, ಎಂಬಿತ್ಯಾದಿ ಕ್ರಮಗಳಿಂದ ದೇವತೆಗಳೂ ಕೂಡ ಆಶಾಪಾಶಕ್ಕೆ ಶಿಲುಕಿ ಸೀತೆಯನ್ನು ಕಾಮಿಸಿದ್ದಾರೆ, ಇನ್ನು ಮಿಕ್ಕವರು ಕಾಮಿಸುವುದು ಏನತಿಶಯ ? ಎಂದು ಭಗವದ್ಭಕ್ತರಿಗೆ ಭ್ರಮೆಯುಂಟಾದ್ದಲ್ಲಿ ಮಹಾ ಹಾನಿಯಾದೀತೆಂದುಭಾವಿಸಿ ಆಚಾರ್ಯರು ಈ ವಿಚಾರದಲ್ಲಿ ನಿಸ್ಸಂದೇಹವಾಗಿ ತತ್ವವನ್ನು ವಡೆದು ತಿಳಿಸ ಬೇಕೆಂದೇ ಈ ಶ್ಲೋಕವನ್ನು ಹೇಳಿರುವದು. ಇದರತಾತ್ಪರ್ಯವೇನೆಂದರೆ:—

ಜನಕನ ಡಂಗುರವನ್ನು ಕೇಳಿದೊಡನೆಯೇ ಸಮಸ್ತ ದೇವತೆಗಳೂ ಸೀತೆಯು ಲೋಕಮಾತೆ, ಅವಳನ್ನು ಸಾಕ್ಷಾನ್ನಾರಾಯಣನೇ ಪರಿಗ್ರಹಿಸು ವನು ಎಂದು ದೃಢವಾಗಿ ತಿಳಿದರು. ಅವರು ಕನ್ಯಾರ್ಥಿಗಳಾಗಿ ಆ ಸಭೆಗೆ ಬಂದವರಲ್ಲ. ಈ ರಮಾನಾರಾಯಣರ ಸ್ವರೂಪವನ್ನರಿಯದವರು ಮಾತ್ರ ಅರ್ಥಿಗಳಾಗಿ ಹೋಗಿದ್ದರು. ಅವರುಗಳು ಹೋಗಿಯೂ ಸಾರ್ಥಕವಾಗಲಿಲ್ಲ, ಜನಕನು ಹರಧನುಸ್ಸಿನ ಮಹಿಮೆಯನ್ನು ತಿಳಿಸುವುದಕ್ಕಾಗಿ ಮೇಲಿನ ೧ಲನೇ ಶ್ಲೋಕದಲ್ಲಿರುವಂತೆ ನದೇವದೈತ್ಯೋರಗ—ಎಂದು ದೇವತೆಗಳ ಹೆಸರನ್ನು ತೆಗೆದುಕೊಂಡಿದ್ದಾನೆ. ಇಷ್ಟು ಮಾತ್ರದಿಂದ ದೇವತೆಗಳಮೇಲೆ ಕನ್ಯಾರ್ಥಿ ತ್ವವನ್ನಾರೋಪಿಸುವುದು ನ್ಯಾಯವಲ್ಲ. ದೇವತಾ ಮಂಡಲಿಯವರು ಸ್ವಯಂ ವರವು ನಡೆದು ಶ್ರೀರಮಾನಾರಾಯಣರು ದಾಂಪತ್ಯವನ್ನಂಗೀಕರಿಸಿ ನಿಂತ ಮೇಲೆ ಅವರ ಸಂದರ್ಶನಕ್ಕೆ ಮಾತ್ರ ಬಂದು ನೂತನ ದಂಪತಿಗಳನ್ನು ನೋಡಿ ಆನಂದಪಟ್ಟರೆಂದು ಮುಖ್ಯಾಶಯವು.

ವಿಶೇಷಾರ್ಥ.—ಲೋಕದಲ್ಲಿ ಯಾವ ಕನ್ಯೆಯನ್ನು ಪರಿಗ್ರಹಿಸಬೇಕಾ ದರೂ ಕುಲಗೋತ್ರಗಳನ್ನು ಜಾತಕವನ್ನೂ ನೋಡಿ ಪರೀಕ್ಷಿಸಿ ಯುಕ್ತವಾದ ಸಂಬಂಧವನ್ನು ಬೆಳಸುವುದು ಧರ್ಮ. ಧರ್ಮಶಾಸ್ತ್ರಕಾರರೂ ಕೂಡ ಕನ್ಯಾ ವಿಚಾರದಲ್ಲಿ, ಬಂಧುತ್ವ ಬೆಳಸಬೇಕಾದರೆ ವಾವೆ ವರಸೆಗಳಲ್ಲಿ, ಆ ವಧೂ ಮಣಿಯು ವರನಿಗೆ ಅಕ್ಕ, ತಂಗಿ, ತಾಯಿ ವರಸೆಯವಳಾಗಬಾರದು, ಆ ವರಸೆಗಳ ಹೆಣ್ಣನ್ನು ಮಾಡಿಕೊಂಡಲ್ಲಿ ವರ್ಣಸಾಂಕರ್ಯವಾಗಿ ಇಹಪರಗಳ

ಲ್ಲಿ ಅಶ್ರೇಯಸ್ಸುಂಟಾಗುವುದು (ಅನರ್ಥ) ಎಂದು, "ಏನಕೇನಪ್ರಕಾರೇಣ ಸ್ವಸಾರಂಮಾತರಂ ವಿನಾ" ಎಂಬ ಪ್ರಮಾಣದಿಂದ ಧರ್ಮ ವಿಧಿಯನ್ನು ಹೇಳಿರುವರು. ಮಾನವರಂತೆ ದೇವತೆಗಳಲ್ಲಿಯೂ, ವಿಧ್ಯನುಸರಣವು ನ್ಯಾಯಪ್ರಾಪ್ತವಾದ್ದರಿಂದ ಈ ತತ್ವವನ್ನರಿತ ದೇವತೆಗಳು ಶ್ರೀಸೀತಾದೇವಿಯನ್ನು ಮಾತೃವೆಂದು ಸಂಪೂರ್ಣ ತಿಳಿದವರಾದ್ದರಿಂದ ಆಕೆಯನ್ನು ಬಯಸಿ ಬರಲಿಲ್ಲ. ಸ್ವಯಂವರಾನಂತರ ತಮ್ಮ ಮಾತಾಪಿತೃಗಳನ್ನ ನೋಡಿ ಸಂತೋಷಿಸೋಣವೆಂಬ ಭಾವದಿಂದ ಬಂದು ಶೇರಿದರೆಂಬುದನ್ನು ಸಕಾರಣವಾಗಿಯೂ ಸಮಂಜಸವಾಗಿಯೂಮಾನವರು ಭಾವಿಸಬೇಕು. ಈ ಶ್ಲೋಕವು ಆ ತತ್ವವನ್ನು ನಿರೂಪಿಸುತ್ತದೆ. ದೇವತೆಗಳಲ್ಲಿ ಮೂರು ಪಂಗಡಗಳಿವೆ. ಅವು ಯಾವುವೆಂದರೆ:—(೧)ವಿಧಿಯನ್ನು ನಿಯಮವಾಗಿ ಅನುಸರಿಸಿ ನಡೆಯುವುವು, (೨) ವಿಧಿಯನ್ನನುಸರಿಸುವ ನಿಯಮವಿಲ್ಲದ್ದು, (೩)ಸ್ವೇಚ್ಛಾನುಸಾರ ವಿಧಿಯನ್ನನುಸರಿಸಿದರೂ ಅನುಸರಿಸಬಹುದು, ಬಿಟ್ಟರೂ ಬಿಡಬಹುದು, ಹೀಗೆ ದೇವತಾ ಮಂಡಲಿಯಲ್ಲೂ ಅನೇಕ ತಾರತಮ್ಯಗಳುಂಟು, ಎಂಬುದನ್ನು ಭಕ್ತರು ನೆನಪಿನಲ್ಲಿಡಬೇಕು.

ಅವತಾರಿಕೆ:— ಶ್ರೀಸೀತಾಕಲ್ಯಾಣ ಮಹೋತ್ಸವ ದರ್ಶನವನ್ನು ಮಾಡಲು ಬಂದು ನೆರದಿದ್ದವರು ದೇವತೆಗಳು ಮಾತ್ರವಲ್ಲ, ಋಷಿಗಳೂ ರಾಜರುಗಳೂ ಕೂಡಾ ಬಂದಿದ್ದರೆಂದು ಹೇಳುತ್ತಾರೆ:—

**ಶ್ಲೋ॥ ಯಥಾಪುರಾಸಾಗರಜಾಸ್ವಯಂವರೇ ಸುಮಾನಸಾನಾಮಭವತ್ಸಮಾಗಮಃ। ತಥಾಹ್ಯಭೂತ್ಸರ್ವದಿವೌಕಸಾಂತದಾತಥಾಮುನೀನಾಂಸಹಭೂಭೃತಾಂಭುವಿ॥೩೫॥**

ಅರ್ಥ:—ಪುರಾ=ಪೂರ್ವದಲ್ಲಿ, ಸಾಗರಜಾ=ಸಮುದ್ರ ರಾಜನ ಮಗಳಾದ ಸಾಕ್ಷಾಲ್ಲಕ್ಷ್ಮೀದೇವಿಯ, ಸ್ವಯಂವರೇ=ವಿವಾಹ ಕಾಲದಲ್ಲಿ, ಸುಮಾನಸಾನಾಂ= (ಒಳ್ಳೇ ಮನಸ್ಸುಳ್ಳ) ದೇವತೆಗಳ, ಸಮಾಗಮಃ=ಮೇಳನವು, ಯಥಾ=ಯಾವ ರೀತಿಯಲ್ಲಿ, ಅಭವತ್=ಆಗಿತ್ತೋ, ತಥಾ=ಆ ರೀತಿಯಾಗಿ

ಭುವಿ=ಭೂ ಲೋಕದಲ್ಲಿ, ತದಾ=ಆ ಸೀತಾ ಸ್ವಯಂವರ ಕಾಲದಲ್ಲಿಯೂ, ಸರ್ವ=ಎಲ್ಲಾ, ದಿವೌಕಸಾಂ=ದೇವತೆಗಳ, ತಥಾ=ಮತ್ತೂ ಭೂಭೃತಾಂ ಸಹ=ರಾಜರುಗಳೊಡನೆ, ಮುನೀನಾಂ=ಮಹರ್ಷಿಗಳ, ಸಮಾಗಮಃ=ಸಮ್ಮೇಳನವು, ಅಭೂತ್=ಉಂಟಾಯಿತು,

ತಾತ್ಪರ್ಯ.—ಪೂರ್ವದಲ್ಲಿ ದೇವಾಸುರರು ಶೇರಿ ಸಮುದ್ರವನ್ನು ಮಥಿಸಲು ಸಾಕ್ಷಾದ್ರಮಾದೇವಿಯು ಅಲ್ಲಿ ಆವಿರ್ಭವಿಸಿದಳು. ಆಗ ನೆರದಿದ್ದ ಸಮಸ್ತ ದೇವತಾ ವರೇಣ್ಯನಾದ ಶ್ರೀಮನ್ನಾರಾಯಣನೇ ತನಗೆ ಅರ್ಹನೆಂದು ಪ್ರಕಟಿಸುತ್ತಾ ಲಕ್ಷ್ಮಿಯು ಸ್ವಾಮಿಯ ಕಂಠಕ್ಕೆ ಮಾಲೆಯನ್ನು ಸಮರ್ಪಿಸಿದ ವೇಳೆಯಲ್ಲಿ ಈ ದೇವತಾ ಮಂಡಲಿಯು ಹೇಗೆ ಆ ವಧೂವರರನ್ನು ಅಭಿನಂದಿಸಿ ಹರ್ಷಪಟ್ಟರೋ! ಅದರಂತೆ ಈಗಲೂ ಆ ದಂಪತಿಗಳೇ ಇವರೆಂಬ ಭಾವನೆಯನ್ನು ಪಡೆದ ಆ ದೇವತೆಗಳು ಹಿಂದಿನ ಮಹೋತ್ಸವವನ್ನು ನೆನಪಿಗೆ ತಂದುಕೊಂಡು ಈ ಮಹೋತ್ಸವವನ್ನು ಅನುಭವಿಸಿದರೆಂದು ತಾತ್ಪರ್ಯ, ಮತ್ತೂ ಆಗ ನಡೆದ ಲಕ್ಷ್ಮೀ ಸ್ವಯಂವರ ಕಾಲದಲ್ಲಿ ದೇವಾಸುರರ ಮಂಡಲಿಯು ಮಾತ್ರ ನೆರೆದಿತ್ತು, ಈಗಲಾದರೋ ಅನೇಕ ಭೂಪಾಲಕರೂ ಮತ್ತೂ ಭೂಸುರಾಗ್ರೇಸರರೆನಿಸಿದ ಋಷಿಗಳೂ ಸಹ ನೆರೆದು ರಮಾನಾರಾಯಣರ ವಿವಾಹ ಮಹೋತ್ಸವಕ್ಕೆ ನೆರವಾಗಿ ಆನಂದಿಸಿದರು.

ವಿಶೇಷಾರ್ಥ,—ಈ ಮೇಲಿನ ನಿರೂಪಣೆಯಿಂದ ವಿಮಾನಗಳಲ್ಲಿ ಬಂದು ಶೇರಿದ್ದ ದೇವತೆಗಳ ವಿಚಾರವು ಸ್ಪಷ್ಟವಾಯಿತು. ಆದರೆ, ಲಕ್ಷ್ಮಣ ಭರತ, ಶತೃಘ್ನರಾಗಿಯೂ ಋಷಿವರ್ಯರಾಗಿಯೂ ಅವತರಿಸಿದ್ದ ಮತ್ತೂ ಈ ಮಹೋತ್ಸವಕ್ಕೆ ಸಹಕಾರಿಗಳಾಗಲು ರಾಜ ಕುಲಗಳಲ್ಲಿ ಅವತರಿಸಿದ್ದ ದೇವತೆಗಳ ಸಮಾಗಮವು ಸಹಾ ಶ್ರೀಸೀತಾರಾಮರುಗಳ ಕಲ್ಯಾಣಮಹೋತ್ಸವದ ಸಮಯದಲ್ಲಿ ಉಂಟಾಗಿತ್ತೆಂದು ಭಾವಿಸಬಹುದು. ಏತಕ್ಕೆಂದರೆ ಶ್ರೀಲಕ್ಷ್ಮಣನು ಸಾಕ್ಷಾತ್ ಶೇಷದೇವನು, ಸ್ವಾಮಿಯು ಧನುರ್ಭಂಗ ಮಾಡಿದಾಗಲೂ ಜೊತೆಯಲ್ಲಿದ್ದು ವೀರ ಲಕ್ಷ್ಮಿಯಿಂದ ಶೋಭಿಸಿದ ಶ್ರೀರಾಮನನ್ನು ನೋಡಿ ಹರ್ಷಪಟ್ಟಿದ್ದನು, ವಿವಾಹವು ನಡೆದ ವೇಳೆಯಲ್ಲಿ ಆತನು ಮತ್ತಷ್ಟೂ ಹರ್ಷಕ್ಕೆ ಈಡಾದನು, ಆದ್ದರಿಂದಲೇ ಇವನಲ್ಲಿ ನರಾಂಶವಿ

ಸರ್ವರೂಪಗಳಿಗೂ, ಅಭೇದಃ=ಭೇದರಾಹಿತ್ಯವು, ಸದೈವಹಿ=ಸರ್ವಕಾಲಗಳಲ್ಲಿಯೂ, ಜೀವಭೇದಃ-ಜೀವರುಗಳಿಂದ ಭೇದವು, ತಥಾ=ಹಾಗೆಯೇ, ಸೂತ್ರೇಷು-ಬ್ರಹ್ಮಸೂತ್ರಗಳಲ್ಲಿ, ವಿಷ್ಣೋಃ=ಹರಿಗೆ, ಸರ್ವವೇದೇಡ್ಯತಾ=ಸರ್ವ ವೇದ ಪ್ರತಿಪಾದ್ಯತ್ವವು, ಮುಕ್ತಾನಾಂಚ=ಮುಕ್ತಿಯಲ್ಲಿಯೂ ಕೂಡ ತಾರತಮ್ಯಂ=ತಾರತಮ್ಯಭಾವವು, ತಥಾ-ಹಾಗೆ, ವಿದ್ಯಯಾ=ಜ್ಞಾನದಿಂದಲೇ, ವಿಮುಕ್ತಿಃ-ಮೋಕ್ಷವೂ ಕೂಡ ಆಗುತ್ತದೆಂದು ತಿಳಿಯಬೇಕು. ತಸ್ಮಾತ್=ಆದಕಾರಣದಿಂದ, ಏತತ್-ಈ ವಿಷಯಗಳಿಗೆ, ವಿರುದ್ಧಂ-ವಿರುದ್ಧವಾಗಿ ಹೇಳುವುದು, ಯತ್=ಯಾವುದೋ, ತತ್=ಅವುಗಳನ್ನು, ಮೋಹಾರ್ಥಂ-ಅಜ್ಞಜನರನ್ನು ಮೋಹಗೊಳಿಸುವುದಕ್ಕಾಗಿ, ಉದಾಹೃತಂ=ಇತರ ಪುರಾಣಗಳು ಮತ್ತು ಪಾಶುಪತಾದ್ಯಾಗಮಗಳೂ ಹೇಳಿವೆ. ತಸ್ಮಾತ್-ಆದ ಕಾರಣದಿಂದ, ಯೇಯೇ-ಯಾವಯಾವ, ಗುಣಾಃ=ಗುಣಗಳು, ಅಣುತ್ವ=ಮಹತ್ತ್ವಾದಿಗಳೂ, ವಿಷ್ಣೋಃ=ಹರಿಗೆ, ಉಕ್ತಾಃ=ವೇದಗಳಲ್ಲಿ ಹೇಳಿವೆಯೋ ಸರ್ವೇ-ಸಮಸ್ತವಾದ; ತೇಏವತು-ಅವುಗಳೇ, ಗ್ರಾಹ್ಯಾಃ=ಸ್ವೀಕಾರ್ಯಗಳು ಇತ್ಯಾದಿ=ಇವುಗಳೇ ಮೊದಲಾದ ಸಂಗತಿಗಳು, ಭಗವತಾಃ-ವ್ಯಾಸರೂಪನಾದ ಹರಿಯಿಂದ, ಭವಿಷ್ಯತ್ಪರ್ವಣಿ=ಭವಿಷ್ಯತ್ಪರ್ವವೆಂಬ ಗ್ರಂಥದಲ್ಲಿ, ಸ್ಪಷ್ಟಂ=ಚೆನ್ನಾಗಿ, ಉಕ್ತಂ=ಹೇಳಲ್ಪಟ್ಟಿರುತ್ತದೆ.

ತಾತ್ಪರ್ಯ.—ಬ್ರಹ್ಮಸೂತ್ರದಲ್ಲಿ ನಿರ್ಣಯವಾಗಿ ಹೇಳಿದೆ ಎಂಬುವ ಅರ್ಥವನ್ನು ಪೂರ್ತಿಮಾಡುತ್ತಾರೆ. ಆದಕಾರಣದಿಂದ ಸೂತ್ರಗಳ ಅರ್ಥವನ್ನೇ ಗ್ರಹಿಸಿ; ಸಮಸ್ತ ನಿರ್ಣಯವನ್ನು ಮಾಡಬೇಕು. ಆ ನಿರ್ಣಯಗಳು ಯಾವುವೆಂದರೆ.—ಹರಿಗೆ ಸರ್ವದೋಷ ವಿಹೀನತ್ವವು, ಈ ಸಂಗತಿಯು ಸೂತ್ರದ ಎರಡನೆಯ ಅಧ್ಯಾಯದಲ್ಲಿ ವ್ಯಕ್ತವಾಗುವುದು. ಸರ್ವಗುಣ ಪೂರ್ಣತ್ವವು ಪ್ರಥಮಾಧ್ಯಾಯದಿಂದ ವ್ಯಕ್ತವಾಗುವುದು. ಹರಿಗೆ ತನ್ನ ಸರ್ವರೂಪಗಳಲ್ಲೂ ಅಭೇದವು. "ನಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರಹಿ" ಎಂಬ ಸೂತ್ರದಲ್ಲಿ ಹೇಳಿರುತ್ತೆ. ಯಾವಾಗಲೂ ಜೀವರುಗಳಿಂದ ಭೇದವು ಬಹುಕಡೆಯಲ್ಲಿ ಹೇಳುತ್ತೆ. (೧) ಭೇದವ್ಯಪದೇಶಾಚ್ಚಾನ್ಯಃ (೨) ಶಾರೀರಶ್ಚೋಭಯೇಪಿಹಿ. (೩) ಭೇದೇನೈತಮುದೀಯತೆ. ಇವೇ ಮೊದಲಾದ ಸೂತ್ರಗಳು ಹೇಳುತ್ತವೆ. ಸರ್ವ ಸದಾಗಮಪ್ರತಿಪಾದ್ಯ

ಅರ್ಥ.— ಯೇನ=ಯಾವ ನಾರಾಯಣನಿಂದ, ಬ್ರಹ್ಮಾದಯೋದೇವಾಃ=ಬ್ರಹ್ಮದೇವರೇ ಮೊದಲಾದ ದೇವತೆಗಳು, ಸೃಷ್ಟಾಃ = ಸೃಷ್ಟಿರೂಪ ದೇಹವುಳ್ಳವರಾದರೋ, ಯೇನ-ಯಾವ ನಾರಾಯಣನಿಂದ, ದಾನವಾಃ-ದೈತ್ಯರು, ನಿಹತಾಃ=ಸಂಹೃತರಾದರೋ, ತಸ್ಮೈ=ಅಂಥ, ಶಾರ್ಙ್ಗಧಾರಿಣೇ - ಶಾರ್ಙ್ಗಧನುರ್ಧಾರಿಯಾದಂಥ, ದೇವಾದಿದೇವಾಯ=ಅಶೇಷ ದೇವತೆಗಳಿಗೆ ಸ್ವಾಮಿಯಾದ ನಾರಾಯಣನಿಗೆ, ನಮಃ=ನಮಸ್ಕಾರಮಾಡುತ್ತೇನೆ.

ತಾತ್ಪರ್ಯ.— ಹಿಂದೆ ಜಗದೇಕನಾಥಂ ಎಂಬುವ ವಿಶೇಷಣ ಹೇಳಿದ್ದನ್ನ ವಿಸ್ತಾರಪಡಿಸುವುದಕ್ಕಾಗಿ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಕರ್ತೃವಾದರಿಂದ ಸ್ವಾಮಿ. ಅಂಥ ಸರ್ವಸ್ವಾಮಿಯಾದ ದೇವರಿಗೆ ನಮಸ್ಕಾರ ಮಾಡುತ್ತೇನೆಂದು ಹೇಳುತ್ತಾರೆ.

ವಿಶೇಷಾರ್ಥ.— ಮೋಕ್ಷಾಪೇಕ್ಷೆಯುಳ್ಳ ಜೀವರಿಗೆ ಹಿಂದೆ ಹೇಳಿದ ಪರಮಾತ್ಮನ ಸತ್, ಚಿತ್, ಆನಂದ, ಆತ್ಮ ಎಂಬ ಉಪಾಸನೆ ಹೇಗೆ ಮೋಕ್ಷಸಾಧಕವೋ ಹಾಗೆಯೇ ಸೃಷ್ಟ್ಯಾದ್ಯಷ್ಟಕರ್ತೃತ್ವ ಜ್ಞಾನವೂ ಅತ್ಯಾವಶ್ಯಕವು. ಮತ್ತು ಶ್ರೀನಾರಾಯಣನೇ ಸೃಷ್ಟಿಕರ್ತನೆಂತಲೂ ತಿಳಿಯಬೇಕೆಂದು ಹೇಳಿರುತ್ತಾರೆ.

ಅವತಾರಿಕೆ.— ಈ ಶ್ಲೋಕದಲ್ಲಿ ಹೇಳಿರುವ ಸೃಷ್ಟಿ ಮಾಡೋಣ ಸಂಹಾರ ಮಾಡೋಣ ಈ ಎರಡೂ ದೇಹಯೋಗ, ದೇಹವಿಯೋಗ ಪರವು ಅಲ್ಲವು. ವಿಶೇಷಾರ್ಥವುಳ್ಳವುಗಳೆಂದು ವ್ಯಾಖ್ಯಾನ ಮಾಡುತ್ತಾರೆ.—

**ಶ್ಲೋಕ ॥ ಸ್ರಷ್ಟೃತ್ವಂದೇವಾನಾಂ ಮುಕ್ತಿಸ್ರಷ್ಟೃತ್ವಮುಚ್ಯತೇನಾನ್ಯತ್ ॥ ಉತ್ಪತ್ತಿರ್ದೈತ್ಯಾನಾಮಪಿಯಸ್ಮಾತ್ ಸಂಮಿತಾ ವಿಶೇಷೋಽಯಂ ॥೬॥**

ಅರ್ಥ.— ದೇವಾನಾಂ-ದೇವತೆಗಳನ್ನು, ಸ್ರಷ್ಟೃತ್ವಂ-ಸೃಷ್ಟಿಮಾಡುವುದು, ಮುಕ್ತಿಸ್ರಷ್ಟೃತ್ವಂ=ಸ್ವರೂಪಾನಂದಾವಿರ್ಭಾವ ರೂಪ ಮೋಕ್ಷವನ್ನುಂಟುಮಾಡುವುದು. (ಎಂದು) ಉಚ್ಯತೇ-ಹೇಳಲ್ಪಡುತ್ತದೆ. ಅನ್ಯತ್=ಬೇರೆಯಾದ ದೇಹ ಸಂಬಂಧ ರೂಪ-ಉತ್ಪತ್ತಿಯು, ನ-ಅಲ್ಲ. ಯ

ಸ್ಯಾತ್- ಯಾವ ಕಾರಣದಿಂದ, ದೈತ್ಯಾನಾಮುಹಿ- ದೈತ್ಯರನ್ನೂ, ಉತ್ಪತ್ತಿಃ ದೇಹಸಂಯೋಗ ರೂಪವಾದ ಉತ್ಪತ್ತಿಯು, ಸಂಮಿತಾ = ದೇವತೆಗಳಂತೆ ಸಮಾನವಾದುದು. ಅಯಂ=ಇದು, ವಿಶೇಷಃ= ಭೇದಕವು.

ತಾತ್ಪರ್ಯ.—ದೇವತೆಗಳಿಗೂ ದೈತ್ಯರಿಗೂ ದೇವರು ಶರೀರ ಸಂಬಂಧರೂಪವಾದ ಉತ್ಪತ್ತಿಯನ್ನುಂಟು ಮಾಡುವುದು ಸಮಾನವಾಗಿದೆ. ಹೀಗಿರಲು ಹಿಂದಿನ ಶ್ಲೋಕದಲ್ಲಿ ದೇವತೆಗಳ ಸೃಷ್ಟ್ಯೃತ್ವ ರೂಪ ವಿಶೇಷ ಧರ್ಮವನ್ನು ದೇವರಲ್ಲಿ ಹೇಳಿರುವುದರಭಿಪ್ರಾಯವೇನೆಂದರೆ, ದೇವತೆಗಳಿಗೆ ಸ್ವರೂಪಾನಂದಾವಿರ್ಭಾವರೂಪ ಮೋಕ್ಷವನ್ನು ಕೊಡುವುದೇ ಶ್ರೀಪರಮಾತ್ಮನಲ್ಲಿರುವ ದೇವಕರ್ಮಕ ಸೃಷ್ಟ್ಯೃತ್ವ ರೂಪ ಧರ್ಮವು.

ಅವತಾರಿಕೆ.—ದೇವತೆಗಳಿಗೆ ಸೃಷ್ಟಿ ಎಂದರೆ ಮುಕ್ತಿ ಕೊಡುವುದೆಂದರ್ಥ ಹೇಳಿದರು. ಈಗ ದೈತ್ಯರ ಹನನವೂ ಕೂಡ ದೇಹವಿಯೋಗರೂಪ ಸಂಹಾರವಲ್ಲ. ಆದರೆ ತಮಃ ಪ್ರಾಪ್ತಿ ರೂಪವು ಎಂದು ಈ ಶ್ಲೋಕದಲ್ಲಿ ನಿರೂಪಿಸುತ್ತಾರೆ —

**ಶ್ಲೋಕ ॥ ಅಥಚದೈತ್ಯಹತಿಸ್ತಮಸಿಸ್ಥಿರಾ ನಿಯತಿಸಂಸ್ಥಿತಿರೇವನಚಾನ್ಯಥಾ ।**
**ತನುವಿಭಾಗಕೃತಿಃ ಸಕಲೇಷ್ವಿಯಂನಹಿವಿಶೇಷಕೃತಾ ಸುರದೈತ್ಯಗಾ ॥**

ಅರ್ಥ.—ಅಥ- ದೇವ ಸೃಷ್ಟ್ಯೃತ್ವವು ಅವರಿಗೆ ಮೋಕ್ಷಕೊಡುವುದೆಂದರ್ಥ ಹೇಳಿದನಂತರದಲ್ಲಿ, ತಮಸಿ=ತಮಸ್ಸಿನಲ್ಲಿ, ಸ್ಥಿರಾ=ಸ್ಥಿರವಾಗಿ, ನಿಯತಿಸಂಸ್ಥಿತಿರೇವ=ಹಿಂದಕ್ಕೆ ಬಾರದೆ ಸರ್ವದಾ ವಾಸಿಸುವಂತೆ ಮಾಡುವುದೇ, ದೈತ್ಯಹತಿಃ - ದೈತ್ಯರ ಸಂಹಾರವೆಂಬುವುದು, ಅನ್ಯಥಾ = ದೇಹವಿಯೋಗ ರೂಪ ಸಂಹಾರವೆಂಬ ಬೇರೆ ಅರ್ಥವು, ನ=ಅಲ್ಲ. ಇಯಂ= ಇಂಥ, ತನುವಿಭಾಗಕೃತಿಃ = ದೇಹ ವಿಯೋಗವನ್ನುಂಟುಮಾಡುವುದು, ಸಕಲೇಷು- ಸರ್ವ ದೇವದೈತ್ಯ ಮಾನವರಲ್ಲಿಯೂ, ವರ್ತತೇಹಿ- ಇರುವುದಷ್ಟೆ, ಸುರದೈತ್ಯಗಾ— ದೇವದೈತ್ಯರುಗಳಲ್ಲಿ ಇರುವ ಪ್ರೀತಿ, ಇಯಂ=ಈ ಹನನವು, ವಿಶೇಷಕೃತಾ=ಪ್ರೀತಿ ದ್ವೇಷರೂಪವಾದ ವಿಶೇಷಕಾರಣವುಳ್ಳದ್ದು. ನಭವತಿ- ಆಗುವುದಿಲ್ಲ, ಆದುದರಿಂದ ದೇವಸೃತಿಯೆಂದರೆ ದೇವತೆಗಳಿಗೆ ಮೊ

ದ್ಧಿಯನ್ನು ಪ್ರಕಾಶಪಡಿಸಬೇಕು. ಹೀಗೆ ಮಾಡುವುದು ತ್ರಿವಿಧಜೀವರುಗಳ ಸೃಷ್ಟಿಗೆ ಅನುಕೂಲವಾಗುತ್ತೆ. ಇವೇ ಮೊದಲಾದ ವಿಷಯುಗಳು ವರಾಹಪುರಾಣದಲ್ಲಿಯೂ, ಬ್ರಹ್ಮಾಂಡಪುರಾಣದಲ್ಲಿಯೂ ಹೇಳಿರುತ್ತೆ. ಹರಿಯ ಗುಣಗಳು ಆತನ ಸಹಸ್ರಶೀರ್ಷಾ ಪುರುಷೇತಿ ಆಕಾರಗಳೂ, ಆತನ ದೇಹವು ಚಿದಾನಂದಾತ್ಮಕವಾದದ್ದು ಮತ್ತು ನಿರ್ದೋಷವಾದದ್ದು ಎಂಬ ಸಂಗತಿಗಳೂ, ಮುಕ್ತಿಯಲ್ಲಿಯೂ ತಾರತಮ್ಯವು ಇದೆ ಎಂಬುವ ವಿಷಯವೂ ಮೋಹಪರಿಹಾರಾರ್ಥವಾಗಿ ಹೇಳಿದೆ ಎಂದು ತಿಳಿಯಬೇಕು.

**ಶ್ಲೋಕ || ಸ್ಕಾಂದೇಪ್ಯುಕ್ತಂ ಶಿವೇನೈವ ಷಣ್ಮುಖಾಯೈವ ಸಾದರಂ | ಶಿವಶಾಸ್ತ್ರೇಪಿ ಗ್ರಾಹ್ಯಂ ಭಗವಚ್ಛಾಸ್ತ್ರಯೋಗಿ ಯತ್ ||೫೨||**

**ಪರಮೋ ವಿಷ್ಣುರೇವೈಕಸ್ತಜ್ಞಾನಂ ಮುಕ್ತಿಸಾಧನಂ | ಶಾಸ್ತ್ರಾಣಾಂ ನಿರ್ಣಯಸ್ತ್ವೇಷಸ್ತದನ್ಯನ್ಮೋಹನಾಯ ಹಿ ||೫೩||**

**ಜ್ಞಾನಂ ವಿನಾ ತು ಯಾ ಮುಕ್ತಿಃ ಸಾಮ್ಯಂ ಚ ಮಮ ವಿಷ್ಣುನಾ | ತೀರ್ಥಾದಿಮಾತ್ರತ್ ಜ್ಞಾನಂ ಮಹಾಧಿಕ್ಯಂ ಭವಿಷ್ಣುತಃ ||೫೪||**

**ಅಭೇದಶ್ಚಾಸ್ಮದಾದೀನಾಂ ಮುಕ್ತಾನಾಂ ಹರಿಣಾ ತಥಾ | ಇತ್ಯಾದಿಸರ್ವಂ ಮೋಹಾಯ ಕಥ್ಯತೇ ಪುತ್ರ ನಾನ್ಯಥಾ ||೫೫||**

ಅರ್ಥ.— ಸ್ಕಾಂದೇಪಿ=ಸ್ಕಾಂದಪುರಾಣದಲ್ಲಿಯೂ ಕೂಡ, ಶಿವೇನೈವ ತಂದೆಯಾದ ರುದ್ರನಿಂದಲೇ, ಷಣ್ಮುಖಾಯೈವ=ಜ್ಞಾನಕ್ಕೆ ಯೋಗ್ಯನಾದ ಮಗನಾದ ಷಣ್ಮುಖನಿಗೋಸ್ಕರ, ಸಾದರಂ=ವಿಶ್ವಾಸಪೂರ್ವಕವಾಗಿ (ಮೋಹವಿಲ್ಲದ ಹಾಗೆ) ಉಕ್ತಂ=ಹೇಳಿರುತ್ತೆ. ಶಿವಶಾಸ್ತ್ರೇಪಿ=ಶಿವಪುರಾಣದಲ್ಲಿ ಹೇಳಿದ, ಯತ್=ಯಾವ ವಿಷಯವು, ಭಗವಚ್ಛಾಸ್ತ್ರಯೋಗಿ=ಭಗವತ್-ನಾರಾಯಣನ, ಶಾಸ್ತ್ರ=ಋಗಾದಿಶಾಸ್ತ್ರಗಳಿಗೆ, ಯೋಗಿ-ಅನುಕೂಲವಿರುತ್ತೋ, ತತ್-ಅದನ್ನು, ಗ್ರಾಹ್ಯಂ-ಸ್ವೀಕಾರ್ಯವು, ಉಪದೇಶಕ್ರಮವೇನೆಂದರೆ.—ವಿಷ್ಣುಃ=ಹರಿಯು, ಏಕಏವ=ಒಬ್ಬನೇ, ಪರಮಃ-ಸರ್ವೋತ್ತಮನು, ತತ್-ಅವನ, ಜ್ಞಾನ=ತಿಳಿಯುವಿಕೆಯು, ಮುಕ್ತಿಸಾಧನ=ಮುಕ್ತಿಗೆ ಸಾಧನವು, ಏಷಃ = ಈ ಸಂಗತಿಯು, (ವಿಷಯವು) ಸರ್ವ ಶಾಸ್ತ್ರ

ಇವನು ನಿಯಾಮಕನು, ನಾವು ನಿಯಮ್ಯರು. ನಾವು ನಮ್ಮ ಕರ್ತವ್ಯವನ್ನು ನಡಿಸಬೇಕು. ನಾವು ಕೊಡತಕ್ಕ ವಸ್ತುಗಳಿಂದ ಪೂರ್ಣ ಸ್ವತಂತ್ರನಾಗಿಯೂ ಪೂರ್ಣಕಾಮನಾಗಿಯೂ ಇರುವ ಪ್ರಭುವಿಗೆ ಆಗತಕ್ಕದ್ದೇನು ? ಎಂಬೀ ಭಾವನೆಯುಳ್ಳ ಜನಕನು ಕರ್ತವ್ಯಕ್ಕಾಗಿ ವರಭೂಷಣ ಬಳುವಳಿಗಳನ್ನು ಕೊಟ್ಟನೇ ವಿನಾ ತನ್ನ ದ್ರವ್ಯದಿಂದಲೇ ಪುಷ್ಟಿಗೊಳ್ಳಲಿ ಎಂಬ ಭಾವನೆಯಿಂದಲ್ಲವೆಂದು ಆಶಯ.

ಅವತಾರಿಕೆ.—ಈ ರೀತಿಯಲ್ಲಿ ಶ್ರೀ ಸೀತಾ ಕಲ್ಯಾಣ ಮಹೋತ್ಸವವು ನೆರವೇರಿದ ಬಳಿಕ ಜನಕನು, ತನ್ನ ಔರಸ ಪುತ್ರಿಯಾದ ಊರ್ಮಿಳೆ ಮೊದಲಾದ ಕನ್ನೆಯರನ್ನು, ಲಕ್ಷ್ಮಣ ಭರತ ಶತೃಜ್ಞರುಗಳಿಗೆ ಕೊಟ್ಟು ವಿವಾಹೋತ್ಸವವನ್ನು ಬೆಳೆಯಿಸಿದನೆಂದು ಹೇಳಲು ಮಿಕ್ಕ ಅರ್ಧ ಶ್ಲೋಕವನ್ನು ಆರಂಭಿಸುವರು :—

**ಶ್ಲೋ || ದದೌಚ ಕನ್ಯಾತ್ರಯ ಮುತ್ತಮಂ ಮುದಾತದಾಸರಾಮಾವರಜೇಭ್ಯಏವ ||೩೮||**

ಅರ್ಥ.—೩೮ನೇ ಶ್ಲೋಕದ ಅರ್ಥವನ್ನು ನೋಡಿ.

ತಾತ್ಪರ್ಯ.—ಮೇಲಿನ ಅವತಾರಿಕೆಯಲ್ಲಿ ಹೇಳಿದಂತೆ ಜನಕನು ಗುಣೈಕ ಪಕ್ಷಪಾತಿಯಾದುದರಿಂದ, ಶ್ರೀರಾಮನ ಸಂಗಡ ಹುಟ್ಟಿ ಬೆಳೆದಿರುವ ಪರಸ್ಪರ ಸಮಾನವಾದ ಗುಣಾತಿಶಯಗಳುಳ್ಳ ಲಕ್ಷ್ಮಣ, ಭರತ, ಶತೃಘ್ನರುಗಳಿಗೆ ತನ್ನ ಸ್ವಂತ ಮಗಳಾದ ಊರ್ಮಿಳೆಯನ್ನೂ ತನ್ನ ತಮ್ಮ ಕುಶಧ್ವಜನ ಪುತ್ರಿಯರಾದ ಮಾಂಡವೀ ಶೃತಕೀರ್ತಿಯರನ್ನೂ ಕೊಟ್ಟು ಬಹು ಸಂಭ್ರಮದಿಂದ ವಿವಾಹಗಳನ್ನು ನಡಿಸಿದನೆಂದು ತಾತ್ಪರ್ಯ.

ಅವತಾರಿಕೆ.—ಈ ರೀತಿಯಲ್ಲಿ ಶ್ರೀ ಸೀತಾ ಕಲ್ಯಾಣ ಮಹೋತ್ಸವಕ್ಕಾಗಿ ಬಂದಿದ್ದ ಮಹಾ ಜನರೆಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಸುಖವಾಗಿ ತೆರಳಿದರೆಂಬಂಶವನ್ನು ಈ ಶ್ಲೋಕವು ತಿಳಿಸುತ್ತದೆ :—

**ಶ್ಲೋ|| ಮಹೋತ್ಸವಂತಂತ್ವನು ಭೂಯದೇವತಾ ನರಾಶ್ಚ ಸರ್ವೇಪ್ರಿಯಯುರ್ಯಥಾಗತಂ | ಪಿತಾಚರಾಮಸ್ಯ ಸುತೈಃ ಸಮನ್ವಿತೋಯಯಾವಯೋಧ್ಯಾಂ ಸ್ವಪುರೀಂಮುದಾತತಃ ||೩೯||**

ಅರ್ಥ.—ದೇವತಾಃ=ದೇವತೆಗಳು, ಚ=ಮತ್ತೂ, ನರಾಃ=ಮಾನವರು, ಸರ್ವೆ=ಎಲ್ಲರೂ, ತಂಮಹೋತ್ಸವಂ=ಆ ಸೀತಾ ಕಲ್ಯಾಣ ಮಹೋತ್ಸವವನ್ನು, ಅನುಭೂಯ=ಮಾಡಿಕೊಂಡು, ಯಥಾಗತಂ = ಬರುವಾಗ ಯಾವ ಉತ್ಸಾಹವಿತ್ತೋ ಅದೇ ಉತ್ಸಾಹದೊಡನೆ, ಪ್ರಯಯು = ತಮ್ಮ ತಮ್ಮ ಸ್ಥಳಗಳಿಗೆ ಪ್ರಯಾಣ ಮಾಡಿದರು, ರಾಮಸ್ಯ=ಶ್ರೀರಾಮನ, ಪಿತಾ=ತಂದೆಯಾದ, ಸಃ=ಆ ದಶರಥನೂ, ತೈಃ=ತನ್ನ ಮಕ್ಕಳುಗಳಿಂದ, ಸಮನ್ವಿತ=ಒಡಗೂಡಿ, ತತಃ=ಮಿಥಿಲಾಪುರಿಯಿಂದ, ಸ್ವಪುರೀಂ = ತನ್ನ ರಾಜಧಾನಿಯಾದ, ಅಯೋಧ್ಯಾಂ=ಅಯೋಧ್ಯಾ ಪಟ್ಟಣವನ್ನು ಕುರಿತು, ಮುದಾ=ಸಂತೋಷದಿಂದ, ಯಯೌ=ಹೊರಟನು.

ತಾತ್ಪರ್ಯ.—ಹೀಗೆ ಶ್ರೀ ಸೀತಾರಾಮರುಗಳ ಸ್ವಯಂವರ ಮಹೋತ್ಸವ ದರ್ಶನಾನಂದವನ್ನನುಭವಿಸಿದ ಬಳಿಕ ಅಲ್ಲಿ ನೆರದಿದ್ದ ದೇವತೆಗಳೂ, ಮಾನವರೂ ಮೊದಲಾದ ಎಲ್ಲರೂ ತಂತಮ್ಮ ಸ್ಥಳಗಳಿಗೆ ಆನಂದಭರಿತರಾಗಿ ಪ್ರಯಾಣ ಮಾಡಿದರು. ಬಳಿಕ ದಶರಥನು ಜನಕನ ಅನುಮತಿಯನ್ನು ಪಡೆದು ತನ್ನ ಪುತ್ರರುಗಳಿಂದೊಡಗೂಡಿ ಸಂತೋಷದಿಂದ ಅಯೋಧ್ಯಾ ನಗರವನ್ನು ಕುರಿತು ಪ್ರಯಾಣ ಮಾಡಿದನು.

ಅವತಾರಿಕೆ.—ಮೇಲೆ ಹೇಳಿದಂತೆ ದಶರಥನು ವಿವಾಹಿತರಾದ ತನ್ನ ಮಕ್ಕಳುಗಳಿಂದೊಡಗೂಡಿ ಸಪರಿವಾರನಾಗಿ ಮಿಥಿಲೆಯಿಂದ ಅಯೋಧ್ಯೆಗೆ ಹೋಗುತ್ತಾ ಮಧ್ಯ ಮಾರ್ಗದಲ್ಲಿ, ಶ್ರೀಪರಶುರಾಮದೇವರನ್ನು ಕಂಡ ರೀತಿಯನ್ನು ಈ ಶ್ಲೋಕವು ವಿವರಿಸುತ್ತದೆ :—

**ಶ್ಲೋಕ ॥ ತದಂತರೇಸೋಥದದರ್ಶಭಾರ್ಗವಂ ।ಸಹಸ್ರಲಕ್ಷಾಮಿತಭಾನು ದೀಧಿತಿಂ ।। ವಿಭಾಸಮಾನಂನಿಜರಶ್ಮಿಮಂಡಲೇ ಧನುರ್ಧರಂ ದೀಪ್ತಪರಶ್ವಧಾಯುಧಂ ॥೪೦॥**

ಅರ್ಥ.—ಅಥ=ಹೀಗೆ ಪ್ರಯಾಣ ಮಾಡುತ್ತಿರುವಾಗ, ತದಂತರೆ=ಈ ಮಧ್ಯದಲ್ಲಿ, (ಮಿಥಿಲೆಗೂ, ಅಯೋಧ್ಯೆಗೂ ಮಧ್ಯದಲ್ಲಿ) ಸಃ=ದಶರಥನು, ಸಹಸ್ರ=ಸಾವಿರ, ಲಕ್ಷ=ನೂರುಸಾವಿರ, ಅಮಿತ=ಎಣಿಕೆ ಇಲ್ಲದ, ಭಾನು=ಸೂರ್ಯರಂತೆ, ದೀಧಿತಿಂ=ತೇಜಸ್ಸುಳ್ಳ, ನಿಜ=ಸ್ವಾಭಾವಿಕವಾದ, ರಶ್ಮಿ=ಕಿರ

ಣಗಳ, ಮಂಡಲೀ=ರಾಶಿಯಲ್ಲಿ, ವಿಭಾಸಮಾನಂ=ವಿಶೇಷವಾಗಿ ಪ್ರಕಾಶಿಸುತ್ತಿರುವ; ಧನುಃ=ಶಾರ್ಙವೆಂಬ ಧನುಸ್ಸನ್ನು, ಧರಂ=ಹಿಡಿದಿರುವ; ದೀಪ್ತ=ಬೆಳಗುತ್ತಿರುವ, ಪರಶ್ವಧ=ಕೊಡಲಿಯೆಂಬ, ಆಯುಧಂ= ಆಯುಧವುಳ್ಳ; ಭಾರ್ಗವಂ = ಭೃಗು ವಂಶದಲ್ಲಿ ಅವತರಿಸಿರುವ ಶ್ರೀ ಪರಶುರಾಮರನ್ನು, ದದರ್ಶ=ನೋಡಿದನು.

ತಾತ್ಪರ್ಯ.—ದಶರಥ ಮಹಾರಾಯನು, ಮಿಥಿಲೆಗೂ, ಅಯೋಧ್ಯೆಗೂ ಮಧ್ಯ ಮಾರ್ಗದಲ್ಲಿ, ಸಾವಿರ ಲಕ್ಷ ಅಸಂಖ್ಯಾತ (ಎಣಿಕೆ ಇಲ್ಲದ) ಸೂರ್ಯರ ತೇಜಸ್ಸಿನಿಂದ ಬೆಳಗುತ್ತಿರುವ ಮತ್ತು ಸ್ವಭಾವಸಿದ್ಧವಾದ ದಿವ್ಯ ಜ್ಞಾನ ಕಿರಣಗಳ ಮಂಡಲಿಯಲ್ಲಿ ಶೋಭಿಸುತ್ತಿರುವ ಶಾರ್ಙವೆಂಬ ಧನುಸ್ಸು ಮತ್ತು ಹೊಳೆಯುತ್ತಿರುವ ಅಗಾಧವಾದ ಕೊಡಲಿ ಎಂಬಾಯುಧವನ್ನು ಧರಿಸಿರುವ ಭೃಗು ವಂಶಾಲಂಕಾರರಾದ ಶ್ರೀ ಪರಶುರಾಮರನ್ನು ಕಂಡನು.

ವಿಶೇಷಾರ್ಥ.—ಹಿಂದೆ ವಿಶ್ವಾಮಿತ್ರರ ಜನ್ಮ ವೃತ್ತಾಂತವನ್ನು ತಿಳಿಸುವಾಗ, ಅವರು ಹುಟ್ಟಿನಲ್ಲಿ ಕ್ಷತ್ರಿಯರಾದರೂ ಬ್ರಹ್ಮ ತೇಜಸ್ಸಿನಿಂದ ಬೆಳಗಲು ಕಾರಣವನ್ನು ಹೇಳಲಾಗಿದೆ. ಅದರಂತೆ ಜನ್ಮದಲ್ಲಿ ಬ್ರಾಹ್ಮಣರಾದರೂ ಕ್ಷಾತ್ರ ತೇಜಸ್ಸಿನಿಂದ ಮೆರೆಯುವ ಶ್ರೀ ಪರಶುರಾಮರ್ರು, ಇವರ ಪಿತಾಮಹಿಯಾದ ಸತ್ಯವತಿಯೂ ಆಕೆಯ ತಾಯಿಯೂ ಮಾಡಿಕೊಂಡ ಚರುವು ನಿಯಮದ ಫಲವಾಗಿ ಕುಲಪತಿಗಳಾದ ಭೃಗು ಮಹರ್ಷಿಗಳ ವಾಕ್ಯದಂತೆ ಕ್ಷತ್ರ ವೃತ್ತಿಯನ್ನವಲಂಬಿಸಬೇಕಾಗಿ ಬಂದ ರೀತಿಯನ್ನು ಇಲ್ಲಿ ಹೇಳಲಾಗಿದೆ. ಇಂಥಾ ಪರಶುರಾಮರು ಲೋಕ ಹಿತಾರ್ಥವಾಗಿ ದುಷ್ಟ ಕ್ಷತ್ರಿಯರನ್ನು ನಿಗ್ರಹಿಸಲೋಸುಗ ಬ್ರಹ್ಮಾದಿಗಳ ಪ್ರಾರ್ಥನೆಯಂತೆ ಅವತರಿಸಿದ ಸಾಕ್ಷಾನ್ನಾರಾಯಣನು. ಇವರ ಮಹಿಮೆಯು ಇವರನ್ನು ದಶರಥನು ಕಂಡಾಗ ಹೇಗಿದ್ದಿತೆಂದು ವರ್ಣಿಸುವುದರ ಮೂಲಕ ಭಗವದ್ದರ್ಶನವು ಕೂಡ ನೋಡತಕ್ಕವರ ಯೋಗ್ಯತೆಗೆ ತಕ್ಕಂತೆ ಚಿತ್ರವಿಚಿತ್ರವಾಗಿರುವುದೆಂಬುವನ್ನು ಈ ಶ್ಲೋಕವು ತಿಳಿಸುತ್ತದೆ. ಮತ್ತೂ ದಶರಥನು ಕ್ಷತ್ರಿಯನಾದುದರಿಂದ ಇವರ ಸಂದರ್ಶನವು ತತ್ಕಾಲದಲ್ಲಿ ಆತನಿಗೆ ಭಯಜನಕವಾಯಿತೆಂದು ಹೇಳುತ್ತದೆ.

ಇವರು ಭೃಗುಋಷಿಗಳ ಕುಲದಲ್ಲಿ ಜನ್ಮಿಸಿದವರು.ಆದ್ದರಿಂದ ಇವರಿಗೆ ಭಾರ್ಗವರೆಂದು ಹೆಸರುಂಟು ಭಗವಂತನ ತೇಜಸ್ಸು ಯಾವಾಗಲೂ

ಇತರ ತೇಜೋ ವಸ್ತುಗಳಿಗೆಲ್ಲಾ ಆಧಾರವಾದ್ದೆಂದು ವೇದದಲ್ಲಿ ಹೇಳಿರುತ್ತೆ. ಅದನ್ನು ತಿಳಿಸುವುದಕ್ಕಾಗಿ "ಸಹಸ್ರ ಲಕ್ಷ ಅಮಿತ ಭಾನುದೀಧಿತಿಂ" ಎಂಬ ವಿಶೇಷಣಗಳಿಂದ ಪರಶುರಾಮರ ತೇಜಸ್ಸು ಅಸಂಖ್ಯಾತ ಸೂರ್ಯ ಮಂಡಲಗಳ ತೇಜಸ್ಸಿಗಿಂತ ಅತ್ಯಧಿಕವಾಗಿತ್ತೆಂದು ವರ್ಣಿಸಿರುತ್ತಾರೆ. ಭಗವದ್ದರ್ಶನ ಕಾಲಗಳಲ್ಲಿ ದರ್ಶನ ಪಡೆಯುವ ಭಕ್ತರುಗಳಲ್ಲಿ ತಾರತಮ್ಯವಿರುವುದರಿಂದ ಕೆಲವು ಭಕ್ತರಿಗೆ ಒಂದು ಸೂರ್ಯ ಮಂಡಲದ ಬೆಳಕಿನಂತೆಯೂ, ಕೆಲವರಿಗೆ ಹತ್ತು ಸೂರ್ಯ ಮಂಡಲಗಳ ಬೆಳಕಿನಂತೆಯೂ, ಕೆಲವರಿಗೆ ನೂರು, ಕೆಲವರಿಗೆ ಸಾವಿರ, ಕೆಲವರಿಗೆ ಲಕ್ಷ, ಕೆಲವರಿಗೆ ಅಸಂಖ್ಯಾತ (ಎಣಿಕೆಯೇ) ಇಲ್ಲದಷ್ಟು ಸೂರ್ಯ ಮಂಡಲಗಳ ಬೆಳಕಿಗೆ ಸಮಾನವಾದ ತೇಜಸ್ಸಿನಿಂದ ಸ್ವಾಮಿಯು ಬೆಳಗುವಂತೆ ತೋರುವನೆಂದು ತಾತ್ಪರ್ಯ.

ಹೀಗೆ ಶ್ರೀ ಪರಶುರಾಮರು ತೇಜೋವಂತರಾಗಿದ್ದಂತೆ ದಶರಥನು ಕಂಡನೆಂದು ಭಾವ. ಇಂಥಾ ತೇಜೋವಿಶೇಷವುಳ್ಳವರೆಂದ ಮೇಲೆ ಮಹಾ ಮಹಿಮೆಯುಳ್ಳವರೆಂದಾಯಿತಲ್ಲವೆ. ಅಂಥವರ ದರ್ಶನವು ಪರಮ ಲಾಭವೇ ಸರಿ. ಎನ್ನೋಣವೆಂದರೆ ಆ ಮಹನೀಯರು ಹಿಡಿದಿರುವ ಆಯುಧಗಳೂ ಅವುಗಳ ತೇಜಸ್ಸೂ ನೋಟಕರಿಗೆ ಭಯವನ್ನುಂಟುಮಾಡುವಂತಿವೆ. ಏತಕ್ಕೆಂದರೆ—ಅವರ ತೇಜಸ್ಸಿನ ಮಧ್ಯೆ ಆಯುಧಗಳ ತೇಜಸ್ಸೂ ಅದ್ಭುತವಾಗಿ ಬೆಳಗುತ್ತಿದೆ. ಎಂದರೆ ಅಂಥಾ ಅದ್ಭುತವೆನಿಸಿದ ಶಾರ್ಙವೆಂಬ ಧನುಸ್ಸೂ, ಫಳ ಫಳನೆ ಹೊಳೆಯುತ್ತಿರುವ ಅಲುಗುಳ್ಳ ದಿವ್ಯವಾದ ಕೊಡಲಿಯೂ, ಇವೆರಡೂ ಅವರ ಕೈಯ್ಯಲ್ಲಿ ಶೋಭಿಸುತ್ತಿವೆ. ಅವುಗಳು ದುಷ್ಟ ನಿಗ್ರಹಕ್ಕಾಗಿ ಅವರ ಕೈ ಸೇರಿವೆ. ಹೀಗಿರುವುದರಿಂದ ನಾವು ಅವರನ್ನು ದುಷ್ಟರೆಂದು ತಿಳಿದಲ್ಲಿ ನಮ್ಮನ್ನು ಗ್ರಹಿಸದೇ ಬಿಡರು. ಎಂಬೀ ಭಾವನೆಯು ಅವರನ್ನು ಕಂಡ ಒಡನೆಯೇ ಹುಟ್ಟುವುದೇ ವಿನಾ ಇವರು ಮಹಿಮೆಯುಳ್ಳವರು ಅನುಗ್ರಹ ಮಾಡುವರು ಎಂದು ಭಾವಿಸಲಾದೀತೆ? ಇಲ್ಲ. ಈ ರೀತಿಯಾದ ಭಯ ಭೀತಿಗಳೇ ದಶರಥನಿಗೆ ಅವರನ್ನು ನೋಡಿದ ಕೂಡಲೇ ಉಂಟಾದುವು. ಆ ಅಂಶವನ್ನು ಮುಂದೆ ನಿರೂಪಿಸುತ್ತಾರೆ. ಪ್ರಕೃತ ದೇಹ ಕಾಂತಿ ನೋಡಿದರೆ ಅನೇಕ ಕೋಟಿ ಸೂರ್ಯರಿಗೆ ಮಿಂಚಿದೆ, ಸ್ವರೂಪವನ್ನು ನೋಡುವುದಾದರೆ ಬೆಳಗುತ್ತಿರುವ ಅತ್ಯದ್ಭುತ ದಿವ್ಯ ಜ್ಞಾನ ಸ್ವರೂಪವು, ಜನ್ಮವನ್ನು ನೋಡಿದರೆ—ತೇಜೋ ವಿಶೇಷಕ್ಕಾಶ್ರಯವಾದ

ಬ್ರಾಹ್ಮಣ ಕುಲದಲ್ಲಿ ಕೈಲಕ್ಷಣವನ್ನು ನೋಡಿದರೆ ಮೇಲೆ ಹೇಳಿದಂತೆ ಅತ್ಯ ದ್ಭುತಾಯುಧಧಾರಣೆಯಾಗಿದೆ. ಇಂಥಾ ಮೂರ್ತಿಯನ್ನು ನೋಡಿದವರು ಮುಂದೇನು ಮಾಡಬೇಕು? ಭಯಪಡಬೇಕಾದುದೇ ಸರಿ. ಆದರೆ ದಶರ ಥನು ಇವರ ಸ್ವರೂಪದಲ್ಲಿ ಕಂಡುಬರುವ ಬ್ರಾಹ್ಮ, ಕ್ಷಾತ್ರತೇಜಸ್ಸುಗಳ ದ ರ್ಶನದಿಂದ ಭಯ, ಭಕ್ತಿಗಳೆರಡನ್ನೂ ಪಡೆದು ಇವರನ್ನು ದರ್ಶನಮಾಡಿ ದನೆಂದು ತಾತ್ಪರ್ಯ. ಇವರು ಸಾಕ್ಷಾನ್ನಾರಾಯಣಾವತಾರರಾದ್ದರಿಂದ ಅತರ್ಕಿತವಾಗಿ ಇವರ ದರ್ಶನವು ವದಗಿದ್ದು ದಶರಥನಿಗೂ ಅವನ ಪರಿ ವಾರಕ್ಕೂ ಪರಮ ಲಾಭವೆಂದು ತಾತ್ಪರ್ಯ. ಸಾಮಾನ್ಯರಿಗೆ ಇವರ ದ ರ್ಶನ ದೊರಕುವದೆಂದರೇನು? ಇದರಿಂದ ದಶರಥನ ಯೋಗ್ಯತೆಯೂ ಅದ್ಭು ತವೆಂದು ಭಾವ. ಮಹಾಕಾವ್ಯಗಳನ್ನು ಬರೆಯುವ ಸಮಯಗಳಲ್ಲಿ ಕವಿಗ ಳು ಪ್ರಸಿದ್ಧವಾದ ಒಂಭತ್ತು ರಸಗಳನ್ನು (ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ ಭೀಭತ್ಸ, ರೌದ್ರ) ಎಂಬ ರಸಗಳನ್ನು ಸಂದರ್ಭಾನುಸಾರ ಪುಷ್ಟೀಕರಿಸಿ ಕಥಾವಸ್ತುವನ್ನು ಬೆಳೆಯಿಸಬೇಕಾದ್ದು ವಿಧಿ. ಅದರಲ್ಲಿಯೂ ಶೃಂಗಾರಃ ಶುಚಿ ರುಜ್ವಲಃ ಎಂಬ ಅನ್ವರ್ಥವಾದ ಶೃಂಗಾರ ರಸವನ್ನು ಶ್ರೀಸೀತಾರಾಮರುಗಳ ಸ್ವಯಂವರ ಕಥಾಸಂಘಟನೆ ಯಿಂದ ಪುಷ್ಟಿಸಿದ್ದಾಯಿತು. ಆದರೆ ಅನಂತರ ವೀರರಸವನ್ನು ನ್ಯಾಯವಾಗಿ ವ್ಯಕ್ತಿಗೆ ತರಬೇಕಾಗಿರುವುದರಿಂದ ಈ ಪರಶುರಾಮರ ವೃತ್ತಾಂತವನ್ನು ವ ದಗಿಸಿದ್ದಾರೆಂದು ರಸಿಕರು ಭಾವಿಸಬೇಕು. ಪರಶುರಾಮರಿಗೂ ಶ್ರೀದಾಶ ರಥಿಗೂ ನಡೆಯುವ ಚರ್ಚೆಗಳಿಂದಲೂ ಮತ್ತು ಯುದ್ಧದಿಂದಲೂ ಈ ರಸ ವನ್ನು ಪುಷ್ಟೀಕರಿಸುವುದರಮೂಲಕ ಶ್ರೀರಾಮಚಂದ್ರನ ವೀರ ಸ್ವಭಾವವ ನ್ನು ಸ್ಪಷ್ಟಪಡಿಸಿ ಇಂಥಾ ಶ್ರೀರಾಮಾವತಾರವು ಭೂಭಾರ ಪರಿಹಾರಕ್ಕಾಗಿ ಆಗಿರುವುದೆಂಬಂಶವನ್ನು ಇವರೀರ್ವರ ವೃತ್ತಾಂತದಿಂದ ದರ್ಶನಕ್ಕೆ ತಂದಿ ರುವರೆಂದು ಮುಖ್ಯಾಶಯವು. ಭಗವಂತನ ಮೂಲರೂಪದಲ್ಲಿ ಚತುರ್ಭು ಜಗಳನ್ನೂ ಹಸ್ತಗತವಾದ ಆಯುಧಗಳನ್ನೂ ವರ್ಣಿಸಿ ತದನುಗುಣವಾಗಿ ಗದಾಧರ, ಚಕ್ರಪಾಣಿ ಮುಂತಾದ ಅನ್ವರ್ಥನಾಮಗಳನ್ನು ತಿಳಿಯುವುದು ಹೇಗೋ ಹಾಗೆ ಅವತಾರರೂಪಗಳಲ್ಲಿ ಆ ಸ್ವಾಮಿಯು ಮೂರು ರಾಮರೂ ಪಗಳಿಂದ ಅವತರಿಸಿದ್ದಾನಾದ್ದರಿಂದ ಆ ರೂಪಗಳಿಗೆ ತಕ್ಕಂತೆ ಧರಿಸುವ ಆ ಯುಧಗಳು ರಾಮನಾಮದ ಮುಂದುಗಡೆಯಲ್ಲಿ ಸೇರಿ ಈ ಮೂರ್ತಿಗಳ ಪರಿ

ಚಯವನ್ನು ಮಾಡಿಸುತ್ತಿವೆ. ಮೂರ್ತಿಗಳು ಬೇರೆಬೇರೆಯಾಗಿ ಕಂಡುಬಂದರೂ ಸ್ವರೂಪವು ಒಂದೇ ಎಂದು ಭಾವಿಸಬೇಕು. ಹೇಗೆಂದರೆ.-(ರಘುರಾಮ ಸೀತಾರಾಮ ) ಮುಂತಾದ ನಾಮಗಳಿವೆ. ಪರಶುರಾಮ, ಭಾರ್ಗವರಾಮ, ಮುಂತಾದ ನಾಮಗಳಿವೆ. ಬಲರಾಮ, ಬಲದೇವ ಮುಂತಾದ ನಾಮಗಳಿವೆ. ಈ ಅವತಾರಗಳೂ ಇವುಗಳಿಂದ ಮಾಡಿರುವ ಕಾರ್ಯಗಳೂ ಬೇರೆಬೇರೆಯಾಗಿ ಕಂಡುಬಂದರೂ ಈ ಅವತಾರರೂಪಗಳನ್ನು ವಹಿಸಿರುವ ಪ್ರಭುವು ಒಬ್ಬನೇ ಎಂದು ಭಾವಿಸತಕ್ಕದ್ದು. ಈ ಭಗವದ್ರೂಪಗಳ ವಿಷಯದಲ್ಲಿ ಅಭೇದವನ್ನು ತಿಳಿಸಲಿಕ್ಕಾಗಿಯೇ ಈ ಘಟ್ಟವನ್ನು ಆಚಾರ್ಯರು ತೆಗೆದುಕೊಂಡು ಸಕಾರಣವಾಗಿಯೂ, ಸರಸವಾಗಿಯೂ ನಿರ್ಣಯಿಸಿರುತ್ತಾರಾಗಿ ಈ ಕಥಾಭಾಗವನ್ನು ಈ ನಿರ್ಣಯಗ್ರಂಥಾನುಸಾರ ಭಕ್ತರು ತಿಳಿಯಬೇಕೇ ಹೊರ್ತು ಕೇವಲ ರಾಮಾಯಣಾದಿಗಳಲ್ಲಿ ಹೇಳಿರುವಂತೆ ತಿಳಿಯತಕ್ಕದ್ದಲ್ಲ. ದರ್ಶನಭಾಷಾ, ಗುಹ್ಯಭಾಷಾ, ಸಮಾಧಿಭಾಷಾ ಎಂದು ಪುರಾಣಗಳಲ್ಲಿ ಕಥಾವಸ್ತುವನ್ನು ಹೇಳುವಾಗ ಮೂರು ಭಾಷಾವಿಧಿಯನ್ನನುಸರಿಸಿರುತ್ತಾರೆ. ಆ ಭಾಷಾತ್ರಯಜ್ಞಾನವು ಸುಲಭ ಸಾಧ್ಯವಲ್ಲವಾಗಿ ಆ ಆಚಾರ್ಯರು ಅಂಥಾ ಗುಟ್ಟನ್ನು ಒಡೆದು ತಮ್ಮೀ ಗ್ರಂಥದಲ್ಲಿ ತಿಳಿಸಿರುವರು ಆದ್ದರಿಂದ ಈ ಗ್ರಂಥೋಕ್ತ ಕ್ರಮದಿಂದ ಪುರಾಣಗಳ ರಹಸ್ಯವನ್ನು ತಿಳಿಯತಕ್ಕದ್ದು. ಇಂಥಾ ರಹಸ್ಯಜ್ಞಾನ ಉಂಟಾದರೇನೇ ಮೋಕ್ಷಸಾಧನವಾಗುವುದು. ಇಲ್ಲವಾದರಿಲ್ಲ.

ಅವತಾರಿಕೆ.—ಶ್ರೀಹರಿಯು ತನ್ನ ಮನುಷ್ಯಾವತಾರಗಳಲ್ಲಿ ಮನುಷ್ಯರಂತೆ ವಿಡಂಬಿಸುವೆನೆಂಬ ತನ್ನ ಸತ್ಯಸಂಕಲ್ಪವನ್ನನುಸರಿಸಿ ದಶರಥನಿಗೆ ತನ್ನಲ್ಲಿ ಪುತ್ರಭಾವವನ್ನೇ ದೃಢಪಡಿಸಿದನು. ತನಗೆ ಹದಿನಾರುವರ್ಷ ವಯಸ್ಸು ತುಂಬುವುದಕ್ಕೆ ಮುಂಚೆಯೇ ವಿಶ್ವಾಮಿತ್ರರ ಯಜ್ಞರಕ್ಷಣೆಯ ಸಲುವಾಗಿ, ತಾಟಕಾ ಸುಬಾಹುಗಳನ್ನು ನಿಗ್ರಹಿಸಿದನು. ಮಾರೀಚನನ್ನು ಸಾಗರಕ್ಕೆ ಕೆಡಹಿದನು. ಅವರು ವಾಸಮಾಡುತ್ತಿದ್ದ ಅರಣ್ಯಪ್ರಾಂತಗಳನ್ನೆಲ್ಲಾ ಸುಪಥವನ್ನಾಗಿ ಮಾಡಿದನು, ಮತ್ತು ಗೌತಮರ ಆಶ್ರಮಕ್ಕೆ ಬಂದು ಅಹಲ್ಯೆಯ ಶಾಪ ವಿಮೋಚನಮಾಡಿ ಗೌತಮರೊಡನೆ ಆಕೆಯನ್ನು ಸೇರಿಸಿದನು. ಜನ

ಕನ ಸಭೆಯಲ್ಲಿ ಪುರಾತನಕಾಲದ ಹರಧನುವನ್ನು ಭೇಧಿಸಿ ಲೋಕೋತ್ತರ ಕನ್ಯಾರತ್ನವೆನ್ನಿಸಿದ ಸೀತೆಯನ್ನು ಪರಿಗ್ರಹಿಸಿದನು. ಇವೇ ಮೊದಲಾದ ಅಮಾನುಷವ್ಯಾಪಾರಗಳನ್ನು ಮಾಡಿದರೂ ದಶರಥನಾಗಲೀ ಅವನ ಪರಿವಾರವಾಗಲೀ ಉಳಿದ ಮಾನವ ವರ್ಗವೇ ಆಗಲೀ, (ವಶಿಷ್ಠ, ವಿಶ್ವಾಮಿತ್ರರ ವಿನಃ) ಶ್ರೀರಾಮನು ಸಾಕ್ಷಾನ್ನಾರಾಯಣನು, ಲೋಕಹಿತೇಚ್ಛವಾಗಿ ಬ್ರಹ್ಮಾದಿಗಳ ಪ್ರಾರ್ಥನೆಯಂತೆ ಭೂಭಾರ ಪರಿಹಾರಪೂರ್ವಕ ಧರ್ಮ ಸಂಸ್ಥಾಪನಕ್ಕಾಗಿ ಅವತರಿಸಿರುವನೆಂಬ ಭಾವವನ್ನು ಪಡೆಯಲಿಲ್ಲ. ಆದ್ದರಿಂದ ಸಮಯವರಿತು ತಕ್ಕ ನಿದರ್ಶನಗಳಿಂದ ಶ್ರೀರಾಮನು ಸಾಕ್ಷಾದ್ಭಗವಂತನೆಂಬ ಜ್ಞಾನವನ್ನು ಭೂಲೋಕದ ಸಜ್ಜನವರ್ಗಕ್ಕೆ ಉಂಟುಮಾಡಿಕೊಡಬೇಕು. ಇಲ್ಲವಾದರೆ ಯೋಗ್ಯರಾದ ಜೀವರೂ ಭ್ರಮೆಗೊಂಡು ಶ್ರೀಹರಿಯ ನಿಜತತ್ವ ಜ್ಞಾನವಿಲ್ಲದೇ ಈ ಸಂಸಾರ ಸಾಗರದಲ್ಲಿ ಬಳಲಬೇಕಾಗುವುದು. ಎಂದು ತಿಳಿದು, ಜಗದನುಗ್ರಹಕ್ಕಾಗಿಯೇ ತನ್ನವತಾರಗಳು ಎಂಬುದನ್ನು ನಿದರ್ಶನಕ್ಕೆ ತಂದುಕೊಡಬೇಕೆಂಬ ಸತ್ಯಸಂಕಲ್ಪವುಳ್ಳ ಶ್ರೀರಾಮಾವತಾರ ಮಾಡಿದ ಶ್ರೀಹರಿಯು ಯುಗಾಂತರದಲ್ಲಿ ಅವತರಿಸಿದ ತನ್ನ ಪರಶುರಾಮ ರೂಪವನ್ನು ದಶರಥನ ಇದಿರಿನಲ್ಲಿ ಪ್ರಕಟಿಸಿದನು. ಶ್ರೀರಾಮನು "ವಾಸುದೇವೋವಾ ಇದಮಗ್ರ ಆಸೀತ್" ಎಂಬ ಶೃತಿಯಲ್ಲಿ ಹೇಳಿರುವಂತೆ ಆದಿಪುರುಷನು ಎಂಬುದನ್ನು ವ್ಯಕ್ತಪಡಿಸಿದನು, ಮುಂದಿನ ಕೆಲಸದಿಂದ ತನ್ನ ಪೂರ್ಣಶಕ್ತಿಯನ್ನು ಶ್ರೀರಾಮರೂಪದಿಂದ ಪ್ರಕಟಿಸಿಕೊಟ್ಟುದ್ದಲ್ಲದೇ, ಭಗವದ್ರೂಪಗಳಿಗಿರುವ ಅಭೇದವನ್ನು ಆ ದಶರಥನೇ ಮೊದಲಾದ ಉತ್ತಮಾಧಿಕಾರಿಗಳಿಗೆ ಪರಿಚಯಮಾಡಿಸಿಕೊಟ್ಟನು ಎಂಬಂಶವನ್ನು ಈ ಶ್ಲೋಕವು ನಿರೂಪಿಸುವುದು.

**ಶ್ಲೋಕ ॥ ಅಜಾನತಾಂ ರಾಘವಮಾದಿಪೂರುಷಂ ಸಮಾಗತಂಜ್ಞಾಪಯಿತುಂ ನಿದರ್ಶನೈಃ । ಸಮಾಹ್ವಯಂತಂ ರಘುಪಂಸ್ಪೃಥೇವ ನೃಪೋಯಯಾಚೇಪ್ರಣಿಪತ್ಯಭೀತಃ ॥೪೧॥**

ಅರ್ಥ.--ರಾಘವಂ=ಶ್ರೀರಾಮನು, ಆದಿಪುರುಷಂ = ಪರಮ ಪುರುಷನೆಂದು, ಅಜಾನತಾಂ-ತಿಳಿಯದ ಪಾಮರರಿಗೆ, ನಿದರ್ಶನೈಃ-ತಕ್ಕ ದೃ

ಷ್ಟಾಂತಗಳಿಂದ, ಜ್ಞಾಪಯಿತುಂ=ಇವನೇ ಪರದೈವನೆಂದೂ ತಿಳಿಸಲಿಕ್ಕಾಗಿ ಸಮಾಗತಂ=ಬಂದಿರುವಂಥ, ರಘುಪಂ=ರಘುನಾಥನನ್ನು, ಸ್ಪರ್ಧೇವ-ಸ್ಪರ್ಧೆಯಿಂದಲೋ ಎಂಬಂತೆ, ಯೋದ್ಧುಂ=ತನ್ನೊಡನೆ ಯುದ್ಧಕ್ಕೆ, ಸಮಾಹ್ವಯಂತಂ-ಆಹ್ವಾನಿಸುತ್ತಿರುವ (ಕರೆಯುತ್ತಿರುವ) ತಂ=ಆ ಪರಶುರಾಮನನ್ನು ನೋಡಿ, ನೃಪಃ=ದಶರಥನು, ಭೀತತರಃ = ಭಯಗೊಂಡವನಾಗಿ, ಪ್ರಣಿಪತ್ಯ=ನಮಸ್ಕಾರಮಾಡಿ, ಯಯಾಚೇ=ಬೇಡಿಕೊಂಡನು

ತಾತ್ಪರ್ಯ.—ಆ ಕಾಲದ ಸತ್ಪುರುಷರೂ ಕೂಡ ರಾಮನನ್ನು ಆದಿಪುರುಷನೆಂದು ತಿಳಿದಿರಲಿಲ್ಲ. ತಕ್ಕ ದೃಷ್ಟಾಂತಗಳಿಂದ ಇದನ್ನು ತಿಳುಹಿಸಬೇಕೆಂಬ ಇಚ್ಛೆಯಿಂದ ಶ್ರೀರಾಮನು ದಿವ್ಯ ಧನುವನ್ನು ಭೇದಿಸಿ ಸೀತೆಯನ್ನು ವರಿಸಿದನೆಂಬ ಹೊಟ್ಟೆಕಿಚ್ಚಿನಿಂದಲೋ ಎಂಬಂತೆ ಶ್ರೀರಾಮನನ್ನು ತನ್ನೊಡನೆ ಯುದ್ಧಕ್ಕೆ ಆಹ್ವಾನಿಸುತ್ತಿರುವ ಶ್ರೀಪರಶುರಾಮನನ್ನು ನೋಡಿ ದಶರಥನು ಪರಮಭೀತಿಗೊಂಡವನಾಗಿ, ಪರಶುರಾಮನನ್ನು ವಂದಿಸುತ್ತಾ ಮುಂದ್ದೇಳುವ ತೆರನಾಗಿ ಅಂಗಲಾಚಿ ಬೇಡಿಕೊಂಡನೆಂದು ತಾತ್ಪರ್ಯ.

ವಿಶೇಷಾರ್ಥ.— ಈ ಸಂದರ್ಭದಲ್ಲಿ ದಶರಥನೊಡನೆ ಸುಮಂತ್ರಾದಿ ಮಂತ್ರಿಗಳೂ, ವಶಿಷ್ಠಾದಿ ತಪೋಧನರೂ ಇದ್ದರು. ಪರಶುರಾಮನು ಬಂದಿರುವ ಉದ್ದೇಶವನ್ನು ಅವರುಗಳು ಅರಿಯರು. ಅವರುಗಳು ದಶರಥನಿಗೆ ಯಾವ ಸಲಹೆಯನ್ನೂ ಕೊಡಲಿಲ್ಲ. ದಶರಥನು ಭಾರ್ಗವರ ಜನ್ಮಕಥಾ ಸಂದರ್ಭವನ್ನೂ ಮಹಿಮೆಯನ್ನೂ ತಿಳಿದಿದ್ದರೂ ಅವರ ಭುಜದಮೇಲಿದ್ದ ಆಯುಧ ದರ್ಶನದಿಂದ ಆತನಿಗೆ ಭಯವೇನೋ ಆಯಿತು. ಆದುದರಿಂದ ಅವರನ್ನು ಭಕ್ತಿಪುರಸ್ಸರವಾಗಿ ಅರ್ಚಿಸಿದರೂ ಕುಶಲವಾರ್ತೆಯನ್ನು ಕೇಳಿ ತನ್ನ ರಾಜಭಾವವನ್ನು ಅವರೆದುರಿಗೆ ತೋರಿಸಲವಕಾಶವಾಗಲಿಲ್ಲ. ಮತ್ತೂ ಇವರು ಪ್ರತ್ಯಕ್ಷರಾಗುವುದಕ್ಕೆ ಮುಂಚೆ ಮಾರ್ಗದಲ್ಲಿ ಎದಗಿದ್ದ ಅಶುಭಶಕುನಗಳನ್ನು ಕುರಿತು ದಶರಥನು ವಶಿಷ್ಠರನ್ನು ಕಾರಣವನ್ನು ಕೇಳಿದ್ದನು, ಅದಕ್ಕವರು ಪಕ್ಷಿಗಳೇನೋ ಅಶುಭವನ್ನೂ ಘೋರ ಕರ್ಮವನ್ನೂ ಸೂಚಿಸುತ್ತಿವೆ. ಆದರೂ ಮೃಗಗಳು ಆ ಭಯಪರಿಹಾರವಾಗುವಂತೆ ಸೂಚಿಸುತ್ತಿವೆ. ತಾವು ಹೆದರಬೇಕಾಗಿಲ್ಲವೆಂದು ಧೈರ್ಯವನ್ನು ಹೇಳಿದ್ದರು. ಉತ್ತರಕ್ಷಣವೇ ಪರಶುರಾಮರು ದೃಷ್ಟಿಗೆ ಬಿದ್ದರು. ಕೂಡಲೇ ದಶರಥನಿಗೆ

ಗಾಬರಿಯಾಯಿತು. ಆ ಭಯದಿಂದ ಆತನು ಅವರನ್ನು ಉಚಿತವಾಗಿ ಸತ್ಕಾರ ಮಾಡಲಿಲ್ಲ. ಆದರೆ ವಶಿಷ್ಠಾದಿಗಳು ಮಾತ್ರ ದರ್ಶನವಾದೊಡನೆಯೇ ಸ್ವತಂತ್ರವಾಗಿ ತಾವುಗಳೇ ಪರಶುರಾಮರನ್ನಾರಾಧಿಸಿದರು. ಆ ತಪಸ್ವಿಗಳೆಲ್ಲರೂ ದಶರಥನೊಡನೆ ಇದ್ದರಾದ್ದರಿಂದ ಅವರು ಮಾಡಿದ ಸತ್ಕಾರವೇ ದಶರಥನದೆಂದು ಅವರು ಭಾವಿಸಿದರು. ಅಲ್ಲದೇ ದಶರಥನು ಭಾವಿಸಿದಂತೆ ಕ್ಷತ್ರಿಯ ನಿಗ್ರಹದ ಉದ್ದೇಶ್ಯವು ಪರಶುರಾಮರಿಗೆ ಆಗ ಇರಲೂ ಇಲ್ಲ. ರಘುನಾಥನು ಸಾಕ್ಷಾನ್ನಾರಾಯಣನೆಂದು ಪ್ರಕಟಿಸಿ ಹೋಗಬೇಕೆಂಬುದೇ ಅವರ ಮುಖ್ಯೋದ್ದೇಶವಾಗಿದ್ದಿತು. ಇಂಥಾ ಸ್ವಾಮಿಯ ಸಂಕಲ್ಪವನ್ನು ಅವರು ಪ್ರಕಟಿಸದಿದ್ದರೆ ಪರರು ಗ್ರಹಿಸುವುದೆಂದರೇನು ? ಆದ್ದರಿಂದ ಈ ಮರ್ಮವನ್ನು ಆಚಾರ್ಯರು ಸಿದ್ಧಾಂತಮಾಡಿರುವರೆಂದು ತಿಳಿಯಬೇಕು.

ಅವತಾರಿಕೆ.—ಈಗ ದಶರಥನು ಪರಶುರಾಮರನ್ನು ಬೇಡಿಕೊಂಡ ರೀತಿಯನ್ನು ತಿಳಿಸುತ್ತಾರೆ.—

**ಶ್ಲೋಕ || ನಮೇಸುತಂಹಂತುಮಿಹಾರ್ಹಸಿಪ್ರಭೋ ವಯೋಗತಸ್ಯೇತ್ಯುದಿತಃ ಸಭಾರ್ಗವಃ | ಸುತತ್ರಯಂತೇ ಪ್ರದದಾಮಿರಾಘವಂ ರಣೇಸ್ಥಿತಂದ್ರಷ್ಟುಮಿಹಾಗತೋಽಸ್ಮ್ಯಹಂ ||೪೨||**

ಅರ್ಥ.—ಪ್ರಭೋ - ಹೇ ಸ್ವಾಮಿಯೇ, ವಯೋಗತಸ್ಯ = ಬಹಳ ವಯಸ್ಸಾಗಿರುವ ( ವೃದ್ಧನಾದ) ಮೇ=ನನ್ನ, ಸುತಂ=ಮಗನನ್ನು, ಇಹ= ಇಲ್ಲಿ, ಹಂತುಂನಅರ್ಹಸಿ=ಕೊಲ್ಲಬೇಡ, ಇತಿ=ಹೀಗೆಂದು, ಉದಿತಃ=ಹೇಳಿಸಿಕೊಳ್ಳಲ್ಪಟ್ಟ, ಭಾರ್ಗವಃ=ಆ ಪರಶುರಾಮನು, ರಾಜನ್=ಎಲೈ ದಶರಥನೇ, ಸುತತ್ರಯಂ-ಮೂವರು ಮಕ್ಕಳನ್ನು, ತೇ=ನಿನಗೆ, ಪ್ರದದಾಮಿ= ಬಿಟ್ಟುಕೊಡುತ್ತೇನೆ, ಅಹಂ=ನಾನು, ರಣೇ-ಯುದ್ಧದಲ್ಲಿ, ಸ್ಥಿತಂ=ನಿಂತಿರುವಂಥ, ರಾಘವಂ=ಶ್ರೀರಘುಪತಿಯನ್ನು, ದ್ರಷ್ಟುಂ-ನೋಡಲಿಕ್ಕೋಸ್ಕರವೇ ಇಹ=ಇಲ್ಲಿಗೆ, ಆಗತೋಽಸ್ಮಿ=ಬಂದಿರುವೆನೆಂದನು.

ತಾತ್ಪರ್ಯ.—ಎಲೈ ಪ್ರಭುವೇ ! ನಾನು ತುಂಬಾ ವಯೋವೃದ್ಧನು. ಬಹುಕಾಲದಿಂದ ಮಕ್ಕಳಿಲ್ಲದೇ ಹಂಬಲಿಸಿ ಮುಪ್ಪಿನಲ್ಲಿ ದೈವ ಕೃಪೆಯಿಂದ

ಈ ಮಕ್ಕಳನ್ನು ಪಡೆದಿರುವೆನು. ಇವರುಗಳಾದರೋ ಇನ್ನೂ ಚಿಕ್ಕವರು ಇವರಲ್ಲಿ ನನ್ನ ಸೌಖ್ಯವೆಲ್ಲಾ ಅವಲಂಬಿಸಿದೆ ಅದರಲ್ಲಿಯೂ ಶ್ರೀರಾಮನು ನನಗೆ ತುಂಬಾ ಪ್ರಿಯನು. ತಾವು ಅವನನ್ನೇ ಯುದ್ಧಕ್ಕೆ ಕರಿಯುತ್ತಿದ್ದೀರಿ, ಯುದ್ಧದಲ್ಲಿ ಜಯಾಪಜಯಗಳು ಸಂದಿಗ್ಧವಾದುವು. ತಾವು ವಯಸ್ಸು ಶಕ್ತಿ ಸಾಹಸಗಳಿಂದ ಅದ್ಭುತರಾಗಿದ್ದೀರಿ. ಬಾಲಕನಾದ ರಾಮಚಂದ್ರನು ತಮ್ಮೊಡನೆ ಹೇಗೆ ಯುದ್ಧಮಾಡಿಯಾನು ? ಒಂದುವೇಳೆ ಯುದ್ಧದಲ್ಲಿ ತಾವು ರಾಮಚಂದ್ರನನ್ನು ಕೊಂದುಬಿಟ್ಟಲ್ಲಿ ಅವನ ಅಗಲುವಿಕೆಯಿಂದ ವೃದ್ಧನಾದ ನನ್ನ ಜೀವ ಉಳಿಯುವುದು ಹೇಗೆ ? ಆದ್ದರಿಂದ ಕರುಣೆಯಿಂದ ಈ ವೃದ್ಧನಾದ ಅಶಕ್ತನಾದ ನನ್ನನ್ನು ಮನ್ನಿಸಿ ನನ್ನ ಪ್ರಿಯ ಪುತ್ರನನ್ನು ಬಿಟ್ಟುಕೊಡಬೇಕು. ಮಹಾಪ್ರಭೂ, ಎಂದು ದಶರಥನು ಬೇಡಿಕೊಂಡನು ಆಗ ಭಾರ್ಗವರು ಆತನಿಗೆ ಈ ರೀತಿಯಾಗಿ ಉತ್ತರಕೊಟ್ಟರು. ಎಲೈ ದಶರಥಾ ! ನೀನು ವೃದ್ಧ, ನಿನಗೆ ಪುತ್ರರ ಮೇಲೆ ಮೋಹವು ಸಹಜ, ಆದ್ದರಿಂದ ರಾಮನನ್ನು ಬಿಟ್ಟು ಮಿಕ್ಕ ಮೂರು ಮಕ್ಕಳನ್ನು ನಿನಗಾಗಿ ಕೊಡುವೆನು. ಒಬ್ಬ ರಾಮನನ್ನು ಮಾತ್ರ ನಾನು ಅಪೇಕ್ಷಿಸಿರುವೆನಲ್ಲವೇ ? ಆತನು ರಣಾಂಗಣದಲ್ಲಿ ನಿಂತು ಶೌರ್ಯವನ್ನು ತೋರಿಸುವದನ್ನು ನೋಡಬೇಕೆಂಬಾಶೆಯಿಂದ ನಾನು ಯುದ್ಧಾರ್ಥಿಯಾಗಿ ಬಂದಿರುವೆನೆಂದು ತಿಳಿ, ಎಂದು ಪರಶುರಾಮರು ನುಡಿದರೆಂದು ತಾತ್ಪರ್ಯ.

ವಿಶೇಷಾರ್ಥ.—" ವಯೋಗತಸ್ಯ " ಎಂದು ದಶರಥನು ಪ್ರಯೋಗ ಮಾಡಿರುವುದರಿಂದ ತಾನು ಬಲಹೀನನೆಂದೂ ತನ್ನ ಮಾತನ್ನ ಪ್ರಭುವಾದ ಪರಶುರಾಮರು ನಡಿಸಿಕೊಡತಕ್ಕದ್ದು ಧರ್ಮವೆಂದೂ ಸೂಚಿತವಾಗುವುದು. " ಸುತಂ " ಎಂಬೋಣದರಿಂದ ಶ್ರೀರಾಮನಿಗೆ ಬಾಲತ್ವವೂ, " ಪ್ರಭೋ " ಎಂಬೋಣದರಿಂದ ಪರಶುರಾಮದೇವರ ವೀರತ್ವವೂ ಪ್ರಕಟವಾದವು. ಇದರಿಂದ ಅತಿ ವೀರನಾದ ನೀನು ಶಕ್ತನಲ್ಲನಾದುದರಿಂದ ದೀನನಾದ ನನ್ನ ಬಾಲಕನಾದ ಪುತ್ರನನ್ನು ಸಂಹಾರಮಾಡುವದು ಉಚಿತವಲ್ಲವೆಂಬ ಭಾವ. ಇದಕ್ಕಾಗಿ ದಶರಥನಜ್ಞಾನವು ಸೂಚಿತವಾಯಿತು.

ಹೀಗೆ ನುಡಿದ ಪರಶುರಾಮರ ವಾಕ್ಯವನ್ನು ಕೇಳಿ ದಶರಥನಿಗೆ ಮುಂದೆ ಮಾತನಾಡಲು ತೋರದೇ ಇರಲು ಪರಶುರಾಮರು ಸಂಧರ್ಭಕ್ಕೆ ತಕ್ಕಂತೆ

ತಾವೇ ದಶರಥನಿಗೆ ಉತ್ತರವನ್ನು ಹೇಳಿ ಸದ್ಯಕ್ಕೆ ಸಮಾಧಾನಮಾಡಿದರೂ ತಮ್ಮ ಉದ್ದೇಶ್ಯವನ್ನು ಆತನಿಗೆ ಮುಂದೆ ತಾವೇ ತಿಳಿಹಿ ಆತನ ಮನಸ್ಸನ್ನು ಪೂರ್ತಿ ಸಮಾಧಾನಪಡಿಸಿದರೆಂಬುದನ್ನು ಆಚಾರ್ಯರು ಮುಂದಿನ ಶ್ಲೋಕಗಳಿಂದ ಸ್ಪಷ್ಟಪಡಿಸುವರು.

**ಶ್ಲೋಕ॥ ಸ ಇತ್ಥಮುಕ್ತ್ವಾ ನೃಪತಿಂ ರಘೂತ್ತಮಂ ಭೃಗೂತ್ತಮಃ ಪ್ರಾಹ ನಿಜಾಂತನುಂಹರಿಂ। ಅಭೇದಮಜ್ಞೇಷ್ವಪಿದರ್ಶಯನ್‌ಪರಂ ಪುರಾತನೋಽಹಂಹರಿರೇಷ ಇತ್ಯಹ॥೪೩॥**

ಅರ್ಥ.—ಸಃ=ಆ ಭಾರ್ಗವನು, ಇತ್ಥಂ=ಹೀಗೆ, ನೃಪತಿಂ=ದಶರಥನನ್ನು ಕುರಿತು, ಉಕ್ತ್ವಾ - ಹೇಳಿ, ಭೃಗೂತ್ತಮಃ = ಭೃಗುಶ್ರೇಷ್ಠನು, ನಿಜಾಂತನುಂ-ತನ್ನ ಮೂರ್ತಿಯೇ ಆಗಿರುವ, ರಘೂತ್ತಮಂ=ರಘುಶ್ರೇಷ್ಠನಾಗಿರುವ, ಹರಿಂ=ಶ್ರೀನಾರಾಯಣನನ್ನು ಕುರಿತು, ಪ್ರಾಹ = ಹೇಳಿದನು, ಅಹಂ=ನಾನು, ಪುರಾತನಃ-ಬಹಳ ಪ್ರಾಚೀನನು (ಸನಾತನನು) ಏಷಃ= ಈ ಶ್ರೀರಾಮನೂ, ಹರಿಃ=ಅಂಥಾ ಸನಾತನನೇ ಆಗಿರುವನು, ಇತ್ಯಪಿ= ಹೀಗೆಂಬುದಾಗಿ, ಅಜ್ಞೇಷ್ವಪಿ=ತಿಳಿವಳಿಕೆ ಇಲ್ಲದ ಪಾಮರರಲ್ಲಿಯೂ, ಅಭೇದಂ-ತಮ್ಮಿಬ್ಬರಿಗೂ ಇರುವ, ಅಭೇದ=ಐಕ್ಯವನ್ನು, ದರ್ಶಯನ್ - ನಿದರ್ಶನಗಳಿಂದ ತೋರ್ಪಡಿಸುವವನಾಗಿ, ರಘೂತ್ತಮಂ=ಶ್ರೀರಾಮನನ್ನು ಕುರಿತು, ಪ್ರಾಹ-ಹೇಳಿದನು.

ತಾತ್ಪರ್ಯ.—ಈ ಪ್ರಕಾರ ಭೃಗುಕುಲೋತ್ತಮನಾದ ಪರಶುರಾಮನು ದಶರಥನನ್ನು ಕುರಿತು ಹೀಗೆ ಹೇಳಿ ಪುರಾಣ ಪುರುಷನಾದ ನಾನೇ ಈ ದಶರಥ ಪುತ್ರನಾದ ಶ್ರೀರಾಮನು. ಈ ರೂಪದ್ವಯಗಳಿಗೆ (ಶ್ರೀರಾಮ ಪರಶುರಾಮ) ಅಭೇಧವನ್ನು ಅಜ್ಞರಿಗೆ ತಿಳುಹಿಸುವದಕ್ಕಾಗಿ ಸ್ವಸ್ವರೂಪರಾದ ಶ್ರೀದಶರಥರಾಮನನ್ನು ಕುರಿತು ಪರಶುರಾಮರು ಮಾತನಾಡುತ್ತಾರೆ.

ಅವತಾರಿಕೆ.—ತಮಗೂ, ರಾಮನಿಗೂ ಅಭೇದ ವ್ಯವಸ್ಥಾಪಕವಾದ ಈ ಪುರಾತನ ಚರಿತ್ರೆಯನ್ನು ಪರಶುರಾಮರು ರಾಮನೊಡನೆ ಹೇಳಲಾರಂಭಿಸುತ್ತಾರೆ:—

**ಶ್ಲೋಕ॥ ಶೃಣುಷ್ವರಾಮತ್ವಮಿಹೋದಿತಂಮಯಾ ಧನುರ್ದ್ವಯಂ ಪೂರ್ವಮ ಭೂನ್ಮಹಾದ್ಭುತಂ। ಉಮಾಪತಿಸ್ತ್ವೇಕಮಧಾರಯತ್ತತೋ ರಮಾಪತಿಶ್ಚಾಪರಮುತ್ತಮೋತ್ತಮಂ॥೪೪॥**

ಅರ್ಥ.—ರಾಮ=ಎಲೈ ರಾಮನೇ, ಇಹ=ಈಗ, ಮಯಾ=ನನ್ನಿಂದ ಉದಿತಂ=ಹೇಳಲ್ಪಟ್ಟ ಮಾತನ್ನು, ಶೃಣುಷ್ವ=ಕೇಳು, ಪೂರ್ವಂ=ಪೂರ್ವದಲ್ಲಿ, ಮಹಾದ್ಭುತಂ=ಬಹಳ ಅದ್ಭುತವಾದ, ಧನುರ್ದ್ವಯಂ - ಎರಡು ಬಿಲ್ಲುಗಳು, ಅಭೂತ್-ಇದ್ದವು, ತತಃ-ಆ ಬಿಲ್ಲುಗಳಲ್ಲಿ, ಏಕಂ=ಒಂದನ್ನು, ಉಮಾಪತಿಃ - ಈಶ್ವರನು, ಆಧಾರಯತ್-ಧರಿಸಿದನು. ಅಪರಂ - ಮತ್ತೊಂದಾದ, ಉತ್ತಮೋತ್ತಮಂ=ಶ್ರೇಷ್ಠದಲ್ಲಿ ಶ್ರೇಷ್ಠವೆನಿಸಿದ, ಧನುಃ - ಧನುಸ್ಸನ್ನು, ರಮಾಪತಿಶ್ಚ=ಲಕ್ಷ್ಮೀಪತಿಯಾದ ನಾರಾಯಣನು, ಆಧಾರಯತ್=ಧರಿಸಿದನು.

ತಾತ್ಪರ್ಯ.—ಎಲೈ ರಾಮಚಂದ್ರ, ನಾನು ಹೇಳುವ ಮಾತನ್ನು ಕೇಳು ಪೂರ್ವದಲ್ಲಿ ದೇವಲೋಕದಲ್ಲಿ ಅದ್ಭುತವಾದ ಎರಡು ಧನುಸ್ಸು (ಬಿಲ್ಲುಗಳು) ಗಳಿದ್ದವು. ಅವುಗಳನ್ನು ಯಾರೂ ಹಿಡಿಯುವದಕ್ಕೂ ಆಗುತ್ತಿರಲಿಲ್ಲ. ಯಾವ ದೇವತೆಯೂ ಇವುಗಳನ್ನು ಮುಟ್ಟಲೇ ಇಲ್ಲ. ಇವುಗಳು ಹೀಗೆ ಅನುಪಯೋಗವಾದುದನ್ನು ನೋಡಿ ಆಗ ಉಮಾಪತಿಯಾದ ರುದ್ರದೇವರು ಒಂದು ಬಿಲ್ಲನ್ನೂ, ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಉತ್ತಮೋತ್ತಮವಾದ ಮತ್ತೊಂದು ಬಿಲ್ಲನ್ನೂ ವಹಿಸಿಕೊಂಡರೆಂದು ತಿಳಿ.

ಅವತಾರಿಕೆ.--ದೇವತೆಗಳೆಲ್ಲರೂ ಸೇರಿ ಒಂದಾಲೋಚನೆಯನ್ನು ಮಾಡಿದರು. ಈ ಲೋಕದಲ್ಲಿ ಸತ್ಪುರುಷರಿಗೂ ಕೂಡ ಪರತತ್ವ ಜ್ಞಾನವಿಲ್ಲದೇ ಪರತತ್ವವು ಶ್ರೀಹರಿ ಎಂದು ಕೆಲವರು, ಶಿವನೆಂದು ಕೆಲವರು ಭಾವಿಸಿ ಇವನೇ ಸರ್ವೋತ್ತಮನೆಂಬ ದೃಢ ಭಾವನೆಯನ್ನು ಪಡೆಯದೇ ಸಂಶಯಾತ್ಮಕರಾಗಿರುವರು. ಹೀಗೆ ಪರತತ್ವ ವಿಚಾರದಲ್ಲಿ ಸತ್ಪುರುಷರೇ ಸಂಶಯ ಪಡುವಂತಾದರೆ ಇನ್ನು ಸಾಮಾನ್ಯರ ಪಾಡೇನು ? ಆದ್ದರಿಂದ ನಾವು ಈ ವಿಷಯದಲ್ಲಿ ಒಂದು ಪರೀಕ್ಷೆಯನ್ನು ನಡಿಸಿ ಅದರ ಫಲಿತಾಂಶವನ್ನು ಲೋಕದಲ್ಲಿ ಪ್ರಖ್ಯಾತಿಗೆ ತರಬೇಕು. ಆಗ ಅದರಿಂದ ಸತ್ಪುರುಷರಿಗೆ ಈ ಸಂಶಯವು ಪರಿಹಾರವಾಗಿ ನಿಜ ತತ್ವಜ್ಞಾನ ಹುಟ್ಟಿ ಆ ಜ್ಞಾನದಿಂದ ಆ ಪರವಸ್ತುವಿನಲ್ಲಿ ಸರ್ವೋತ್ತಮವಾದ ಭಕ್ತಿಯನ್ನು ಪಡೆದು ಕೃತಕೃತ್ಯರಾಗಲಿ, ಎಂದು ನಿರ್ಧರಿಸಿ ಲೋಕ ಪ್ರಭುಗಳಾದ ಶ್ರೀಮನ್ನಾರಾಯಣನಲ್ಲಿಯೂ,

ಶ್ರೀಮನ್ಮಹೇಶ್ವರನಲ್ಲಿಯೂ ಬಂದು ತಮ್ಮ ಅಭಿಪ್ರಾಯವನ್ನು ವಿಜ್ಞಾಪಿಸಿದ ರೆಂಬುವುದನ್ನು ಈ ಶ್ಲೋಕವು ತಿಳಿಸುವುದು.

**ಶ್ಲೋಕ || ತದಾತುಲೋಕಸ್ಯ ನಿದರ್ಶನಾರ್ಥಿಭಿಃ ಸಮರ್ಥಿತೌ ಶೌಹರಿಶಂಕರೌ ಸುರೈಃ ರಣೇಸ್ಥಿತೌವಾಂ ಪ್ರಸಮೀಕ್ಷಿತುಂವಯಂ ಸಮರ್ಥಯಾಮಾತ್ರನಿದರ್ಶನಾರ್ಥಿನಃ ||೪೫||**

ಅರ್ಥ.—ತದಾತು-ಆಗಲಾದರೋ, ಲೋಕಸ್ಯ=ಸಜ್ಜನ ಮಂಡಲಿಗೆ, ನಿದರ್ಶನಾರ್ಥಿಭಿಃ=ಪರತತ್ವ ಜ್ಞಾನವನ್ನುಂಟುಮಾಡಬೇಕೆಂದು ಬಯಸುತ್ತಿರುವ, ಸುರೈಃ=ದೇವತೆಗಳಿಂದ, ತೌ-ಆ, ಹರಿಶಂಕರೌ-ಹರಿಹರರಿಬ್ಬರೂ, ಸಮರ್ಥಿತೌ=ಪ್ರಾರ್ಥಿಸಲ್ಪಟ್ಟರು. ಕಿಮಿತಿ=ಏನೆಂದರೆ ? ಅತ್ರ=ಈಗ, ನಿದರ್ಶನಾರ್ಥಿನ=ಪರತತ್ವ ಜ್ಞಾನಾರ್ಥಿಗಳಿಂದ, ವಯಂ=ನಾವುಗಳು, ರಣೆ-ಯುದ್ಧದಲ್ಲಿ, ಸ್ಥಿತೌ=ನಿಂತಿರುವ, ವಾಂ=ತಮ್ಮಿಬ್ಬರನ್ನೂ, ಪ್ರಸಮೀಕ್ಷಿತುಂ-ನೋಡುವುದಕ್ಕಾಗಿ, ಸಮರ್ಥಯಾಮಃ=ಪ್ರಾರ್ಥಿಸುತ್ತಿರುವೆವು, ಇಷ್ಟೇ ನಮ್ಮ ಪ್ರಾರ್ಥನೆ.

ತಾತ್ಪರ್ಯ.—ಹೇ ಪ್ರಭುವೇ ನಾವು ನಿನ್ನವರಷ್ಟೆ? ಲೋಕಾನುಗ್ರಹ ಮಾಡತಕ್ಕದ್ದು ನಮ್ಮಗಳ ಕರ್ತವ್ಯವು. ಈಗ ಲೋಕದಲ್ಲಿ ಸಜ್ಜನರಿಗೆ ಪರತತ್ವಜ್ಞಾನವಿಲ್ಲದೆ ಅವರವರ ಇಷ್ಟದಂತೆ ಯಾವುದನ್ನೊ ಸರ್ವೋತ್ತಮವೆಂದು ಭಾವಿಸುವಂತಾಗಿದೆ. ಇಂಥಾ ಸಂದೇಹಾವಸ್ಥೆಯನ್ನು ಪರಿಹರಿಸಿ ದೇವತೆಗಳಾದ ನಾವು ಸರಿಯಾದ ನಿದರ್ಶನಗಳನ್ನು ಕೊಟ್ಟು ಲೋಕಕ್ಕೆ ಪರತತ್ವವು (ಪರದೈವವು) ಇದೇ ಸರಿ ಎಂಬುವುದನ್ನು ಗೊತ್ತು ಮಾಡಿಕೊಡಬೇಕು. ಈ ವಿಚಾರದಲ್ಲಿ ನಮ್ಮೆಲ್ಲರಿಗೂ ದೊಡ್ಡವರೆನಿಸಿದ ತಮ್ಮಲ್ಲಿ ಅಲ್ಲದೆ ಮತ್ತ್ಯಾರಲ್ಲಿ ವಿಜ್ಞಾಪಿಸುವದು ? ಪ್ರಕೃತ ಶ್ರೀಕೃಷ್ಣನಾರಾಯಣನೆನಿಸಿರುವ ತಮ್ಮನ್ನೆ ಕೆಲವರು ಪರದೈವವೆಂದು ಹೇಳುವರು. ಮಹೇಶ್ವರನು ಪರದೈವವೆಂದು ಹೇಳುವರು, ಮಹೇಶ್ವರನು ಪರದೈವವೆಂದು ಕೆಲವರು ಹೇಳುವರು. ಈ ಸಂಶಯ ಪರಿಹಾರಕ್ಕಾಗಿ ತಮ್ಮಗಳನ್ನು ಪ್ರಾರ್ಥಿಸಲು ನಾವುಗಳು ಬಂದಿರುವೆವು. ತಾವು ಉಭಯರೂ ಈ ನಮ್ಮ ಪ್ರಾರ್ಥನೆಗೆ ಮನಸ್ಸನ್ನು ಕೊಟ್ಟು ರಣಾಂಗದಲ್ಲಿ ನಿಂತು ತಮ್ಮ ತಮ್ಮ ಸಾಮರ್ಥ್ಯವನ್ನು ಪ್ರಕಟಿಸಿದಲ್ಲಿ ನಾವುಗಳು ಪೂರ್ಣಸಮರ್ಥರು ಇಂತಹವರೆಂಬುದನ್ನು ತಿಳಿದು ಪರತತ್ವವು ಇದೇ ಸರಿಯೆಂಬುದನ್ನು ಲೋಕಕ್ಕೆ ನಿದರ್ಶನ ಮಾಡಿಕೊಡಲನುಕೂಲವಾಗುವುದೆಂದು ಬೇಡಿಕೊಂಡರು.

ವಿಶೇಷಾರ್ಥ.—ಜ್ಞಾನ, ಬಲ, ಕ್ರಿಯಾದಿಗಳು ಯಾರಲ್ಲಿ ಇತರಾಪೇಕ್ಷೆಯು ಅಧಿಕವಾಗಿರುವವೋ ಅವರನ್ನು ಸರ್ವೋತ್ತಮರೆಂದು ಭಾವಿಸತಕ್ಕದ್ದು. ಇದು ಪರೀಕ್ಷಾ ವಿಧಿಯಿಂದ ವ್ಯಕ್ತವಾಗಬೇಕಾಗಿದೆ. ಹರಿ—ಹರರೆನ್ನಿಸಿದ ತಾವು ಉಭಯರೂ ನಿಂತು ಯುದ್ಧಮಾಡಿ ಒಬ್ಬರು ಮತ್ತೊಬ್ಬರನ್ನು ಸೋಲಿಸಿದರೆ ಆಗ ಗೆದ್ದವರು ಸರ್ವೋತ್ತಮರೆನಿಸುವರು. ಈ ಜ್ಞಾನ ಬಲ ಕ್ರಿಯಾದಿಗಳು ಮೂರು ಪರಬ್ರಹ್ಮನಲ್ಲಿ ಸ್ವಭಾವಸಿದ್ಧವಾಗಿವೆ ಇವುಗಳು ಅಪರಿಮಿತವೂ ಆಗಿವೆ. ಸ್ವಾಮಿಯನ್ನು ಬಿಟ್ಟು ಮತ್ತೊಬ್ಬರಲ್ಲಿ ಇವುಗಳನ್ನು ಕಾಣುವುದು ಅಪೂರ್ವ, ಏತಕ್ಕೆಂದರೆ—ಸ್ವಾಮಿಯನುಗ್ರಹದಿಂದ ಇವುಗಳು ಇತರರಲ್ಲಿ ಅವರ ಯೋಗ್ಯತೆಗೆ ತಕ್ಕಂತೆ ಪ್ರಕಾಶಕ್ಕೆ ಬರುವುವು. ಈ ಅಂಶವನ್ನು "ಸ್ವಾಭಾವಿಕೀ ಜ್ಞಾನಬಲ ಕ್ರಿಯಾಚ" ಎಂಬ ವೇದವೇ ನಿರೂಪಿಸುತ್ತಿದೆಯಾಗಿ ಈಗ ತಮ್ಮಲ್ಲಿರುವ ಬಲವನ್ನು ಪ್ರಕಟ ಮಾಡಬೇಕೆಂದು ನಮ್ಮ ಪ್ರಾರ್ಥನೆ ಎಂದು ದೇವತೆಗಳು ಕೇಳಿಕೊಂಡರು.

ಅವತಾರಿಕೆ.—ಹೀಗೆ ಲೋಕ ಹಿತೇಚ್ಛೆಯಿಂದ ತಮ್ಮಲ್ಲಿ ಪ್ರಾರ್ಥಿಸಿಕೊಂಡ ದೇವತೆಗಳ ಪ್ರಾರ್ಥನೆಯನ್ನು ಶ್ರೀಶಂಕರ—ನಾರಾಯಣರಿಬ್ಬರೂ ಅನುಮೋದಿಸಿ ಯುದ್ಧವನ್ನು ನಡಿಸಿದ ಕ್ರಮವನ್ನು ಈ ಶ್ಲೋಕವು ನಿರೂಪಿಸುವದು.

**ಶ್ಲೋಕ || ತತೋಹಿ ಯುದ್ಧಾಯ ರಮೇಶ ಶಂಕರೌ ವ್ಯವಸ್ಥಿತೌ ತೇಧನುಷೀ ಪ್ರಗೃಹ್ಯ | ಯತೋಂತರಸ್ಯೈಷನಿಯಾಮಕೋ ಹರಿಸ್ತತೋ ಹರೋಗ್ರೇಸ್ಯ ಶಿಲೋಪಮೋಭೂತ್ ||೪೭||**

ಅರ್ಥ.—ತತಃ=ಹೀಗೆ ದೇವತೆಗಳು ಪ್ರಾರ್ಥಿಸಿದ ತರುವಾಯ, ರಮೇಶ=ಶ್ರೀನಾರಾಯಣನು, ಶಂಕರೌ=ಮಹೇಶ್ವರನೂ ಕೂಡ, ತೇ=ಆಶಾರ್ಙ ಮತ್ತೂ ಪಿನಾಕವೆಂಬ, ಧನುಷೀ=ಧನುಸ್ಸುಗಳನ್ನು, ಪ್ರಗೃಹ್ಯ=ಹಿಡಿದುಕೊಂಡು, ಯುದ್ಧಾಯ=ಯುದ್ಧಕೋಸ್ಕರ, ವ್ಯವಸ್ಥಿತೌಹಿ = ನಿಂತುಬಿಟ್ಟರು. ಏಷಃ=ಶ್ರೀಹರಿಯು, ಅಸ್ಯ=ಈ ಮಹಾದೇವನ, ಅಂತಃ=ಒಳಗೆ, (ಹೃತ್ಕಮಲದಲ್ಲಿ) ಯತಃ=ಯಾವ ಕಾರಣದಿಂದ, ನಿಯಾಮಕಃ=ನೇಮಿಸತಕ್ಕವನೋ, ತತಃ=ಆ ಕಾರಣದಿಂದ, ಹರಃ-ಶಂಭುವು, ಅಸ್ಯ=ಈ ಶ್ರೀಹರಿಯ, ಅಗ್ರೇ-ಮುಂದುಗಡೆಯಲ್ಲಿ (ಸಮಕ್ಷಮ) ಶಿಲೋಪಮ-ಶಿಲೆಗೆ ಸದೃಶನಾಗಿ, ಅಭೂತ್-ಆಗಿಬಿಟ್ಟನು.

ತಾತ್ಪರ್ಯ.—ಲೋಕದಲ್ಲಿ ತತ್ವಜ್ಞಾನವನ್ನುಂಟುಮಾಡಬೇಕೆಂದು ಬಯಸಿದ ದೇವತೆಗಳು ಹರಿಹರರನ್ನು ಪರಸ್ಪರ ಯುದ್ಧಮಾಡಿ ತಮ್ಮ ತಮ್ಮ ಬಲವನ್ನು ಪ್ರಕಾಶಕ್ಕೆ ತರಬೇಕೆಂದು ಬೇಡಿಕೊಂಡ ವಡನೆಯೇ ಶಂಕರನಾರಾಯಣರಿಬ್ಬರೂ ಲೋಕಾನುಗ್ರಹಕಾರಕರಾದ್ದರಿಂದ ಅವರ ಪ್ರಾರ್ಥನೆಯನ್ನೊಪ್ಪಿ ನೈಜವಾದ ತಂತಮ್ಮ ಬಲಿಪ್ರಕಟನೆಗಾಗಿ ಮೇಲೆ ಹೇಳಿದ ಧನುಸ್ಸುಗಳನ್ನು ಹಿಡಿದು ಯುದ್ಧಮಾಡಲು ನಿಂತರು. ಈ ಮಹಾಬಲಿಷ್ಠರುಗಳಾದ ಜಗದೀಶ್ವರರೆನಿಸಿದ ಹರಿ—ಹರರ ಯುದ್ಧ ಚಮತ್ಕಾರವನ್ನೂ, ಬಾಹುಬಲವನ್ನೂ ನೋಡಲಪೇಕ್ಷಿಸಿ ಸಮಸ್ತ ದೇವತಾ ಮಂಡಲಿಯೂ, ಬಹು ಕುತೂಹಲದಿಂದ ನೆರೆಯಿತು. ಯುದ್ಧವು ಬಹು ಘೋರವಾಗಿಯೂ ಪರಸ್ಪರ ಜಯಾಕಾಂಕ್ಷೆಯಿಂದಲೂ ನಡಿಯುತ್ತಾ ಬಂದಿತು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಶಂಕರನ ಕೈತಗ್ಗಿ ಶ್ರೀಹರಿಯೊಡನೆ ಯುದ್ಧ ಮಾಡಲಾರದೇ ಬಂಡೆಯಂತೆ ಸ್ತಬ್ಧನಾಗಿ ನಿಂತುಬಿಟ್ಟನು.

ವಿಶೇಷಾರ್ಥ.—ಶ್ರೀಮನ್ನಾರಾಯಣನು ಸಕಲ ಚೇತನ ವರ್ಗದ ಹೃದಯದಲ್ಲಿ ತಾನೇ ಬಿಂಬರೂಪಿಯಾಗಿದ್ದು ಆ ಚೇತನರ ಮನ ಆದಿ ಇಂದ್ರಿಯಪ್ರೇರಕರೆನ್ನಿಸಿರುವ ಸಮಸ್ತ ತತ್ತ್ವಾಭಿಮಾನಿ ದೇವತೆಗಳನ್ನೂ ಅವರವರ ಕಾರ್ಯಗಳಲ್ಲಿ ತೊಡಗುವಂತೆ ತನ್ನಿಚ್ಛೆಗೆ ಬಂದಾಗ ಪ್ರೇರಿಸುವನು. ತನ್ನಿಚ್ಛೆಗೆ ಬಾರದ ವೇಳೆಗಳಲ್ಲಿ ಆ ತತ್ವಾಭಿಮಾನಿಗಳು ತನ್ನ ಪ್ರೇರಣೆಯಿಂದ ಕಾರ್ಯೋನ್ಮುಖರಾಗದಂತೆ ಸ್ತಬ್ಧರಾಗಿ ಎಂದರೆ ನಿರ್ವ್ಯಾಪಾರರಾಗಿ ಬಿಡುವಂತೆಮಾಡುವನು. ಈ ರೀತಿಯಾಗಿ ಸ್ವಾಮಿಯು ಪೂರ್ಣ ಸ್ವಾತಂತ್ರ್ಯ ಉಳ್ಳವನಾಗಿರುವನೆಂದು ಶಾಸ್ತ್ರಗಳು ಸಾರಿ ಹೇಳುವವು. ಆದ್ದರಿಂದಲೇ ಶ್ರೀಮದಾಚಾರ್ಯರು " ಪ್ರೇರಕೋ ಶೇಷಬುದ್ಧೀನಾಂ ಸಗಾಯತ್ರ್ಯರ್ಥ ಈರಿತಃ ಎಂದು ಹೇಳಿರುವರು. ಸರ್ವಚೇತನರ ಮನೋನಿಯಾಮಕರೆಂದು ಪ್ರಸಿದ್ಧರಾದ ಮಹಾದೇವರು ತನ್ನೊಡನೆ ಯುದ್ಧಕ್ಕೆ ನಿಂತ ವೇಳೆಯಲ್ಲಿ ಶ್ರೀಹರಿಯು ಅವರ ಹೃದಯ ಸ್ಥಾನವರ್ತಿಯಾಗಿ ನಿಂತು ಅವರನ್ನು ಪ್ರೇರಿಸಿ ಮನೋ ವ್ಯಾಪಾರ ಮಾಡಿಸುವ ಸ್ವಾತಂತ್ರ್ಯವು ತನ್ನದೇ ಹೊರ್ತು ನಿನ್ನದಲ್ಲವೆಂದು ಮಹೇಶ್ವರನಿಗೆ ತಿಳಿಯಪಡಿಸುವುದಕ್ಕಾಗಿ ಯುದ್ಧದಲ್ಲಿ ಪಿನಾಕ ಧನುಸ್ಸಿನಿಂದ ನಾನು ಶ್ರೀಹರಿಯನ್ನು ಗೆಲ್ಲುವೆನೆಂದು ಅಹಂಕಾರಕ್ಕೀಡಾಗಿದ್ದ ಮಹೇಶ್ವರನ ಸಂಕಲ್ಪವನ್ನು ಹಾಳುಮಾಡಿ ಸ್ಥಂಭೀ

ಭೂತನಾಗುವಂತೆ ಮಾಡಿದನು. ಈ ತೆರನಾದ ಮಹಿಮಾ ಪ್ರದರ್ಶನದಿಂದ ಮಹೇಶ್ವರನೂ ಅವನನ್ನು ಪರದೈವನೆಂದು ಭ್ರಾಂತಿಪಡುವ ಜನರೂ ಈ ಭಗವಂತನಲ್ಲಿರುವ ಸಕಲ ಜಗತ್ತ್ರೇರಕತ್ವ ರೂಪವಾದ, ಸತ್ತತ್ವವನ್ನರಿತುಕೊಳ್ಳುವಂತೆ ಮಾಡಿದನೆಂದು ಮುಖ್ಯ ತಾತ್ಪರ್ಯವು.

ಅವತಾರಿಕೆ.—ರಮಾಪತಿಯ ಇದಿರಿನಲ್ಲಿ ಈಶ್ವರನು ಜಡವಸ್ತುವಿನಂತೆ ನಿಂತಮೇಲೆ ತತ್ವ ವ್ಯವಸ್ಥೆಯು ಹೇಗಾಯಿತೆಂಬುದನ್ನು ಈ ಶ್ಲೋಕವು ತಿಳಿಸುತ್ತದೆ.

**ಶ್ಲೋಕ || ಶಶಾಕನೈವಾಥಯದಾಭಿ ವೀಕ್ಷಿತುಂಪ್ರಸ್ಪಂದಿತುಂವಾಕುತ ಏವ ಯೋದ್ಧುಂ । ಶಿವಸ್ತದಾದೇವಗಣಾಃ ಸಮಸ್ತಾಃ ಶಶಂಸುರುಚ್ಚೈರ್ಜಗತೋ ಹರೇರ್ಬಲಂ ||೪೭||**

ಅರ್ಥ.—ಅಥ=ಹೀಗೆ ಸ್ಥಂಭೀಭೂತನಾದ ಬಳಿಕ, ಶಿವಃ=ಈಶ್ವರನು ಅಭಿವೀಕ್ಷಿತುಂ=ಕಣ್ಣು ತೆಗೆದು ನೋಡಲಿಕ್ಕಾಗಲೀ, ಪ್ರಸ್ಪಂದಿತುಂ=ಚಲಿಸಲಿಕ್ಕಾಗಲೀ, ಯದಾ=ಯಾವಾಗ, ನೈವಶಶಾಕ-ಸಮರ್ಥನಾಗಲಿಲ್ಲವೋ ? ಆಗ, ಯೋದ್ಧುಂ=ಯುದ್ಧಮಾಡಲಿಕ್ಕೆ, ಕುತಏವ=ಹೇಗೆ ತಾನೇ ಆದಿತು. ತದಾ=ಆಗ, ಸಮಸ್ತಾಃ-ಎಲ್ಲಾ, ದೇವಗಣಾಃ=ದೇವತಾ ಮಂಡಲಿಯು, ಜಗತಃ=ರಮಾದೇವಿ ಮೊದಲುಗೊಂಡು ಎಲ್ಲಾ ಜಗತ್ತಿಗಿಂತಲೂ, ಹರೇಃ-ಶ್ರೀಹರಿಯ, ಬಲಂ=ಸಾಮರ್ಥ್ಯವು, ಉತ್ತಮಂ=ಸರ್ವೋತ್ತಮವಾದುದೇಸರಿ, ಇತಿ-ಹೀಗೆಂದೇ, ಉಚ್ಚೈಃ-ಸ್ಪಷ್ಟವಾಗಿ, ಹೊಗಳಿದರು.

ತಾತ್ಪರ್ಯ.—ದೇವತೆಗಳ ಪ್ರಾರ್ಥನೆಯಂತೆ ಹರಿ-ಹರರಿಬ್ಬರೂ ಸ್ವಸಾಮರ್ಥ್ಯವನ್ನು ಪ್ರಕಟಿಸಲೋಸುಗ ಯುದ್ಧಕ್ಕೆ ನಿಂತಬಳಿಕ ಸರ್ವೋತ್ತಮನಾದ ಹರಿಯು ಸ್ವಸಾಮರ್ಥ್ಯವನ್ನು ಅದ್ಭುತವಾಗಿ ಪ್ರಕಟಿಸಿದ್ದರಿಂದ ಅವನಿದಿರಿಗೆ ಈಶ್ವರನು ಕಣ್ತೆರೆದು ಕಾಣಲಿಕ್ಕೂ ಸಹ ಆಗಲಿಲ್ಲ. ಆಗ ಶ್ರೀಹರಿಯ ತೇಜಸ್ಸಿನಿಂದ ಈಶ್ವರನ ಕಣ್ಣಿನ ಶಕ್ತಿಯು ಕುಂದಿತೆಂದು ತಾತ್ಪರ್ಯ. ಇದರಿಂದ ಈಶ್ವರನ ಜ್ಞಾನೇಂದ್ರಿಯಗಳೆಲ್ಲಾ ನಿಂತುಹೋದವು. ಮತ್ತೂ ಶ್ರೀಹರಿಯನ್ನು ಕಾಣಲಸಾಧ್ಯವಾದ್ದರಿಂದ ಅಲ್ಲಿ ನಿಲ್ಲದೇ ಮತ್ತೆಲ್ಲಿ

ಗಾದರೂ ಓಡಿಹೋಗೋಣವೆಂದರೆ ಕೈಕಾಲುಗಳು ಕದಲಲಾರದೆ ನಿಂತು ಬಿಟ್ಟವು ಎಂದಮೇಲೆ ಕರ್ಮೇಂದ್ರಿಯ ವ್ಯಾಪಾರವೂ ನಿಂತಂತಾಯಿತು. ಹೀಗೆ ಎರಡು ಜಾತಿಯ ಇಂದ್ರಿಯಗಳಿಂದ ಈ ಸ್ಥೂಲ ಶರೀರವು ಎಲ್ಲಾ ಕಾರ್ಯಗಳನ್ನೂ ನಡೆಯಿಸಬೇಕೇ ವಿನಾ ಇಂದ್ರಿಯ ಸಹಾಯವಿಲ್ಲದೇ ಸ್ವತಂತ್ರವಾಗಿ ನಡಿಸಲಾರದು, ಆದ್ದರಿಂದ ಮುಂದಕ್ಕೆ ಈಶ್ವರನು ಮಾಡತಕ್ಕದ್ದೇನಿದೆ ? ಯುದ್ಧ ಮಾಡುವುದು ಹೇಗೆ ? ಇಷ್ಟಾದಮೇಲೆ ಜಯಾಪಜಯಗಳನ್ನು ನಿರ್ಧರಿಸುವುದು ಕಷ್ಟವೇ ? ಒಡನೆಯೇ ದೇವತೆಗಳು ಹೀಗೆ ತತ್ವವನ್ನು ನಿರ್ಧರಿಸಿದರು. ಶ್ರೀರಮಾದೇವಿಯು ಮೊದಲುಗೊಂಡು ಸಕಲ ಜಗತ್ತೂ ಭಗವಂತನ ಅಧೀನವು. ಅವನ ಪ್ರೇರಣೆ ಇಲ್ಲದೇ ಯಾರೂ ಯಾವದನ್ನೂ ತಮ್ಮಿಚ್ಛೆಯಂತೆ ಸುತರಾಂ ನಡಿಸಲಾರರು. ಭಗವಂತನ ಪ್ರೇರಣೆಯೂ ಅವನ ಅನುಗ್ರಹವೂ ಇಲ್ಲದಮೇಲೆ ಇಂದ್ರಿಯೇಶರಾದ ಸೂರ್ಯಾದಿ ಸಮಸ್ತ ದೇವತೆಗಳೂ ತಂತಮ್ಮ ಅಧಿಕಾರಕ್ಕೊಳಪಟ್ಟ ಇಂದ್ರಿಯಗಳನ್ನು ಕಾರ್ಯೋನ್ಮುಖವಾಗುವಂತೆ ಮಾಡಲಾರರೆಂಬುದು ಈಗ ವ್ಯಕ್ತವಾಯಿತು. ಶ್ರೀಪರಮಾತ್ಮನ ಬಲವೇ ಅದ್ಭುತವು. ಅದನ್ನು ಮೀರಲು ಮತ್ತಾರಿಗೂ ಸಾಧ್ಯವಿಲ್ಲೆಂದು ಘಟ್ಟಿಯಾಗಿ ಕೂಗಿ ಹೇಳುತ್ತಾ ಶ್ರೀಹರಿಯೇ ಸರ್ವೋತ್ತಮನೆಂದು ಸಾರಿಬಿಟ್ಟರೆಂದು ತಾತ್ಪರ್ಯ.

ವಿಶೇಷಾರ್ಥ-—ಪ್ರತ್ಯಕ್ಷ ದರ್ಶನದಿಂದ ಹರಿ—ಹರರಲ್ಲಿರುವ ತಾರತಮ್ಯವನ್ನು ತಿಳಿದವರು ಇದರಂತೆಯೇ ಸರ್ವ ದೇವತಾಮಂಡಲಿಯಲ್ಲಿಯೂ ರಮಾಪತಿಯು ಮೇಲೆನಿಸುವನು. ಅವನಿಗೆ ಸಮರಾಗಲೀ, ಅವನನ್ನು ಮೀರಿದವರಾಗಲೀ, ಈ ಜಗತ್ತಿನಲ್ಲೇ ಇಲ್ಲ. ಸರ್ವರೂ ಎಲ್ಲಾ ಅಂಶದಲ್ಲಿಯೂ ಅವನಿಗಿಂತ ನೀಚರು, ಅವನು ಸರ್ವಾಪೇಕ್ಷೆಯಾ ಅಧಿಕನು. (ಸರ್ವೇಶ್ವರನು) ಶೃತಿಯೂ ಈ ಅಂಶವನ್ನು ಸಾರಿ ಹೇಳುತ್ತಿದೆ. ಮೋಕ್ಷಾರ್ಥಿಯು ಈ ರೀತಿಯಾಗಿ ತತ್ವವನ್ನ ತಿಳಿಯಬೇಕೆಂದು ನಿರ್ಧರಿಸಿದರು.

ಅವತಾರಿಕೆ.—ಈ ಶ್ಲೋಕವೂ ಮೇಲಿನ ಅಂಶವನ್ನೇ ಸ್ಪಷ್ಟಪಡಿಸುವುದು

**ಶ್ಲೋಕ ॥ ಯದೀರಣೇನೈವವಿನೈಷಶಂಕರಃ ಶಶಾಕನಪ್ರಶ್ನಸಿತುಂಚಕೇವಲಂ । ಕಿಮುತ್ರವಕ್ತವ್ಯಮತೋಹರೇರ್ಬಲಂಹರಾತ್ಪರಂ ಸರ್ವತ ಏವಚೇತಿ ॥೪೮॥**

ಅರ್ಥ.—ಏಷಃ=ಈ, ಶಂಕರಃ-ಋದ್ರನು, ಯದೀರಣೇನ-ಯತ್ =ಯಾವ ಶ್ರೀಹರಿಯ, ಈರಣೇನ-ಪ್ರೇರಣೆಯಿಂದ, ವಿನೈವ=ಇಲ್ಲದೇ, ಪ್ರಶ್ವಸಿತು-ಶ್ವಾಸೋಚ್ಛ್ವಾಸಗಳನ್ನಾಡಿಸಲಿಕ್ಕೂ ಕೂಡ, ನಶಶಾಕ=ಸಮರ್ಥನಲ್ಲವೋ, ಯತಃ-ಆದ್ದರಿಂದ, ಅತ್ರ=ಈ ಸಂದರ್ಭದಲ್ಲಿ, ಹರೇಃ = ಪರಮಾತ್ಮನ, ಬಲಂ=ಸಾಮರ್ಥ್ಯವು, ಹರಾತ್=ಈಶ್ವರನಿಗಿಂತಲೂ, ಪರಂ=ಉತ್ಕೃಷ್ಟವು, ಇತಿ=ಹೀಗೆಂದು, ಕಿಂವಕ್ತವ್ಯಂ=ಹೇಳತಕ್ಕದ್ದೇನಿದೆ? ಚ=ಮತ್ತೂ, ಸರ್ವತಏವ-ಎಲ್ಲರಿಗಿಂತ, ಪರಂ=ಉತ್ಕೃಷ್ಟವಾದುದೇ ಸರಿ.

ತಾತ್ಪರ್ಯ.—ಋದ್ರದೇವರು ಅವರ ಹೃದಯ ಕಮಲವರ್ತಿಯಾದ ಶ್ರೀಭಗವಂತನ ಪ್ರೇರಣೆಯಲ್ಲದಿದ್ದರೆ ಶ್ವಾಸೋಚ್ಛ್ವಾಸಗಳನ್ನಾಡಿಸಲಿಕ್ಕೂ ಅಸಮರ್ಥರಾಗುವರೆಂಡಮೇಲೆ ಋದ್ರದೇವರಿಗಿಂತ ಸ್ವಾಮಿಯು ಸರ್ವಶ್ರೇಷ್ಠನೆಂದು ಹೇಳಬೇಕಾಗಿದೆಯೇ. ಇಷ್ಟು ಮಾತ್ರವೇ ಅಲ್ಲ. ರಮಾಬ್ರಹ್ಮಾದಿ ಸಕಲ ದೇವತಾಪೇಕ್ಷೆಯಾ ಅತ್ಯಧಿಕ ಬಲಶಾಲಿಯಾದವನೆಂದೂ ತಿಳಿಯಬೇಕು, ಎಂಡಮೇಲೆ ಅವನು ಸರ್ವೇಶ್ವರನೆಂದು ತಿಳಿಯುವುದೇ ನಮಗುಚಿತವೆಂದು ತಿಳಿದವರಾದ ಆ ದೇವತೆಗಳು ಶ್ರೀಹರಿಯನ್ನು ಮೇಲಿನ ಶ್ಲೋಕದಲ್ಲಿ ತಿಳಿಸಿದಂತೆ ಸರ್ವತ್ರ ಶ್ಲಾಘಿಸಿದರೆಂದು ಮುಖ್ಯಾಶಯವು

ವಿಶೇಷಾರ್ಥ—ಭಗವದ್ಗೀತಾ ೭ನೇ ಅಧ್ಯಾಯದಲ್ಲಿ ಸ್ವಾಮಿಯು ಹೇಳುವಂತೆ "ಬಲಂಬಲವತಾಮಸ್ಮಿಕಾಮರಾಗ ವಿವರ್ಜಿತಂ" ತಾನು ಪ್ರಕಟಿಸಿದ ಬಲದಿಂದ ಸ್ವಾಮಿಯೇ ಸರ್ವಾಂತರ್ಯಾಮಿಯಾಗಿ ಬಲಕರನಾಗುವನೆಂಬಂಶವನ್ನು ಭಕ್ತರು ಭಾವಿಸಬೇಕೇ ವಿನಾ ಬೇರೆಯಲ್ಲ. ಇತರರಲ್ಲಿ ಕಂಡುಬರುವ ಬಲಾದಿಗಳು ತಮ್ಮವೇ ಎಂದು ಅಹಂಕಾರಪಡಬಾರದು. ಆದ್ಧರಿಂದ ಭಕ್ತ ಪ್ರಹ್ಲಾದನು ಹಿರಣ್ಯಕಶ್ಯಪುವಿಗೆ ಉತ್ತರವಿತ್ತಾಗ "ಸವ್ವೈಬಲಂ ಬಲಿನಾಂಚಾಪರೇಷಾಂ" ಎಂದು ಕಂಠೋಕ್ತವಾಗಿ ಭಗವಂತನ ಬಲವನ್ನು ಶ್ಲಾಘಿಸಿರುವನೆಂದು ಶ್ರೀಮದ್ಭಾಗವತ ಸಪ್ತಮ ಸ್ಕಂಧವು ಸ್ಪಷ್ಟಪಡಿಸಿದೆಯಾಗಿ, ಯಾವ ಕ್ರಮದಿಂದಲೂ ಶ್ರೀಹರಿಯೇ ಪರದೈವವೆಂದು ಭಾವಿಸಬೇಕೆಂದು ಮುಖ್ಯಾಭಿಪ್ರಾಯವು.

ಅವತಾರಿಕೆ.—ಈ ರೀತಿಯಲ್ಲಿ ಶ್ರೀಹರಿಯ ಇದಿರಿನಲ್ಲಿ ತನ್ನ ಬಲವನ್ನು ತೋರಿಸಲು ಮಾಡಿದ ಶಿವನ ಯತ್ನವು ಕೈಗೂಡದಂತಾಗಿ ಆತನು

ಸ್ತಬ್ಧನಾದ ಬಳಿಕ ಈಶ್ವರನೂ ಪರಮಭಾಗವತೋತ್ತಮನಾದದರಿಂದ ಶ್ರೀಹರಿಮಹಿಮಾದರ್ಶನಾನಂತರ ವಿವೇಕವನ್ನು ಪಡೆದು ಪಶ್ಚಾತ್ತಾಪ ಪುರಸ್ಸರವಾಗಿ ಶ್ರೀಹರಿಗೆ ಕ್ಷಮಾಪಣೆಯನ್ನು ಬೇಡಿದನೆಂಬಂಶವನ್ನು ಮುಂದಿನ ಶ್ಲೋಕವು ಸ್ಪಷ್ಟಪಡಿಸುವುದು.

**ಶ್ಲೋಕ ।। ತತಃ ಪ್ರಣಮ್ಯಾಶು ಜನಾರ್ದನಂಹರಃ ಪ್ರಸನ್ನದೃಷ್ಟ್ಯಾ ಹರಿಣಾಭಿವೀಕ್ಷಿತಃ । ಜಗಾಮಕೈಲಾಸಮಮುಷ್ಯತದ್ಧನುಸ್ತ್ವಯಾ ಪ್ರಭಗ್ನಂಕಿಲಲೋಕಸನ್ನಿಧೌ ।।೪೯।।**

ಅರ್ಥ.—ತತಃ-ಯುದ್ಧದಲ್ಲಿ ನಿರ್ವ್ಯಾಪಾರನಾದ ಅನಂತರ, ಹರಃ-ಈಶ್ವರನು, ಆಶು=ಬೇಗನೆ, ಜನಾರ್ದನಂ-ದುರ್ಜನರಿಗೆ ಪೀಡಾಕರನಾದ ಶ್ರೀಹರಿಯನ್ನು, ಪ್ರಣಮ್ಯ-ಭಕ್ತಿಯಿಂದ ನಮಸ್ಕರಿಸಿ, ಪ್ರಸನ್ನದೃಷ್ಟ್ಯಾ= ಪ್ರಸನ್ನ=ಅನುಗ್ರಹ ಪುರಸ್ಸರವಾದ, ದೃಷ್ಟ್ಯಾ=ದೃಷ್ಟಿಯಿಂದ, (ದೃಷ್ಟಿಯುಳ್ಳ) ಹರಿಣಾ=ಶ್ರೀಹರಿಯಿಂದ, ಅಭಿವೀಕ್ಷಿತಃ=ಅವಲೋಕಿಸಲ್ಪಟ್ಟವನಾದ, ಸಃ-ಶಿವನು, ಕೈಲಾಸಂ=ತನ್ನ ವಾಸಸ್ಥಾನವಾದ ಕೈಲಾಸಪರ್ವತವನ್ನು ಕುರಿತು, ಜಗಾಮ – ಹೊರಟುಹೋದನು, ಅಮುಷ್ಯ = ಇಂಥಾ ಮಹೇಶ್ವರನ ಕೈಯ್ಯಲ್ಲಿ ಹಿಡಿಯಲ್ಪಟ್ಟ, ತತ್=ಆ ಪಿನಾಕವೆಂದು ಪ್ರಸಿದ್ಧವಾದ, ಧನುಃ=ಬಿಲ್ಲು, ತ್ವಯಾ-ನಿನ್ನಿಂದ, ಲೋಕಸನ್ನಿಧೌ-ಲೋಕ=ಜನಕರಾಯನ ಸಭೆಯಲ್ಲಿ ನೆರೆದಿದ್ದ ಮಹಾಜನರ, ಸನ್ನಿಧೌ = ಸಮಕ್ಷಮದಲ್ಲಿ, ಪ್ರಭಗ್ನಂಕಿಲ=ಭಂಜಿಸಲಾಯಿತಷ್ಟೆ ? (ಮುರಿಯಲಾಯಿತಷ್ಟೆ )

ತಾತ್ಪರ್ಯ.—ಹೀಗೆ ಹರಿ—ಹರರಿಗೆ ನಡೆದ ಯುದ್ಧದಲ್ಲಿ ಶ್ರೀಹರಿಯ ಅಪಾರ ಸಾಮರ್ಥ್ಯದಿಂದ ಸೋತ ಮಹಾದೇವನು, ವಿವೇಕ ಪಡೆದು ತಾನು ಶ್ರೀಹರಿಯನ್ನು ಎದುರಿಸಿದ್ದು ಪರಮಾಪರಾಧವೆಂದು ತಿಳಿದು ಸ್ವಾಮಿಯನ್ನು ನಮಸ್ಕರಿಸಿ ಕ್ಷಮೆಯನ್ನು ಬೇಡಿದನು. ಆಗ ಕ್ಷಮಾಸಮುದ್ರನಾದ ಸ್ವಾಮಿಯು ತನ್ನ ಉದಾರ ಭಾವವನ್ನು ಪ್ರಕಟಿಸಿ ಅನುಗ್ರಹ ದೃಷ್ಟಿಯಿಂದ ಶಂಭುವನ್ನು ನೋಡಿ ಅಭಯದಾನಮಾಡಿದನು. ಋದ್ರದೇವರು ಹರ್ಷ ಉಳ್ಳವರಾಗಿ ತಮ್ಮ ಕೈಲಾಸವನ್ನು ಕುರಿತು ತೆರಳಿದರು. ಈ ತೆರನಾದ ಶಿವಧನುವನ್ನು, ಎಲೈ ರಾಮಚಂದ್ರ ನೀನು ಆ ಜನಕನ ಸಭೆಯಲ್ಲಿ ಸೇರಿದ್ದ ಮಹಾಜನರ ಸಮಕ್ಷಮ ಮುರಿದೆಯಲ್ಲವೆ ? ಎಂದು ಪರಶುರಾಮನು ಶ್ರೀರಾಮನೊಡನೆ ನುಡಿದನು.

ವಿಶೇಷಾರ್ಥ.--ದೇವತೆಗಳು ಭಗವಂತನಿಗೆ ಅನುಗ್ರಾಹ್ಯ ಕೋಟಿಗೆ ಸೇರಿದವರು. ಅವರು ಒಂದುವೇಳೆ ಅಜ್ಞಾನದಿಂದ ಏನಾದರೂ ಅಪರಾಧ ಮಾಡಿದರೆ ಸ್ವಾಮಿಯು ಅದನ್ನು ಉತ್ತರ ಕ್ಷಣದಲ್ಲಿಯೇ ಮನ್ನಿಸುವುದು ಸ್ವಭಾವ. ಈ ನಿಯಮಗಳನ್ನು ಅನುಸರಿಸಿ ರುದ್ರದೇವರು ಶರಣಾಗತರಾಗಲು ಸ್ವಾಮಿಯು ಅವರ ವಿಷಯದಲ್ಲಿ ಪ್ರಸನ್ನನಾಗಿ ಕರುಣಾದೃಷ್ಟಿಯಿಂದ ನೋಡಿದನು. ಅವರು ಮರುಮಾತನಾಡದೇ ಸ್ವಸ್ಥಳವನ್ನು ಕುರಿತು ತೆರಳಿದರು. ಎಂದು ಹೇಳಿದ್ದರಿಂದ ರುದ್ರದೇವರಿಗೆ ಭಗವಂತನಲ್ಲಿರುವ ಗೌರವಾತಿಶಯವೂ ಭಯ ಭಕ್ತಿಗಳೂ ಸ್ಪಷ್ಟಪಡುವವು. ತ್ರಿಮೂರ್ತಿಗಳಲ್ಲಿ ಸೇರಿದ ಇವರೇ ಶ್ರೀಹರಿಯಲ್ಲಿ ಇಷ್ಟು ನಮ್ರರಾಗಿ ನಡೆಯಬೇಕಾದರೆ ಅವರಿಗಿಂತ ಸ್ವಾಮಿಯು ಉತ್ತಮೋತ್ತಮನೆಂದು ಅವರೇ ತಮ್ಮ ಒಪ್ಪಿಗೆಯನ್ನು ಕೊಟ್ಟಂತಾಯಿತಲ್ಲವೆ? ಇದನ್ನು ತಿಳಿದು ರುದ್ರದೇವರ ಭಕ್ತರಾದವರು ಶ್ರೀಹರಿಯು ನಮ್ಮ ಪ್ರಭುವಿಗೆ ಮಾನ್ಯನೆಂದೂ ಆದ್ದರಿಂದಲೇ ಸಕಲ ದೇವತಾವರೇಣ್ಯನೆಂದೂ ದೃಢವಾದ ಭಾವನೆಯನ್ನು ಪಡೆಯಬಹುದೆಂಬುದನ್ನು ಶ್ರೀಹರಿ ಹರರ ಯುದ್ಧವು ಪ್ರಕಾಶಕ್ಕೆ ತಂದಿತೆಂದು ಭಾವ. ಇಲ್ಲಿ ರುದ್ರದೇವರು ಭಗವಂತನನ್ನು ವಂದಿಸಿದ ಅಂಶವನ್ನು ಹೇಳುವಾಗ "ಜನಾರ್ದನನನ್ನು" ವಂದಿಸಿದರೆಂದು ಹೇಳಿದೆ. ಇದರಿಂದ ರುದ್ರದೇವರು ಲಯಕರ್ತೃಗಳಾದ್ದರಿಂದ ಆ ಕಾರ್ಯಕ್ಕೆ ತಕ್ಕ ಶಕ್ತಿಯನ್ನು ಅವರಿಗೆ ಕೊಡುತ್ತಾ ಅವರಲ್ಲಿ ಸನ್ನಿಹಿತನಾಗಿರುವ ಭಗವಂತನ ರೂಪವೂ, ಲಯಕಾರ್ಯಾನುಕೂಲವಾಗಿರಬೇಕೆಂಬುದಕ್ಕಾಗಿಯೇ "ಜನಾರ್ದನಂ" ಎಂಬ ಪದದಿಂದ ರುದ್ರದೇವರ ಉಪಾಸ್ಯಮೂರ್ತಿಯ ಮಹಿಮೆಯನ್ನು ಆಚಾರ್ಯರು ಸ್ಪಷ್ಟಪಡಿಸಿದ್ದಾರೆ. ಇಲ್ಲವಾದರೆ ಹರಿ, ನಾರಾಯಣಂ ಮುಕುಂದಂ ಇತ್ಯಾದಿ ನಾಮವನ್ನು ಪ್ರಯೋಗಿಸಬಹುದಾಗಿತ್ತು. ಅಂಥಾ ನಾಮಗಳನ್ನು ಪ್ರಯೋಗಿಸದೇ ರುದ್ರದೇವರು ವಂದಿಸುವಾಗ ವಂದನಾರ್ಹವಾದ ಭಗವದ್ರೂಪವು ಜನಾರ್ದನ ರೂಪವಾಗಿತ್ತೆಂದು ಹೇಳಿದುದರಿಂದ ಕಾರ್ಯಾನುಗುಣವಾದ ಕ್ರಿಯಾರೂಪಗಳಿಂದ ಭಗವಂತನು ಜಗತ್ತಿನಲ್ಲಿ ಮೆರೆಯುವನೆಂಬಂಶವನ್ನು ಸ್ಪಷ್ಟಪಡಿಸಿರುವರೆಂದು ಮುಖ್ಯಾಭಿಪ್ರಾಯವು.

**ಅವತಾರಿಕೆ:—** ಪರಶುರಾಮರಿಗೂ ಶ್ರೀರಾಮನಿಗೂ ಸಂಭಾಷಣೆಗಾ ರಂಭವಾದಾಗ ಪ್ರಸ್ತಾಪ ಮಾಡಿದ್ದ ದೇವಲೋಕದ ಎರಡು ಧನಸ್ಸುಗಳಲ್ಲಿ ಒಂದನ್ನು ಶ್ರೀಹರಿಯೂ ಮತ್ತೊಂದನ್ನು ಹರನೂ ಧರಿಸಿದ್ದರೆಂಬುದನ್ನು ಹೇಳಿತ್ತಷ್ಟೆ ? ಅವುಗಳಲ್ಲಿ ಹರನ ಕೈ ಧನುಸ್ಸಿನ ಫಲಿತಾಂಶವು ಜನಕನ ಸಭೆ ಯಲ್ಲಿ ರಾಮನಿಂದ ಭಗ್ನವಾಯಿತೆಂಬುದರಿಂದ ಸ್ಪಷ್ಟವಾಯಿತು. ಇನ್ನು ಹರಿಯು ಕೈಯನ್ನಲಂಕರಿಸಿದ್ದ ಧನುಸ್ಸಿನ ವಿಚಾರವನ್ನು ಭಗವದ್ಭಕ್ತರಿಗೆ ತಿಳಿಯುಪಡಿಸಲಿಕ್ಕೋಸ್ಕರ ಪರಶುರಾಮರೂಪಿಯಾದ ಸ್ವಾಮಿಯು ರಾಮ ನನ್ನು ಕುರಿತು ನುಡಿದ ಕ್ರಮವನ್ನು ಈ ಶ್ಲೋಕವು ನಿರೂಪಿಸುತ್ತದೆ:—

**ಶ್ಲೋಕ॥ ಧನುರ್ಯದನ್ಯದ್ಧರಿ ಹಸ್ತಯೋಗ್ಯಂ ತತ್ಕಾರ್ಮುಕಾತ್ಕೋಟಿ ಗು ಣಂ ಪುನಶ್ಚ । ವರಂಹಿಹಸ್ತೇತದಿದಂಗೃಹೀತಂ ಮಯಾಗೃಹಾಣ ತದತೋಹಿವೈಷ್ಣವಂ ॥೫೦॥**

ಅರ್ಥ:—ಯಾತ್=ಯಾವ, ಅನ್ಯತ್–ಮತ್ತೊಂದಾದ, ಧನುः=, ಧನುಸ್ಸು, ಹರಿ=ಶ್ರೀಹರಿಯು, ಹಸ್ತ=ಕೈಗೆ, ಯೋಗ್ಯಂ=ತಕ್ಕುದಾದ ತತ್ = ಅದು, ತ್ಕಾರ್ಮುಕಾತ್ = ಈಶ್ವರನ ಸಂಬಂಧವಾದ ಧನುಸ್ಸಿ ಗಿಂತಲೂ, ಕೋಟಿಗುಣಂ=ಗುಣದಲ್ಲಿ ಕೋಟಿ ಸಂಖ್ಯೆಗೆ ಮೇಲೆನಿಸಿದ್ದು, ಎಂದು ತಿಳಿ. ಪುನಶ್ಚ=ಮತ್ತೂ, ವರಂಹಿ=ಕೋಟಿ ಸಂಖ್ಯೆಗೂ ಮೀರಿದ ಶ್ರೇಷ್ಠತೆಯುಳ್ಳದ್ದು, ತತ್=ಅಂಥಾ ಕೋಟಿಗುಣಾಧಿಕವೆನ್ನಿಸಿದ ಶಾರ್ಙ ವೆಂಬ ಹೆಸರಿನ, ಧನುः=ಧನುಸ್ಸೇ, ಇದಂ=ಇದು, ಮಯಾ=ನನ್ನಿಂದ, ಗೃಹೀತಂ = ಧರಿಸಲ್ಪಟ್ಟಿದೆ (ನೋಡು), ಹಿ = ಯಾವ ಕಾರಣದಿಂದ, ಏತದ್ಧನುः=ಈ ಬಿಲ್ಲು, ವೈಷ್ಣವಂ=ವಿಷ್ಣುವಿಗೆ ಯೋಗ್ಯವೋ, ಅತಃ=ಆ ಕಾರಣದಿಂದ, ತ್ವಂ=ನೀನು ಇದಂ=ಈ ಬಿಲ್ಲನ್ನು, ಗೃಹಾಣ=ತೆಗೆದುಕೋ (ಎಂದರೆ ನೀನು ವಿಷ್ಣುವೇಆದ್ದರಿಂದ ಈ ಬಿಲ್ಲನ್ನು ಧರಿಸಬಹುದು). (ಏತ ಕ್ಕೇ ? ದುಷ್ಟ ನಿಗ್ರಹಾರ್ಥವಾಗಿ) ಎಂದರ್ಥ.

ತಾತ್ಪರ್ಯ:—ಆ ರುದ್ರ ಧನುಸ್ಸಿಗಿಂತಲೂ ಕೋಟಿ ಗುಣ, ಮತ್ತು ಅಧಿಕ ಗುಣ ಉಳ್ಳ, ಪರಮಾತ್ಮನ ಹಸ್ತದಿಂದ ಧರಿಸಲು ಯೋಗ್ಯವಾದ ಈ ಶಾರ್ಙಧನುಸ್ಸು ನನ್ನ ಹಸ್ತದಲ್ಲಿದೆ. ಈ ವೈಷ್ಣವ ಧನುಸ್ಸನ್ನು ನೀನು ಸ್ವೀ ಕರಿಸು.

ಅವತಾರಿಕೆ:—ನಿನ್ನ ಕೈಯ್ಯನ್ನು ಅಲಂಕರಿಸುವುದಕ್ಕಾಗಿ ಮಾತ್ರ ಈ ಧನುಸ್ಸನ್ನು ನಾನು ಕೊಡಲಿಲ್ಲ. ಅದರ ಮೂಲಕ ನೀನು ನಡಿಸಬೇಕಾದ ಒಂದು ಮಹಾ ಕಾರ್ಯವುಂಟು ಎಂಬುದನ್ನು ಪರಶುರಾಮರು ರಾಮನಿಗೆ ತಿಳಿಸಿದರೆಂದು ಈ ಶ್ಲೋಕವು ನಿರೂಪಿಸುತ್ತದೆ:—

**ಶ್ಲೋಕ ॥ ಯದೀದಮಾಗೃಹ್ಯವಿಕರ್ಷಸಿತ್ವಂ ತದಾಹರಿರ್ನಾತ್ರವಿಚಾರ್ಯಮ ಸ್ತಿ! ಇತಿಬ್ರುವಾಣಃ ಪ್ರದದೌಧನುರ್ವರಂ ಪ್ರದರ್ಶಯನ್ ವಿಷ್ಣು ಬಲಂಹರಾದ್ವರಂ ॥೫೧॥**

ಅರ್ಥ:—ಹೇರಾಮ=ಎಲೈ ಶ್ರೀರಾಮನೆ, ತ್ವಂ=ನೀನು, ಇದಂ=ಈ ವೈಷ್ಣವ ಧನುಸ್ಸನ್ನು, ಆಗೃಹ್ಯ=ಹಿಡಿದು (ವಿಕರ್ಷಸಿಯದಿ)= ಹೆದೆಯನ್ನು ಏರಿಸಿ ಬಗ್ಗಿಸಿದ್ದೇ ಆದರೆ, ತದಾ=ಆಗ, ತ್ವಂ=ನೀನು, ಹರಿ=ಶ್ರೀಮನ್ನಾರಾಯಣನೇ ಸರಿ, ಅತ್ರ=ನಾರಾಯಣನೆಂಬ ಅಂಶದಲ್ಲಿ, ವಿಚಾರ್ಯಂ= ಸಂದೇಹವು, ನಾಸ್ತಿ–ಇಲ್ಲ, ಇತಿ=ಹೀಗೆಂದು, ಬ್ರುವಾಣಃ = ಹೇಳುತ್ತಾ, ವಿಷ್ಣುಬಲಂ=ವಿಷ್ಣು=ಶ್ರೀಮನ್ನಾರಾಯಣನ, ಬಲಂ=ಬಲವು, ಹರಾತ್= ಮಹೇಶ್ವರನ ಬಲಕ್ಕಿಂತಲೂ, ವರಂ=ಶ್ರೇಷ್ಠವಾದ್ದೆಂಬುದನ್ನು, ಪ್ರದರ್ಶಯನ್=ತೋರಿಸಿಕೊಡಬೇಕೆಂಬ ಇಚ್ಛೆಯುಳ್ಳವನಾಗಿ, (ಆ ಪರಶುರಾಮನು) ಧನುರ್ವರಂ=ತನ್ನ ಕೈಯ್ಯಲ್ಲಿದ್ದ ಶ್ರೇಷ್ಠತಮವಾದ ಬಿಲ್ಲನ್ನು, ಪ್ರದದೌ= ಶ್ರೀದಶರಥರಾಮನಿಗೆ ಕೊಟ್ಟನು.

ತಾತ್ಪರ್ಯ:—ಶ್ರೀಮದ್ಭಾಗವತ ತಾತ್ಪರ್ಯದಲ್ಲಿ ಹೇಳಿರುವಂತೆ ಶ್ರೀಹರಿಯು ಸರ್ವಾಪೇಕ್ಷಯಾ ಅತ್ಯಧಿಕವಾದ ಬಲವನ್ನೂ ಅತ್ಯಧಿಕವಾದ ಜ್ಞಾನವನ್ನೂ ಪ್ರಕಟಿಸಿ ಮುಕ್ತಿಯೋಗ್ಯರಾದ ಜೀವರಿಗೆ ತನ್ನಲ್ಲಿ ಸರ್ವಾತಿಶಯವಾದ ಭಕ್ತಿಯು ಉದಯಿಸುವಂತೆ ಮಾಡುವುದು ಭಗವದಿಚ್ಛೆ. ಇಂಥಾ ಇಚ್ಛೆಗನುಗುಣವಾಗಿಯೇ ಶ್ರೀರಾಮ ಕೃಷ್ಣಾದಿರೂಪಗಳನ್ನು ಸ್ವಾಮಿಯು ಪರಿಗ್ರಹಿಸಿರುವುದು. ಶ್ರೀರಾಮ ರೂಪವು ಬಲ ಪ್ರಕಟನಾರ್ಥವೆಂದು ಶಾಸ್ತ್ರ ಸಮ್ಮತ. ಕಪಿಲ, ದತ್ತಾತ್ರೇಯ, ಮಹಿದಾಸ, ಹಯಗ್ರೀವ, ವ್ಯಾಸಾದಿರೂಪಗಳು ಜ್ಞಾನ ಪ್ರಕಟನಾರ್ಥವೆಂದು ವ್ಯವಸ್ಥೆಯುಂಟು.

“ ರಾಮ ಕೃಷ್ಣಾದಿರೂಪೇಣ ಬಲಕಾರ್ಯೋ ಜನಾರ್ದನಃ। ದತ್ತವ್ಯಾಸಾದಿ ರೂಪೇಣ ಜ್ಞಾನಕಾರ್ಯಸ್ತಥಾ ಪ್ರಭುಃ ” ಎಂಬ ಪ್ರಮಾಣದಿಂದ ಈ ಅಂಶವು ದೃಢಪಟ್ಟಿದೆ. ಪ್ರಕೃತ ಶ್ರೀಹರಿಯು ತನ್ನಿಚ್ಛೆಯಂತೆ ರಾಮಾವತಾರವನ್ನು ಪರಿಗ್ರಹಿಸಿ ಈ ಅವತಾರದಲ್ಲಿ ಮಾಡಬೇಕೆಂದಿರುವ ಬಲಕಾರ್ಯಕ್ಕೆ ಬೇಕಾದ ಆಯುಧವನ್ನು (ಬಿಲ್ಲನ್ನು) ಸ್ವೀಕಾರಮಾಡಿದನೆಂದು ತಾತ್ಪರ್ಯ.

ಅವತಾರಿಕೆ:—ಈ ಶ್ಲೋಕವು ಶ್ರೀರಾಮನು ಧನುಸ್ಸಿಗೆ ಹೆದೆಯನ್ನು ಕಟ್ಟಿ ಬಾಣಸಂಧಾನಮಾಡಿದ್ದನ್ನು ತಿಳಿಸುತ್ತದೆ:—

**ಶ್ಲೋಕ॥ ಪ್ರಗೃಹ್ಯತಚ್ಚಾಪವರಂಸರಾಘವಃ ಚಕಾರಸಜ್ಯಂನಿಮಿಷೇಣಲೀಲಯಾ। ಚಕರ್ಷಸಂಧಾಯಶರಂಚಪಶ್ಯತಃ ಸಮಸ್ತಲೋಕಸ್ಯಚಸಂಶಯಂನುದನ್ ॥೫೨॥**

ಅರ್ಥ:—ಸಃ=ಆ ಮಹಾ ವೀರನಾದ, ರಾಘವಃ=ರಘುಕುಲೋತ್ಪನ್ನನಾದ ಶ್ರೀರಾಮನು, ತತ್ = ಪರಶುರಾಮರು ಕೊಟ್ಟ, ಚಾಪವರಂ=ಶ್ರೇಷ್ಠವಾದ ಬಿಲ್ಲನ್ನು, ಪ್ರಗೃಹ್ಯ=ಹಿಡಿದುಕೊಂಡು, ಲೀಲಯಾ=ಲೀಲಾಜಾಲವಾಗಿ(ಕಷ್ಟಪಡದೆ)ನಿಮಿಷೇಣ=ನಿಮಿಷ ಮಾತ್ರದಲ್ಲಿ ಸಜ್ಯಂಚಕಾರ=ಹೆದೆ ಏರಿಸಿದನು. ಶರಂಚ=ಒಂದು ಬಾಣವನ್ನು, ಸಂಧಾಯ=ಬಿಲ್ಲಿನಲ್ಲಿ ಹೂಡಿ, ಸಮಸ್ತ=ಎಲ್ಲಾ, ಲೋಕಸ್ಯ=ಜನದ, ಸಂಶಯಂ=ಇವನು ಶ್ರೀಹರಿಯೋ ಅಲ್ಲವೋ ? ಎಂಬ ಸಂಶಯವನ್ನು, ನುದನ್=ಪರಿಹರಿಸುವನಾಗಿ' ಚಕರ್ಷ=ಎಳೆದನು.

ತಾತ್ಪರ್ಯ:—ಶ್ರೀರಾಮನು ಶ್ರೇಷ್ಠವಾದ ಆ ಧನುಸ್ಸನ್ನು ತೆಗೆದುಕೊಂಡು ನಿಮೇಷ ಕಾಲದಲ್ಲಿ ಲೀಲೆಯಿಂದ ಹಗ್ಗಕಟ್ಟಿ ಬಾಣ ಸಂಧಾನ ಮಾಡಿ ನೋಡುತ್ತಿದ್ದ ಸಕಲ ಜನರ ಸಂದೇಹವನ್ನು ಪರಿಹರಿಸುತ್ತಾ ಆಕರ್ಷಣ ಮಾಡಿದನು.

ಅವತಾರಿಕೆ:—ಪರಶುರಾಮರ ಆಜ್ಞೆಯಂತೆ ಶ್ರೀರಾಮನು ಶಾರ್ಙ ಧನುಸ್ಸನ್ನು ಹಿಡಿದು ಬಾಣವನ್ನು ಹೂಡಿ ಗುರಿಯಾವುದೆಂದು ನೋಡುವ

ಷ್ಟರಲ್ಲಿ ಗುರಿಯನ್ನು ಸೂಚಿಸಲು ಪರಶುರಾಮರೇ ಈ ರೀತಿಯಾಗಿನುಡಿದರೆಂಬುದನ್ನು ಈ ಶ್ಲೋಕವು ತಿಳಿಸುತ್ತದೆ:—

**ಶ್ಲೋಕ|| ಪ್ರದರ್ಶಿತೇ ವಿಷ್ಣುಬಲೇಸಮಸ್ತಶೋ ಹರಾಚ್ಚ ನಿಃಸಂಖ್ಯ ತಯಾ ಮಹಾಧಿಕೇ| ಜಗಾದಮೇಘೌಘಗಭೀರಯಾಗಿರಾ ಸರಾಘವಂ ಭಾರ್ಗವ ಆದಿಪೂರುಷಃ ||೫೩||**

ಅರ್ಥ:—ಸಮಸ್ತಶಃ = ರಮಾ ಬ್ರಹ್ಮಾದಿಗಳಿಗಿಂತಲೂ, ಹರಚ್ಚ= ಮಹೇಶ್ವರನಿಗಿಂತಲೂ, ನಿಃಸಂಖ್ಯತಯಾ=ಎಣಿಕೆ ಇಲ್ಲದೆ, ಮಹಾಧಿಕೇ= ಅತ್ಯುತ್ಕೃಷ್ಟವೆನಿಸಿದ, ವಿಷ್ಣುಬಲೇ=ವಿಷ್ಣು=ಶ್ರೀಪರಮಾತ್ಮನ, ಬಲೇ=ಸಾಮರ್ಥ್ಯವು, ಪ್ರದರ್ಶಿತೇಸತಿ=ರಾಮನಿಂದ ತೋರಿಸಲ್ಪಟ್ಟಾಗ, ಆದಿಪೂರುಷಃ= ಆದಿಪುರುಷನೆನಿಸಿದ, ಸಃ=ಆ, ಭಾರ್ಗವಃ=ಪರಶುರಾಮರು, ಮೇಘೌಘ= ಮೇಘದಂತೆ, ಗಭೀರಯಾ=ಗಂಭೀರವಾದ, ಗಿರಾ=ಧ್ವನಿಯಿಂದ, ರಾಘವಂ=ಶ್ರೀರಾಮಚಂದ್ರನನ್ನು ಕುರಿತು, ಜಗಾದ=ನುಡಿದರು.

ತಾತ್ಪರ್ಯ:—ರಮಾದಿ ಸಮಸ್ತರಿಗಿಂತಲೂ ರುದ್ರದೇವರಿಗಿಂತಲೂ ಮಿತಿಯಿಲ್ಲದ ತಮ್ಮ ಬಲವನ್ನು ಶ್ರೀರಾಮರು ಪ್ರಕಟಿಸಿದಾಗ ಆದಿಪುರುಷನಾದ ಪರಶುರಾಮದೇವರು ಮೇಘದಂತೆ ಗಂಭೀರವಾದ ಧ್ವನಿಯಿಂದ ದಶರಥರಾಮರನ್ನು ಕುರಿತು ಮುಂದೆಹೇಳುವ ರೀತಿಯಾಗಿ ಮಾತನಾಡಿದರು.

ಅವತಾರಿಕೆ:—ಪರಶುರಾಮರು ನುಡಿದ ಮಾತಿನ ಕ್ರಮವೇನೆಂಬುದನ್ನು ನಿರೂಪಿಸಲು ಈ ಶ್ಲೋಕವು ಹೊರಟಿದೆ:—

**ಶ್ಲೋಕ|| ಅಲಂಬಲಂತೇಜಗತೋಽಖಿಲಾದ್ವರಂ ಪರೋಽಸಿನಾರಾಯಣ ಏವ ನಾನ್ಯಥಾವಿಸರ್ಜಯಸ್ವೇಹಶರಂತ ಪೋಮಯೋಽಮಹಾಸುರೇಲೋಕಮಯೇವರಾಬ್ಧಿಭೋಃ ||೫೪||**

ಅರ್ಥ:—(ಎಲೈ ರಾಮಚಂದ್ರನೇ), ತೇ=ನಿನ್ನ, ಬಲಂ=ಬಲವು, ಅಖಿಲಾತ್=ಸಮಸ್ತವಾದ, ಜಗತಃ=ಜಗತ್ತಿನ ಬಲಕ್ಕಿಂತಲೂ ಪರಂ=ಉತ್ತಮೋತ್ತಮವಾದುದು. ಆದ್ದರಿಂದಲೇ, ಅಲಂ=ಪೂರ್ಣವಾದುದೂ ಹೌದು'

ಹೀಗೆ ಪೂರ್ಣ ಬಲನಾದುದರಿಂದ, ತ್ವಂ=ನೀನು, ಪರಃ=ಸರ್ವೋತ್ತಮನು. ಚ=ಮತ್ತೂ, ನಾರಾಯಣಃ=ಸಕಲ ಗುಣಪರಿಪೂರ್ಣನೂ ಮತ್ತೂ ನಾರಾಯಣನೆಂಬ ಶಬ್ದವಾಚ್ಯನೂ ಆಸಿ=ಆಗಿದ್ದೀ. ಅನ್ಯಥಾನ, ಇದಕ್ಕೆ ವಿರುದ್ಧನಾದ, ಅಲ್ಪಗುಣನಾದ ಜೀವಕೋಟಿ ಪ್ರವಿಷ್ಟನಲ್ಲ. ಇದ=ಈ ನನ್ನ ಶರೀರದಲ್ಲಿ ಅಡಗಿಕೊಂಡಿರುವ, ತಪೋಮಯೆ=ತಪಃ=ಪ್ರಧಾನನಾಗಿರುವ ಮತ್ತೂ, ವಿಭೋಃ=ಬ್ರಹ್ಮನ, ವರಾತ್–ವರದಿಂದ, ಲೋಕಮಯ= ಲೋಕವ್ಯಾಪ್ತನಾಗಿರುವ, ಮಹಾಸುರೇ=ದೊಡ್ಡ ದೈತ್ಯನಲ್ಲಿ, ಶರಂ=ನಿನ್ನ ಕೈಯಲ್ಲಿರುವ ಬಾಣವನ್ನು, ವಿಸರ್ಜಯಸ್ವ=ಪ್ರಯೋಗಿಸು.

ತಾತ್ಪರ್ಯ:—ಎಲೈ ಶ್ರೀರಾಮಚಂದ್ರ ! ಈಗ ನೀನು ಪ್ರಕಟಿಸಿ ತೋರಿಸಿದ ಬಲವು ನಿನ್ನಲ್ಲಿ ಸ್ವರೂಪತಃ ಯಾವಾಗಲೂ ಪೂರ್ಣವಾಗಿರತಕ್ಕದಾಗಿದೆ. ಯಾವ ಜಗತ್ತಿನಲ್ಲಿಯೂ ಇಂಥಾ ಉತ್ತಮೋತ್ತಮವಾದ ಮತ್ತೂ ಪರಿಪೂರ್ಣವಾದ ಬಲವನ್ನು ಯಾವಾಗಲೂ ಮತ್ತಾರಲ್ಲಿಯೂ ಕಾಣಲು ಸಾಧ್ಯವಿಲ್ಲ. ಹೀಗೆ ಪೂರ್ಣ ಬಲನಾದುದರಿಂದ ನೀನೇ ಸಕಲ ಜಗದಪೇಕ್ಷೆಯಾ ಸರ್ವೋತ್ತಮನೂ ಸಕಲ ಗುಣಪರಿಪೂರ್ಣನೂ ಆಗಿದ್ದೀ. ಆದ್ದರಿಂದಲೇ ನೀನು ಸಾಕ್ಷಾನ್ನಾರಾಯಣನೇ ಹೊರತು ಸಾಮಾನ್ಯ ಜೀವನಲ್ಲ. ಇಂಥಾ ಪೂರ್ಣ ಸಮರ್ಥನಾದ ನೀನು ಈಗ ಹೂಡಿರುವ ಬಾಣಕ್ಕೆ ಗುರಿಯಾರೆಂಬುದನ್ನು ಯೋಚಿಸುತ್ತಿದ್ದೀಯಲ್ಲವೆ ? ಇಗೋ ಇಲ್ಲಿ ನೋಡು, ನಿನ್ನ ಬಾಣಕ್ಕೆ ತುತ್ತಾಗುವ ಮಹಾಸುರನು ಬ್ರಹ್ಮನ ವರದಿಂದ ಸಮಸ್ತ ಲೋಕವ್ಯಾಪ್ತನಾಗಿ ನನ್ನ ಶರೀರದಲ್ಲಿಯೂ ತಪೋಮಯನಾಗಿ ಕುಳಿತಿರುವನು. ಅವನ ಮೇಲೆ ನಿನ್ನ ಬಾಣವನ್ನು ಪ್ರಯೋಗಿಸುವುದರಿಂದ ಸಫಲವಾಗುವುದು. ಆದ್ದರಿಂದ ಈಗಲೇ ಬಾಣವನ್ನು ಪ್ರಯೋಗಿಸು ಎಂದು ಪರಶುರಾಮರು ಶ್ರೀರಾಮನನ್ನು ಕುರಿತು ನುಡಿದರೆಂದು ತಾತ್ಪರ್ಯ.

ವಿಶೇಷಾರ್ಥ:—ಬ್ರಹ್ಮ ರುದ್ರಾದಿ ದೇವತೆಗಳು ಕ್ಷಿಪ್ರಪ್ರಸಾದರು. ಅಸುರಾದಿಗಳು ಅಪೇಕ್ಷಿಸುವ ಲೋಕಕಂಟಕ ವರಗಳನ್ನು ಅವರಿಗೆ ಕೊಟ್ಟು ಆಮೇಲೆ ಪೇಚಾಡುವರು. ಅಂತಃ ಸಂದರ್ಭಗಳಲ್ಲಿ ಜಗತ್ಪ್ರಭುವೆನಿಸಿದ

ಶ್ರೀಹರಿಯು ಉಪಾಯಾಂತರಗಳಿಂದ ಅವರನ್ನು ನಿಗ್ರಹಿಸಿ ಬ್ರಹ್ಮಾದಿಗಳ ಅಲ್ಪ ಜ್ಞಾನಾದಿಗಳನ್ನೂ ಅಲ್ಪ ಸಾಮರ್ಥ್ಯವನ್ನೂ ಜಗತ್ತಿಗೆ ನಿದರ್ಶನ ಮಾಡಿಕೊಡುವನು, ಅಲ್ಲದೆ ಬ್ರಹ್ಮಾದಿಗಳ ಮೇಲೆ ತನಗಿರುವ ಪೂರ್ಣ ಸ್ವಾತಂತ್ರ್ಯವನ್ನೂ ಪ್ರಕಾಶಕ್ಕೆ ತಂದು ತಾನು ಸರ್ವೋತ್ತಮನೆಂಬುದನ್ನು ದೃಢಪಡಿಸುವನು. ಈ ಇತಿಹಾಸದಿಂದ ತಿಳಿಯಬೇಕಾದ ಮುಖ್ಯಾಂಶವು. ಆದ್ದರಿಂದಲೇ ತಪೋಮಯನಾದ ರಾಕ್ಷಸನಿಗೆ ಪರಶುರಾಮ ರೂಪದಲ್ಲಿ ಸ್ವಾಮಿಯು ತನ್ನ ಶರೀರದಲ್ಲಿ ಇದ್ದುಕೊಂಡಿರಲು ಅವಕಾಶಕೊಟ್ಟು ಆ ಬಳಿಕ ರಾಮ ರೂಪದಿಂದ ಅವನನ್ನು ಕೊಂದನು, ಎಂದಮೇಲೆ ಈ ಎರಡು ರೂಪಗಳನ್ನೂ ಸ್ವಾಮಿಯು ಅಸುರನಿಗ್ರಹಪೂರ್ವಕ ಸಲ್ಲೋಕಾನುಗ್ರಹಕ್ಕಾಗಿ ಪರಿಗ್ರಹಿಸಿದ್ದೆಂಬ ಪ್ರಮೇಯವು ವ್ಯಕ್ತವಾಗುವುದು.

ಅವತಾರಿಕೆ:—ಮೇಲಿನ ಶ್ಲೋಕದಿಂದ ಹೇಳಿದ ರೀತಿಯಲ್ಲಿ ಮಹಾಸುರನ ನಿಗ್ರಹಕ್ಕಾಗಿ ಭಗವಂತನೇ ರಾಮರೂಪ ಪರಶುರಾಮ ರೂಪಗಳೆರಡನ್ನೂ ಪರಿಗ್ರಹಿಸಿ ಆ ಉಭಯ ರೂಪಗಳೂ ಏಕತ್ರ ಸೇರುವುದಕ್ಕಾಗಿ ಇಂಥಾ ಚಮತ್ಕಾರವನ್ನು ಮಾಡಿದನೆಂದಾಯಿತಷ್ಟೆ ? ಆದರೆ ಮಹಾಸುರನು ಯಾರು ? ಬ್ರಹ್ಮನು ಅವನಿಗೆ ವರವನ್ನು ಕೊಡಲಿಕ್ಕಾದರೂ ಕಾರಣವೇನು ? ವರವಾದರೂ ಎಂಥದು ? ಎಂಬ ಶಂಕೆಯು ಲೋಕಕ್ಕೆ ಉಂಟಾಗುವುದು. ಅವುಗಳನ್ನು ಪರಿಹರಿಸಿ ಈ ಅಂಶಗಳನ್ನು ಸ್ಪಷ್ಟಪಡಿಸಲಿಕ್ಕಾಗಿಯೇ ಮುಂದಿನ ಶ್ಲೋಕವು ಪ್ರವೃತ್ತವಾಗಿದೆ.

**ಶ್ಲೋಕ॥ ಪುರಾತುಲೋನಾಮ ಮಹಾಸುರೋಭವತ್ ವರಾತ್ಸತು ಬ್ರಹ್ಮಣ ಆಪಲೋಕತಾಂ । ಪುನಶ್ಚತಂ ಸ್ರಾಹಜಗದ್ಗುರುರ್ಯದಾ ಹರಿರ್ಜಿತಃಸ್ಯಾದ್ಧಿತದೈವವಧ್ಯಸೇ ॥೨೪॥**

**ಅರ್ಥ:**— ಪುರಾ=ಪೂರ್ವದಲ್ಲಿ, ಅತುಲೋನಾಮ=ಅತುಲನೆಂದು ಹೆಸರುಳ್ಳ, ಮಹಾಸುರಃ–ದೊಡ್ಡ ದೈತ್ಯನು, ಅಭವತ್=ಇದ್ದನು. **ಸತು**= **ಅವನಾದರೋ**, ಬ್ರಹ್ಮಣಃ=ಚತುರ್ಮುಖ ಬ್ರಹ್ಮದೇವನ, **ವರಾತ್**=ವರದದೆಶೆಯಿಂದ, **ಲೋಕತಾಂ**–ಸಮಸ್ತ ಲೋಕದಲ್ಲಿಯೂ ವ್ಯಾಪ್ತನಾಗಿರುವಿ

ಕೆಯನ್ನು, ಆಪ=ಪಡೆದನು. ಪುನಶ್ಚ=ಮತ್ತೂ, ಜಗದ್ಗುರುಃ=ಜಗತ್ತಿಗೆಲ್ಲ ಜ್ಞಾನೋಪದೇಶಕನಾದ ಬ್ರಹ್ಮನು, ಯದಾ=ಯಾವಾಗ, ಹರಿಃ=ಶ್ರೀಪರಮಾತ್ಮನು, ಜಿತಃಸ್ಯಾತ್=ಸೋತುಹೋಗುವನೋ, ತದೈವ=ಆಗಲೇ ತ್ವಂ=ನೀನು, ವಧ್ಯಸೆ=ವಧಾರ್ಹನಾಗುತ್ತೀ (ಸಾಯುತ್ತೀ) ಇತಿ=ಹೀಗೆಂದು, ತಂ=ಆ ಅಸುರನನ್ನು ಕುರಿತು, ಪ್ರಾಹ=ಹೇಳಿದನು.

ತಾತ್ಪರ್ಯ:—ಸಾಮಾನ್ಯವಾಗಿ ಅಸುರ ಎಂಬ ಶಬ್ದಕ್ಕೆ (ಅಸುಷುರತಾಃ) ಎಂಬ ನಿರ್ವಚನ ಮಾಡಿದಲ್ಲಿ, ತನ್ನ ಪ್ರಾಣ ರಕ್ಷಣೆಯೇ ಪರಮ ಪ್ರಯೋಜನವೆಂಬ ದುರಭಿಪ್ರಾಯವುಳ್ಳವನೆಂದು ಅರ್ಥ. ಇದರಂತೆಯೇ ಕಾಲನೇಮಿ, ಕಂಸ ಶಂಬರಾದಿಗಳೆಲ್ಲರೂ ತಮ್ಮ ಆತ್ಮ ಸೌಖ್ಯಕ್ಕಾಗಿ ಲೋಕಕ್ಕೆ ತೊಂದರೆಯನ್ನುಂಟುಮಾಡಿರುವರು. ಈ ಮಂಡಲಿಗೆ ಶೇರಿದ ಅತುಲನೆಂಬ ದೈತ್ಯನು ಬ್ರಹ್ಮನನ್ನು ಕುರಿತು ಘೋರ ತಪಸ್ಸನ್ನು ಮಾಡಿದನು. ಬ್ರಹ್ಮನಾದರೋ ಇವನ ತಪಸ್ಸಿಗೆ ಮೆಚ್ಚಿ ಇವನು ಕೇಳಿದ ವರವನ್ನೇ ಕೊಡಬೇಕಾಯಿತು. ಅಸುರನಾದರೋ ತನ್ನ ಕೆಟ್ಟ ಸ್ವಭಾವವನ್ನು ಅನುಸರಿಸಿ ತಾನು ಸರ್ವ ಲೋಕಗಳಲ್ಲಿಯೂ ವ್ಯಾಪ್ತನಾಗಿ ಆವರಿಸಿಕೊಂಡಿರಬೇಕೆಂದು ಬೇಡಿದನು. ಸರ್ವತ್ರ ವ್ಯಾಪ್ತಿ ಎಂಬುದು ಮಹಾಮಹಿಮೆಯು. ಇದು ನ್ಯಾಯವಾಗಿ ಶ್ರೀಭಗವಂತನಿಗೆ ಮಾತ್ರ ಇರತಕ್ಕದ್ದು. ಇಂಥಾ ವರವನ್ನು ಬ್ರಹ್ಮನು ಅಸುರನ ನಿರ್ಬಂಧಕ್ಕಾಗಿ ಕೊಡಬೇಕಾಯ್ತು, ವರವನ್ನೇನೋ ಕೊಟ್ಟುಬಿಟ್ಟನು. ಆಮೇಲೆ ಯೋಚಿಸುವುದರಲ್ಲಿ ಅಸುರನಿಂದ ಲೋಕಕ್ಕೆ ಹಾನಿಯಾಗುವುದೆಂದು ಬ್ರಹ್ಮನಿಗೆ ತೋರಿಬರಲು ತತ್‌ಕ್ಷಣವೇ ಅಸುರನನ್ನು ಕುರಿತು ಎಲಾ! ನೀನು ಹೆಸರಿನಿಂದಲೇ ಅತುಲನಾಗಿದ್ದೀ! (ಅಸದೃಶನೆಂದರ್ಥ). ನೀನು ಸಕಲ ಲೋಕವನ್ನೂ ಆವರಿಸಿಕೊಂಡು ವ್ಯಾಪ್ತನಾಗಿಯೇ ಇರು, ಆದರೆ ಯಾವಾಗ ಲೋಕನಾಥನು (ಶ್ರೀಹರಿಯು) ಮತ್ತೊಬ್ಬ ವೀರನಿಂದ ಯುದ್ಧದಲ್ಲಿ ಸೋತುಹೋಗುವನೋ ಆಗ ನಿನಗೆ ಮೃತ್ಯು ಉಂಟಾಗಲಿ, ಅದುವರಿವಿಗೂ ನೀನು ಅಸದೃಶನಾಗಿ ಸರ್ವತ್ರವಿದ್ದು ನಿನ್ನ ಮಹಿಮೆಯನ್ನು ತೋರಿಸುತ್ತಿರು ಎಂದು ಹೇಳಿ ಬ್ರಹ್ಮನು ಅಂತರ್ಧಾನವಾದನು. ಈ ಅಸುರನಾದರೋ ಶ್ರೀಹರಿಯಂತೆ ನಾನೂ ಜಗದ್ವ್ಯಾಪ್ತನಾಗುವೆನು, ನನ್ನ ಶಕ್ತಿಯನ್ನು ಸರ್ವತ್ರ ತೋರಿಸುತ್ತಾ ಸಜ್ಜನರನ್ನು ಸತ್ಕಾರ್ಯದಲ್ಲಿ

ವಿಮುಖರಾಗುವಂತೆಯೂ, ದುಷ್ಕಾರ್ಯಗಳಲ್ಲಿ ಪ್ರವೃತ್ತರಾಗುವಂತೆಯೂ ಮಾಡುವೆನೆಂದು ನಿಶ್ಚಯಿಸಿ, ಅದರಂತೆಯೇ ಸಕಲ ಜಗತ್ತನ್ನೂ ಕೆಡಿಸುತ್ತಾ ಬಂದನು. ಇವನ ಹಾವಳಿಯನ್ನು ತಡೆಯಲಾರದೆ ಬ್ರಹ್ಮನು ಲೋಕ ಹಿತೇಚ್ಛೆಯಿಂದ ಶ್ರೀ ಹರಿಯಲ್ಲಿ ಬಂದು ಶರಣಾಗತನಾಗಿ, ಹೇಗಾದರೂ ಮಾಡಿ ಈ ಲೋಕಮಯನಾದ ಅತುಲನನ್ನು ನಿಗ್ರಹಿಸ ಬೇಕೆಂದು ಬೇಡಿಕೊಂಡನು. ಮತ್ತೂ ವರದ ವಿತರಣೆಯನ್ನು ತನಗೆ ತಿಳಿಸಿದ ಬ್ರಹ್ಮನ ಮಾತನ್ನು ನಡಿಸಿಕೊಡಲಿಕ್ಕಾಗಿ ತಾನು ಯಾರಿಗೂ ಸೋಲದವನಾದರೂ, ಮತ್ತೊಬ್ಬ ವೀರನಿಗೆ ಸೋಲಬೇಕಾಗಿ ಬಂತು. ತಾನು ಸೋಲುವುದೆಂದರೇನು ? ಸೋಲದಿದ್ದರೆ ಅಸುರನ ಹಾವಳಿಯಿಂದ ಲೋಕವು ಹಾಳಾಗುವುದು. ಮಾಡುವುದೇನು ? ಹೀಗೆಂದು ಯೋಚಿಸುವಷ್ಟರಲ್ಲಿ ಶ್ರೀ ರಾಮಾವತಾರಕ್ಕೆ ಸಮಯ ವದಗಿತು. ಮತ್ತೂ ಈ ಅವತಾರದಲ್ಲಿ ಭಗವಂತನಿಗೆ ಬಲ ಕಾರ್ಯವನ್ನು ನಡಿಸುವ ಸಂಕಲ್ಪವೂ ಉಂಟು. ಇದನ್ನು ತಿಳಿದು, ರಾಮರೂಪದೊಡನೆ ಪರಶುರಾಮ ರೂಪದಿಂದ ಯುದ್ಧವನ್ನು ನಡಿಸಿ ಈ ಅಸುರನನ್ನು ನಿಗ್ರಹಿಸತಕ್ಕುದೆಂದು ಯೋಚಿಸಿ ತಾನೇ ಪರಶುರಾಮನಾಗಿ ನಿನ್ನ ಎದುರಿಗೆ ಬಂದು ನಿಂತಿರುವೆನು, ಎಂದು ಶ್ರೀರಾಮಚಂದ್ರನಿಗೆ ಪರಶುರಾಮರೂಪಿಯಾಗಿ ಬಂದಿರುವ ಪ್ರಭುವು ಆ ಅತುಲನೆಂಬ ರಾಕ್ಷಸನ ಕಥಾ ಸಂದರ್ಭವನ್ನು ತಿಳಿಸಿದನು.

ವಿಶೇಷಾರ್ಥ:—ಮುಖ್ಯವಾಗಿ ಶ್ರೀಹರಿಯು ಸರ್ವಾಂತರ್ಯಾಮಿ, ಸರ್ವರ ಯೋಗ್ಯತೆಗಳನ್ನೂ ತಿಳಿದ ಸರ್ವಜ್ಞನು, ಬ್ರಹ್ಮಾದಿಗಳು ನಡಿಸುವ ಕಾರ್ಯಗಳಲ್ಲಿ ಬರುವ ಅನರ್ಥಗಳನ್ನು ತಪ್ಪಿಸಿ ಜಗತ್ತಿಗೆ ಅನುಗ್ರಹ ಮಾಡುವ ಕರುಣಾಸಾಗರನೂ. ಪರಮೋದಾರಿಯೂ, ಸ್ವತಂತ್ರನು, "ಕರ್ತುಮಕರ್ತುಮನ್ಯಥಾಕರ್ತುಂ" ಸಮರ್ಥನೆಂಬಿತ್ಯಾದಿ ಭಗವನ್ಮಹಿಮೆಗಳು ಈ ಚರಿತ್ರೆಯಿಂದ ವ್ಯಕ್ತವಾಗುವುವು.

ಅವತಾರಿಕೆ:—ಹೀಗೆ ಅಸುರನ ಕಥೆಯನ್ನೆಲ್ಲಾ ಹೇಳಿದ ಬಳಿಕ ಪರಶುರಾಮರು ಲೋಕದೃಷ್ಟಿಯಿಂದ ತಾವು ಸೋತಂತೆ ನಟಿಸಿ ಅಸುರನನ್ನು ನಿನ್ನ ಬಾಣದಿಂದ ಕೊಲ್ಲತಕ್ಕದ್ದೆಂದು ಶ್ರೀರಾಮನಿಗೆ ನಿರೂಪಿಸಿದರೆಂಬುದನ್ನು ಈ ಶ್ಲೋಕವು ಸ್ಪಷ್ಟಪಡಿಸುವುದು:—

**ಶ್ಲೋಕ॥ ಅತೋಽವಧಾರ್ಥಂಜಗದಂತಕಸ್ಯ ಸರ್ವಾಜಿತೋಽಹಂಜಿತವದ್ವ್ಯವಸ್ಥಿತಃ। ಇತೀ ರಿತೇಲೋಕವುಯೋಽಸರಾಘವೋ ಮುಮೋಚ ಬಾಣಂಜಗದಂತಕೇಽಸುರೇ ॥೫೬॥**

ಅರ್ಥ:—ಅತಃ=ಬ್ರಹ್ಮನ ವರದಿಂದ, ಜಗದಂತಕಸ್ಯ=ಜಗತ್ತಿಗೆ ಅಂತಕಸ್ಯ=ಮೃತ್ಯುಪ್ರಾಯನಾದ (ಆ ಅಸುರನ), ವಧಾರ್ಥ = ಸಂಹಾರ ಕ್ಕೋಸ್ಕರ, ಸರ್ವಾಜಿತಃ=ಸರ್ವ=ಎಲ್ಲರಿಗೂ, ಅಜಿತಃ=ಸೋಲದವನಾದ, ಅಹಂ=ನಾನು, ಜಿತವತ್=ನಿನಗೆ ಸೋತವನಂತೆ, ವ್ಯವಸ್ಥಿತೋಽಸ್ಮಿ=ನಿಂತಿ ದ್ದೇನೆ. ಇತಿ=ಹೀಗೆಂದು, ಈರಿತೆ=ಪರಶುರಾಮರು ಹೇಳಲು, ಸಃ=ಆ, ರಾಘವಃ=ಶ್ರೀರಾಮನು, ಜಗತ್=ಲೋಕಕ್ಕೆ, ಅಂತಕೆ = ವೈರಿಯಾದಂಥ ಅಸುರೆ=ಅತುಲನಲ್ಲಿ, ಬಾಣಂ=ಬಾಣವನ್ನು, ಮುಮೋಚ=ಬಿಟ್ಟನು.

ತಾತ್ಪರ್ಯ.—ಎಲೈ ರಾಮಚಂದ್ರಾ! ನಾನು ಯಾರಿಗೂ ಯಾವಾಗ ಲೂ ಯಾವರೀತಿಯಿಂದಲೂ ಸೋಲತಕ್ಕವನಲ್ಲವೆಂಬುದು ಗೊತ್ತಷ್ಟೆ? ಹೀಗೆ ಜಯಶಾಲಿಯಾದ್ದರಿಂದಲೇ ನನ್ನನ್ನು "ಅಜಿತ" ನೆಂದು ಬ್ರಹ್ಮಾದಿ ಗಳು ಕರೆಯುವರು. ಇಂಥಾ ನಾನು ಜಗತ್ತಿಗೆ ವೈರಿಯಾದ ಈ ದೈತ್ಯನ ನ್ನು ನಿಗ್ರಹಿಸಲಿಕ್ಕೋಸ್ಕರವೇ ನನ್ನಿಂದ, ಅಭಿನ್ನನಾದ ನಿನಗೆ ಸೋತಂತೆ ತೋರಿಸಿರುವೆನು. ನೀನು ಗುರಿಯಿಟ್ಟಿರುವ ಈ ಬಾಣವನ್ನು ನನ್ನಲ್ಲಡಗಿ ರುವ ದೈತ್ಯನಲ್ಲಿ ಪ್ರಯೋಗಿಸು. ಅವನು ಹತನಾಗುವನು. ಅದರಿಂದ ಲೋ ಕಕ್ಕೆ ಕ್ಷೇಮವಾಗುವುದು. ಎಂದು ಶ್ರೀಪರಶುರಾಮರು ನುಡಿಯಲು ಶ್ರೀ ರಾಮನು ಗುರಿಯಿಟ್ಟದ್ದ ತನ್ನ ಬಾಣವನ್ನು ಆ ದೈತ್ಯನಮೇಲೆ ಬಿಟ್ಟನು.

ವಿಶೇಷಾರ್ಥ:—ಬ್ರಹ್ಮದೇವರು ಅಸುರನಿಗೆ ಕೊಟ್ಟಿದ್ದ ವರವನ್ನು ನಡಿಸಿಕೊಡಲಿಕ್ಕೋಸ್ಕರ ಸ್ವಾಮಿಯು ತನ್ನ ಶರೀರದಲ್ಲಿ ಅಸುರನಿಗೆ ವಾಸಿ ಸಲವಕಾಶವನ್ನು ಕೊಟ್ಟಿದ್ದನು. ಅಲ್ಲದೇ, ಶ್ರೀಹರಿಯು ಸೋತುಹೋ ದಾಗ ನೀನು ಸಾಯಬೇಕೆಂದು ಅವನಿಗೆ ಸಾವಿನ ಕಾಲವನ್ನು ಸೂಚಿಸಿದ್ದನು.

ಶ್ರೀಹರಿಯು ತನಗೆ ತಾನೇ ಸೋಲಬೇಕೇ ಹೊರತು ಅನ್ಯರಿಗೆ ಸೋಲತಕ್ಕವನಲ್ಲ. ಅಂಥಾ ಶ್ರೀಹರಿಯು ಸೋತಲ್ಲದೆ ಅಸುರನು ಸಾ ಯುವಂತಿಲ್ಲ, ಸೋಲುವುದು ಗೆಲ್ಲುವುದು ಎಂಬ ಕ್ರಿಯೆಗಳು ಒಂದೇ ಕಾಲದಲ್ಲಿ ಒಬ್ಬ ಆತ್ಮನಲ್ಲಿಯೇ ನಡಿಯತಕ್ಕವುಗಳಲ್ಲ. ಗೆಲ್ಲುವುದಕ್ಕೊ

ಸೋಲುವುದಕ್ಕೂ ಬೇರೆಬೇರೆ ಶತ್ರುಗಳು ಬೇಕು. ಮತ್ತೂ ಆ ಉಭಯರಿಗೂ ಯುದ್ಧವೋ ವಿವಾದವೋ ನಡಿಯಲೇ ಬೇಕು. ವರವನ್ನು ಕೊಟ್ಟ ಬ್ರಹ್ಮನು ಇದೊಂದನ್ನೂ ಯೋಚಿಸಡೆ ದೈತ್ಯನು ಕೇಳಿಕೊಂಡ ಒಡನೆಯೇ ಈ ವರವನ್ನು ಕೊಟ್ಟನು ಬ್ರಹ್ಮನ ಮಾತು ಸುಳ್ಳಾಗಲಿಕ್ಕಿಲ್ಲ. ಏನು ಮಾಡುವುದು? ಆದ್ದರಿಂದ ಆ ಅಸುರನನ್ನು ತನ್ನ ಶರೀರದಲ್ಲಿರುವಂತೆಮಾಡಿ ತಾನು ಈ ಕ್ರಿಯಾನುಗುಣವಾಗಿ (ಶ್ರೀರಾಮ ಮತ್ತೂ ಪರಶುರಾಮನೆಂಬ) ಎರಡು ರೂಪಗಳನ್ನು ಪ್ರಕಟಿಸಬೇಕಾಗಿ ಬಂತು. ಈ ಎರಡು ರೂಪಗಳೂ ಬಾಹ್ಯದೃಷ್ಟಿಯಿಂದ ಬೇರೆಬೇರೆಯಾಗಿ ಕಾಣುತ್ತಿದ್ದರೂ ಸ್ವರೂಪತಃ ಒಬ್ಬನಾದ ಭಗವಂತನಿಗೇ ಶೇರಿದ್ದೆಂಬುದನ್ನು ಭಕ್ತರಿಗೆ (ಬ್ರಹ್ಮಾದಿಗಳಿಗೆ)ತೋರಿಸಲಿಕ್ಕೆ ಇದೊಂದು ಅವಕಾಶವದಗಿದಂತಾಯಿತು. ನಿನ್ನ ಬಾಣವನ್ನು ನನ್ನ ಮೇಲೆ ಪ್ರಯೋಗಿಸು. ನಾನು ಸೋತಂತೆ ನಟಿಸುವೆನು. ಹೀಗೆ ನಾನು ಸೋತಮೇಲೆ ಅಸುರನು ಸಾಯಲೇ ಬೇಕು. ಆ ಕಾರ್ಯವು ನಡೆಯಿತು. ಈಗ ಪರಶುರಾಮರೂಪಿಯಾದ ಹರಿಯು ಸೋತನಲ್ಲವೆ? ಏನನ್ಯಾಯ? ಎಂಬ ಭಾವನೆಯು ಜಗತ್ತಿಗೆ ಬರಬಹುದು. ಆದರೆ ಸೋತದ್ದು ಯಾರಿಗೆ? ಶ್ರೀರಾಮನಿಗೆ. ಶ್ರೀರಾಮನು ಯಾರು? ಸಾಕ್ಷಾನ್ನಾರಾಯಣನೇ, ಆದುದರಿಂದ ಸ್ವಾಮಿಯು ತನಗೆ ತಾನೇ ಸೋತನು. ತನಗೆ ತಾನೇ ಸ್ವಾಮಿಯು ಸ್ವರಮಣನಾಗಿರುವನು. ಇದರಂತೆ ಲೋಕಹಿತಾರ್ಥವಾಗಿ ಸ್ವಾಮಿಯು ತನಗೆ ತಾನೇ ಸೋಲಬಹುದು. ಇದರಿಂದ ಅವನ ಮಹಿಮೆಗೆ ಯಾವ ರೀತಿಯಿಂದಲೂ ಚ್ಯುತಿ ಇಲ್ಲ. ಆ ಸೋಲುವಿಕೆಯು ಲೋಕಕಂಟಕನಾದ ಅಸುರನ ನಿಗ್ರಹಕ್ಕಾಗಿ ಎಂಬುದರಿಂದ ಸ್ವಾಮಿಗಿರುವ ಲೋಕಾನುಗ್ರಹೇಚ್ಛೆಯು ವ್ಯಕ್ತವಾಗುವುದು. ತಾನು ಯಾರಿಗೂ ಸೋಲದವನಾದರೂ ಲೋಕ ಕ್ಷೇಮಕ್ಕಾಗಿ ಸೋತಂತೆ ನಟಿಸುವನು. ಹೀಗೆ ನಡಿಸಿದ ಕೃತ್ಯಗಳಿಂದ ವರ ಕೊಟ್ಟ ಬ್ರಹ್ಮದೇವರನ್ನು ಮೀರುವ ಸ್ವಾತಂತ್ರ್ಯವು ಶ್ರೀಹರಿಗೆ ಎಲ್ಲಾ ಅವತಾರ ರೂಪಗಳಲ್ಲಿಯೂ ಮೂಲರೂಪದಲ್ಲಿಯೂ ಉಂಟೆಂಬುದು ವ್ಯಕ್ತವಾಗುವುದು.

ಅವತಾರಿಕೆ:—ಮೇಲೆ ವಿವರಿಸಲ್ಪಟ್ಟ " ಅಲಂಬಲಂತೆ '' ಎಂಬ ೫೪ ನೇಶ್ಲೋಕದಲ್ಲಿ ಪರಶುರಾಮರ ಶರೀರದಲ್ಲಿ ಅತುಲ, ಅಥವಾ ತಪೋಮಯ ನೆಂಬ ದೈತ್ಯನು ಪ್ರವೇಶಿಸಿ ವಾಸಮಾಡುತ್ತಿದ್ದನೆಂಬುದು ಸ್ಪಷ್ಟವಾಯ್ತು. ಅಸುರನೆಂಮದರಿಂದ ಶ್ರೀಹರಿಗೆ ದ್ವೇಷಿಯೆಂದು ಹೇಳಿದಂತಾಯಿತು. ಇಂಥ ವನು ಸಾಕ್ಷಾತ್ ಭಗವಂತನ ಶರೀರದಲ್ಲಿ ಪ್ರವೇಶಿಸಿ ಅಲ್ಲಿ ತನ್ನ ಕಾರ್ಯವನ್ನು ನಡಿಸಿದನೆಂದು ಹೇಳಿದಂತಾಗುವುದು. ಹೀಗೆ ಹೇಳಿದಲ್ಲಿ ಪ್ರಮೇಯಕ್ಕೆ ವಿರೋಧ ಬರುವುದು. ಇದನ್ನು ಪರಿಹರಿಸಿ ನಿಜ ಸ್ಥಿತಿಯನ್ನು ತಿಳಿಸಲಿಕ್ಕೋ ಸ್ಕರ ಶ್ರೀಮದಾಚಾರ್ಯರು ಮುಂದಿನ ಶ್ಲೋಕವನ್ನಾರಂಭಿಸುವರು.—

**ಶ್ಲೋಕ|| ಪುರಾವರೊನೇನಶಿವೋಪಲಂಭಿತೋ ಮುಮುಕ್ಷಯಾವಿಷ್ಣುತನು ಪ್ರವೇಶನಂ| ಸತೇನರಾಮೋದರಗೋಬಹಿರ್ಗತ ಸ್ತದಾಜ್ಞಯೈ ವಾಶುಬಭೂವಭಸ್ಮಸಾತ್ ||೫೭||**

ಅರ್ಥ.—ಪುರಾ=ಪೂರ್ವದಲ್ಲಿ, ಅನೇನ=ಈ ದೈತ್ಯನಿಂದ, ಮುಮುಕ್ಷ ಯಾ=ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆಯಿಂದ, ವಿಷ್ಣುತನುಪ್ರವೇ ಶನಂ=ವಿಷ್ಣು=ಶ್ರೀಪರಮಾತ್ಮನ, ತನು=ಶರೀರದಲ್ಲಿ, ಪ್ರವೇಶನಂ=ಪ್ರವೇಶಿ ಸುವದು, ಮೇ=ನನಗೆ, ಸ್ಯಾತ್=ಆಗಬೇಕೆಂದು, ವರಃ=ವರವು, ಶಿವೋ ಪಲಂಭಿತಃ=ಶಿವ=ಈಶ್ವರನ ದೆಶೆಯಿಂದ (ಮೂಲಕ), ಉಪಲಂಭಿತಃ=ಸಂ ಪಾದಿಸಲ್ಪಟ್ಟಿತು. ತೇನ=ಆ ವರದಿಂದ, ಸಃ=ಆ ಅಸುರನು, ರಾಮೋ ದರಗಃ=ರಾಮ=ಶ್ರೀಪರಶುರಾಮದೇವರ, ಉದರ=ನಾಭಿ ಪ್ರದೇಶದಲ್ಲಿ, ಗಃ=ಇರುವವನಾಗಿ, ತದಾಜ್ಞಯೈವ=ತತ್=ಆ ಭಾರ್ಗವರ, ಆಜ್ಞಯೈವ= ಅಪ್ಪಣೆಯಂತೆಯೇ, ಬಹಿಃ=ಪರಶುರಾಮರ ದೇಹದ ಹೊರಗಡೆ, ಗತಃ= ಬಂದವನಾಗಿ, ಭಸ್ಮಸಾತ್‌ಬಭೂವ=ಶ್ರೀ ದಾಶರಥಿಯ ಬಾಣದ ಏಟನಿಂದ ಭಸ್ಮವಾದನು.

ತಾತ್ಪರ್ಯ.—ಬ್ರಹ್ಮದೇವರ ವರಪ್ರಭಾವದಿಂದ ಲೋಕವನ್ನೆಲ್ಲಾ ವ್ಯಾಪಿಸಿಕೊಂಡಿರುವುದನ್ನು ಪಡೆದಿದ್ದ ತಪೋಮಯನ ಉತ್ತರಾವಧಿಯನ್ನು ತಿಳಿಸುವುದರಲ್ಲಿ ಶ್ರೀಹರಿಯು ಸೋಲುವ ಸಮಯವೇ ಅಸುರನಿಗೆ ನಾಶ ಕಾಲವೆಂದು ಗೊತ್ತಾಗಿದ್ದಿತು. ಅವನ ನಾಶಕ್ಕಾಗಿ ಶ್ರೀಹರಿಯು ಜಿಷ್ಣು ವಾದರೂ ತನಗೆ ಸೋಲನ್ನು ಅಂಗೀಕರಿಸಬೇಕಾಗಿ ಬಂತು. ತಾನು ಸೋ

ಲುವ ಸಮಯದಲ್ಲಿ ಅಸುರನು ತನ್ನ ಬಳಿಯಲ್ಲಿರಬೇಕಾಯಿತು. ಅಸುರನಿಗೆ ಇದಕ್ಕನುಕೂಲವಾದ ವರವನ್ನು ಶಿವಾಂತರ್ಯಾಮಿಯಾಗಿರುವ ತಾನೇ ಕರುಣಿಸಿದ್ದನು. ಎಂದರೆ ಈ ಅಸುರನು ಶಿವನನ್ನು ಭಜಿಸಿ ನನಗೆ ಮೋಕ್ಷವು ಬೇಕಾಗಿದೆ, ಅದಕ್ಕಾಗಿ ನಾನು ಶ್ರೀಮಹಾವಿಷ್ಣುವಿನ ಶರೀರದಲ್ಲಿದ್ದು, ತಪಸ್ಸುಮಾಡಬೇಕೆಂದಿದ್ದೇನೆ, ಅದಕ್ಕೆ ಅವಕಾಶವನ್ನು ಕಲ್ಪಿಸಿಕೊಡೆಂದು ಬೇಡಿದನು. ಆಗ ಈಶ್ವರನು ಈ ಪಾಪಿಯನ್ನು ನಾಶಮಾಡಲು ಅವನು ಅಪೇಕ್ಷಿಸುವವರವೇ ಸಲಕರಣೆಯಾಗಿರುವುದೆಂದು ಯೋಚಿಸಿ ಅವನಿಷ್ಟದಂತೆ ಶ್ರೀಪರಮಾತ್ಮನಲ್ಲಿ ನೀನು ಪ್ರವೇಶಿಸಿ ಅವನ ನಾಭಿಪ್ರದೇಶದಲ್ಲಿದ್ದು ತಪಸ್ಸನ್ನಾಚರಿಸೆಂದು ವರವನ್ನು ಕೊಟ್ಟನು. ಅಸುರನು ಸಂತೋಷಪಟ್ಟು ಭಗವದವತಾರರಾದ ಪರಶುರಾಮರ ನಾಭಿಪ್ರದೇಶವನ್ನು ಹೊಕ್ಕು ಅಲ್ಲಿ ಅತಿಭಯಂಕರವಾದ ತಪಸ್ಸನ್ನು ಮಾಡುತ್ತಾ ಇದ್ದನು. ಪರಶುರಾಮರೂಪಿಯಾದ ಸ್ವಾಮಿಯು ಅಸುರನನ್ನು ನಾಭಿಯಲ್ಲಿಟ್ಟುಕೊಂಡು ಅವನ ಯೋಗ್ಯತೆಗೆ ತಕ್ಕ ಮೋಕ್ಷವನ್ನು ಕೊಡಲು ನಿಶ್ಚಯಿಸಿ ಸಮಯ ಕಾಯುತ್ತಿದ್ದನು. ಆ ರೂಪದಿಂದ ತಾನು ಸೋತಲ್ಲಿ, ಈ ಅಸುರನ ನಿಗ್ರಹವು ಸುಲಭವಾಗಿ ಅಗುವುದೆಂದು ಯೋಚಿಸಿ ಶೈವ ಧನುರ್ಭಂಗಮಾಡಿ ವೀರಾವೇಸದಿಂದ ಶೋಭಿಸುತ್ತಿದ್ದ ಶ್ರೀರಾಮನ ಬಳಿಗೆ ಬಂದು, ಇಂಥಾ ಉದ್ದಿಷ್ಟಕಾರ್‍ಯವನ್ನು ಸುಸೂತ್ರವಾಗಿ ನೆರವೇರಿಸಿಕೊಂಡನು. ಈ ಉದ್ದೇಶಗಳನ್ನರಿತ ಶ್ರೀರಾಮನು ಅಸುರನಿಗೆ ಗುರಿಯಿಟ್ಟು ಬಾಣಪ್ರಯೋಗ ಮಾಡುವುದರಿಂದ ಅವನ ನಿಗ್ರಹಮಾತ್ರವಲ್ಲದೇ ತನ್ನ ಕೈಚಳಕವನ್ನೂ ಮತ್ತೊಂದು ಸಲ ಪ್ರಕಾಶಕ್ಕೆ ತಂದನು.

ವಿಶೇಷಾರ್ಥ.—ಇಂಥಾ ಪ್ರಬಲನಾದ ಅಸುರನಿಗೆ ತನ್ನ ನಾಭಿಯಲ್ಲಿ ಶ್ರೀಹರಿಯು ಅವಕಾಶಕೊಟ್ಟು ಇಟ್ಟುಕೊಂಡಿದ್ದನೆಂಬ ಅಂಶಕ್ಕೆ ಪದ್ಮಪುರಾಣದ ಮುಂದೆ ಕೊಡುವ ಶ್ಲೋಕಗಳು ಆಧಾರವಾಗಿವೆ:—" ತಸ್ಯನಾಭಿಪ್ರದೇಶೇತುತಪಃ ಕೃತ್ವಾಸುದಾರುಣಂ । ತಿಷ್ಠತ್ಯೇವ ಸದಾದೈತ್ಯಃ ತಂಜ್ಞಾತ್ವಾ ರಾಘವೋಬಲೀ ॥ ತಂತುಭಸ್ಮೀಚಕಾರಾಥ" ಹೀಗೆ ಈ ಅಸುರನ ನಿಗ್ರಹೋದ್ದೇಶದಿಂದ ಸ್ವಾಮಿಯು ತನ್ನ ಶರೀರದಲ್ಲಿ ಅವಕಾಶ ಕೊಟ್ಟು ಇಟ್ಟುಕೊಂಡಿದ್ದುದೇವಿನಾ ಅಸುರನ ಸ್ವಸಾಮರ್ಥ್ಯದಿಂದ ಅಲ್ಲ. ತನ್ನ ಈ

ಆವೇಶದಿಂದ ಸಾಮಾನ್ಯ ಜನರನ್ನು ಕೆಡಿಸಿದಂತೆ ಭಗವಂತನನ್ನು ಕೆಡಿಸಿದ ನೆಂದು ಭಾವಿಸಲಾಗದು. ಕರ್ತುಂ ಅಕರ್ತುಂ, ಅನ್ಯಥಾಕರ್ತುಂ, ಎಂಬ ಶಕ್ತಿಯುಳ್ಳ ಭಗವಂತನ ಮುಂದೆ ಈ ಅಲ್ಪನಾದ ಅಸುರನ ವ್ಯಾಪಾರವು ಏನು ನಡಿದೀತು.

**ಶ್ಲೋಕ|| ಇತೀವ ರಾಮಾಯ ಸ ರಾಘವಃ ಶರಂ ವಿಕರ್ಷಮಾಣೋ ವಿನಿಹತ್ಯ ಚಾಸುರಂ | ತಪಸ್ತದೀಯಂ ಪ್ರವದನ್ಮುಮೋದ ತದೀಯಮೇವ ಹ್ಯಭವತ್ಸಮಸ್ತಂ ||೫೮||**

ಅರ್ಥ.—ಸಃ=ಅಂಥಾ ದೈತ್ಯನಿಗ್ರಹದಲ್ಲಿ ಸಮರ್ಥನಾದ, ರಾಘವಃ= ಶ್ರೀರಾಮಚಂದ್ರನು, ಇತಿ=ತಪೋಮಯನನ್ನು ಕೊಲ್ಲಲಿಕ್ಕೋಸ್ಕರ, ರಾಮಾಯೇವ=ಶ್ರೀಪರಶುರಾಮನಿಗೋಸ್ಕರವ್ರೋ ಎಂಬಂತೆ, (ನೋಡತಕ್ಕವರಿಗೆ) ಶರಂ=ಬಾಣವನ್ನು, ವಿಕರ್ಷಮಾಣಃ=ಎಳೆಯುವವನಾಗಿ, ಅಸುರಂ=ದೈತ್ಯನನ್ನು, ವಿನಿಹತ್ಯ=ಸಂಹರಿಸಿ, ತದೀಯಂ=ಪರಶುರಾಮರ ಸಂಬಂಧವಾದ, ತಪ=ತಪಸ್ಸು, ಮಯಾ=ನನ್ನಿಂದ, ನಾಶಿತಂ=ನಾಶಮಾಡಲ್ಪಟ್ಟಿತು. ಇತಿ=ಹೀಗೆಂದು, ಪ್ರವದನ್=ಹೇಳಿಕೊಳ್ಳುವನಾಗಿ, ಮುಮೋದ=ಸಂತೋಷಪಟ್ಟನು. ಕುತಃ=ಏತಕ್ಕೆಂದರೆ, ಸಮಸ್ತಂ=ಎಲ್ಲಾ ಜಗತ್ತೂ, ತದೀಯಮೇವ=ಪರಶುರಾಮರ ಸಂಬಂಧವಾದುದೇ, ಅಭವತ್ ಹಿ=ಆಗಿದೆಯಷ್ಟೆ ?

ತಾತ್ಪರ್ಯ.—ಪರಶುರಾಮರು ತಮ್ಮೊಳಗಡಗಿದ್ದ ಅಸುರನನ್ನ ತೋರಿಸಿ ಅವನನ್ನು ಸಂಹರಿಸಲು ತಕ್ಕ ಕಾರಣವನ್ನು ಹೇಳಿದ ಕೂಡಲೇ ಶ್ರೀರಾಮನು, ಅವರಿಂದ ಅಭಿನ್ನನಾದುದರಿಂದ ಅವರ ಉದ್ದೇಶವೇ ತನ್ನ ಉದ್ದೇಶವೆಂದು ಭಾವಿಸಿ ತಪೋಮಯನಿಗೆ ಬಾಣವನ್ನೆಳೆದು ಬಿಡಲು ಅವನು ಬಾಣಾಗ್ನಿಯಿಂದ ಉರಿದು ಬಿದ್ದನು. ಅಸುರನಿಗೆ ಬ್ರಹ್ಮನಿಂದ ಅನುಗ್ರಹಿಸಲ್ಪಟ್ಟಿದ್ದ ಲೋಕ ವ್ಯಾಪ್ತಿಯು ನಾಶವಾಗಿ, ಲೋಕವು ನಿಷ್ಕಳಂಕವಾಯಿತು. ಇದರೊಂದಿಗೆ, ಅಸುರನ ಅದ್ಭುತ ತಪಸ್ಸೂ ಅದರಿಂದ ಪರಶುರಾಮರ ಶರೀರದ ಮೇಲೆ ಬೆಳಗುತ್ತಿದ್ದ ತೇಜಸ್ಸೂ ಶಾಂತವಾದುದು. ದಾಶರಥಿಯು ಆ ಸಮಯದಲ್ಲಿ ಅಸುರಜನ ಮೋಹನಾರ್ಥವಾಗಿ, ಪರಶು

ರಾಮರಲ್ಲಿ ಬಹುಕಾಲದಿಂದ ಶೇಖರಿಸಲಾಗಿದ್ದ ತಪಸ್ಸು ಈಗ ನನ್ನಿಂದ ನಾಶಮಾಡಲ್ಪಟ್ಟಿತೆಂದು ವ್ಯವಹರಿಸುತ್ತಾ ಜಯಶಾಲಿಯಾದೆನೆಂದು ತಾನು ಸಂತೋಷಿಸಿದಂತೆ ತೋರ್ಪಡಿಸಿದನು. ಶ್ರೀರಾಮನು ಸಂಹರಿಸಿದ್ದು ಅಸುರನನ್ನು, ಇದರಿಂದ ಪರಶುರಾಮರ ತಪಸ್ಸನ್ನು ತಾನು ನಾಶಮಾಡಿದಂತೆ ತೋರ್ಪಡಿಸಿಕೊಂಡುದ್ದೇಕೆಂದರೆ:—ಸಕಲ ಜಗತ್ತಿಗೂ ಪರಶುರಾಮಾಭಿನ್ನನಾದ ಶ್ರೀಹರಿಯು ಪ್ರಭುವು. ಅವನ ಅಧೀನವಾದುದು ಜಗತ್ತು, ಎಂಬುದು ಶಾಸ್ತ್ರಸಮ್ಮತ. ಆ ಅಸುರನಾದರೋ ಜಗತ್ತಿನಲ್ಲಿ, ಒಂದು ವ್ಯಕ್ತಿ, ಜಗತ್ತೇ ಸ್ವಾಮಿಯ ಅಧೀನವೆಂದಮೇಲೆ ಜಗತ್ತಿನಲ್ಲಿರುವ ಅಸುರನು ಸ್ವಾಮಿಯ ಅಧೀನನಲ್ಲವೆ? ಹೌದು, ಅವನಿಗೆ ಲೋಕಮಯನೆಂದೂ ಮತ್ತೊಂದು ಹೆಸರುಂಟು. ಇಂಥಾ ಅಸುರನನ್ನು ತನ್ನವನೆಂದು ತಿಳಿದೇ ತನ್ನಲ್ಲಿ ಆಸರೆ ಕೊಟ್ಟು ಇದುವರಿವಿಗೂ ರಕ್ಷಿಸಿದನು. ಈಗಲಾದರೋ ಅವನ ಸಾಧನವು ಪೂರ್ತಿಯಾಗಿದೆ. ಅವನನ್ನು ಇನ್ನು ಈಜಗತ್ತಿನಲ್ಲಿರಿಸಬಾರದೆಂದು ಯೋಚಿಸಿ ರಾಮರೂಪದಿಂದ ಅವನನ್ನು ನಿಗ್ರಹಿಸಿದನು. ಪರಶುರಾಮನು ವೈರಿಯಾಗಿ ಬಂದು ಇದಿರಿನಲ್ಲಿ ನಿಂತದ್ದರಿಂದ ಶ್ರೀರಾಘವನು ತನ್ನ ಶಕ್ತಿಯನ್ನು ಪ್ರಕಟಿಸಿ ಅವನನ್ನು ನಿಗ್ರಹಿಸಿದನೆಂದು ಜನರು ವಿರುದ್ಧಾಭಿಪ್ರಾಯವನ್ನು ಪಡೆದು ತಮಃಸಾಧನವನ್ನು ಮಾಡಿಕೊಳ್ಳುವರು. ಹಾಗಾಗ ಬಾರದೆಂಬ ಅಭಿಪ್ರಾಯದಿಂದ ಉಭಯ ಪ್ರಕೃತಿಗಳಿಗಿರುವ ತಾರತಮ್ಯವನ್ನು ಸ್ಪಷ್ಟಪಡಿಸಲು ಈ ರೀತಿ ರಾಮನು ಪರಶುರಾಮರ ತಪಸ್ಸನ್ನು ಹಾಳುಮಾಡಿದವನಂತೆ ವ್ಯವಹರಿಸಿದನು. ಆಚಾರ್ಯರು ಈ ಶ್ಲೋಕದಲ್ಲಿ, "ರಾಮಯೇವ, ಶರಂವಿಕರ್ಷಮಾಣಃ" ಎಂಬ ವಾಕ್ಯದಿಂದ ಅಸುರರ ದೃಷ್ಟಿಗೆ ಶ್ರೀರಾಮನ ಬಾಣವು ಪರಶುರಾಮರಿಗೋಸ್ಕರವೇ ಬಿಡಲಾಯ್ತೆಂದೂ, ಸಜ್ಜನರಿಗಾದರೋ ಪರಶುರಾಮನಲ್ಲಡಗಿರುವ ಅಸುರನ ನಿಮಿತ್ತವಾಗಿ ಬಾಣವು ಬಿಡಲಾಯ್ತೆಂದೂ ಅರ್ಥವಾಗುವಂತೆ "ಇವ" ಎಂಬ ಉತ್ಪ್ರೇಕ್ಷಾವಾಚಕವಾದ ಅವ್ಯಯ ಪ್ರಯೋಗದೊಡನೆ ತತ್ವ ವ್ಯವಸ್ಥಾಮಾಡಿರುವರೆಂದು ಮುಖ್ಯಾಶಯವು. ಆದ್ದರಿಂದ ಪರಶುರಾಮರ ತಪಸ್ಸು ನನ್ನಿಂದ ನಾಶಮಾಡಲ್ಪಟ್ಟಿದೆ ಎಂಬುದರ ತಾತ್ಪರ್ಯವಾದರೋ ಪರಶುರಾಮರಲ್ಲಡಗಿದ್ದ ತಪೋಮಯನಾದ ಅಸುರನು

ಈಗ ನನ್ನಿಂದ ನಾಶಮಾಡಲ್ಪಟ್ಟನು. ಇನ್ನು ಲೋಕಕ್ಕೆ ಕ್ಷೇಮವಾಯಿತೆಂದು ಸರ್ವರೂ ಭಾವಿಸಬಹುದು. ಲೋಕಕ್ಷೇಮ ಲಾಭದಿಂದ ನನಗೆ ತುಂಬಾ ಸಂತೋಷವೆಂದು ಶ್ರೀರಾಮನು ಆಗ ತೋರ್ಪಡಿಸಿದನೆಂದು ಮುಖ್ಯ ತಾತ್ಪರ್ಯ.

ಅವತಾರಿಕೆ:—ಶ್ರೀಹರಿಯು ಅಸುರ ಜನ ಮೋಹನಾರ್ಥವಾಗಿಯೂ ಸುರಜನರಿಗೆ ಮಹಿಮಾಪ್ರದರ್ಶನಾರ್ಥವಾಗಿಯೂ, ಶ್ರೀರಾಮ-ಪರಶುರಾಮ ರೂಪಗಳೆರಡರಿಂದ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳೆಂಬ ಜಗತ್ಕಾರ್ಯ ನಿರ್ವಾಹ ಮಾಡುತ್ತಾ ಆನಂದಿಸಿದ್ದು ಆ ಭಗವಂತನಿಗೆ ಒಂದು ಲೀಲೆ ಎಂಬುದಾಗಿ ಸಮರ್ಥಿಸುತ್ತಾರೆ:—

**ಶ್ಲೋಕ॥ ನಿರಂತರಾನಂದವಿಬೋಧಸಾರಃ ಸಜಾನಮಾನೋಖಿಲಮಾದಿಪೂರುಷಃ। ವದಞ್ಶೃಣೋತೀವವಿನೋದತೋಹರಿಃ ಸಏಕಏವದ್ವಿತನುರ್ಮುಮೋದ ॥೫೯॥**

ಅರ್ಥ:—ನಿರಂತರಾನಂದ ವಿಬೋಧಸಾರಃ=ನಿರಂತರ=ಭೇದರಹಿತಗಳಾದ, ಆನಂದ=ಸುಖವು, ವಿಬೋಧ=ಜ್ಞಾನವು, ಇವುಗಳಿಂದ, ಸಾರಃ=ಶ್ರೇಷ್ಠತಮನಾದ, ಅಖಿಲಂ=ಸರ್ವವನ್ನೂ, ಜಾನಮಾನಃ=ತಿಳಿದವನಾಗಿರುವ, ಆದಿಪೂರುಷಃ=ಆದಿಪುರುಷನೆನ್ನಿಸಿರುವ, ಸಃ=ಶ್ರೀಹರಿಯು, ವಿನೋದತಃ=ಲೀಲೆಯಿಂದ, ವದನ್ನಿವ=ಪರಶುರಾಮ ರೂಪದಿಂದ ಹೇಳುವನಂತೆಯೂ, ಶೃಣೋತೀವ=ರಾಮರೂಪದಿಂದ ಕೇಳುವನಂತೆಯೂ, (ವಿಡಂಬಿಸುತ್ತಾ) ಏಕಏವ ಸ್ವರೂಪತಃ ಒಬ್ಬನೇ ಆಗಿದ್ದಾಗ್ಯೂ, ದ್ವಿತನುಃ=ನೋಡತಕ್ಕವರಿಗೆ ಪರಶುರಾಮ, ಮತ್ತೂ ರಾಮರೂಪಗಳೆಂಬ ಎರಡುರೂಪವುಳ್ಳವನಾಗಿ (ಇದ್ದುಕೊಂಡು) ಮುಮೋದ=ಆನಂದಪಟ್ಟನು.

ತಾತ್ಪರ್ಯ:—ಶ್ರೀಪರಮಾತ್ಮನು ಯಾವಾಗಲೂ ಸ್ವರೂಪಭೂತಗಳಾದ ಜ್ಞಾನಾನಂದಭೂಷಿತನು ಎಂದರೆ ಜ್ಞಾನಸ್ವರೂಪನು ಮತ್ತೂ ಆನಂದ ಸ್ವರೂಪನಾಗಿದ್ದಾನೆ. ಅಪಾರ ಜ್ಞಾನ ಸ್ವರೂಪನಾದ ಸ್ವಾಮಿಯು

ತಾನು ಸ್ವರೂಪದಲ್ಲಿ ಒಬ್ಬನಾದರೂ ಇಚ್ಛಾನುಗುಣವಾಗಿ ಈ ಎರಡು ಅವತಾರರೂಪಗಳನ್ನು ಪರಿಗ್ರಹಿಸಿ ಎಲ್ಲರ ದೃಷ್ಟಿಗೂ ಎರಡು ಬೇರೆಬೇರೆ ಶರೀರಗಳಾಗಿ ತೋರುವಂತೆ ನಟಿಸುತ್ತಾ ಪರಶುರಾಮರೂಪದಿಂದ ಹೀಗೆ ಮಾಡೆಂದು ಆಜ್ಞೆಯನ್ನು ನುಡಿಯುತ್ತಾ, ರಾಮರೂಪದಿಂದ ಅದರಂತೆ ನಡಿಯುತ್ತಾ ಜಗತ್ತಿನಲ್ಲಿ ಅಜ್ಞರಾದವರು ಈ ರಾಮನು ಹೀಗೆ ಮಾಡೆಂದನು ಆ ರಾಮನು ಹಾಗೆ ಮಾಡಿದನು ಆದ್ದರಿಂದ ಈ ಇಬ್ಬರು ರಾಮರೂ ಬೇರೆ ಬೇರೆಯೆಂದು ಭಾವನೆಯನ್ನು ಪಡೆಯುವಂತೆ ಮಾಡುತ್ತಾ ಪ್ರಾಜ್ಞರಿಗೆ ಮಾತ್ರ ಸ್ವಾಮಿಯು ಸ್ವರೂಪತಃ ಒಬ್ಬನಾದರೂ ಜಗತ್ಕಾರ್ಯ ನಿರ್ವಾಹಕ್ಕಾಗಿ ಲೀಲೆಯಿಂದ ಹೀಗೆ ಎರಡು ಮೂರ್ತಿಯಾಗಿ ವಿಹರಿಸುತ್ತಿರುವನು, ಹೀಗೆ ನಡಿಸುವುದೂ ಅವನ ಇಚ್ಛೆ, ಅವನು ಸ್ವತಂತ್ರನು. ತನಿಚ್ಛೆಯಂತೆ ನಾನಾ ವಿನೋದಗಳನ್ನು ನಡಿಸುವನೆಂದು ಭಾವನೆಯನ್ನುಂಟುಮಾಡುತ್ತಾ ವಶಿಷ್ಠಾದಿ ತಪೋಧನರ ಸಮಕ್ಷಮ ಪ್ರಕಾಶಿಸಿದನೆಂದು ತಾತ್ಪರ್ಯ.

ವಿಶೇಷಾರ್ಥ:—ಶ್ರೀಪರಮಾತ್ಮನು ಸ್ವಾಭಿನ್ನನಾದ ಜ್ಞಾನಾನಂದಾದಿ ಗುಣನೆಂದು ಹೇಳಲು ವೇದಗಳೂ, ವೇದಾಂತಗಳೂ ಸರ್ವದಾ ಜಾಗರೂಕವಾಗಿವೆ. ಪರಮಾತ್ಮನು ಅಸ್ಮದಾದಿಗಳಂತೆ ಸ್ವರೂಪದೇಹ, ಲಿಂಗದೇಹ, ಸ್ಥೂಲದೇಹಗಳಿಂದ ಕೂಡಿದವನಲ್ಲ. ಅವನ ಸ್ವರೂಪವೇ ತೇಜೋಮಯವಾದುದು. ಜ್ಞಾನಾನಂದಮಯವಾದುದು. ಅವನ ಮೈಮೇಲಿನ ಒಂದು ರೋಮವು ಕೂಡ, ದಿವ್ಯ ಜ್ಞಾನಾನಂದಾತ್ಮಕವು, ಎಂಬ ವಿಷಯದಲ್ಲಿ ಯಾರೂ ಸಂದೇಹಪಡಬೇಕಾಗಿಲ್ಲ. ಈ ಅಂಶವನ್ನು ಈಶಾವಾಸ್ಯೋಪನಿಷತ್ತು, ಈ ಮುಂದೆ ಹೇಳುವ ಮಂತ್ರದಿಂದ ಸ್ಪಷ್ಟಪಡಿಸುತ್ತದೆ.—

ಸಪರ್ಯಗಾಚ್ಛುಕ್ರಮಕಾಯಮವ್ರಣಮಶ್ನಾವಿರಗುಂ ಶುದ್ಧಮಪಾಪವಿದ್ಧಂ । ಕವಿರ್ಮನೀಷೀಪರಿಭೂಃ ಸ್ವಯಂಭೂಃ ಯಾಥಾತಥ್ಯತೋರ್ಥಾನ್ವಿದಧಾತ್ ಶಾಶ್ವತೀಭ್ಯಃ ಸಮಾಭ್ಯಃ ॥ ಇದರರ್ಥವನ್ನು ಶ್ರೀಭಗವತ್ಪಾದರವರೇ ಭಾಷ್ಯ ವಚನಗಳಿಂದ ಹೀಗೆಂದು ಸಮರ್ಥಿಸಿರುವರು:—(ಭಾಷ್ಯ) ಶುಕ್ರಂತಚ್ಛೋಕರಾಹಿತ್ಯಾದವ್ರಣಂ ನಿತ್ಯಪೂರ್ಣತಃ ಪಾವನತ್ವಾತ್ಸದಾಶುದ್ಧಮಕಾಯಂಲಿಂಗವರ್ಜನಾತ್ । ಸ್ಥೂಲದೇಹಸ್ಯರಾಹಿತ್ಯಾದಶ್ನಾವಿರಮುದಾಹೃತಂ । ಏವಂಭೂತೋಽಪಿಸಾರ್ವಜ್ಞ್ಯಾತ್ಕವಿರಿತ್ಯೇವ ಶಬ್ದ್ಯತೇ । ಬ್ರಹಾ

ದ್ವಿಸರ್ಗ್ವಮನ ಸಾಂಪ್ರಕೃತ್ಯಾಮನಕೋಪಿಚ | ಈಶಿಕೃತ್ವಾನ್ಮನೀಷೀಸಃ ಪರಿಭೂಃ ಸರ್ವತೋವರಃ | ಸದಾನನ್ಯಾಶ್ರಯತ್ವಾಚ್ಚಸ್ವಯಂಭೂಃ ಪರಿಕೀರ್ತಿತಃ | ...........ಭಗವಾನ್ಪುರುಷೋತ್ತಮಃ | ಸಜ್ ಜ್ಞಾನಾನಂದಶೀರ್ಷೋಸೌಸಚ್ ಜ್ಞಾನಾನಂದಬಾಹುಕಃ | ಸಜ್ ಜ್ಞಾನಾನಂದ ದೇಹಶ್ಚ ಸಜ್ ಜ್ಞಾನಾನಂದ ಪಾದವಾನ್ | ಏವಂಭೂತೋಮಹಾವಿಷ್ಣುಃ | ಈ ಮೇಲಿನ ಶ್ಲೋಕಗಳು, ಭಗವಂತನಿಗಿರುವ ಅಪಾರ ಮಹಿಮೆಗಳನ್ನು ವರ್ಣಿಸಿವೆ. ಒಟ್ಟಿನಲ್ಲಿ ಅವನ ತಲೆ, ಕೈಕಾಲು, ದೇಹ, ಅವಯವಾದಿಗಳೆಲ್ಲವೂ ಜ್ಞಾನಾನಂದಾತ್ಮಕವಾದವುಗಳೆಂದು ತಾತ್ಪರ್ಯ, ಮತ್ತೂ ಅವನು ಸರ್ವಜ್ಞನೆಂದೂ ಸ್ಪಷ್ಟಪಡಿಸಿದೆಯಾಗಿ, ಇಂಥಾ ಪ್ರಭುವು, ಬ್ರಹ್ಮದೇವರು ಮೊದಲ್ಗೊಂಡು ಸಮಸ್ತ ಜೀವರಿಗೂ ನಿಯಾಮಕಳಾಗಿರುವ ಲಕ್ಷ್ಮೀದೇವಿಗೂ, ನಿಯಾಮಕನಾಗಿದ್ದುಕೊಂಡು ಎಲ್ಲರನ್ನೂ ತನ್ನ ಇಚ್ಛೆಯಂತೆ ಆಳುತ್ತಿರುವನಾಗಿ, ಆ ಆಳ್ವಿಕೆಯು ಕೂಡ ಶ್ರಮವಿಲ್ಲದೆ ಲೀಲೆಯಿಂದಲೇ ನಡಿಯುತ್ತಿದೆಯಾಗಿ, ವಿನೋದಾರ್ಥವಾಗಿ ಸೃಷ್ಟ್ಯಾದಿಗಳನ್ನು ನಡಿಸುವಂತೆ, ಸ್ವಾಮಿಯು ಈ ಎರಡು ರೂಪಗಳನ್ನೂ ವಿನೋದಾರ್ಥವಾಗಿ ಪರಿಗ್ರಹಿಸಿ ಒಂದು ರೂಪದಿಂದ ಆಜ್ಞೆಯನ್ನಿತ್ತು ಮತ್ತೊಂದು ರೂಪದಿಂದ ಅದರಂತೆ ಕಾರ್ಯವನ್ನು ನಡಿಸಿ ಭಕ್ತರಿಗೆ ಜ್ಞಾನೋದಯವನ್ನುಂಟುಮಾಡಿ ದ್ವೇಷಿಗಳಿಗೆಭ್ರಾಂತಿಯನ್ನುಂಟುಮಾಡಿ ತನ್ಮೂಲಕ ಅವರುಗಳು ಅವರವರ ಯೋಗ್ಯತೆಗೆ ತಕ್ಕ ಫಲಕ್ಕೆ ಪಾತ್ರರಾಗುವಂತೆ ಮಾಡಿರುವನಾಗಿ ಪರಶುರಾಮ ಶ್ರೀರಾಮರೂಪಗಳ ಚರಿತ್ರೆಯು ಭಕ್ತರಿಗೆ ಭಕ್ತಿವರ್ಧಕವೆಂದು ಮುಖ್ಯಾಶಯವು.

ಅವತಾರಿಕೆ:—ಭಗವಂತನು ಈ ರೂಪದ್ವಯದಿಂದ ನಡಿಸಿದ ಕಾರ್ಯವು ವಿಡಂಬನಾರ್ಥವೆಂದಾಯ್ತು, ಆದರೆ ಹೀಗೆ ವಿಡಂಬನೆಯನ್ನು ಮಾಡುವುದರಲ್ಲಿ ಕಾರಣವೇನಾದರೂ ಉಂಟೆ ? ಎಂದಲ್ಲಿ ಎರಡು ಮುಖ್ಯ ಕಾರಣಗಳಿವೆ, ಎಂಬುದನ್ನು ಮುಂದಿನ ಶ್ಲೋಕವು ನಿರೂಪಿಸುವುದು:—

**ಶ್ಲೋಕ॥ ಸಚೇಷ್ಟಿತಂಚೈವನಿಜಾಶ್ರಯಸ್ಯ ಜನಸ್ಯಸತ್ತತ್ತ್ವ ವಿಬೋಧಕಾರಣಂ | ವಿಮೋಹಕಂಚಾನ್ಯತಮಸ್ಯಕುರ್ವಂ ಶ್ಚಿಕ್ರೀಡವಿಕೋಪಿನರಾಂತರೇಯಥಾ ||೬೮||**

ಅರ್ಥ:—ಸಃ=ಆ ಶ್ರೀಹರಿಯು, ನಿಜಾಶ್ರಯಸ್ಯ=ನಿಜ=ತಾನೇ, ಆಶ್ರಯಸ್ಯ=ಆಸರೆಯಾಗಿ ಉಳ್ಳ, ಜನಸ್ಯ=ಸಜ್ಜನರಿಗೆ, ಸತ್ತತ್ತ್ವವಿಬೋಧಕಾರಣಂ=ಸತ್=ನಿರ್ದುಷ್ಟವಾದ, ತತ್ತ್ವ=ಭಗವತ್ತತ್ತ್ವದ, ವಿಬೋಧ=ವಿಶೇಷ ಜ್ಞಾನಕ್ಕೆ, ಕಾರಣಂ=ಹೇತುವೆನ್ನಿಸುವ, ಅನ್ಯತಮಸ್ಯ=ಸಜ್ಜನರಿಗೆ ಪ್ರತಿ ಎನ್ನಿಸಿದ ದುರ್ಜನರಿಗೆ (ಭಕ್ತರಲ್ಲದ ಅಸುರ ಮಂಡಲಿಗೆ) ವಿಮೋಹಕಂ=ಭ್ರಾಂತಿಯನ್ನುಂಟು ಮಾಡುವ, ಚೇಷ್ಟಿತಂ=ವ್ಯಾಪಾರವನ್ನು, ಕುರ್ವನ್=ಮಾಡುವಂಥವನಾಗಿ, ಏಕೋಽಪಿ=ಎರಡು ರೂಪಗಳಿಂದ ಭೇದವಿಲ್ಲದೇ ಇರುವನಾದರೂ, ನರಾಂತರೇಯಥಾ=ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನಲ್ಲಿ ಹೇಗೋ ಹಾಗೆ, ಚಿಕ್ರೀಡೆ=ವರ್ತಿಸುತ್ತಾ ವಿನೋದಪಟ್ಟನು.

ತಾತ್ಪರ್ಯ.—ಶ್ರೀಹರಿಯು ತತ್ತ್ವಜ್ಞಾನಕ್ಕರ್ಹರಾದ ಸಜ್ಜನರಿಗೆ ತಾನೇ ಮುಖ್ಯಾಶ್ರಯನಾದ್ದರಿಂದ ಅವರಿಗೆ ತನ್ನ ಮೂಲರೂಪ ಅವತಾರ ರೂಪಗಳಿಗೆ ಸುತರಾಂ ಭೇದವಿಲ್ಲ, ತನ್ನ ಗುಣಕ್ರಿಯಾದಿಗಳಿಗೂ ತನಗೂ ಸಹ ಸುತರಾಂ ಭೇದವಿಲ್ಲವೆಂದು ಸಮಂಜಸವಾಗಿ ತಿಳಿವಳಿಕೆಯನ್ನುಂಟುಮಾಡಲಿಕ್ಕೂ ನರಾಧಮರೆಂದೆನಿಸುವ ಹರಿದ್ವೇಷಿಗಳಾದ ಅಸುರ ವರ್ಗಕ್ಕೆ ಈ ರೂಪ ದ್ವಂದ್ವಗಳ ಮೂಲಕ ನಡಿಸಿದ ಕಾರ್ಯಗಳಿಂದ ರಾಮನೂ ಪರಶುರಾಮನೂ ಪರಸ್ಪರ ಭಿನ್ನರು (ಅಸ್ಮದಾದಿಗಳಂತೆ) ಎಂಬ ಮಿಥ್ಯಾ ಜ್ಞಾನವನ್ನುಂಟುಮಾಡಲಿಕ್ಕೂ ಸಂಕಲ್ಪಿಸಿ ಈ ತೆರನಾಗಿ ಎರಡು ರೂಪಗಳಿಂದ ಚಿತ್ರವಿಚಿತ್ರ ಕಾರ್ಯಗಳನ್ನು ನಡಿಸಿದಂತೆ ನಟಿಸಿ ತಾನು ಸ್ವಭಾವತಃ ಆಪ್ತಕಾಮನೆಂಬುದನ್ನು ಭಕ್ತರಿಗೆ ಅವಗಾಹನೆಗೆ ತರುತ್ತಾ ವಿಹರಿಸಿದನೆಂದು ಮುಖ್ಯಾಭಿಪ್ರಾಯವು. ಈ ಮೇಲಿನ ಎರಡು ಶ್ಲೋಕಗಳ ತಾತ್ಪರ್ಯವೂ ಒಟ್ಟನಲ್ಲಿ ಒಂದೇ ಆಗಿದೆ. ಇವುಗಳ ಮೇಲೆ ತೋರಿಬರುವ ವಿಶೇಷಾಭಿಪ್ರಾಯಗಳನ್ನು ಮೇಲೆಯೇ ಸ್ಪಷ್ಟಪಡಿಸಲಾಗಿದೆ.

ಅವತಾರಿಕೆ:—ಶ್ರೀಭಗವಂತನು ತನ್ನ ಮಹಿಮಾತಿಶಯವನ್ನು ಪ್ರಕಟಿಸಿ ಸಚ್ಚೇತನರಿಗೆ ತನ್ನ ಪ್ರಾದುರ್ಭಾವಗಳ ರಹಸ್ಯವನ್ನು ಸ್ಪಷ್ಟಪಡಿಸಿದನಲ್ಲವೆ? ಇಷ್ಟು ಮಾತ್ರದಿಂದ ಭಗವದ್ರೂಪಗಳಿಗೆ ಐಕ್ಯವನ್ನು ಅವರು ಸ್ಮರಣೆಯಲ್ಲಿಡಲಾರರೆಂದು ತಿಳಿದು ಶ್ರೀರಾಮ ಮತ್ತೂ ಪರಶುರಾಮ ರೂಪಗಳೆರಡೂ ಐಕ್ಯವನ್ನು ಪಡೆದಂತೆ ತೋರಿಸಬೇಕೆಂದು ಸಂಕಲ್ಪಿಸಿದ ಸತ್ಯಸಂಕಲ್ಪನ ಲೀಲೆಯನ್ನು ಈ ಶ್ಲೋಕವು ವರ್ಣಿಸುತ್ತದೆ:—

**ಶ್ಲೋಕ॥ ತತಃಸಕಾರುಣ್ಯನಿಧಿರ್ನಿಜೇಜನೇ ನಿತಾಂತಮೈಕ್ಯಂ ಸ್ವಗತಂಪ್ರಕಾಶಯನ್ । ದ್ವಿಧೇವಭೂತ್ವಾಭೃಗುವರ್ಯಆತ್ಮನಾ ರಘೂತ್ತಮೇನೈಕ್ಯಮಗಾತ್ಸಮಕ್ಷಂ ॥೬೧॥**

ಅರ್ಥ:—ತತಃ=ಸಜ್ಜನ ದುರ್ಜನರಿಗೆ ಜ್ಞಾನಾಜ್ಞಾನಗಳನ್ನುಂಟು ಮಾಡುವ ಕ್ರೀಡಾನಂತರ, ಕಾರುಣ್ಯನಿಧಿಃ=ದಯಾಸಮುದ್ರನಾದ, ಸಃ=ಆ ಶ್ರೀಹರಿಯು, ನಿಜೇ=ತನ್ನವರಾದ, ಜನೇ=ಭಕ್ತರ ವಿಷಯದಲ್ಲಿ, ನಿತಾಂತಂ= ಇಂದ್ರಾರ್ಜುನರಂತೆ ವಿಶೇಷವಿಲ್ಲದ, ಸ್ವಗತಂ=ಸ್ವಸ್ವರೂಪದಲ್ಲಿರುವ, ಐಕ್ಯಂ=ಗುಣಕ್ರಿಯಾದಿಗಳಿಂದ ಅಭೇದವನ್ನು, ಪ್ರಕಾಶಯನ್=ತೋರ್ಪಡಿಸುವವನಾಗಿ, ಆದೌ=ಮೊದಲು, ದ್ವಿಧೇವಭೂತ್ವಾ=ಎರಡು ರೂಪಗಳಿಂದ ಬೇರೆಬೇರೆಯಾಗಿರುವನಂತಿದ್ದು, ಭೃಗುವರ್ಯಃ=ಪರಶುರಾಮ ರೂಪ ವಿಶಿಷ್ಟನಾದ ತಾನು, ಆತ್ಮನಾ=ಸ್ವಸ್ವರೂಪದಿಂದಲೇ, ರಘೂತ್ತಮೇನ=ರಘುಶ್ರೇಷ್ಠನಾದ ಶ್ರೀರಾಮ ರೂಪದಿಂದ, ಐಕ್ಯಂ=ಏಕತ್ವವನ್ನು (ಒಂದಾಗುವಿಕೆಯನ್ನು) ಸಮಕ್ಷಂ=ಎಲ್ಲರ ಇದಿರಿನಲ್ಲಿಯೇ, ಅಗಾತ್=ಪಡೆದನು, ರಾಮ ಪರಶುರಾಮರಿಬ್ಬರೂ ಒಂದೇ ಆದಂತೆ ತೋರಿಸಿದರೆಂದರ್ಥ.

ತಾತ್ಪರ್ಯ:—ಕಾಲಾನುಗುಣವಾಗಿ ಜನಸಮುದಾಯಕ್ಕೆ ಉಂಟಾಗುವ ಭಗವತ್ತತ್ವವಿಷಯಕ ಜ್ಞಾನಗಳನ್ನು ಪರಿಹರಿಸಿ ದಿವ್ಯ ಜ್ಞಾನವನ್ನು ಉಂಟುಮಾಡುವ ಸತ್ಯ ಸಂಕಲ್ಪನನ್ನು ಶ್ರೀಹರಿಯು ತ್ರೇತಾಯುಗದಲ್ಲಿ ರಾಮರೂಪ ಪರಶುರಾಮರೂಪಗಳೆರಡೂ ಸೆಣಸಿದ ರೀತಿಯಿಂದ ಸಾಧಿಸಿ, ಕೊನೆಯಲ್ಲಿ ಈ ಪ್ರಾದುರ್ಭಾವ ರೂಪಗಳೆರಡೂ ಒಂದಾಗುವಂತೆ ಎಂದರೆ ಒಂದರಲ್ಲೊಂದು ಸೇರಿ ಐಕ್ಯವನ್ನು ಪಡೆಯುವಂತೆ ಮಾಡಿ ತನ್ನ ಸ್ವರೂಪಾಭೇದವನ್ನು ಸರ್ವರಿಗೂ ಪ್ರತ್ಯಕ್ಷವಾಗುವಂತೆ ಮಾಡಿದನೆಂದು ಮುಖ್ಯ ತಾತ್ಪರ್ಯ.

ಅವತಾರಿಕೆ:—ಹೀಗೆ ಭಗವದ್ರೂಪಗಳೆರಡೂ ಐಕ್ಯವನ್ನು ಪಡೆದಂತೆ ಪ್ರದರ್ಶಿಸಿದ ಫಲಿತಾಂಶವೇನೆಂಬುದನ್ನು ಈ ಶ್ಲೋಕವು ತಿಳಿಸುವುದು:—

**ಶ್ಲೋಕ ॥ ಸಮೇತ್ಯಚೈಕ್ಯಂಜಗತೋಽಭಿಪಶ್ಯತಃ ಪ್ರಣುದ್ಯಶಂಕಾಮಖಿಲಾಂಜನಸ್ಯ । ಪ್ರದಾಯರಾಮಾಯ ಧನುರ್ವರಂತದಾ ಜಗಾಮರಾಮಾನುಮತೋಽರಮಾಪತಿಃ ॥೬೨॥**

ಅರ್ಥ.—ಜಗತಃ=ಲೋಕವು (ಜನ ಸಮುದಾಯವು) ಅಭಿಪಶ್ಯತಃ= ನೋಡುತ್ತಿರಲಾಗಿ, ಐಕ್ಯಂ=ಶ್ರೀರಾಮರೂಪದಲ್ಲಿ ಪರಶುರಾಮ ರೂಪವು ಒಂದಾಗಿರುವಿಕೆಯನ್ನು, ಸಮೇತ್ಯ=ಪಡೆದು, ಜನಸ್ಯ=ಜನಸಮುದಾಯಕ್ಕೆ (ಭಕ್ತರಿಗೆ) ಅಖಿಲಾಂ=ಸಮಸ್ತವಾದ, ಶಂಕಾ=ಪ್ರಾದುರ್ಭಾವಾದಿಗಳಲ್ಲಿದ್ದ ಸಂಶಯವನ್ನು (ಭಗವದ್ರೂಪಗಳ ವಿಷಯದಲ್ಲಿದ್ದ ಭೇದಶಂಕೆಯನ್ನು) ಪ್ರಣುದ್ಯ=ಚನ್ನಾಗಿ ಪರಿಹರಿಸಿ, ತದಾ=ಆಗ, ರಮಾಪತಿಃ=ಭಾರ್ಗವರೂಪಿಯಾದ ಶ್ರೀಹರಿಯು, ಧನುರ್ವರಂ=ಆ ಶ್ರೇಷ್ಠವಾದ ಬಿಲ್ಲನ್ನು (ಶಾರ್ಙವನ್ನು) ರಾಮಾಯ=ಶ್ರೀರಾಮಚಂದ್ರನಿಗೆ, ಪ್ರದಾಯಚ = ಕೊಟ್ಟುಬಿಟ್ಟು, ರಾಮಾನುಮತಃ=ರಾಮಚಂದ್ರನ ಅನುಮತಿಯನ್ನು ಪಡೆದವನಾಗಿ, ಜಗಾಮ=ಹೊರಟುಹೋದನು.

ತಾತ್ಪರ್ಯ:—ಭಗವಂತನ ಅವತಾರಾದಿ ರೂಪಗಳಲ್ಲಿ ಜಗತ್ತಿಗಿದ್ದ ಭೇದಶಂಕೆಯನ್ನು ಪರಿಹರಿಸಿ, ಆ ಮೂಲಕ ಸತ್ಪುರುಷರಿಗೆ ಭಗವತ್ತತ್ವ ಜ್ಞಾನವನ್ನುಂಟುಮಾಡಿಕೊಟ್ಟ ತರುವಾಯ, ಬ್ರಹ್ಮಾದಿಗಳು ಪ್ರಾರ್ಥಿಸಿದ್ದಂತೆ ಅತ್ಯಧಿಕ ಬಲಪ್ರದರ್ಶನದ ಮೂಲಕ ಲೋಕಮಯ ದೈತ್ಯ ವಧವನ್ನು ನಡಿಸಿ, ಉದ್ದೇಶಿಸಿದ ಕಾರ್ಯಸಾಧನಾನಂತರ ಶ್ರೀಪರಶುರಾಮ ರೂಪಿಯಾದ ಪ್ರಭುವು (ರಾಕ್ಷಸರ ಕೊಲೆಗಾಗಿ) ತಂದಿದ್ದ ಶಾರ್ಙಧನುಸ್ಸನ್ನು ಶ್ರೀರಘುನಾಥನಿಗೆ ಕೊಟ್ಟು ಆತನ ಅನುಮತಿಯನ್ನು ಪಡೆದು ತನ್ನಾಶ್ರಮಕ್ಕೆ ತೆರಳಿದನೆಂದು ತಾತ್ಪರ್ಯ.

ವಿಶೇಷಾರ್ಥ.—ಒಟ್ಟಿನಲ್ಲಿ ಎರಡು ರೂಪಗಳಿಂದ ಅಥವಾ ಅನಂತಾನಂತ ರೂಪಗಳಿಂದ ಸ್ವಾಮಿಯು ಲೀಲಾರ್ಥವಾಗಿ ಈ ಜಗತ್ಕಾರ್ಯವನ್ನು ತನ್ನ ಇಚ್ಛಾನುಸಾರ ನಡಿಸುತ್ತಾ ವಿಹರಿಸುವನಾದ್ದರಿಂದ ಆ ರೂಪಗಳು ಮಾನವರ ದೃಷ್ಟಿಗೆ ಬೇರೆಬೇರೆ ಎಂದು ತೋರಿದರೂ ಸ್ವರೂಪತಃ ಒಂದೇ ಆಗಿರುವುದೆಂದು, ಮೋಕ್ಷಾರ್ಥಿಯಾದ ಮನುಜನು ತಿಳಿಯತಕ್ಕದ್ದು. ಹೀಗೆ ರಾಮ ಭಾರ್ಗವ ರೂಪಗಳ ಚರಿತ್ರೆಯನ್ನು ನಿದರ್ಶನ ಮಾಡಿಕೊಟ್ಟಿದ್ದಕ್ಕಾಗಿ ಭಗವದ್ಭಕ್ತರು ಶ್ರೀಹರಿಯ ಪರಮಾನುಗ್ರಹಕ್ಕೆ ಕೃತಾರ್ಥರಾಗಬೇಕು.

ಅವತಾರಿಕೆ:—ಹಿಂದೆ ಇದ್ದಕ್ಕಿದ್ದ ಹಾಗೆ ಪರಶುರಾಮರು ಬಂದು ಇದಿರಿನಲ್ಲಿ ನಿಂತಕೂಡಲೇ ದಶರಥನು ಪರಮ ಭೀತನಾಗಿ ಅವರು ಕ್ಷತ್ರಿಯು ರನ್ನು ನಾಶಮಾಡುತ್ತಿದ್ದ ಉದ್ದೇಶದಂತೆ ತನ್ನನ್ನೂ ತನ್ನ ಮಕ್ಕಳನ್ನೂ ಎಲ್ಲಿ ನಾಶಮಾಡುವರೋ ಎಂದು ಯೋಚಿಸಿ ಅವರನ್ನು ನಮಸ್ಕರಿಸಿ ಸ್ವಾಮಿ! ನನ್ನ ಮಕ್ಕಳಗೊಡವೆಗೆ ಬರಬಾರದೆಂದು ನನ್ನ ಪ್ರಾರ್ಥನೆ ಎನ್ನಲು ಅವರು ಆತನಿಗೆ ಮೂವರು ಮಕ್ಕಳನ್ನು ಮಾತ್ರ ಬಿಟ್ಟುಕೊಡುವೆವು, ಈ ರಾಮನನ್ನು ಬಿಡಲಾಗುವುದಿಲ್ಲ, ರಾಮನು ತಮ್ಮ ಸಂಗಡ ಯುದ್ಧಮಾಡಿ ಯೇ ತೀರಬೇಕೆಂದು ನುಡಿದು, ರಾಮನೊಡನೆ ಯುದ್ಧಮಾಡಿ ನಿರಂತಕ ವಾಗಿದ್ದ ತನ್ನ ಪುತ್ರವರ್ಯನಾದ ಶ್ರೀರಾಮಮೂರ್ತಿಯನ್ನು ನೋಡಿ ದಶರಥ ನು ಪರಮಾನಂದವನ್ನು ಪಡೆದು ಆ ನಾಲ್ವರು ಮಕ್ಕಳಿಂದಲೂ ಒಡಗೂಡಿ ತನ್ನ ನಗರಕ್ಕೆ ಪ್ರಯಾಣ ಮಾಡಿದ ರೀತಿಯನ್ನು ಮುಂದಿನ ಪದ್ಯವು ನಿರೂಪಿಸುತ್ತದೆ:—

**ಶ್ಲೋಕ॥ ತತೋಽನ್ಯಪೋತ್ಯರ್ಥಮುದಾಭಿಪೂರಿತಃ ಸುತೈಃಸಮಸ್ತೈಃ ಸ್ವಪು ರೀಮವಾಪಹ। ರೇಮೇಽಥರಾಮೋಽಪಿರಮಾಸ್ವರೂಪಯಾತಯೈವ ರಾಜಾತ್ಮಜಯಾಹಿಸೀತಯಾ ॥೬೩॥**

ಅರ್ಥ.—ತತಃ=ಶ್ರೀಪರಶುರಾಮರು ಪ್ರಯಾಣಮಾಡಿದನಂತರ, ನೃಪ=ದಶರಥನು, ಅತ್ಯರ್ಥ=ಹೆಚ್ಚಾದ, ಮುದಾ=ಸಂತೋಷದಿಂದ, ಅಭಿ ಪೂರಿತಃ=ತುಂಬಿದವನಾಗಿ, ಸಮಸ್ತೈ=ಎಲ್ಲಾ, ಸುತೈಃ=ಮಕ್ಕಳುಗಳಿಂದ, ಸಹ=ಒಡಗೂಡಿ, ಸ್ವಪುರೀಂ=ಸ್ವ=ತನ್ನ, ಪುರೀಂ=ರಾಜಧಾನಿಯಾದ ಅ ಯೋಧ್ಯೆಯನ್ನು, ಅವಾಪ=ಸೇರಿದನು, ಅಥಾ=ಅಯೋಧ್ಯೆಯನ್ನು ಸೇರಿದ ಮೇಲೆ, ರಾಮೋಽಪಿ=ಶ್ರೀರಾಮಚಂದ್ರನಾದರೋ, ರಮಾಸ್ವರೂಪಯಾ= ರಮಾ=ಲಕ್ಷ್ಮೀದೇವಿಯು, ಸ್ವರೂಪಯಾ=ಸ್ವರೂಪಳಾದ, (ಸ್ವರೂಪತಃ ಲಕ್ಷ್ಮೀದೇವಿಯೇ ಆಗಿರುವ,) ರಾಜಾತ್ಮಜಯಾ=ರಾಜ=ಆ ಜನಕರಾಜನ, ಆತ್ಮಜಯಾ=ಪುತ್ರಿಯಾದ, ತಯೈವಸೀತಯಾ=ಸ್ವಯಂವರದಲ್ಲಿ ಲಭಿಸಿ ದಂಥಾ ಆ ಸೀತಾದೇವಿಯೊಡನೆ, ರೇಮೇ=ಆನಂದಿಸಿದನು. (ಕ್ರೀಡಿಸಿದನು)

ತಾತ್ಪರ್ಯ.—ಪರಶುರಾಮರು ಹೊರಟುಹೋದ ತರುವಾಯ ದಶ ರಥಮಹಾರಾಜನು ಅಧಿಕ ಸಂತೋಷಭರಿತನಾಗಿ ತನ್ನ ಪುತ್ರರಿಂದಲೂ

ಮತ್ತು ತನ್ನ ಸಮಸ್ತ ಪರಿವಾರದಿಂದಲೂ ಕೂಡಿದವನಾಗಿ ಅಯೋಧ್ಯಾ ನಗರವನ್ನು ಶೇರಿದನು. ನಂತರ ಶ್ರೀರಾಮಚಂದ್ರನು ಜನಕ ಪುತ್ರಿಯಾಗಿ ಅವತರಿಸಿದ ರಮಾಸ್ವರೂಪಳಾದ ಸೀತಾದೇವಿಯಿಂದೊಡಗೂಡಿ ಕ್ರೀಡಿಸುತ್ತಿದ್ದನು.

ವಿಶೇಷಾರ್ಥ.— " ಶ್ರೀ ಭೂ ದುರ್ಗಾ ಅಂಭ್ರಣೀಹ್ರೀಶ್ಚಮಹಾಲಕ್ಷ್ಮೀಶ್ಚದಕ್ಷಿಣಾ । ಸೀತಾಜಯಂತೀ ಸತ್ಯಾ " ಎಂಬ ಪ್ರಮಾಣವು ರಮಾದೇವಿಯ ರೂಪಗಳನ್ನು ಸ್ಪಷ್ಟಪಡಿಸುವವು. ಸಾಕ್ಷಾನ್ನಾರಾಯಣನಂತೆ ದೇವಿಯೂ ಭಕ್ತಾನುಗ್ರಹಕ್ಕಾಗಿ ಅನೇಕ ರೂಪಗಳನ್ನು ತಾಳುವಳು ಮತ್ತೂ ಆ ರೂಪಗಳಲ್ಲಿಯೂ ಭಗವಂತನ ಇಚ್ಛಾಧೀನಳಾಗಿ ಅವನ ಪಾರ್ಶ್ವವರ್ತಿನಿಯಾಗಿದ್ದು ಜಗತ್ಕಾರ್ಯ ನಿರ್ವಾಹಕಳಾಗುವಳೆಂಬ ತತ್ವವನ್ನು ಮುಕ್ತಿಯೋಗ್ಯ ಜೀವರು ಸರ್ವದಾ ಸ್ಮರಣೆಯಲ್ಲಿಟ್ಟಿರಬೇಕೆಂಬ ಭಾವನೆಇಂದ ಆಚಾರ್ಯರು ಇಲ್ಲಿ " ರೇಮೇಥಾ ರಾಮೋಽಪಿ ರಮಾಸ್ವರೂಪಯಾ " ಎಂಬ ವಾಕ್ಯದಿಂದ ಸ್ಪಷ್ಟವಾಗಿ ತಿಳಿಸಿದ್ದಾರೆ. ಈ ಪ್ರಮೇಯವನ್ನು ದೃಢಪಡಿಸಲಿಕ್ಕಾಗಿಯೇ ಮುಂದಿನ ಶ್ಲೋಕವು ಹೊರಟಿದೆ. ಮುಖ್ಯವಾಗಿ ಶ್ರೀಸೀತಾರಾಮರುಗಳನ್ನು ಶ್ರೀರಮಾನಾರಾಯಣರನ್ನಾಗಿಯೇ ಜನರು ಭಾವಿಸತಕ್ಕದ್ದು ಶ್ರೇಯಸ್ಕರವೆಂದು ಶಾಸ್ತ್ರಾರ್ಥವು.

ಅವತಾರಿಕೆ:— ಶ್ರೀಸೀತಾರಾಮರುಗಳು ಅಯೋಧ್ಯೆಯಲ್ಲಿ ಹೇಗೆ ವಿನೋದಪಟ್ಟರೆಂಬುದನ್ನು ಸದೃಷ್ಟಾಂತವಾಗಿ ವರ್ಣಿಸಿ ತಿಳಿಸಲು ಮುಂದಿನ ಶ್ಲೋಕವು ಹೊರಟಿದೆ.—

**ಶ್ಲೋಕ॥ ಯಥಾಪುರಾಶ್ರೀರಮಣಃ ಶ್ರಿಯಾತಯಾರತೋನಿತಾಂತಂಹಿ ಪಯೋಧಿಮಧ್ಯೇ । ತಥಾತ್ವಯೋಧ್ಯಾಪುರಗೋರಘೂತ್ತಮೋಽಪ್ಯವಾಸಕಾಲಂಸುಚಿರಂರತಸ್ತಯಾ ॥೬೪॥**

ಅರ್ಥ:—ಪುರಾ=ಪೂರ್ವದಲ್ಲಿ, ಶ್ರೀರಮಣಃ=ಶ್ರೀಪತಿಯು, ತಯಾ=ಸ್ವರೂಪತಃ ತನಗೆ ಭಾರ್ಯೆಯಾದ, ಶ್ರಿಯಾ=ಶ್ರೀದೇವಿಯಿಂದ ಒಡಗೂಡಿ, ಪಯೋಧಿಮಧ್ಯೇ=ಪಯೋಧಿ=ಕ್ಷೀರಸಮುದ್ರದ, ಮಧ್ಯೇ=ಮಧ್ಯದಲ್ಲಿ, ನಿತಾಂತಂ=ಅತ್ಯಂತವಾಗಿ, ಯಥಾ=ಹೇಗೆ, ರತಃ=ರಮಿಸಿದನೋ (ವಿನೋದಪಟ್ಟನೋ) ತಥಾ=ಹಾಗೆಯೇ, ರಘೂತ್ತಮೋಽಪಿ = ರಘುಶ್ರೇಷ್ಠನಾದ ಶ್ರೀ

ಹರಿಯು, ಅಯೋಧ್ಯಾಪುರಗಃ=ಅಯೋಧ್ಯಾಪಟ್ಟಣದಲ್ಲಿರುವನಾಗಿ, ಸುಚಿರಂಕಾಲಂ=ಬಹುಕಾಲದವರಿವಿಗೂ, ತಯಾ=ಆ ಶ್ರೀದೇವಿಯೇ ಆದ ಸೀತಾದೇವಿಯಿಂದ ಒಡಗೂಡಿ, ರತಃಸನ್=ವಿನೋದಪಡುವನಾಗಿ, ಉವಾಸ=ವಾಸಮಾಡಿದನು.

ತಾತ್ಪರ್ಯ:—ಪೂರ್ವದಲ್ಲಿ ಶ್ರೀಲಕ್ಷ್ಮೀರಮಣನಾದ ಶ್ರೀಮನ್ನಾರಾಯಣನು ಶ್ರೀಲಕ್ಷ್ಮಿಯಿಂದೊಡಗೂಡಿ ಕ್ಷೀರಸಮುದ್ರದ ಮಧ್ಯದಲ್ಲಿ ಯಾವರೀತಿಯಲ್ಲಿ ಕ್ರೀಡಿಸಿದನೋ ಅದೇ ರೀತಿಯಲ್ಲಿ ಅಯೋಧ್ಯಾನಗರದಲ್ಲಿ ಅವತರಿಸಿದ ಶ್ರೀರಾಮಚಂದ್ರನು ಸೀತಾದೇವಿಯಿಂದೊಡಗೂಡಿ ಬಹುಕಾಲ ಕ್ರೀಡಿಸುತ್ತಿದ್ದನು.

ಅವತಾರಿಕೆ:—ಶ್ರೀರಾಮಚಂದ್ರನು ಸೀತಾಸಮೇತನಾಗಿ ಅಯೋಧ್ಯೆಯನ್ನು ಸೇರಿ ಸುಖಸಂಪತ್ತುಗಳನ್ನು ಅನುಭವಿಸುತ್ತಾ ಬಹುಕಾಲ ವಿಹರಿಸಿದನೆಂದು ಒಂದಿನ ಶ್ಲೋಕದಿಂದ ಸ್ಪಷ್ಟವಾಗಿದೆ. ಹೀಗೆ ದಶರಥನ ಆಜ್ಞೆಯನ್ನು ಪಡೆದು ವಿಶ್ವಾಮಿತ್ರರ ಸಂಗಡ ಸಿದ್ಧಾಶ್ರಮಕ್ಕೆಂದು ತೆರಳಿದ ಶ್ರೀರಾಮಚಂದ್ರನು ಅನೇಕ ಘೋರ ರಾಕ್ಷಸರನ್ನು ನಿಗ್ರಹಿಸಿ ಋಷಿವರ್ಯರ ಮನೋರಥವನ್ನು ಪೂರ್ಣಮಾಡಿಕೊಟ್ಟುದರ ಪ್ರತಿಫಲವೋ ಎಂಬಂತೆ ಹಿಡಿದ ಕಾರ್ಯಗಳಲ್ಲೆಲ್ಲಾ ಜಯವನ್ನು ಪಡೆದು, ಮಾರ್ಗದಲ್ಲಿ ಅಹಲ್ಯಾಗೌತಮರನ್ನು ಗಾರ್ಹಸ್ತ್ಯಧರ್ಮದಲ್ಲಿ ನಿಯೋಗಿಸಿ ತರುವಾಯ ಜಾನಕಿಯ ಪಾಣಿಗ್ರಹಣವನ್ನು ಪಡೆದು ದಶರಥನ ಪಟ್ಟಣಕ್ಕೆ ಸೀತಾಸಮೇತನಾಗಿ ಬಂದುಶೇರಿದನು. ಆಕೆಯು ಸಾಕ್ಷಾಲ್ಲಕ್ಷ್ಮೀದೇವಿಯೇ ಆದ್ದರಿಂದ ತನ್ನ ಮನೋನುಕೂಲಳೆಂದು ಜಗತ್ತಿಗೆ ತಿಳಿಸುತ್ತಾ ವಿವಿಧ ವಿನೋದಗಳಿಂದ ಆನಂದಿಸುತ್ತಾ ಅಯೋಧ್ಯೆಯಲ್ಲಿ ವಾಸಮಾಡಿದನೆಂದೂ ಹೇಳಿದರು. ಇಂಥಾ ಶ್ರೀರಾಮಚಂದ್ರನ ಪುರಪ್ರವೇಶವು ದಶರಥನಿಗೂ ಅವನ ಪ್ರಜೆಗಳಿಗೂ ಪರಮಾನಂದದಾಯಕವಾಯಿತು. ಇಲ್ಲಿಗೆ ಬಾಲಕಾಂಡ ಕಥಾಭಾಗವು ಪೂರ್ಣವಾಯಿತು. ಶ್ರೀಮದಾಚಾರ್ಯರು ಇಂಥಾ ಕಥಾಭಾಗದಿಂದ ನಾವು ಇದುವರಿವಿಗೂ ವರ್ಣನಮಾಡಿರುವ ಶ್ರೀರಘುವೀರನ ಚರಿತ್ರೆಗಳೆಲ್ಲವೂ ಪರಮಾದ್ಭುತವು. ಅವನ ಗುಣಾನುವಾದವು ನಮ್ಮ ಕರ್ತವ್ಯವು, ಆದ್ದರಿಂದ ಈ ರೀತಿಯಲ್ಲಿ ವರ್ಣಿಸಿದ್ದೇವೆಂದು ವರ್ಣಿತವಾದ ಭಗವನ್ಮಹಿಮೆಗಳಿರುವ ಅಪಾರಮಹಿಮೆಗಳನ್ನು ತಿಳಿಸುತ್ತಾ ಈ ಮಹಿಮೆಗಳ ಜ್ಞಾನವೂ ಅಸ್ಮದಾದಿ

ಗಳಿಗೆ ಅವಶ್ಯಕವೆಂದು ಭಕ್ತರು ಭಾವಿಸತಕ್ಕದ್ದೆಂದು ಹೇಳಿ ಈ ಅಧ್ಯಾಯವನ್ನು ಉಪಸಂಹಾರಮಾಡುತ್ತಾರೆ:—

**ಶ್ಲೋಕ॥ ಇಮಾನಿಕರ್ಮಾಣಿ ರಘೂತ್ತಮಸ್ಯಹರೇ ರ್ವಿಚಿತ್ರಾಣ್ಯಪಿನಾದ್ಭುತಾನಿ। ದುರಂತಶಕ್ತೇರಥಚಾಸ್ಯವೈಭವಂ ಸ್ವಕೀಯಕರ್ತವ್ಯತಯಾನುವರ್ಣ್ಯತೇ ॥೩೫॥**

ಅರ್ಥ:—ಇಮಾನಿ=ವಿಶ್ವಾಮಿತ್ರರ ಆಶ್ರಮ ಪ್ರವೇಶಮಾಡಿದ ಮೊದಲು ಶ್ರೀರಾಮನು ನಡಿಸಿದಂಥ, ಕರ್ಮಾಣಿ=ಕೆಲಸಗಳು, ವಿಚಿತ್ರಾಣ್ಯಪಿ-ಬ್ರಹ್ಮದೇವರ ಮೊದಲ್ಗೊಂಡು ಸಕಲ ಜೀವರಿಗೂ ಆಶ್ಚರ್ಯಕರಗಳಾದರೂ, ರಘೂತ್ತಮಸ್ಯ=ರಘುಶ್ರೇಷ್ಠನಾದ, ಹರೇಃ=ಶ್ರೀರಾಮರೂಪಿಯಾದ ಸ್ವಾಮಿಗೆ, ಅದ್ಭುತಾನಿ=ಆಶ್ಚರ್ಯಕರಗಳಾಗಿ, ನ=ಅಲ್ಲವು, ಕುತಃ=ಏತಕ್ಕೆಂದರೆ, ದುರಂತಶಕ್ತೇಃ=ಆ ಪ್ರಭುವು ಅಪರಿಮಿತ ಶಕ್ತಿಪೂರ್ಣನಾದುದರಿಂದ (ಅವನ ಶಕ್ತಿವಿವಕ್ಷೆಯಿಂದ ಈ ಕೃತ್ಯಗಳ್ಯಾವುವೂ ಅದ್ಭುತವಲ್ಲವೆಂದರ್ಥ) ತರ್ಹಿ=ಹಾಗಾದರೆ, ಕುತಃವರ್ಣಿತಾನಿ=ಏತಕ್ಕೆ ವರ್ಣಿಸಲಾಯಿತು? ಎಂದರೆ, ಅಥಚ=ಹೀಗೆ ಅವನ ಶಕ್ತಿಗೆ ಅದ್ಭುತವಲ್ಲದಿದ್ದರೂ, ಅಸ್ಯ = ಈ ಶ್ರೀಹರಿಯ, ವೈಭವಂ=ಗುಣ ಕರ್ಮ ಸಾಮರ್ಥ್ಯವು, ಸ್ವಕೀಯಕರ್ತವ್ಯತಯಾ=ಸ್ವಕೀಯಃ=ನಮಗೆ, ಕರ್ತವ್ಯತಯಾ = ಅವಶ್ಯಾನುಷ್ಠೇಯವಾದ್ದರಿಂದ, ಅನುವರ್ಣ್ಯತೆ=ಅನುವಾದಮಾಡಲ್ಪಡುತ್ತದೆ. (ಉತ್ತಮ ಶ್ಲೋಕನಗುಣಕರ್ಮಸಾಮರ್ಥ್ಯಾದಿಗಳನ್ನು ಸರ್ವದಾ ಭಕ್ತರು ಅನುವಾದ ಮಾಡಬೇಕಾದುದು ಅವರಿಗೆ ವಿಧಿ ನಿಯಮವಾದ್ದರಿಂದ ಯಾವಾಗಲೂ ಅನುವರ್ಣಿತವಾಗುವುದೆಂದರ್ಥ.)

ತಾತ್ಪರ್ಯ:—ರಘೂತ್ತಮನಾದ ಶ್ರೀರಾಮಚಂದ್ರನ ಪೂರ್ವೋಕ್ತಗಳಾದ ವ್ಯಾಪಾರಗಳು ಬ್ರಹ್ಮಾದಿಗಳಿಗೆ ಕೂಡ ಆಶ್ಚರ್ಯಕರಗಳಾದರೂ ಅಪರಿಮಿತ ಶಕ್ತಿಯುಳ್ಳ ಪರಮಾತ್ಮನಿಗೆ ಆಶ್ಚರ್ಯಕರಗಳಲ್ಲ. ಆದರೂ ಈ ಪರಮಾತ್ಮನ ಗುಣ ಕರ್ಮ ಸಾಮರ್ಥ್ಯರೂಪ ವೈಭವವು ನಮ್ಮಗಳಿಗೆ ಅವಶ್ಯಕವಾದಕಾರಣ ಅನುವಾದ ಮಾಡಲ್ಪಟ್ಟವೆ.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ,
ಶ್ರೀರಾಮಚರಿತೇ ಬಾಲಕಾಂಡ ಕಥಾನಿರೂಪಣಂನಾಮ
॥ ಚತುರ್ಥೋಽಧ್ಯಾಯಃ ॥

## ಐದನೇ ಅಧ್ಯಾಯ ಪ್ರಾರಂಭ.



ಅವತಾರಿಕೆ.— ಪೂರ್ವಾಧ್ಯಾಯದಲ್ಲಿ ಶ್ರೀಮದಾಚಾರ್ಯರು ರಾಮಾಯಣದ ಬಾಲಕಾಂಡಕಥೆಯನ್ನು ನಿರೂಪಣಮಾಡಿ ಈ ಅಧ್ಯಾಯದಲ್ಲಿ ಅಯೋಧ್ಯಾಕಾಂಡದ ಕಥೆಯನ್ನು ನಿರೂಪಣಮಾಡುತ್ತಾರೆ.—

ಶ್ಲೋಕ॥ ಇತ್ಥಂವಿಶ್ವೇಶ್ವರೇಸ್ಮಿನ್ ನಿಖಿಲಜಗದವಸ್ಥಾಪ್ಯ ಸೀತಾಸಹಾಯೇ ಭೂಮಿಷ್ಠೇ ಸರ್ವಲೋಕಾ ಸ್ತುತುಷುರನುದಿನಂವೃದ್ಧಭಕ್ತ್ಯಾನಿತಾಂತಂ। ರಾಜಾರಾಜ್ಯಾಭಿಷೇಕೇ ಪ್ರಕೃತಿಜನವಚೋ ಮಾನಯನ್ಸ್ವಾತ್ಮನೋರ್ಥ್ಯಂ ದಧ್ರೇತನ್ಮಂಥರಾಯಾಃ ಶೃತಿಪಥಮಗಮದ್ಭೂಮಿಗಾಯಾ ಅಲಕ್ಷ್ಮ್ಯಾಃ ॥೧॥

ಅರ್ಥ.— ಇತ್ಥಂ=ಈ ಪ್ರಕಾರವಾಗಿ, ಸರ್ವಲೋಕಾಃ-ಸಮಸ್ತ ಜನಗಳೂ, ಸೀತಾಸಹಾಯೇ = ಸೀತಾದೇವಿಯೇ ಸಹಕಾರಿಣಿಯಾಗಿ ಉಳ್ಳ, ವಿಶ್ವೇಶ್ವರೇ=ವಿಶ್ವ=ಸಮಸ್ತವಾದ ಜಗತ್ತಿಗೆ, ಈಶ್ವರೇ – ಸ್ವಾಮಿಯಾದ, ಭೂಮಿಷ್ಠೇ=ಭೂಲೋಕದಲ್ಲಿ ಅವತಾರಮಾಡಿರತಕ್ಕ, ಅಸ್ಮಿನ್=ಈ ರಾಮದೇವರಲ್ಲಿ, ನಿಖಿಲಜಗತ್=ಸಮಸ್ತವನ್ನೂ, (ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಎಂಬ ಸ್ಮೃತ್ಯನುಸಾರ) ಅವಸ್ಥಾಪ್ಯ=ಸಮರ್ಪಣಮಾಡಿ; ಅನುದಿನಂ=ನಿರಂತರದಲ್ಲಿಯೂ, ವೃದ್ಧಭಕ್ತ್ಯಾ=ಅಭಿವೃದ್ಧಿ ಹೊಂದುತ್ತಿರುವ ಭಕ್ತಿಯಿಂದ, ತುತುಷುಃ=ಸಂತೋಷವುಳ್ಳವರಾಗಿದ್ದರು. ರಾಜಾ=ದಶರಥರಾಜನು, ಆತ್ಮನಃ=ತನಗೆ, ಅರ್ಥ್ಯಂ=ಅಪೇಕ್ಷಣೀಯವಾದ ರಾಜ್ಯಾಭಿಷೇಕೇ=ರಾಮರಿಗೆ ರಾಜ್ಯಾಭಿಷೇಕವನ್ನು ಮಾಡಬೇಕೆಂಬ ವಿಷಯದಲ್ಲಿ ಪ್ರಕೃತಿಜನವಚಃ – ಮಂತ್ರಿಗಳ ಸಮ್ಮತಿ (ವಾಕ್ಯ) ಯನ್ನು ಮಾನಯನ್=ಗೌರವಿಸಿ ದಧ್ರೇ=ಮನಸ್ಸಿನಲ್ಲಿ ನಿರ್ಧರಿಸಿದನು. ಈ ಸಂಗತಿಯು ಭೂಮಿಗಾಯಾಃ=ಭೂಲೋಕವನ್ನೂ ಕಾದಿರತಕ್ಕ ಅಲಕ್ಷ್ಮ್ಯಾಃ = ದರಿದ್ರಾಭಿಮಾನಿಯಾದ ಮಂಥರಾಯಾಃ=ಕೈಕೇಯಿದೇವಿಗೆ ದಾಸಿಯಾಗಿದ್ದ ಮಂಥರೆಯ ಶೃತಿಪಥಂ – ಶ್ರವಣಮಾರ್ಗವನ್ನು ಆಗಮತ್–ಹೊಂದಿತು. (ಮಂಥರೆಯ ಕಿವಿಗೆ ಬಿತ್ತು)

ತಾತ್ಪರ್ಯ.—ಜಗದೀಶ್ವರನಾದ ರಾಮಚಂದ್ರದೇವರು ಈ ಪ್ರಕಾರ ಸಕಲ ಜಗತ್ತನ್ನು ಸಂರಕ್ಷಣೆಮಾಡುತ್ತಾ ಸೀತಾ ಸಮೇತನಾಗಿ ಭೂಲೋಕದಲ್ಲಿ ಇರುವಾಗ ಸಮಸ್ತ ಭಕ್ತ ಜನರು ಪ್ರತಿದಿನವೂ ಅಭಿವೃದ್ಧಿಯಾಗುತ್ತಿದ್ದ ಭಕ್ತಿಯಿಂದ ತಮ್ಮ ಸರ್ವ ಪದಾರ್ಥಗಳನ್ನು ಪರಮಾತ್ಮನಿಗೆ ಸಮರ್ಪಣೆಮಾಡಿ ಸಂತೋಷಪಡುತ್ತಿದ್ದರು. ದಶರಥರಾಯನು ತನಗೆ ಅಪೇಕ್ಷಣೀಯವಾದ ರಾಮದೇವರ ಪಟ್ಟಾಭಿಷೇಕದ ವಿಷಯದಲ್ಲಿ ಮಂತ್ರಿಗಳಾಡಿದ ಮಾತನ್ನ ಸನ್ಮಾನಮಾಡಿ ಶ್ರೀರಾಮದೇವರಿಗೆ ಪಟ್ಟಾಭಿಷೇಕಮಾಡಬೇಕೆಂದು ನಿಶ್ಚೈಸಿದನು. ಈ ವೃತ್ತಾಂತವನ್ನು ಪೂರ್ವ ಜನ್ಮದಲ್ಲಿ ದರಿದ್ರಾಭಿಮಾನಿಯಾದ ಅಲಕ್ಷ್ಮಿಯು ಮಂಥರೆ ಎಂಬ ನಾಮಾಂಕಿತಳಾಗಿ ಭೂಮಿಯಲ್ಲಿ ಅವತರಿಸಿರುವ ಕೈಕೇಯಿಯಾ ದಾಸಿಯ ಕಿವಿಗೆ ಬಿತ್ತು.

ಅವತಾರಿಕೆ.—ಅಸುರ ಶ್ರೇಷ್ಠನಾದ ಕಲಿಗೆ ಪತ್ನಿಯಾದ ಅಲಕ್ಷ್ಮಿಗೆ ದಾಸಿತ್ವವು ಏತಕ್ಕೋಸ್ಕರ ಪ್ರಾಪ್ತವಾಯಿತೆಂದರೆ ಅದಕ್ಕೆ ಕಾರಣವನ್ನು ಈ ಶ್ಲೋಕದಲ್ಲಿ ನಿರೂಪಣಮಾಡುತ್ತಾರೆ.—

**ಶ್ಲೋಕ || ಪೂರ್ವಂ ಕ್ಷೀರಾಬ್ಧಿಜಾತಾ ಕಥಮಪಿ ತಪಸೈವಾಪ್ಸರಸ್ತ್ವಂಪ್ರಯಾತಾತಾನ್ನೇತುಂತತ್ತಮೋಂಧಂ ಕಮಲಜನಿರುವಾ ಚಾಶುರಾಮಾಭಿಷೇಕಂ | ಭೂತ್ವಾದಾಸೀವಿಲುಂಪ ಸ್ವಗತಿಮಪಿತತಃ ಕರ್ಮಣಾಪ್ರಾಪ್ಸ್ಯಸೇತ್ವಂ ಸೇತ್ಯುಕ್ತಾಮಂಥರಾಸೀತ್ತದನುಕೃತವತೀತ್ಯೇವ ಚೈತತ್ಕುಕರ್ಮ ||೨||**

ಅರ್ಥ.—ಪೂರ್ವಂ=ಪೂರ್ವದಲ್ಲಿ (ಸಮುದ್ರಮಥನಕಾಲದಲ್ಲಿ) ಕ್ಷೀರಾಬ್ಧಿಜಾತಾ=ಕ್ಷೀರಸಮುದ್ರದಲ್ಲಿ ಉತ್ಪನ್ನಳಾದ (ಈ ಅಲಕ್ಷ್ಮಿಯು) ಕಥಮಪಿ-ಕಷ್ಟತರವಾದ, ತಪಸೈವ=ತಪಸ್ಸನ್ನು ಮಾಡಿ, ಅಪ್ಸರಸ್ತ್ವಂ=ಅಪ್ಸರಸ್ತ್ರೀತ್ವವನ್ನು, ಪ್ರಯಾತಾ=ಹೊಂದಿದ್ದಳು, ತಾಂ=ಆ ಅಪ್ಸರಸ್ತ್ರೀಯನ್ನು ಅಂಧಂತಮಃ=ಅಂಧಂತಮೋಲೋಕವನ್ನು, ನೇತುಂ = ಹೊಂದಿಸುವದಕ್ಕೋಸ್ಕರ, ಕಮಲಜನಿಃ-ಪರಮಾತ್ಮನ ನಾಭಿಕಮಲದಿಂದ ಉತ್ಪನ್ನರಾದ ಬ್ರಹ್ಮದೇವರು, ಈ ಅಪ್ಸರ ಸ್ತ್ರೀಯನ್ನು ಕುರಿತು, ತ್ವಂ=ನೀನು, ದಾಸೀಭೂತ್ವಾ-ಕೈಕೇಯಿಯಾದೇವಿಯ ದಾಸಿಯಾಗಿದ್ದುಕೊಂಡು, ರಾಮಾಭಿಷೇಕಂ-

ರಾಮದೇವರ ಪಟ್ಟಾಭಿಷೇಕವನ್ನು, ಆಶು=ತಕ್ಷಣದಲ್ಲಿಯೇ, ವಿಲುಂಪ=ನಾಶಮಾಡು, ತತಃ=ಅನಂತರ, ತ್ವಂ=ನೀನು, ತೇನಕರ್ಮಣಾ=ಆ ನೀಚ ಕರ್ಮದಿಂದ, ಸ್ವಗತಿಮುಪಿ = ನಿನ್ನ ಸ್ವರೂಪ ಯೋಗ್ಯವಾದ ಗತಿಯನ್ನು, ಪ್ರಾಪ್ಸ್ಯಸೆ=ಹೊಂದುತ್ತೀ ಎಂದು, ಉವಾಚ=ಹೇಳಿದರು, ಇತಿ-ಈ ಪ್ರಕಾರವಾಗಿ, ಉಕ್ತಾ=ಹೇಳಲ್ಪಟ್ಟ, ಸಾ-ಅಲಕ್ಷ್ಮೀ ಸ್ವರೂಪಳಾದ ಅಪ್ಸರಸ್ತ್ರೀಯು, ಮಂಥರಾ=ಮಂಥರಾ ಎಂಬ ನಾಮಧೇಯವುಳ್ಳವರಾಗಿ, ಅಸೀತ್=ಆಗಿದ್ದಳು. ತದನು=ಮಂಥರಾ ಜನ್ಮಪ್ರಾಪ್ತವಾದನಂತರ, ಏತತ್-ಈ ರಾಮರಾಜ್ಯಾಭಿಷೇಕ ನಾಶಕರವಾದ, ಕುಕರ್ಮ=ನಿಂದ್ಯಕರವಾದ ಕಾರ್ಯವನ್ನು, ಕೃತವತೀತ್ಯೇವ=ಮಾಡಿದವಳಾದಳು.

ತಾತ್ಪರ್ಯ.—ಅಸುರಶ್ರೇಷ್ಟನಾದ ಕಲಿಗೆ ಭಾರ್ಯೆಯಾದ ಅಲಕ್ಷ್ಮಿಗೆ ದಾಸಿತ್ವವು ಏತಕ್ಕೋಸ್ಕರ ಪ್ರಾಪ್ತನಾಯಿತೆಂದರೆ ಆ ಕಾರಣವನ್ನು ನಿರ್ಣಯಾಚಾರ್ಯರು ನಿರೂಪಣಮಾಡುತ್ತಾರೆ.—ಪೂರ್ವದಲ್ಲಿ ದೇವದಾನವರು ಸೇರಿ ಸಮುದ್ರಮಥನ ಮಾಡಿದಕಾಲದಲ್ಲಿ ಕ್ಷೀರಸಮುದ್ರದಲ್ಲಿ ಅನೇಕ ಪದಾರ್ಥಗಳುತ್ಪನ್ನವಾದವು. ಅವುಗಳ ಮಧ್ಯದಲ್ಲಿ ದಾರಿದ್ರ್ಯಾಭಿಮಾನಿ ದೇವತೆಯಾದ ಅಲಕ್ಷ್ಮೀಯೂ ಉತ್ಪನ್ನಳಾದಳು. ಈಕೆಯನ್ನು ಅಸುರಶ್ರೇಷ್ಠನಾದ ಕಲಿಯು ತನ್ನ ಪತ್ನಿಯನ್ನಾಗಿಮಾಡಿಕೊಂಡಿದ್ದನು. ಅನಂತರ ಈಕೆಯು ಪ್ರಬಲವಾದ ತಪಸ್ಸನ್ನು ಮಾಡಿ ಅಪ್ಸರಸ್ತ್ರೀ ಜನ್ಮವನ್ನು ಹೊಂದಿದಳು. ಆಕೆಗೆ ಯೋಗ್ಯವಾದ ಅಧಂತಮೋಲೋಕವನ್ನು ಹೊಂದಿಸಬೇಕೆಂದು ಯೋಚಿಸಿ ಬ್ರಹ್ಮದೇವರು ಅವಳನ್ನು ಕುರಿತು ನೀನು ಭೂಲೋಕದಲ್ಲಿ ಹುಟ್ಟಿ ಮಂಥರಾ ಎಂಬ ನಾಮಧೇಯ ಉಳ್ಳವಳಾಗಿ ದಶರಥರಾಜನ ಪತ್ನಿಯಾದ ಕೈಕೇಯಿದೇವಿಗೆ ದಾಸಿಯಾಗಿದ್ದು ದಶರಥರಾಜನು ನಿರ್ಧರಮಾಡುವ ರಾಮರಾಜ್ಯಾಭಿಷೇಕ ಕಾರ್ಯವನ್ನು ಶೀಘ್ರದಲ್ಲಿ ನಾಶಮಾಡು. ಈ ಹರಿದ್ರೋಹರೂಪ ಕರ್ಮದ ಪ್ರಭಾವದಿಂದ ನೀನು ನಿನ್ನ ಯೋಗ್ಯತಾನುಗುಣವಾದ ಗತಿಯನ್ನು ಹೊಂದುತ್ತೀಯೆ ಎಂದು ಹೇಳಿದರು, ಅದೇ ಪ್ರಕಾರ ಈ ಅಪ್ಸರಸ್ತ್ರೀಯು ಮಂಥರಾ ಎಂಬ ಹೆಸರಿನಿಂದ ಜನ್ಮವನ್ನು ಎತ್ತಿ ದಶರಥರಾಜನ ಪತ್ನಿಯಾದ ಕೈಕೇಯಿದೇವಿಯ ಬಳಿ ದಾಸಿಯಾಗಿದ್ದು ದಶರಥರಾಜನಿಂದ ನಿರ್ಧರಿಸಲ್ಪಟ್ಟ ರಾಮರಾಜ್ಯಾಭಿಷೇಕವನ್ನು ನಾಶಮಾಡಿದಳು.

ಶ್ಲೋಕ || ತದ್ವಾಕ್ಯಾತ್ಕೈಕೆಯೀಸಾಪತಿಗವರಬಲಾದಾಜಹಾರೈವ ರಾಜ್ಯಂ ರಾಮಸ್ತದ್ಗೌರವೇಣ ತ್ರಿದಶಮುನಿ ಕೃತೇರಣ್ಯ ಮೇವಾವಿವೇಶ | ಸೀತಾಯುಕ್ತೋನುಜೇನ ಪ್ರತಿದಿನಸುವಿವೃದ್ಧೋರು ಭಕ್ತ್ಯಾ ಸಮೇತಃ ಸಂಸ್ಥಾಪ್ಯಾಶೇಷಜಂತೂನ್ ಸ್ವವಿರಹಜಶುಚಾತ್ಯಕ್ತ ಸರ್ವೇಷಣಾರ್ಥಾನ್ ||೩||

ಅರ್ಥ.—ಸಾ - ದಶರಥ ಪತ್ನಿಯಾದ, ಕೈಕೇಯೀ=ಕೈಕೇಯೀದೇವಿಯು, ತದ್ವಾಕ್ಯಾತ್ - ತತ್=ದಾಸಿಯಾಗಿದ್ದ ಮಂಥರೆಯು, ವಾಕ್ಯಾತ್=ವಾಕ್ಯದಿಂದ, ಪತಿಗವರಬಲಾತ್=ಪತಿ - ಪತಿಯಾದ ದಶರಥರಾಜನು ಹಿಂದೆ ತನಗೆ ವಾಗ್ದಾನಮಾಡಿ ಉಪಯೋಗಿಸಿಕೊಳ್ಳದೆ, ಗ-ಇದ್ದ, ವರಬಲಾತ್=ವರ=ವರದ್ವಯಗಳ, ಬಲಾತ್-ಬಲದಿಂದ, ರಾಜ್ಯಂ-ರಾಜ್ಯವನ್ನು, ಅಜಹಾರ-(ತನ್ನ ಮಗನಾದ ಭರತನಿಗೋಸ್ಕರ) ಅಪಹಾರಮಾಡಿದಳು. ಸೀತಾಯುಕ್ತಃ - ಸೀತಾದೇವಿಯರಿಂದ ಯುಕ್ತರಾದ ರಾಮದೇವರು, ಅನುಜೇನ=ತಮ್ಮನಾದ ಲಕ್ಷ್ಮಣನಿಂದ. ಸಮೇತಃಸನ್-ಸಹಿತರಾಗಿ, ಪ್ರತಿದಿನಸುವಿವೃದ್ಧೋರುಭಕ್ತ್ಯಾ - ಪ್ರತಿದಿನ=ದಿನೇದಿನೇ, ಸು-ಚೆನ್ನಾಗಿ, ( ತಾರತಮ್ಯ ಜ್ಞಾನದಿಂದ ) ವಿವೃದ್ಧ=ಅಭಿವೃದ್ಧಿಯಾದ, ಉರು - ಉತ್ಕೃಷ್ಟವಾದ, ಶ್ರೀಪರಮಾತ್ಮನಲ್ಲಿ, ಭಕ್ತ್ಯಾ - ಭಕ್ತಿಯಿಂದ, ಸ್ವವಿರಹಶುಚಾ - ಸ್ವ=ತಮ್ಮ ( ರಾಮರ) ವಿರಹ=ವಿಯೋಗದಿಂದ ಉಂಟಾದ ಶುಚಾ - ಶೋಕದಿಂದ, ತ್ಯಕ್ತಸರ್ವೇಷಣಾರ್ಥಾನ್ - ತ್ಯಕ್ತ-ಬಿಡಲ್ಪಟ್ಟ ಸರ್ವ-ಸಮಸ್ತವಾದ, ಈಷಣಾರ್ಥ=ಇಚ್ಛಾ ವಿಷಯಕ ಸಮಸ್ತ ಪದಾರ್ಥಗಳನ್ನು, ಅಶೇಷ - ಸಮಸ್ತರಾದ, ಜಂತೂನ್ = ಪ್ರಾಣಿಗಳನ್ನು, ಸಂಸ್ಥಾಪ್ಯ=ರಾಜ್ಯದಲ್ಲೇ ನಿಲ್ಲಿಸಿ, ತದ್ಗೌರವೇಣ=ನಿಮಿತ್ತಮಾತ್ರ ದಶರಥರಾಜನ ಮಾತಿನಲ್ಲಿ ಗುರುತ್ವದಿಂದ, (ಮುಖ್ಯವಾಗಿ) ತ್ರಿದಶಮುನಿಕೃತೇ - ದೇವತೆಗಳ ಮತ್ತು ಋಷಿಗಳ ಉಪಕಾರಕ್ಕೋಸ್ಕರವಾಗಿ ಅರಣ್ಯಮೇವ-ಅರಣ್ಯವನ್ನು ಕುರಿತು ಪ್ರಯಾಣಮಾಡಿದರು.

ತಾತ್ಪರ್ಯ.— ಆ ಮಂಥರಾ ವಾಕ್ಯದಿಂದ ಕೈಕೇಯಿಯು ತನ್ನ ಪತಿಯಾದ ದಶರಥರಾಜನು ತನಗೆ ಹಿಂದೆ ಒಂದಾನೊಂದು ಸಂದರ್ಭದಲ್ಲಿ ವಾಗ್ದಾನ ಮಾಡಿದ್ದ ಎರಡು ವರಗಳ ಪೈಕಿ ಒಂದು ವರದ ಬಲದಿಂದ ಭರತನಿಗೋಸ್ಕರ ರಾಜ್ಯವನ್ನು ಅಪಹರಿಸಿದಳು. ಶ್ರೀರಾಮನು ದಶರಥನ ಮಾತಿನಲ್ಲಿ ಗೌರವದಿಂದಲೂ ಮುಖ್ಯವಾಗಿ ದೇವ ಋಷಿ ಕಾರ್ಯಗಳನ್ನು ನೆರವೇರಿಸುವ ಸಂಕಲ್ಪಧಿಂದ ಯುಕ್ತನಾಗಿ ಸೀತಾ ಸಮೇತನಾಗಿ ನಿರಂತರ ತಾಗತನ್ಯ ಜ್ಞಾನಪೂರ್ವಕ ವಿಶೇಷವಾಗಿ ಅಭಿವೃದ್ಧಿಯಾದ ಭಕ್ತಿಯಿಂದ ಕೂಡಿರುವ ತಮ್ಮನಾದ ಲಕ್ಷ್ಮಣನಿಂದಲೂ ಕೂಡಿ, ತನ್ನ ವಿಯೋಗದಿಂದ ಉಂಟಾದ ಶೋಕದಿಂದ ಇಚ್ಛಾವಿಷಯಕ ಸಮಸ್ತ ಪದಾರ್ಥಗಳನ್ನೂ ತ್ಯಾಗ ಮಾಡಿ.ತನ್ನ ಸಂಗಡ ಬರುತ್ತಿರುವ ಸರ್ವ ಪ್ರಾಣಿಗಳನ್ನೂ ತಡೆದು ಪಟ್ಟಣದಲ್ಲೇ ನಿಲ್ಲಿಸಿ, ತಾನು ಅರಣ್ಯವನ್ನು ಕುರಿತು ಪ್ರಯಾಣಮಾಡಿದನು. (ಇದು ಎರಡನೆಯ ವರದ ಪ್ರಭಾವ. )

ವಿಶೇಷಾರ್ಥ.—ಏವಂಚ ಮಂಥರೆಯ ವಾಕ್ಯದಿಂದಲೇ ಕೈಕೇಯಿದೇವಿಯು ತನ್ನ ಪತಿಯಿಂದ ಪ್ರತಿಜ್ಞಾತವಾಗಿದ್ದ ವಾಗ್ದಾನ ಬಲದಿಂದಲೇ ರಾಮರು ಅರಣ್ಯವಾಸಮಾಡಬೇಕೆಂತಲೂ ಮತ್ತು ತನ್ನ ಮಗನಾದ ಭರತನು ರಾಜ್ಯಭಾರಮಾಡಬೇಕೆಂತಲೂ ಈ ರೂಪವಾದ ಎರಡು ವರಗಳನ್ನು ಪಡೆದುಕೊಂಡಳೆಂದು ಅಭಿಪ್ರಾಯವು.

ಅವತಾರಿಕೆ.—ಶ್ರೀರಾಮರು ಅರಣ್ಯ ಪ್ರವೇಶಮಾಡಿ ಯಾವ ಸ್ಥಳಕ್ಕೆ ಹೋದರು ಮತ್ತು ಇವರ ಸಂಗಡ ಯಾವಯಾವ ಪ್ರಾಣಿಗಳು ಹೋದವು ಎಂಬ ವಿಷಯವು ಈ ಶ್ಲೋಕದಿಂದ ತಿಳಿದು ಬರುತ್ತದೆ.—

**ಶ್ಲೋಕ || ವೃಕ್ಷಾನ್ ಪಕ್ಷೀಭ ಕೀಟಾನ್ ಪಿತರಮುಪಿಸರ್ಶೀನ್ ಮಾತೃಪೂರ್ವಾನ್ವಿಸೃಜ್ಯ । ಪ್ರೋತ್ಥಾಂಗಂಗಾಂ ಸ್ವಪಾದಾದ್ಧರ ಇವಚಗುಹೇ ನಾರ್ಚಿತಃಸೋಥತೀತ್ವಾ । ದೇವಾರ್ಚಸ್ಯಾಪಿ ಪುತ್ರಾದೃಷಿಗಣಸಹಿತಾತ್ಪ್ರಾಪ್ಯ ಪೂಜಾಂ ಪ್ರಯಾತಃ ಶೈಲೇಂದ್ರಂ ಚಿತ್ರಕೂಟಂಕತಿಪಯ ದಿವಸಾನ್ ಯತ್ರನೋದನ್ನುವಾಸ ||೪||**

ಅರ್ಥ.—ವೃಕ್ಷಾನ್=ವೃಕ್ಷಗಳನ್ನೂ, ಪಕ್ಷೀನ್-ಪಕ್ಷಿಗಳನ್ನೂ, ಇಭ=ಗಜಗಳನ್ನೂ, ಕೀಟಾನ್-ಕ್ರಿಮಿಕೀಟಗಳನ್ನೂ, ಮಾತೃಪೂರ್ವಾನ್ – ತಾಯಿಯಾದ ಕೌಸಲ್ಯಾದೇವಿಯೆ ಮೊದಲಾದ, ಪಿತರಂ=ತಂದೆಯಾದ ದಶರಥರಾಯನನ್ನು, ಸಖೀನ್=ಸ್ನೇಹಿತರನ್ನು, ವಿಸೃಜ್ಯ-ಪಟ್ಟಣದಲ್ಲೇ ಬಿಟ್ಟು, ಗುಹಾಶ್ರಮವನ್ನು ಪ್ರವೇಶಿಸಿ, ಅಲ್ಲಿ, ಹರಜವ-ಷಣ್ಮುಖನಾಮಕ ಗುಹನಿಂದ ಋದ್ರದೇವರೋಪಾದೀಲಿ, ಗುಹೇನ=ನಾವಿಕನಾದ ಗುಹನಿಂದ, ಅರ್ಚಿತಃ ಪೂಜೆಗೊಂಡ, ಸಃ=ಆ ರಾಮರು, ಅಥ=ಅನಂತರ, ಸ್ವಪಾದಾತ್=ತಮ್ಮ ಪಾದದಿಂದ, ಪ್ರೋತ್ಥಾಂ=ಉತ್ಪನ್ನವಾದ, ಗಂಗಾಂ = ಗಂಗಾನದಿಯನ್ನು, ಗುಹನಿಂದ ಸಿದ್ಧಪಡಿಸಿದ ನಾವೆಯಿಂದ, ತೀರ್ತ್ವಾ=ದಾಟಿ, ಅಥ-ಅನಂತರ ಋಷಿಗಣಸಹಿತಾತ್=ಋಷಿಗಣ=ಋಷಿಸಮೂಹದಿಂದ, ಸಹಿತಾತ್=ಸಹಿತರಾದ, ದೇವಾಚಾರ್ಯಸ್ಯ=ದೇವತೆಗಳಿಗೂ ಪೂಜ್ಯರಾದ ಬೃಹಸ್ಪತಿಗಳ, ಪುತ್ರಾದಪಿ=ಪುತ್ರರಾದ ಭರದ್ವಾಜರಿಂದ, ಪೂಜೆಯನ್ನು, ಪ್ರಾಪ್ಯ=ಹೊಂದಿ, ಪ್ರಯಾತಃಸನ್=ಅಲ್ಲಿಂದ ಹೊರಟವರಾಗಿ, ಚಿತ್ರಕೂಟಂ=ಚಿತ್ರಕೂಟನಾಮಕನಾದ, ಶೈಲೇಶಂ-ಪರ್ವತ ಶ್ರೇಷ್ಟವನ್ನು ಪ್ರಾಪ್ಯ=ಹೊಂದಿ, ಅತ್ರ=ಈ ಚಿತ್ರಕೂಟಪರ್ವತದಲ್ಲಿ, ಕತಿಪಯದಿವಸಾನ್=ಕೆಲವು ದಿವಸಗಳು, ಮೋದನ್=ಸಂತೋಷಯುಕ್ತರಾಗಿ, ಉವಾಸ=ವಾಸಮಾಡಿದರು.

ತಾತ್ಪರ್ಯ–.ಶ್ರೀರಾಮದೇವರು ಸೀತಾಲಕ್ಷ್ಮಣರೊಡನೆ, ತಮ್ಮ ತಾಯಿ ತಂದೆ ಸ್ನೇಹಿತರು ಮೊದಲಾಗಿ ವೃಕ್ಷ ಪಕ್ಷಿ ಮೃಗಗಳೂ ಮೊದಲಾದ ಸರ್ವರನ್ನು ಅಯೋಧ್ಯೆಯಲ್ಲಿಯೇ ಬಿಟ್ಟು, ಅರಣ್ಯಪ್ರವೇಶಮಾಡಿ ಗುಹಾಶ್ರಮಕ್ಕೆ ಬಂದು ಅಲ್ಲಿ ತಮ್ಮ ಭಕ್ತನಾದ ಗುಹನಾಮಕನಾವಿಕನಿಂದ ಗುಹನಾಮಕ ಷಣ್ಮುಖನಿಂದ ಋದ್ರದೇವರೋಪಾದಿಯಲ್ಲಿ, ಪೂಜೆಗೊಂಡರು. ಅನಂತರ ಗುಹನ ವಿಜ್ಞಾಪನಾ ಪ್ರಕಾರ ತಮ್ಮ ಪಾದದಿಂದ ಉತ್ಪನ್ನವಾದ ಗಂಗಾನದಿಯನ್ನು ಗುಹನ ನಾವೆಯಿಂದ ದಾಟಿ ಭರದ್ವಾಜಾಶ್ರಮಕ್ಕೆ (ಪ್ರಯಾಗಕ್ಷೇತ್ರಕ್ಕೆ ) ಬಂದು ಸೇರಿದರು. ಅಲ್ಲಿ ಋಷಿಸಮೂಹದಿಂದ್ದ ಸಹಿತರಾದ ದೇವತೆಗಳಿಗೂ ಪೂಜ್ಯರಾದ ಬೃಹಸ್ಪತಿಗಳ ಪುತ್ರರಾದ ಭರದ್ವಾಜ ಋಷಿಗಳಿಂದ ಪೂಜಿಸಲ್ಪಟ್ಟವರಾಗಿ ಅಲ್ಲಿಂದ ಹೊರಟು ಪ್ರಯಾಗಕ್ಷೇತ್ರಕ್ಕೆ ನೈಋತ್ಯದಿಕ್ಕಿನಲ್ಲಿರುವ ತ್ರಿಕೂಟನಾಮಕವಾದ ಪರ್ವತಶ್ರೇಷ್ಠಕ್ಕೆ ಬಂದು ಅಲ್ಲಿ ಸಂತೋಷಯುಕ್ತರಾಗಿ ಕೆಲವುಧಿವಸ ವಾಸಮಾಡಿದರೆಂದಭಿಪ್ರಾಯವು.

ವಿಶೇಷಾರ್ಥ.—ಈ ನಾವಿಕನಾದ ಗುಹನ ವಿಚಾರದಲ್ಲಿ ಗ್ರಂಥಾಂತರಗಳಲ್ಲಿ ಕೆಳಗೆ ಹೇಳುವ ರೀತಿಯಾಗಿ ಉಕ್ತವಾಗಿದೆ. ಅದು ಹೇಗೆಂದರೆ.—

ಶ್ಲೋಕ || ಜನಾನ್ನಿವೃತ್ಯ ರಾಮೋಽಸೌ ಜಗಾಮಚ ಗುಹಾಶ್ರಮಂ | ಗುಹಶ್ಚರಾಮ ಭಕ್ತೋಽಸೌ ಸ್ವಭಾವೇನ ವೈಷ್ಣವಃ | ಕೃತಾಂಜಲಿ ಪುಟೋ ಭೂತ್ವಾ ಕಿಂಕರ್ತವ್ಯ ಮಿತಸ್ಥಿತಃ | ಗುಹೋಪನೀತನಾವಂತು ತಾಂಗಂಗಾಂ ಸಮುಪದ್ಯತ | ಉತ್ತೀರ್ಯರ್ಗತವಾನ್ ರಾಮೋ ಭರದ್ವಾಜಾಶ್ರಮಂ ಪ್ರತಿ || ಇತಿ ನರಸಿಂಹಪುರಾಣೇ || ಇದರ ಅರ್ಥ.—ಮಾತಾಪಿತೃಗಳಾದಿಯಾಗಿ ಸಮಸ್ತ ಜನಗಳನ್ನೂ ಬಿಟ್ಟು ಅರಣ್ಯಪ್ರವೇಶಮಾಡಿದ ಶ್ರೀರಾಮದೇವರು ಗುಹಾಶ್ರಮಕ್ಕೆ ಹೋದರು. ಪರಮ ಭಕ್ತನೂ, ಸ್ವಭಾವವಾಗಿಯೂ ವೈಷ್ಣವನೂ ಆದ ಅವನು ಶ್ರೀರಾಮರನ್ನು ಕುರಿತು ನನ್ನಿಂದ ಏನಾಗಬೇಕೆಂದು ಅಂಜಲಬದ್ಧನಾಗಿ ಬೇಡಿದನು. ಮತ್ತೂ ಒಂದು ನಾವೆಯನ್ನು ತಂದನು. ಆ ನಾವಿಯಿಂದ ಗಂಗಾನದಿಯನ್ನು ದಾಟ ಭರದ್ವಾಜಾಶ್ರಮಕ್ಕೆ ಹೊರಟು ಹೋದರೆಂದು ನರಸಿಂಹ ಪುರಾಣದಲ್ಲಿ ಹೇಳಲ್ಪಟ್ಟಿದೆ. ಮತ್ತೂ ಶ್ಲೋಕ.— ತತ್ರರಾಜಾನಿಷಾದಾನಾಂ | ರಾಮಸ್ಯದಯಿತಃ ಸಖಾಧಾರ್ಮಿಕಃ ಸತ್ಯಸಂಧಶ್ಚ ಗುಹೋನಾಮ ಮಹಾಬಲಃ || ಅರ್ಥ.—ನಿಷಾದರಿಗೆ ರಾಜನೂ ಮಹಾಬಲಿಷ್ಠನೂ ಆದ "ಗುಹ" ಎಂಬ ಹೆಸರಿನಿಂದ ಪ್ರಸಿದ್ಧನಾದ ಇವನು ರಾಮದೇವರಿಗೆ ಪ್ರೀತ್ಯಾಸ್ಪದನೂ ಸ್ನೇಹಿತನೂ, ಧಾರ್ಮಿಕನೂ ಮತ್ತು ಸತ್ಯಸಂಧನೂ ಆಗಿದ್ದನು ಎಂದು ಆರ್ಷೆಯರಾಮಾಯಣದಲ್ಲಿ ಉಕ್ತವಾಗಿದೆ.

**ಶ್ಲೋಕ || ಏತಸ್ಮಿನ್ನೇವಕಾಲೇ ದಶರಥನೃಪತಿಃ ಸ್ವರ್ಗತೋಽಭೂದ್ವಿಯೋಗಾ
ರಾಮಸ್ಯೈವಾಥಪುತ್ರೌ ವಿಧಿಸುತಸಹಿತೌ ಮಂತ್ರಿಭಿಃ ಕೈಕಯೇಭ್ಯಃ
ಆನಿತೌತಸ್ಯ ಕೃತ್ವಾ ಶೃತಿಗಣವಿಹಿತ ಪ್ರೇತಕಾರ್ಯಾಣಿ ಸದ್ಯಃ ಶೋ
ಚಂತೌ ರಾಮಮಾರ್ಗಂ ಪುರಜನಸಹಿತೌ ಜಗತ್ಮುಮಾತೃಭಿಶ್ಚ |೫||**

ಅರ್ಥ.—ಏತಸ್ಮಿನ್ನೇವಕಾಲೇ-ಶ್ರೀರಾಮರು ಚಿತ್ರಕೂಟಪರ್ವತದಲ್ಲಿ ವಾಸವಾಗಿಕೊಂಡಿರತಕ್ಕ ಕಾಲದಲ್ಲಿಯೇ, ದಶರಥನೃಪತಿಃ-ದಶರಥರಾಜನು, ರಾಮಸ್ಯ=ಶ್ರೀರಾಮದೇವರ, ವಿಯೋಗಾದೇವ= ವಿರಹದ ದುಃಖದಿಂದಲೇ, ಸ್ವರ್ಗತಃ-ಸ್ವ=ಪರಲೋಕವನ್ನು, ಗತಃ=ಹೊಂದಿದವನ್ನು, ಅಭೂತ್=ಆದನು (ಮೃತನಾದನು) ಅಥ-ಅನಂತರ, ವಿಧಿಸುತ=ಬ್ರಹ್ಮದೇವರ ಪುತ್ರರಾದ ವಶಿಷ್ಠರಿಂದ, ಸಹಿತೌ=ಸಮೇತರಾದ, ಮಂತ್ರಿಭಿಃ=ಮಂತ್ರಿಗಳಿಂದ, ಕೈಕಯೇಭ್ಯಃ=ಕೇಕಯನಗರದಲ್ಲಿದ್ದ, ಪುತ್ರೌ-ಪುತ್ರರಾದ ಭರತ ಶತೃಘ್ನರು, ಆನಿತೌ=ಕರತರಲ್ಪಟ್ಟರು. (ಮಂತ್ರಿಗಳು ಅಯೋಧ್ಯಾ ಪಟ್ಟಣಕ್ಕೆ ಕರೆದುಕೊಂಡು ಬಂದರು.) ಅನಂತರ, ತಸ್ಯ=ಆ ದಶರಥರಾಜನಿಗೆ, ಶೃತಿಗಣವಿಹಿತ-ಶಾಸ್ತ್ರೋಕ್ತಪ್ರಕಾರವಾಗಿ, ಪ್ರೇತಕಾರ್ಯಾಣಿ-ಅಂತ್ಯ ಕರ್ಮಗಳನ್ನು, ಕೃತ್ವಾ=ಮಾಡಿ, ಸದ್ಯಃ=ಒಡನೆಯೇ, ಶೋಚಂತೌ-ದುಃಖಪಟ್ಟವರಾದ, ಭರತ ಶತೃಘ್ನರು, ಪುರಜನಸಹಿತೌ=ಪುರಜನರಿಂದ ಮಾತೃಭಿಶ್ಚ=ತಾಯಿಯರಿಂದಲೂ ಸಹಿತರಾಗಿ, ರಾಮಮಾರ್ಗಂ-ರಾಮರು ವಾಸವಾಗಿರುವ ಚಿತ್ರಕೂಟಪರ್ವತದ ಅರಣ್ಯ ಮಾರ್ಗವನ್ನು ಕುರಿತು; ಜಗ್ಮತುಃ=ಹೊರಟುಹೋದರು.

ತಾತ್ಪರ್ಯ.—ಶ್ರೀರಾಮರು ಚಿತ್ರಕೂಟದಲ್ಲಿರುವ ಕಾಲದಲ್ಲಿಯೇ ದಶರಥರಾಜರು ಶ್ರೀರಾಮರ ವಿಯೋಗದಿಂದ ಮೃತರಾದರು. ಅನಂತರ ಬ್ರಹ್ಮಪುತ್ರರಾದ ವಶಿಷ್ಠರಿಂದ ಸಹಿತರಾದ ಮಂತ್ರಿಗಳು ಕೇಕಯರಾಜನ ಮನೆಯಲ್ಲಿ ವಾಸವಾಗಿದ್ದ ಭರತ ಶತೃಘ್ನರನ್ನು ಅಯೋಧ್ಯೆಗೆ ಕರೆತಂದರು. ಇವರು ಮೃತರಾದ ದಶರಥರಾಜನಿಗೆ ಶಾಸ್ತ್ರೋಕ್ತವಾದ ಪ್ರೇತಕರ್ಮಗಳನ್ನು ಮಾಡಿ, ದುಃಖಿತರಾಗಿ ಪುರಜನರಿಂದಲೂ ಮಾತೃಗಳಿಂದಲೂ ಕೂಡಿ ರಾಮರು ವಾಸವಾಗಿದ್ದ ಚಿತ್ರಕೂಟಪರ್ವತದ ಮಾರ್ಗವನ್ನು ಕುರಿತು ಹೊರಟು ಹೋದರು.

ವಿಶೇಷಾರ್ಥ.—ವಿಪ್ರಶಾಪದ್ದೆಶೆಯಿಂದ ಈ ದಶರಥರಾಜರಿಗೆ ಪುತ್ರವಿಯೋಗ ಕಾಲದಲ್ಲಿ ಮರಣಪ್ರಾಪ್ತಿ ಉಂಟಾಯಿತೆಂದು ಭಾವವು.

ಶ್ಲೋಕ || ಧಿಕ್ಕುರ್ವಂತೌ ನಿತಾಂತಂ ಸಕಲದುರಿತಗಾಂ ಮಂಥರಾಂ ಕೈಕೆಯೀಂಚ ಪ್ರಾಪ್ತೌ ರಾಮಸ್ಯ ಪಾದೌ ಮುನಿಗಣಸಹಿತೌ ತತ್ರಚೋವಾಚನತ್ವಾ । ರಾಮಂರಾಜೀವನೇತ್ರಂ ಭರತ ಇಹಪುನಃ ಪ್ರೀಯೋಸ್ಮಾಕಮೀಶ ಪ್ರಾಪ್ಯಾಶು ಸ್ವಾಮಯೋಧ್ಯಾಮ ವರಜ ಸಹಿತಃ ಪಾಲಯೇಮಾಂ ಧರಿತ್ರೀಂ ||೬||

ಅರ್ಥ.—ಸಕಲಗುರಿತಗಾಂ=ಸಕಲ=ಸಮಸ್ತವಾದ, ದುರಿತಗಾಂ-ವಿಷ್ಣು ವೈಷ್ಣವ ದ್ವೇಷಗಳೇ ಮೊದಲಾದ ಪಾಪಗಳಿಗೆ ಆಶ್ರಯಳಾದ ಸರ್ವದೋಷರೂಪಳಾದ ನಿಕೃತ್ಯಾಖ್ಯ ದೈತ್ಯಾವಿಷ್ಟಳಾದ. ಮಂಥರಾಂ = ದಾಸಿಯಾದ ಮಂಥರೆಯನ್ನು, ಕೈಕಯೀಂಚ=ಮಂಥರೆಯ ಬೋಧನೆಯನ್ನು ಕೈಕೊಂಡ ತಾಯಿಯಾದ ಕೈಕೆಯಿಯನ್ನು, ನಿತಾಂತಂ=ಅತ್ಯಂತವಾಗಿ, ಧಿಕ್ಕುರ್ವಂತೌ-ಧಿಕ್ಕಾರಮಾಡುತ್ತಿರುವ, ತೌ-ಭರತ ಶತೃಘ್ನರು, ಮುನಿಗಣಸಹಿತೌ=ಋಷಿಸಮೂಹದಿಂದ ಸಹಿತರಾಗಿ ಚಿತ್ರಕೂಟವನ್ನು ಹೊಂದಿ, ರಾಮಸ್ಯ=ರಾಮದೇವರ, ಪಾದೌ=ಪಾದಗಳ ಸನ್ನಿಧಾನವನ್ನು, ಪ್ರಾಪ್ತೌ=ಹೊಂದಿದರು. ತತ್ರ=ಆ ರಾಮರ ಪಾದಗಳ ಸನ್ನಿಧಾನದಲ್ಲಿ, ಭರತಃ=ಭರತನು, ರಾಜೀವನೇತ್ರ=ಕಮಲದೋಪಾದೀಲಿ ನೇತ್ರಗಳುಳ್ಳ, ರಾಮಂ-ರಾಮದೇವರನ್ನು, ನತ್ವಾ=ನಮಸ್ಕಾರಮಾಡಿ, (ರಾಮರನ್ನು ಕುರಿತು) ಹೇ ಈಶ=ಎಲೌ ಸ್ವಾಮಿಯೇ, ಅಸ್ಮಾಕಂ-ನಮ್ಮಗಳ, ಪ್ರೀತಯೇ = ಪ್ರೇಮಕ್ಕೋಸ್ಕರ, ಇಹಪುನಃ=ಮತ್ತೆ, ಸ್ವಾಂ=ನಿನಗೆ ಸ್ವಕೀಯವಾದ, ಅಯೋಧ್ಯಾಂ-ಅಯೋಧ್ಯಾಪಟ್ಟಣವನ್ನು, ಅಶು=ಜಾಗ್ರತೆಯಾಗಿ, ಪ್ರಾಪ್ಯ=ಹೊಂದಿ, ಅವರಜಸಹಿತಃಸ=ತಮ್ಮಂದಿರುಗಳಿಂದ ಸಹಿತನಾಗಿ, ಇಮಾಂ=ಈ ಧರಿತ್ರೀಂ=ಭೂಲೋಕವನ್ನು (ರಾಜ್ಯವನ್ನು) ಪಾಲಯ-ಸಂರಕ್ಷಣೆ ಮಾಡೆಂದು, ಉವಾಚ-ಹೇಳಿದನು.

ತಾತ್ಪರ್ಯ.—ಭರತ ಶತೃಘ್ನರು ವಿಷ್ಣು ವೈಷ್ಣವ ದ್ವೇಷಾದಿ ಸಮಸ್ತ ಪಾಪಗಳಿಗೆ ಆಶ್ರಯಳಾದ ಮಂಥರೆಯನ್ನೂ ಕೈಕೇಯಿಯನ್ನೂ ದುರುಕ್ತಿಗಳಿಂದ ಧಿಕ್ಕಾರ ಮಾಡಿ ಶ್ರೀರಾಮರ ಪಾದಾರವಿಂದವನ್ನು ಸೇರಿದರು. ಅಲ್ಲಿ ಭರತನು ಕಮಲದಂತೆ ವಿಶಾಲವಾದ ನೇತ್ರವುಳ್ಳ ಶ್ರೀರಾಮ

ನನ್ನ ನಮಸ್ಕರಿಸಿ " ಹೇ ಸ್ವಾಮಿ ! ಈ ಅರಣ್ಯವನ್ನು ಬಿಟ್ಟು ಪುನಃ ನಿನ್ನ ಅಯೋಧ್ಯಾನಗರವನ್ನು ಶೇರಿ ನಿನ್ನ ತಮ್ಮನಾದ ಲಕ್ಷ್ಮಣನಿಂದೊಡಗೂಡಿ ನಮ್ಮ ಪ್ರೀತಿಗೋಸ್ಕರ ನಿರ್ವಿಚಾರವಾಗಿ ಈ ಭೂಮಿಯನ್ನು ಪಾಲನಮಾಡೆಂದು ಪ್ರಾರ್ಥಿಸಿದರು.

ಶ್ಲೋಕ || ಇತ್ಯುಕ್ತಃ ಕರ್ತುಮೀಶಃ ಸಕಲಸುರಗಣಾಪ್ಯಾಯನಂ ರಾಮದೇವಃ ಸತ್ಯಾಂ ಕರ್ತುಂಚ ವಾಣೀಮವದದತಿತರಾಂನೇತಿ ಸದ್ಭಕ್ತಿನಮ್ರಂ | ಭೂಯೋಭೂಯೋರ್ಥಯಂತಂ ದ್ವಿಗುಣಿತಶರದಾಂ ಸಪ್ತಕೇತ್ವಭ್ಯತೀತೇ ಕರ್ತ್ರೀತ್ಯೇತತ್ತ್ವಚೋಹಂ ಸುದೃಢಮೃತಮಿದಂ ಮೇವಚೋ ನಾತ್ರಶಂಕಾ ||೭||

ಅರ್ಥ.—ಈ ರೀತಿಯಾಗಿ ಭರತನಿಂದ ಪ್ರಾರ್ಥಿತನಾದ, ರಾಮದೇವಃ=ರಾಮದೇವರು, ಸಕಲಸುರಗಣಾಪ್ಯಾಯನಂ-ಸಮಸ್ತ ದೇವತಾಸಮೂಹಕ್ಕೆ ಸಂತೋಷವನ್ನು, ಕರ್ತುಂ=ಉಂಟುಮಾಡಲು, ಈಶಃ-ತನ್ನ, ವಾಣೀಂಚ=ವಾಕ್ಯವನ್ನು, ಸತ್ಯಾಂ-ಸತ್ಯವನ್ನಾಗಿ, ಕರ್ತುಂಚ = ಮಾಡುವದಕ್ಕೋಸ್ಕರಲೂ, ನಿತರಾಂ=ಖಂಡಿತವಾಗಿ, ನೇತಿ-ಅಯೋಧ್ಯೆಗೆ ಬರಲಿಕ್ಕೆ ಆಗುವುದಿಲ್ಲವೆಂದು, ಅವದತ್=ಹೇಳಿದರು. ಭೂಯೋಭೂಯಃ=ಪುನಃಪುನಃ, ಅರ್ಥಯಂತಂ=ಪ್ರಾರ್ಥಿಸುತ್ತಿರುವ, ಸದ್ಭಕ್ತಿನಮ್ರಂ=ಸರ್ವೋತ್ತಮಜ್ಞಾನರೂಪವಾದ ಭಕ್ತಿಯಿಂದ ಬಗ್ಗಿಸಿದ ಶರೀರವುಳ್ಳ, ತಂ=ಭರತನನ್ನು (ರಾಮದೇವರು) ಕುರಿತು, ಅಹಂ=ನಾನು, ದ್ವಿಗುಣಿತಶರದಾಂ=ದ್ವಿಗುಣವಾಗಿ ಮಾಡಲ್ಪಟ್ಟ ವರ್ಷಗಳ, ಸಪ್ತಕೇ=ಏಳು ಸಂಖ್ಯೆಯು, ಅಭ್ಯತೀತೇ ಸತಿ=ಕಳೆದುಹೋಗುತ್ತಿರಲಾಗಿ, ( ಏಳೆಂಬುವುದನ್ನು ಎರಡರಿಂದ ಗುಣಿಸಿದರಾಗುವ ಹದಿನಾಲ್ಕು ವರ್ಷಗಳು ಕಳೆದನಂತರ ) ತೇ=ನಿನ್ನ, ಏತದ್ವಚಃ=ಈ ವಾಕ್ಯವನ್ನು ( ರಾಜ್ಯಭಾರಮಾಡಬೇಕೆಂಬ ಮಾತನ್ನು ) ಕರ್ತಾ=ಮಾಡತಕ್ಕವನು ( ನಾನು ನಡಿಸಿಕೊಡತಕ್ಕವನು ) ಮೇ=ನನ್ನ, ಇದಂವಚಃ-ಈ ಮಾತು, ಸುದೃಢಂ-ಅತ್ಯಂತ ನಂಬಿಕೆಯುಳ್ಳದ್ದು, ಮತ್ತು, ಋತಂ=ಸತ್ಯವಾದದ್ದು, ಅತ್ರ=ಈ ವಿಷಯದಲ್ಲಿ, ಶಂಕಾ-ಸಂಶಯವು, ನಾಸ್ತಿ-ಇಲ್ಲವೆಂದು ಭರತನನ್ನು ಕುರಿತು ಶ್ರೀರಾಮದೇವರು ಹೇಳಿದರೆಂದು ತಾತ್ಪರ್ಯ.

ತಾತ್ಪರ್ಯ.—ಈ ರೀತಿಯಾಗಿ ಭರತನಿಂದ ಪ್ರಾರ್ಥಿಸಲ್ಪಟ್ಟ ಶ್ರೀರಾಮರು ಸಮಸ್ತ ದೇವತಾ ಸಮೂಹಗಳಿಗೆ ರಾಕ್ಷಸರ ಬಾಧೆಯನ್ನು ತಪ್ಪಿಸುವುದಕ್ಕೆ ಸಮರ್ಥರಾದ್ದರಿಂದಲೇನೇ ತಮ್ಮ ವಚನವನ್ನು ಸತ್ಯಪಡಿಸುವದಕ್ಕೋಸ್ಕರ ದೇವತಾಸಮೂಹಗಳಿಗೆ ರಾಕ್ಷಸರ ಬಾಧೆಯನ್ನು ತಪ್ಪಿಸಿ ರಕ್ಷಣ ಮಾಡುವದಾಗಿ ಭರವಸೆಕೊಟ್ಟಿದ್ದ ತಮ್ಮ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡುವದಕ್ಕೋಸ್ಕರ ರಾಜ್ಯವನ್ನು ಪರಿಪಾಲನೆಮಾಡಬೇಕೆಂದು ಕೇಳಿಕೊಂಡ ಭರತನನ್ನು ಕುರಿತು ನಾನು ಅಯೋಧ್ಯೆಗೆ ಬಂದು ರಾಜ್ಯಭಾರಮಾಡಲಾಗುವುದಿಲ್ಲವೆಂದು ಖಂಡಿತವಾಗಿ ಹೇಳಿದರು. ಆದಾಗ್ಯೂ ಭರತನು ಶ್ರೀರಾಮರಲ್ಲಿ ಸರ್ವೋತ್ತಮತ್ವ ಜ್ಞಾನರೂಪವಾದ ಭಕ್ತಿಯಿಂದ ನಮ್ರನಾಗಿ ನಿಂತು ಪುನಃಪುನಃ ಪ್ರಾರ್ಥಿಸುತ್ತಿರಲಾಗಿ ಭರತನನ್ನು ಕುರಿತು ಏತದಾರಭ್ಯ ಹದಿನಾಲ್ಕು ವರ್ಷಗಳು ಕಳೆದ ಹೋದವೇಲೆ ನಿನ್ನ ವಚನವನ್ನು ನಾನು ನಡಿಸಿಕೊಡುತ್ತೇನೆ. ಈ ನನ್ನ ಮಾತು ಸತ್ಯವೆಂದು ತಿಳಿ ಈ ವಿಷಯದಲ್ಲಿ ಎಷ್ಟು ಮಾತ್ರವೂ ಸಂಶಯಪಡಬೇಡವೆಂದು ಹೇಳಿದರೆಂದು ತಾತ್ಪರ್ಯ.

ಶ್ಲೋಕ ॥ ಶ್ರುತ್ವೈತದ್ರಾಮವಾಕ್ಯಂ ಹುತಭುಜಿಪತನೇ ಸಪ್ರತಿಜ್ಞಾಂಚಕೃತ್ವಾ ರಾಮೋಕ್ತಸ್ಯಾನ್ಯಥಾತ್ವೇನತುಪುರಮಭಿವೇಕ್ಷ್ಯೇಹಮಿತ್ಯೇವ ತಾವತ್ । ಕೃತ್ವಾನ್ಯಾಂಸ ಪ್ರತಿಜ್ಞಾಮುವಸದಥ ಬಹಿಗ್ರಾಮಕೇ ನಂದಿನಾಮ್ನಿ ಶ್ರೀಶಸ್ಯೈವಾಸ್ಯಕೃತ್ವಾ ಶಿರಸಿಪರಮಕಂ ಪೌರಟಂ ಪಾದಪೀಠಂ ॥೮॥

ಅರ್ಥ.—ಏತತ್=ಅಯೋಧ್ಯೆಗೆ ಬರುವುದಿಲ್ಲವೆಂದು ಮೊದಲಾಗಿ ಹೇಳಿದ, ರಾಮವಾಕ್ಯಂ=ರಾಮದೇವರ ವಚನವನ್ನು, ಶ್ರುತ್ವಾ=ಕೇಳಿ, ಸಃ ಭರತನು, ರಾಮೋಕ್ತಸ್ಯ=ರಾಮರಿಂದ ಹೇಳಲ್ಪಟ್ಟ ವಚನಕ್ಕೆ, ಅನ್ಯಥಾತ್ವೇ=ವಿಪರೀತ ಬದಲಾವಣೆ ಆದದ್ದೇ ಆದರೆ ತಾನು, ಹುತಭುಜಪತನೇ=ಅಗ್ನಿ ಪ್ರವೇಶಮಾಡತಕ್ಕ ವಿಷಯದಲ್ಲಿ, ಪ್ರತಿಜ್ಞಾಂ = ಶಪಥವನ್ನು,

ಕೃತ್ವಾ=ಮಾಡಿ, ಸಃ=ಭರತನು, ಅಹಂ-ನಾನು, ತಾವತ್-ರಾಮರು ಅಯೋಧ್ಯಾಪಟ್ಟಣಕ್ಕೆ ಬರುವ ಪರ್ಯಂತರವಾಗಿ, ಪುರಂ=ಅಯೋಧ್ಯಾಪಟ್ಟಣವನ್ನು, ನಾಭಿವೀಕ್ಷ್ಯೇ=ನೋಡುವುದಿಲ್ಲ. ಇತ್ಯೇವ=ಈ ಪ್ರಕಾರವಾಗಿ, ಅನ್ಯಾಂ=ಮತ್ತೊಂದಾದ, ಪ್ರತಿಜ್ಞಾಂ-ಶಪಥವನ್ನೂ, ಕೃತ್ವಾ-ಮಾಡಿ, ಅಥ=ಈ ಪ್ರತಿಜ್ಞಾದ್ವಯಾನಂತರ, ಶ್ರೀಶ-ಲಕ್ಷ್ಮೀಪತಿಯಾದ, ಅಸ್ಯ=ಶ್ರೀರಾಮದೇವರ, ಪರಮಕಂ-ಅತಿ ಶ್ರೇಷ್ಠವಾದ, ಸೌರಟಂ = ಸುವರ್ಣಮಯವಾದ, ಪಾದಪೀಠಂ-ಪಾದುಕಾಪೀಠವನ್ನು, ಶಿರಸ್ಯೇವ=ತನ್ನ ಶಿರಸ್ಸಿನಲ್ಲಿ, ಕೃತ್ವಾ=ಧಾರಣಮಾಡಿಕೊಂಡು, ಬಹಿಃ-ಅಯೋಧ್ಯಾಪಟ್ಟಣದ ಹೊರಗಡೆ ಇರುವ, ನಂದಿನಾಮ್ನಿ=ನಂದಿಗ್ರಾಮವೆಂದು ಹೆಸರುಳ್ಳ, ಗ್ರಾಮಕೇ=ನೀಚ ಜನಗಳು ವಾಸಮಾಡುವ ಕುಗ್ರಾಮದಲ್ಲಿ, ಅವಸತ್=ವಾಸಮಾಡಿದನು.

ತಾತ್ಪರ್ಯ.—ಭರತನು ಪೂರ್ವೋಕ್ತಪ್ರಕಾರ ಹೇಳಲ್ಪಟ್ಟ ವಾಕ್ಯವನ್ನು ಕೇಳಿ ಈ ವಾಕ್ಯವು ಅನ್ಯಥಾ ಆದಲ್ಲಿ ಅಂದರೆ, ಹದಿನಾಲ್ಕು ವರ್ಷಗಳು ಕಳೆದನಂತರ ರಾಮರು ಅಯೋಧ್ಯಾಪಟ್ಟಣಕ್ಕೆ ಬಂದು ರಾಜ್ಯಭಾರವನ್ನು ವಹಿಸದೆ ಇದ್ದರೆ, ನಾನು ಆ ತಕ್ಷಣವೇ ಅಗ್ನಿಪ್ರವೇಶ ಮಾಡುತ್ತೇನೆಂಬೀ ರೀತಿಯಿಂದ ಪ್ರತಿಜ್ಞೆಯನ್ನು ಮಾಡಿ, ಅನಂತರ ಶ್ರೀರಾಮದೇವರು ಬರುವವರಿವಿಗೂ ನಾನು ಅಯೋಧ್ಯಾಪಟ್ಟಣವನ್ನು ನೋಡುವುದಿಲ್ಲ, ಮತ್ತು ಅಧಃಶಯನಾದಿ ಬ್ರಹ್ಮಚರ್ಯವನ್ನನುಸರಿಸಿಕೊಂಡು ಕಾಲಕಳೆಯುತ್ತೇನೆಂದು ಪ್ರತಿಜ್ಞಾಪೂರ್ವಕವಾದ ಮತ್ತೊಂದು ಶಪಥವನ್ನು ಮಾಡಿದನು. ಈ ಶಪಥದ್ವಯವನ್ನು ಮಾಡಿದನಂತರ ಲಕ್ಷ್ಮೀಪತಿಯಾದ ಶ್ರೀರಾಮರ ಪರಮೋತ್ಕೃಷ್ಟವಾದ ಬಂಗಾರದ ಪಾದುಕಾಪೀಠವನ್ನು ಶಿರಸಾಧಾರಣಮಾಡಿಕೊಂಡು ಬಂದು ಅಯೋಧ್ಯಾಪಟ್ಟಣದಿಂದ ಹೊರಗಡೆ ಸ್ವಲ್ಪ ದೂರದಲ್ಲಿರುವ ಬಹು ನೀಚ ಜನಗಳು ವಾಸಮಾಡುತ್ತಿದ್ದ ನಂದೀಗ್ರಾಮವೆಂಬ ಕುಗ್ರಾಮದಲ್ಲಿ ವಾಸಮಾಡಿಕೊಂಡಿದ್ದನೆಂದು ತಾತ್ಪರ್ಯ.

ವಿಶೇಷಾರ್ಥ-—ಈ ಭರತನು ತನ್ನ ಅಣ್ಣನಾದ ಶ್ರೀರಾಮದೇವರ ಅನುಜ್ಞೆಯನ್ನು ಪಡೆದುಕೊಂಡು ಬಂದು ಅಯೋಧ್ಯಾನಗರದಿಂದ ಹೊರಗಡೆ ಇರುವ ಕುತ್ಸಿತವಾದ ನಂದೀಗ್ರಾಮದಲ್ಲಿ ಯಾವ ರೀತಿ ನಡುವಳಿಕೆ

ಯುಳ್ಳವನಾಗಿದ್ದಾನೆಂಬ ವಿಷಯವು ಪುರಾಣಾಂತರಗಳಿಂದ ತಿಳಿದುಬರುವುದು. ಹೇಗೆಂದರೆ ಶ್ಲೋಕ:—ಸಕುರ್ವನ್ ಭ್ರಾತುರಾದೇಶಂ ನಂದಿಗ್ರಾಮೇಸ್ಥಿತೋವಶೀ । ತಪಸ್ವೀ ನಿಯತಾಹಾರಃ ಶಾಖಮೂಲ ಫಲಾಶನಃ ॥ ಇತಿ ನರಸಿಂಹ ಪುರಾಣಾತ್ ॥ ಅರ್ಥ.—ಭರತನು ತನ್ನ ಅಣ್ಣನಾದ ಶ್ರೀರಾಮನಿಂದ ಆಜ್ಞೆಯನ್ನು ಪಡೆದು ನಂದಿಗ್ರಾಮದಲ್ಲಿ ಶಾಖಮೂಲ ಫಲಗಳೇ ಮೊದಲಾದ ನಿಯಮಿತವಾದ ಆಹಾರ ಉಳ್ಳವನಾಗಿ ತಪಸ್ವಿಯಾಗಿ ವಾಸಮಾಡಿದನೆಂದು ನರಸಿಂಹಪುರಾಣದಿಂದ ತಿಳಿದುಬರುತ್ತದೆ, ಮತ್ತು, ಶ್ಲೋಕ ॥ ತಪಶ್ಚರಣ ಯುಕ್ತೇನ ತಸ್ಮಿನ್ ತಸ್ಥೌನೃಪೋತ್ತಮ ಇತಿ ಪಾದ್ಮವಾಕ್ಯಾತ್ ॥ ಅರ್ಥ.—ಈ ಭರತನು ನಂದಿಗ್ರಾಮದಲ್ಲಿ ತಪಶ್ಚರಣ ಯುಕ್ತನಾಗಿದ್ದನೆಂದು, ಪದ್ಮಪುರಾಣದಿಂದ ತಿಳಿದುಬರುತ್ತದೆ.

**ಶ್ಲೋಕ ॥ ಸಮಸ್ತ ಪೌರಾನುಗತೇನುಜೇ ಗತೇ ಸಚಿತ್ರಕೂಟೇ ಭಗವಾನುಸಹ । ಅಥಾಜಗಾಮೇಂದ್ರ ಸುತೋಽಪಿ ವಾಯಸೋ ಮಹಾಸುರೇಣಾತ್ಮಗತೇನಚೋದಿತಃ ॥೯॥**

ಅರ್ಥ.—ಸಮಸ್ತಪೌರಾನುಗತೇ=ಸಮಸ್ತ=ಸಮಸ್ತರಾದ, ಪೌರ=ಪುರಜನರಿಂದ, ಅಗತೇ=ಅನುಸರಿಸಿಕೊಂಡಿರತಕ್ಕ, ಅನುಜೇ=ತಮ್ಮನಾದ ಭರತನು, ಗತೇಸತಿ=ರಾಮರಿಂದ ಆಜ್ಞೆಯನ್ನು ಪಡೆದು ಹೋಗುತ್ತಿರಲಾಗಿ, ಭಗವಾನ್=ಭಗವಂತನಾದ, ಸಃ=ಶ್ರೀರಾಮದೇವರು, ಚಿತ್ರಕೂಟೆ=ಚಿತ್ರಕೂಟಪರ್ವತದಲ್ಲಿ, ಉವಾಸಹ=ವಾಸಮಾಡಿಕೊಂಡಿದ್ದರು. ಅಥ-ಅನಂತರ,-ಆತ್ಮಗತೇನ=ತನ್ನಲ್ಲಿ ಅವಿಷ್ಟನಾಗಿದ್ದ, ಮಹಾಸುರೇಣ=ಮಹಾದೈತ್ಯನಾದ ಕುರಂಗಾಸುರನಿಂದ, ಚೋದಿತಃ=ಪ್ರೇರಿತನಾದ, ಇಂದ್ರಸುತಃ=ಇಂದ್ರನ ಮಗನಾದ ಜಯಂತನು, ವಾಯಸಃಸನ್=ಕಾಕರೂಪದಿಂದ ಆಜಗಾಮ-ಬಂದನು.

ತಾತ್ಪರ್ಯ.—ಅಯೋಧ್ಯಾವಾಸಿಗಳಾದ ಸಮಸ್ತ ಜನಗಳಿಂದ ಕೂಡಿದ ಭರತನು ತನ್ನ ಪುರವನ್ನು ಕುರಿತು ಹೋಗುತ್ತಿರಲು ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀರಾಮನು ಚಿತ್ರಕೂಟದಲ್ಲಿ ವಾಸಮಾಡುತ್ತಿದ್ದರು. ಹೀಗಿರಲು

ಒಂದಾನೊಂದು ದಿನ ಇಂದ್ರಪುತ್ರನಾದ ಜಯಂತನು ತನ್ನಲ್ಲಿ ಆವಿಷ್ಟನಾದ ಕುರಂಗನೆಂಬ ದೈತ್ಯನಿಂದ ಪ್ರೇರಿತನಾಗಿ ಕಾಗೆರೂಪದಿಂದ ಅಲ್ಲಿಗೆ ಬಂದನು.

**ಶ್ಲೋಕ ॥ ಸಚಾಸುರಾವೇಶ ವಶಾದ್ರಮಾಸ್ತನೇಯದಾಪ್ಯ ಧಾತ್ತುಂಡಮಥಾಭಿವೀಕ್ಷಿತಃ । ಜನಾರ್ದನೇ ನಾಶುತೃಣೇಪ್ರಯೋಜಿತೇ ಚಚಾರತೇನ ಜ್ವಲತಾನುಯಾತಃ ॥೧೦॥**

ಅರ್ಥ.—ಅಥ=ಅನಂತರ, ಸಃ-ದೈತ್ಯನಿಂದ ಆವಿಷ್ಟನಾಗಿ, ಕಾಗೆಯರೂಪದಿಂದಿದ್ದ ಜಯಂತನು, ಅಸುರಾವೇಶವಿದ್ದುದರಿಂದ, ರಮಾಸ್ತನೇ =ರಮಾ=ರಮಾ ಸ್ವರೂಪಳಾದ ಸೀತಾದೇವಿಯ, ಸ್ತನೇ = ವಕ್ಷಸ್ಥಳದಲ್ಲಿ, ಯದಾ=ಯಾವ ಕಾಲದಲ್ಲಿ, ತುಂಡಂ=ಕೊಕ್ಕನ್ನು, ವ್ಯಧಾತ್=ಚುಚ್ಚಿದನೋ, ತದಾ=ಆ ಕೂಡಲೇ, ಅಭಿವೀಕ್ಷಿತಃ=ರಾಮರಿಂದ ನೋಡಲ್ಪಟ್ಟನು ಆಶು-ತಕ್ಷಣದಲ್ಲಿಯೇ, ಜನಾರ್ದನೇನ=ಶ್ರೀರಾಮರಿಂದ, ತೃಣೇ=ತೃಣಾಸ್ತ್ರವು, ಪ್ರಯೋಜಿತೇ ( ಸತಿ ) ಪ್ರಯೋಗಿಸಲ್ಪಡುತ್ತಿರಲಾಗಿ, ಜ್ವಲತಾ=ಸುಡುತ್ತಲಿರುವ, ತೇನ=ಆ ತೃಣಾಸ್ತ್ರದಿಂದ, ಅನುಯಾತಃ ( ಸ: ) = ಅಟ್ಟಿಸಲ್ಪಟ್ಟವನಾಗಿ, ಚಚಾರ=ಲೋಕಾಂತರಗಳಲ್ಲಿ ಸಂಚಾರಮಾಡಿದನು. (ಆ ಅಸ್ತ್ರದ ಬಾಧೆಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಹೀಗೆ ಮಾಡಿದನು )

ತಾತ್ಪರ್ಯ.—ಅನಂತರ ಕಾಗೆಯ ರೂಪದಿಂದಿದ್ದ ಜಯಂತನು ತನ್ನಲ್ಲಿ ಆವಿಷ್ಟನಾಗಿದ್ದ ಕುರಂಗಾಸುರನ ಪ್ರೇರಣೆಯಿಂದ ರಮಾ ಸ್ವರೂಪಳಾದ ಸೀತಾದೇವಿಯ ವಕ್ಷಸ್ಥಳವನ್ನು ಕುಕ್ಕಿ ಗಾಯಮಾಡಿದನು. ಆಕ್ಷಣದಲ್ಲಿಯೇ ರಾಮರು ಅದನ್ನು ನೋಡಿ ಆ ಕಾಗೆಯಮೇಲೆ ತೃಣಾಸ್ತ್ರವನ್ನು ಪ್ರಯೋಗಮಾಡಿದರು. ತೃಣಾಸ್ತ್ರವು ಇವನನ್ನು ದಹಿಸುತ್ತಿರಲಾಗಿ ತನ್ನ ಪ್ರಾಣಸಂರಕ್ಷಣೆಗಾಗಿ ಯಾರನ್ನಾದರೂ ಶರಣುಹೊಂದೋಣವೆಂಬ ಅಭಿಪ್ರಾಯದಿಂದ ಲೋಕಲೋಕಗಳನ್ನೆಲ್ಲಾ ಸಂಚಾರಮಾಡಿದನು.

ಶ್ಲೋಕ॥ ಸ್ವಯಂಭು ಶರ್ವೇಂದ್ರಮುಖಾನ್ ಸುರೇಶ್ವರಾನ್ ಜಿಜೀವಿಷುಸ್ತಾಂ ಶರಣಂಗತೋಽಪಿ । ಬಹಿಷ್ಕೃತಸ್ತೈರ್ಹರಿಭಕ್ತಿಭಾವತೋಽಹ್ಯಲಂಘ್ಯ ಶಕ್ತ್ಯಾ ಪರಮಸ್ಯ ಚಾಕ್ಷಮೈಃ ॥೧೧॥

ಅರ್ಥ.—ಜಿಜೀವಿಷುಃ=ಪ್ರಾಣರಕ್ಷಣೆಮಾಡಿಕೊಳ್ಳಬೇಕೆಂಬ ಇಚ್ಛೆಯಿಂದ ಈ ವಾಯಸರೂಪನಾದ ಜಯಂತನು, ತಾನ್=ಹರಿಭಕ್ತ್ಯಾದಿ ಸದ್ಗುಣಗಳಿಂದ ಪ್ರಸಿದ್ಧರಾದ, ಸ್ವಯಂಭು=ಬ್ರಹ್ಮದೇವರು, ಶರ್ವ-ರುದ್ರದೇವರು, ಇಂದ್ರ=ಇಂದ್ರದೇವರು, ಮುಖಾನ್-ಮೊದಲಾದ, ಸುರೇಶ್ವರಾನ್ ದೇವತಾ ಶ್ರೇಷ್ಠರುಗಳನ್ನು, ಶರಣಂಗತೋಽಪಿ=ಮೊರೆಹೊಂದಿದನು. ಹರಿಭಕ್ತಿಭಾವತಃ=ಶ್ರೀಪರಮಾತ್ಮನ, ಭಕ್ತರಾದ್ದರಿಂದ, ಪರಮಸ್ಯ-ಪರಮಶ್ರೇಷ್ಠರಾದ ಶ್ರೀರಾಮದೇವರ ಆಜ್ಞೆಯನ್ನು, ಅಲಂಘ್ಯಶಕ್ತ್ಯಾ=ಉಲ್ಲಂಘನಮಾಡತಕ್ಕ ಶಕ್ತಿಯಿಂದ, ಅಕ್ಷಮೈಃ-ಅಸಮರ್ಥರಾದ, ತೈಶ್ಚ=ಆ ಬ್ರಹ್ಮ ರುದ್ರೇಂದ್ರರಿಂದಲೂ ಸಹ, ಬಹಿಷ್ಕೃತಃ-ತಿರಸ್ಕರಿಸಲ್ಪಟ್ಟನು.

ತಾತ್ಪರ್ಯ.—ಶ್ರೀರಾಮರಿಂದ ಪ್ರಯೋಗಿಸಲ್ಪಟ್ಟ ತೃಣಾಸ್ತ್ರದಿಂದ ದಹಿಸಲ್ಪಡುತ್ತಾ ತನ್ನನ್ನು ಯಾರಾದರೂ ರಕ್ಷಣೆಮಾಡಿದರೆ ತಾನು ಬದುಕಿಕೊಳ್ಳಬೇಕೆಂಬ ಅಪೇಕ್ಷೆಯಿಂದ ಲೋಕಾಂತರಗಳನ್ನು ಸಂಚರಿಸಿ ಶ್ರೀಹರಿವಾಯುಗಳ ಭಕ್ತಿಯೇ ಮೊದಲಾದ ಸದ್ಗುಣಗಳಿಂದ ಪ್ರಸಿದ್ಧರಾದ ಬ್ರಹ್ಮ ರುದ್ರ ಇಂದ್ರ ಮೊದಲಾದ ದೇವತೆಗಳನ್ನು ಈ ವಾಯಸರೂಪನಾದ ಜಯಂತನು ಮೊರೆಹೊಕ್ಕನು. ಅವರುಗಳು ಶ್ರೀಹರಿಯಲ್ಲಿ ಭಕ್ತಿಯುಕ್ತರಾದುದರಿಂದ ಪರಮ ಶ್ರೇಷ್ಠರಾದ ಶ್ರೀರಾಮರ ಆಜ್ಞೆಯನ್ನು ಉಲ್ಲಂಘಿಸಿ ಶ್ರೀರಾಮರಿಂದ ಪ್ರಯೋಗಿಸಲ್ಪಟ್ಟ ಅಸ್ತ್ರದ ದೆಸೆಯಿಂದ ತಪ್ಪಿಸಿ ಜಯಂತನನ್ನು ಸಂರಕ್ಷಣೆಮಾಡಲು ಸಮರ್ಥರಾಗದೆ ನಿರಾಕರಿಸಿದರು.

ಶ್ಲೋಕ॥ ಪುನಃ ಪ್ರಯಾತಃ ಶರಣಂ ರಘೂತ್ತಮಂ ವಿಸರ್ಜಿತಸ್ತೇನ ನಿಹತ್ಯ ಚಾಸುರಂ । ತದಕ್ಷಿಗಂ ಸಾಕ್ಷಿಕ್ರಮವಧ್ಯಂ ಪ್ರಸಾದತಶ್ಚಂದ್ರ ವಿಭೂಷಣಸ್ಯ ॥೧೨॥

ಅರ್ಥ.—ಸಃ=ಆ ಬ್ರಹ್ಮಾದಿಗಳಿಂದ ತಿರಸ್ಕರಿಸಲ್ಪಟ್ಟ ವಾಯಸ ರೂಪನಾದ ಜಯಂತನು, ಪುನಃ=ಹಿಂದಿರುಗಿ, ರಘೂತ್ತಮಂ-ಶ್ರೀರಾಮ ದೇವರ, ಶರಣಂ=ಮೊರೆಯನ್ನು, ಪ್ರಯಾತಃ-ಹೊಂದಿದನು. ಸಃ=ಆ ರಾಮದೇವರು, ಚಂದ್ರವಿಭೂಷಣಸ್ಯ=ಚಂದ್ರಶೇಖರನಾದ ರುದ್ರದೇವರ, ಪ್ರಸಾದಾತ್=ವರಪ್ರಸಾದಧಿಂದ, ಅವಧ್ಯಮಪಿ=ವಧಾರ್ಹನಲ್ಲದಿದ್ದರೂ, ತದಕ್ಷಿಗಂ=ಆ ವಾಯಸದ ದಕ್ಷಿಣನೇತ್ರದಲ್ಲಿ ಆವಿಷ್ಟನಾಗಿದ್ದ ಕುರಂಗನೆಂಬ ಅಸುರನನ್ನು, ಸಾಕ್ಷಿಕಂಚ=ನೇತ್ರದಿಂದ ಸಹಿತನನ್ನಾಗಿ, ವಿಹತ್ಯ=ಸಂಹಾ ರಮಾಡಿ, ತೇನ-ಅಸುರಾವೇಶದಿಂದ, ವಿಸರ್ಜಿತಃ-ಬಿಡುಗಡೆಮಾಡಿದನು.

ತಾತ್ಪರ್ಯ.—ಈ ವಾಯಸರೂಪಿಯಾದ ಅಸುರನು ತನ್ನ ಜೀವರಕ್ಷ ಣೆಗೋಸ್ಕರ ಲೋಕಾಂತರಗಳಲ್ಲಿ ಸಂಚಾರಮಾಡಿ ಬ್ರಹ್ಮಾದಿ ದೇವತೆ ಗಳನ್ನು ಮೊರೆಹೊಕ್ಕರೂ ಅವರಿಂದ ಸಂರಕ್ಷಿತನಾಗದೆ ಹಿಂತಿರುಗಿ ಬಂದು ಶ್ರೀರಾಮರನ್ನೇ ಪುನಃ ಮೊರೆಹೊಕ್ಕನು. ಈ ಅಸುರನು ರುದ್ರದೇವರ ಪ್ರಸಾದದಿಂದ ಅವಧ್ಯನಾಗಿದ್ದಾಗ್ಯೂ ಆ ವಾಯಸದ ದಕ್ಷಿಣ ನೇತ್ರದಲ್ಲಿದ್ದ ಅವನನ್ನ ಶ್ರೀರಾಮರು ವಾಯಸದ ನೇತ್ರದಿಂದ ಸಹಿತನನ್ನಾಗಿ ಸಂಹಾರ ಮಾಡಿ, ಅಸುರಾವೇಶದಿಂದ ಬಿಡುಗಡೆ ಮಾಡಿದನು.

ವಿಶೇಷಾರ್ಥ.--ಏವಂಚ ವಾಯಸದ ದಕ್ಷಿಣ ನೇತ್ರಮಾತ್ರ ನಾಶ ವಾಯಿತೇ ಹೊರತು ವಾಯಸನು ಹತವಾಗಲಿಲ್ಲವೆಂದು ಭಾವವು.

ಅವತಾರಿಕೆ.--ಕಾಗೆಯ ಕಣ್ಣನ್ನು ಹೋಗಲಾಡಿಸಲು ಕಾರಣವನ್ನು ಹೇಳುತ್ತಾರೆ:

**ಶ್ಲೋಕ ॥ ಸವಾಯಸಾನಾಮಸುರೋಽಖಿಲಾನಾಂ ವರಾದುಮೇಶಸ್ಯ ಬಭೂ ವಚಾಕ್ಷಿಗಃ । ನಿಪಾತಿತೋಽಸೌ ಸಹವಾಯಸಾಕ್ಷಿಭಿಃ ತೃಣೇನ ರಾ ಮಸ್ಯ ಬಭೂವ ಭಸ್ಮಸಾತ್ ॥೧೩॥**

ಅರ್ಥ.—ಸಃ-ಆ, ಅಸುರಃ-ದೈತ್ಯನು, ಉಮೇಶಸ್ಯ-ರುದ್ರದೇವರ, ವರಾತ್=ವರಪ್ರಭಾವದಿಂದ, ಅಖಿಳಾನಾಂ=ಸಮಸ್ತವಾದ, ವಾಯಸಾನಾಂ-ವಾಯಸಗಳ, ಅಕ್ಷಿಗಃ=ನೇತ್ರಗಳಲ್ಲಿರತಕ್ಕವನು, ಬಭೂವ-ಆದನು. ಅಸೌ=ಈ ನೇತ್ರಗಳಲ್ಲಿದ್ದ ಅಸುರನು, ವಾಯಸಾಕ್ಷಿಭಿಃ-ವಾಯಸಗಳ ನೇತ್ರದಿಂದ, ಸಹ=ಸಹಿತನಾಗಿ, ರಾಮಸ್ಯ=ರಾಮದೇವರ, ತೃಣೇನ=ತೃಣಾಸ್ತ್ರದಿಂದ, ನಿಪಾತಿತಃ=ಕೊಲ್ಲಲ್ಪಟ್ಟು, ಭಸ್ಮಸಾತ್ ಬಭೂವ=ಅಸುರನು ಭಸ್ಮೀಭೂತನಾದನು.

ತಾತ್ಪರ್ಯ.—ಅಪರಾಧಿಗಳು ವಧಾರ್ಹರು ಆದರೆ ವಾಯಸಗಳ ಅಕ್ಷಿಪಾತವು ಏತಕ್ಕಾಗಬೇಕೆಂದರೆ ಆ ಕಾರಣವನ್ನು ಹೇಳುತ್ತಾರೆ. ಈ ಅಸುರನು ಉಮಾಪತಿಯಾದ ರುದ್ರದೇವರ ವರಪ್ರಸಾದದಿಂದ ಸಮಸ್ತವಾದ ವಾಯಸಗಳ ನೇತ್ರಗಳಲ್ಲಿ ಸೇರಿಕೊಂಡಿದ್ದನು. ಆದುದರಿಂದ ಆ ನೇತ್ರ ಸಹಿತನಾಗಿ ಶ್ರೀರಾಮದೇವರ ತೃಣಾಸ್ತ್ರದಿಂದ ತಾನೂ ಭಸ್ಮೀಭೂತನಾದನೆಂದು ಅಭಿಪ್ರಾಯವು.

ಅವತಾರಿಕೆ.—ನೇತ್ರದಲ್ಲಿ ಆವಿಷ್ಟನಾಗಿದ್ದ ಅಸುರನು ವಧಾರ್ಹನೇನೋ ಹೌದು. ಆದರೆ ವಾಯಸಗಳ ಅಕ್ಷಿನಿಪಾತವಾಗುವುದಕ್ಕೆ ವಾಯಸಗಳು ಏನು ಅಪರಾಧ ಮಾಡಿದವು ? ಅಂದರೆ ಅದಕ್ಕೆ ಕಾರಣವನ್ನು ಹೇಳುತ್ತಾರೆ:—

**ಶ್ಲೋಕ ॥ ದದುರ್ಹಿತಸ್ಮೈ ವಿವರಂ ಬಲಾರ್ಥಿನೋ ಯದ್ವಾಯಸಾಸ್ತೇನ ತದಕ್ಷಿಪಾತನಂ । ಕೃತಂ ರಮೇಶೇನತದೈಕನೇತ್ರಾ ಬಭೂವುರನ್ಯೇಪಿ ಚವಾಯಸಾಸ್ತದಾ ॥೧೪॥**

ಅರ್ಥ.—ಯತ್-ಯಾವ ಕಾರಣದ ದೆಸೆಯಿಂದ, ವಾಯಸಾಃ=ವಾಯಸಗಳು, ಬಲಾರ್ಥಿನಃ=ಬಲಾಪೇಕ್ಷೆಯುಳ್ಳವುಗಳಾಗಿ, ತಸ್ಮೈ=ಆ ಅಸುರನಿಗೆ, ವಿವರಂ=ನೇತ್ರದಲ್ಲಿ ಆಶ್ರಯವನ್ನು, ದದುಃ=ಕೊಟ್ಟವೋ, ತೇ=ಆ ಕಾರಣದ್ದೆಶೆಯಿಂದ, ರಮೇಶೇನ = ಲಕ್ಷ್ಮೀಪತಿಯಾದ ಶ್ರೀರಾಮದೇವ

ರಿಂದ, ತದಕ್ಷಿಪಾತನಂ=ತತ್=ಆ ವಾಯಸಗಳ, ಅಕ್ಷಿಪಾತನಂ=ನೇತ್ರಪತನವು, ಕೃತಂ=ಮಾಡಲ್ಪಟ್ಟಿತು. ತತ್-ಆದ್ದರಿಂದ, ಅನ್ಯೇಪಿ=ಇತರ ವಾಯಸಾಶ್ಚ=ವಾಯಸಗಳೂ ಸಹ, ಆ ದಿವಸದಾರಭ್ಯ, ಏಕನೇತ್ರಾಃ=ಒಂದೇ ನೇತ್ರವುಳ್ಳವುಗಳು, ಬಭೂವುಃ=ಆದವು.

ತಾತ್ಪರ್ಯ.—ಈ ಅಸುರನು ಖದ್ರದೇವರಿಂದ ಅವಧ್ಯತ್ವ ವರವನ್ನು ಪಡೆದು ತನಗೆ ವಾಸಸ್ಥಾನವನ್ನು ಹುಡುಕುತ್ತಿರಲು ವಾಯಸಗಳು ತಮ್ಮಲ್ಲಿ ಅಸುರಾವೇಶವಿದ್ದರೆ ತಮಗೆ ಬಲ ಅಧಿಕವಾಗುವುದೆಂಬ ಅಭಿಪ್ರಾಯದಿಂದ ಈ ಅಸುರನಿಗೆ ತಮ್ಮ ದಕ್ಷಿಣ ನೇತ್ರದಲ್ಲಿ ಸ್ಥಾನವನ್ನು ಕೊಟ್ಟವು ಆ ವರ ಬಲದಿಂದ ಲೋಕದಲ್ಲಿರುವ ಎಲ್ಲಾ ವಾಯಸಗಳ ಬಲಗಣ್ಣಿನಲ್ಲಿ ಸೇರಿಕೊಂಡಿದ್ದನು. ಆ ಕಾರಣದಿಂದ ಶ್ರೀರಾಮರು ನೇತ್ರಗಳಲ್ಲಿದ್ದ ಅಸುರನನ್ನು ಕೊಂದದ್ದಲ್ಲದೆ ನೇತ್ರದಲ್ಲಿ ಆ ಅಸುರನಿಗೆ ಸ್ಥಾನವನ್ನು ಕೊಟ್ಟ ಅಪರಾಧಕ್ಕಾಗಿ ವಾಯಸಗಳ ದಕ್ಷಿಣ ನೇತ್ರವನ್ನೂ ನಿಪಾತಮಾಡಿದರು. ಏತೇನ ಅಕ್ಷಿಗತನಾಗಿದ್ದ ಅಸುರನು ಆ ತೃಣಾಸ್ತ್ರದಿಂದ ಮೃತನಾಗಿ ಭಸ್ಮವಾದನು. ತದ್ದಿದಾರಭ್ಯ ಸಮಸ್ತ ವಾಯಸಗಳೂ ಒಂದು ಕಣ್ಣುವುಳ್ಳವುಗಳಾದವೆಂದು ಅಭಿಪ್ರಾಯವು.

ಅವತಾರಿಕೆ.—ಅಸುರನಿಗೆ ಅವಕಾಶ ಕೊಟ್ಟ ಕಾರಣ ಆ ಕಾಲದಲ್ಲಿದ್ದ ವಾಯಸಗಳು ಮಾತ್ರ ಅಪರಾಧಿಗಳಾದವು. ಮುಂದೆ ಹುಟ್ಟುವ ಕಾಗೆಗಳೂ ಕೂಡ ಏಕನೇತ್ರ ಉಳ್ಳವುಗಳಾಗಬೇಕೆಂಬುದನ್ನು ತಿಳಿಸುತ್ತಾರೆ.—

**ಶ್ಲೋಕ ॥ ಭವಿಷ್ಯತಾ ಮಪ್ಯಥ ಯಾವದೇವ ದ್ವಿನೇತ್ರತಾ ಕಾಕ ಕುಲೋದ್ಭವಾನಾಂ । ತಾವತ್ತು ದಕ್ಷಸ್ಯ ಕುರಂಗನಾಮ್ನಾ ಶಿವೇನ ದತ್ತಂ ದಿತಿಜಸ್ಯ ಚಾಕ್ಷಯಂ ॥೧೫॥**

ಅರ್ಥ.—ಏತತ್ಕಾಲಾನಂತರ, ಯಾವದೇವ=ಯಾವಕಾಲಪರ್ಯಂತರವಾಗಿ, ಭವಿಷ್ಯತಾಂ=ಮುಂದೆ ಉತ್ಪನ್ನಗಳಾಗತಕ್ಕ, ಕಾಕಕುಲೋದ್ಭ

ವಾನಪಿ-ಕಾಕ ಕುಲದಲ್ಲಿ ಉತ್ಪತ್ತಿಯಾಗತಕ್ಕ ವಾಯಸಗಳಿಗೂ ಸಹ, ದ್ವಿನೇತ್ರತಾಂ=ಎರಡು ಕಣ್ಣುಗಳಿರುತ್ತವೆಯೋ, ತಾವದೇವ=ಆ ಪರ್ಯಂತರವಾಗಿಯೂ, ತದಕ್ಷಸ್ಯ=ಆ ವಾಯಸಗಳ ನೇತ್ರದಲ್ಲಿರುವ, ದಿತಿಜಸ್ಯಚ=ದಿತಿದೇವಿಯಲ್ಲಿ ಉತ್ಪನ್ನನಾದ, ಕುರಂಗನಾಮ್ನಾ=ಕುರಂಗಾಸುರನೆಂಬ ಅಸುರನಿಗೂ ಸಹ, ಶಿವೇನ-ಋದ್ರದೇವರಿಂದ, ಅಕ್ಷಯಂ=ನಾಶರಹಿತ ಲಕ್ಷಣರೂಪವಾದ ವರವು. ದತ್ತಂ=ಕೊಡಲ್ಪಟ್ಟಿತು.

ತಾತ್ಪರ್ಯ.—ಈ ವರ್ತಮಾನ ಕಾಲಾರಭ್ಯ (ಈ ದಿನ ಮೊದಲು) ಮುಂದೆ ವಾಯಸಗಳ ಕುಲದಲ್ಲಿ ಉತ್ಪನ್ನವಾಗತಕ್ಕ ವಾಯಸಗಳಿಗೆ ಯಾವತ್ಪರಿಯಂತರ ಎರಡು ಕಣ್ಣುಗಳಿರುತ್ತದೆಯೋ ಆ ಪರ್ಯಂತರವಾಗಿಯೂ ವಾಯಸಗಳ ಬಲದ ಕಣ್ಣಿಗೂ ಮತ್ತು ದಿತಿದೇವಿಯಲ್ಲಿ ಜನಿಸಿದ ಕುರಂಗಾಸುರನೆಂಬ ಅಸುರನಿಗೂ ಸಹ ಋದ್ರದೇವರಿಂದ ನಾಶರಹಿತ ಲಕ್ಷಣರೂಪವಾದ ವರವು ಕೊಡಲ್ಪಟ್ಟಿತ್ತು.

**ಶ್ಲೋಕ ||** ಅತಃ ಪುನರ್ಭಾವ ಮಮುಷ್ಯ ಹಿಸ್ವರ್ ಭವಿಷ್ಯತಶ್ಚೈಕ ದೃಶಶ್ಚಕಾರ । ಸವಾಯಸಾ‌ನ್ ರಾಘವ ಆದಿಪುರುಷಸ್ತತೋ ಯಯೌ ಶಕ್ರಸುತಸ್ತದಾಜ್ಞಯಾ ||೧೬||

ಅರ್ಥ.--ಅತಃ=ಆ ಕಾರಣದಿಂದ, ಆದಿಪುರುಷಃ=ಪುರಾಣ ಪುರುಷರಾದ, ಸಃ-ಆ, ರಾಘವಃ=ರಘುಕುಲೋತ್ಪನ್ನರಾದ ರಾಮದೇವರು, ಅಮುಷ್ಯ=ಈ ಅಸುರನ, ಪುನರ್ಭಾವಂ=ಪುನರಸ್ತಿತ್ವಭಾವವನ್ನು, ಹಿಸ್ವರ್=ತೊಡಿದು (ಪರಿಹಾರಮಾಡಿ) ಭವಿಷ್ಯತಃ=ಮುಂದೆ ಉತ್ಪನ್ನಗಳಾಗತಕ್ಕ, ವಾಯಸಾನ್-ಕಾಗೆಗಳನ್ನು, ಏಕದೃಶಂ=ಒಂದೇ ಕಣ್ಣುಳ್ಳವುಗಳನ್ನಾಗಿ, ಚಕಾರ-ಮಾಡಿದರು. ತತಃ=ಅನಂತರ, ಶಕ್ರಸುತಃ=ಇಂದ್ರನ ಕುಮಾರನಾದ ಜಯಂತನು, ತದಾಜ್ಞಯಾ=ಶ್ರೀರಾಮದೇವರ ಅನುಜ್ಞೆಯಿಂದ, ಅಸುರಾವೇಶದಿಂದ ಮುಕ್ತನಾಗಿ, ಯಯೌ=ತನ್ನ ಸ್ಥಾನವನ್ನು ಕುರಿತು ಹೊರಟು ಹೋದನು.

ತಾತ್ಪರ್ಯ.—ಆದಕಾರಣ ಆದಿಪುರುಷನಾದ ಶ್ರೀರಾಮನು ಕುರಂಗನಾಮಕ ದೈತ್ಯನಿಗೆ ಪುನರ್ಜನ್ಮವಿಲ್ಲದಂತೆ ಮಾಡಿ ಎಲ್ಲ ಕಾಗೆಗಳನ್ನೂ ಒಂದು ನೇತ್ರವುಳ್ಳವುಗಳನ್ನಾಗಿ ಮಾಡಿದನು. ಅನಂತರ ಶ್ರೀರಾಮರ ಆಜ್ಞೆಯಿಂದ ಇಂದ್ರಪುತ್ರನಾದ ಜಯಂತನು ಅಸುರಾವೇಶದಿಂದ ಮುಕ್ತನಾಗಿ ತನ್ನ ನಿಜಲೋಕವನ್ನು ಕುರಿತು ಪ್ರಯಾಣಮಾಡಿದನು.

ಅವತಾರಿಕೆ.—ಈ ಪರ್ಯಂತರವಾಗಿ ಅಯೋಧ್ಯಾಕಾಂಡದ ಕಥೆಯನ್ನು ಸಂಕ್ಷೇಪವಾಗಿ ನಿರೂಪಣಮಾಡಿ ಶ್ರೀಮದಾಚಾರ್ಯರು ಈಗ ಅರಣ್ಯಕಾಂಡದ ಕಥೆಯನ್ನು ನಿರೂಪಣ (ಆರಂಭ) ಮಾಡುತ್ತಾರೆ.—

**ಶ್ಲೋಕ ॥ ರಾಮೋಥ ದಂಡಕವನಂ ಮುನಿವರ್ಯನೀತೋ ಲೋಕಾನನೇ**
**ಕಶ ಉದಾರ ಬಲೈರ್ನಿರಸ್ತಾನ್ । ಶ್ರುತ್ವಾ ಖರಪ್ರಭೃತಿಭಿರ್ವರತೋ**
**ಹರಸ್ಯ ಸರ್ವೈರವಧ್ಯ ತನುಭಿಃ ಪ್ರಯಯೌ ಸಭಾರ್ಯಃ ॥೧೭॥**

ಅರ್ಥ.—ಕುರಂಗಾಸುರನ ವಧಾನಂತರದಲ್ಲಿ, ಹರಸ್ಯ=ಋುದ್ರದೇವರ, ವರತಃ-ವರಪ್ರಸಾದದಿಂದ, ಅವಧ್ಯ=ವಧಾರಹಿತವಾದ, ತನುಭಿಃ ಶರೀರವುಳ್ಳ, ಸರ್ವೈ –ಸಮಸ್ತರಾದ, ಉದಾರಬಲೈಃ–ಉದಾರ = ವಿಸ್ತಾರವಾದ, ಬಲೈಃ=ಪರಾಕ್ರಮವುಳ್ಳ, ಖರಪ್ರಭೃತಿಭಿಃ=ಖರನೇ ಮೊದಲಾದ ರಾಕ್ಷಸರಿಂದ, ಅನೇಕಶು–ಬಹು ವಿಧವಾಗಿ, ಲೋಕಾನ್=ಅನೇಕ ಸಜ್ಜನರು, ನಿರಸ್ತಾನ್=ಬಾಧೆಯುಳ್ಳವರಾಗಿದ್ದಾರೆಂದು, ಶ್ರುತ್ವಾ – ವರ್ತಮಾನ ಕೇಳಿ, ರಾಮಃ=ಶ್ರೀರಾಮದೇವರು, ಮುನಿವರ್ಯನೀತಃಸನ್ = ಮುನಿವರ್ಯ–ದಂಡಕಾರಣ್ಯ ವಾಸಿಗಳಾದ ಋಷಿಶ್ರೇಷ್ಠರಿಂದ, ನೀತಃಸನ್=ಪ್ರಾರ್ಥಿಸಲ್ಪಟ್ಟವರಾಗಿ, ಸಭಾರ್ಯಃ=ಪತ್ನಿಯಾದ ಸೀತಾದೇವಿಯಿಂದೊಡಗೂಡಿ, ದಂಡಕವನಂ=ದಂಡಕಾರಣ್ಯವನ್ನು ಕುರಿತು, ಪ್ರಯಾಣಮಾಡಿದರು.

ತಾತ್ಪರ್ಯ.— ಚಿತ್ರಕೂಟಪರ್ವತದಲ್ಲಿ ಕುರಂಗಾಸುರನ ವಧಾನಂತರ ಋದ್ರದೇವರ ವರಪ್ರಸಾದದಿಂದ ಅವಧ್ಯರಾದ ಅತಿ ಬಲಿಷ್ಠರಾದ ಖರದೂಷಣಾದಿ ರಾಕ್ಷಸರುಗಳಿಂದ ಸಜ್ಜನರುಗಳು ಅನೇಕ ರೀತಿಯಿಂದ ಬಾಧೆಪಡುತ್ತಿರುವ ವರ್ತಮಾನವನ್ನು ಕೇಳಿ ಶ್ರೀರಾಮರು ದಂಡಕಾರಣ್ಯವಾಸಿಗಳಾದ ಋಷಿಶ್ರೇಷ್ಠರಿಂದ ಪ್ರಾರ್ಥಿಸಲ್ಪಟ್ಟವರಾಗಿ ಸೀತಾದೇವಿಯರಿಂದೊಡಗೂಡಿ ದಂಡಕಾರಣ್ಯವನ್ನು ಕುರಿತು ತೆರಳಿದರು.

**ಶ್ಲೋಕ || ಆಸೀಚ್ಚ ತತ್ರ ಶರಭಂಗ ಇತಿಸ್ಮ ಜೀರ್ಣೋ ಲೋಕಂ ಹರೇ ರ್ಜಿಗಿಮಿಷುರ್ಮುನಿ ರುಗ್ರತೇಜಾಃ || ತೇನಾದರೋಪಹೃತ ಸಾರ್ಘ್ಯಸಪರ್ಯಯಾ ಸಃ ಪ್ರೀತೋದದೌ ನಿಜಪದಂ ಪರಮಂ ರಮೇಶಃ ೧೮**

ಅರ್ಥ.—ತತ್ರಚ-ಆ ದಂಡಕಾರಣ್ಯದಲ್ಲಿ, ಹರೇಃ=ಶ್ರೀಪರಮಾತ್ಮನ ಲೋಕಂ=ವೈಕುಂಠಲೋಕವನ್ನು, ಜಿಗಿಮಿಷುಃ=ಹೊಂದಲಪೇಕ್ಷೆಯುಳ್ಳ, ಉಗ್ರತೇಜಾಃ=ವಿಶೇಷ ತೇಜಸ್ವಿಯಾದ, ಶರಭಂಗಯಿತಿ=ಶರಭಂಗಋಷಿ ಎಂದು ನಾಮಧೇಯವುಳ್ಳ, ಜೀರ್ಣಃ=ಅತಿ ವೃದ್ಧರಾದ, ಮುನಿಃ=ಋಷಿಯು, ಆಸೀತ್ಸ್ಮ-ಇದ್ದರು, ರಮೇಶಃ=ಲಕ್ಷ್ಮೀಪತಿಯಾದ, ಸಃ-ಆ ರಾಮದೇವರು, ತೇನ=ಆ ಶರಭಂಗಋಷಿಗಳಿಂದ, ಆದರೇಣ=ಆದರದಿಂದ, ಉಪಹೃತ-ಮಾಡಲ್ಪಟ್ಟ, ಸಾರ್ಘ್ಯ=ಅರ್ಘ್ಯಪಾದ್ಯಾಚಮನೀಯಾದಿಗಳಿಂದ ಸಹಿತವಾದ, ಸಪರ್ಯಯಾ=ಪೂಜೆಯಿಂದ, ಪ್ರೀತಃಸನ್=ಸುಪ್ರೀತರಾಗಿ, ಪರಮಂ=ಮಹತ್ತರವಾದ, ನಿಜಪದ=ಸ್ವಸ್ಥಾನವಾದ ವೈಕುಂಠವನ್ನು, ದದೌ=ಕೊಟ್ಟರು.

ತಾತ್ಪರ್ಯ.—ಆ ದಂಡಕಾರಣ್ಯದಲ್ಲಿ ಶ್ರೀಪರಮಾತ್ಮನ ಸ್ಥಾನವನ್ನು ಅಂದರೆ ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆಯಿಂದ ಕೂಡಿದ ಶರಭಂಗ ಋಷಿಯೆಂಬ ಅತಿ ವೃದ್ಧರಾದ ಒಬ್ಬ ಋಷಿಗಳು ಇದ್ದರು. ಇವರು ಶ್ರೀರಾಮರು ಬಂದದ್ದನ್ನು ನೋಡಿ ಅವರನ್ನು ಅರ್ಘ್ಯಪಾದ್ಯಾಚಮನೀಯಾದಿಗಳಿಂದ ಪರಮ ಆದರಧಿಂದ ಪೂಜಿಸಿದರು. ಪೂಜೆಗೊಂಡ ಶ್ರೀರಾಮರು ಸುಪ್ರೀತರಾಗಿ ಋಷಿಗಳಿಗೆ ತಮ್ಮ ಸ್ಥಾನವಾದ ಪರಮ ವೈಕುಂಠವನ್ನು ಕೊಟ್ಟರೆಂದು ತಾತ್ಪರ್ಯ.

ಅವತಾರಿಕಾ.— ಜ್ಞಾನಿಗಳಾದ ಶರಭಂಗಋಷಿಗಳು ಆತ್ಮಘಾತವನ್ನು ಹೇಗೆ ಮಾಡಿಕೊಂಡರು ? ಆತ್ಮಘಾತವು ದೋಷಯುಕ್ತವಾದುದಷ್ಟೆ, ಇಂತಹ ದೋಷಯುಕ್ತವಾದ ಕರ್ಮಮಾಡಿದ ಈ ಋಷಿಗಳಿಗೆ ಶ್ರೀರಾಮರು ಪ್ರೀತರಾಗಿ ತಮ್ಮ ನಿಜ ಸ್ಥಾನವನ್ನು ಹೇಗೆ ಕೊಟ್ಟರೆಂಬ ಆಕ್ಷೇಪಕ್ಕೆ ಸಮಾಧಾನವನ್ನು ನಿರೂಪಣಮಾಡುತ್ತಾರೆ.—

**ಶ್ಲೋಕ ॥ ಧರ್ಮೋ ಯತೋಸ್ಯ ನಿತಾಂತ ಶಕ್ತಿಃ ಹ್ರಾಸೇ ಸ್ವಧರ್ಮ ಕರಣಸ್ಯ ಹುತಾಶನಾದೌ । ದೇಹಾತ್ಯಯಃ ಸತತಏವ ತನುಂ ನಿಜಾಗ್ನೌ ಸಂತ್ಯಜ್ಯ ರಾಮಪುರತಃ ಪ್ರಯಯೌ ರಮೇಶಂ ॥೧೯॥**

ಅರ್ಥ.— ಯತಃ= ಯಾವ ಕಾರಣದ ದೆಶೆಯಿಂದ, ವನಗಸ್ಯ=ವಾನಪ್ರಸ್ಥಾಶ್ರಮವನ್ನು ಹೊಂದಿರತಕ್ಕ, ಅಸ್ಯ= ಆ ಶರಭಂಗಋಷಿಗಳಿಗೆ, ಸ್ವಧರ್ಮ-ಸ್ವಧರ್ಮೋಚಿತವಾದ ಕರ್ಮಗಳನ್ನು, ಕರಣಸ್ಯ-ಆಚರಣಮಾಡುವುದಕ್ಕೆ, ನಿತಾಂತ ಶಕ್ತಿಃ= ಕೇವಲ ನಿರ್ಗತವಾದ ಶಕ್ತಿಯು, ಹ್ರಾಸೇಸಃ ಲೋಪವಾಗುತ್ತಿರಲಾಗಿ, ಹುತಾಶನಾ ದೌ–ಅಗ್ನಿ ಮತ್ತು ಜಲರಾಶಿಗಳಲ್ಲಿ ದೇಹಾತ್ಯಯಃ= ದೇಹತ್ಯಾಗವು, ಸತತಯೇವ= ಸಹಜವಾದ, ಧರ್ಮಃ= ಧರ್ಮಯೋಗ್ಯವೋ, ತಸ್ಮಾತ್– ಆ ಕಾರಣದ ದೆಶೆಯಿಂದ, ಸಃ– ಆ ಶರಭಂಗಋಷಿಗಳು, ರಾಮಪುರತಃ=ಶ್ರೀರಾಮರ ಪ್ರತ್ಯಕ್ಷ ಸನ್ನಿಧಾನದಲ್ಲಿ, ನಿಜಾಗ್ನೌ= ತಾವು ಉಪಾಸನೆಮಾಡಿಕೊಂಡಿದ್ದ, ಅಗ್ನೌ= ಅಹಿತಾಗ್ನಿಯಲ್ಲಿ, ತನುಂ–ತಮ್ಮ ದೇಹವನ್ನು, ಸಂತ್ಯಜ್ಯ= ತ್ಯಾಗಮಾಡಿ, ಶ್ರೀರಮೇಶಂ= ಲಕ್ಷ್ಮೀಪತಿಯಾದ ಶ್ರೀಪರಮಾತ್ಮನನ್ನು, ಪ್ರಯಯೌ= ಹೊಂದಿದರು.

ತಾತ್ಪರ್ಯ.— ಒಳ್ಳೇಯದು, ಈ ಶರಭಂಗಋಷಿಗಳು ಧರ್ಮಾಧರ್ಮ ವಿಚಾರ ವಿಚಕ್ಷಣರು, ಜ್ಞಾನಿಗಳು. ಇಂತಹವರು ಅಗ್ನಿಪ್ರವೇಶಮಾಡಿ ಹೇಯವಾದ ಆತ್ಮಘಾತವನ್ನು ಏತಕ್ಕೆ ಮಾಡಿಕೊಂಡರು ? ಮತ್ತು ಇಂತಹವರಿಗೆ ಶ್ರೀರಾಮರು ಹೇಗೆ ಪರಮಪದವನ್ನು ಕೊಟ್ಟರು ಎಂಬ ಪೂರ್ವಪಕ್ಷ ಬರುತ್ತದೆ. ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ.— ಈ ಶರಭಂಗಋಷಿಗಳು ವಾನಪ್ರಸ್ಥಾಶ್ರಮಿಗಳು. ವೃದ್ಧತನದಿಂದ ಶರೀರವೆಲ್ಲಾ ಜೀರ್ಣವಾಗಿ ತಮ್ಮ ಆಶ್ರಮೋಚಿತವಾದ ಕರ್ಮಗಳನ್ನು ಮಾಡಲಾರದಷ್ಟು ಶಿಥಿಲಶಕ್ತರಾಗಿದ್ದರು. ಇಂತಹವರು ಅಗ್ನಿಪ್ರವೇಶಮಾಡಿಯಾದರೂ ಅಗಾಧವಾದ ನೀರಿನಪ್ರವೇಶಮಾಡಿಯಾದರೂ ದೇಹತ್ಯಾಗ ಮಾಡತಕ್ಕದ್ದು.

ಸಹಜವಾದುದೆಂದು ಶಾಸ್ತ್ರೋಕ್ತವಾಗಿರುವುದರಿಂದ ಈ ಶರಭಂಗಋಷಿಗಳಿಗೆ ಆತ್ಮಹತ್ಯಾ ಮಾಡಿಕೊಳ್ಳುವದು ನಿಯತವಾದ ಧರ್ಮವಾಗಿದೆ. ಆದುದರಿಂದ ಅವರು ಶ್ರೀರಾಮರ ಪಾದಾರವಿಂದ ಸಾಕ್ಷಾತ್ಸನ್ನಿಧಾನದಲ್ಲಿ ತಾವು ಅನುಷ್ಠಾನ ಮಾಡುತ್ತಿದ್ದ ಆಹಿತಾಗ್ನಿಯಲ್ಲಿ ಪ್ರವೇಶಮಾಡಿ ದೇಹತ್ಯಾಗ ಮಾಡಿದರು. ಇದನ್ನು ನೋಡಿ ಶ್ರೀರಾಮರು ಅವರಿಗೆ ಪರಮಪದವಿ (ಮುಕ್ತಿ) ಯನ್ನು ಕೊಟ್ಟರು.

ವಿಶೇಷಾರ್ಥ.—ವರ್ಣಾಶ್ರಮಿಗಳು ಚಿಕಿತ್ಸೆಗಳಿಗೆ ಅಸಾಧ್ಯವಾದ ರೋಗಾದ್ಯುಪದ್ರವಗಳಿಂದ ಪೀಡಿತರಾಗಿ ಸ್ವಾಶ್ರಮೋಚಿತ ಕರ್ಮಗಳನ್ನು ಮಾಡುವುದಕ್ಕೆ ಯತ್ನವಿಲ್ಲದಂತೆ ಸುತರಾಂ ಅಶಕ್ತರಾದದ್ದೇ ಆದರೆ ಅಂತಹವರು ಆತ್ಮಹತ್ಯಾಮಾಡಿಕೊಳ್ಳಬಹುದೆಂಬ ವಿಷಯದಲ್ಲಿ ಕೆಳಗೆ ವಿವರಿಸಿರುವ ಪ್ರಕಾರವಾಗಿ ಅನೇಕ ಆಧಾರಗಳಿವೆ.—

ಶ್ಲೋಕ ॥ ದುಶ್ಚಿಕಿತ್ಸೈರ್ಮಹಾರೋಗೈ ಪೀಡಿತಸ್ತು ಪುಮಾನಪಿ ।
ಅಸಾಧ್ಯ ವ್ಯಾಧಿನಾ ಯುಕ್ತಃ ಸ್ವವ್ಯಾಪಾರಾ ಕ್ಷಮಃಪುಮಾನ್ ॥
ಪ್ರವಿಶೇತ್ ಜ್ವಲನಂದೀಪ್ತಂ ಕರೋತ್ಯನಶನಂ ತಥಾ ।
ಅಗಾಧೇ ತೋಯರಾಶಿಂಚ ಭೃಗೋಃ ಪತನ ಮೇದವಾ ।
ಗಚ್ಛೇನ್ಮಹಾಪಥಂವಾಪಿ ತುಷಾರಗಿರಿ ಕಥಂರಾತ್ ।
ಪ್ರಯಾಗವಟಶಾಖಾಗ್ರಾತ್ ದೇಹತ್ಯಾಗಂ ಕರೋತಿವಾ ॥
ಉತ್ತಮಾನ್ ಪ್ರಾಪ್ನುಯಾಲ್ಲೋಕಾನ್ ಆತ್ಮಘಾತೀ ಭವೇತ್ಕ್ವಚಿತ್ ।
ಮಹಾಪಾಪಕ್ಷಯಾತ್ ಸ್ವರ್ಗೇ ದಿವ್ಯಾನ್ ಭೋಗಾನ್ ಸಮಶ್ನುತೇ ॥
ಏತೇಷಾಮಧಿಕಾರೋಸ್ತಿ ಸರ್ವೇಷಾಮೇಷು ಸರ್ವದಾ ।
ನರಾಣಾಮಥನಾರೀಣಾಂ ಸರ್ವವರ್ಣೇಷು ಸರ್ವದೇತೀ (ವರಾಹೇ)
ಅಪದಿ ಸರ್ವವರ್ಣಾಶ್ರಮಿಣಾಂ ದೇಹತ್ಯಾಗೋಧರ್ಮಃ ಇತಿಪುರಾಣಗತವಾಕ್ಯಾನಿ ಬಹೂನಿಸಂತಿ । ತಥಾಸ್ಮಿನ್ನರ್ಥೇ ಯಾಜ್ಞವಲ್ಕ್ಯಾದಿ ಸ್ಮೃತಿಷು ಪ್ರಮಾಣಾನಿ ಸಂತಿ ॥

ಅರ್ಥ.— ಯಾವ ಆಶ್ರಮಿಗಳೇ ಆಗಲಿ ಚಿಕಿತ್ಸೆಗೆ ಅಸಾಧ್ಯವಾದ ರೋಗಪೀಡಿತರಾಗಿ ತಮ್ಮ ಆಶ್ರಮೋಚಿತ ಕರ್ಮಗಳನ್ನು ಮಾಡಲು ಸಾಮರ್ಥ್ಯವಿಲ್ಲದೇ ಹೋದರೆ ಅಂಥವರು ಉರಿಯುತ್ತಿರುವ ಅಗ್ನಿಪ್ರವೇಶವಾಗಲೀ ಆಹಾರ ತ್ಯಾಗವನ್ನು ಮಾಡಿಯಾಗಲೀ ಅಥವಾ ಅಗಾಧವಾದ ಜಲರಾಶಿಯಲ್ಲಿ ಬೀಳುವುದಾಗಲೀ, ಬೆಟ್ಟ ಹತ್ತಿ ಧುಮುಕುವದಾಗಲೀ, ಮಹಾರಣ್ಯ ಪಥವನ್ನು ಪ್ರವೇಶಮಾಡುವದಾಗಲೀ ಗಿರಿಗಹ್ವರಗಳಿಂದ ಪಥನವಾಗಲೀ ವಟವೃಕ್ಷಗಳ ರೆಂಬೆಗಳನ್ನು ಹತ್ತಿ ಅಲ್ಲಿಂದ ಬೀಳುವದಾಗಲೀ ಇತ್ಯಾದಿ ರೀತಿಗಳಿಂದ ಪ್ರಾಣತ್ಯಾಗ ಮಾಡಿಕೊಳ್ಳತಕ್ಕದ್ದು. ಹಾಗೆ ಮಾಡಿದವರು ಆತ್ಮಘಾತಿಗಳಾದಾಗ್ಯೂ ಉತ್ತಮವಾದ ಲೋಕಗಳನ್ನು ಹೊಂದಿ ಸ್ವರ್ಗಲೋಕದಲ್ಲಿ ದಿವ್ಯವಾದ ಭೋಗಗಳನ್ನು ಅನುಭವಿಸುತ್ತಾರೆ. ಈ ವಿಷಯದಲ್ಲಿ ಗಂಡಸರಿಗೂ ಹೆಂಗಸರಿಗೂ ಸಮಸ್ತವಾದ ವರ್ಣಾಶ್ರಮಿಗಳಿಗದ ಸರ್ವದಾ ಅಧಿಕಾರವುಂಟು.

ವರ್ಣಾಶ್ರಮಿಯಾದವನು ಜರಾದ್ಯುಪದ್ರವಗಳಿಂದ ತನ್ನ ಸ್ವಧರ್ಮ ಕರ್ಮಗಳನ್ನು ನಿಯಮಿತ ಕಾಲದಲ್ಲಿ ನಡಿಸಲು ಬೇಕಾದಷ್ಟು ಶಕ್ತಿ ಇಲ್ಲದವನಾಗುತ್ತಾನೋ ಆ ಕಾಲದಲ್ಲಿ ತನ್ನಲ್ಲಿ ಅಗ್ನಿ ಸಮಾರೋಪಣ ಮಾಡಿಕೊಂಡು ನನ್ನಲ್ಲಿ ಮನಸ್ಸಿಟ್ಟು ಅಗ್ನಿಯಲ್ಲಿ ಪ್ರವೇಶಮಾಡತಕ್ಕದ್ದೆಂದು ಭಾಗವತ ಏಕಾದಶ ಸ್ಕಂಧದಲ್ಲಿ ಪರಮಾತ್ಮನಿಂದ ಉಕ್ತವಾಗಿದೆ. ಮತ್ತು ಶ್ಲೋಕ || ಅನುಷ್ಠಾನಾ ಸಮರ್ಥಸ್ಯ ವಾನಪ್ರಸ್ಥಸ್ಯ ಜೀರ್ಯತಃ | ಜಲಾನಶನಭಂಸ್ವಗ್ನಿ ಮಹಾ ಪ್ರಸ್ಥಾನ ಮಿಷ್ಯತೇ ||ಇತಿ ವರಾಹೆ||

ವಾರ್ಧಿಕ್ಯಾದಿಗಳಿಂದ ಜೀರ್ಣನಾದ ವಾನಪ್ರಸ್ಥಾಶ್ರಮಿಗೆ ಅನ್ನಾಹಾರ ವಿಸರ್ಜನ, ಅಗ್ನಿಪ್ರವೇಶ, ಇವುಗಳಿಂದ ದೇಹತ್ಯಾಗ ಮಾಡತಕ್ಕದ್ದೇ ಮಹಾಪ್ರಸ್ಥಾನವೆಂದೆನಿಸಿಕೊಳ್ಳುತ್ತದೆ, ಯೆಂದು ವರಾಹಪುರಾಣದಲ್ಲಿ ಹೇಳಲ್ಪಟ್ಟಿದೆ. ಹೀಗಿರುವುದರಿಂದ ಶರಭಂಗರಿಗೆ ಅಗ್ನಿಪ್ರವೇಶದಿಂದ ದೇಹತ್ಯಾಗವು ವಿಹಿತವಾದ ಧರ್ಮವಾಯಿತು. ಇದನ್ನು ತಿಳಿದ ಜ್ಞಾನಿಯಾದ ಶರಭಂಗರು ರಾಮರ ಪಾದಸನ್ನಿಧಾನದಲ್ಲಿಯೇ ಶ್ರೀರಾಮರಲ್ಲಿ

ಏಕಾಗ್ರಚಿತ್ತರಾಗಿ ಅಗ್ನಿಪ್ರವೇಶಮಾಡಿ ಪ್ರಾಣತ್ಯಾಗಮಾಡಿದರು. ಈ ಕಾರ್ಯವು ರಾಮರ ಚಿತ್ತಕ್ಕೆ ಸಮಂಜಸವಾಗಿದ್ದುದರಿಂದ ದೂಷ್ಯವಾದ ಆತ್ಮಘಾತ ಮಾಡಿಕೊಂಡ ಪಾಪ ಪರಿಹಾರಮಾಡಿ ಪರಮಪದವನ್ನು ದಯಪಾಲಿಸಿದರು. ಶರಭಂಗರು ಶ್ರೀಪರಮಾತ್ಮನನ್ನು ಹೊಂದಿದರೆಂದು ಭಾವವು.

**ಶ್ಲೋಕ || ರಾಮೋಽಪಿ ತತ್ರ ದದೃಶೇ ಧನದಸ್ಯಶಾಪಾದ್ಗಂಧರ್ವ ಉರ್ವಶಿರತೇ ರಥಯಾತುಧಾನೀಂ | ಪ್ರಾಪ್ತಂದಶಾಂಸಪದಿ ತುಂಬರು ನಾಮಧೇಯಂ ನಾಮ್ನಾ ವಿರಾಧಮಪಿ ಶರ್ವವರಾದವಧ್ಯಂ ||೨೦||**

ಅರ್ಥ.—ತತ್ರ=ಆ ದಂಡಕಾರಣ್ಯದಲ್ಲಿ, ರಾಮೋಽಪಿ-ಶ್ರೀರಾಮದೇವರು, ಉರ್ವಶಿರತೇಃ=ಊರ್ವಶಿಯಲ್ಲಿ ಆಸಕ್ತರಾದಕಾರಣ, ಧನದಸ್ಯ-ಕುಬೇರನ, ಶಾಪಾತ್=ಶಾಪದಿಂದ, ಸಪದಿ=ತಕ್ಷಣದಲ್ಲಿಯೇ, ಯಾತುಧಾನೀಂದಶಾಂ=ವಿರಾಧನೆಂಬ ರಾಕ್ಷಸನ ಜನ್ಮವನ್ನು, ಪ್ರಾಪ್ತಂ = ಹೊಂದಿ, ತುಂಬುರುನಾಮಧೇಯಂ=ತುಂಬರುನಾಮಕನಾದ, ಗಂಧರ್ವಂ-ಗಂಧರ್ವನನ್ನು, ಅಥ=ರಾಕ್ಷಸನ ಜನ್ಮ ಪ್ರಾಪ್ತವಾದನಂತರ, ಶರ್ವವರಾತ್=ಋದ್ರದೇವರ ವರಪ್ರಸಾದದಿಂದ, ಅವಧ್ಯಃ=ಮರಣರಹಿತನಾದ, ವಿರಾಧಮಪಿ=ವಿರಾಧನೆಂಬ, ನಾಮ್ನಾ=ಹೆಸರಿನ ರಾಕ್ಷಸನನ್ನು, ದದೃಶೇ=ನೋಡಿದರು.

ತಾತ್ಪರ್ಯ.—ಊರ್ವಶಿಯಲ್ಲಿ ಆಸಕ್ತನಾದಕಾರಣ ಕುಭೇರನಿಂದ ವಿರಾದನೆಂಬ ರಾಕ್ಷಸನ ಜನ್ಮವನ್ನು ಹೊಂದು ಎಂದು ಶಾಪವನು ಪಡೆದು ಆ ಜನ್ಮದಲ್ಲಿ ಋದ್ರದೇವರಿಂದ ಅವಧ್ಯನಾಗೆಂದು ವರವನ್ನು ಪಡೆದಿದ್ದ ತುಂಬರು ಎಂಬ ಗಂಧರ್ವನನ್ನು ಶ್ರೀರಾಮರು ನೋಡಿದರು.

**ಶ್ಲೋಕ || ಭಂಕ್ತ್ವಾಸ್ಯ ಬಾಹುಯುಗಳಂ ಬಿಲಗಂ ಚಕಾರ ಸಂಮಾನಯನ್ನವಚನಮಂಬುಜ ಜನ್ಮನೋಽಸೌ | ಪ್ರಾದಾಚ್ಚ ತಸ್ಯಸುಗತಿಂ ನಿಜಗಾಯಕಸ್ಯ ಭಕ್ಷ್ಯಾರ್ಥಮಂಸಕಮಿತೋಽಪಿ ಸಹಾನುಜೇನ ||೨೧||**

ಅರ್ಥ.—ಅಸೌ=ಈ ವಿರಾಧನನ್ನು ಕಂಡ ಶ್ರೀರಾಮದೇವರು, ಅಸ್ಯ ಅವನ, ಬಾಹುಯುಗಳಂ=ಎರಡು ಭುಜಗಳನ್ನೂ, ಭಂಕ್ತ್ವಾ-ಕತ್ತರಿಸಿ,

ಬಿಲಗಂ=ಬಿಲದಲ್ಲಿರತಕ್ಕವನಾಗಿ. ಚಕಾರ=ಮಾಡಿದರು. ಸಃ=ಈ ವಿರಾಧನು, ಅನುಜೇನಸಹ=ತಮ್ಮನಿಂದ ಸಹಿತನಾದ ತನ್ನನ್ನು, ಭಕ್ಷಾರ್ಥಂ=ತಿಂದುಬಿಡುವುದಕ್ಕಾಗಿ, ಇತೋಪಿ=ಬಂದಿದ್ದಾಗ್ಯೂ, ಅಂಬುಜ-ಬ್ರಹ್ಮದೇವರ ವಚನಂ=ವಾಕ್ಯವನ್ನು ( ವರವನ್ನು ) ಸಸ್ಮಾನಯಾಂಚಕಾರ=ಗೌರವಿಸಿದವರಾಗಿ, ಅಸೌ-ಈ ರಾಮದೇವರು, ನಿಜಗಾಯಕಸ್ಯ=ತನ್ನ ಗುಣಗಳನ್ನು ಹೊಗಳತಕ್ಕ, ತಸ್ಯ=ಆ ವಿರಾಧನಾಗಿದ್ದ ತುಂಬರು ನಾಮಕ ಗಂಧರ್ವನಿಗೆ, ಸುಗತಿಂಚ=ಸದ್ಗತಿಯನ್ನೇ, ಪ್ರದಾತ್=ಕೊಟ್ಟರು.

ತಾತ್ಪರ್ಯ.—ಅನಂತರ ಶ್ರೀರಾಮರು ಈ ವಿರಾಧನ ಭುಜಗಳನ್ನು ಕತ್ತರಿಸಿ ಅವನನ್ನು ಭೂಮಿಯ ಹೋರಿನಲ್ಲಿ ಸೇರಿಸಿಬಿಟ್ಟರು. ಅನಂತರ ರಾಮರು ತಮ್ಮನಿಂದ ಕೂಡಿದ ತನ್ನನ್ನು ತಿಂದುಬಿಡುವುದಕ್ಕಾಗಿ ಬಂದಿದ್ದಾಗ್ಯೂ ಬ್ರಹ್ಮದೇವರ ವರವನ್ನು ಗೌರವಿಸಿ ತಮ್ಮ ಗುಣ ಕಥನ ಮಾಡತಕ್ಕ ಈ ತುಂಬರು ನಾಮಕ ಗಂಧರ್ವನಿಗೆ ಸದ್ಗತಿಯನ್ನೇ ಕೊಟ್ಟರೆಂದು ತಾತ್ಪರ್ಯ

**ಶ್ಲೋಕ॥ ಪ್ರೀತಿಂವಿಧಿತ್ಸುರಗಮದ್ಭವನಂ ನಿಜಸ್ಯ ಕುಂಭೋದ್ಭವಸ್ಯ ಪರಮಾದರತೋಽಮುನಾಚ ॥ ಸಂಪೂಜಿತೋ ಧನುರನೇನ ಗೃಹೀತಮಿಂದ್ರಾತ್‌।ಶಾರ್ಙ್ಗಂತದಾದಿ।ಪುರುಷೋ ನಿಜಮಾಜಹಾರ ॥೨೨॥**

ಅರ್ಥ.—ಆದಿಪುರುಷಃ-ಪುರಾಣಪುರುಷರಾದ ಶ್ರೀರಾಮದೇವರು, ನಿಜಸ್ಯ-ತನ್ನ ಭಕ್ತರಾದ ಅಗಸ್ತ್ಯರಿಗೆ, ಪ್ರೀತಿಂ-ಪ್ರೀತಿಯನ್ನು, ವಿಧಿತ್ಸುಃ=ಮಾಡಬೇಕೆಂಬ ಇಚ್ಛೆಯುಳ್ಳ, ರಾಮಃ=ರಾಮದೇವರು, ಕುಂಭೋದ್ಭವಸ್ಯ=ಕುಂಭದಲ್ಲಿ ಉತ್ಪನ್ನರಾದ ಅಗಸ್ತ್ಯಋಷಿಗಳ, ಭವನಂಪ್ರತಿ-ಆಶ್ರಮವನ್ನು ಕುರಿತು, ಅಗಾತ್-ಬಂದು, ಅತ್ರ=ಅಲ್ಲಿ, ಅಮುನಾಚ=ಈ ಅಗಸ್ತ್ಯರಿಂದ, ಪರಮಾದರತಃ=ಉತ್ತಮವಾದ ಭಕ್ತಿಯಿಂದ, ಸಂಪೂಜಿತಃಸನ್=ಪೂಜೆಗೊಂಡವರಾಗಿ, ಅನೇನ-ಈ ಅಗಸ್ತ್ಯರಿಂದ, ಇಂದ್ರಾತ್-ಇಂದ್ರನಿಂದ, ಗೃಹೀತಂ=ಅಗಸ್ತ್ಯರಲ್ಲಿ ಇಡಲ್ಪಟ್ಟಿದ್ದ, ಶಾರ್ಙ್ಗಂ=ಶಾರ್ಙ್ಗವೆಂಬ ನಿಜಂ=ಸ್ವಕೀಯವಾದ, ಧನುಃ=ಧನುಸ್ಸನ್ನು, ಆಜಹಾರ-ಸ್ವೀಕರಿಸಿದರು.

ತಾತ್ಪರ್ಯ.—ತನ್ನ ಭಕ್ತರಾದ ಕುಂಭೋದ್ಭವರಾದ ಅಗಸ್ತ್ಯಋಷಿಗಳಿಗೆ ಪ್ರೀತಿಮಾಡುವುದಕ್ಕೋಸ್ಕರ ಅವರ ಆಶ್ರಮವನ್ನು ಕುರಿತು ಶ್ರೀರಾಮರು ಬಂದರು. ಅಲ್ಲಿ ಅವರಿಂದ ಪರಮ ಭಕ್ತಿಪೂರ್ವಕವಾಗಿ ಪೂಜೆಗೊಂಡವರಾಗಿ ಇಂದ್ರನಿಂದ ಅವರಲ್ಲಿಡಲ್ಪಟ್ಟಿದ್ದ ಸ್ವಕೀಯವಾದ ಶಾರ್ಙಧನುಸ್ಸನ್ನು ಪುರಾಣ ಪುರುಷರಾದ ಶ್ರೀರಾಮದೇವರು ಅಂಗೀಕಾರಪೂರ್ವಕ ಹೊಂದಿದರು.

ಶ್ಲೋಕ॥ ಆತ್ಮಾರ್ಥಮೇವಹಿ ಪುರಾ ಹರಿಣಾ ಪ್ರದತ್ತ ಮಿಂದ್ರೇ ತದಿಂದ್ರ ಉತ ರಾಮಕರಾರ್ಥಮೇವ । ಪ್ರಾದಾದಗಸ್ತ್ಯಮುನಯೇ ತದವಾಪ್ಯ ರಾಮೋ ರಕ್ಷನ್ನೃಷೀ ನವಸದೇವ ಸದಂಡಕೇಷು ॥೨೩॥

ಅರ್ಥ.—ಪುರಾ=ಪೂರ್ವದಲ್ಲಿ, ಈ ಧನಸ್ಸು, ಹರಿಣೈವ-ಶ್ರೀಪರಮಾತ್ಮನಿಂದಲೇ, ಇಂದ್ರೇ=ಇಂದ್ರನಲ್ಲಿ, ಆತ್ಮಾರ್ಥಂ=ತನ್ನ ಸ್ವಂತಕ್ಕೋಸ್ಕರವಾಗಿ, ಪ್ರದತ್ತಂ=ಕೊಡಲ್ಪಟ್ಟಿತು. ಉತ=ಮತ್ತು, ಇಂದ್ರ-ಇಂದ್ರನು ತದೇವಧನುಃ=ಅದೇ ಧನುಸ್ಸನ್ನೇ, ರಾಮಕರಾರ್ಥಮೇವ=ರಾಮರ ಕೈಯಲ್ಲಿ ಧರಿಸುವುದಕ್ಕೋಸ್ಕರವೇ, ಅಗಸ್ತ್ಯಮುನಯೇ-ಅಗಸ್ತ್ಯಋಷಿಗಳಿಗೋಸ್ಕರ, ಪ್ರದಾತ್=ಕೊಟ್ಟರು. ತತ್=ಆ ಧನುಸ್ಸನ್ನು, ಸಃ=ರಾಮದೇವರು ಅವಾಪ್ಯ=ಅಗಸ್ತ್ಯರಿಂದ ಹೊಂದಿ, ದಂಡಕೇಷು-ದಂಡಕಾರಣ್ಯದಲ್ಲಿ, ಋಷೀ-ಋಷಿಗಳನ್ನು, ರಕ್ಷನ್ಸನ್=ಕಾಪಾಡುವುದಕ್ಕಾಗಿ, ಅವಸತ್=ಅಲ್ಲಿಯೇ ವಾಸಮಾಡಿದರು.

ತಾತ್ಪರ್ಯ.—ಪೂರ್ವದಲ್ಲಿ ಶ್ರೀಪರಮಾತ್ಮನು ತನ್ನ ಶಾರ್ಙಧನಸ್ಸನ್ನು ನಾನು ರಾಮಾವತಾರಮಾಡಿದ ಕಾಲದಲ್ಲಿ ನನಗೆ ಕೊಡೆಂದು ಹೇಳಿ ಇಂದ್ರನ ವಶಕ್ಕೆ ಕೊಟ್ಟಿದ್ದನು. ಆ ಇಂದ್ರದೇವರು ಈ ಧನುಸ್ಸನ್ನು ಭೂಲೋಕದಲ್ಲಿ ವಾಸಮಾಡುತ್ತಿರುವ ಅಗಸ್ತ್ಯಋಷಿಗಳ ವಶಕ್ಕೆ ಕೊಟ್ಟರು. ಈ ಪ್ರಕಾರ ಶ್ರೀರಾಮರು ದಂಡಕಾರಣ್ಯಕ್ಕೆ ಬಂದು ಆಶ್ರಮವನ್ನು ಪವಿತ್ರಮಾಡಿದರು. ಅಲ್ಲಿ ಅಗಸ್ತ್ಯರು ಶ್ರೀರಾಮರನ್ನು ಬಹು ಭಕ್ತಿಪೂರ್ವಕವಾಗಿ

ಪೂಜೆಮಾಡಿ ಇಂದ್ರನಿಂದ ತಮ್ಮಲ್ಲಿಡಲ್ಪಟ್ಟಿದ್ದ ಧನುಸ್ಸನ್ನು ಶ್ರೀರಾಮರಿಗೆ ಕೊಟ್ಟರು. ಶ್ರೀರಾಮರು ತಮ್ಮ ಸ್ವಂತವಾದ ಈ ಧನುಸ್ಸನ್ನು ಸ್ವೀಕಾರ ಮಾಡಿ ಆ ದಂಡಕಾರಣ್ಯವಾಸಿಗಳಾದ ಋಷಿಗಳನ್ನು ರಾಕ್ಷಸರ ಬಾಧೆಯಿಂದ ರಕ್ಷಣೆಮಾಡಿ ಅಲ್ಲಿಯೇ ವಾಸಮಾಡಿಕೊಂಡಿದ್ದರು.

ಶ್ಲೋಕ ॥ ಕಾಲೇತದೈವ ಖರದೂಷಣಯೋರ್ಬಲೇನ ರಕ್ಷಸ್ಸ್ವಸಾ ಪತಿನಿಮಾರ್ಗಣ ತತ್ಪರಾಸೀತ್ । ವ್ಯಾಪಾದಿತೇ ನಿಜಪತೌಹಿ ದಶಾನನೇನ ಪ್ರಾಮಾದಿಕೇನ ವಿಧಿನಾಭಿ ಸಸಾರ ರಾಮಂ ॥೨೪॥

ಅರ್ಥ.— ರಕ್ಷಸ್ಸ್ವಸಾ= ರಾಕ್ಷಸನಾದ ರಾವಣನಿಗೆ ತಂಗಿಯಾದ ಶೂರ್ಪನಖಿಯೆಂಬ ರಾಕ್ಷಸ ಸ್ತ್ರೀಯು, ನಿಜಪತೌ= ತನ್ನ ಪತಿಯು, ದಶಾನನೇನ= ದಶಮುಖನಾದ ರಾವಣನಿಂದ, ಪ್ರಾಮಾದಿಕೇನ – ಪ್ರಮಾದವಶಾತ್ (ತಿಳುವಳಿಕೆಯಿಲ್ಲದೆ) ವ್ಯಾಪಾದಿತೇಸದಿ= ಮರಣವನ್ನು ಹೊಂದಲಾಗಿ, ಖರದೂಷಣಯೋಃ= ಖರದೂಷಣಾಖ್ಯ ರಾಕ್ಷಸರ, ಬಲೇನ = ಸಹಾಯದಿಂದ, ಪತನಿಮಾರ್ಗಣತತ್ಪರಾಸತೀ= ತನ್ನ ಗಂಡನನ್ನು, ನಿಮಾರ್ಗಣ= ಹುಡುಕುವ ಕಾರ್ಯದಲ್ಲಿ, ತತ್ಪರಾಸತೀ= ಆಸಕ್ತಿಯುಳ್ಳವಳಾಗಿ, ಆಸೀತ್= ಆದಳು. ತದೈವಕಾಲೇ= ಅದೇ ಕಾಲದಲ್ಲಿಯೇ, ಈ ರಾಕ್ಷಸಿಯು, ವಿಧಿನಾ= ದೈವವಶಾತ್, ರಾಮಂ– ದಂಡಕಾರಣ್ಯದಲ್ಲಿ ವಾಸವಾಗಿದ್ದ ರಾಮದೇವರನ್ನು ಸಮೀಪಕ್ಕೆ, ಅಭಿಸಸಾರ– ಗೆತ್ವಾಗತ್ವಾ ಬಂದು ಸೇರಿದಳು.

ತಾತ್ಪರ್ಯ.— ರಾವಣನಿಗೆ ತಂಗಿಯಾದ ಶೂರ್ಪನಖಿಯೆಂಬ ರಾಕ್ಷಸಸ್ತ್ರೀಯ ಗಂಡನನ್ನು ರಾವಣನು ಒಂದಾನೊಂದು ಯುದ್ಧದಲ್ಲಿ ಸ್ವಕೀಯ ಪರಕೀಯರೆಂಬ ವಿವೇಕವಿಲ್ಲದೆ ಕೊಂದುಬಿಟ್ಟನು. ಅನಂತರ ರಾವಣನ ಆಜ್ಞಾಪ್ರಕಾರ ತಾನು ಯಾರನ್ನಾದರೂ ಪತಿಯನ್ನಾಗಿ ಮಾಡಿಕೊಳ್ಳಬೇಕೆಂಬ ಇಚ್ಛೆಯಿಂದ ಆ ದಂಡಕಾರಣ್ಯದಲ್ಲಿ ತನಗೆ ಸಹೋದರರಾದ ಖರದೂಷಣರೆಂಬ ರಾಕ್ಷಸರ ಬಲದಿಂದ ಪತಿಯನ್ನು ಅನ್ವೇಷಣ ಮಾಡುತ್ತಾ ಸಂಚಾರಮಾಡುವ ಕಾಲದಲ್ಲಿ ಗತ್ವಾಗತ್ವಾ ದಂಡಕಾರಣ್ಯದಲ್ಲಿ ವಾಸವಾಗಿದ್ದ

ಶ್ರೀರಾಮುನನ್ನು ಕಂಡಳು. ಈ ವಿಷಯದಲ್ಲಿ ಆಧಾರ ಉಕ್ತವಾಗಿದೆ. ಏನೆಂದರೆ:— ಶ್ಲೋಕ॥ ನಾಪಗಚ್ಛಾಮಿ ಯುದ್ಧೇಷು ಸ್ವಾಃ ಪರಾ ಇತಿ ಶೋಭನೇ। ತೇನಾಯಂ ನಿಹತಃ ಸಂಖ್ಯೇ ಮಯಾ ಭರ್ತಾ ಪ್ರಭುಸ್ತವ॥ ಅಂದರೆ:—ರಾವಣನು ತನ್ನ ತಂಗೀಯಾದ ಶೂರ್ಪನಖಿಯನ್ನು ಕುರಿತು ಹೇಳುತ್ತಾನೆ, ಹೇ! ಮಂಗಳೇ ಯುದ್ಧದಲ್ಲಿ ಸ್ವಕೀಯರು ಪರಕೀಯರು ಎಂಬ ವಿವೇಚನವಿಲ್ಲದಿರುವ ಕಾರಣ ಪ್ರಭುವಾದ ನಿನ್ನ ಪತಿಯು ನನ್ನಿಂದ ಹತನಾದನು. ಎಂದು ರಾವಣನು ತನ್ನ ತಂಗಿಗೆಸಮಾಧಾನವನ್ನು ಹೇಳಿಂದನೆದುಅರ್ಥವಾದ ರಾಮಾಯಣದಲ್ಲಿಉಕ್ತವಾಗಿದೆ ಶ್ಲೋಕ॥ ಸಾನುಜ್ಞಯೈವ ರಜನೀಚರ ಭರ್ತುರುಗ್ರಾ ಭ್ರಾತೃದ್ವಯೇನಸಹಿ

ತಾವನಮಾವಸಂತೀ ರಾಮಂ ಸಮೇತ್ಯ ಭವಮೇಪತಿರಿ ತ್ಯವೋ

ಚ ಭಾನುಂಯಥಾತಮ ಉಪೇತ್ಯ ಸಯೋಗಕಾಮಂ ॥೫॥

ಅರ್ಥ:—ರಜನೀಚರಭರ್ತುಃ-ರಜನೀಚರ-ರಾಕ್ಷಸರಿಗೆ, ಭರ್ತುಃ ಪ್ರಭುವಾದ ರಾವಣನ, ಅನುಜ್ಞಯೈವ-ಅಪ್ಪಣೆಯಿಂದ, ಉಗ್ರಾ-ಕ್ರೂರ ಸ್ವರೂಪಳಾದ, ಸಾ-ಆ ಶೂರ್ಪನಖಿಯು, ಭ್ರಾತೃದ್ವಯೇನ-ಖರದೂಷಣಾಖ್ಯ ಸಹೋದರರ ದ್ವಯರಿಂದ, ಸಹಿತಾ-ಸಮೇತಳಾಗಿ, ವನಂ-ದಂಡಕಾರಣ್ಯದಲ್ಲಿ, ಆವಸಂತೀ-ಸತೀ-ವಾಸಮಾಡಿಕೊಂಡಿರತಕ್ಕವಳಾಗಿದ್ದು, ಸಯೋಗಕಾಮಂ-ಸಂಯೋಗಾಪೇಕ್ಷೆಯುಳ್ಳ, ತಮಃ ಅಂಧಕಾರವು, ಭಾನುಂ-ಸೂರ್ಯನನ್ನು, ಯಥಾ-ಯಾವ ಪ್ರಕಾರವಾಗಿ, ಉಪೇತ್ಯ-ಹೊಂದಬೇಕೆಂದಪೇಕ್ಷಿಸುತ್ತದೆಯೋ, ತಥಾ-ಅದೇಪ್ರಕಾರವಾಗಿ ಗಂಡನನ್ನು ಅನ್ವೇಷಣವಾಡುತ್ತಿರುವ ಈ ಶೂರ್ಪನಖಿಯು, ರಾಮಂ-ಶ್ರೀರಾಮರನ್ನು, ಸಮೇತ್ಯ-ಕುರಿತು ತ್ವಂ-ನೀನು, ಮೇ-ನನಗೆ, ಪತಿಃ-ಪತಿಯು, ಭವ-ಆಗು, ಇತಿ-ಹೀಗೆಂದು, ಅವೋಚತ್-ಹೇಳಿದಳು.

ತಾತ್ಪರ್ಯ:—ಉಗ್ರ ಸ್ವಭಾವವುಳ್ಳ ಶೂರ್ಪನಖಿಯು ರಾವಣನ ಅಪ್ಪಣೆಯ ಪ್ರಕಾರ ಖರ ಮತ್ತು ದೂಷಣರೆಂಬ ಸಹೋದರರಿಂದ ಯುಕ್ತಳಾಗಿ ದಂಡಕಾರಣ್ಯದಲ್ಲಿ ವಾಸಮಾಡಿಕೊಂಡಿದ್ದನು. ಸಂಯೋಗಾಪೇಕ್ಷೆಯುಳ್ಳ ಅಂಧಕಾರವು ಸೂರ್ಯನಸಂಬಂಧವನ್ನು ಅಪೇಕ್ಷಿಸಿ ಆತನ ಸಮೀಪಕ್ಕೆ ಬಂದಂತೆ ಅವಳು ಶ್ರೀರಾಮರ ಸಮೀಪಕ್ಕೆ ಬಂದು ತನಗೆ ಪತಿಯಾಗಬೇಕೆಂದು ಅವರನ್ನು ಪ್ರಾರ್ಥಿಸಿದಳು.

ವಿಶೇಷಾರ್ಥ:—ಶೂರ್ಪನಖಿಯು ಅರಣ್ಯ ವಾಸಮಾಡಿಕೊಂಡಿರುವದಕ್ಕೇನು ಕಾರಣವೆಂದರೆ—ಶೂರ್ಪನಖಿಯು ರಾವಣನ ತಂಗಿಯು ಮತ್ತು ಇವಳಿಗೆ ಇತರ ಸಹೋದರರೂ ಉಂಟು. ಆಕೆಯ ಪತಿಯನ್ನು ರಾವಣನು ಯುದ್ಧದಲ್ಲಿ ಸ್ವಕೀಯನೆಂದು ತಿಳಿಯದೆ ಸಂಹಾರಮಾಡಿದನು. ಅನಂತರ ಈ ರಾಕ್ಷಸಿಯು ರಾವಣನಲ್ಲಿ ಮೊರೆಯಿಟ್ಟಳು. ಅವಳನ್ನು ಕುರಿತು ರಾವಣನು ಹೇಳುತ್ತಾನೆ:—ನಿನಗಿಬ್ಬರು ಅಣ್ಣತಂಮ್ಮಂದಿರಿದ್ದಾರೆ, ಅವರಲ್ಲಿ ಖರನೆಂಬುವನು ನಿನ್ನ ಸಹೋದರನು, ಮತ್ತೊಬ್ಬನಾದ ದೂಷಣನೆಂಬುವನು ನಿನ್ನ ತಾಯಿಯ ತಂಗಿಯಲ್ಲಿ ಹುಟ್ಟಿದ ಅಣ್ಣನು, ಅವನು ನೀನು ಹೇಳಿದುದೆಲ್ಲವನ್ನೂ ಕೇಳಿ ನಿನ್ನ ಇಷ್ಟ ಪ್ರಕಾರ ಕಾರ್ಯಗಳನ್ನು ನೆರವೇರಿಸಿ ಮುಂದಕ್ಕೆ ನಿನಗೆ ಸುಖವನ್ನುಂಟುಮಾಡುತ್ತಾನೆ. ನೀನು ದಂಡಕಾರಣ್ಯದಲ್ಲಿದ್ದು ನಿನ್ನ ಸಹೋದರರ ಸಹಾಯದಿಂದ ಪತ್ಯನ್ವೇಷಣ ಮಾಡಿಕೊಳ್ಳುವುದಾಗಿ ಅನುಜ್ಞೆಯನ್ನು ಕೊಟ್ಟನು.

ಶ್ಲೋ॥ ತಾಂತತ್ರ ಹಾಸ್ಯಕಥಯಾ ಜನಕಾಸುತಾಗ್ರೇ ಗಚ್ಛಾನುಜಂ ಮ ಇಹ

ನೇತಿ ವಚಃಸ ಉಕ್ತ್ವಾ। ತೇನೈವ ದುಷ್ಟ ಚರಿತಾಂಹಿ ವಿಕರ್ಣನಾ

ಸಾಂ ಚಕ್ರೇ ಸಮಸ್ತರಜನೀಚರ ನಾಶಹೇತೋಃ ॥೨೬॥

ಅರ್ಥ:—ತತ್ರ-ಆ ದಂಡಕಾರಣ್ಯದಲ್ಲಿ, ಸಃ-ರಾಮದೇವರು, ಜನಕ-ಜನಕರಾಜನ, ಅಸುತಾ-ಅಯೋನಿಜ ಪುತ್ರಿಯಾದ ಸೀತಾದೇವಿಯರ, ಅಗ್ರೇ-ಸಮಕ್ಷಮದಲ್ಲಿ, ತಾಂಪ್ರತಿ-ಶೂರ್ಪನಖಿಯನ್ನು ಕುರಿತು ಹಾಸ್ಯಕಥಯಾ-ಉಪಹಾಸ್ಯವಾದ ಮಾತುಗಳಿಂದ, ಮೇ-ನನ್ನ, ಅನುಜಂ-ತಮ್ಮನಾದ ಲಕ್ಷ್ಮಣನ ಸಮೀಪಕ್ಕೆ, ಗಚ್ಛ-ಹೋಗು, ಇಹ-ನನ್ನ ವಿಷಯದಲ್ಲಿ, ನ-ಅವಕಾಶವಿಲ್ಲವು. ಇತಿ-ಹೀಗೆಂದು, ಉಕ್ತ್ವಾ-ಹೇಳಿ, ತೇನೈವಹಿ-ಆ ಲಕ್ಷ್ಮಣರಿಂದಲೇನೇ, ದುಷ್ಟಚರಿತಾಂ-ದುಷ್ಟವ್ಯಾಪಾರ ಉಳ್ಳ, ತಾಂ-ಆ ಶೂರ್ಪನಖಿಯನ್ನು, ಸಮಸ್ತರಜನೀಚರನಾಶಹೇತೋಃ-ಸಮಸ್ತರಾದ, ರಜನೀಚರ-ರಾಕ್ಷಸರುಗಳ, ನಾಶ-ನಾಶಕ್ಕೆ, ಹೇತೋಃ-ನಿಮಿತ್ತವಾಗಿ ವಿಕರ್ಣನಾಸಾಂ-ಹೋಗಲ್ಪಟ್ಟ ಕಿವಿ ಮತ್ತು ಮೂಗುಳ್ಳವಳನ್ನಾಗಿ, ಚಕ್ರೇ-ಮಾಡಿದರು.

ತಾತ್ಪರ್ಯ:—ಶ್ರೀರಾಮದೇವರು ತನ್ನನ್ನು ಪತಿಯಾಗೆಂದು ಕೇಳಿದ ಶೂರ್ಪನಖಿಯನ್ನು ಕುರಿತು ಜನಕರಾಜನಿಗೆ ಅಯೋನಿಜ ಪುತ್ರಿಯಾದ ಸೀತಾದೇವಿಯರ ಸಮಕ್ಷಮದಲ್ಲಿಯೇ ಇವಳನ್ನು ಕುರಿತು ನಾನು ನಿನಗೆ ಪತಿಯಾಗುವ ವಿಷಯದಲ್ಲಿ ಆಶೆಯಿಡಬೇಡವೆಂದು ಉಪಹಾಸರೂಪವಾದ ಮಾತುಗಳನ್ನು ಹೇಳಿ, ಅನಂತರ ತಮ್ಮನಾದ ಲಕ್ಷ್ಮಣನ ಬಳಿಗೆ ಹೋಗು, ಅಲ್ಲಿ ನಿನ್ನ ಕಾರ್ಯವಾಗುತ್ತದೆಯೆಂದು ಹೇಳಿ ಲಕ್ಷ್ಮಣನ ಬಳಿಗೆ ಇವಳನ್ನು ಕಳುಹಿಸಿ, ಆ ಲಕ್ಷ್ಮಣನಿಂದಲೇ ದುಶ್ಚರಿತಳಾದ ಶೂರ್ಪನಖಿಯನ್ನು ಸಮಸ್ತ ರಾಕ್ಷಸ ಕುಲ ನಾಶಕ್ಕೆ ಕಾರಣಕ್ಕೋಸ್ಕರವಾಗಿ ಕಿವಿ ಮೂಗು ಇಲ್ಲದವಳನ್ನಾಗಿ ಮಾಡಿಸಿದರೆಂದು ತಾತ್ಪರ್ಯ.

ವಿಶೇಷಾರ್ಥ:—ಮೇಲಿನ ಶ್ಲೋಕದಲ್ಲಿ ಜನಕಸ್ಯ, ಅಸುತಾ, ಅಗ್ರೇ ಎಂದು ಪದ ಮಾಡಿದೆ ಜನಕಸ್ಯ "ಅಸುತಾ" ಅಂದರೆ ಅಯೋನಿಜ ಪುತ್ರಿಯೆಂದರ್ಥವು ಅಯೋನಿಜಾತು ಯಾನಾರೀ ಸಾಸುತೇತ್ಯಭಿಧೀಯತೇ ಇತ್ಯಭಿಧಾನಾತ್ ಎಂದು ಅಭಿಧಾನ ನಿಘಂಟು ಈ ಆಧಾರದಿಂದ ಅಸುತಾ ಎಂದರೆ ಅಯೋನಿಜಳೆಂದರ್ಥವು

ಶ್ಲೋ|| ತತ್ಪ್ರೇರಿತಾಃ ಸಪದಿ ಭೀಮಬಲಾ ಪ್ರಯಾತಾಂ ತಸ್ಯಾಃ ಖರತ್ರಿ
ಶಿರದೂಷಣ ಮುಖ್ಯಬಂಧೂನ್| ಜಘ್ನೇಚತುರ್ದಶ ಸಹಸ್ರಮವಾ
ರಣೀಯ ಕೋದಂಡಪಾಣಿ ರಖಿಲಸ್ಯ ಸುಖಂವಿಧಾತುಂ ||೨೭||

ಅರ್ಥ:—ಅವಾರಣೀಯ ಕೋದಂಡಪಾಣಿ-ಅವಾರಣೀಯ-ನಿವಾರಣ ಮಾಡುವುದಕ್ಕೆ ಅಸಾಧ್ಯವಾದ, ಕೋದಂಡ-ಕೋದಂಡವೆಂಬ ಧನುಸ್ಸನ್ನು, ಪಾಣಿ-ಹಸ್ತದಲ್ಲಿ ಧಾರಣ ಮಾಡಿರುವ ಶ್ರೀರಾಮದೇವರು, ತತ್ಪ್ರೇರಿತಾ-ತತ್ ಆ ಶೂರ್ಪನಖಿಯಿಂದ, ಪ್ರೇರಿತಾಃ-ರಾಮ ರನ್ನು ಕೊಲ್ಲಬೇಕೆಂದು ಪ್ರೇರಿಸಲ್ಪಟ್ಟ, ಭೀಮಬಲಾಃ ಭಯಂಕರವಾದ ಶರೀರ ಶಕ್ತಿಯುಳ್ಳ, ಸಪದಿ-ತಕ್ಷಣದಲ್ಲಿ, ಪ್ರಯಾತಾ-ರಾಮರೊಡನೆ ಯುದ್ಧಕ್ಕೋಸ್ಕರ ಬಂದಿರುವ, ತಸ್ಯಾಃ-ಆ ಶೂರ್ಪನಖಿಯ, ಖರತ್ರಿಶಿರದೂಷಣ ಮುಖ್ಯಬಂಧೂನ್-ಖರತ್ರಿಶಿರದೂಷಣ ಮೊದಲಾದ ಮುಖ್ಯ ಭಾಂಧವರಾದ ಚತುರ್ದಶಸಹಸ್ರಂ-ಹದಿನಾಲ್ಕು ಸಹಸ್ರ ರಾಕ್ಷಸರನ್ನು, ಅಖಿಳಸ್ಯ-ಸಮಸ್ತವಾದ ಭಕ್ತರ ಸಂಘಕ್ಕೆ ಸುಖಂ-ಸೌಖ್ಯವನ್ನು, ವಿಧಾತುಂ-ಮಾಡುವುದಕ್ಕೋಸ್ಕರ ಜಘ್ನೇ ಜ-ಸಂಹಾರಮಾಡಿದರು.

ತಾತ್ಪರ್ಯ:—ಯಾರಿಂದಲೂ ನಿವಾರಣೆ ಮಾಡಲಶಕ್ಯವಾದ ಧನಸ್ಸನ್ನು ಹಿಡಿದಿರುವ ಶ್ರೀರಾಮನು ಸಮಸ್ತ ಭಕ್ತ ಜನರಿಗೆ ಸುಖವನ್ನುಂಟುಮಾಡುವದ ಕ್ಕೋಸ್ಕರ ಆ ಶೂರ್ಪನಖಿಯಿಂದ ಪ್ರೇರಿತರಾಗಿ ಬಂದ ಭಯಂಕರರಾದ ಬಲವುಳ್ಳ ಯುದ್ಧಾರ್ಥಿಗಳಾದ ಖರದೂಷಣ ತ್ರಿಶಿರಸ್ಸು ಮೊದಲಾದ ಶೂರ್ಪನಖಿಯ ಮುಖ್ಯ ಬಂಧುಗಳಾದ ೧೪೦೦೦ ರಾಕ್ಷಸರನ್ನು ಸಂಹಾರಮಾಡಿದನು.

ಶ್ಲೋಕ|| ದತ್ತೇಭಯೇ ರಘುವರೇಣ ಮಹಾಮುನೀನಾಂ ದತ್ತೇಭಯೇಚ|
ರಜನೀಚರ ಮಂಡಲಸ್ಯ| ರಕ್ಷಃಪತಿಃಸ್ವಸೃಮುಖಾ ದವಿಕಂಪನಾ
ಚ್ಚ ಶ್ರುತ್ವಾ ಬಲಂ ರಘುಪತೇಃ ಪರಮಾಪಚಿಂತಾಂ ||೨೮||

ಅರ್ಥ:—ರಘುವರೇಣ-ರಾಮದೇವರಿಂದ ಮಹಾಮುನೀನಾಂ-ಪೂಜ್ಯರಾದ ಋಷಿಗಳಿಗೆ, ಅಭಯೇ-ಅಭಯವನ್ನು, ದತ್ತೇಸತಿ-ಕೊಡಲ್ಪಡುತ್ತಿರಲಾಗಿ, ರಕ್ಷಃ ಪತಿಃ-ರಾಕ್ಷಸಶ್ರೇಷ್ಠನಾದ ರಾವಣನು ಸ್ವಸೃಮುಖಾತ್-ತಂಗಿಯಾದ ಶೂರ್ಪನ ಖಿಯ ಮೂಲಕ, ಅವಿಕಂಪನಾಚ್ಚ-ಅವಿಕಂಪನಾಮಕನಾದ (ರಾಕ್ಷಸನಿಂದಲೂ ಸಹ) ರಘುಪತೇಃ-ಶ್ರೀರಾಮದೇವರ, ಬಲಂ-ಪರಾಕ್ರಮವನ್ನು, ಶ್ರುತ್ವಾ-ಕೇಳಿ, ಪರಚಿಂತಾಂ-ಅತ್ಯಂತ ಯೋಚನೆಯನ್ನು ಅವಾಪ ಹೊಂದಿದನು.

ತಾತ್ಪರ್ಯ:—ಶ್ರೀರಾಮದೇವರು ಹದಿನಾಲ್ಕು ಸಹಸ್ರ ರಾಕ್ಷಸ ಸೈನ್ಯದಿಂದ ಸಹಿತರಾಗಿ ಬಂದ ಖರದೂಷಣ ತ್ರಿಶಿರ ಮೊದಲಾದ ಶೂರ್ಪನಖಿಗೆ ಅಣ್ಣ ತಮ್ಮಂ ದಿರಾದವರನ್ನು ಯುದ್ಧದಲ್ಲಿ ಸಂಹರಿಸಿದ್ದರಿಂದ ಋಷಿದೇವತೆಗಳಿಗೆ ಭಯಪರಿಹಾರ ಅಭಯವುಂಟಾಯ್ತು. ಪರಾಕ್ರಮಶಾಲಿಗಳಾದ ಇಷ್ಟು ಜನ ರಾಕ್ಷಸರು ಹತರಾ ದ್ದರಿಂದ ರಾಕ್ಷಸರಿಗೆ ರಾಮರ ದೆಶೆಯಿಂದ ಬಹು ಭಯವುಂಟಾಯ್ತು ಹೀಗೆ ಋಷಿಗ ಳಿಗೆಅಭಯವೂ ರಾಕ್ಷಸರಿಗೆ ಮಹಾಭಯವೂ ಉಂಟಾಗುತ್ತಿರಲಾಗಿರಾಕ್ಷಸಪತಿಯಾದ

ರಾವಣನು ತನ್ನ ತಂಗಿಯಾದ ಶೂರ್ಪನಖಾ ಮತ್ತು ಅವಿಕಂಪನ ನಾಮಕ ರಾಕ್ಷಸನ ಮುಖಾಂತರ ಶ್ರೀರಾಮರ ಬಲಪರಾಕ್ರಮಗಳನ್ನು ಕೇಳಿ ಮಹಾ ಚಿಂತೆಯನ್ನು ಮಾಡಿದನೆಂದು ತಾತ್ಪರ್ಯ.

**ಶ್ಲೋಕ || ಶ್ರುತ್ವಾಶುಕಾರ್ಯಮವಮೃಶ್ಯ ಜಗಾಮ ತೀರೇ ಕ್ಷೇತ್ರಂ ನದೀನದಪತೇಃ ಶ್ರವಣಂ ಧರಿತ್ರ್ಯಾಃ । ಮಾರೀಚಮತ್ರತಪಸಿ ಪ್ರವರ್ತಮಾನಂಭೀತಂ ಶರಾದ್ರಘುಪತೇರ್ನಿತರಾಂದದರ್ಶ ||೨೯||**

ಅರ್ಥ.— ಸಃ=ಚಿಂತಾಕ್ರಾಂತನಾದ ಆ ರಾವಣನು, ರಾಮಬಲಂ=ಶ್ರೀರಾಮರ ಪರಾಕ್ರಮವನ್ನು; ಶ್ರುತ್ವಾ=ಕೇಳಿ, ಆಶು - ಜಾಗ್ರತೆಯಾಗಿ, ಕಾರ್ಯಂ=ಮುಂದೆ ಮಾಡಬೇಕಾದ ಕಾರ್ಯವನ್ನು, ಅವಮೃಶ್ಯ=ವಿಚಾರ ಮಾಡಿ, ನದೀನದಪತೇ=ನದೀ=ಪೂರ್ವಕ್ಕೆ ಪ್ರವಹಿಸುತ್ತಿರುವ ನದಿಗಳು, ನದ-ಪಶ್ಚಿಮಕಡೆಗೆ ಪ್ರವಹಿಸತಕ್ಕ ನದಿಗಳು (ಇವುಗಳಿಗೆ) ಪತೇಃ=ಈಶನಾದ ಸಮುದ್ರನ, ತೀರೇ-ದಡದಲ್ಲಿರುವ, ಧರಿತ್ರ್ಯಾಃ=ಭೂಮಿಗೆ, ಶ್ರವಣಂ=ಕರ್ಣಭೂತವಾದ, ಕ್ಷೇತ್ರಂ=ಗೋಕರ್ಣಕ್ಷೇತ್ರವನ್ನು ಕುರಿತು, ಜಗಾಮ=ಹೊರಟುಹೋದನು. ಅತ್ರ-ಅಲ್ಲಿ, ರಘುಪತೇ=ಶ್ರೀರಾಮರ, ಶರಾತ್-ಬಾಣದ ದೆಶೆಯಿಂದ, ನಿತರಾಂ=ಅತ್ಯಂತವಾಗಿ, ಭೀತಂ=ಭಯಗ್ರಸ್ಥನಾಗಿ, ತಪಸಿ-ತಪಸ್ಸಿನಲ್ಲಿ, ಪರಿವರ್ತಮಾನಂ-ಪ್ರವರ್ತಿಸಿರುವ, ಮಾರೀಚಂ=ಮಾರೀಚನಾಮಕನಾದ ರಾಕ್ಷಸನನ್ನು, ದದರ್ಶ=ಕಂಡನು.

ತಾತ್ಪರ್ಯ.—ಚಿಂತಾಕ್ರಾಂತನಾದ ರಾವಣನು ಶ್ರೀರಾಮರ ಪರಾಕ್ರಮವನ್ನು ಕೇಳಿ,ತಕ್ಷಣವೇ ತಾನು ಮುಂದೆ ಮಾಡಬೇಕಾದ ಕಾರ್ಯಭಾಗವನ್ನು ವಿಚಾರಮಾಡಿ ಪೂರ್ವ ಪಶ್ಚಿಮ ಪ್ರವಹಿಗಳಾದ ನದಿನದಗಳಿಗೆ ಪತಿಯಾದ ಸಮುದ್ರನ ತೀರದಲ್ಲಿರುವ ಗೋಕರ್ಣಕ್ಷೇತ್ರವನ್ನು ಕುರಿತು ಹೊರಟುಹೋದನು. ಅಲ್ಲಿ, ಗೋಕರ್ಣಕ್ಷೇತ್ರದಲ್ಲ "ಶರೇಣಮಾರೀಚಮಥಾರ್ಣವೇಕ್ಷಿತ್" ಎಂದು ಪೂರ್ವಾಧ್ಯಾಯದಲ್ಲಿ ಉಕ್ತವಾದ ಪ್ರಕಾರ ಶ್ರೀರಾಮರ ಬಾಣಪರಾಕ್ರಮಗಳಿಗೆ ಭೀತನಾಗಿ ತಪಸ್ಸು ಮಾಡಿಕೊಂಡಿದ್ದ ಮಾರೀಚನನ್ನು ರಾವಣನು ನೋಡಿದನು.

ಶ್ಲೋಕ || ತೇನಾರ್ಥಿತಃ ಸಪದಿ ರಾಘವ ವಂಚನಾರ್ಥಂ ಮಾರೀಚ ಆಹ ಶರ ವೇಗಮಮುಷ್ಯ ಜಾನನ್ । ಶಕ್ಯೋನತೇ ರಘುವರೇಣಹಿ ವಿಗ್ರಹೋ ತ್ರ ಜಾನಾಮಿ ಸಂಸ್ಪರ್ಶನಮಸ್ಯ ಶರಸ್ಯ ಪೂರ್ವಂ ||೩೦||

ಅರ್ಥ.—ತೇನ=ಆ ರಾವಣನಿಂದ, ಸಪದಿ-ಶೀಘ್ರವಾಗಿ, ರಾಘವ ವಂಚನಾರ್ಥಂ=ರಾಘವ=ರಾಮದೇವರಿಗೆ, ವಂಚನಾರ್ಥಂ=ಮೋಸಪಡಿ ಸುವದಕ್ಕೋಸ್ಕರ, ಅರ್ಥಿತಃ=ಪ್ರಾರ್ಥಿಸಲ್ಪಟ್ಟ, ಮಾರೀಚಃ=ಮಾರೀಚ ನು, ಅಮುಷ್ಯ=ಈ ರಾಮರ, ಶರವೇಗಂ=ಬಾಣದ ವೇಗವನ್ನು, ಜಾನನ್=ತಿಳಿದವನಾದ, ( ತಂ-ರಾವಣನನ್ನು ಕುರಿತು ) ಪೂರ್ವಂ=ಪೂರ್ವ ದಲ್ಲಿ, ಅಸ್ಯ=ಈ ರಾಮರ, ಶರಸ್ಯ=ಬಾಣದ, ಸಂಸ್ಪರ್ಶಂ=ಪೆಟ್ಟನ್ನು, ಜಾನಾಮಿ-ನಾನು ತಿಳಿದಿದ್ದೇನೆ. ಆದ್ದರಿಂದ, ತೇ=ನಿನಗೆ, ರಘುವರೇಣ=ಶ್ರೇಷ್ಠರಾದ ಶ್ರೀರಾಮರಿಂದ ವಿಗ್ರಹಃ=ವಿರೋಧವು ನಶಕ್ಯಃ-ಸಾಧ್ಯವಿಲ್ಲವು. ಹೀ=ಹೀಗೆಂದು ಅತ್ರ=ಪ್ರಾರ್ಥಿಸಲ್ಪಟ್ಟ ತಪಸ್ಸಿನಲ್ಲಿ ಪ್ರವರ್ತಿಸಿರತಕ್ಕ ಮಾರೀಚನು ಆಹ=ಹೇಳಿದನು.

ತಾತ್ಪರ್ಯ.—ರಾವಣನು ನಂತರ ಕಾರ್ಯಾಕಾರ್ಯ ವಿಚಾರಮಾಡಿ ಮಾರೀಚನನ್ನು ಈ ತಕ್ಷಣದಲ್ಲೇ ನೀನು ರಾಮರನ್ನು ಮೋಸಪಡಿಸಬೇಕೆಂದು ಕೇಳಿಕೊಂಡನು. ಆಗ ರಾಮರ ಬಾಣವೇಗವನ್ನು ತಿಳಿದಿದ್ದ ಮಾರೀಚನು ರಾವಣನನ್ನು ಕುರಿತು ನಾನು ಪೂರ್ವದಲ್ಲಿಯೇ ರಾಮರ ಬಾಣದ ವೇಗವನ್ನು ತಿಳಿದಿದ್ದೇನೆ; ನಿನಗೆ ರಾಮರ ಸಂಗಡ ವಿರೋಧವು ಶಕ್ಯವಲ್ಲವೆಂದು ತಪಸ್ಸಿನಲ್ಲಿ ಪ್ರವರ್ತನಾಗಿದ್ದ ಮಾರೀಚನು ರಾವಣನಿಗೆ ಹೇಳಿದನು.

ಶ್ಲೋಕ || ಇತ್ಯುಕ್ತವಂತ ಮಥರಾವಣ ಆಹ ಖಡ್ಗಂ ನಿಷ್ಕೃಷ್ಯ ಹನ್ಮಿಯದಿ ಮೇನಕರೋಷಿವಾಕ್ಯಂ । ತಚ್ಛ್ರುತ್ವಾ ಭಯಯುತೋಥ ನಿಸರ್ಗತಶ್ಚ ಪಾಪೋಚಗಾಮ ರಘುವರ್ಯ ಸಕಾಶಮಾಶು ||೩೧||

ಅರ್ಥ.—ಅಥ=ಅನಂತರದಲ್ಲಿ ರಾವಣಃ-ರಾವಣನು, ಖಡ್ಗಂ-ಖಡ್ಗಾಯುಧವನ್ನು ನಿಷ್ಕರ್ಷ್ಯ=ಹಿರಿದು ಇತ್ಯುಕ್ತವಂತಂ-ಇತಿ-ರಾಮರ ಸಂಗಡ ವಿರೋಧವನ್ನು ಮಾಡಲು ನಿನಗೆ ಶಕ್ಯವಲ್ಲವೆಂದು ಉಕ್ತವಂತಂ=ಹೇಳುತ್ತಿರುವ ಮಾರೀಚಂಪ್ರತಿ-ಮಾರೀಚನನ್ನು ಕುರಿತು ಮೇ=

ನನ್ನ, ವಾಕ್ಯಂ-ಮಾತನ್ನು, ನಕರೋಷಿಯದಿ-ಮಾಡದಿರುವುದಾದರೆ, ತ್ವಾಂ =ನಿನ್ನನ್ನು, ಹನ್ಮಿ=ಕೊಂದುಬಿಡುತ್ತೇನೆ. ಇತಿ=ಈ ಪ್ರಕಾರವಾಗಿ, ಆಹ-ಹೇಳಿದನು. ತಚ್ಛ್ರುತ್ವಾ-ಈ ರೀತಿಯಾಗಿ ಹೇಳಿದ, ರಾವಣನ ವಾಕ್ಯವನ್ನು, ಕೇಳಿದ, ನಿಸರ್ಗತಶ್ಚ=ಸ್ವಾಭಾವಿಕವಾಗಿಯೂ, ಪಾಪಃ=ಪಾಪಿಷ್ಟನಾದ, ಮಾರೀಚಃ-ಮಾರೀಚನು, ಭಯಯುತಃ=ಭಯವುಳ್ಳವನಾಗಿ, ಆಶು ಶೀಘ್ರವಾಗಿ, ರಘುವರ್ಯಸಕಾಶಂ=ಶ್ರೇಷ್ಠರಾದ ರಾಮದೇವರಿದ್ದ ಸ್ಥಳವನ್ನು ಕುರಿತು, ಜಗಾಮ=ಹೊರಟುಹೋದನು.

ತಾತ್ಪರ್ಯ.—ಮಾರೀಚನು ಹೇಳಿದ ವಾಕ್ಯವನ್ನು ಕೇಳಿ ರಾವಣನು ಕೋಪಯುಕ್ತನಾಗಿ ತನ್ನ ಖಡ್ಗಾಯುಧವನ್ನು ತಕ್ಷಣವೇ ಕೋಪದಿಂದ ಹಿರಿದು ತೋರಿಸುತ್ತಾ ಮಾರೀಚನನ್ನು ಕುರಿತು ನಾನು ಹೇಳಿದ ಮಾತನ್ನು ನೀನು ನಡಿಸಿಕೊಡದೆ ಇದ್ದರೆ ಈಗಲೆ ನಿನ್ನನ್ನು ಕತ್ತರಿಸಿಬಿಡುತ್ತೇನೆಂದು ಹೇಳಿದನು. ಈ ಮಾತನ್ನು ಕೇಳಿ ಮಾರೀಚನು ಮಹಾ ಭಯಯುಕ್ತನಾಗಿ ಸ್ವಭಾವವಾಗಿಯೂ ಪಾಪಿಯಾದ್ದರಿಂದ ಶ್ರೀರಾಮನ ಸನ್ನಿಧಾನಕ್ಕೆ ಹೊರಟು ಹೋದನು.

ಅವತಾರಿಕೆ.—ರಾವಣನು ಮಾರೀಚನಿಗೆ ಏನು ಹೇಳಿಕಳುಹಿಸಿದನೆಂಬುವನ್ನು ಮುಂದಿನ ಶ್ಲೋಕದಿಂದ ವ್ಯಕ್ತಪಡಿಸುತ್ತಾರೆ:—

**ಶ್ಲೋಕ || ಸಂಪ್ರಾಪ್ಯ ಹೈಮ ಮೃಗತಾಂ ಬಹುರತ್ನ ಚಿತ್ರಃ ಸೀತಾ ಸಮೀಪ ಉರುಧಾವಿ ಚಚಾರ ಶೀಘ್ರಂ | ನಿರ್ದೋಷನಿತ್ಯ ವರಸಂವಿದಪಿಸ್ಮ ದೇವೀ ರಕ್ಷೋವಧಾಯ ಜನಮೋಹಕೃತೇತಥಾಹ ||೩೨||**

ಅರ್ಥ.—ಸಃ=ಆ ಮಾರೀಚನು, ಶೀಘ್ರಂ-ಜಾಗ್ರತೆಯಾಗಿ, ಹೈಮ ಮೃಗತಾಂ=ಸುವರ್ಣಮಯ ಮೃಗರೂಪವನ್ನು, ಪ್ರಾಪ್ಯ=ಹೊಂದಿ, ಬಹು ರತ್ನಚಿತ್ರಃ=ಬಹು ವಿಧವಾದ ರತ್ನಗಳಿಂದ ಅಲಂಕೃತನಾಗಿ, ಸೀತಾಸಮೀಪೇ=ಸೀತಾದೇವಿಯ ಸಮೀಪದಲ್ಲಿ, ಉರುಧಾ=ಬಹು ವಿಧವಾಗಿ, (ಇತ್ತ ಕಡೆಯಿಂದ ಅತ್ತಕಡೆಗೂ ಅತ್ತಕಡೆಯಿಂದ ಇತ್ತಕಡೆಗೂ) ವಿಚಚಾರ-ಸಂಚಾರಮಾಡಿದನು. ದೇವೀ=ಸೀತಾದೇವಿಯರು, ನಿರ್ದೋಷನಿತ್ಯ

ವರಸಂವಿದಪಿ=ನಿತ್ಯ=ಆದ್ಯಂತ ರಹಿತರಾದರೂ, ನಿರ್ದೋಷ = ಅಜ್ಞಾನ ಸಂಬಂಧವಾದ ದೋಷರಹಿತರಾದರೂ, ವರ=ಶ್ರೇಷ್ಠವಾದ, ಸಂವಿತ್-ಜ್ಞಾನವುಳ್ಳವರಾದರೂ, ರಕ್ಷೋವಧಾಯ-ರಾಕ್ಷಸರ ವಧೆಯಾಗುವದಕ್ಕೋಸ್ಕರ, ಜನಮೋಹಕೃತೇಯಥಾಯಥಾ=ಜನಗಳಿಗೆ ಮೋಹೋತ್ಪಾದನವಾಗುವುದಕ್ಕೆ ಹೇಗೆ ಬೇಕೋ ಹಾಗೆ, ಆಹ=ರಾಮರನ್ನು ಕುರಿತು ಮುಂದೆ ಹೇಳುವ ರೀತಿಯಾಗಿ ಹೇಳಿದರು.

ತಾತ್ಪರ್ಯ.—ಅನಂತರ ಮಾರೀಚನು ರಾವಣನಿಂದ ನಿರ್ಬಂಧವಾಡಲ್ಪಟ್ಟು ಅವನ ಮಾತಿನಿಂದ ಭೀತನಾಗಿ ಹೇಯಮಯವಾದ ಬಣ್ಣವುಳ್ಳ ಮೃಗರೂಪವನ್ನು ಧಾರಣಮಾಡಿ ಬಹುರತ್ನಖಚಿತವಾದ ದೇಹಯುಕ್ತನಾಗಿ ಸೀತಾದೇವಿಯ ಸಮಕ್ಷಮದಲ್ಲಿ ಇಲ್ಲಿಂದಲ್ಲಿಗೆ ಅಲ್ಲಿಂದಲ್ಲಿಗೆ ಸ್ವರೂಪತಃ ಮಹಾಪಾಪಿಯಾದ ಈ ಮಾಯಾಮೃಗರೂಪವನ್ನು ಧರಿಸಿರುವ ಮಾರೀಚನು ಸಂಚಾರಮಾಡಿದನು. ಆಗ ದೇವಿಯರು ಅಜ್ಞಾನ ಸಂಬಂಧ ರಹಿತವಾದ ಆದ್ಯಂತರಹಿತವಾದ ಶ್ರೇಷ್ಠ ಜ್ಞಾನವುಳ್ಳವಳಾದರೂ ಕೂಡ ರಾಕ್ಷಸರಸಂಹಾರವು ಅಜ್ಞ ಜನಮೋಹಕವು ಹೇಗೆ ಆಗುವುದೋ ಹಾಗೆ ಮಾತನಾಡಿದರು.

ಅವತಾರಿಕೆ.—ಸೀತಾದೇವಿಯು ಅವರ ಸಮೀಪದಲ್ಲಿ ತಿರುಗಾಡುತ್ತಿದ್ದ ಸುವರ್ಣಛಾಯವುಳ್ಳ ಮೃಗವನ್ನು ನೋಡಿ ರಾಮರನ್ನು ಕುರಿತು ಏನು ಹೇಳಿದರೆಂಬುವುದನ್ನು ಈ ಶ್ಲೋಕದಲ್ಲಿ ವಿಶದಪಡಿಸುತ್ತಾರೆ.—

**ಶ್ಲೋಕ ॥ ದೇವೇಮಮಾಶು ಪರಿಗೃಹ್ಯ ಚ ದೇಹಿಮೇತ್ವಂ ಕ್ರೀಡಾಮೃಗಂತಿ**
**ತಿತಯೋದಿತ ಏವರಾಮಃ । ಅನ್ವಕ್ಸಸಾರಹ ಶರಾಸನಬಾಣಪಾಣಿ**
**ರ್ಮಾಯಾಮೃಗಂ ನಿಶಿಚರಂ ನಿಜಘಾನ ಜಾನನ್ ॥೩೩॥**

ಅರ್ಥ.—(ಹೇ) ದೇವ=ಸ್ವಾಮಿಯೇ, ಇಮಂ=ಈ ದೃಶ್ಯಮಾನವಾಗುತ್ತಿರುವ, ಕ್ರೀಡಾಮೃಗಂ=ಆಟಕ್ಕೆ ಅರ್ಹವಾದ ಕ್ರೀಡಾಮೃಗವನ್ನು, ತ್ವಂಚ-ನೀನೇ, ಆಶು=ಶೀಘ್ರವಾಗಿ, ಪರಿಗೃಹ್ಯ-ಹಿಡಿದುಕೊಂಡು, ಮೇ-ನನಗೋಸ್ಕರ, ದೇಹ = ಕೊಡು, ಇತಿ=ಹೀಗೆಂದು, ತಯಾ - ಸೀತಾ

ದೇವಿಯವರಿಂದ; ಉದಿತಃ-ಹೇಳಲ್ಪಟ್ಟರು. ಈ ವಾಕ್ಯವನ್ನು ಕೇಳಿದ ಮಾಯಾಮೃಗವು, ಅನ್ವಕ್=ಹಿಂದಕ್ಕೆ, ಸಹಸಾ=ಸರಿಕಿಕೊಂಡು ಹೋಯಿತು. ಶರಾಸನಬಾಣಪಾಣಿಃ=ಶರಾಸನ-ಬತ್ತಳಿಕೆ, ಬಾಣ=ಬಿಲ್ಲು (ಇವುಗಳು) ಪಾಣಿಃ=ಕೈಗಳಲ್ಲಿ ಉಳ್ಳ, (ರಾಮಃ=ಶ್ರೀರಾಮರು) ಮಾಯಾಮೃಗಂ-ಛದ್ಮರೂಪ ಮಾಯಾ ಮೃಗವನ್ನು, ನಿಶಚರಂ=ರಾಕ್ಷಸನಾದ ಮಾರೀಚನನ್ನಾಗಿ, ಜ್ಞಾನಃ-ತಿಳಿದುಕೊಂಡವರಾಗಿ, ಜಘಾನ=ಬಾಣಪ್ರಯೋಗ ಮಾಡಿ ಸಂಹರಿಸಿದರು.

ತಾತ್ಪರ್ಯ.—ಸಮೀಪದಲ್ಲಿ ಸುಳಿದಾಡುತ್ತಿರುವ ಈ ಸುವರ್ಣಮಯ ಶರೀರ ಮತ್ತು ರತ್ನಗಳಿಂದ ವಿಚಿತ್ರವಾದ ಕಾಂತಿಯುಕ್ತವಾದ ಈ ಮೃಗವನ್ನು ಕ್ರೀಡಾ ಉದ್ದೇಶ್ಯವಾಗಿ ಸೀತಾದೇವಿಯರು ಪತಿಯಾದ ಶ್ರೀರಾಮರನ್ನು ಕುರಿತು ದೇವ! ಈ ಕ್ರೀಡಾಮೃಗವನ್ನು ನೀನೇ ಹಿಡಿದುಕೊಂಡು ಬಂದು ನನಗೆ ಕೊಡು ಎಂದು ಹೇಳಿದರು. ಈ ಮಾತನ್ನು ಕೇಳಿದ ಮಾಯಾಮೃಗವು ಹಿಂದಕ್ಕೆ ಓಡಿಹೋಯಿತು. ಕೂಡಲೇ ಕೋದಂಡಪಾಣಿಗಳಾದ ಶ್ರೀರಾಮರು ಈ ಮಾಯಾಮೃಗವನ್ನು ನೋಡಿ ಛದ್ಮರೂಪಿಯಾಗಿರುವ ಈ ಮೃಗವು ರಾಕ್ಷಸನಾದ ಮಾರೀಚನೆಂದು ತಿಳಿದವರಾಗಿ ಧನುರ್ಬಾಣಗಳಿಂದ ಹೊಡೆದು ಕೊಂದರು.

**ಶ್ಲೋಕ ॥ ತೇನಾಹತಂ ಶರವರೇಣ ಭೃಶಂ ಮಮಾರ । ವಿಕ್ರುಶ್ಯ ಲಕ್ಷ್ಮಣ ಮುರುವ್ಯಥಯಾ ಸಪಾಪಃ ॥ ಶ್ರುತ್ವೈವ ಲಕ್ಷ್ಮಣಮಚೂಚುದದುಗ್ರವಾಕ್ಯೈಃ । ಸೋಽಪ್ಯಾಪ ರಾಮಪಥಮೇವ ಸಚಾಪಬಾಣಃ ॥೩೪॥**

ಅರ್ಥ.—ತೇನ=ಶ್ರೀರಾಮರಿಂದ, ಶರವರೇಣ-ಶ್ರೇಷ್ಠವಾದ ಬಾಣದಿಂದ, ಭೃಶಂ-ಬಲವಾಗಿ, ಆಹತಃ=ಹೊಡೆಯಲ್ಪಟ್ಟ, ಪಾಪಃ=ಪಾಪಿಷ್ಠನಾದ, ಸಃ=ಆ ಮಾರೀಚನು, ಉರುವ್ಯಥಯಾ = ಬಹಳ ಬಾಧೆಯಿಂದ, ಲಕ್ಷ್ಮಣಂ=ಲಕ್ಷ್ಮಣನನ್ನು, ವಿಕ್ರುಶ್ಯ=ಕೂಗಿಕೊಂಡು, ಮಮಾರ=ಮೂರ್ಛಿತನಾದನು. (ಸಾ=ಸೀತಾದೇವಿಯು) ಶ್ರುತ್ವೈವ – ಕೇಳಿದವಳಾಗಿ, ಲಕ್ಷ್ಮಣಃ-ಲಕ್ಷ್ಮಣನನ್ನು, ಉಗ್ರವಾಕ್ಯೈಃ=ನಿಷ್ಠುರವಾದ ವಚನಗಳಿಂದ ಅಚೂಚುದತ್=ಪ್ರೇರಣೆಮಾಡಿದಳು, ಸೋಽಪಿ=ಲಕ್ಷ್ಮಣನೂ ಕೂಡ, ಸಚಾಪಬಾಣಃಸನ್=ಧನುರ್ಬಾಣಗಳಿಂದ ಸಹಿತನಾಗಿ, ರಾಮಪಥಮೇವ=ರಾಮರು ಹೋಗಿರುವ ಮಾರ್ಗವನ್ನೇ, ಆಪ=ಹೊಂದಿದನು.

ತಾತ್ಪರ್ಯ.—ಶ್ರೀರಾಮದೇವರ ಬಾಣದಿಂದ ಬಲವಾಗಿ ಹೊಡಿಯಲ್ಪಟ್ಟ ಪಾಪಿಯಾದ ಮಾರೀಚನು ಬಹು ತೀವ್ರವಾದ ವೇದನೆಯಿಂದ ಹೆ ! ಲಕ್ಷ್ಮಣಾ ಎಂದು ಕೂಗಿಕೊಂಡು ಮೃತನಾದನು. ನಂತರ ಅಹೋ ಲಕ್ಷ್ಮಣಾ ಎಂಬ ಶಬ್ದವನ್ನು ಸೀತಾದೇವಿಯರು ಕೇಳಿ ರಾಮರ ವಿಷಯದಲ್ಲಿ ಸಂದೇಹ ಹುಟ್ಟಿ ರಾಮರಿಗೆ ಏನು ಅಪಾಯವುಂಟಾಯಿತೋ ಅದನ್ನು ಮನಸ್ಸಿಗೆ ತಾರದೆ ನನ್ನನ್ನು ಅಪಹರಿಸಬೇಕೆಂಬ ಅಭಿಪ್ರಾಯದಿಂದ ನನ್ನ ಬಳಿಯಲ್ಲಿಯೇ ಇದ್ದೀಯೆ. ಜಾಗ್ರತೆಯಾಗಿ ಹೋಗಿ ರಾಮರ ಯೋಗಕ್ಷೇಮವನ್ನು ನೋಡೆಂದು ಕ್ರೂರ ವಚನಗಳನ್ನು ಹೇಳಿದರು. ಅದನ್ನು ಕೇಳಿ ಧನುರ್ಬಾಣ ಸಮೇತನಾಗಿ ರಾಮರು ಹೋದ ಮಾರ್ಗವನ್ನು ಅನುಸರಿಸಿದನು.

ಅವತಾರಿಕೆ.—ಈ ಸಂದರ್ಭದಲ್ಲಿ ಕ್ರೀಡಾಮೃಗವನ್ನು ಸೀತಾದೇವಿಯರು ರಾಮರನ್ನು ತಂದುಕೊಡುವದಾಗಿ ಪ್ರಾರ್ಥಿಸುವದು; ರಾಮರು ಆ ವಾಕ್ಯವನ್ನು ಕೇಳಿ ಅದನ್ನು ನಡೆಸಿಕೊಡುವದು; ಹೇ ! ಲಕ್ಷ್ಮಣಯೆಂಬ ಶಬ್ಧವನ್ನು ಕೇಳಿ ಸೀತಾದೇವಿಯರು ರಾಮರ ವಿಷಯದಲ್ಲಿ ಭ್ರಾಂತಿಗೊಂಡು ಲಕ್ಷ್ಮಣನಿಗೆ ನಿಷ್ಠೂರ ವಾಕ್ಯವನ್ನು ಹೇಳುವದು; ಲಕ್ಷ್ಮಣನು ರಾಮರ ಸಂರಕ್ಷಣಾರ್ಥವಾಗಿ ಧನುರ್ಬಾಣಯುಕ್ತನಾಗಿ ರಾಮರ ಬಳಿಗೆ ಹೋಗುವದು; ಇವುಗಳಿಂದ ಸೀತಾದೇವಿಯರಿಗೆ ಅಜ್ಞಾನ ಪ್ರಾಪ್ತವಾಯಿತೇ ಅಂದರೆ ಅದನ್ನು ಈ ಮುಂದಿನ ಶ್ಲೋಕದಿಂದ ಪರಿಹಾರಮಾಡುತ್ತಾರೆ.—

**ಶ್ಲೋಕ ॥ ಯಾಂಯಾಂ ಪರೇಶ ಉರುಧೈವ ಕರೋತಿ ಲೀಲಾಂ । ತಾಂತಾಂ ಕರೋತ್ಯನು ತಥೈವ ರಮಾಪಿದೇವೀ ॥ ನೈತಾವತಾಸ್ಯ ಪರಮಸ್ಯ ತಥಾರಮಾಯಾ । ದೋಷೋಣುರ ಪ್ಯನುವಿಚಿಂತ್ಯ ಉರುಪ್ರಭೂಯತ್ ॥೩೫॥**

ಅರ್ಥ.—ಪರಮೇಶಃ = ಶ್ರೀಪರಮಾತ್ಮನಾದ ರಾಮರು ಬಹುಪ್ರಕಾರವಾಗಿ, ಯಾಂಯಾಂಲೀಲಾಂ = ಯಾವ ಯಾವ ಲೀಲೆಗಳನ್ನು,

ಕರೋತಿ=ಮಾಡುತ್ತಾರೆಯೋ, ತಥೈವ-ಅದೇ ಪ್ರಕಾರವಾಗಿಯೇ, ರಮಾ ದೇವಿ ಅಪಿ-ಲಕ್ಷ್ಮೀದೇವಿಯೂ ಕೂಡ, ತಾಂತಾಂಲೀಲಾಂ=ಆಯಾ ಲೀಲೆ ಗಳನ್ನು, ಅನುಕರೋತಿ=ಅನುಸರಿಸಿ ಮಾಡುತ್ತಾಳೆ. ಯೇತಾವತಾ-ಆದ ಮಾತ್ರಕ್ಕೇನೇ, ಇಮೌ-ಈ ರಾಮಸೀತೆಯರು, ಯತ್=ಯಾವ ಕಾರಣ ದಿಂದ, ಉರುಪ್ರಭೂ=ಮಹಾಪ್ರಭುಗಳಾಗಿದ್ದಾರೆಯೋ, ತಸ್ಮಾತ್=ಆ ಕಾರಣದಿಂದ, ಅಸ್ಯಪರಮಸ್ಯ=ಪರಮ ಶ್ರೇಷ್ಠರಾದ ಈ ರಾಮದೇವರಲ್ಲಿ ಯೂ, ತಥಾ=ಹಾಗೆಯೇವೆ, ರಮಾಯಾಃ = ಸೀತಾದೇವಿಯಲ್ಲಿಯೂ, ಅಣುರಪಿ=ಅಣುಮಾತ್ರವೂ, ದೋಷಃ=ದೋಷವು, ನೈವಚಿಂತ್ಯಃ=ಎಣಿಸ ಲ್ಪಡತಕ್ಕದ್ದಿಲ್ಲವು.

ತಾತ್ಪರ್ಯ.—ಪರಮ ಪ್ರಭುಗಳಾದ ಶ್ರೀರಾಮರು ಅನೇಕ ಪ್ರಕಾ ರವಾಗಿ ಯಾವಯಾವ ಕ್ರೀಡಾಗಳನ್ನು ಮಾಡುತ್ತಾರೆಯೋ ಅದನ್ನು ಅನುಸ ರಿಸಿ ಸೀತಾದೇವಿಯರೂ ಕೂಡಾ ಆದೇ ಪ್ರಕಾರ ಶ್ರೀರಾಮರ ಅಭಿಮತಾ ನುಗುಣವಾದ ಲೀಲಾಗಳನ್ನು ಮಾಡುತ್ತಾರೆ. ಈ ರೀತಿಯಾದ ವಿಡಂಬನ ಮಾಡೋಣ ಮಾತ್ರದಿಂದ ಈ ರಾಮಸೀತಾದೇವಿಯರು ಸಮಸ್ತ ಪ್ರಪಂಚ ಕ್ಕೂ ಸ್ವಾಮಿಯಾಗಿ ಪರಶ್ರೇಷ್ಠರಾಗಿರುವುದರಿಂದ ಇವರಲ್ಲಿ ಅಜ್ಞಾನ ಪ್ರ ಮಾದಾದಿ ಯಾವ ದೋಷಗಳೂ ಎಷ್ಟು ಮಾತ್ರವೂ ಪರಿಗಣಿಸಲ್ಪಡತಕ್ಕದಿ ಲ್ಲವೆಂದು ಅಭಿಪ್ರಾಯವು.

ಅವತಾರಿಕೆ.—ಪೂರ್ವಶ್ಲೋಕದಲ್ಲಿ ಶ್ರೀರಾಮಸೀತೆಯರಿಗೆ ಉರು ಪ್ರಭುತ್ವ ಹೇಳಿದೆ. ಇವರಿಗೆ ಉರುಪ್ರಭುತ್ವ ಹೇಗೆಂದು ಶಂಖಾಬಂದರೆ ಅದನ್ನು ಪರಿಹರಿಸುತ್ತಾರೆ:—

**ಶ್ಲೋಕ ॥ ಸ್ವಾಜ್ಞಾನ ಮಾಪದವಿ ಮಂದಕಟಾಕ್ಷಮಾತ್ರಾ । ತ್ಸರ್ಗಸ್ಥಿತಿ ಪ್ರ ಳಯ ಸಂಸೃತಿ ಮೋಕ್ಷಹೇತೋಃ ॥ ದೇವ್ಯಾಹರೇಃ ಕಿಮುವಿಡಂಬ ನಮಾತ್ರಮೇತ । ದ್ವಿಕ್ರೀಡತೋ ಸುರನರಾದಿವದೇವತಸ್ಮಾತ್॥೩॥**

ಅರ್ಥ.— ಮಂದಕಟಾಕ್ಷಮಾತ್ರಾತ್=ಮಂದ=ಸ್ವಲ್ಪವಾದ, ಕಟಾಕ್ಷಮಾತ್ರಾತ್-ಕಡೆಗಣ್ಣಿನಿಂದ ನೋಡೋಣಮಾತ್ರದಿಂದಲೇನೇ, ಸರ್ಗಸ್ಥಿತಿಪ್ರಳಯಸಂಸೃತಿಮೋಕ್ಷಹೇತೋಃ-ಸರ್ಗ=ಉತ್ಪತ್ತಿಯು, ಸ್ಥಿತಿ=ಇರೋಣವೂ, ಪ್ರಳಯ=ನಾಶವು, ಸಂಸೃತಿ-ಜನನಮರಣಾತ್ಮಕವಾದ ಬಂಧನವು ಮೋಕ್ಷ=ಸಾಯುಜ್ಯಾದಿ ಮೋಕ್ಷವು (ಇವುಗಳಿಗೆ) ಹೇತೋಃ-ಕಾರಣಭೂತವಾಗಿರುವದರ ದೆಶೆಯಿಂದ, ದೇವ್ಯಾಃ-ಪ್ರಕೃತಿ ಸ್ವರೂಪಳಾದ ದೇವಿಯಾದ ಸೀತಾದೇವಿಯರಿಗೆ, ಅಜ್ಞಾನಂ-ಅಪರಾಮರ್ಶವು, ಆಪದಪಿ-ವಿಪತ್ತೂ ಸಹ ಕ್ವ-ಎಲ್ಲಿಯದು? ತಸ್ಮಾತ್=ಈ ರಮಾ ಸ್ವರೂಪಳಾದ ಸೀತಾದೇವಿಗೆ ಅಜ್ಞಾನಾದಿಗಳಿಲ್ಲದ ಕಾರಣದಿಂದ ದೇವ್ಯಾಃಸಕಾಶಾತ್=ಸೀತಾದೇವಿಯರಿಗಿಂತಲೂ ಹರೇಃ=ಉತ್ತಮರಾದ ಶ್ರೀರಾಮರಿಗೆ ಕಿಮು=ಈ ಅಜ್ಞಾನಾದಿಗಳು ಎಲ್ಲಿಯದು? ಸುರನರಾದಿವತ್=ದೇವತೆಗಳು ಮತ್ತು ಮನುಷ್ಯರುಗಳೋಪಾದಿಯಲ್ಲಿ ಕ್ರೀಡಿತಃ=ಲೀಲೆಯನ್ನು ಮಾಡತಕ್ಕ ಶ್ರೀಪರಮಾತ್ಮನ ಏತತ್=ಈ ಲೀಲೆಯು ವಿಡಂಬನಮಾತ್ರಮೇವ = ಪ್ರಪಂಚ ಮೋಹಕವೇ ಆಗಿರುತ್ತದೆ.

ತಾತ್ಪರ್ಯ.— ಕಡೆಗಣ್ಣಿನಿಂದ ನೋಡೋಣ ಮಾತ್ರದಿಂದಲೇನೆ ಈ ಪ್ರಪಂಚಕ್ಕೆ ಉತ್ಪತ್ತಿ ಸ್ಥಿತಿ ವಿನಾಶ ಜನನ ಮರಣಾಖ್ಯ ಸಂಸಾರ ಸಂಬಂಧವು ಸಾಯುಜ್ಯಾದಿ ಮೋಕ್ಷವು ಇವುಗಳಿಗೆ ಕಾರಣಭೂತಳಾದ ದೇವ್ಯಾಃ ಪ್ರಕೃತಿ ಸ್ವರೂಪಳಾದ ಸೀತಾದೇವಿಗೆ ಅಜ್ಞಾನ ಆಪತ್ತೂ ಕೂಡ ಎಲ್ಲಿ ಇದೆ? ಹೀಗಿರುವಲ್ಲಿ ಈ ಪ್ರಕೃತಿ ಸ್ವರೂಪಳಾದ ಸೀತಾದೇವಿಯಗಿಂತಲೂ ಉತ್ತಮ ಶ್ರೇಷ್ಠನಾದ ಶ್ರೀಪರಮಾತ್ಮನಿಗೆ ಈ ಅಜ್ಞಾನ ವಿಪತ್ತುಗಳು ಎಂಬುವದೇನು? ಎಂದಿಗೂ ಇಲ್ಲವು. ತಸ್ಮಾತ್ ಕಾರಣಾತ್ ದೇವತೆಗಳು ಮನುಷ್ಯರುಗಳೋಪಾದಿಯಲ್ಲಿ ಪ್ರಪಂಚದಲ್ಲಿ ಲೀಲಾ ಮಾಡತಕ್ಕ ಶ್ರೀಪರಮಾತ್ಮನ ಈ ಲೀಲಾಜಾಲಾದಿಗಳು ವಿಶಿಷ್ಟವೂ ಪ್ರಪಂಚ ಮೋಹನಾರ್ಥವಾಗಿ ಮಾಡತಕ್ಕ ವಿಡಂಬನ ಮಾತ್ರವೇ ಹೊರತು ಶ್ರೀಪರಮಾತ್ಮನಾದ, ಪ್ರಪಂಚಕ್ಕೆ ಈಶ್ವರನಾದ ಶ್ರೀರಾಮದೇವರಿಗೂ ಶ್ರೀಪರಮಾತ್ಮ ಲೀಲೆಗಳನ್ನು ಅನುಸರಿಸಿ ಲೀಲಾ ಮಾಡತಕ್ಕ ಶ್ರೀಸೀತಾದೇವಿಯರಿಗೂ ಈ ಅಜ್ಞಾನ ಆಪದಾದಿಗಳು ಎಷ್ಟುಮಾತ್ರವೂ ಚಿಂತ

ಈ ಅಜ್ಞಾನ ವಿಪತ್ತುಗಳು ಎಂಬುವುದೇನು? ಎಂದಿಗೂ ಇಲ್ಲವು. ಶ್ರೀಸೀತಾದೇವಿಯರಿಗೂ ಈ ಅಜ್ಞಾನ ಅಪದಾದಿಗಳು ಎಷ್ಟು ಮಾತ್ರವೂ ಚಿಂತನೀಯವಲ್ಲವು. ಪ್ರಪಂಚದ ಅಜ್ಞಜನರ ಮೋಹನಾರ್ಥವಾಗಿ ಈ ರೀತಿಯಾದ ಲೀಲೆಗಳನ್ನು ಮಾಡುತ್ತಾರೆಂದು ಅಭಿಪ್ರಾಯವು.

**ಶ್ಲೋಕ ||** ದೇವ್ಯಾಃ ಸಮೀಪ ಮಥ ರಾವಣ ಆಸಸಾದ | ಸಾದೃಶ್ಯತಾ ಮಗಮದಪ್ಯವಿಷಹ್ಯ ಶಕ್ತಿಃ || ಸೃಷ್ಟ್ವಾತ್ಮನಃ ಪ್ರತಿಕೃತಿಂ ಪ್ರಯಯೌ ಚ ಶೀಘ್ರಂ | ಕೈಲಾಸಮರ್ಚಿತಪದಾ ನ್ಯವಸಚ್ಛಿವಾಭ್ಯಾಂ ||೩೭||

ಅರ್ಥ.—ಅಥ=ಅನಂತರದಲ್ಲಿ, ರಾವಣಃ=ರಾವಣನು, ದೇವ್ಯಾಃ=ಸೀತಾದೇವಿಯರ, ಸಮೀಪಂ=ಸಮೀಪವನ್ನು ಕುರಿತು, ಆಸಸಾದ=ಹೊಂದಿದನು. ಸಾಪಿ=ಆ ಸೀತಾದೇವಿಯಾದರೋ, ಅವಿಷಹ್ಯಶಕ್ತಿಃ=ಅವಿಷಹ್ಯ-ಸಹಿಸಲಸಾಧ್ಯವಾದ, ಶಕ್ತಿಃ-ಬಲವುಳ್ಳವಳಾಗಿ, ಆತ್ಮನಃ=ತನ್ನ, ಪ್ರತಿಕೃತಿಂ=ಪ್ರತಿ ಆಕಾರವನ್ನು, ಅಗ್ನಾಸೃಷ್ಟವತೀಸತೀ=ಅಗ್ನಿಮೂಲಕ ಸೃಷ್ಟಿಸಿದವಳಾಗಿ, ಅದೃಶ್ಯತಾಂ=ಅಪ್ರತ್ಯಕ್ಷತ್ವವನ್ನು, (ದೃಷ್ಟ್ಯಗೋಚರವನ್ನು) ಅಗಮತ್=ಹೊಂದಿದರು. ಶೀಘ್ರಂ=ತತ್ಕ್ಷಣದಲ್ಲಿಯೇ, ಕೈಲಾಸಂ=ಕೈಲಾಸಲೋಕವನ್ನು ಕುರಿತು, ಪ್ರಯಯೌ=ಹೊರಟುಹೋದರು. (ಅಲ್ಲಿ) ಶಿವಾಭ್ಯಾಂ=ಪಾರ್ವತೀಪರಮೇಶ್ವರರಿಂದ, ಅರ್ಚಿತ=ಪೂಜಿಸಲ್ಪಟ್ಟ, ಪದಾ=ಪಾದವುಳ್ಳವಳಾಗಿ (ತತ್ರೈವ=ಅಲ್ಲಿಯೇ) ನ್ಯವಸತ್=ನೆಲಸಿದರು.

ತಾತ್ಪರ್ಯ.—ಸೀತಾದೇವಿಯರ ಆಜ್ಞಾಪ್ರಕಾರ ಲಕ್ಷ್ಮಣರು ರಾಮರ ಮಾರ್ಗವನ್ನು ಹಿಡಿದು ಹೊರಟುಹೋದನಂತರ ಒಬ್ಬೊಂಟಿಗಳಾದ ಸೀತಾದೇವಿಯ ಬಳಿಯಲ್ಲಿಯೇ ಸಮಯವನ್ನು ನಿರೀಕ್ಷಿಸಿಕೊಂಡು ಕಾದಿದ್ದ ರಾವಣನು ದೇವಿಯ ಸಮೀಪಕ್ಕೆ ಬಂದನು. ಸಹಿಸಲಸಾಧ್ಯವಾದ ಶಕ್ತಿಯುಳ್ಳ ಈ ದೇವಿಯರು ಕೂಡಲೇ ತಮ್ಮಂತೆಯೇ ಬೇರೆ ಆಕಾರವನ್ನು ಅಗ್ನಿದೇವರ ಮೂಲಕ ಸೃಷ್ಟಿಮಾಡಿ ಅಲ್ಲಿಯೇ ಇಟ್ಟುಬಿಟ್ಟು ತಾವು ಕೈಲಾಸಲೋಕಕ್ಕೆ ಹೊರಟುಹೋದರು. ಅಲ್ಲಿ ಕೈಲಾಸದಲ್ಲಿ ಪಾರ್ವತಿ ಮತ್ತು ಪರಮೇಶ್ವರರಿಂದ ಪೂಜೆಮಾಡಲ್ಪಟ್ಟ ಪಾದವುಳ್ಳವರಾಗಿ ( ಪೂಜೆಗೊಳ್ಳುತ್ತಾ ) ಆ ಕೈಲಾಸಲೋಕದಲ್ಲಿಯೇ ನೆಲಸಿದರು.

ವಿಶೇಷ ವಿಷಯವು.—ಶ್ರೀಸೀತಾದೇವಿಯರು ತಾವು ತಮ್ಮಂತೆ ಬೇರೆ ಆಕೃತಿಯನ್ನು ಅಗ್ನಿದೇವರ ಮೂಲಕ ಸೃಷ್ಟಿಸಿದರು ಎಂದು ಈ ಶ್ಲೋಕದಲ್ಲಿ ಉಕ್ತವಾಗಿದೆ. ಅಗ್ನಿದೇವರು ಸೃಷ್ಟಿಮಾಡಿದ ವಿಷಯದಲ್ಲಿ ಕೂರ್ಮ ಪುರಾಣ ವಕ್ಷ್ಯಮಾಣರೀತ್ಯಾ ಉಕ್ತವಾಗಿದೆ. "ಉಕ್ತಂಚ ಕೌರ್ಮೇ" ಶ್ಲೋಕ.—"ತಮಾಹದೇವೋ ಲೋಕಾನಾಂ । ದಾಹಕೋ ಹವ್ಯವಾಹನಃ ಯಾಸೀತಾ ರಾಕ್ಷಸೇಂದ್ರೇಣ । ಸೀತಾ ಭಗವತೀಹೃತಾ ಮಯಾ ಮಾಯಾ ಮಯೀ ಸೃಷ್ಟಾ । ರಾವಣಸ್ಯ ವಧೇಪ್ಸಯಾ ॥" ಅರ್ಥ.-ಲೋಕದಾಹಕ ನಾದ ಹವ್ಯವಾಹನನು (ಅಗ್ನಿದೇವರು) ಹೇಳಿದರು. ಯಾವ ಸೀತಾದೇವಿಯರು ರಾಕ್ಷಸನಾದ ರಾವಣನಿಂದ ಒಯ್ಯಲ್ಪಟ್ಟರೋ ಆ ಸೀತಾಕೃತಿಯು ನಾನು ಸೃಷ್ಟಿಮಾಡಿದ ಮಾಯಾಕೃತಿಯು (ರಾವಣನಿಂದ ಅಪಹಾರಮಾಡಲ್ಪಟ್ಟ ಮಾಯಾಕೃತಿಯಾದ ಸೀತಾದೇವಿಯೇ ಎಂದು ಅಭಿಪ್ರಾಯವು.)

ಅವತಾರಿಕೆ.-ಆದರೆ ರಾವಣನಿಗೆ ನಿಶ್ಚೇತನವಾದ ಮಾಯಾಕೃತಿಯಲ್ಲಿ ಸೀತಾದೇವಿಯೇ ಎಂಬ ಬುದ್ಧಿಯು ಹೇಗೆ ಉತ್ಪನ್ನವಾಯಿತೆಂದರೆ ಆ ವಿಷಯವು ಈ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತೆ.

**ಶ್ಲೋಕ ॥ ತಸ್ಯಾಸ್ತು ತಾಂ ಪ್ರತಿಕೃತಿಂ ಪ್ರವಿವೇಶ ಶಕ್ರೋ । ದೇವ್ಯಾಶ್ಚ ಸನ್ನಿಧಿಯುತಾಂ ವ್ಯವಹಾರಸಿದ್ಧ್ಯೈ ॥ ಆದಾಯತಾಮಥಯಯೌ ರಜನೀಚರೇಂದ್ರೋ । ಹತ್ವಾ ಜಟಾಯುಷ ಮುರುಶ್ರಮತೋನಿರುದ್ಧಃ ।೩೮।**

ಅರ್ಥ.-ತಸ್ಯಾಃಸ್ತು=ಕೈಲಾಸವನ್ನು ಕುರಿತು ಹೋಗಿರುವ, ದೇವ್ಯಾಃ =ಸೀತಾದೇವಿಯರ, ಸನ್ನಿಧಿಯುತಾಂಚ=ಸಾನ್ನಿಧ್ಯಯುಕ್ತವಾದ, ತಾಂ=ಆಶ್ರಮದಲ್ಲಿ ಅಗ್ನಿದೇವರಿಂದ ನಿರ್ಮಿತವಾದ, ಪ್ರತಿಕೃತಿ=ಆಕೃತಿಯನ್ನು, ವ್ಯವಹಾರಸಿದ್ಧ್ಯೈ=ಗಮನಾಗಮನಾದಿ ವ್ಯಾಪಾರ ಸಿದ್ಧಿಗೋಸ್ಕರ, ಶಕ್ರಃ=ಇಂದ್ರನು, ಪ್ರವಿವೇಶ=ಪ್ರವೇಶಮಾಡಿದನು. ಅಥ-ಇಂದ್ರಪ್ರವೇಶಾನಂತರ, ರಜನೀಚರೇಂದ್ರಃ=ರಜನೀಚರ=ರಾತ್ರಿಂಚರರಾದ ರಾಕ್ಷಸರಲ್ಲಿ, ಇಂದ್ರಃ-ಶ್ರೇಷ್ಠನಾದ ರಾವಣನು, ತಾಂ=ಆ ಸೀತಾಕೃತಿಯನ್ನು, ಆದಾಯ=ತೆಗೆದುಕೊಂಡು, ಉರುಶ್ರಮತಃ=ಅತ್ಯಂತ ಕಷ್ಟದಿಂದ, ನಿರುದ್ಧಃಸ=ತಡೆಯಲ್ಪಟ್ಟವನಾಗಿ, ಜಟಾಯುಷಂ-ಜಟಾಯುವನ್ನು, ಹತ್ವಾ=ನಿಪಾತನನ್ನಾಗಿ ಮಾಡಿ, ಯಯೌ=ಹೊರಟುಹೋದನು.

ತಾತ್ಪರ್ಯ.— ಕೈಲಾಸವನ್ನು ಕುರಿತು ಹೊರಟುಹೋದ ಸೀತಾದೇವಿಯರ ಸಾನ್ನಿಧ್ಯದಿಂದ ಯುಕ್ತವಾದ ಅಗ್ನಿದೇವರು ನಿರ್ಮಾಣ ಮಾಡಿದ ಮಾಯಾಸೀತಾ ಪ್ರತಿಮೆಯಲ್ಲಿ ಚಲನ ಗಮನಾಗಮನಾದಿ ವ್ಯವಹಾರವನ್ನುಂಟುಮಾಡುವದಕ್ಕಾಗಿ ಇಂದ್ರದೇವರು ಪ್ರವೇಶಮಾಡಿದರು. ಇಂದ್ರದೇವರು ಪ್ರವೇಶಿಸಿದನಂತರ ಆ ಸೀತಾಕೃತಿಯನ್ನು ರಾಕ್ಷಸೇಂದ್ರನಾದ ರಾವಣನು ಎತ್ತಿಕೊಂಡು ಹೋಗುತ್ತಿದ್ದನು. ಆಗ ರಾಮಭಕ್ತನಾದ ಗೃಧ್ರರೂಪವುಳ್ಳ ಜಟಾಯುವು ಅವನನ್ನು ತಡೆದು ಯುದ್ಧಮಾಡಿದನು. ರಾವಣನು ಅವನನ್ನು ಸೋಲಿಸಿ ರೆಕ್ಕೆಗಳನ್ನು ಕತ್ತರಿಸಿ ಕೆಡಹಿ ಸೀತಾಕೃತಿಯನ್ನು ತೆಗೆದುಕೊಂಡು ಹೋದನು.

ಅವತಾರಿಕೆ.— ರಾವಣನು ಜಟಾಯುವನ್ನು ನಿಪಾತಮಾಡಿ ಮುಂದಕ್ಕೆ ಹೋಗುತ್ತಿರಲಾಗಿ ಅಲ್ಲಿ ಸುಗ್ರೀವನಿಂದ ಸಹಿತರಾದ ಹನುಮಂತದೇವರು ಇವನನ್ನು ಕಂಡರು. ಆದರೆ ಜಟಾಯುವಿಗಿಂತಲೂ ಅತಿ ಸಮರ್ಥರೂ ಪರಮ ಭಕ್ತರೂ ಆದ ಈ ಹನುಮಂತದೇವರು ರಾವಣನನ್ನು ಏತಕ್ಕೆ ವಧೆಮಾಡಲಿಲ್ಲವೆಂಬ ಶಂಕಾ ಪರಿಹಾರಕ್ಕಾಗಿ ಈ ಶ್ಲೋಕದಲ್ಲಿ ನಾಲ್ಕು ಕಾರಣಗಳನ್ನು ಹೇಳುತ್ತಾರೆ.

**ಶ್ಲೋಕ || ಮಾರ್ಗೇ ವ್ರಜಂತಮಭಿಯಾಯ ತತೋ ಹನೂಮಾನ್ ಸಂವಾರಿ**
**ತೋ ರವಿಸುತೇನಚ ಜಾನಮಾನಃ | ದೇವಂತು ಕಾರ್ಯಮಥಕೀರ್ತಿ**
**ಮಭೀಪ್ಸಮಾನೋ ರಾಮಸ್ಯ ನೈನಮಹನದ್ವಚನಾದ್ಧರೇಶ್ಚ ||೩೯||**

ಅರ್ಥ.— ತತಃ=ಜಟಾಯುವಿನ ಯುದ್ಧಾನಂತರ, ಮಾರ್ಗೇ=ಮುಂದೆಮಾರ್ಗದಲ್ಲಿ, ವ್ರಜಂತಂ=ಹೋಗುತ್ತಿರುವ ( ರಾವಣಂ-ರಾವಣನನ್ನು ) ಹನುಮಾನ್-ಹನುಮಂತದೇವರು, ಅಭಿಯಾಯ-ಕೊಲ್ಲಬೇಕೆಂದುಹೋಗಲು ರವಿಸುತೇನ=ಸೂರ್ಯಪುತ್ರನಾದ ಸುಗ್ರೀವನಿಂದ, ವಾರಿತಃ=ತಡೆಯಲ್ಪಟ್ಟವರಾಗಿ, ದೈವಂ = ದೈವಿಕವಾದ, ಕಾರ್ಯಂಚ = ಕರ್ತವ್ಯವನ್ನು, ಜಾನಮಾನಃ = ತಿಳಿದವರಾಗಿ, ರಾಮಸ್ಯಕೀರ್ತಿಂ = ಶ್ರೀರಾಮದೇವರ

ಯಶಃ=ಕೀರ್ತಿಯನ್ನು, ಅಭೀಪ್ಸಮಾನಃ=ಅಪೇಕ್ಷಿಸಿದವರಾಗಿ, ಹರೇಃ= ಶ್ರೀಪರಮಾತ್ಮನ, ವಚನಾಚ್ಚ=ವಾಕ್ಯವನ್ನು ಗಮನಿಸಿದವರಾಗಿ, ಜಯ ವಿಜಯರಿಗೆ ಪರಮಾತ್ಮನಿಂದ ಕೊಡಲ್ಪಟ್ಟ ವಚನಪ್ರಕಾರ, ಏನಂ = ಈ ರಾವಣನನ್ನು, ನಾಹನತ್=ಸಂಹಾರಮಾಡಲಿಲ್ಲ

ತಾತ್ಪರ್ಯ.— ಜಟಾಯು ಯುದ್ಧಾನಂತರ ಸೀತಾಕೃತ ಸಹಿತನಾಗಿ ಹೋಗುತ್ತಿದ್ದ ರಾವಣನನ್ನು ಹನುಮಂತದೇವರು ನೋಡಿದಾಗ್ಯೂ ಅವನನ್ನು ಸಂಹರಿಸಲಿಲ್ಲ. ಹನುಮಂತದೇವರು ಜಟಾಯುವಿಗಿಂತಲೂ ಮಹಾ ಪರಾಕ್ರಮಿಗಳು, ರಾಮರ ಅತ್ಯಂತ ಭಕ್ತರು ಮತ್ತು ರಾವಣನನ್ನು ಸಂಹರಿಸತಕ್ಕಷ್ಟು ಸಮರ್ಥರು, ಆದಾಗ್ಯೂ ಸಮೀಪದಲ್ಲಿದ್ದ ಸುಗ್ರೀವನಿಂದ ತಡೆಯಲ್ಪಟ್ಟರು. ದೈವಿಕ ಕಾರ್ಯವನ್ನು ತಿಳಿದವರಾಗಿ ಶ್ರೀರಾಮರ ಯಶಃಕೀರ್ತಿಗಳನ್ನು ಅಪೇಕ್ಷಿಸಿದವರಾಗಿ ಮತ್ತು ಶ್ರೀಪರಮಾತ್ಮನಾದ ಶ್ರೀಹರಿಯು "ಮಯ್ಯೈವವಧೌ ಭವತಂ ತ್ರಿ ಜನ್ಮಸು" ಎಂದರೆ ಶ್ರೀಹರಿಯು ಹಿಂದಕ್ಕೆ ಜಯವಿಜಯರನ್ನು ಕುರಿತು ನೀವು ಉಭಯತ್ರರೂ ನನ್ನಿಂದಲೇ ವಧ್ಯರಾಗಿರಿ ಎಂದು ಹೇಳಿದ ವಚನದಲ್ಲಿ ದೃಷ್ಟಿಯುಳ್ಳವರಾಗಿ ಈ ರಾವಣನನ್ನು ಹನುಮಂತದೇವರು ಸಂಹರಿಸಲಿಲ್ಲ. ಈ ನಾಲ್ಕು ಕಾರಣಗಳಿಂದ ದೃಷ್ಟಿಯಿಟ್ಟು ಹನುಮಂತದೇವರು ಬರೀ ರಾವಣನ ವಧೆಯಿಂದ ಸಮಸ್ತವಾದ ರಾಕ್ಷಸರ ವಧೆಯಾಗಲಾರದೆಂತಲೂ ದೈವಿಕವಾದ ರಾಮರ ಕಾರ್ಯಾಕಾರ್ಯ ಕರ್ತವ್ಯಗಳನ್ನು ತಿಳಿದವರಾಗಿ ರಾವಣನು ಸೀತಾಕೃತಿಯನ್ನು ತೆಗೆದುಕೊಂಡು ಹೋಗುತ್ತಿದ್ದರೂ ಅವನನ್ನು ವಧೆಮಾಡದೆ ತಟಸ್ಥರಾದರು.

**ಶ್ಲೋಕ || ಪ್ರಾಪ್ಯೈವ ರಾಕ್ಷಸ ಉತಾತ್ಮ ಪುರೀಂ ಸತತ್ರ ಸೀತಾಕೃತಿಂ ಪ್ರತಿ ನಿಧಾಯ ರರಕ್ಷಚಾಥ || ರಾಮೋಽಪಿ ತತ್ರ ವಿನಿಹತ್ಯ ಸುದುಷ್ಟರಕ್ಷಃ ಪ್ರಾಪ್ಯಾಶ್ರಮಂ ಸ್ವದಯಿತಾಂ ನಹಿಪಶ್ಯತೀವ ||೪೦||**

ಅರ್ಥ.— ಸಃ – ಆ ಸೀತಾಕೃತಿಯನ್ನು ತೆಗೆದುಕೊಂಡು ಹೋದ, ರಾಕ್ಷಸಃ=ರಾವಣನು, ಆತ್ಮಪುರೀಂ–ತನ್ನ ಲಂಕಾಪಟ್ಟಣವನ್ನು, ಪ್ರಾಪ್ಯೈವ – ಹೊಂದಿ, ಉತ = ಮತ್ತು, ತತ್ರ = ಅಲ್ಲಿ, ಸೀತಾಕೃತಿಂ= ಸೀತಾದೇವಿಯರ ಆಕೃತಿಯನ್ನು, ( ಅಶೋಕವನದಲ್ಲಿ ) ಪ್ರತಿನಿಧಾಯ= ಇಟ್ಟು, ರರಕ್ಷಚ = ರಕ್ಷಣೆ ಮಾಡಿದನು. ಇತರತ್ರ ಗಮನಾ ಗಮನ

ನಿರೋಧರೂಪವಾದ ) ರಕ್ಷಣೆಮಾಡಿದನು. ರಾಮೋಪಿ-ಶ್ರೀರಾಮರಾದರೋ, ಸುದುಷ್ಟರಕ್ಷಂ=ಅತ್ಯಂತ ದುಷ್ಟನಾದ ಮಾರೀಚನನ್ನು, ನಿಹತ್ಯ-ಸಂಹಾರಮಾಡಿ, ಆಶ್ರಮಂ=ತನ್ನ ಆಶ್ರಮವನ್ನು, ಪ್ರಾಪ್ಯ-ಹೊಂದಿ, ತತ್ರ=ಆ ಆಶ್ರಮದಲ್ಲಿ, ಸ್ವದಯಿತಾಂ-ತನ್ನ ಪ್ರೀತ್ಯಾಸ್ಪದ ಹೆಂಡತಿಯಾದ ಸೀತಾದೇವಿಯರನ್ನು, ನಪಶ್ಯತೀವ=ಕಾಣಲಿಲ್ಲ.

ತಾತ್ಪರ್ಯ.—ಅನಂತರ ರಾವಣನು ಸೀತಾಕೃತಿಯಿಂದ ಸಹಿತನಾಗಿ ತನ್ನ ಸ್ವಗ್ರಾಮವಾದ ಲಂಕಾಪಟ್ಟಣಕ್ಕೆ ಬಂದು ಸೀತಾಕೃತಿಯನ್ನು ಅಶೋಕವನದಲ್ಲಿಟ್ಟು ಇತರತ್ರ ಹೋಗುವದು ಬರುವದು ಮೊದಲಾದವುಗಳಿಗೆ ಅವಕಾಶವಿಲ್ಲದಹಾಗೆ ನಿರ್ಬಂಧರೂಪವಾಗಿ ರಕ್ಷಣೆಮಾಡಿದನು. ಶ್ರೀರಾಮದೇವರಾದರೋ ಆ ವನದಲ್ಲಿ ಅತ್ಯಂತ ದುಷ್ಟನಾದ ಮಾರೀಚ ( ಮಾಯಾಮೃಗ ) ರಾಕ್ಷಸನನ್ನು ಸಂಹಾರಮಾಡಿ ತಮ್ಮ ಆಶ್ರಮಕ್ಕೆ ಹಿಂತಿರುಗಿ ಬಂದು ನೋಡಿದಾಗ ತಮ್ಮ ಪ್ರಿಯಳಾದ ಶ್ರೀಸೀತಾದೇವಿಯನ್ನು ಕಾಣಲಿಲ್ಲವೆಂದು ಪ್ರಸಿದ್ಧಪಡಿಸಿದರು.

ಶ್ಲೋಕ॥ ಅನ್ವೇಷಮಾಣ ಇವ ತಂ ಚ ದದರ್ಶ ಗೃಧ್ರಂ ಸೀತಾಂ ರಿರಕ್ಷಿಷುಮ
ಥೋ ರಿಪುಣಾ ವಿಶಸ್ತಂ । ಮಂದಾತ್ಮಚೇಷ್ಟಮಮುನೋಕ್ತಮರೇಕ್ಷ್ಯ ಕ
ರ್ಮ ಶ್ರುತ್ವಾಮೃತಂ ತಮದಹತ್ಸ್ವಗತಿಂ ತಥಾದಾತ್ ॥೪೧॥

ಅರ್ಥ.—ಅನ್ವೇಷಮಾಣ ಇವ=ತಮ್ಮ ಪತ್ನಿಯಾದ ಸೀತಾದೇವಿಯನ್ನು ಹುಡುಕುವ ನಿಮಿತ್ತವಾಗಿ ಅಲ್ಲಲ್ಲಿ ತಿರುಗಾಡುತ್ತಿರುವ ಶ್ರೀರಾಮದೇವರು, ಸೀತಾಂ-ಸೀತಾದೇವಿಯರನ್ನು, ರಿರಕ್ಷಿಷುಂ=ರಕ್ಷಣಮಾಡಬೇಕೆಂದು ಹೋಗಿ, ರಿಪುಣಾ=ಶತ್ರುವಾದ ರಾವಣನಿಂದ, ವಿಶಸ್ತಂ-ಹತಪ್ರಾಯನಾದ, ಮಂದಾತ್ಮಚೇಷ್ಟಂ=ಶರೀರ ಚೇಷ್ಟಾರಹಿತನಾದ, ತಂ=ಆ ಜಟಾಯುನಾಮಕನಾದ, ಗೃಧ್ರಂ=ಹದ್ದನ್ನು, ದದರ್ಶ ಚ=ನೋಡಿದರು. ಅಥ=ಅನಂತರದಲ್ಲಿ, ಅಮುನಾ=ಈ ಗೃಧ್ರದಿಂದ, ಉಕ್ತಂ-ಹೇಳಲ್ಪಟ್ಟ, ಅರೇಃ

=ಶತ್ರುವಾದ ರಾವಣನ, ಕರ್ಮಚ=ಕಾರ್ಯವನ್ನು, ಶ್ರುತ್ವಾ=ಕೇಳಿ, ಕೂಡಲೆ, ಮೃತಂ=ಮೃತಪಟ್ಟ, ತಂ=ಜಟಾಯುವನ್ನು, ಅದಹೇತ್ - ದಹನ ಮಾಡಿದರು. ತಥೈವ=ಹಾಗೆಯೇ, ಸ್ವಗತಿಂ-ತಮ್ಮ ವೈಕುಂಠಲೋಕವನ್ನು, ಅದಾತ್-ಕೊಟ್ಟರು.

ತಾತ್ಪರ್ಯ.—ಶ್ರೀರಾಮರು ಸೀತಾದೇವಿಯರನ್ನು ಹುಡುಕಿಕೊಂಡು ಅಲ್ಲಲ್ಲಿ ಸಂಚಾರಮಾಡುತ್ತಾ ರಾವಣನಿಂದ ಒಯ್ಯಲ್ಪಡುತ್ತಿರುವ ಶ್ರೀಸೀತಾದೇವಿಯರನ್ನು ರಕ್ಷಣೆಮಾಡಬೇಕೆಂಬ ಅಪೇಕ್ಷೆಯಿಂದ ರಾವಣನ ಸಂಗಡ ಯುದ್ಧಮಾಡಿ ಸೋತು ಹತಪ್ರಾಯನಾಗಿ ಅಂಗಚಲನ ಮಾಡುವುದಕ್ಕೂ ಸಹ ಶಕ್ತಿಯಿಲ್ಲದೆ ಬಿದ್ದಿದ್ದ ಜಟಾಯುವನ್ನು ಕಂಡರು ಅನಂತರ ಆ ಗೃಧ್ರದ ಮುಖದಿಂದ ತಮಗೆ ಶತ್ರುವಾದ ರಾವಣನ ಕೃತ್ಯವನ್ನು ಕೇಳಿ ಮೃತನಾದ ಜಟಾಯುವಿನ ಹದ್ದಿನರೂಪದ ಶರೀರವನ್ನು ದಹನಮಾಡಿದರು ಹಾಗೆಯೇ ತಮ್ಮಿಂದ ಸಂಸ್ಕೃತನಾದ ಅತ್ಯಂತ ಭಕ್ತನಾದ ಜಟಾಯುವಿಗೆ ವೈಕುಂಠಲೋಕವನ್ನು ಕೊಟ್ಟರು.

ಶ್ಲೋಕ ॥ ಅನ್ಯತ್ರಚೈವ ವಿಚರನ್ ಸಹಿತೋನುಜೇನ ಪ್ರಾಪ್ತಃ ಕರೌಸಸಹಸಾ ಥಕ ಬಂಧನಾಮ್ನಃ ॥ ಧಾತುರ್ವರಾದಖಿಲಜಾಯಿವ ಊರ್ಝಿತಸ್ಯ ಮೃತ್ಯೋಶ್ಚ ವಜ್ರಪತನಾದತಿ ಕುಂಚಿತಸ್ಯ ॥೪೨॥

ಅರ್ಥ.—ಅನುಜೇನ-ತಮ್ಮನಾದ ಲಕ್ಷ್ಮಣರಿಂದ, ಸಹಿತಃ=ಸಮೇತರಾದ, ಸಃ=ಶ್ರೀರಾಮರು, ಅನ್ಯತ್ರಚ=ಮತ್ತೊಂದು ಸ್ಥಳದಲ್ಲಿ, ವಿಚರನ್=ಸಂಚಾರ ಮಾಡುತ್ತಾ, ಸಹಸಾ=ಪ್ರಯಾಸದಿಂದ, ಧಾತುಃ-ಬ್ರಹ್ಮದೇವರ, ವರಾತ್=ವರಪ್ರಸಾದದಿಂದ, ಅಖಿಲಜಾಯಿನಃ=ಸಮಸ್ತ ಜಗತ್ತನ್ನು ಜಯಿಸತಕ್ಕ, (ಅಪಿ=ಮತ್ತು) ಮೃತ್ಯೋಶ್ಚ-ಮೃತ್ಯುವಿನಿಂದ, ಊರ್ಝಿತಸ್ಯ=ಮುಕ್ತನಾದ, ವಜ್ರಪತನಾತ್=ಇಂದ್ರದೇವರ ವಜ್ರಾಯುಧ ಘಾತದಿಂದ, ಅತಿಸಂಕುಚಿತಸ್ಯಚ=ಅತ್ಯಂತ ಸಂಕೋಚತ್ವವನ್ನು ಹೊಂದಿದ್ದ, ಕಬಂಧನಾಮ್ನಃ=ಕಬಂಧನೆಂದು ಹೆಸರುಳ್ಳ ರಾಕ್ಷಸನ, ಕರಾವೇವ-ಕೈಗೆ, ಪ್ರಾಪ್ತಂ-ಆಕಸ್ಮಿಕವಾಗಿ ಸಿಕ್ಕಿದರು.

ತಾತ್ಪರ್ಯ.—ಆ ದಂಡಕಾರಣ್ಯದಲ್ಲಿ ತಮ್ಮನಾದ ಲಕ್ಷ್ಮಣನಿಂದ ಸಹಿತರಾಗಿ ಸಂಚಾರಮಾಡುತ್ತಾ ಇರುವ ಶ್ರೀರಾಮರು ಮತ್ತೊಂದು ವನಾಂತರ ಸ್ಥಳದಲ್ಲಿ ಬಹಳ ಕಷ್ಟಪಟ್ಟು ಬ್ರಹ್ಮನಿಂದ ಸಂಪಾದನ ಮಾಡಿದ ವರ ಪ್ರಸಾದದಿಂದ ಸಮಸ್ತ ಜಗತ್ತನ್ನೂ ಜಯಿಸತಕ್ಕ ಸಾಮರ್ಥ್ಯವುಳ್ಳ ಮೃತ್ಯು ರಹಿತನಾದ ಮತ್ತು ಇಂದ್ರನ ವಜ್ರಾಯುಧದ ಪೆಟ್ಟಿನಿಂದ ಅತ್ಯಂತ ಕುಗ್ಗಿಹೋದ ಶರೀರವುಳ್ಳ ಕಬಂಧನೆಂಬ ರಾಕ್ಷಸನ ಕೈಗೆ ಆಕಸ್ಮಿಕವಾಗಿ ಸಿಕ್ಕಿದರು.

ಶ್ಲೋಕ ॥ ಛಿತ್ವಾಸ್ಯ ಬಾಹುಯುಗಳಂ ಸಹಿತೋನುಜೇನತಂಪೂರ್ವವತ್ಪ್ರತಿವಿ
ಧಾಯ ಸುರೇಂದ್ರ ಭೃತ್ಯಂ । ಸಾಮ್ನಾದನುಂ ತ್ರಿಜಟೆಯೈವ ಪುರಾ
ಭಿಜಾತಂ ಗಂಧರ್ವ ಮಾರುಚತತೋಽಪಿತದರ್ಚಿತೋಗಾತ್ ॥೪೩॥

ಅರ್ಥ.—ಅನುಜೇನಸಹಿತಃ=ತಮ್ಮನಿಂದ ಸಹಿತರಾದ ಶ್ರೀರಾಮರು ಅಸ್ಯ=ಈ ಕಬಂಧರಾಕ್ಷಸನ, ಬಾಹುಗಳಂ=ಎರಡು ತೋಳುಗಳನ್ನು, ಛಿತ್ವಾ=ಕತ್ತರಿಸಿ, ತ್ರಿಜಟೆಯಾ=ತ್ರಿಜಟೆಯೆಂಬ ರಾಕ್ಷಸಿಯಲ್ಲಿ, ಸಾಮ್ನಾದನುಂ=ದನುಂ ಎಂಬ, ಹೆಸರಿನಿಂದ, ಅಭಿಜಾತಂ-ಹುಟ್ಟಿದ್ದ, ತಂ-ಆ ಕಬಂಧನನ್ನು, ಪೂರ್ವವತ್=ಮೊದಲಿನಂತೆ, ಇಂದ್ರಭೃತ್ಯ=ದೇವೇಂದ್ರನ ಸೇವಕನಾದ, ಗಂಧರ್ವಂ=ವಿಶ್ವಾವಸು ಎಂಬ ಗಂಧರ್ವನನ್ನಾಗಿ, ಪ್ರತಿವಿಧಾಯ-ಮಾಡಿ, ತದಾಜಿತಃ=ಆ ಗಂಧರ್ವನಿಂದ, ಅರ್ಚಿತಃ=ಪೂಜಿತರಾಗಿ ತತಃ=ಅಲ್ಲಿಂದ, ಅಗಾತ್-ಹೋಟರು.

ತಾತ್ಪರ್ಯ.—ಪೂರ್ವದಲ್ಲಿ ಸ್ಥೂಲಶಿರನೆಂಬ ಋಷಿಯ ಶಾಪದಿಂದ ವಿಶ್ವಾವಸು ಎಂಬ ಗಂಧರ್ವನು ತ್ರಿಜಟೆ ಎಂಬ ರಾಕ್ಷಸಿಯಲ್ಲಿ ಹುಟ್ಟಿ, ಧನುಯೆಂಬ ಹೆಸರುಳ್ಳವನಾಗಿದ್ದನು. ಅನಂತರ ಇವನು ಪೂರ್ವ ಶ್ಲೋಕದಲ್ಲಿ ಹೇಳಿರುವ ರೀತಿಯಿಂದ ಕಬಂಧನೆಂದು ಪ್ರಸಿದ್ಧನಾದನು. ಈ ರಾಕ್ಷಸನ ಎರಡು ತೋಳುಗಳನ್ನು ರಾಮಲಕ್ಷ್ಮಣರು ಕತ್ತರಿಸಿ ಅವನಿಗೆ ಅವನ ನಿಜರೂಪವನ್ನು ಕೊಟ್ಟು ಅವನಿಂದ ಪೂಜಿತನಾಗಿ ಅಲ್ಲಿಂದ ಶಬರಿಯ ಆಶ್ರಮಕ್ಕೆ ಹೋದರು.

ವಿಶೇಷಾರ್ಥ.—ಇಲ್ಲಿ ಅನುಜೇನ ಸಹ ಎಂದರೆ ಲಕ್ಷ್ಮಣನು ಸಹ ಈ ಕಬಂಧನ ಒಂದು ಭುಜವನ್ನು ಕತ್ತರಿಸಿದನೆಂದು ಹೇಳಲ್ಪಟ್ಟಿದೆ. ( ಕಥು ಕ್ತಂ ಸಂಗ್ರಹೇ ) ಬಾಹುಗಳನ್ನು ಕತ್ತರಿಸಿ ಆ ದೇಹವನ್ನು ಬಿಲದಲ್ಲಿ ಸೇರಿಸಿದರು. ( ರಾಮಾಜ್ಞಯಾಥಥ ಸೌಮಿತ್ರಿಸ್ತದ್ದೇಹಮಂಧಾದ್ಬಿಲಂ ) ಅಂದರೆ ರಾಮರ ಆಜ್ಞಾಪ್ರಕಾರ ಲಕ್ಷ್ಮಣರು ಕಬಂಧನ ತೋಳುಗಳನ್ನು ಕತ್ತರಿಸಿ ಅವನ ದೇಹವನ್ನು ಬಿಲವಲ್ಲಿ ವಿರಾಧನಿಗೆ ಮಾಡಿದಂತೆ ಸೇರಿಸಿಬಿಟ್ಟರೆಂದು ತಾತ್ಪರ್ಯ. ವಿಶ್ವಾವಸು ನಾಮಕನಾದ ಗಂಧರ್ವನು " ಸ್ಥೂಲಶಿರೋ " ನಾಮಕ ಬ್ರಾಹ್ಮಣನ ಶಾಪಪ್ರಭಾವದಿಂದ ತ್ರಿಜಟಾ ಎಂಬ ರಾಕ್ಷಸಸ್ತ್ರೀಯಲ್ಲಿ ಹುಟ್ಟಿ, " ದನು " ಎಂದು ಹೆಸರುಳ್ಳವನಾಗಿದ್ದನು. ಇವನು ( ಧನುರಾಕ್ಷಸನು ) ಬ್ರಹ್ಮದೇವರ ವರಬಲದಿಂದ ಸಮಸ್ತ ಜಗತ್ತನ್ನೂ ಜಯಿಸತಕ್ಕ ಪರಾಕ್ರಮಶಾಲಿಯಾಗಿದ್ದನು. ಇವನನ್ನು ಇಂದ್ರದೇವರು ವಜ್ರಾಯುಧದಿಂದ ಪ್ರಹಾರಮಾಡಿದರು. ಆ ಪ್ರಹಾರದಿಂದ ಮೃತನಾಗದೆ ಇವನ ಭುಜಗಳೂ, ತಲೆಯೂ ಹೊಟ್ಟೆಯೊಳಗೆ ಸಿಕ್ಕಿಕೊಂಡು ಅಡಗಿಹೋದವು. ಇದರಿಂದ ಇವನಿಗೆ ಕಬಂಧನೆಂದು ಹೆಸರಾಯಿತು. ಈ ಕಬಂಧನು ಪೂರ್ವದಲ್ಲಿ " ವಿಶ್ವಾವಸು " ನಾಮಕ ಗಂಧರ್ವನಾಗಿದ್ದನೆಂದು ಅರಣ್ಯಪರ್ವದಲ್ಲಿ ಹೇಳಿದೆ. ಹೇಗೆಂದರೆ.—ತಸ್ಯಾವಚಕ್ಷೇ ಗಂಧರ್ವೋ। ವಿಶ್ವಾವಸುರಹನ್ನೃಪ ॥ ಪ್ರಾಪ್ತೋ ಬ್ರಾಹ್ಮಣ ಶಾಪೇನ। ಯೋನಿಂ ರಾಕ್ಷಸಸೇವಿತಾಃ ಇತಿ " ದನುಂತಿನಾಮ್ನಾ ದಾನವ ಇತ್ಯುಕ್ತಂ ॥ ಆರ್ಷರಾಮಾಯಣೇ ॥ ತಥಾ " ದನುರ್ನಾಮ್ನಾ ಚದಾನವಂ ॥ ಇಂದ್ರಕೋಪಾದಿದಂ ರೂಪಂ। ಪ್ರಾಪ್ತವಂತಮವೈಹಿಚ ॥ಇತಿ॥ ತಸ್ಯಬಾಹುಪ್ರಯುಕ್ತೇನ। ವಜ್ರೇಣಂತಪರ್ವಣಾ ಸಕ್ಥಿನೀಮೇಶಿರಶ್ಚೈವ ಶರೀರೇ ತ್ರೀಣ್ಯವೇಶಯತ್ ॥ಇತಿ॥ ಅಪಿಚಉಕ್ತಂ ॥ " ರಾಕ್ಷಸತ್ವೇ ದನುರ್ನಾಮವಾ ನಿತ್ಯಾಚಾರ್ಯೈ ರಪಿಸಪ್ತದಶೇ ಅಧ್ಯಾಯೇ ಜರಾದಂ ಧರಾಚ ಸಂವಾದೇ ಉಕ್ತಂ ॥ ಯಥಾ। ಶ್ಲೋಕ.—ಅತೋನ್ಯಥಾ ದನುರ್ಯಥಾವರಾದ ಮೃತ್ಯುಕೋಪಿಸಃ ॥ ಸುರೇಂದ್ರ ವಜ್ರತಾಡನಾದ್ಧಭೂವ ಕುಕ್ಷಿಗಾಸ್ಯಯುತ್ ॥ ಇತಿ ॥

ಏವಂಚ=ವಿಶ್ವಾವಸುನಾಮಕನಾದ ಗಂಧರ್ವನು ಸ್ಥೂಲ ಶಿರೋನಾಮಕ ಬ್ರಾಹ್ಮಣ ಶಾಪದಿಂದ ತ್ರಿಜಟಾ ನಾಮಕ ರಾಕ್ಷಸ ಸ್ತ್ರೀಯೋನಿಯಲ್ಲಿ ಜನಿಸಿ ದನು ಎಂಬ ಹೆಸರನ್ನು ಪಡೆದನು. ಇವನು ರಾಕ್ಷಸನು, ಬ್ರಹ್ಮದೇವರ ವರದಿಂದ ಸಮಸ್ತ ಪ್ರಪಂಚದಲ್ಲಿ ಜಯಶೀಲನಾದನು. ಇಂದ್ರ ಸಭೆಯಲ್ಲಿ ಇವನನ್ನು ಇಂದ್ರನು ವಜ್ರಾಯುಧದಿಂದ ಹೊಡೆದದ್ದರಿಂದ ಶಿರಸ್ಸು ಮತ್ತು ಬಾಹುಗಳೂ ಅವನ ಹೊಟ್ಟೆಯಲ್ಲಿ ಶಿಕ್ಕಿಕೊಂಡು ಹೋಗಿ, ಅದರಿಂದ ಸಂಕೋಚವಾದ ಶರೀರವುಳ್ಳವನಾಗಿ " ಕಬಂಧ ' ಎಂಬ ರಾಕ್ಷಸತ್ವವನ್ನು ಹೊಂದಿದನು. ಹೀಗಿರಲು ಶ್ರೀರಾಮರು ಅಲ್ಲಲ್ಲಿ ಸಂಚಾರ ಮಾಡಿಕೊಂಡು, ಲಕ್ಷ್ಮಣರಿಂದ ಸಹಿತರಾಗಿ ಈ ಕಬಂಧ ರಾಕ್ಷಸನ ಬಾಹುಗಳನ್ನು ನೋಡಿ ಲಕ್ಷ್ಮಣರಿಂದ ಬಾಹುಗಳನ್ನು ಕತ್ತರಿಸಿ ಪೂರ್ವದಲ್ಲಿ ವಿರಾಧನನ್ನು ಸ್ಥಾಪನ ಮಾಡಿದಹಾಗೆ ಇವನ ಶರೀರವನ್ನೂ ಬಿಲದಲ್ಲಿ ಶೇರಿಸಿದರು. ಅನಂತರ ಮೂಲರೂಪನಾದ ವಿಶ್ವಾವಸು ನಾಮಕ ಗಂಧರ್ವನನ್ನು ಶಾಪದಿಂದ ವಿಮೋಚನೆ ಮಾಡಿ ಪೂರ್ವದಂತೆ ದೇವೇಂದ್ರನ ಭೃತ್ಯನನ್ನಾಗಿ ಮಾಡಿ, ಅವನಿಂದ ಪೂಜೆಗೊಂಡವರಾಗಿ ಮುಂದಕ್ಕೆ ಹೊರಟು ಶಬರಿಯ ಆಶ್ರಮಕ್ಕೆ ಸೇರಿದರು.

ಶ್ಲೋಕ ॥ ದೃಷ್ಟ್ವಾ ತಮೇವ ಶಬರೀ ಪರಮಂ ಹರಿಂಚ ಜ್ಞಾತ್ವಾ ವಿವೇಶದಹನಂ ಪುರತೋಽಸ್ಯ ತಸ್ಯೈ ॥ ಪ್ರಾದಾತ್ಸ್ವಲೋಕಮಮುಮೇ ವಹಿ ಸಾಪ್ರತೀಕ್ಷ್ಯ । ಪೂರ್ವಂ ಮತಂಗವಚನೇನ ವನೇತ್ರಸಾಭೂತ್ ॥

ಅರ್ಥ.—ಶಬರೀ=ಶಬರರ ವಂಶೋತ್ಪನ್ನಳಾದ ಶಬರಿಯೆಂಬ ಸ್ತ್ರೀಯು, ತಮೇವ=ಮತಂಗಋಷಿಗಳಿಂದ ಹೇಳಲ್ಪಟ್ಟ ಲಕ್ಷಣಗಳುಳ್ಳ, ಹರಿಂ=ಶ್ರೀರಾಮರನ್ನು, ದೃಷ್ಟ್ವಾ=ನೋಡಿ, ತಂ=ಆ ಹರಿಯನ್ನು, ಪರಮಂ=ಸರ್ವೋತ್ಕೃಷ್ಟನನ್ನಾಗಿ, ಜ್ಞಾತ್ವಾ-ತಿಳಿದು, ಅಸ್ಯ=ಶ್ರೀರಾಮರ, ಪುರತಃ=ಸಮಕ್ಷಮದಲ್ಲ, ದಹನಂ-ಅಗ್ನಿಯನ್ನು, ವಿವೇಶ=ಪ್ರವೇಶಮಾಡಿದಳು, ತಸ್ಯೈ = ಅವಳಿಗೆ, ಸಃ = ಶ್ರೀರಾಮರು, ಸ್ವಲೋಕಂ=ಸ್ವಕೀಯವಾದ

ಲೋಕವನ್ನು, ಪ್ರಾದಾತ್-ಕೊಟ್ಟರು. ಸಾಹಿ - ಆ ಶಬರಿಯಾದರೋ, ಪೂರ್ವಂ-ಮೊದಲೇ, ಮತಂಗ=ಮತಂಗಋಷಿಗಳು ಹೇಳಿದ್ದ, ವಚನೇನ-ವಾಕ್ಯದ ಭರವಸೆಯಿಂದ, ಇಮಮೇವ-ಈ ಶ್ರೀರಾಮರನ್ನೇ, ಪ್ರತೀಕ್ಷ್ಯ ನಿರೀಕ್ಷಿಸಿಕೊಂಡು, ಅತ್ರವನೇ=ಆ ಮತಂಗವನದಲ್ಲಿ, ಅತ್ರಸಾ=ಪರಲೋಕ ಪ್ರಾಪ್ತಿ ವಿಷಯದಲ್ಲಿ ಭಯರಹಿತಳಾಗಿ, ಅಭೂತ್=ವಾಸಮಾಡಿಕೊಂಡಿದ್ದ ಳು. (ವಿಶೇಷಾರ್ಥ.—ಅತ್ರಸಾಯೆಂಬ ಶಬ್ದಕ್ಕೆ ಉದ್ವೇಗ ರಹಿತತ್ವಾರ್ಥಕ ಯೇಕಪದವು ಅತ್ರ-ಸಾ-ಎಂದು ಪದಮಾಡಬಾರದು, ಏಕೆಂದರೆ.-ತ್ರಸತೀತಿ-ತ್ರಸಾ, ನ-ತ್ರಸಾ, ಅತ್ರಸಾ-ತ್ರಸೀ ಉದ್ವೇಗ ಇತಿ ಧಾತೋಃರ್ಬಲೇನ ತ್ರಸಾ—ಅಂದರೆ " ಉದ್ವೇಗ " ಎಂದರ್ಥವು. )

ವಿಶೇಷಾಭಿಪ್ರಾಯವು.—ಈ ಶಬರಿಯು ಶಬರ ಕುಲೋತ್ಪನ್ನಳು. ಇವಳಿಗೆ ಶ್ರೀರಾಮರು ಚಿತ್ರಕೂಟಕ್ಕೆ ಬಂದಾಗಲೇ ಮತಂಗಋಷಿಗಳು ಶ್ರೀರಾಮರ ಮತಂಗವನಕ್ಕೆ ಬರುತ್ತಾರೆಂದು ಹೇಳಿದ್ದರು. ಮತ್ತು ಶ್ರೀ ರಾಮರ ರೂಪಾದಿ ಲಕ್ಷಣಗಳನ್ನೂ ತಿಳಿಸಿದ್ದರು. ಆ ವಚನದ ಭರವಸೆ ಯಿಂದ ಶ್ರೀರಾಮರ ಆಗಮನವನ್ನು ನಿರೀಕ್ಷಿಸಿಕೊಂಡು ಮತಂಗವನದಲ್ಲಿ ಯೇ ನಿರ್ಭಯವಾಗಿ ವಾಸಮಾಡಿಕೊಂಡಿದ್ದಳು. ಅದೇ ಪ್ರಕಾರ ಕಭಂದ ನಾಮಕ ರಾಕ್ಷಸನಾಗಿದ್ದ ವಿಶ್ವಾವಸು ನಾಮಕ ಗಂಧರ್ವನನ್ನು ಉದ್ಧಾರ ಮಾಡಿ ಮುಂದಕ್ಕೆ ಹೊರಟು ಸೌಮಿತ್ರಿಯಿಂದ ಸಹಿತರಾಗಿ ಈಗ ಮತಂಗ ವನಕ್ಕೆ ಬಂದರು. ಶಬರಿಯು ಇವರನ್ನು ನೋಡಿ ಮತಂಗರು ಹೇಳಿದ್ದ ಲಕ್ಷಣಗಳು ಇವರಲ್ಲಿ ಇದ್ದದ್ದರಿಂದ ಇವರೇ ಪರಮ ಶ್ರೇಷ್ಠರಾದ ಶ್ರೀರಾ ಮರೆಂದು ತಿಳಿದು ಅವರ ಪಾದಗಳ ಸನ್ನಿಧಾನದಲ್ಲಿ ಅಗ್ನಿ ಪ್ರವೇಶಮಾಡಿ ದಳು. ಶ್ರೀರಾಮರು ಇವಳ ಭಕ್ತಿಗೆ ಮೆಚ್ಚಿ ಇವಳಿಗೆ ತಮ್ಮ ಸ್ವಕೀಯ ವಾದ ಲೋಕವನ್ನು ಕೊಟ್ಟರು.

ವಿಶೇಷಾರ್ಥ.—ಈ ಶಬರಿಯು ವಾಸವಾಗಿದ್ದ ಸ್ಥಳವು ಮತಂಗವನ ವೆಂದು ಆರ್ಷರಾಮಾಯಣದಲ್ಲಿ ಹೇಳಲ್ಪಟ್ಟಿದೆ. ( ಯಥಾ ) " ಮತಂಗ ವನಮಿತ್ಯೇತ | ದ್ವಿಶ್ರುತಂ ಭುವಿರಾಘವೇ ತ್ಯಾರ್ಷೇ ರಾಮಾಯಣೇ " ॥ ಮತ್ತು " ಆಗಮಿಷ್ಯತಿ ಕಾಕುತ್‌ಸ್ಥಃ | ಸುಪುಣ್ಯಂ ತವಚಾಶ್ರಮಂ ॥ ಸತೇ ಪ್ರತಿಗೃಹೀತವ್ಯೋ | ರಾಮಃ ಸೌಮಿತ್ರಿಣಾ ಸಹ ॥ ತಮರ್ಚಿತ್ವಾ

ದ್ಧ್ಯೇವಂಸ್ವರ್ಗೋ | ಭವಿಷ್ಯತಿ ತಪಾಕ್ಷಯಂ" ಇತ್ಯಾರ್ಷೇ ರಾಮಾಯಣೇ ಉಕ್ತಂ.

ಅವತಾರಿಕೆ.—ಶಬರಿಯು ಯಾರೆಂಬ ವಿಷಯವನ್ನು ಈ ಮುಂದಿನ ಶ್ಲೋಕವು ತಿಳಿಸುತ್ತದೆ.—

**ಶ್ಲೋಕ || ಶಾಪಾದ್ವರಾಪ್ಸರಮೇವ ಹಿತಾಂವಿಮೋಚ್ಯ | ಶಚ್ಯಾಕೃತಾತ್ಪತಿಪು ರಸ್ತ್ವತಿ ದರ್ಪಹೇತೋಃ || ಗತ್ವಾದದರ್ಶ ಪವನಾತ್ಮಜಮೃಶ್ಯಮೂಕೇ | ಸಹ್ಯೇಕ ಏನ ಮವಗಚ್ಛತಿ ಸಮ್ಯಗೀಶಂ ||೪೫||**

ಅರ್ಥ,—ರಾಮಃ=ಶ್ರೀರಾಮರು, ಪತಿ=ಪತಿಯಾದ ಇಂದ್ರದೇವರ, ಪುರಃ=ಸಮಕ್ಷಮದಲ್ಲಿ, ಅತಿದರ್ಪಹೇತೋಸ್ತು=ಅತ್ಯಂತ ಗರ್ವಮಾಡಿದ ಕಾರಣದಿಂದ, ಶಚ್ಯಾ=ಶಚೀದೇವಿಯರಿಂದ, ಕೃತಾತ್ - ಕೊಡಲ್ಪಟ್ಟ, ಶಾಪಾತ್=ಶಾಪದಿಂದ, ತಾಯೇೕವ=ನೀಚಯೋನಿಯಲ್ಲಿ ಉತ್ಪನ್ನಳಾದ ಶಬರಿಯನ್ನು, ವಿಮೋಚ-ಶಾಪದಿಂದ ತಪ್ಪಿಸಿ, ವರಾಪ್ಸರಸಂ-ಶ್ರೇಷ್ಠಳಾದ ಅಪ್ಸರ ಸ್ತ್ರೀಯಾಗುವಂತೆ ( ಕೃತ್ವಾ=ಅನುಗ್ರಹ ಮಾಡಿ) ಶ್ರೀರಾಮರು, ಸಃ=ಹನುಮಂತನು, ಏಕಹಿ-ಒಬ್ಬನು ಮಾತ್ರ, ಏನಂ=ತನ್ನನ್ನು, ಈಶಂ =ಸರ್ವೇಶ್ವರನಾದ ಪ್ರಭುವನ್ನಾಗಿ, ಸಮ್ಯಕ್-ಚೆನ್ನಾಗಿ, ಅವಗಚ್ಛತಿ-ತಿಳಿಯುತ್ತಾನೆ, ಇತಿ=ಹೀಗೆಂದು, ಗತ್ವಾ=ಶಬರಿಯಾಶ್ರಮದಿಂದ ಹೊರಟು, ರುಷ್ಯಮೂಕೇ=ರುಷ್ಯಮೂಕ ಪರ್ವತದಲ್ಲಿ, ಪವನಾತ್ಮಜಂ=ವಾಯು ಪುತ್ರನಾದ ಹನುಮಂತನನ್ನು, ದದರ್ಶ=ನೋಡಿದರು.

ತಾತ್ಪರ್ಯ.--ಶಬರಿಯು ಪೂರ್ವದಲ್ಲಿ ಇಂದ್ರಲೋಕದಲ್ಲಿ ಶ್ರೇಷ್ಠಳಾದ ಅಪ್ಸರ ಸ್ತ್ರೀಯಾಗಿದ್ದಳು. ಸಭೆಯಲ್ಲಿ ಇಂದ್ರ ಪತ್ನಿಯಾದ ಶಚೀದೇವಿಯರ ಸಮಕ್ಷಮದಲ್ಲಿಯೇ ದರ್ಪಯುಕ್ತವಾದ ಮಾತುಗಳನ್ನಾಡಿದ್ದರಿಂದ ಅವರು ಕೋಪಗೊಂಡವರಾಗಿ ನೀಚವಾದ ಶಬರ ಯೋನಿಯನ್ನು ಹೊಂದು ಎಂಬುದಾಗಿ ಶಾಪವನ್ನು ಕೊಟ್ಟರು. ಆ ಶಾಪದಿಂದ ಅಪ್ಸರ ಸ್ತ್ರೀಯು ಶಬರ (ಬೇಡರ) ಕುಲದಲ್ಲಿ

ಜನಿಸಿದಳು. ಅವಳನ್ನು ಶಾಪದಿಂದ ವಿಮೋಚನಮಾಡಿ ವಾಯುಪುತ್ರ ನಾದ ಹನುಮಂತನೊಬ್ಬನೇ ತನ್ನನ್ನು ಸರ್ವಶ್ರೇಷ್ಠನನ್ನಾಗಿಯೂ, ಸಮಸ್ತ ಜಗತ್ತಿಗೂ ಸ್ವಾಮಿಯನ್ನಾಗಿಯೂ ಸಾಕಲ್ಯ ತಿಳಿದದ್ದಾನೆಂಬುದನ್ನು ತಿಳಿವ ಶ್ರೀರಾಮರು ಶಬರಿಯಾಶ್ರಮದಿಂದ ಹನುಮಂತದೇವರು ಇದ್ದ ಋಷ್ಯ ಮೂಕಪರ್ವತಕ್ಕೆ ಹೋದರು. ಅಲ್ಲಿ ಪವನಾತ್ಮಜನಾದ ಹನುಮಂತದೇ ವರನ್ನು ಕಂಡರು.

ಅವತಾರಿಕೆ.—ಒಳ್ಳೆಯದು! ಹನುಮಂತನಿಗೆ ರಾಜನಾದ ಸುಗ್ರೀ ವನೇ ಆದಿಯವರನ್ನು ಬಿಟ್ಟು ವಾಯುಸುತನಾದ ಹನುಮಂತನಲ್ಲಿ ಅನು ಗ್ರಹ ಮಾಡುವುದಕ್ಕೆ ಕಾರಣವನ್ನು ಹೇಳುತ್ತಾರೆ. "ಕಸ್ಮಿನ್ನಹಂ" ಎಂ ಬ ಪ್ರಶ್ನೋಪನಿಷದ್ವಾಕ್ಯದಿಂದ ವಾಯುದೇವರು ಶ್ರೀಹರಿಗೆ ಪ್ರಿಯರು. ಆ ವಾಯುವಿನ ಅವತಾರರಾದ ಹನುಮಂತರು ಈ ಕಾರಣದಿಂದ ಶ್ರೀರಾ ಮಾವತಾರ ಮಾಡಿದ ಶ್ರೀಹರಿಗೆ ಪ್ರಿಯಪಾತ್ರರು.

**ಶ್ಲೋಕ ॥ ದೇಹೇಪಿಯತ್ರ ಪವನೋತ್ರ ಹರಿರ್ಯತೋಸೌ । ತತ್ರೈವವಾ ಯುರಿತಿ ವೇದವಚಃ ಪ್ರಸಿದ್ಧಂ ॥ ಕಸ್ಮಿನ್ನಹಂತ್ವಿತಿ ತಥೈವಹಿ ಸೋ ವತಾರೇ ॥ ತಸ್ಮಾತ್ಸ ಮಾರುತಿಕೃತೇರ ವಿಜಂರರಕ್ಷ ॥೪೬॥**

ಅರ್ಥ.—ಯತ್ರದೇಹೇ=ಯಾವ ದೇಹದಲ್ಲಿ, ಪವನಃ=ವಾಯುದೇ ವರೋ, ಅತ್ರ=ಆ ದೇಹದಲ್ಲಿ, ಹರಿಃ=ಪರಮಾತ್ಮನು ಇರುತ್ತಾನೆ, ಯ ತಃ=ಯಾವ ಕಾರಣದಿಂದ (ಎಲ್ಲಿ) ಅಸೌ=ಶ್ರೀಹರಿಯು ಇರುತ್ತಾನೆಯೋ, ವಾಯುಃ=ಪವನನು, ತತ್ರೈವ=ಅಲ್ಲಿಯೇ ಇರುತ್ತಾನೆ. ಕಸ್ಮಿಂಸ್ತು=ಯಾ ವ, ಅವತಾರೆ-ಅವತಾರದಲ್ಲಿ ಶ್ರೀಪರಮಾತ್ಮನು, ವಹಮಿತಿ=ಉತ್ಕ್ರಾಂ ತನಾಗುತ್ತಾನೆಯೋ, ಸಃ-ವಾಯುದೇವರು, ತಥೈವ=ಹಾಗೆಯೇ, ರಾಮ ಕೃಷ್ಣಾದ್ಯವತಾರಗಳಲ್ಲಿ, ಇತಿ=ಹೀಗೆಂದು, ವೇದವಚಃ-ವೇದವಾಕ್ಯವು, ಪ್ರ ಸಿದ್ಧಂ=ಪ್ರಸಿದ್ಧವಾಗಿದೆ. ತಸ್ಮಾತ್=ಆದ್ದರಿಂದ, ಹನುಮಂತರು ರಾಮ

ರಿಗೆ ಪ್ರಿಯರಾದ್ದರಿಂದಲೇನೇ, ಸಃ=ಶ್ರೀರಾಮರು, ಮಾರುತಕೃತೇ = ಹನುಮಂತರ ಮೇಲಿನ ಪ್ರೀತಿಗೋಸ್ಕರವಾಗಿಯೇ, ರವಿಜಂ=ಸೂರ್ಯಪುತ್ರನಾದ ( ಸುಗ್ರೀವನನ್ನು ) ರರಕ್ಷ=ರಕ್ಷಣವಮಾಡಿದರು.

ತಾತ್ಪರ್ಯ.—ಯಾವ ದೇಹದಲ್ಲಿ ವಾಯುದೇವರಿರುತ್ತಾರೆಯೋ ಆ ದೇಹದಲ್ಲಿ ಶ್ರೀಪರಮಾತ್ಮನಿರುತ್ತಾನೆ, ಶ್ರೀಪರಮಾತ್ಮನೆಲ್ಲಿರುತಾನೆಯೋ ಅಲ್ಲಿ ಶ್ರೀವಾಯುದೇವರು ಇರುತ್ತಾರೆಂದು ಉಪನಿಷತ್ತುಗಳಲ್ಲಿ ಉಕ್ತವಾಗಿದೆ. ಆದ್ದರಿಂದ ಹರಿ ವಾಯುಗಳಿಗೆ ಸಂಬಂಧ ಪ್ರಿಯತ್ವವು ಇದ್ದೇಇದೆ. ಇದೇ ಪ್ರಕಾರ ದೇವರ ಅವತಾರ ರೂಪಗಳಲ್ಲಿಯೂ ವಾಯು ಪರಮಾತ್ಮರಿಗೆ ಪ್ರಿಯತ್ವವು ಕಂಡು ಬಂದಿದೆ. ರಾಮಾವತಾರದಲ್ಲಿ ವಾಯ್ವವತಾರಭೂತರಾದ ಹನುಮಂತದೇವರಲ್ಲಿ ಪ್ರೀತಿಯು ಈ ಕಾರಣದಿಂದಲೇ, ಪ್ರೀತ್ಯಾಸ್ಪದರಾದ ಹನುಮಂತದೇವರಿಗೋಸ್ಕರವಾಗಿಯೇ ಹನುಮಂತದೇವರನ್ನು ಆಶ್ರಯಿಸಿರುವ ಸೂರ್ಯಪುತ್ರನಾದ ಸುಗ್ರೀವನನ್ನು ಶ್ರೀರಾಮರು ರಕ್ಷಣೆ ಮಾಡಿದರು.

ವಿಶೇಷವಿಷಯ.—ಶ್ರೀಹರಿವಾಯುಗಳಿಗೆ ಸಂಬಂಧ ಮತ್ತು ಪ್ರೀತಿ ವಿಷಯದಲ್ಲಿ “ ಕಸ್ಮಿನ್ನಹಮುತ್ಕ್ರಾಂತೇ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ವಾಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮಿ ” ಇತ್ಯಾದಿ ದೇವ ವಾಕ್ಯವು ಪ್ರಸಿದ್ಧವಾಗಿದೆ. ವಾಯುದೇವರು ಶ್ರೀಪರಮಾತ್ಮನಿಗೆ ರಾಮಕೃಷ್ಣಾದ್ಯವತಾರಗಳಲ್ಲಿ ಹೇಗೋ ಮೂಲರೂಪದಲ್ಲಿಯೂ ಸಹ ಹಾಗೆಯೇ ಪ್ರಿಯರು. ರಾಮಾವತಾರದಲ್ಲಿ ವಾಯ್ವವತಾರರಾದ ಹನುಮಂತರು ರಾಮರಿಗೆ ಅತ್ಯಂತ ಪ್ರಿಯರು. ಹನುಮಂತರಲ್ಲಿ ಪ್ರೀತಿಯಿರುವ ಕಾರಣದಿಂದಲೇ ಹನುಮಂತರಲ್ಲಿ ಶರಣಾಗತನಾದ ಸೂರ್ಯ ಪುತ್ರನಾದ ಸುಗ್ರೀವನನ್ನು ರಕ್ಷಣೆಮಾಡಿದರು- ಮತ್ತು ಇಲ್ಲಿ ವೇದವಚನ ಪ್ರಸಿದ್ಧವೆಂಬೋಣದರಿಂದ ಇಂದ್ರಸ್ಯ ಯುಜ್ಯಃ ಸಖಾ ” ಎಂಬ ವೇದವಾಕ್ಯವೂ ಅಭಿಪ್ರೇತವಾಗುತ್ತದೆ. ಇಂದ್ರ ಶಬ್ದವು ಇಲ್ಲಿ ಮುಖ್ಯಪ್ರಾಣರೆಂದು ಶ್ರೀಮದಾಚಾರ್ಯರಿಂದ ಋಗ್ಭಾಷ್ಯದಲ್ಲಿ ಉಕ್ತವಾಗಿದೆ. “ ಕಸ್ಮಿನ್ನಹಂ ” ಎಂಬೋಣದರಿಂದ “ ಮುಖ್ಯಪ್ರಾಣರೆಂದರ್ಥವಾಗುವದು. ಹನುಮಂತರಿಗೆ ಪ್ರಿಯರಾದುದರಿಂದ ಅವರಿಗೋಸ್ಕರ ಸುಗ್ರೀವನನ್ನು ರಾಮರು ರಕ್ಷಣೆಮಾಡಿದರು.

ಅವತಾರಿಕೆ.—ಶ್ರೀರಾಮರು ಸ್ವಪ್ರಯೋಜನಕ್ಕೋಸ್ಕರ ಸುಗ್ರೀವನನ್ನು ರಕ್ಷಣ ಮಾಡಿರಬಹುದೆಂಬ ಸಂದೇಹವನ್ನು ಮತ್ತೊಂದು ದೃಷ್ಟಾಂತದಿಂದ ಪರಿಹಾರಮಾಡುತ್ತಾರೆ.—

**ಶ್ಲೋಕ || ಏವಂ ಸಕೃಷ್ಣ ತನುರರ್ಜುನಮಪ್ಯರಕ್ಷ | ದ್ಭೀಮಾರ್ಥಮೇವ ತದರಿಂ ರವಿಜಂ ನಿಹತ್ಯ || ಪೂರ್ವಂಹಿ ಮಾರುತಿಮವಾಪ ರವೇ || ಸುತೋಽಯಂ ತೇನಾಸ್ಯ ವಾಲಿನಮಹನ್ ರಘುಪಃಪ್ರತೀಪಂ ||೪೭||**

ಅರ್ಥ.—ಹಿ=ಯಾವ ಕಾರಣದಿಂದ, ಅಯಂ-ಈ, ರವೇಃ= ಸೂರ್ಯನ, ಸುತಃ=ಮಗನಾದ ಸುಗ್ರೀವನು, ಪೂರ್ವಮೇವ=ಮೊದಲೇನೇ, ಮಾರುತಿಂ=ವಾಯುವಿನ ಅವತಾರರಾದ, ಮಾರುತಿಂ=ಹನುಮಂತರನ್ನು, ಅವಾಪ=ಶರಣುಹೊಂದಿದನೋ, ತೇನಕಾರಣೇನ=ಅದೇ ಕಾರಣದಿಂದಲೇ ರಘುಪಃ=ರಘುಪತಿಯಾದ ಶ್ರೀರಾಮರು, ಅಸ್ಯ-ಈ ಸುಗ್ರೀವನಿಗೆ, ಪ್ರತೀಪಂ=ಶತೃವಾದ, ವಾಲಿನಂ=ವಾಲಿಯನ್ನು, ಅಹನ್=ಸಂಹಾರಮಾಡಿದರು. ಏವಂ-ಅದೇ ಪ್ರಕಾರ, ಕೃಷ್ಣತನುಃ-ಕೃಷ್ಣಾವತಾರ ಮಾಡಿದಾಗಲೂ ಕೂಡ ಸಃ=ಶ್ರೀಹರಿಯು, ಭೀಮಾರ್ಥಮೇವ-ವಾಯುವಿನ ಅವತಾರರಾದ ಭೀಮಸೇನದೇವರಲ್ಲಿ ಪರಮಾತ್ಮಗಿದ್ದ (ಶ್ರೀಕೃಷ್ಣನಿಗಿದ್ದ) ಪ್ರೀತಿಗೋಸ್ಕರವಾಗಿಯೇ, ತದರಿಂ=ಅವರಿಗೆ ಶತೃವಾದ ಕರ್ಣನನ್ನು, ನಿಹತ್ಯ-ಸಂಹಾರ ಮಾಡಿ, ಅರ್ಜುನಂ-ಇಂದ್ರಪುತ್ರನಾದ ಅರ್ಜುನನನ್ನು, ಅರಕ್ಷತ್=ರಕ್ಷಣೆ ಮಾಡಿದರು.

ತಾತ್ಪರ್ಯ.—ಶ್ರೀರಾಮರು ಸ್ವಪ್ರಯೋಜನಕ್ಕೋಸ್ಕರ ಸುಗ್ರೀವನನ್ನು ರಕ್ಷಣೆಮಾಡಿದರೆಂಬ ಶಂಕಾಬಂದರೆ ಅದಕ್ಕೆ ಪರಿಹಾರವನ್ನು ಹೇಳುತ್ತಾರೆ. ಕೃಷ್ಣಾವತಾರದಲ್ಲಿಯೂ ಕೂಡ ವಾಯುವಿನ ಅವತಾರರಾದ ಭೀಮಸೇನದೇವರಲ್ಲಿ ಪರಮಾತ್ಮನಾಗಿದ್ದ ಪ್ರೀತಿಗೋಸ್ಕರವಾಗಿಯೇ ಅವರ ಒಡಹುಟ್ಟಿದ ಅರ್ಜುನನಿಗೆ ಶತೃವಾದ ಸೂರ್ಯಸುತನಾದ ಕರ್ಣನನ್ನು ಸಂಹಾರಮಾಡಿ ಅರ್ಜುನನನ್ನು ರಕ್ಷಿಸಿದರು. ಅದೇ ಪ್ರಕಾರ ಸುಗ್ರೀವನು ಮಾರುತಿಯನ್ನು ಮೊದಲೇ ಮೊರೆಹೊಕ್ಕಿದ್ದನಾದ್ದರಿಂದ ಸುಗ್ರೀವನಿಗೆ ಶತೃವಾದ ವಾಲಿಯನ್ನು ಸಂಹಾರಮಾಡಿ ಸುಗ್ರೀವನನ್ನು ರಕ್ಷಿಸಿದರು.

ಅವತಾರಿಕೆ.—ವಾಯುದೇವರಲ್ಲಿ ಮಾತ್ರ ಶ್ರೀರಾಮರ ಪ್ರೀತಿ ಪ್ರಾಮುಖ್ಯವಲ್ಲ. ಸರ್ವದೇವತೆಗಳಲ್ಲಿಯೂ ಪ್ರೀತಿಯುಂಟು. ಆದರೆ ಮಾರುತಿಯಲ್ಲಿದ್ದ ಪ್ರೀತಿಯ ವಿಷಯದಲ್ಲಿ ಕಾರಣಾಂತರಗಳನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ.—

**ಶ್ಲೋಕ॥ ಯೇವಂಸುರಾಶ್ಚ ಪವನಸ್ಯ ವಶೇ ಯತೋಽತಃ । ಸುಗ್ರೀವಮತ್ರ ತುಪರತ್ರ ಚ ಶಕ್ರಸೂನುಂ ॥ ಸರ್ವೇಶ್ರಿತಾ ಹನುಮತಸ್ತದನುಗ್ರಹಾಯ । ತತ್ರಾಗಮದ್ರಘುಪತಿಃ ಸಹಲಕ್ಷ್ಮಣೇನ ॥೪೮॥**

ಅರ್ಥ.—ಯತಃ=ಯಾವ ಕಾರಣದ್ದೆಶೆಯಿಂದ್ಧ, ದೇವಾಃಚ=ಶೇಷದೇವರೇ ಮೊದಲಾದ ಸಮಸ್ತ ದೇವತೆಗಳೂ, ಪವನಸ್ಯ=ಪರಮಾತ್ಮನ ಪ್ರಿಯರಾದ ವಾಯುದೇವರಿಗೆ, ವಶೇ=ವಶರಾಗಿ ಆಶ್ರಿತರಾಗಿದ್ದಾರೆಯೋ, ತಸ್ಮಾತ್–ಆ ಕಾರಣದಿಂದ, ಅತ್ರ=ರಾಮಾವತಾರದಲ್ಲಿ, ಸರ್ವೇ=ಸರ್ವದೇವತೆಗಳೂ, ಹನುಮತಃ=ವಾಯ್ವವತಾರಭೂತರಾದ ಹನುಮಂತರ ದೆಶೆಯಿಂದ, ಸುಗ್ರೀವಂ–ಸುಗ್ರೀವನನ್ನು, ಶ್ರಿತಾಃ=ವಾನರಾವತಾರ ರೂಪವಾಗಿ ಆಶ್ರಯಿಸಿದರು. ಪರತ್ರತು=ಕೃಷ್ಣಾವತಾರದಲ್ಲಿಯೂ, ಏವಂ=ಇದೇ ರೀತಿಯಾಗಿ, ಶಕ್ರಸೂನುಂ–ಇಂದ್ರನ ಪುತ್ರನಾದ ಅರ್ಜುನನನ್ನು, ಶ್ರಿತಾಃ =ಆಶ್ರಯಿಸಿದರು. ರಘುಪತಿಃ=ಶ್ರೀರಾಮದೇವರು, ತದಾನುಗ್ರಹಾಯ=ತಮಗೆ ಅತ್ಯಂತ ಪ್ರೇಮಪಾತ್ರರಾದ ಹನುಮಂತರಲ್ಲಿ ಅನುಗ್ರಹಮಾಡುವದಕ್ಕೋಸ್ಕರ, ಲಕ್ಷ್ಮಣೇನಸಹ=ಅನುಜರಾದ ಲಕ್ಷ್ಮಣರಿಂದ ಸಹಿತರಾಗಿ, ತತ್ರ=ಆ ಋಷ್ಯಮೂಕ ಪರ್ವತಕ್ಕಾಗಿ, ಆಗಮತ್=ಹೊರಟುಹೋದರು.

ತಾತ್ಪರ್ಯ.—ಈ ರೀತಿಯಾಗಿ ರಾಮದೇವರಿಗೆ ಹನುಮಂತರಲ್ಲಿ ಪ್ರೀತಿ ವಿಷಯದಲ್ಲಿ ಕಾರಣವೇನೆಂದರೆ ಆ ಕಾರಣಾಂತರವನ್ನು ಹೇಳುತ್ತಾರೆ. ಹೇಗೆಂದರೆ—ಶೇಷದೇವರೇ ಮೊದಲಾದ ಸಮಸ್ತ ದೇವತೆಗಳೂ ಮೂಲರೂಪದಿಂದ ವಾಯುದೇವರ ಅಧೀನರು. ಅವರಿಂದ ಆ ಸಮಸ್ತ ದೇವತೆಗಳೂ ವಾಯುದೇವರು ರಾಮಾವತಾರದಲ್ಲಿ ಹನುಮಂತರಾಗಿ ಅವತಾರ ಮಾಡಿರೋಣದರಿಂದ ಹನುಮಂತರ ದೆಸೆಯಿಂದ ರಾಮಾವತಾರದಲ್ಲಿ ಹನುಮಂತರಿಗೆ ಶರಣುಹೊಂದಿರುವ ಸುಗ್ರೀವನನ್ನೇ ವಾನರ ರೂಪದಿಂದ ಆಶ್ರಯಿಸಿದರು. ಕೃಷ್ಣಾವತಾರದಲ್ಲಿಯೂ ಇದೇ ರೀತಿ

ಯಾಗಿ ಸಮಸ್ತ ದೇವತೆಗಳೂ ಶ್ರೀಪರಮಾತ್ಮನ ಪ್ರಿಯರಾಗಿರುವ ಭೀಮ ಸೇನದೇವರ ದೆಶೆಯಿಂದ ಇಂದ್ರಪುತ್ರನಾದ ಅರ್ಜುನನನ್ನು ಆಶ್ರಯಮಾಡಿದರು. ಈ ಕಾರಣದಿಂದ ಶ್ರೀಹರಿ ವಾಯುದೇವರುಗಳಿಗೆ ಮೂಲರೂಪ ಮತ್ತು ಅವತಾರ ರೂಪಗಳಲ್ಲಿಯೂ ಸಂಬಂಧ ಪ್ರೀತಿತ್ವ ಸಿದ್ಧವಾಯಿತು. ಆದ್ದರಿಂದ ಶ್ರೀರಾಮರು ಶ್ರೀಹನುಮಂತರಿಗೆ ಪ್ರಿಯರಾದ್ದರಿಂದಲೇನೇ ಈ ಹನುಮಂತರಲ್ಲಿ ಅನುಗ್ರಹ ಮಾಡುವದಕ್ಕೋಸ್ಕರ ತಾವು ಲಕ್ಷ್ಮಣರಿಂದ ಸಹಿತರಾಗಿ ಅವರಿದ್ದ ಋಷ್ಯಮೂಕಪರ್ವತವನ್ನು ಕುರಿತು ಹೊರಟು ಹೋದರೆಂದು ತಾತ್ಪರ್ಯವು.

ಅವತಾರಿಕೆ.—ಶ್ರೀರಾಮರು ತಮಗೆ ಸಹಾಯಾಪೇಕ್ಷೆಯಿಂದ ಹನುಮಂತನನ್ನು ನೋಡುವುದಕ್ಕೆ ಋಷ್ಯಮೂಕಕ್ಕೆ ಹೋದರೆಂದು ಏಕೆ ಹೇಳಬಾರದೆಂಬುದನ್ನು ಹೇಳುತ್ತಾರೆ.—

**ಶ್ಲೋಕ ॥ ಯತ್ಪಾದ ಪಂಕಜರಜಃ ಶಿರಸಾಬಿಭರ್ತಿ । ಶ್ರೀರಬ್ಜಜಶ್ಚ ಗಿರಿಶಃ ಸಹಲೋಕಪಾಲೈಃ ॥ ಸರ್ವೇಶ್ವರಸ್ಯ ಪರಮಸ್ಯಹಿ ಸರ್ವಶಕ್ತೇಃಕಿಂತಸ್ಯಶತ್ರುಹನನೇ ಕಪಯಃ ಸಹಾಯಾಃ ॥೪೯॥**

ಅರ್ಥ.— ಲೋಕಪಾಲೈಃ=ಇಂದ್ರದೇವರು, ಗಿರಿಶಃ-ರುದ್ರದೇವರು ಅಬ್ಜಜಃ-ಬ್ರಹ್ಮದೇವರು, ಶ್ರೀಶ್ಚ=ಲಕ್ಷ್ಮೀದೇವಿಯರು ಸಹ, ಯತ್ಪಾದ ಪಂಕಜರಜಃ-ಯಾವ ಶ್ರೀಪರಮಾತ್ಮನ ಪಾದಕಮಲದಲ್ಲಿರತಕ್ಕ, ರಜಃಸ್ಸು =ಧೂಳಿಯನ್ನು, ಶಿರಸಾ=ಶಿರಸ್ಸಿನಿಂದ, ಬಿಭರ್ತಿ= ಧಾರಣಮಾಡುತ್ತಾರೆಯೋ, ಅಸ್ಯ=ಅಂತಹ, ಸರ್ವೇಶ್ವರಸ್ಯ=ಸಮಸ್ತ ದೇವತೆಗಳಿಂದ ಸಹಿತವಾದ ಪ್ರಪಂಚಕ್ಕೆ ಪ್ರಭುವಾದ, ಸರ್ವಶಕ್ತೇಃ=ಸಮಸ್ತ ವಿಷಯದಲ್ಲಿಯೂ ಶಕ್ತನಾದ, ಪರಮಸ್ಯಹಿ - ಪರಮಾತ್ಮನ ಅವತಾರಭೂತರಾದ, ತಸ್ಯ=ಆ ರಾಮದೇವರಿಗೆ, ಶತ್ರುಹನನೇ-ಶತ್ರು ಸಂಹಾರ ಮಾಡುವ ಕಾರ್ಯದಲ್ಲಿ, ಕಪಯಃ = ವಾನರುಗಳು, ಸಹಾಯಾಃಕಿಮ್ = ಸಹಾಯಮಾಡುವುದು ಎಂದರೇನು ?

ತಾತ್ಪರ್ಯ.—ಶ್ರೀರಾಮರು ತಮಗೆ ಸಹಾಯಾಪೇಕ್ಷೆಯಿಂದ ಹನುಮಂತನನ್ನು ಹೋಗಿ ಕಂಡರೆಂದು ಏತಕ್ಕೆ ಹೇಳಬಾರದೆಂದು ಶಂಕಾ

ಬಂದಲ್ಲಿ ಅದನ್ನು ಪರಿಹಾರಮಾಡುತ್ತಾರೆ. ಯಾವ ಪರಮಾತ್ಮನ ಸ್ವರೂಪನಾದ ಶ್ರೀರಾಮರ ಪಾದ ಧೂಳಿಯನ್ನು ಲಕ್ಷ್ಮೀ ಬ್ರಹ್ಮ ಋದ್ರೇಂದ್ರಾದಿ ಸಮಸ್ತ ದೇವತೆಗಳೂ ಭಕ್ತಿಪೂರ್ವಕವಾಗಿ ಶಿರಸಾಧಾರಣಮಾಡುತ್ತಾರೋ ಅಂತಹ ಸರ್ವೇಶ್ವರನಾದ ಸರ್ವೋತ್ತಮನಾದ ಸರ್ವ ಶಕ್ತನಾದ ಶ್ರೀರಾಮ ಚಂದ್ರನಿಗೆ ಅಲ್ಪ ಶಕ್ತರಾದ ಕಪಿಗಳಿಂದಾಗಬೇಕಾದ ಸಹಾಯವೆಂತಹುದು? ಲವಲೇಶವೂ ಇಲ್ಲವೆಂದು ಭಾವ.

**ಶ್ಲೋಕ || ಸಮಾಗತೇತು ರಾಘವೇ ಪ್ಲವಂಗಮಾಃ ಸಸೂರ್ಯಜಾಃ | ವಿಪ ಪ್ಲುವುರ್ಭಯಾರ್ದಿತಾಃ ನ್ಯವಾರಯಚ್ಚ ಮಾರುತಿಃ ||೫೦||**

ಅರ್ಥ.—ರಾಘವೇ-ಶ್ರೀರಾಮರು, ಸಮಾಗತೇಸತಿ-ಈ ಋಷ್ಯಮೂಕಕ್ಕೆ ಬಂದ ಒಡನೆಯೇ, ಪ್ಲವಂಗಮಾಃ=ಕಪಿಗಳು, ಸಸೂರ್ಯಜಾಃ-ಸುಗ್ರೀವನಿಂದ ಸಹಿತರಾಗಿ, ಭಯಾರ್ದಿತಾಃಸಂತಃ=ಭಯದಿಂದ ಪೀಡಿತರಾದವರಾಗಿ, ವಿಪಪ್ಲುವುಃ=ಓಡಿದರು. ಮಾರುತಿಶ್ಚ=ಹನುಮಂತರಾದರೋ, ಏತಾನ್=ಓಡಿಹೋಗುತ್ತಿರುವ ಕಪಿಗಳನ್ನು, ನ್ಯವಾರಯತ್ = ತಡೆದರು.

ತಾತ್ಪರ್ಯ.—ಶ್ರೀರಾಮರು ಲಕ್ಷ್ಮಣರಿಂದ ಸಹಿತರಾಗಿ ಋಷ್ಯಮೂಕಕ್ಕೆ ಬಂದವಡನೆಯೇ ಸಮಸ್ತ ಕಪಿಗಳೂ ಇವರು ವಾಲಿಗೆ ಸಂಬಂಧಪಟ್ಟವರೆಂದು ತಿಳಿದು ಭಯಗ್ರಸ್ಥರಾಗಿ ಸೂರ್ಯಪುತ್ರನಾದ ಸುಗ್ರೀವನಿಂದ ಸಹಿತರಾಗಿ ಓಡಿಹೋದರು. ಇದನ್ನು ನೋಡಿದ ಶ್ರೀರಾಮಭಕ್ತರಾದ ಶ್ರೀಹನುಮಂತರು ಸುಗ್ರಿವನಿಂದ ಸಹಿತರಾದ ಕಪಿಗಳಿಗೆಲ್ಲಾ ಧೈರ್ಯ ಹೇಳಿ ತಡೆದರೆಂದು ಅಭಿಪ್ರಾಯವು.

ಅವತಾರಿಕೆ.—"ಸಹ್ಯೇತ ಏನ ಮವಗಛ್ಛತಿಸಮ್ಯಗೀಶಂ" ಎಂದು ಹಿಂದೆ ಹೇಳಿದ ವಾಕ್ಯವನ್ನು ಈ ಶ್ಲೋಕದಲ್ಲಿ ವಿಶದಪಡಿಸುತ್ತಾರೆ.—

**ಶ್ಲೋಕ || ಸಂಸ್ಥಾಪ್ಯಾಶು ಹರೀಂದ್ರಾನ್ ಜಾನನ್ವಿಷ್ಣೋರ್ಗುಣಾನನಂತಾನ್ಸಃ ಸಾಕ್ಷಾದ್ಬ್ರಹ್ಮಪಿತಾಸೌ ವಿತ್ಯೇತೇನಾಸ್ಯ ಪಾದಯೋಃ ಪೇತೇ ||೫೧||**

ಅರ್ಥ.— ವಿಷ್ಣೋಃ=ಶ್ರೀವಿಷ್ಣು ಸ್ವರೂಪರಾದ ಶ್ರೀರಾಮರ, ಅನಂತಾನ್=ಅಪರಿಮಿತವಾದ, ಗುಣಾನ್=ಗುಣಗಳನ್ನು, ಜಾನನ್ - ತಿಳಿದಿರುವ, ಸಃ=ಆ ಹನುಮಂತದೇವರು, ಹರೀಂದ್ರಾನ್-ಓಡಿಹೋಗುತ್ತಿದ್ದ ಕಪಿಶ್ರೇಷ್ಠರನ್ನು, ಆಶು=ಶೀಘ್ರವಾಗಿ, ಸಂಸ್ಥಾಪ್ಯ=ತಡೆದು ಸ್ವಲ್ಪ ದೂರದಲ್ಲಿ ನಿಲ್ಲಿಸಿ ಅಸೌ=ಇವರು (ಶ್ರೀರಾಮರು) ಸಾಕ್ಷಾತ್=ಸಾಕ್ಷಾತ್ತಾಗಿ, ಬ್ರಹ್ಮಪಿತಾ=ಬ್ರಹ್ಮದೇವರಿಗೆ ಜನಕರು, ಇತ್ಯೇತೇನ=ಹೀಗೆಂದು ಉಪಚಾರದಿಂದ ಹೇಳಿ ಅಸ್ಯ=ಬಂದಿರತಕ್ಕ ಶ್ರೀರಾಮರ, ಪಾದಯೋಃ=ಪಾದಗಳಲ್ಲಿ, ಪೇತೇ-ನಮಸ್ಕಾರ ಮಾಡಿದರು.

ತಾತ್ಪರ್ಯ.—ಬಂದಿರತಕ್ಕ ಶ್ರೀರಾಮ ಲಕ್ಷ್ಮಣರನ್ನು ಇತರ ಕಪಿಗಳು ನೋಡಿ ತಮ್ಮ ಶತ್ರುವಾದ ವಾಲಿಯ ಕಡೆಯವರೆಂದು ಭಾವಿಸಿ ಭಯಪಟ್ಟು ಸುಗ್ರೀವ ಸಹಿತರಾಗಿ ಓಡಿಹೋದರು. ಅಷ್ಟರಲ್ಲಿಯೇ ಶ್ರೀವಿಷ್ಣು ಪರಮಾತ್ಮನ ಅಮೋಘವಾದ ಗುಣಗಳನ್ನು ತಿಳಿದಿರುವ ಶ್ರೀಹನುಮಂತರು ಓಡಿಹೋಗುತ್ತಿದ್ದ ಕಪಿಗಳನ್ನು ನಿಲ್ಲಿಸಿ ಶ್ರೀರಾಮರು ಬ್ರಹ್ಮದೇವರ ಜನಕರೆಂಬ ಬ್ರಹ್ಮಜ್ಞಾನ ಪೂರ್ವಕವಾದ ಉಪಚಾರೋಕ್ತಿಯಿಂದ ಸಮಾಧಾನಪಡಿಸಿ ತಾವು ಶ್ರೀರಾಮರ ಪಾದಗಳಲ್ಲಿ ನಮಸ್ಕಾರಮಾಡಿದರು. ಏತೇನ ಹಿಂದೆ ಆಹನೆಯ ಶ್ಲೋಕೋಕ್ತ ಪ್ರಕಾರ ಹನುಮಂತನೊಬ್ಬನೇ ತನ್ನನ್ನು ಸ್ವಾಮಿಯನ್ನಾಗಿ ಚೆನ್ನಾಗಿ ತಿಳಿದವನೆಂಬ ಶ್ರೀರಾಮರ ಅಭಿಪ್ರಾಯವು ಇಲ್ಲಿ ವಿಶದವಾಯಿತು.

ಈ ಪ್ರಕಾರ ಶ್ರೀಮದಾಚಾರ್ಯ ವಿರಚಿತವಾದ ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯ ಐದನೇ ಅಧ್ಯಾಯವು ಸಮಾಪ್ತವಾದುದು.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ
ಪಂಚಮೋಽಧ್ಯಾಯಃ ಸಮಾಪ್ತಃ

॥ ಶ್ರೀಕೃಷ್ಣಾರ್ಪಣಮಸ್ತು ॥



೬ನೆಯ ಅಧ್ಯಾಯ

ಅವತಾರಿಕೆ.—ಇದುವರಿವಿಗೂ ಅರಣ್ಯಕಾಂಡದ ಕಥೆಯನ್ನು ನಿರೂಪಣಮಾಡಿ ಮುಂದೆ ಕಿಷ್ಕಿಂಧಾಕಾಂಡದ ಕಥೆಯನ್ನು ನಿರೂಪಣ ಮಾಡುತ್ತಾರೆ:—

**ಶ್ಲೋಕ ॥ ಉತ್ಥಾಪ್ಯ ಚೇನ ಮರವಿಂದ ದಳಾಯತಾಕ್ಷ । ಶ್ಚಕ್ರಾಂಕಿತೇನ ವರ ದೇನ ಕರಾಂಬುಜೇನ ॥ ಕೃತ್ವಾಂಚ ಸಂವಿದ ಮನೇನನುತೋಽಸ್ಯ ಚಾಂಸಂ । ಪ್ರೀತ್ಯಾರುರೋಹ ಸಹರ್ಷ ಸಹಲಕ್ಷ್ಮಣೇನ ॥೧॥**

ಅರ್ಥ:—ಅರವಿಂದದಳಾಯತಾಕ್ಷ=ಕಮಲದಂತೆ ವಿಶಾಲವಾದ ನೇತ್ರಗಳುಳ್ಳ, ಸಃ=ಶ್ರೀರಾಮದೇವನು, ಚಕ್ರಾಂಕಿತೇನ=ಚಕ್ರರೇಖೆಯುಳ್ಳ, ವರದೇನ–ವರಪ್ರದನಾದ, ಕರಾಂಬುಜೇನ=ಕರಕಮಲದಿಂದ, ಏನಂ=ತಮ್ಮ ಪಾದಗಳಲ್ಲಿ ನಮಸ್ಕಾರಮಾಡುತ್ತಿರುವ ಹನುಮಂತನನ್ನು, ಉತ್ಥಾಪ್ಯ=ಮೇಲಕ್ಕೆತ್ತಿ, ಅನೇನಚ=ಆತನಿಂದ, ಸಂವಿದಂ–ದೇವತಾಕಾರ್ಯ ಸಾಧನರೂಪವಾದ ಮುಂದಾಲೋಚನೆಯನ್ನು, ಕೃತ್ವಾ–ಮಾಡಿ, ನುತಃ=ಹನುಮಂತನಿಂದ ಸ್ತುತಿಸಲ್ಪಟ್ಟ, ಸಃ–ಶ್ರೀರಾಮಚಂದ್ರದೇವರು, ಪ್ರೀತ್ಯಾ=ಪ್ರೀತಿಯಿಂದ, ಅಸ್ಯ=ಆ ಹನುಮಂತನ, ಅಂಸಂ=ಭುಜವನ್ನು, ಹರ್ಷಃ–ಮಂದಹಾಸ ಉಳ್ಳವರಾಗಿ, ಲಕ್ಷ್ಮಣೇನ=ಲಕ್ಷ್ಮಣನಿಂದ, ಸಹ=ಸಹಿತರಾಗಿ, ಆರುರೋಹ=ಆರೋಹಣಮಾಡಿದರು. (ಭುಜದಮೇಲೆ ಕುಳಿತುಕೊಂಡರು.)

ತಾತ್ಪರ್ಯ.—ಕಮಲದಳದಂತೆ ವಿಶಾಲನೇತ್ರನಾದ ಶ್ರೀರಾಮನು ತನ್ನ ಪಾದಗಳಿಗೆ ನಮಸ್ಕಾರ ಮಾಡಿದ ಹನುಮಂತದೇವರನ್ನು ಚಕ್ರಚಿಹ್ನೆಯಿಂದ ಕೂಡಿದ ವರಪ್ರದವಾದ ತನ್ನ ಕರಕಮಲದಿಂದೆತ್ತಿ ಅವರ ಸಂಗಡ ದೇವತಾ ಕಾರ್ಯ ಸಾಧನ ವಿಚಾರವನ್ನುಮಾಡಿ ಲಕ್ಷ್ಮಣ ಸಮೇತನಾಗಿ ಪ್ರೀತಿಪೂರ್ವಕ ಮಂದಹಾಸಯುಕ್ತನಾಗಿ ಅವರ ಭುಜವನ್ನು ಏರಿದನು.

**ಶ್ಲೋಕ || ಆರೋಪ್ಯ ಜಾಂಸಯುಗಳಂ ಭಗವಂತಮೇನಂ । ತಸ್ಯಾನುಜಂಚ ಹನುಮಾನ್ ಪ್ರಯಯೌ ಕಪೀಂದ್ರಂ || ಸಖ್ಯಂ ಚಕಾರಹುತ ಭುಕ್ಪ್ರಮುಖೇಚ ತಸ್ಯ । ರಾಮೇಣ ಶಾಶ್ವತ ನಿಜಾರ್ತಿ ಹರೇಣ ಶೀಘ್ರಂ**

ಅರ್ಥ.— ಹನುಮಾನ್=ಹನುಮಂತದೇವರು, ಏನಂ-ಈ, ಭಗವಂತಂ-ಶ್ರೀರಾಮದೇವರನ್ನು, ತಸ್ಯ=ಶ್ರೀರಾಮರ, ಅನುಜಂಚ=ತಮ್ಮನಾದ ಲಕ್ಷ್ಮಣನನ್ನೂ ಸಹ, ಅಂಸಯುಗಳಂ-ಎರಡು ಭುಜಗಳಲ್ಲಿ, ಆರೋಪ್ಯ=ಕೂಡಿಸಿಕೊಂಡು, ಕಪೀಂದ್ರಂಪ್ರತಿ=ಕಪಿಶ್ರೇಷ್ಠನಾದ ಸುಗ್ರೀವನ ಬಳಿಗೆ, ಪ್ರಯಯೌ=ಹೊರಟುಹೋದರು. ಶೀಘ್ರಂ=ಜಾಗ್ರತೆಯಾಗಿ, ಶಾಶ್ವತನಿಜಾರ್ತಿಹರೇಣ=ಶಾಶ್ವತ=ಎಲ್ಲಾ ಕಾಲಗಳಲ್ಲಿಯೂ, ನಿಜ=ತನ್ನ ಭಕ್ತರ, ಅರ್ತಿ=ದುಃಖಗಳನ್ನು, ಹರೇಣ=ಪರಿಹಾರಮಾಡತಕ್ಕ, ರಾಮೇಣಸಹ=ಶ್ರೀರಾಮರ ಸಂಗಡ, ತಸ್ಯ-ಸುಗ್ರೀವನಿಗೆ, ಹುತಭುಕ್=ಅಗ್ನಿಯ, ಪ್ರಮುಖೇ ಸಮಕ್ಷಮದಲ್ಲಿ, ಸಖ್ಯಂ=ಸ್ನೇಹವನ್ನು, ಚಕಾರ=ಮಾಡಿಸಿದರು.

ತಾತ್ಪರ್ಯ.—ಹನುಮಂತನು ಭಗವಂತನಾದ ಶ್ರೀರಾಮನನ್ನೂ ಮತ್ತು ಅವರ ತಮ್ಮನಾದ ಲಕ್ಷ್ಮಣನನ್ನೂ ಸಹ ತಮ್ಮ ಉಭಯ ಭುಜಗಳ ಮೇಲೆ ಕೂಡಿಸಿಕೊಂಡು ಕಪೀಂದ್ರನಾದ ಸುಗ್ರೀವನ ಬಳಿಗೆ ಹೋದರು. ಅಲ್ಲಿ ಎಲ್ಲ ಕಾಲಗಳಲ್ಲಿಯೂ ತಮ್ಮ ಸ್ಮರಣಮಾತ್ರದಿಂದಲೇ ನಿಜ ಭಕ್ತರ ದುಃಖಗಳನ್ನು ನಾಶಮಾಡುವ ಶ್ರೀರಾಮರ ಸಂಗಡ ಸುಗ್ರೀವನಿಗೆ ಅಗ್ನಿಸಾಕ್ಷಿತ್ವಾಗಿ ಸ್ನೇಹವನ್ನುಂಟುಮಾಡಿದನು.

**ಶ್ಲೋಕ || ಶೃತ್ವಾಸ್ಯ ದುಃಖಮಥ ದೇವವರಃ ಪ್ರತಿಜ್ಞಾಂ । ಚಕ್ರೇಸ ವಾಲಿನಿಧನಾಯ ಹರೀಶ್ವರೋಪಿ || ಸೀತಾನುಮಾರ್ಗಣಕೃತೇಥ ಸವಾಲಿನ್ಯೈವ । ಕ್ಷಿಪ್ತಾಂಹಿ ದುಂದುಭಿ ತನುಂಸಮದರ್ಶಯಚ್ಚ ||೩||**

ಅರ್ಥ.— ದೇವವರಃ=ದೇವಶ್ರೇಷ್ಠರಾದ, ಸಃ=ಶ್ರೀರಾಮದೇವರು, ಅಸ್ಯ-ಈ ಸುಗ್ರೀವನ, ದುಃಖಂ=ದುಃಖವನ್ನು, ಶೃತ್ವಾ=ಕೇಳಿ, ಅಥ-ಅನಂತರದಲ್ಲಿ, ವಾಲಿನಿಧಾಯ = ವಾಲಿಯನ್ನು ಸಂಹರಿಸುವದಕ್ಕೋಸ್ಕರ, ಪ್ರತಿಜ್ಞಾಂ=ಶಪಥವನ್ನು, ಚಕ್ರೇ=ಮಾಡಿದರು. ಹರೀಶ್ವರೋಪಿ=ಕಪೀಂದ್ರನಾದ ಸುಗ್ರೀವನೂ ಸಹ, ಸೀತಾನುಮಾರ್ಗಣಕೃತೇ-ಸೀತಾದೇವಿಯರನ್ನು ಹುಡುಕುವ ವಿಷಯದಲ್ಲಿ, ಪ್ರತಿಜ್ಞಾಂ = ಶಪಥವನ್ನು, ಚಕ್ರೇ=ಮಾ

ಡಿದನು, ಅಥ=ಪರಸ್ಪರ ಪ್ರತಿಜ್ಞಾನಂತರ, ಸಃಹಿ-ಸುಗ್ರೀವನೂ ಕೂಡ, ವಾಲಿನೈವ=ವಾಲಿಯಿಂದ, ಕ್ಷಿಪ್ತಾಂಹಿ-ಇಡಲ್ಪಟ್ಟಿದ್ದ, ದುಂದುಭಿತನುಂ-ದುಂದುಭಿನಾಮಕ ರಾಕ್ಷಸರ ಶರೀರವನ್ನು, ಶ್ರೀರಾಮರ ಬಲಪರೀಕ್ಷಾರ್ಥವಾಗಿ, ಸಮದರ್ಶಯಚ್ಚ=ತೋರಿಸಿದನು.

ತಾತ್ಪರ್ಯ.—ಅನಂತರ ದೇವೇಶ್ವರರಾದ ಶ್ರೀರಾಮರ ಸಮಕ್ಷಮದಲ್ಲಿ ಸುಗ್ರೀವನು ತನ್ನ ದುಃಖಗಳನ್ನು ಹೇಳಿಕೊಂಡನು. ಅದನ್ನು ಕೇಳಿ ಶ್ರೀರಾಮನು ಸುಗ್ರೀವನ ಅಣ್ಣನಾದ ವಾಲಿಯನ್ನು ಸಂಹಾರಮಾಡುವ ವಿಷಯದಲ್ಲಿ ಪ್ರತಿಜ್ಞೆಮಾಡಿದನು. ಸುಗ್ರೀವನೂ ಸಹ ಶ್ರೀಸೀತಾದೇವಿಯನ್ನು ಹುಡುಕಿಕೊಡುವ ವಿಷಯದಲ್ಲಿ ಪ್ರತಿಜ್ಞೆಮಾಡಿದನು. ಈ ರೀತಿ ಉಭಯತ್ರರ ಪ್ರತಿಜ್ಞಾನಂತರದಲ್ಲಿ ಸುಗ್ರೀವನು ಶ್ರೀರಾಮನ ಪರಾಕ್ರಮ ಪರೀಕ್ಷಾರ್ಥವಾಗಿ (ವಾಲಿಯಿಂದ ಸಂಹರಿಸಲ್ಪಟ್ಟು ದೂರದಲ್ಲಿ ಹಾಕಲ್ಪಟ್ಟಿದ್ದ ದುಂದುಭಿರಾಕ್ಷಸನ ದೇಹವನ್ನು ತಾವು ಇದನ್ನು ಆಚೆ ಬಿಸಾಡಿದ್ದೇ ಆದರೆ ವಾಲಿಯನ್ನು ಕೊಲ್ಲಲು ಶಕ್ತರಾಗುತ್ತೀರೆಂಬ ಅಭಿಪ್ರಾಯದಿಂದ) ದೂರದಲ್ಲಿ ಬಿದ್ದಿದ್ದ ದುಂದುಭಿರಾಕ್ಷಸನ ದೇಹವನ್ನು ತೋರಿಸಿದನು.

**ಶ್ಲೋಕ ॥ ವಿಕ್ಷ್ಯೈವತಾಂ ನಿಪತಿತಾಮಥಾರ ದೇವಃ । ಸೋಂಗುಷ್ಠಮಾತ್ರಚಲನಾದತಿ ಲೀಲಯೈವ ॥ ಸಂಪ್ರಾಸ್ಯ ಯೋಜನ ಶತೇಥತಯೈವ ಚೋರ್ವೀಂ । ಸರ್ವಾನ್ವಿದಾರ್ಯ ದಿತಿಜಾನಹನದ್ರಸಾಸ್ಥಾನ್ ॥೪॥**

ಅರ್ಥ.—ರಾಮದೇವಃ=ಶ್ರೀರಾಮಚಂದ್ರನು, ನಿಪಾತಿತಾಂ=ಕೆಳಗೆ ಬಿದ್ದಿದ್ದ ದುಂದುಭಿ ದೇಹವನ್ನು, ವಿಕ್ಷ್ಯೈವ-ನೋಡಿ, ಅಥ-ಆಮೇಲೆ, ಸಃ=ಶ್ರೀರಾಮಚಂದ್ರನು, ಅತಿಲೀಲಯಾ=ಅನಾಯಾಸದಿಂದಲೇನೆ, ಅಂಗುಷ್ಠಮಾತ್ರಚಲನಾತ್=ಹೆಬ್ಬೆಟ್ಟಿನ ಚಲನಮಾತ್ರದಿಂದ, ಯೋಜನಶತೇನ=೧೦೦ ಯೋಜನ ದೂರದಲ್ಲಿ, ಸಂಪ್ರಾಸ್ಯ=ಹಾಕಿ, ಸಃ=ಶ್ರೀರಾಮಚಂದ್ರನು, ತಯೈವ=ದುಂದುಭಿ ರಾಕ್ಷಸನ ದೇಹದಿಂದಲೇನೇ, ಉರ್ವೀಂ=ಭೂಮಿಯನ್ನು ವಿದಾರ್ಯ=ಸೀಳಿ, ರಸಾಸ್ಥಾನ್=ರಸಾತಳದಲ್ಲಿದ್ದ, ಸರ್ವಾನ್=ಸಮಸ್ತರಾದ ದಿತಿಜಾನ್=ದೈತ್ಯರನ್ನು, ಅಹನತ್=ಸಂಹಾರಮಾಡಿದರು.

ತಾತ್ಪರ್ಯ.—ಶ್ರೀರಾಮರು ಅಲ್ಲಿ ಬಿದ್ದಿದ್ದ ದುಂದುಭಿರಾಕ್ಷಸನ ದೇಹವನ್ನು ಅತ್ಯಂತ ಲೀಲೆಯಿಂದ ಹೆಬ್ಬೆಟ್ಟಿ ಅಲ್ಲಾಡಿಸೋಣ ಮಾತ್ರದಿಂದಲೇನೆ ನೂರು ಯೋಜನ ದೂರಕ್ಕೆ ಬಿಸಾಡಿದರು. ಅದರಿಂದ ಭೂಮಿಯು ಶೀಳಿ ರಸಾತಳದಲ್ಲಿರತಕ್ಕ ಸಮಸ್ತರಾದ ದೈತ್ಯರುಗಳನ್ನು ಸಂಹಾರ ಮಾಡಿದರು.

**ಶ್ಲೋಕ ॥ ಶರ್ವಪ್ರಸಾದಜ ಬಲಾದ್ದಿತಿ ಜಾನವಧ್ಯಾ೯ । ಸರ್ವಾನ್ನಿಹತ್ಯ ಕುಣಪೇನ ಪುನಶ್ಚ ಸಖ್ಯಾ ॥ ಭೀತೇನ ವಾಲಿಬಲತಃ ಕಥಿತಸ್ಯ ಸಪ್ತ ತಾಲಾನ್ಪ್ರದರ್ಶ್ಯ ದಿತಿಜಾ೯ ಸುದೃಢಾಂಶ್ಚ ವಜ್ರಾತ್ ॥೫॥**

ಅರ್ಥ.—ಶರ್ವಪ್ರಸಾದಜಬಲಾತ್=ಶರ್ವ=ರುದ್ರದೇವರ, ಪ್ರಸಾದಜ=ವರದಿಂದ ಉಂಟಾದ, ಬಲಾತ್-ಶಕ್ತಿಯಿಂದ, ಅವಧ್ಯಾ೯=ಅವಧ್ಯರಾದ, ಸರ್ವಾ೯-ಸಮಸ್ತರಾದ, ದಿತಿಜಾ೯=ದೈತ್ಯರನ್ನು, ಕುಣಪೇನ=ದುಂದುಭಿ ದೈತ್ಯನ ಮೃತದೇಹದಿಂದ, ನಿಹತ್ಯ-ಸಂಹಾರಮಾಡಿ, ಸ್ಥಿತಃ-ಇದ್ದರೂ ಕೂಡ, ವಾಲಿಬಲತಃ=ವಾಲಿಯ ಬಲಪರಾಕ್ರಮದಿಂದ, ಭೀತೇನ=ಭಯಗ್ರಸ್ಥನಾದ, ಸಖ್ಯಾ=ಸ್ನೇಹಿತನಾದ ಸುಗ್ರೀವನಿಂದ, ಪುನಶ್ಚ=ಪುನಃ, ವಜ್ರಾತ್=ವಜ್ರಕ್ಕಿಂತಲೂ, ಸುದೃಢಾ೯=ಅತ್ಯಂತ ಗಟ್ಟಿಯಾದ, ದಿತಿಜಾ೯=ದೈತ್ಯಸ್ವರೂಪಗಳಾದ, ತಾಲಾ೯ಶ್ಚ-ತಾಳೆಯುಮರಗಳನ್ನು, ಪ್ರದರ್ಶ್ಯ=ತೋರಿಸಲ್ಪಟ್ಟು, ಕಥಿತಸ್ಯ=ಮುಂದೆ ಹೇಳುವ ರೀತಿಯಾಗಿ ಹೇಳಲ್ಪಟ್ಟಿತು.

ತಾತ್ಪರ್ಯ.—ಶ್ರೀರಾಮರು ಸುಗ್ರೀವನು ಹೇಳಿದ ಪ್ರಕಾರ ದುಂದುಭಿ ದೈತ್ಯನ ಮೃತದೇಹದಿಂದ ರಸಾತಲದಲ್ಲಿದ್ದ ರುದ್ರದೇವರ ವರಪ್ರಸಾದ ಬಲಧಿಂದ ಅವಧ್ಯರಾದ ಸರ್ವ ದೈತ್ಯರನ್ನೂ ಸಂಹಾರಮಾಡಿದರು. ವಾಲಿಯ ಬಲಪರಾಕ್ರಮದಿಂದ ಭೀತನಾದ ಸ್ನೇಹಿತನಾದ ಸುಗ್ರೀವನು ಇನ್ನೂ ಸಂಶಯಗ್ರಸ್ಥನಾಗಿ ಶ್ರೀರಾಮರ ಪರಾಕ್ರಮುವನ್ನು ಪರೀಕ್ಷಿಸಬೇಕೆಂದು ಭಾವಿಸಿ ವಜ್ರಕ್ಕಿಂತಲೂ ಅತ್ಯಂತ ಕಠಿನವಾದ ದೈತ್ಯರೂಪಗಳಾದ ತಾಳೆಯುಮರಗಳನ್ನು ತೋರಿಸಿ ಮುಂದೆ ಹೇಳುವ ರೀತ್ಯಾ ಹೇಳಿದನು.

ಅವತಾರಿಕೆ.—ಸುಗ್ರೀವನು ಶ್ರೀರಾಮರನ್ನು ಕುರಿತು ಏನನ್ನು ಹೇಳಿದನೆಂಬ ವಿಷಯವು ಈ ಶ್ಲೋಕದಲ್ಲಿ ಉಕ್ತವಾಗಿದೆ.

**ಶ್ಲೋಕ ॥ ಏಕೈಕಮೇಷು ಸವಿಕಂಪಯಿತುಂ ಸಮರ್ಥಃ । ಪತ್ರಾಣಿ ಲೋಪ್ತುಮಪಿತೂತ್ಸಹತೇ ಶಕ್ತಃ ॥ ವಿಷ್ವಕ್‌ಸ್ಥಿತಾನ್ಯದಿ ಭವಾನ್ಪ್ರತಿಭೇತ್ಸ್ಯತೀವಮಾನೇಕೇಷುಣಾತರ್ಹಿ ವಾಲಿವಧೇ ಸಮರ್ಥಃ ॥೬॥**

ಅರ್ಥ.—ಸಃ-ವಾಲಿಯು, ಯೇಷು=ಈ ಸಪ್ತ ತಾಳೇಗಿಡಗಳಲ್ಲಿ, ಏಕೈಕ=ಒಂದೊಂದನ್ನು, ಕಂಪಯಿತುಂ=ಅಲ್ಲಾಡಿಸುವದಕ್ಕೂ, ಸಮರ್ಥಃ= ಶಕ್ತಿಯುಳ್ಳವನು, ನಾಭೂತ್=ಆಗಲಿಲ್ಲ, ಪತ್ರಾಣಿತು-ಎಲೆಗಳನ್ನಾದರೋ ವ್ಲೋಪ್ತುಮ್-ಕೀಳುವುದಕ್ಕೂ, ಉತ್ಸಹತೇ-ಅಪೇಕ್ಷಿಸಿದನು, ಅಪಿತು= ಆದಾಗ್ಯೂ, ಶಕ್ತಃ-ಸಾಮರ್ಥ್ಯವುಳ್ಳವನು, ನಾಭೂತ್-ಆಗಲಿಲ್ಲ. ಭವಾನ್ =ತಾವು, ವಿಷ್ವಕ್‌ಸ್ಥಿತಾನ್=ವಕ್ರವಾಗಿರತಕ್ಕ, ಇಮಾನ್=ಈ ಸಪ್ತ ತಾಲಾ ವೃಕ್ಷಗಳನ್ನು, ಏಕೇಷುಣಾ=ಒಂದೇ ಬಾಣದಿಂದ, ಯದಿ=ಯಾವ ಪಕ್ಷದಲ್ಲಿ, ಪ್ರತಿಭೇತ್ಸ್ಯತಿ=ಭೇದನ ಮಾಡುತ್ತೀರೋ, ತರ್ಹಿ=ಆ ಪಕ್ಷದಲ್ಲಿ, ಭವಾನ್=ತಾವು, ವಾಲಿವಧೇ=ವಾಲಿಯನ್ನು ಸಂಹಾರಮಾಡುವದರಲ್ಲಿ, ಸಮರ್ಥಃ=ಶಕ್ತಿಯುಳ್ಳವರಾಗುತ್ತೀ ಎಂದು ಹೇಳಿದನು.

ತಾತ್ಪರ್ಯ.—ಸುಗ್ರೀವನು ರಾಮರ ಪರಾಕ್ರಮ ವಿಷಯದಲ್ಲಿ ಸಂಶಯಗ್ರಸ್ಥರಾಗಿ ರಾಮರನ್ನು ಕುರಿತು ಹೇಳುತ್ತಾನೆ. ಈ ಏಳು ತಾಳೇ ವೃಕ್ಷಗಳಲ್ಲಿ ಒಂದೊಂದನ್ನಾದರೂ ಅಲ್ಲಾಡಿಸುವದಕ್ಕೂ ವಾಲಿಯು ಶಕ್ತನಲ್ಲ ಅಲ್ಲದೆ ಅವುಗಳ ಎಲೆಗಳನ್ನಾದರೂ ಕಿತ್ತುಹಾಕಬೇಕೆಂದು ಅಪೇಕ್ಷಿಸಿದರೂ ಅದಕ್ಕೂ ಸಮರ್ಥನಾಗಲಿಲ್ಲ. ತಾವಾದರೋ ವಕ್ರವಾಗಿರುವ ಈ ತಾಲಾ ವೃಕ್ಷಗಳನ್ನು ಒಂದೇ ಬಾಣದಿಂದ ಕತ್ತರಿಸಿದ್ದೇ ಆದರೆ ತಾವು ವಾಲಿಯನ್ನು ಸಂಹಾರಮಾಡುವದರಲ್ಲಿ ಸಮರ್ಥರಾಗುತ್ತೀರಿ ಎಂದು ನಂಬುತ್ತೇನೆಂದು ಸುಗ್ರೀವನು ಶ್ರೀರಾಮರಿಗೆ ಹೇಳಿದನು.

ಅವತಾರಿಕೆ.—ಆದರೆ ಸುಗ್ರೀವನು ತನ್ನ ಶತ್ರುವಿನ ಬಲಕ್ಕಿಂತಲೂ ಬಹು ಗುಣಾಧಿಕ ಬಲವನ್ನು ಏತಕ್ಕೆ ಅಪೇಕ್ಷಿಸಿದನೆಂಬುದನ್ನು ಶಂಕಾಬಂದಲ್ಲಿ ಶಂಕಾಪರಿಹಾರಕ್ಕಾಗಿ ಪ್ರಮಾಣವನ್ನು ( ಉದಾಹರಣವನ್ನು ) ಈ ಶ್ಲೋಕದಲ್ಲಿ ನಿರೂಪಣಮಾಡುತ್ತಾರೆ:—

ಶ್ಲೋಕ || ಜೇತುಂ ಚತುರ್ಗುಣ ಬಲೋಽಹಿ ಪುಮಾನ್ಪ್ರಭುಃ ಸ್ಯಾದ್ಧಂತುಂಶ
ತಾಧಿಕ ಬಲೋಽತಿ ಬಲಂ ಸುಶಕ್ತಃ || ತಸ್ಮಾದಿಮಾನ್ಹರಿಹಯಾತ್ಮಜ
ಬಾಹು ಲೋಪ್ಯಪತ್ರಾನ್ವಿಭಿಂದ್ಯಮಮ ಸಂಶಯಮಾಶುಭಿಂಧಿ ||೭||

ಅರ್ಥ.—ಹೇರಾಮ=ಶ್ರೀರಾಮರೆ, ಪುಮಾನ್=ಮನುಷ್ಯನಾದವನು, ಅತಿಬಲಂ=ಅತ್ಯಂತ ಬಲಿಷ್ಟನಾದ, ಶತ್ರುಂ=ಶತ್ರುವನ್ನು, ಜೇತುಂ=ಜಯಿಸಬೇಕಾದರೆ, ಚತುರ್ಗುಣೋಹಿ=ಶತ್ರುವಿನ ಬಲಕ್ಕಿಂತಲೂ ನಾಲ್ಕು ಗುಣ ಅಧಿಕವಾದ ಬಲವುಳ್ಳವನು, ಪ್ರಭುಃಸ್ಯಾತ್=ಸಮರ್ಥನಾಗುತ್ತಾನೆ, ಹಂತುಂ=ಸಂಹಾರಮಾಡಬೇಕಾದರೋ, ಶತಾದಿಕಬಲಃ=ನೂರುಗುಣ ಅಧಿಕ ಬಲವುಳ್ಳವನು, ಶಕ್ತಃ=ಶಕ್ತನಾಗುತ್ತಾನೆ. ಯಸ್ಮಾತ್ತಸ್ಮಾತ್=ಆದ್ದರಿಂದ (ಭವಾನ್=ತಾವು) ಹರಿಯಾತ್ಮಜ=ಇಂದ್ರಪುತ್ರನಾದ ವಾಲಿಯು, ಬಾಹು=ಭುಜಗಳಿಂದ, ಲ್ಲೋಪ್ಯ-ಕಿತ್ತುಹಾಕುವುದಕ್ಕೆ ಸಹಾ ಸಾಧ್ಯವಿಲ್ಲದ, ಪತ್ರಾನ್=ಎಲೆಗಳುಳ್ಳ, ಇಮಾನ್=ಈ ಏಳು ತಾಲಾವೃಕ್ಷಗಳನ್ನು, ವಿಭಿಂದ್ಯ=ಭೇದಿಸಿ, ಆಶು-ಜಾಗ್ರತೆಯಾಗಿ, ಮಮ=ನನ್ನ, ಸಂಶಯಂ=ಅನುಮಾನವನ್ನು, ಭಿಂದಿ=ಪರಿಹಾರಮಾಡಿರೆಂದು ಸುಗ್ರೀವನು ಹೇಳಿದನು.

ತಾತ್ಪರ್ಯ.—ಹೇ ಸ್ವಾಮಿ ! ಲೋಕದಲ್ಲಿ ಮನುಷ್ಯನಾದವನು ಬಲಿಷ್ಠನಾದ ಶತ್ರುವನ್ನು ಜೈಸಬೇಕಾದರೆ ಇವನಿಗೆ ಶತ್ರುವಿನ ನಾಲ್ಕರಷ್ಟು ಬಲವಿದ್ದರೆ ಜಯಿಸುವದಕ್ಕೆ ಮಾತ್ರ ಸಮರ್ಥನಾಗುತ್ತಾನೆ. ಸಂಹಾರಮಾಡಬೇಕಾದರೆ ನೂರರಷ್ಟು ಬಲವಿರಬೇಕೆಂಬ ನೀತಿಯಿದೆ. ಆದರಿಂದ ಎಲೆಗಳನ್ನು ಕಿತ್ತುಹಾಕುವುದಕ್ಕೂ ಕೂಡ ವಾಲಿಗೆ ಸಾಧ್ಯವಿಲ್ಲದಿರುವ ಸಪ್ತತಾಳಾವೃಕ್ಷಗಳನ್ನು ಭೇದನಮಾಡಿ ಶೀಘ್ರವಾಗಿ ನನ್ನ ಸಂಶಯವನ್ನು ಪರಿಹಾರಮಾಡೆಂದು ಹೇಳಿದನು.

ಶ್ಲೋಕ || ಶ್ರುತ್ವಾಸ್ಯ ವಾಕ್ಯ ಮಮುಮ್ಯೃಶ್ಯ ದಿತೇಃ ಸುತಾಂಸ್ತಾನ್ಧಾತುರ್ವರಾದ
ಖಿಳ ಪುಂಭಿರಭೇದ್ಯ ರೂಪಾನ್ | ಬ್ರಹ್ಮತ್ವಮಾಪ್ತುಮಚಲಂ ತಪ
ಸಿಪ್ರವೃತ್ತಾನೇಕೇಷುಣಾ ಸಪದಿತಾನ್ ಪ್ರವಿಭೇದರಾಮಃ ||೮||

ಅರ್ಥ.—ರಾಮಃ=ಶ್ರೀರಾಮದೇವರು, ಅಸ್ಯ=ಈ ಸುಗ್ರೀವನ, ವಾಕ್ಯಂ=ಮಾತನ್ನು, ಶ್ರುತ್ವಾ = ಕೇಳಿ, ತಾನ್ = ಆ ಸಪ್ತತಾಳಾವೃಕ್ಷಗಳನ್ನು, ಧಾತುಃ = ಬ್ರಹ್ಮದೇವರ, ವರಾತ್ - ವರಪ್ರಸಾದದಿಂದ, ಅಖಿಳ

ಪುಂಭಿಃ=ಅಖಿಳಪ್ರಪಂಚದಲ್ಲಿನ, ಪುಂಭಿಃ=ಪುರುಷರುಗಳಿಂದ, ಅಭೇದ್ಯ= ಭೇದನಮಾಡಲು ಆಗದಿಂತಕ್ಕ, ರೂಪಾ=ರೂಪಗಳುಳ್ಳ, ಬ್ರಹ್ಮತ್ವಂ= ಚತುರ್ಮುಖ ಬ್ರಹ್ಮಪದವಿಯನ್ನು, ಯಿಯಾಸ್ತುಂ=ಹೊಂದುವದಕ್ಕೋಸ್ಕರ, ಅಚಲಂ=ದೃಢವಾದ, ತಪಸಿ=ತಪಸ್ಸಿನಲ್ಲಿ, ಪ್ರವೃತ್ತಾನ್=ಪ್ರವೃತ್ತಿಸಿಕೊಂಡಿರತಕ್ಕ, ದಿತೇಃ-ದಿತಿದೇವಿಯ, ಸುತಾನ್=ಪುತ್ರರಾದ ದೈತ್ಯರನ್ನಾಗಿ, ಅವಮೃಶ್ಯ=ತಿಳಿದುಕೊಂಡು, ತಾನ್=ಆ ಸಪ್ತತಾಳಾವೃಕ್ಷಗಳನ್ನು, ಸಪದಿ= ತಕ್ಷಣದಲ್ಲಿ, ಏಕೇಷುಣಾ=ಒಂದೇ ಬಾಣಧಿಂದ, ಪ್ರವಿಭೇದ-ಶೀಳಿದರು.

ತಾತ್ಪರ್ಯ.—ಸುಗ್ರೀವನ ವಾಕ್ಯವನ್ನು ಕೇಳಿ ಶ್ರೀರಾಮರು ಈ ತಾಳಾವೃಕ್ಷಗಳನ್ನು ಬ್ರಹ್ಮದೇವರ ವರದಿಂದ ಸಮಸ್ತ ಪುರುಷರಿಂದಲೂ. ಅಭೇದ್ಯವಾದ ರೂಪವುಳ್ಳ ಚತುರ್ಮುಖ ಬ್ರಹ್ಮತ್ವವನ್ನು ಹೊಂದುವುದಕ್ಕೋಸ್ಕರ ದೃಢವಾದ ತಪಸ್ಸಿನಲ್ಲಿ ಪ್ರವೃತ್ತಿಯುಳ್ಳವರಾದ ದೈತ್ಯರೆಂಬುದಾಗಿ ತಿಳಿದು ಅವುಗಳನ್ನು ತಕ್ಷಣವೇ ಒಂದೇ ಬಾಣದಿಂದ ಭೇದಿಸಿಬಿಟ್ಟರು.

ಅವತಾರಿಕೆ.—ಭೇದನಮಾಡಿದ ಪ್ರಕಾರವನ್ನು ಈ ಶ್ಲೋಕದಲ್ಲಿ ನಿರೂಪಣಮಾಡುತ್ತಾರೆ.—

ಶ್ಲೋಕ ॥ ಸಂಧಾಯ ಕಾರ್ಮುಕವರೇ ನಿಶಿತೇತು ಬಾಣೇಥಾಕೃಷ್ಟ ದಕ್ಷಿಣ
ಭುಜೇನ ತದಾ ಪ್ರಮುಕ್ತೇ । ರಾಮೇಣ ಸತ್ವರಮನಂತ ಬಲೇನ ಸ
ರ್ವೇ ಚೂರ್ಣೀಕೃತಾಃ ಸಪದಿತೇ ತರವೋ ರವೇಣ ॥೯॥

ಅರ್ಥ.—ತದಾ=ತಾಳಾವೃಕ್ಷ ಛೇದನಮಾಡುವ ಕಾಲದಲ್ಲಿ, ಅನಂತಬಲೇನ=ಅತ್ಯಂತ ಬಲವುಳ್ಳ, ರಾಮೇಣ=ಶ್ರೀರಾಮರಿಂದ, ಕಾರ್ಮುಕವರೇ=ಶ್ರೇಷ್ಠವಾದ ಧನುಸ್ಸಿನಲ್ಲಿ, ಸಂಧಾಯ=ಇಟ್ಟು, ಅಥ=ಅನಂತರ, ನಿಶಿತೇ=ಕ್ರೂರವಾದ ಬಾಣವು, ದಕ್ಷಿಣಭುಜೇನ-ಬಲಭುಜದಿಂದ, ಆಕೃಷ್ಟ= ಎಳೆದು, ಸತ್ವರಂ=ಬಹು ತ್ವರೆಯಾಗಿ, ಪ್ರಮುಕ್ತೇಸತಿ=ಬಿಡಲ್ಪಡುತ್ತಿರಲಾಗಿ ಸಪದಿ=ಆ ಕ್ಷಣದಲ್ಲಿಯೇ, ಸರ್ವೇ=ಸಮಸ್ತವಾದ, ತರವಃ = ಸಪ್ತತಾಳಾವೃಕ್ಷಗಳೂ, ರವೇಣ=ಮಹಾ ಶಬ್ಧದಿಂದ, ಚೂರ್ಣೀಕೃತಾಃ-ಚೂರುಚೂರಾಗಿ ಮಾಡಲ್ಪಟ್ಟವು.

ತಾತ್ಪರ್ಯ.—ತಾಳಾವೃಕ್ಷಛೇದನ ಮಾಡುವ ಕಾಲದಲ್ಲಿ ಅಪರಿಮಿತ ಬಲಯುಕ್ತರಾದ ಶ್ರೀರಾಮದೇವರು ತಮ್ಮ ಪರಮ ಶ್ರೇಷ್ಠವಾದ ಧನುಸ್ಸಿನಲ್ಲಿ ಅತಿ ತೀಕ್ಷ್ಣವಾದ ಬಾಣವನ್ನು ಸಂಧಾನಮಾಡಿ, ಬಲಭುಜದಿಂದ ಬಾಣವನ್ನು ಕರ್ಣಪರ್ಯಂತರ ಎಳೆದು ವಕ್ರಗಳಾದ ಸಪ್ತ ತಾಳಾವೃಕ್ಷಗಳ ಮೇಲೂ ಪ್ರಯೋಗಮಾಡಿದರು. ಆ ಕ್ಷಣವೇ ಈ ಏಳು ತಾಳಾವೃಕ್ಷಗಳೂ ಮಹಾಧ್ವನಿಯಿಂದ ನೆಲಕ್ಕೆ ಬಿದ್ದು ಚೂರುಚೂರಾದವು.

ಅವತಾರಿಕೆ.—ರಾಮರಿಂದ ಬಿಡಲ್ಪಟ್ಟ ಬಾಣದ ಪ್ರಭಾವವನ್ನು ಈ ಶ್ಲೋಕದಲ್ಲಿ ವರ್ಣನಮಾಡುತ್ತಾರೆ.—

ಶ್ಲೋಕ ॥ ಭಿತ್ವಾಚತಾನ್ಸಗಿರಿಕುಂಭಗವತ್ಪ್ರಮುಕ್ತಃ ಪಾತಾಳ ಸಪ್ತಕಮು
ಥಾತ್ರಚಯೇತ್ವವಧ್ಯಾಃ । ನಾಮ್ನಾಸುರಾಃ ಕುಮುದಿನೋಬ್ಜಜವಾ
ಕ್ಯರಕ್ಷಾಃ ಸರ್ವಾಂಶ್ಚತಾನದಹದಾಶು ಶರಃ ಸಏಕಃ ॥೧೦॥

ಅರ್ಥ.—ಭಗವತ್ಪ್ರಮುಕ್ತಃ=ಭಗವಂತರಾದ ಶ್ರೀರಾಮರಿಂದ ಬಿಡಲ್ಪಟ್ಟ, ಸಃ=ಆ, ಏಕಃಶರಃ=ಒಂದೇ ಬಾಣವು, ತಾನ್=ಆ ಸಪ್ತತಾಲಾವೃಕ್ಷಗಳನ್ನೂ, ಭಿತ್ವಾಚ=ಛೇದನಮಾಡಿ, ಅಥ=ಅನಂತರ, ಸಗಿರಿಕುಂ=ಪರ್ವತಗಳಿಂದ ಸಹಿತವಾದ ಭೂಮಿಯನ್ನೂ, ಪಾತಾಳ ಸಪ್ತಕಂಚ=ಸಪ್ತ ಪಾತಾಳಲೋಕಗಳನ್ನೂ, ಭಿತ್ವಾ=ಭೇದಿಸಿಕೊಂಡು ಹೋಗಿ, ಅಥ=ಅನಂತರದಲ್ಲಿ, ಅತ್ರ-ಈಗ, ಸಪ್ತ ಪಾತಾಳ ಲೋಕಗಳಲ್ಲಿ ತಪಸ್ಸುಮಾಡುತ್ತಿರುವ, ಅಬ್ಜಜವಾಕ್ಯರಕ್ಷಾಂ=ಅಬ್ಜಜ-ಬ್ರಹ್ಮದೇವರ, ವಾಕ್ಯ=ವರರೂಪವಾದ, ರಕ್ಷಾಃ=ರಕ್ಷಣೆಯುಳ್ಳವರಾದ್ದರಿಂದಲೇನೇ, ಅವಧ್ಯಾಃ=ನಾಶರಹಿತರಾದ, ನಾಮ್ನಾಕುಮುದಿನಃ-ಕುಮುದರೆಂಬ ಹೆಸರಿನಿಂದ ಪ್ರಸಿದ್ಧರಾದ, ಏತುಅಸುರಾಃ-ಯಾವಯಾವ ದೈತ್ಯರುಗಳು, ಅಭೂವನ್ - ಇದ್ದರೋ, ತಾನ್‌ಸರ್ವಾನ್=ಆ ಸಮಸ್ತ ದೈತ್ಯರುಗಳನ್ನೂ, ಆಶು=ತಕ್ಷಣವೇ, ದದಾಹ=ದಹಿಸಿಬಿಟ್ಟಿತು.

ತಾತ್ಪರ್ಯ.—ಶ್ರೀರಾಮರಿಂದ ಬಿಡಲ್ಪಟ್ಟ ಒಂದೇ ಬಾಣವು ಸಪ್ತ ತಾಳಾವೃಕ್ಷಗಳನ್ನೂ ಛೇದನಮಾಡಿ ಅನಂತರ ಪರ್ವತಗಳಿಂದ ಸಹಿತವಾದ ಭೂಮಿಯನ್ನು ಭೇದಿಸಿಕೊಂಡು ಹೊರಟು ಸಪ್ತ ಪಾತಾಳವನ್ನು

ಭೇದನಮಾಡಿಕೊಂಡು ಹೊಕ್ಕಿತು. ಅನಂತರ ಪಾತಾಳಲೋಕದಲ್ಲಿ ಬ್ರಹ್ಮದೇವರ ಪ್ರಸಾದದಿಂದ ಅವಧ್ಯರಾಗಿ ವಾಸವಾಗಿದ್ದ ಕುಮುದನಾಮಕ ದೈತ್ಯರನ್ನು ಬಹು ಕ್ಷಿಪ್ರದಲ್ಲಿ ದಹಿಸಿಬಿಟ್ಟಿತು.

ಅವತಾರಿಕೆ.—ಶ್ರೀರಾಮರು ಮಾಡಿದ ಈ ಮಹತ್ಕಾರ್ಯವು ಆಶ್ಚರ್ಯವಲ್ಲವು. ಅದೇನು ಕಾರಣವೇನೆಂದರೆ ಈ ಶ್ಲೋಕದಲ್ಲಿ ಹೇಳುತ್ತಾರೆ.—

ಶ್ಲೋಕ ॥ ನೈತದ್ವಿಚಿತ್ರಮಮಿತೋರು ಬಲಸ್ಯ ವಿಷ್ಣೋರ್ಯತ್ಪ್ರೇರಣಾತ್ಸಪವನಸ್ಯ ಭವೇತ್ಪ್ರವೃತ್ತಿಃ॥ ಲೋಕಸ್ಯ ಸಪ್ರಕೃತಿಕಸ್ಯ ಸರುದ್ರ ಕಾಲಕರ್ಮಾದಿಕಸ್ಯ ತದಪೀದ ಮನನ್ಯಸಾಧ್ಯಂ ॥೧೧॥

ಅರ್ಥ.— ಯತ್ಪ್ರೇರಣಾತ್=ಯಾವ ಶ್ರೀವಿಷ್ಣುವಿನ ಪ್ರೇರಣೆಯಿಂದ, ಸಪವನಸ್ಯ–ವಾಯುದೇವರಿಂದ ಸಹಿತವಾದ, ಸಪ್ರಕೃತಿಕಸ್ಯ–ಪ್ರಕೃತಿ ಸ್ವರೂಪಳಾದ ಶ್ರೀಲಕ್ಷ್ಮೀದೇವಿಯಿಂದ ಸಹಿತವಾದ, ಸರುದ್ರಕಾಲ ಕರ್ಮಾದಿಕಸ್ಯ=ರುದ್ರದೇವರು, ಕಾಲ=ಕಾಲಾಭಿಮಾನಿಯಾದ ಗರುಡನು, ಕರ್ಮ=ಕರ್ಮಾಭಿಮಾನಿದೇವತೆಯಾದ ಇಂದ್ರದೇವರು, ಇವರುಗಳಿಂದ ಸಹಿತವಾದ, ಲೋಕಸ್ಯ=ಪ್ರಪಂಚಕ್ಕೆ, ಪ್ರವೃತ್ತಿಃ–ಚಲನಾದಿ ಪ್ರವೃತ್ತಿಯು, ಭವೇತ್=ಉಂಟಾಗುತ್ತದೆಯೋ, ತದಪಿ=ಅಂತಹ ಮಹತ್ತುಳ್ಳ, ಅಮಿತೋರುಬಲಸ್ಯ=ಅಪರಿಮಿತವೂ ಉತ್ಕೃಷ್ಟವೂ ಆದ ಬಲವುಳ್ಳ, ತಸ್ಯ=ಅಂತಹ ವಿಷ್ಣುಪರಮಾತ್ಮನ ಸ್ವರೂಪರಾದ ಆ ಶ್ರೀರಾಮದೇವರಿಗೆ, ಇದಂ–ಈ ಅನನ್ಯಸಾಧ್ಯಂ–ಇತರರಿಗೆ ಸಾಧ್ಯವಿಲ್ಲದೆ ಇರುವ, ಎತತ್=ಈ ಸಪ್ತತಾಳಾವೃಕ್ಷದಭೇದನವು, ನಚಿತ್ರಂ=ಆಶ್ಚರ್ಯವಲ್ಲವು.

ತಾತ್ಪರ್ಯ.—ಶ್ರೀರಾಮದೇವರು ಒಂದೇ ಬಾಣದಿಂದ ಸಪ್ತತಾಳಾವೃಕ್ಷಗಳನ್ನು ಛೇದನಮಾಡಿದರೆಂಬ ತಾತ್ಪರ್ಯವು ಆಶ್ಚರ್ಯವಲ್ಲವು. ಏನು ಕಾರಣವೆಂದರೆ.—ಯಾವ ವಿಷ್ಣುಪರಮಾತ್ಮನ ಪ್ರೇರಣೆಯಿಂದ ವಾಯುದೇವರು ಪ್ರಕೃತಿ ಸ್ವರೂಪಳಾದ ಲಕ್ಷ್ಮೀದೇವಿಯು ರುದ್ರದೇವರು ಕಾಲಾಭಿಮಾನಿ ಸುಪರ್ಣ, ಕರ್ಮಾಭಿಮಾನಿ ಇಂದ್ರ, ಅಗ್ನಿ ಇವರೇ ಮೊದಲಾದ

ದೇವತೆಗಳಿಂದಸಹಿತವಾದ ಈ ಜಗತ್ತಿಗೆ ಚಲನವಲನಾದಿಪ್ರವೃತ್ತಿಯುಂಟಾ ಗುತ್ತದೆಯೋ ಅಂತಹ ಅಪರಿಮಿತವಾದ, ಉತ್ಕೃಷ್ಟವಾದ ಬಲವುಳ್ಳ ವಿಷ್ಣು ಪರಮಾತ್ಮನ ಸ್ವರೂಪರಾದ ಈ ರಾಮದೇವರಿಗೆ ಸಪ್ತತಾಲಾವೃಕ್ಷಚ್ಛೇದನ ಕಾರ್ಯವೇನೂ ಆಶ್ಚರ್ಯವಲ್ಲವು.

**ಶ್ಲೋಕ ॥ ದೃಷ್ಟ್ವಾ ಬಲಂ ಭಗವತೋಥಹರೀಶ್ವರೋ ಸಾವಗ್ರೇ ನಿಧಾಯತ ಮಗಾತ್ಪುರಮಗ್ರಜಸ್ಯ ॥ ಆಶೃತ್ಯರಾವಮನುಜಸ್ಯ ಬಿಲಾತ್ಸಚಾಗಾ ದಭ್ಯೈನಮಾಶುದಯಿತಾಪ್ರತಿವಾರಿತೋಽಪಿ ॥೧೨॥**

ಅರ್ಥ.— ಅಥ=ಅನಂತರದಲ್ಲಿ, ಹರೀಶ್ವರಃ-ಕಪೀಂದ್ರನಾದ, ಅಸೌ =ಈ ಸುಗ್ರೀವನು, ಭಗವತಃ=ಶ್ರೀರಾಮದೇವರ, ಬಲಂ=ಪರಾಕ್ರಮವನ್ನು ದೃಷ್ಟ್ವಾ=ನೋಡಿ, ತಂರಾಮಂ-ಆ ರಾಮದೇವರನ್ನು, ಅಗ್ರೇನಿಧಾಯ= ಮುಂದುಮಾಡಿಕೊಂಡು, ಅಗ್ರಜಸ್ಯ=ಅಣ್ಣನಾದ ವಾಲಿಯ, ಪುರಂ=ವಾ ಸಸ್ಥಾನವಾದ ಕಿಷ್ಕಿಂಧಾಪಟ್ಟಣವನ್ನು ಕುರಿತು, ಅಗಾತ್=ಹೋದನು. ಸ ಚ=ಆ ವಾಲಿಯಾದರೋ, ಅನುಜಸ್ಯ=ತಮ್ಮನಾದ ಸುಗ್ರೀವನ, ರಾವಂ- ಸಿಂಹನಾದ ಶಬ್ದವನ್ನು, ಆಶೃತ್ಯ-ಕೇಳಿದ, ಯಿತಾಪ್ರತಿವಾಧಿತೋಽಪಿ-ಹೆಂ ಡತಿಯಾದ ತಾರೆಯಿಂದ ತಡೆಯಲ್ಪಟ್ಟಾಗ್ಯೂ, ಬಿಲಾತ್=ಬಿಲರೂಪವಾದ ಕಿಷ್ಕಿಂಧಾಪಟ್ಟಣದಿಂದ, ಏನಮಭಿ=ಸುಗ್ರೀವನಿಗೆ ಅಭಿಮುಖವಾಗಿ, ಅಗಾ ತ್=ಹೊರಟನು.

ತಾತ್ಪರ್ಯ.— ಶ್ರೀರಾಮರು ತಾಳವೃಕ್ಷ ಛೇದನಮಾಡಿದನಂತರ ಸುಗ್ರೀವನಿಗೆ ಇವರ ಪರಾಕ್ರಮವನ್ನು ನೋಡಿ ಸಂಶಯಪರಿಹಾರವಾಯಿತು ಅನಂತರ ಶ್ರೀರಾಮರನ್ನು ಮುಂದುಮಾಡಿಕೊಂಡು ವಾಲಿಯು ವಾಸಮಾ ಡಿಕೊಂಡಿದ್ದ ಕಿಷ್ಕಿಂಧಾಪಟ್ಟಣ ರೂಪವಾದ ಬಿಲದ ಬಳಿ ಹೋದನು. ಅ ನಂತರ ಬಿಲದ ಬಳಿಯಲ್ಲಿ ಸಿಂಹನಾದದಂತೆ ಶಬ್ದಮಾಡಿದನು. ಈ ಶಬ್ದವ ನ್ನು ಕೇಳಿದ ವಾಲಿಯು ತಕ್ಷಣವೇ ಇವನ ಹೆಂಡತಿಯಾದ ತಾರೆಯು ಇವ ನನ್ನು ಹೋಗಬೇಡವೆಂದು ತಡೆದಾಗ್ಯೂ ಲಕ್ಷೀಕರಿಸದೆ ರಾಮರಿಂದ ಸಹಿತ ನಾಗಿ ಬಿಲದ ಬಳಿ ಇದ್ದ ಸುಗ್ರೀವನಿಗೆ ಅಭಿಮುಖವಾಗಿ ಓಡಿ ಬಂದನು.

ಶ್ಲೋಕ ॥ ತನ್ಮುಷ್ಟಿಭಿಃ ಪ್ರತಿಹತಃ ಪ್ರಯಯಾವಶಕ್ತಃ ಸುಗ್ರೀವ ಆಶುರಘು ವೋಽಪಿಹಿ ಧರ್ಮಮವೇಕ್ಷ್ಯ । ನೈನಂ ಜಘಾನ ವಿದಿತಾಖಿಳ ಲೋಕ ಚೇಷ್ಟೋಽಪ್ಯೇನಂಸ ಆಹ ಯುಧಿಮಾಂನಮಯಾವಿವಿಕ್ತಾ ॥೧೩॥

ಅರ್ಥ.—ಅಶಕ್ತಃ=ಬಲವಿಲ್ಲದ, ಸುಗ್ರೀವಃ=ಸುಗ್ರೀವನು, ತನ್ಮುಷ್ಟಿಭಿಃ-ವಾಲಿಯ ಮುಷ್ಟಿಗಳಿಂದ, ಪ್ರತಹತಃ=ಹೊಡೆಯಲ್ಪಟ್ಟವನಾಗಿ, ಆಶು =ಜಾಗ್ರತೆಯಾಗಿ, ಪ್ರಯಯೌ=ಹೊರಟುಹೋದನು. ರಘುವರಃ-ಶ್ರೀರಾಮರು, ವಿದಿತಾಖಿಳಲೋಕಚೇಷ್ಟೋಽಪಿ-ವಿದಿತ=ತಿಳಿಯಲ್ಪಟ್ಟ, ಅಖಿಳಲೋಕ=ಸಮಸ್ತ ಪ್ರಪಂಚದ, ಚೇಷ್ಟೋಽಪಿ=ವ್ಯಾಪಾರವುಳ್ಳವರಾದಾಗ್ಯೂ, ಧರ್ಮಂ-ನೀತಿಯನ್ನು, ಅವೇಕ್ಷ್ಯ=ನೋಡಿದವರಾಗಿ, ಏನಂ-ವಾಲಿಯನ್ನು ನಜಘಾನ=ಕೊಲ್ಲಲಿಲ್ಲ. ಅಥ-ಅನಂತರ, ಸಃ-ಶ್ರೀರಾಮರು, ಏನಂಪ್ರತಿ= ಸುಗ್ರೀವನನ್ನು ಕುರಿತು, ಮಯಾ=ನನ್ನಿಂದ, ವಾಂ=ನಿಮ್ಮಗಳನ್ನು, ಯುಧಿ =ಯುದ್ಧಕಾಲದಲ್ಲಿ, ನವಿವಿಕ್ತೌ-ರೂಪಭೇದವಿಲ್ಲದ್ದರಿಂದ ಗುರ್ತು ಹಿಡಿಯಲು ಸಾಧ್ಯವಾಗಲಿಲ್ಲ.

ತಾತ್ಪರ್ಯ.—ಬಿಲದ್ವಾರದಲ್ಲಿ ಸುಗ್ರೀವನ ಸಿಂಹನಾದವನ್ನು ಕೇಳಿದೊಡನೆಯೇ ವಾಲಿಯು ಬಿಲದಿಂದ ಈಚೆಗೆ ಬಂದು ಸುಗ್ರೀವನಿಗೆ ಮುಷ್ಟಿಯಿಂದ ಹೊಡೆದನು. ಸುಗ್ರೀವನು ವಾಲಿಯ ಸಂಗಡ ಯುದ್ಧ ಮಾಡಲು ಶಕ್ತಿ ಇಲ್ಲದವನಾಗಿ ಹೊರಟುಹೋದನು. ಸಮಸ್ತ ಲೋಕ ವ್ಯವಹಾರವನ್ನು ತಿಳಿದಂಥಾ ಶ್ರೀರಾಮರು ಪ್ರಪಂಚಕ್ಕೆ ಒಂದು ಧರ್ಮವನ್ನು ಪ್ರಕಟನಮಾಡುವುದಕ್ಕಾಗಿ ಈ ವಾಲಿಯನ್ನು ಸಂಹರಿಸಲಿಲ್ಲ. ಅನಂತರ ಶ್ರೀರಾಮರು ಸುಗ್ರೀವನನ್ನು ಕುರಿತು ನಿಮ್ಮ ವ್ಯಾಜ್ಯಕಾಲದಲ್ಲಿ ನೀವು ಏಕರೂಪವುಳ್ಳವರಾಗಿದ್ದುದರಿಂದ ನಿಮ್ಮನ್ನು ಇಂತಹವರೆಂದು ವಿವೇಚನಮಾಡಲು ಸಾಧ್ಯವಾಗಲಿಲ್ಲವೆಂದು ಹೇಳಿದರು.

ಅವತಾರಿಕೆ.—ಶ್ರೀರಾಮರು ಪ್ರಕೃತ ಕಾಲದ ನೀತಿಯನ್ನು ಈ ಶ್ಲೋಕದಲ್ಲಿ ತಿಳಿಯಪಡಿಸುತ್ತಾರೆ.—

ಶ್ಲೋಕ ॥ ಸೌಭ್ರಾತ್ರಮೇವ ಯದಿವಾಂಛತಿ ವಾಲಿನೈವನಾ ಹಂಸಿರಾಗಸ ಮ
ಥಾಗ್ರಜನಿಂಹನಿಷ್ಯೇ । ದೀರ್ಘಃ ಸಹೋದರ ಗತೋನ ಭವೇದ್ವಿ
ಕೋಪೋದೀರ್ಘೋಟಿಕಾರಣಮೃತೇ ವಿನಿವರ್ತತೇಚ ॥೧೪॥

ಅರ್ಥ.—ಏಷಃ=ಈ ಸುಗ್ರೀವನು, ವಾಲಿನಾ=ವಾಲಿಯಿಂದ, ಸೌಭ್ರಾತ್ರಮೇವ-ಸ್ನೇಹವನ್ನೆ, ವಾಂಛತಿಯದಿ=ಅಪೇಕ್ಷಿಸುವದೇ ಆದರೆ, ಅಹಂ=ನಾನು, ನಿರಾಗಸಂ=ಅಪರಾಧ ರಹಿತನಾದ, ಅಗ್ರಜನಿಂ=ಅಣ್ಣನಾದ ವಾಲಿಯನ್ನು, ನಹನಿಷ್ಯೆ=ಕೊಲ್ಲುವುದಿಲ್ಲವು. ಅಥ-ಏತಕ್ಕೆಂದರೆ, ಸಹೋದರಗತಃ-ಅಣ್ಣತಮ್ಮಂದಿಯರಿಗಿಂತಕ್ಕ, ಕೋಪಃ=ಕೋಪವು, ದೀರ್ಘಃ-ಬಹು ಕಾಲಿಕವಾದದ್ದು, ನಭವೇತ್-ಆಗುವುದಿಲ್ಲವು. ದೀರ್ಘೋಪಿ=ಒಂದುವೇಳೆ ಬಹು ಕಾಲೀಕವಾದಾಗೂ, ಕಾರಣಮೃತೇ-ಕೋಪ ನಿವೃತ್ತಿಯಾಗುತ್ತದೆ.

ತಾತ್ಪರ್ಯ.—ಶ್ರೀರಾಮರು ತತ್ಕಾಲಿಕ ನೀತಿರೂಪವಾದ ಧರ್ಮವನ್ನು ವಿವೇಚನ ಮಾಡುತ್ತಾರೆ. ಹೇಗೆಂದರೆ.—ಪ್ರಪಂಚದಲ್ಲಿ ಅಣ್ಣತಮ್ಮಂದಿರಲ್ಲಿರತಕ್ಕ ಕೋಪವು ಬಹಳ ದಿವಸಗಳಿರತಕ್ಕದ್ದಲ್ಲವು. ಹಾಗೇನಾದರೂ ಬಹು ದಿವಸದ ಮನಸ್ತಾಪವಿದ್ದಲ್ಲಿಯೂ ಕೂಡ ಕಾಲವದಗಿದ್ದೇ ಆದರೆ ಅಂತಹ ಕೋಪ ಮನಸ್ತಾಪಗಳನ್ನು ನಿವೃತ್ತಿ ಮಾಡತಕ್ಕ ಕಾರಣವಿಲ್ಲದೆಯೇ ಪರಿಹಾರವಾಗಿ ಹೋಗುತ್ತದೆ. ಆದುದರಿಂದ ಈ ಸುಗ್ರೀವನು ಒಂದುವೇಳೆ ತನ್ನ ಅಣ್ಣನಾದ ವಾಲಿಯಲ್ಲಿ ಸ್ನೇಹವನ್ನು ಅಪೇಕ್ಷಿಸಿದ್ದ ಪಕ್ಷದಲ್ಲಿ ನಾನು ನಿರಪರಾಧಿಯಾದ ವಾಲಿಯನ್ನು ಸಂಹಾರಮಾಡುವುದಿಲ್ಲ.

ಶ್ಲೋಕ ಕೋಪಃ ಸಹೋದರಜನೇ ಪುನರಂತ ಕಾಲೇಪ್ರಾಯೋ ನಿವೃತ್ತಿಮು
ಪಗಛ್ಛತಿ ತಾಪಕಶ್ಚ । ಏಕಸ್ಯ ಭಂಗ ಇತಿನೈವ ಝುಡಿತ್ಯಪಾಸ್ತ ದೋ
ಷೋನಿಹಂತು ಮಹಯೋಗ್ಯ ಇತಿಸ್ಮ ಮೇನೇ ॥೧೫॥

ಅರ್ಥ.—ಸಹೋದರಜನೇ=ಅಣ್ಣತಮ್ಮಂದಿರ, ಕೋಪಃ=ಕೋಪವು, ಪುನಃ-ಪುನಶ್ಚ, ಅಂತಕಾಲೇ-ಮರಣಕಾಲದಲ್ಲಿ. ಪ್ರಾಯಃ=ಪ್ರಾಯಶಹ (ಬಹುಶಃ) ನಿವೃತ್ತಿಂ-ನಾಶವನ್ನು, ಉಪಗಚ್ಛತಿ=ಹೊಂದುತ್ತದೆ-ಇಹ=ತತ್ಕಾಲದಲ್ಲಿ, ಏಕಸ್ಯಭಂಗಃ=ಉಭಯತ್ರರಲ್ಲಿ ಒಬ್ಬನ ನಾಶವು, ತಾಪಕಶ್ಚ-ಉಳಿದವನಿಗೆ ತಾಪಕರವು. ಇತಿಃ-ಈ ಕಾರಣದಿಂದ, ಅಪಾಸ್ತದೋಷಃ=ಅಪಾಸ್ತ-ಹೋಗಲ್ಪಟ್ಟ, ದೋಷಃ=ದೋಷವುಳ್ಳ ಶ್ರೀರಾಮರು, ಇಹ=ಈ ಪ್ರಥಮ ಯುದ್ಧದಲ್ಲಿ ನಿರಪರಾಧಿಯಾದ ವಾಲಿಯು, ಝಡಿತಿ=ತಕ್ಷಣದಲ್ಲಿ, ನಿಹಂತುಂ=ಸಂಹಾರಮಾಡಲು, ನಯೋಗ್ಯಃ-ಅರ್ಹನಲ್ಲವು, ಇತಿ=ಹೀಗೆಂದು, ರಾಮಃ-ಶ್ರೀರಾಮರು, ಮೇನೇಸ್ಮ-ತಿಳಿದರು.

ತಾತ್ಪರ್ಯ.—ಪೂರ್ವ ಶ್ಲೋಕದಲ್ಲಿ ಹೇಳಿದ ಅರ್ಥ ವಿಶೇಷವನ್ನೇ ಈ ಶ್ಲೋಕದಲ್ಲೂ ವಿಶದಪಡಿಸುತ್ತಾರೆ. ಹೇಗೆಂದರೆ.—ಪ್ರಪಂಚದಲ್ಲಿ ಅಣ್ಣತಮ್ಮಂದಿರಲ್ಲಿರತಕ್ಕ ಕೋಪವು ಮರಣಕಾಲದಲ್ಲಿ ನಿವೃತ್ತಿಯಾಗುತ್ತದೆ. ಇಬ್ಬರಲ್ಲಿ ಒಬ್ಬನ ಮರಣವು ಇನ್ನೊಬ್ಬನಿಗೆ ಮಹಾ ತಾಪವನ್ನುಂಟುಮಾಡತಕ್ಕದ್ದಾಗಿರುತ್ತದೆ. ಆದುದರಿಂದ ಅನಪರಾಧಿ ಸಂಹಾರ ದೋಷರಹಿತರಾದ ಶ್ರೀರಾಮರು ಪ್ರಥಮ ಯುದ್ಧದಲ್ಲಿ ನಿರಪರಾಧಿಯಾದ ವಾಲಿಯು ತತ್ಕಾಲದಲ್ಲಿ ತಮ್ಮಿಂದ ಕೊಲ್ಲಲ್ಪಡುವುದಕ್ಕೆ ಅರ್ಹನಲ್ಲವೆಂದು ತಿಳಿದರು.

**ಶ್ಲೋಕ ॥ ತಸ್ಮಾನ್ನ ಬಂಧು ಜನಗೇ ಜನಿತೇ ವಿರೋಧೇ ಕಾರ್ಯೋವಧಸ್ತದನು ಬಂಧು ಭಿರಾಶ್ಚಿತೀಹ । ಧರ್ಮಂ ಪ್ರದರ್ಶಯಿತ ಮೇವ ರವೇಃ ಸುತಸ್ಯ ಭಾವೀನತಾಪ ಇತಿ ವಿಚ್ಛನತಂಜಘಾನ ॥೧೬॥**

ಅರ್ಥ.—ಯಸ್ಮಾತ್-ಯಾವ ಕಾರಣದಿಂದ, ರವೇಃ=ಸೂರ್ಯನ ಸುತಸ್ಯ=ಪುತ್ರನಾದ ಸುಗ್ರೀವನಿಗೆ, ಭಾವಿ=ಮುಂದೆ ಉಂಟಾಗತಕ್ಕ, ತಾಪಃ=ವ್ಯಸನವು, ನಭವೇತ್ = ಆಗಬಾರದು, ಇತಿ = ಈ ಪ್ರಕಾರವಾಗಿ, ವಿತ್ಚ್ಛ=ತಿಳಿದು, ತಸ್ಮಾತ್-ಆ ಕಾರಣದ ದೆಸೆಯಿಂದ, ರಾಮಃ=ಶ್ರೀರಾಮರು, ಬಂಧುಜನಗೇ=ಬಂಧು ಜನರಲ್ಲಿ, ವಿರೋಧೆ=ಮನಸ್ತಾಪವು,

ಜನಿತೇಸತಿ-ಉಂಟಾದರೆ, ತದನುಬಂಧುಭಿಃ=ಅವರಲ್ಲಿ ಒಬ್ಬರೊಬ್ಬರಿಗೆ, ಆಶು-ಅನುಸಂಧಾನಮಾಡದಲೇ=ತಕ್ಷಣದಲ್ಲಿಯೇ, ವಧಃ=ಯಾರಾದರೊಬ್ಬರ ವಧೆಯು, ನಕಾರ್ಯಃ=ಕರ್ತವ್ಯವಲ್ಲವು, ಇತಿ=ಹೀಗೆಂಬ, ಧರ್ಮಂ=ನೀತಿಯನ್ನು, ಪ್ರದರ್ಶಯತಾ ಮೇವ=ತೋರಿಸುವದಕ್ಕೋಸ್ಕರವಾಗಿಯೇ, ತಂಚ=ನಿರಪರಾಧಿಯಾದ ವಾಲಿಯನ್ನು, ನಜಘಾನ=ಸಂಹಾರಮಾಡಲಿಲ್ಲ.

ತಾತ್ಪರ್ಯ.—ವಾಲಿಯನ್ನು ಈಗಲೇ ಸಂಹಾರಮಾಡಿದರೆ ಸುಗ್ರೀವನಿಗೆ ಅದರಿಂದ ಒಂದುವೇಳೆ ಮುಂದೆ ವ್ಯಸನ ಉಂಟಾಗಬಹುದು. ಅದು ಹಾಗಾಗಬಾರದೆಂದು ತಿಳಿದು ಬಂಧು ಜನರಲ್ಲಿ ಪರಸ್ಪರ ಕೋಪವುಂಟಾದಲ್ಲಿ ಅವರವರ ಮಿತ್ರ ಜನಗಳು ಇವರೊಬ್ಬೊಬ್ಬರಿಗೂ ಸಂಧಾನಮಾಡಿಸಿ ಕೋಪವನ್ನು ಸಮಾಧಾನ ಮಾಡತಕ್ಕದ್ದು ಧರ್ಮವೆಂಬುದನ್ನು ಪ್ರಪಂಚಕ್ಕೆ ಪ್ರದರ್ಶನ ಮಾಡುವುದಕ್ಕಾಗಿ ವಾಲಿಯು ಬಿಲದಿಂದ ಬಂದು ಸುಗ್ರೀವನನ್ನು ಮುಷ್ಟಿ ಪ್ರಹಾರ ಮಾಡಿದ ಮಾತ್ರಕ್ಕೇನೇ ಶ್ರೀರಾಮನು ವಾಲಿಯನ್ನು ಸಂಹಾರ ಮಾಡಲಿಲ್ಲ.

ಅವತಾರಿಕೆ.—ಹಿಂದೆ ಶ್ರೀರಾಮನಿಗೆ ವಾಲಿ ಸುಗ್ರೀವರ ರೂಪಭೇದವು ತಿಳಿಯಲಿಲ್ಲವೆಂದು ಹೇಳಿದರಷ್ಟೆ. ಆ ಮಾತು ನಿಶ್ಚಯವೆಂಬ ಶಂಕಾವನ್ನು ಪರಿಹರಿಸುತ್ತಾರೆ.

ಶ್ಲೋಕ ॥ ಯಃ ಪ್ರೇರಕಃ ಸಕಲ ಶೇಮುಷಿ ಸಂತತೇಶ್ಚ ತಸ್ಯಾಜ್ಞತಾ ಕುತ
ಇಹೇಶ ವರಸ್ಯ ವಿಷ್ಣೋಃ ॥ ತೇನೋದಿತೋಥ ಸುದೃಢಂ ಪುನರಾ
ಗತೇನ ಪಜ್ರೋಪಮಂ ಶರಮಮೂಮುಚದಿಂದ್ರಸೂನೌ ॥೧೭॥

ರಾಮಾಜ್ಞಯೈವಲತಯಾ ರವಿಜೇವಿಭಕ್ತೇ ವಾಯೋಃ ಸುತೇನ ರ
ಘುಪೇಣ ಶರೇ ಪ್ರಮುಕ್ತೇ । ಕೃತ್ವಾಸ್ಯ ಶಬ್ದಮತುಲಂ ಹೃದಿತೇನ
ವಿದ್ಧ ಇಂದ್ರಾತ್ಮಜೋ ಗಿರಿರವಾಪ ತದಾಶುಸಂನಃ ॥೧೮॥

ಅರ್ಥ.—ಯಃ-ಯಾವ ಶ್ರೀರಾಮರು, ಸಕಲಶೇಮುಷಿಸಂತತೇಶ್ಚ=ಸಮಸ್ತ ತಿಳುವಳಿಕೆಯಂತರ ಸಮೂಹಕ್ಕೂ, ಪ್ರೇರಕಃ=ತಿಳಿಯುಹೇಳತಕ್ಕವರೋ, ತಸ್ಯ-ಅಂತಹ, ಈಶವರಸ್ಯ=ಈಶ=ಮನೋಭಿಮಾನಿ ಖುದ್ರದೇವರಿಗಿಂತಲೂ, ವರಸ್ಯ=ಶ್ರೇಷ್ಠರಾದ, ವಿಷ್ಣೋಃ=ವಿಷ್ಣು ಸ್ವರೂಪರಾದ, ಶ್ರೀರಾಮರಿಗೆ, ಇಹ=ಈ ವಾಲಿ ಸುಗ್ರೀವರ ರೂಪ ಭೇದ ವಿಷಯದಲ್ಲಿ, ಅಜ್ಞಾತ=ಅಜ್ಞಾನವು, ಕುತಃ=ಎಲ್ಲಿಯದು ( ಇಲ್ಲವೇ ಇಲ್ಲವು) ಅಗತೇನ= ವಾಲಿಯ ಯುದ್ಧದಿಂದ ನಿವೃತ್ತನಾಗಿ ಬಂದಂಥ, ತೇನ-ಆ ಸುಗ್ರೀವನಿಂದ ಪುನಃ=ಮತ್ತೆ, ಸುದೃಢಂಯಥಾ ಭವತಿತಥಾ=ಅತಿ ಖಂಡಿತವಾಗಿ, ಉದಿತಃ ವಾಲಿಯನ್ನು ಸಂಹಾರಮಾಡಬೇಕೆಂದು ಹೇಳಲ್ಪಟ್ಟರು. ಅಥ=ಅನಂತರ, ರಾಮಾಜ್ಞಯೈವ-ಶ್ರೀರಾಮರ ಅಪ್ಪಣೆಪ್ರಕಾರ, ವಾಯೋಃಸುತೇನ-ವಾಯು ಪುತ್ರನಾದ ಹನುಮಂತನಿಂದ, ರವಿಜೇ=ಸೂರ್ಯ ಪುತ್ರನಾದ ಸುಗ್ರೀವನು, ಲತಯಾ=ಬಳ್ಳಿಯಿಂದ, ವಿಭಕ್ತೇಸತಿ-ಕೊರಳಿನಲ್ಲಿ ಸುತ್ತಿ, ಸುಗ್ರೀವನರೂಪ ವಿಮರ್ಶಮಾಡುತ್ತಿರಲಾಗಿ, ಸಃ=ಶ್ರೀರಾಮರು, ಇಂದ್ರಸೂನೌ-ಇಂದ್ರಪುತ್ರನಾದ ವಾಲಿಯಮೇಲೆ, ವಜ್ರೋಪಮಂ-ವಜ್ರಾಯುಧಕ್ಕೆ ಸದೃಶವಾದ, ಶರಂ=ಬಾಣವನ್ನು, ಅಮೂಮುಚತ್=ಪ್ರಯೋಗಮಾಡಿದರು. ಈ ರೀತಿಯಾಗಿ, ರಘುಪೇಣ-ರಘುಪತಿಯಾದ ಶ್ರೀರಾಮರಿಂದ, ಶರೇ=ಬಾಣವು, ಪ್ರಮುಕ್ತೇಸತಿ=ಬಿಡಲ್ಪಡುತ್ತಿರಲಾಗಿ, ಅಸ್ಯ-ಈ ಬಾಣದ, ಅತುಲಂ-ಅಸದೃಶವಾದ, ಶಬ್ದಂ=ಶಬ್ದವನ್ನು, ಶೃತ್ವಾ=ಕೇಳಿ, ತೇನ=ಆ ಬಾಣದಿಂದ, ಹೃದಿ=ಹೃದಯದಲ್ಲಿ, ವಿದ್ಧಃ=ನೆಟ್ಟಲ್ಪಟ್ಟ, ಇಂದ್ರಾತ್ಮಜಃ=ವಾಲಿಯು, ಗಿರಿರಿವ=ಪರ್ವತದೋಪಾದಿಯಲ್ಲಿ, ಆಶುಸಂನಃರ್ಸ=ತಕ್ಷಣವೇ ಮೂರ್ಛಿತನಾಗಿ, ಅಪತತ್-ಬಿದ್ದನು.

ತಾತ್ಪರ್ಯ.—ಜಗತ್ತಿನಲ್ಲಿ ಸಮಸ್ತ ಜ್ಞಾನಿಗಳ ಸಮೂಹಕ್ಕೂ ಪ್ರೇರಕರಾದ ಮತ್ತು ಮನೋಭಿಮಾನಿಯಾದ ಖುದ್ರದೇವರಿಗಿಂತಲೂ ಪರಮ ಶ್ರೇಷ್ಠರಾದ ರಾಮರಿಗೆ ವಾಲಿ ಸುಗ್ರೀವರ ರೂಪವನ್ನು ಕಂಡು ಹಿಡಿಯುವುದರಲ್ಲಿ ಅಜ್ಞಾನವೆಲ್ಲಿಯದು ? ಎಂದಿಗೂ ಇಲ್ಲ. ಅನಂತರ ಸುಗ್ರೀವನು ವಾಲಿಯ ಸಂಗಡ ಯುದ್ಧಮಾಡಲು ಅಶಕ್ತನಾಗಿ ಯುದ್ಧದಿಂದ ನಿವೃತ್ತನಾಗಿ ಪುನಃ ರಾಮರ ಬಳಿ ಬಂದು ವಾಲಿಯು ಅವಶ್ಯಕವಾಗಿ ಸಂಹರಿಸಲ್ಪಡತಕ್ಕವನು, ಅವನನ್ನು ಖಂಡಿತವಾಗಿ ಸಂಹಾರ ಮಾಡಬೇಕೆಂದು

ಹೇಳಿದನು. ಶ್ರೀರಾಮರು ಹನುಮಂತನಿಗೆ ಆಜ್ಞೆಮಾಡಿದ ಪ್ರಕಾರ ವಾಲಿ ಸುಗ್ರೀವರಿಗೆ ಭೇದ ತಿಳಿಯುವದಕ್ಕಾಗಿ (ಉಭಯತ್ರರೂ ಒಂದು ತರಹೆಯ ರೂಪವುಳ್ಳವರಾಗಿದ್ದುದರಿಂದ) ಬಳ್ಳಿಯನ್ನು ಸುಗ್ರೀವನ ಕೊರಳಿಗೆ ಸುತ್ತಿ ಅವನ ಗುರ್ತು ತಿಳಿಯುವಹಾಗೆ ಮಾಡಿದರು. ಅನಂತರ ಶ್ರೀರಾಮರು ವಾಲಿಯಮೇಲೆ ವಜ್ರಾಯುಧಕ್ಕೆ ಸದೃಶವಾದ ಬಾಣವನ್ನು ಪ್ರಯೋಗಮಾಡಿದರು. ಆದರ ಅಸದೃಶ ಶಬ್ದವನ್ನು ಕೇಳಿ ವಾಲಿಯು ಮೂರ್ಛಿತನಾಗಿ ಬಾಣವು ಹೃದಯದಲ್ಲಿ ನೆಟ್ಟಲ್ಪಟ್ಟು ಪರ್ವತದೋಪಾದಿಯಲ್ಲಿ ನೆಲಕ್ಕೆ ಬಿದ್ದನು.

ಅವತಾರಿಕೆ.— ಶ್ರೀರಾಮರು ವಾಲೀಗೆ ಭಯಪಟ್ಟು ಅವನಿಗೆ ಕಾಣಿಸಿಕೊಳ್ಳದೆ ಸಂಹಾರಮಾಡಿದರೆಂದು ಗ್ರಂಥಾಂತರಗಳಲ್ಲಿ ಹೇಳಲ್ಪಟ್ಟ ವಿರೋಧಾಭಿಪ್ರಾಯವನ್ನು ಈ ಕೆಳಗಿನ ಶ್ಲೋಕದ್ವಯಗಳಿಂದ ಪರಿಹಾರಮಾಡುತ್ತಾರೆ.—

**ಶ್ಲೋಕ॥ ಭಕ್ತೋಮಮೈಷಯದಿಮಾಮಭಿಪಶ್ಯತೀಹ ಪಾದೌಧ್ರುವಂ ಮಮ ಸಮೇಷ್ಯತಿ ನಿರ್ವಿಚಾರಃ॥ ಯೋಗ್ಯೋ ವಧೋನಹಿ ಜನಸ್ಯ ಪದಾನತಸ್ಯ ರಾಜ್ಯಾರ್ಥಿನಾ ರವಿಸುತೇನ ವಧೋರ್ಥಿತಶ್ಚ ॥೧೯॥**

ಅರ್ಥ.— ಪದಾನತಸ್ಯ=ಪಾದಾಕ್ರಾಂತರಾದ, ಜನಸ್ಯ - ಜನಗಳ, ವಧಃ= ಸಂಹಾರವು, ನಯೋಗ್ಯಃ=ಯೋಗ್ಯವಲ್ಲವು, ಹಿ-ಹೀಗೆಂದು, ಧರ್ಮಶಾಸ್ತ್ರ ವಚನಗಳು ಪ್ರಸಿದ್ಧಿಯಾಗಿವೆ. ಆದ್ದರಿಂದ, ರಾಜ್ಯಾರ್ಥಿನಾ=ರಾಜ್ಯವನ್ನು ಅಪೇಕ್ಷಿಸುವ ಸುಗ್ರೀವನಿಂದ, ವಧಃ=ತನ್ನ ಶತ್ರುವಾದ ವಾಲಿಯ ವಧೆಯು, ಅರ್ಥಿತಶ್ಚ=ಪ್ರಾರ್ಥಿಸಲ್ಪಟ್ಟಿತು, ಏಷಃ=ಈ ವಾಲಿಯು, ಮಮ-ನನಗೆ ಭಕ್ತನು. ಇಹ=ಶತ್ರುಪಕ್ಷಸ್ಥನಾದ ನನ್ನಲ್ಲಿ, ನಿರ್ವಿಚಾರಃಸ್ಸ= ಹೋಗಬಹುದೋ ಇಲ್ಲವೋ ಎಂಬ ವಿಚಾರ ರಹಿತನಾಗಿ, ಮಾಂ=ನನ್ನನ್ನು ಯದಿಅಭಿಪಶ್ಯತಿ-ನೋಡಿದ್ದೇ ಆದರೆ, ಏಷಃ=ಈ ವಾಲಿಯು, ಮಮಪಾದೌ-ನನ್ನ ಪಾದವನ್ನು, ಏಷ್ಯತಿ-ಹೊಂದುತ್ತಾನೆ, ಧ್ರುವಂ=ನಿಶ್ಚಯವು.

ತಾತ್ಪರ್ಯ.—ಪ್ರಥಮತಃ ಪಾದಾಕ್ರಾಂತರಾದವರ ಕಾರ್ಯವನ್ನು ಮಾಡತಕ್ಕದ್ದು. ಪಾದಾಕ್ರಾಂತರಾದವರ ವಧೆಯು ಯೋಗ್ಯವಲ್ಲವೆಂದು ಧರ್ಮಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಸುಗ್ರೀವನು ರಾಜ್ಯಾಪೇಕ್ಷೆಯಿಂದ ನನ್ನ ಪಾದಾಕ್ರಾಂತನಾಗಿ ತನ್ನ ಶತ್ರುವಾದ ವಾಲಿಯ ವಧೆಯನ್ನು ಪ್ರಾರ್ಥನ ಮಾಡುತ್ತಾನೆ. ಆದ್ದರಿಂದ ವಾಲಿಯು ವಧೆಯು ಅವಶ್ಯವಾಯಿತು. ಈ ವಾಲಿಯು ನನಗೆ ಭಕ್ತನು, ಇವನು ನನ್ನನ್ನು ನೋಡಿದ್ದೇ ಆದರೆ ಶತ್ರುಪಕ್ಷ ದವರಲ್ಲಿ ಹೋಗಬಹುದೇ ಹೋಗಬಾರದೇ ಎಂದು ವಿಚಾರ ರಹಿತನಾಗಿ ನಿಶ್ಚಯವಾಗಿಯೂ ನನ್ನ ಪಾದಗಳನ್ನು ಹಿಡಿಯುತ್ತಾನೆ.

ಶ್ಲೋಕ ॥ ಕಾರ್ಯಂ ಹ್ಯಭೀಷ್ಟಮಪಿ ತತ್ಪ್ರಣತಸ್ಯ ಪೂರ್ವಂ । ಶಸ್ತೋವಧೋ ನಪದಯೋಃ ಪ್ರಣತಸ್ಯ ಚೈವ ॥ ತಸ್ಮಾದದೃಶ್ಯ ತನುರೇವ ನಿಹನ್ಮಿಶಕ್ರ । ಪುತ್ರಂತ್ವಿತಿಸ್ಮತ ಮದೃಶ್ಯತಯಾ ಜಘಾನ ॥೨೦॥

ಅರ್ಥ.—ತತ್=ಧರ್ಮಶಾಸ್ತ್ರೋಕ್ತ್ಯಾನುಸಾರ, ಪೂರ್ವಂ=ಪ್ರಥಮ ದಲ್ಲಿ, ಪ್ರಣತಸ್ಯ-ಶರಣಾಗತನಾದವನ, ಅಭೀಷ್ಟಂ = ಇಷ್ಟಾರ್ಥವನ್ನು, ಕಾರ್ಯಂ=ಅವಶ್ಯಮಾಡತಕ್ಕದ್ದಾಗಿದೆ. ಪದಯೋಃ=ಪಾದಗಳಲ್ಲಿ, ಪ್ರಣ ತಸ್ಯ=ಶರಣಾಗತನಾದವನ, ವಧಃಶ್ಚ=ಸಂಹಾರವು; ನಶಸ್ತಯೇವ=ಎಂದಿ ಗೂ (ಪ್ರಶಸ್ತ) ಯೋಗ್ಯವಲ್ಲವು, ಹಿ=ಹೀಗೆಂದು ಧರ್ಮಶಾಸ್ತ್ರಪ್ರಸಿದ್ಧಿಯು ತಸ್ಮಾತ್=ಆದ್ದರಿಂದ, ಶ್ರೀರಾಮರು, ಶಕ್ರಪುತ್ರಂ=ಇಂದ್ರಪುತ್ರನಾದ ವಾ ಲಿಯನ್ನು, ಅದೃಶ್ಯತನುರೇವ=ಕಾಣಿಸಿಕೊಳ್ಳದಲೇನೇ, ಹನ್ಮಿ - ಸಂಹಾರ ಮಾಡುತ್ತೇನೆ, ಇತಿ-ಹೀಗೆಂದು ಭಾವಿಸಿ, ತಂ=ವಾಲಿಯನ್ನು, ಅದೃಶ್ಯತ ಯಾ=ಅಗೋಚರನಾಗಿ, ಜಘಾನಸ್ಮ=ಸಂಹಾರಮಾಡಿದರು.

ತಾತ್ಪರ್ಯ.—ಧರ್ಮಶಾಸ್ತ್ರೋಕ್ತಿಯ ಪ್ರಕಾರ ಮೊದಲು ಶರಣಾ ಗತರಾದವರ ಇಷ್ಟಸಿದ್ಧಿಯನ್ನು ಮಾಡತಕ್ಕದ್ದು. ಮತ್ತು ಶರಣಾಗತರಾ ದವರನ್ನು ಸಂಹಾರಮಾಡತಕ್ಕದ್ದು ಸರ್ವಥಾ ಯೋಗ್ಯವಲ್ಲವು, ಆದ್ದರಿಂದ ಪ್ರಥಮತಃ ಶರಣಾಗತನಾದ ಸುಗ್ರೀವನ ಇಷ್ಟಾರ್ಥವಾದ ರಾಜ್ಯವನ್ನು ಸಂಪಾದನ ಮಾಡಿಕೊಡುವದಕ್ಕೋಸ್ಕರ ವಾಲಿಯನ್ನು ಕಾಣಿಸಿಕೊಳ್ಳದೇನೇ

ಸಂಹಾರಮಾಡುತ್ತೇನೆಂದು ಭಾವಿಸಿ ಅವನ ದೃಷ್ಟಿಗೆ ಗೋಚರನಾಗದೆ ಸಂಹಾರ ಮಾಡಿದರು.

ಅವತಾರಿಕೆ.—ಪೂರ್ವದಲ್ಲಿ ಋದ್ರದೇವರು ವಾಲೀಗೆ ನಿನಗೆ ದೃಷ್ಟಿಗೋಚರನಾಗಿ ನಿಂತು ಪ್ರತಿಭಟಿಸುವಂಥಾವನ ಬಲವು ನಿನ್ನನ್ನೇ ಹೊಂದುತ್ತದೆ, ಎಂದು ಕೊಟ್ಟಿದ್ದ ವರಕ್ಕೆ ಶ್ರೀರಾಮರು ಭೀತರಾಗಿ ಅವನಿಗೆ ಎದುರುಬೀಳದೆ ಮರೆಯಾಗಿದ್ದು ಅವನನ್ನು ಕೊಂದರೆಂಬುವ ಪುರಾಣ ಪ್ರಸಿದ್ಧವಾದ ವಾಕ್ಯವನ್ನು ಪ್ರಮಾಣದಿಂದ ಪರಿಹಾರಮಾಡುತ್ತಾರೆ.—

ಶ್ಲೋಕ || ಯಃ ಪ್ರೇರಕಃ ಸಕಲಲೋಕ ಬಲಸ್ಯ ನಿತ್ಯಂ |
ಪೂರ್ಣಾವ್ಯಯಶ್ಚ ಬಲವೀರ್ಯ ತನುಃ ಸ್ವತಂತ್ರಃ ||
ಕಿಂತಸ್ಯ ದೃಷ್ಟಿಪಥಗಸ್ಯಚ ವಾನರೋಽಯಂ |
ಕರ್ತೇಶಚಾಪ ಮಪಿಯೇನ ಪುರಾವಿಭಗ್ನಂ ||೨೦||

ಅರ್ಥ.—ಯಃ=ಯಾವ ಶ್ರೀರಾಮರು, ನಿತ್ಯಂ=ನಿರಂತರವಾಗಿ, ಪೂರ್ಣಾವ್ಯಯಃ=ಸಂಪೂರ್ಣ ನಾಶರಹಿತರೋ, ನಿತ್ಯಂ-ನಿರಂತರವೂ, ಬಲವೀರ್ಯತನುಃ=ಬಲಪರಾಕ್ರಮಗಳಿಂದ ಕೂಡಿದ ಶರೀರವುಳ್ಳವರಾದ್ದರಿಂದಲೇ, ಸ್ವತಂತ್ರಃ=ನಿತ್ಯಸ್ವತಂತ್ರರೋ, ಸಕಲಲೋಕಬಲಸ್ಯ-ಸಮಸ್ತ ಪ್ರಪಂಚದ ಬಲಕ್ಕೆ, ನಿತ್ಯಂ=ನಿರಂತರವಾಗಿ ಪ್ರೇರಕರೋ, ಪುರಾ=ಪೂರ್ವದಲ್ಲಿ, ಈಶಚಾಪಮಪಿ-ಋದ್ರದೇವರ ಧನುಸ್ಸೂ ಕೂಡ, ಯೇನ=ಯಾವ ಶ್ರೀರಾಮರಿಂದ, ವಿಭಗ್ನಂ=ಮುರಿಯಲ್ಪಟ್ಟಿತೋ, ತಸ್ಯ=ಅಂತಹ ಮಹಾತ್ಮರಾದ, ದೃಷ್ಟಿಪಥಗಸ್ಯ-ವಾಲೀಗೆ ದೃಷ್ಟಿಗೋಚರರಾಗತಕ್ಕ ಶ್ರೀರಾಮರಿಗೆ, ಅಯಂ-ಈ, ವಾನರಃ-ಕಪಿಯಾದ ವಾಲಿಯು, ಕಿಂಕರ್ತಾ-ಏನು ಮಾಡಬಲ್ಲನು ?

ತಾತ್ಪರ್ಯ.—ವಾಲೀಗೆ ಋದ್ರದೇವರ ವರವಿರುವುದರಿಂದ ಪ್ರತ್ಯಕ್ಷವಾಗಿ ನಿಂತು ವಧೆಮಾಡುವುದಕ್ಕೆ ಹೋದರೆ ತಮ್ಮ ಬಲಹ್ರಾಸವಾದೀತೆಂಬ ಶಂಕೆಯಿಂದ ಪರೋಕ್ಷದಲ್ಲಿ ವಾಲಿಯನ್ನು ಸಂಹಾರಮಾಡಿದರೆಂಬ

ಪುರಾಣದ ವಿರೋಧೋಕ್ತಿಗಳು ಸಾಧುವಲ್ಲವು. ಅದು ಹೇಗೆಂದರೆ.— ಶ್ರೀರಾಮರು ನಿರಂತರವಾಗಿ ಪೂರ್ಣನಾಶರಹಿತರು ಮತ್ತು ನಿರಂತರವಾದ ಬಲಪರಾಕ್ರಮವೀರ್ಯಯುಕ್ತವಾದ ಶರೀರವುಳ್ಳವರು, ಆದ್ದರಿಂದಲೇ ನಿತ್ಯ ಸ್ವತಂತ್ರರು ಸಮಸ್ತ ಪ್ರಪಂಚದಲ್ಲಿ ಸರ್ವ ಪ್ರಾಣಿಗಳ ಚೇತನಾ ಚೇತನ ಗಳ ಬಲ ಪರಾಕ್ರಮಗಳಿಗೂ ನಿತ್ಯಪ್ರೇರಕರೂ ಮತ್ತು ಪೂರ್ವದಲ್ಲಿ ಇವರ ಸ್ವಯಂವರಕಾಲದಲ್ಲಿ ಜನಕರಾಜನಲ್ಲಿದ್ದ ಖುದ್ರ ಧನುಃಸ್ಸನ್ನು ಭಂಗಮಾಡಿ ಯೇ ಇದ್ದಾರೆ. ಇಂತಹ ಮಹಾತ್ಮರಾದ ರಾಮರಿಗೆ ಕಪಿಯಾದ ಈ ವಾಲಿ ಯು ಪ್ರತ್ಯಕ್ಷ ನಿಂತ ಮಾತ್ರಕ್ಕೆ ಏನು ಮಾಡಬಲ್ಲನು ? ಈ ಕಾರಣಗಳಿಂದ ಪೂರ್ವದಲ್ಲಿಯೇ ಶರಣಾಗತನಾದ ಸುಗ್ರೀವನ ರಾಜ್ಯಪ್ರಾಪ್ತಿ ರೂಪನಾದ ಇಷ್ಟಾರ್ಥಶಿದ್ಧಿ ಮಾಡುವದಕ್ಕೋಸ್ಕರ ಅವನಿಗೆ ಶತೃವಾದ ವಾಲಿಯನ್ನು ಅಪ್ರತ್ಯಕ್ಷವಾಗಿ ಸಂಹಾರ ಮಾಡಿದರು.

**ಶ್ಲೋಕ॥ ಸಂನೇಥವಾಲಿ ನಿಜಗಾಮಚ ತಸ್ಯಪಾರ್ಶ್ವಂ ।**
**ಪ್ರಾಹೈನ ಮಾರ್ದ್ರವಚಸಯಾದಿ ವಾಂಛಸಿತ್ವಂ ॥**
**ಉಜ್ಜೀವಯಿಷ್ಯ ಇತಿ ಸ್ವೈಛ್ಛದಸೌತ್ವದಗ್ರೇ ।**
**ಕೋನಾಮ ನೇಛ್ಛತಿಮೃತಿಂ ಪುರುಷೋತ್ತಮೇತಿ ॥೨೨॥**

ಅರ್ಥ.—ವಾಲಿನಿ=ವಾಲಿಯು, ಸನ್ನೇಸತಿ=ಮೂರ್ಛಿತನಾಗುತ್ತಿರ ಲಾಗಿ, ಸಃ=ಶ್ರೀರಾಮರು, ತಸ್ಯ=ಆ ವಾಲಿಯ, ಪಾರ್ಶ್ವಂ-ಸಮಿಾಪಕ್ಕೆ, ಜಗಾಮ-ಹೋದರು. ಅನಂತರ, ಏನಂಪ್ರತಿ=ಈ ವಾಲಿಯನ್ನು ಕುರಿತು, ಆರ್ದ್ರವಚನಾ=ದಯಾಪೂರಿತವಾದ ವಾಕ್ಯದಿಂದ, ತ್ವಂ-ನೀನು, ವಾಂಛ ಸಿಯದಿ-ಅಪೇಕ್ಷಿಸಿದ್ದೇ ಅದರೆ, ತ್ವಾಂ=ನಿನ್ನನ್ನು, ಉಜ್ಜೀವಯಿಷ್ಯೇ=ಬದು ಕಿಸುತ್ತೇನೆ, ಇತಿ-ಹೀಗೆಂದು, ಪ್ರಾಹ=ಹೇಳಿದರು. ಅಸೌ-ಈ ವಾಲಿಯು ತಂ=ರಾಮರನ್ನು ಕುರಿತು, ಹೇ ಪುರುಷೋತ್ತಮ=ಎಲೌ ಪರಮಪುರುಷ ಶ್ರೇಷ್ಟನೇ, ತ್ವದಗ್ರೇ=ನಿನ್ನ ಸನ್ನಿಧಾನದಲ್ಲಿ, ಮೃತಿಂ-ಮರಣವನ್ನು, ಕೋ ನಾಮ=ಎಂತಹ ಶ್ರೇಷ್ಟನಾದ ಪುರುಷನುತಾನೇ, ನೇಛ್ಛತಿ-ಅಪೇಕ್ಷಿಸುವ ದಿಲ್ಲ ? ಇತಿ=ಹೀಗೆಂದು, ಬ್ರುವನ್ಸರ್=ಹೇಳಿದವನಾಗಿ, ಸ್ವತಃ = ತಾನು, ಜೀವಿತುಂ=ಬದುಕುವಿಕೆಯನ್ನು ಅಪೇಕ್ಷಿಸಲಿಲ್ಲವು.

ತಾತ್ಪರ್ಯ.—ವಾಲಿಯು ರಾಮಬಾಣದಿಂದ ಪೆಟ್ಟುತಿಂದು ಮೂರ್ಛಿತನಾಗಿ ಬಿದ್ದಿರಲು ಶ್ರೀರಾಮರು ಅವನ ಬಳಿಗೆಹೋಗಿ ಸಂತೈಸಿ ತಮ್ಮ ಅಮೃತವಾಕ್ಯದಿಂದ ನಿನಗೆ ಜೀವಿಸಬೇಕೆಂಬ ಇಚ್ಛೆ ಇದ್ದದ್ದೇ ಆದರೆ ನಿನ್ನನ್ನು ಬದುಕಿಸುತ್ತೇನೆಂದು ಹೇಳಿದರು. ಅದಕ್ಕೆ ವಾಲಿಯು ರಾಮನನ್ನು ಕುರಿತು ಹೇ ಪರಮಪುರುಷ ಶ್ರೇಷ್ಠನೇ ನಿನ್ನ ಪಾದ ಸನ್ನಿಧಾನದಲ್ಲಿ ಯಾವ ಜ್ಞಾನಿಯಾದ ಪುರುಷನು ತಾನೇ ಮರಣವನ್ನು ಅಪೇಕ್ಷಿಸುವುದಿಲ್ಲ ಎಂದನು.

**ಶ್ಲೋಕ ॥ ಕಾರ್ಯಾಣಿ ತಸ್ಯ ಚರಮಾಣಿ ವಿಧಾಯ ಪುತ್ರಂ । ತ್ವಗ್ರೇನಿಧಾಯ ರವಿಜಃ ಕಪಿರಾಜ್ಯ ಆಸೀತ್ ॥ ರಾಮೋಽಪಿ ತದ್ಗಿರಿವರೇ ಚತುರೋಽಥ ಮಾಸಾ । ದೃಷ್ಟ್ವಾಘನಾಗಮ ಮುವಾಸ ಸಲಕ್ಷ್ಮಣೋಽಸೌ ॥೨೩॥**

ಅರ್ಥ.—ರವಿಜಃ-ಸುಗ್ರೀವನು, ಪುತ್ರಂ - ಕರ್ಮಾಧಿಕಾರಿಯಾದ ವಾಲಿಯ ಮಗನನ್ನು, ಅಗ್ರೇನಿಧಾಯ=ಮುಂದುಮಾಡಿಕೊಂಡು, ತಸ್ಯ=ವಾಲಿಯ, ಚರಮಾಣಿಕಾರ್ಯಾಣಿ=ಅಂತ್ಯ ಕರ್ಮಗಳನ್ನು, ವಿಧಾಯ=ಮಾಡಿಸಿ (ತಾನು) ಕಪಿರಾಜ್ಯೇ=ಕಪಿರಾಜ್ಯದಲ್ಲಿ (ಕಿಷ್ಕಿಂಧಾಪಟ್ಟಣದಲ್ಲಿ) ಆಸೀತ್=ರಾಜನಾದನು. ಅಥ=ಅನಂತರದಲ್ಲಿ, ಅಸೌ=ಈ, ರಾಮೋಽಪಿ-ಶ್ರೀರಾಮರೂ ಕೂಡಾ, ಘನಾಗಮಂ-ಮೇಘಗಳ ಬರುವಿಕೆಯನ್ನು (ಮಳೆಗಾಲ ಬರುವುದನ್ನು) ದೃಷ್ಟ್ವಾ=ನೋಡಿ, ತದ್ಗಿರಿವರೇ=ಪರ್ವತ ಶ್ರೇಷ್ಠವಾದ ಮಾಲ್ಯವತಿನಾಮಕವಾದ ಪರ್ವತದಲ್ಲಿ, ಸಲಕ್ಷ್ಮಣಃ=ಲಕ್ಷ್ಮಣರಿಂದ ಸಹಿತರಾಗಿ, ಚತುರೋಮಾಸಾ-ನಾಲ್ಕು ತಿಂಗಳಕಾಲ ಪರಿಯಂತರ, ಉವಾಸ=ವಾಸಮಾಡಿದರು.

ವಿಶೇಷವಿಷಯುವು.—ಈ ಶ್ಲೋಕದಲ್ಲಿ "ಚತುರೋಮಾಸಾ ಉವಾಚ" ಎಂದು ಉಕ್ತವಾಗಿದೆ, ಚತುರೋಮಾಸಾ ಅಂದರೆ "ಚಾತುರ್ಮಾಸ್ಯ" ನಾಲ್ಕು ಪಕ್ಷಗಳಂತೆ ಭಾವಿಸಲ್ಪಡಬೇಕು. "ವರ್ಷಋತು" ಎಂದು ವ್ಯಾಖ್ಯಾನ ಮಾಡಲ್ಪಟ್ಟಿದೆ. ಆದುದರಿಂದ ನಾಲ್ಕು ಪಕ್ಷಗಳು ಒಂದು ಋತು

ಎನ್ನಿಸಿಕೊಳ್ಳುತ್ತದೆ. ವರ್ಷಋತು ಎಂದರೆ ಶ್ರಾವಣ ಮತ್ತು ಭಾದ್ರಪದ ಮಾಸಗಳು.

ಅಭಿಪ್ರಾಯ.—ವಾಲಿಯು ಶ್ರೀರಾಮರ ಅನುಗ್ರಹವನ್ನು ಪಡೆದು ಮೃತನಾದನಂತರ ಸುಗ್ರೀವನು ವಾಲಿಯ ಪುತ್ರನಾದ ಅಂಗದನನ್ನು ಮುಂದುಮಾಡಿಕೊಂಡು ಅವನ ಮುಖಾಂತರ ವಾಲಿಯ ಅಂತ್ಯ ಕರ್ಮಗಳನ್ನು ನೆರವೇರಿಸಿ ತಾನು ಕಪಿರಾಜ್ಯ ( ಕಿಷ್ಕಿಂಧಾಪಟ್ಟಣಕ್ಕೆ ) ರಾಜನಾದನು. ಅನಂತರ ಶ್ರೀರಾಮರು ವರ್ಷಕಾಲ ಬರುತ್ತಿರುವುದನ್ನು ಪರ್ಯಾಲೋಚಿಸಿ ತಮ್ಮನಾದ ಲಕ್ಷ್ಮಣರಿಂದ ಸಹಿತರಾಗಿ ಅಲ್ಲಿ ಶ್ರೇಷ್ಠರಾದ “ ಮಾಲ್ಯವತಿ ” ನಾಮಕ ಪರ್ವತದಲ್ಲಿ ವಾಸಮಾಡುತ್ತಿದ್ದರು.

**ಶ್ಲೋಕ || ಅಥಾತಿಸಕ್ತೇ ಕ್ಷಿತಿಪೇ ಕಪೀನಾಂ | ಪ್ರವಿಸ್ಮೃತೇ ರಾಮಕೃತೋ**
**ಪಕಾರೇ || ಪ್ರಸಹ್ಯ ತಂ ಬುದ್ಧಿಮತಾಂ ವರಿಷ್ಠೋ | ರಾಮಾಂಘ್ರಿಭ**
**ಕ್ತೋ ಹನುಮಾನುವಾಚ ||೨೪||**

ಅರ್ಥ.—ಅಥ=ಸುಗ್ರೀವನಿಗೆ ರಾಜ್ಯಪ್ರಾಪ್ತಿಯಾದನಂತರ, ಕಪೀನಾಂ=ವಾನರುಗಳಿಗೆ, ಕ್ಷಿತಿಪೇ=ರಾಜನಾದ ಸುಗ್ರೀವನು, ಅತಿಸಕ್ತೇ=ಸ್ತ್ರೀಸಂಭೋಗಾದಿಗಳಲ್ಲಿ ಅತ್ಯಂತ ಆಸಕ್ತಿಯುಳ್ಳವನಾಗಿ, ರಾಮಕೃತೋಪಕಾರೇ=ಶ್ರೀರಾಮರಿಂದ ಮಾಡಲ್ಪಟ್ಟ ಉಪಕಾರವನ್ನು, ಪ್ರವಿಸ್ಮೃತೇಸತಿ ಮರೆತಿರಲಾಗಿ, ರಾಮಾಂಘ್ರಿಭಕ್ತಃ=ಶ್ರೀರಾಮರ ಅಭಿನ್ನ ಭಕ್ತನಾದ, ಬುದ್ಧಿಮತಾಂ=ಬುದ್ಧಿವಂತರಲ್ಲಿ, ವರಿಷ್ಠಃ=ಶ್ರೇಷ್ಠನಾದ, ಹನುಮಾನ್-ಹನುಮಾನ್=ಹನುಮಂತನು, ತಂ=ಆ ಸುಗ್ರೀವನನ್ನು ಕುರಿತು, ಪ್ರಸಹ್ಯ-ನಿಂದಾಪೂರ್ವಕವಾಗಿ, ಉವಾಚ=ಮಾತನಾಡಿದನು.

ತಾತ್ಪರ್ಯ.—ಸುಗ್ರೀವನಿಗೆ ಶ್ರೀರಾಮರ ಅನುಗ್ರಹದಿಂದ ಕಿಷ್ಕಿಂಧರಾಜ್ಯಪ್ರಾಪ್ತಿಯಾದ ನಂತರ ಅವರಿಂದ ಅನುಗ್ರಹಿಸಲ್ಪಟ್ಟ ಉಪಕಾರವನ್ನು ಮರೆತು ಕಪಿರಾಜ್ಯಾಧಿಕಾರ ಮತ್ತು ವಿಷಯೇಚ್ಛೆಗಳಲ್ಲಿ ಅತ್ಯಾಸಕ್ತನಾದನು. ಹೀಗಿರಲು ಶ್ರೀರಾಮರ ಪರಮ ಭಕ್ತನಾದ ಜ್ಞಾನಿಗಳಲ್ಲಿ ಶ್ರೇಷ್ಠನಾದ ಶ್ರೀಹನುಮಂತನು ಸುಗ್ರೀವನನ್ನು ಕುರಿತು ಬಹಳವಾಗಿ ನಿಂದ್ಯಮಾಡಿ ಮುಂದೆ ಹೇಳುವ ಪ್ರಕಾರ ಮಾತನಾಡಿದನು.

ಶ್ಲೋಕ ॥ ಸವಿಸ್ಮೃತಿಸ್ತೇ ರಘುವರ್ಯಕಾರ್ಯೇ । ಕಾರ್ಯಾ ಕಥಂಚಿ ಕ್ಸಹಿನೋಽಭಿ ಪೂಜ್ಯಃ ॥ ನಚೇತ್ಸ್ವಯಂಕರ್ತುಮಭೀಷ್ಟಮದ್ಯತೇ ಧೃವಂ ಬಲೇನಾಪಿಹಿಕಾರಯಾಮಿ ॥೨೫॥

ಅರ್ಥ.—ರಘುವರ್ಯಕಾರ್ಯೆ=ರಘುಶ್ರೇಷ್ಠರಾದ ಶ್ರೀರಾಮರ ಸೀತಾಮಾರ್ಗಣ ಕಾರ್ಯದಲ್ಲಿ, ತೇ=ನಿನ್ನಿಂದ, ವಿಸ್ಮೃತಿಃ=ಮರುವು, ನ ಕಾರ್ಯಾ=ಕರ್ತವ್ಯವಲ್ಲವು. ಸಃ=ಶ್ರೀರಾಮರು, ನಃ-ನಮ್ಮಗಳಿಗೆ ಅಭಿಪೂಜ್ಯಃ-ಸಂಪೂರ್ಣ ಪೂಜ್ಯರು, ಹಿ-ಆದ್ದರಿಂದ, ಅದ್ಯ=ಪ್ರಕೃತದಲ್ಲಿ, ಸ್ವಯಂ=ಸ್ವತಃ, ಕರ್ತುಂ=ಶ್ರೀರಾಮರ ಕಾರ್ಯವನ್ನು ಮಾಡುವುದಕ್ಕೆ ಅಭೀಷ್ಟಂ=ಅಭಿಪ್ರಾಯವು, ತೇ=ನಿನಗೆ, ನಚೇತ್=ಇಲ್ಲದಿರುವ ಪಕ್ಷದಲ್ಲಿ, ಕಥಂಚಿತ್=ಹೇಗಾದರೂ ಮಾಡಿ, ತೇ=ನಿನ್ನಿಂದ, ಬಲೇನಾಪಿ=ಬಲಾತ್ಕಾರದಿಂದಲಾದರೂ, ಧೃವಂ=ನಿಶ್ಚಯವಾಗಿ, ಕಾರಯಾಮಿಹಿ=ಮಾಡಿಸಿಯೇ ಮಾಡಿಸುತ್ತೇನೆ. ಇತಿ=ಹೀಗೆಂದು, ಹನುಮಾನ್=ಹನುಮಂತರು, ಉವಾಚ=ಹೇಳಿದರು.

ತಾತ್ಪರ್ಯ.—ಹನುಮಂತರು ಸುಗ್ರೀವನನ್ನು ಕುರಿತು ಈ ರೀತಿ ಹೇಳುತ್ತಾರೆ.—'ಶ್ರೀರಾಮರು ನಮ್ಮಗಳಿಗೆ ಪೂಜ್ಯರು, ಅವರ ಕಾರ್ಯದ ವಿಷಯದಲ್ಲಿ ನಿನಗೆ ವಿಸ್ಮೃತಿ ಉಂಟಾಗಬಾರದು, ಈಗಲೂ ಅವರ ಕಾರ್ಯವನ್ನು ನೆರವೇರಿಸುವುದಕ್ಕೆ ನಿನಗೆ ಸ್ವತಃ ಇಷ್ಟವಿಲ್ಲದಿದ್ದ ಪಕ್ಷದಲ್ಲಿ ನಾನು ನಿನ್ನಿಂದಲೇ ಬಲೋದ್ಬಂದದಿಂದ ಖಂಡಿತವಾಗಿಯೂ ಮಾಡಿಸುತ್ತೇನೆ

ಶ್ಲೋಕ ॥ ಸಏವಮುಕ್ತ್ವಾ ಹರಿರಾಜ ಸನ್ನಿಧೌ । ದ್ವೀಪೇಷು ಸಪ್ತಸ್ವಪಿ ವಾನರಾನ್ಪ್ರತಿ ॥ ಸಂಮೇಲನಾಯಾ ಶುಗತೀನ್ ಸ್ಥಿವಾನರಾನ್ । ಪ್ರಸ್ಥಾಪಯಾಮಾಸ ಸಮಸ್ತಶಃ ಪ್ರಭುಃ ॥೨೬॥

ಅರ್ಥ.—ಸಃ-ಹನುಮಂತನು, ಹರಿರಾಜಸನ್ನಿಧೌ=ಕಪಿರಾಜನಾದ ಸುಗ್ರೀವನ ಸಮೀಪದಲ್ಲಿ, ಏವಂ=ಪೂರ್ವೋಕ್ತಪ್ರಕಾರವಾಗಿ, ಉಕ್ತ್ವಾ ಹೇಳಿ, ಸಮಸ್ತಶಃ-ಸರ್ವರಿಗೂ, ಪ್ರಭುಃ=ಸ್ವಾಮಿಯಾದ್ದರಿಂದಲೇನೇ, ಹನುಮಂತನು, ಸಪ್ತಸುದ್ವೀಪೇಷ್ವಪಿ=ಜಂಬು ಪ್ಲಕ್ಷಾದಿ ಸಪ್ತದ್ವೀಪಗಳಲ್ಲಿಯೂ, ಸ್ಥಿತಾನ್=ಇರತಕ್ಕ, ವಾನರಾನ್=ಕಪಿಗಳನ್ನು, ಪ್ರತಿ ಸಮ್ಮೇಳ

ನಾಯ-ಒಟ್ಟುಗೂಡಿಸುವದಕ್ಕೋಸ್ಕರ, ಆಶುಗತೀ೯-ಶೀಘ್ರಗಾಮಿಗಳಾದ ವಾನರಾ೯=ಸನ್ನಿಧಾನದಲ್ಲಿದ್ಧ ಕಪಿಗಳನ್ನು, ಪ್ರಸ್ಥಾಪಯಾಮಾಸಸ್ಮ=ಕಳುಹಿಸಿದರು.

ತಾತ್ಪರ್ಯ.—ಹನುಮಂತನು ಸುಗ್ರೀವನ ಸಮೀಪದಲ್ಲಿ ಪೂರ್ವೋಕ್ತಪ್ರಕಾರ ಮಾತನಾಡಿ ಸರ್ವರಿಗೂ ತಾವು ಪ್ರಭುವಾದ್ದರಿಂದ ಸುಗ್ರೀವನ ಸಮೀಪಸ್ಥರಾಗಿದ್ದ ಸಮಸ್ತರಾದ ವಾನರುಗಳನ್ನು ಕರೆದು ಜಂಬೂದ್ವೀಪಾದಿ ಸಮಸ್ತ ದ್ವೀಪಗಳಲ್ಲಿರತಕ್ಕ ಸಮಸ್ತ ಕಪಿಗಳನ್ನೂ ಅನ್ವೇಷಣಮಾಡಿ ಕರೆದುಕೊಂಡು ಬಂದು ಶೇರಿಸಬೇಕೆಂದು ಹೇಳಿ ಶೀಘ್ರಗಾಮಿಗಳಾದ ಕಪಿಗಳನ್ನು ಕಳುಹಿಸಿದರು.

ವಿಶೇಷವಿಷಯ.—ಕಪಿಗಳಿಗೆ ಆಜ್ಞೆಮಾಡಿ ಕಳುಹಿಸುವದಕ್ಕೆ ಕಪಿರಾಜನಾದ ಸುಗ್ರೀವನಿರುತ್ತಿರುವಾಗ ಹನುಮಂತನಿಗೆ ಹೇಗೆ ಅಧಿಕಾರವೆಂದರೆ, ಹನುಮಂತರು ಮೂಲರೂಪತಃ ವಾಯುವಿನವತಾರಭೂತರಾದ್ದರಿಂದವರು ಸಮಸ್ತರಿಗೂ ಪ್ರಭುಗಳು. ಸುಗ್ರೀವನು ಸೂರ್ಯ ಪುತ್ರನಾದ್ಧರಿಂದ ವಾಯುದೇವರಿಗಿಂತಲೂ ಅವರನ್ನು ರಾಮಕಾರ್ಯವನ್ನು ನೀನು ಕೈಗೊಳ್ಳದೆ ಇದ್ದಲ್ಲಿ ಬಲೋದ್ಬಂಧದಿಂದ ಮಾಡಿಸುತ್ತೇನೆಂದು ಹೇಳಿದ್ಧ ಪ್ರಕಾರ ತಾವೇ ಸ್ವತಃ ಕಪಿಗಳಿಗೆ ಆಜ್ಞೆಯನ್ನು ಮಾಡಿ ಸರ್ವತ್ರ ಇರತಕ್ಕ ಸರ್ವ ಕಪಿಗಳನ್ನೂ ಸಮ್ಮೇಳನ ಮಾಡುವಂತೆ ಮಾಡಿ ಶೀಘ್ರವಾದ ಗಮನವುಳ್ಳ ಸುಗ್ರೀವನ ಸಮೀಪದಲ್ಲಿರತಕ್ಕ ಕಪಿಗಳನ್ನು ಕಳುಹಿಸಿದರೆಂದು ತಾತ್ಪರ್ಯವು. ಮತ್ತು ೧. ಏತೇನ ಹನುಮಂತರು ಹೀಗೆ ಸರ್ವ ಕಪಿಗಳಿಗೂ ದ್ವೀಪಾಂತರಗಳಲ್ಲಿರತಕ್ಕ ವಾನರುಗಳನ್ನು ಬರಮಾಡಬೇಕೆಂದು ಆಜ್ಞೆಮಾಡಿದ್ದರಿಂದ ತಾರಾ ಮೊದಲಾದ ವಾನರರಿಗಿಂತಲೂ ಅಸಮರ್ಥರಾದ ವಿನತಾದಿ ಕಪಿಗಳಿಗೆ ಲವಣಾದಿ ಸಪ್ತ ಸಮುದ್ರಗಳನ್ನೂ ದಾಟುವುದರಲ್ಲಿ ಶಕ್ತಿ ಉಂಟೆಂದು ಹೇಳಲ್ಪಟ್ಟಿತು. ೨. ಶತಯೋಜನ ವಿಸ್ತಾರವುಳ್ಳ ಲವಣಸಮುದ್ರದಲ್ಲಿ ಏಕದೇಶವನ್ನು ದಾಟುವುದಕ್ಕೂ ತಾರಾದಿ ಕಪಿಗಳು ಸಮರ್ಥರಲ್ಲವೆಂದ್ಹೇಳಲ್ಪಡುತ್ತದೆ. ಇವೆರಡಕ್ಕೂ ವಿರೋಧಾರ್ಥವಾಗುತ್ತದೆಂದು ಭಾವಿಸಬಾರದು. ಏತಕ್ಕೆಂದರೆ.—ಉತ್ತರೋತ್ತರ ಆಗಬೇಕಾದ ಕಾರ್ಯ ಗೌರವಕ್ಕೋಸ್ಕರ ವಿನತಾದಿ ಕಪಿಗಳಿಗೆ ತಾದೃಶ್ಯವಾದ ಸಮುದ್ರ ತರಣಶಕ್ತಿಯು

ಸಾಕ್ಷಾತ್ ಶ್ರೀರಾಮರಿಂದ ಕೊಡಲ್ಪಟ್ಟಿತು- ತಾರಾದಿ ಕಪಿಗಳಿಗಾದರೋ ಹನುಮಂತರ ಬಲ ಪ್ರಕಾಶ ಮಾಡುವುದಕ್ಕಾಗಿ ಶಕ್ತಿಯು ರಾಮರಿಂದ ಕೊಡಲ್ಪಡಲಿಲ್ಲವೆಂದು ತಿಳಿಯತಕ್ಕದ್ದು, ಇದೇ ಅರ್ಥವೇ ಸ್ಕಾಂಧಪುರಾಣ ದಲ್ಲಿ ಹೇಳಲ್ಪಟ್ಟಿದೆ.

**ಶ್ಲೋಕ ॥ ಹರೀಶ್ವರಾಜ್ಞಾ ಪ್ರಣಿಧಾನ ಪೂರ್ವಕಂ ಹನೂಮತಾ ತೇ ಪ್ರಹಿ ತಾಹಿ ವಾನರಾಃ । ಸಮಸ್ತ ಶೈಲದ್ರುಮ ಖಂಡಸಂಸ್ಥಿತಾನ್ ಹರೀನ್ ಸಮಾದಾಯ ತದಾಭಿಜಗ್ಮುಃ ॥೨೭॥**

ಅರ್ಥ.—ಹನೂಮತಾ-ಹನುಮಂತದೇವರಿಂದ, ಪ್ರಹಿತಾಃ=ಪ್ರೇರಿತರಾದ, ತೇ=ವಿನತಾದಿ ವಾನರರು, ಹರೀಶ್ವರಾಜ್ಞಾ ಪ್ರಣಿಧಾನಪೂರ್ವಕಂ=ಸುಗ್ರೀವನ, ಆಜ್ಞಾ=ಅಪ್ಪಣೆಯಿಂದ, ಪ್ರಣಿಧಾನಪೂರ್ವಕಂ=ಅಂಗೀಕಾರಪೂರ್ವಕವಾಗಿ ಹೊರಟು, ಸಮಸ್ತ ಶೈಲದ್ರುಮಖಂಡಸಂಸ್ಥಿತಾನ್-ಸಮಸ್ತ-ಸಮಸ್ತವಾದ, ಶೈಲ=ಪರ್ವತಗಳಲ್ಲಿ, ದ್ರುಮಖಂಡ-ವೃಕ್ಷಸಮೂಹವುಳ್ಳ ಖಂಡಗಳಲ್ಲಿ, ಸಂಸ್ಥಿತಾನ್=ವಸತಿಮಾಡಿಕೊಂಡಿದ್ದ, ಹರೀನ್=ವಾನರುಗಳನ್ನು, ಸಮಾದಾಯ=ಕರೆದುಕೊಂಡು, ತದಾ=ಸುಗ್ರೀವನ ರಾಜಧಾನಿಯನ್ನು ಕುರಿತು, ಅಭಿಜಗ್ಮುಃ-ಬಂದರು, ಹಿ=ಪ್ರಸಿದ್ಧವು.

ತಾತ್ಪರ್ಯ.—ಸಮಸ್ತರಾದ ಕಪಿಗಳ ಸಮ್ಮೇಳನಾರ್ಥವಾಗಿ ಹನುಮಂತರಿಂದ ಕಳುಹಿಸಲ್ಪಟ್ಟ ವಿನತಾದಿಕಪಿಗಳು ಕಪಿರಾಜನಾದ ಸುಗ್ರೀವನಾಜ್ಞೆಯಿಂದ ಅಂಗೀಕಾರ ಪೂರ್ವಕವಾಗಿ ಹೊರಟು ಸಮಸ್ತವಾದ ದ್ವೀಪಗಳು, ಪರ್ವತಗಳು ವೃಕ್ಷಗಳ ಸಮೂಹವುಳ್ಳ (ತೋಪು) ವನಗಳು ಮೊದಲಾದ ಸ್ಥಳಗಳಲ್ಲಿ ವಸತಿಮಾಡಿಕೊಂಡು ಇರತಕ್ಕ ಸಮಸ್ತ ಕಪಿಗಳನ್ನು ಕರೆದುಕೊಂಡು ತಮ್ಮ ದೊರೆಯಾದ ಸುಗ್ರೀವನ ರಾಜಧಾನಿಯಾದ ಕಿಷ್ಕಿಂಧಾಪಟ್ಟಣಕ್ಕೆ ಬಂದು ಸೇರಿದರು.

**ಶ್ಲೋಕ ॥ ತದೈವರಾಮೋಽಪಿಹಿ ಭೋಗಸಕ್ತಂ । ಪ್ರಮತ್ತ ಮಾಲಕ್ಷ್ಯ ಕಪೀಶ್ವರಂ ಪ್ರಭುಃ ॥ ಜಗಾದಸೌಮಿತ್ರಿಮಿದಂ ವಚೋಽಮೇ ಪ್ಲವಂಗಮೇಶಾಯವದಾಶುಯಾಹಿ ॥೨೮॥**

ಅರ್ಥ.—ತದ್ಗೈವ=ದ್ವೀಪ ದ್ವೀಪಾಂತರಗಳಲ್ಲಿದ್ದ ಸಮಸ್ತ ಕಪಿಗಳೂ ಬಂದಾಗಲೂ ಕೂಡ, ಭೋಗಸಕ್ತಂ=ವಿಷಯಭೋಗಾಸಕ್ತಿವುಳ್ಳ, ಕಪೀಶ್ವರಂ=ಕಪಿರಾಜನಾದ ಸುಗ್ರೀವನನ್ನು, ಪ್ರಮತ್ತ=ತನ್ನ ಕಾರ್ಯದಲ್ಲಿ ಉನ್ಮತ್ತನಾಗಿರುವದನ್ನು, ಅಲಕ್ಷ್ಯ-ನೋಡಿ, ಪ್ರಭುಃ-ಸರ್ವೇಶ್ವರರಾದ, ರಾಮೋಪಿ=ಶ್ರೀರಾಮರೂ ಸಹ, ಸೌಮಿತ್ರಿಂಪ್ರತಿ – ಸುಮಿತ್ರಾ ಪುತ್ರನಾದ ಲಕ್ಷ್ಮಣರನ್ನು ಕುರಿತು, ಪ್ಲವಂಗಮೇಶಾಯ=ವಾನರ ರಾಜನಾದ ಸುಗ್ರೀವನಿಗೆ, ಮೇ=ನನ್ನ, ಇದಂ=ಈ, ವಚಃ=ಮಾತನ್ನು, ವದ=ಹೇಳು, ಅಪಿ –ಮತ್ತು, ಆಶು=ಶೀಘ್ರವಾಗಿ, ಯಾಹಿ=ನನ್ನ ಬಳಿಗೆ ಬಾ, ಇತಿ=ಹೀಗೆಂದು, ಅಸೌ=ಶ್ರೀರಾಮರು, ಜಗಾದ-ಹೇಳಿದರು.

ತಾತ್ಪರ್ಯ.—ಎಲ್ಲಾ ದ್ವೀಪ ದ್ವೀಪಾಂತರ ಪರ್ವತ ವನಗಳಲ್ಲಿದ್ದ ಕಪಿಗಳೂ ಬಂದಾಗ್ಯೂ ಸುಗ್ರೀವನು ವಿಷಯ ಭೋಗಾಸಕ್ತನಾಗಿ ತಮ್ಮ ಕಾರ್ಯದಲ್ಲಿ ಉನ್ಮತ್ತನಾಗಿರುವದನ್ನು ನೋಡಿ ಶ್ರೀರಾಮರು ಲಕ್ಷ್ಮಣರನ್ನು ಕರೆದು ನಾನು ಹೇಳುವ ಮಾತನ್ನು ಸುಗ್ರೀವನಿಗೆ ಹೇಳಿ ಜಾಗ್ರತೆಯಾಗಿ ಹೊರಟು ಬಾ ಎಂದು ಹೇಳಿದರು.

ಅವತಾರಿಕೆ.—" ಮೇ ಇದಂ ವಚನಂ ' ಏನನ್ನು ಹೇಳಿದರೆಂಬುದನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ.

**ಶ್ಲೋಕ ॥ ಯದಿ ಪ್ರಮತ್ತೋಽಪಿಮದೀಯಕಾರ್ಯೇ ನಯಾಮ್ಯಹಂ ತ್ವೇಂ**
**ದ್ರಸುತಸ್ಯ ಮಾರ್ಗಂ ॥ ಪ್ರಾಯಃ ಸ್ವಕಾರ್ಯೇ ಪ್ರತಿಪಾದಿತೇಹಿ।**
**ಮದೋದ್ಧತಾನಪ್ರತಿಕರ್ತುಮೀಶತೇ ॥೨೯॥**

ಅರ್ಥ.—ಮದೀಯಕಾರ್ಯೇ-ನನ್ನ ಕಾರ್ಯದಲ್ಲಿ, ತ್ವಂ=ನೀನು, ಪ್ರಮತ್ತೋಽಪಿಯದಿ=ಅಜಾಗ್ರತನಾದರೆ, ಅಹಂ=ನಾನು, ತ್ವಾಂ=ನಿನ್ನನ್ನು, ಇಂದ್ರಸುತಸ್ಯ=ಇಂದ್ರ ಪುತ್ರನಾದ ವಾಲಿಯ, ಮಾರ್ಗಂ=ಗತಿಯನ್ನು, ನಯಾಮಿ-ಹೊಂದಿಸುತ್ತೇನೆ. ಪ್ರಾಯಃ=ಬಹುತರವಾಗಿ, ಮದೋದ್ಧತಾಃ=ಮದೋನ್ಮತ್ತರಾದವರು, ಸ್ವಕಾರ್ಯೇ=ತಮ್ಮ ಕಾರ್ಯವು, ಪ್ರತಿ

ಪಾದಿತೇಸತಿ-ಆದನಂತರ, ಪ್ರತಿಕರ್ತುಂ=ಪ್ರತ್ಯುಪಕಾರಮಾಡಲು, ನಈ ಕತೇ=ಅಪೇಕ್ಷಿಸುವುದಿಲ್ಲ, ಹಿ=ಹೀಗೆ ಪ್ರಪಂಚದಲ್ಲಿ ಕಂಡುಬಂದಿದೆ.

ತಾತ್ಪರ್ಯ.—ಶ್ರೀರಾಮರು ಸುಗ್ರೀವನಿಗೆ ಲಕ್ಷ್ಮಣರ ಮೂಲಕ ಏನು ಹೇಳಕಳುಹಿಸಿದರೆಂದರೆ—ಹೇ ! ಸುಗ್ರೀವನೇ ನೀನು ರಾಜ್ಯವಿಷಯ ಭೋಗಾಸಕ್ತನಾಗಿ ನನ್ನ ಕಾರ್ಯದಲ್ಲಿ ಪ್ರಮಾದಯುಕ್ತನಾದದ್ದೇ ಆದರೆ ನಿನ್ನನ್ನು ಈಗಲೇ ವಾಲಿಯ ಮಾರ್ಗವನ್ನು ಹೊಂದಿಸುತ್ತೇನೆ. ಪ್ರಪಂಚದಲ್ಲಿ ಮದೋನ್ಮತ್ತರಾದವರು ತಮ್ಮ ಕಾರ್ಯ ಕೈಗೂಡಿತೂ ಆಂದರೆ ಪ್ರತ್ಯುಪಕಾರಮಾಡಲು ಎಂದಿಗೂ ಅಪೇಕ್ಷಿಸುವದಿಲ್ಲ, ಇದು ಪ್ರಪಂಚದಲ್ಲಿ ಪ್ರಸಿದ್ಧವಾಗಿದೆ.

ಶ್ಲೋಕ || ಇತೀಡ್ಯರಾಮೇಣ ಸಮೀರಿತೇತದಾ | ಯಯೌ ಸಬಾಣಃ ಸಧನುಃ ಸಲಕ್ಷ್ಮಣಃ || ದೃಷ್ಟ್ವೈವ ತಂತೇನ ಸಹೈವ ತಾಪನಿ | ರ್ಭಯಾದ್ಯಯೌ ರಾಮುಪದಾಂತಿಕಂ ತ್ವರನ್ ||೩೦||

ಅರ್ಥ.—ಇತಿ=ಈ ಪ್ರಕಾರವಾಗಿ, ಈಡ್ಯರಾಮೇಣ=ಈಡ್ಯ=ಪೂಜ್ಯರಾದ, ರಾಮೇಣ=ಶ್ರೀರಾಮರಿಂದ, ಸಮೀರಿತೇ = ಹೇಳಲ್ಪಡುತ್ತಿರಲಾಗಿ, ಸಃ=ಆ, ಲಕ್ಷ್ಮಣಃ=ಲಕ್ಷ್ಮಣರು, ಸಬಾಣಃ-ಬಾಣದಿಂದಲೂ, ಸಧನುಃ -ಧನುಸ್ಸಿನಿಂದಲೂ ಸಹಿತನಾಗಿ, ತದಾ=ಸುಗ್ರೀವನ ಸಮೀಪವನ್ನು ಕುರಿತು, ಯಯೌ-ಬಂದರು, ತಾಪನೀ=ತಪನಸ್ಯಾ ಅಯಂ-ತಾಪನಿಃ=ಸೂರ್ಯಪುತ್ರನಾದ ಸುಗ್ರೀವನು, ತಂ=ಬಂದಂಥ ಲಕ್ಷ್ಮಣರನ್ನು, ದೃಷ್ಟ್ವೈವ=ನೋಡಿದ ತಕ್ಷಣವೇ, ಭಯಾತ್=ಭಯದಿಂದ, ತ್ವರನ್ ಸನ್=ತ್ವರ್ಯನಾದವನಾಗಿ, ತೇನಸಹ=ಲಕ್ಷ್ಮಣರಿಂದ ಒಡಗೂಡಿ, ರಾಮಪದಾಂತಿಕಂ ಪ್ರತಿ=ರಾಮರ ಪಾದ ಸಮೀಪವನ್ನು, ಯಯೌ=ಹೊಂದಿದನು.

ತಾತ್ಪರ್ಯ.—ರಾಮರ ವಾಕ್ಯವನ್ನು ಕೇಳಿ ಲಕ್ಷ್ಮಣರು ಧನುರ್ಬಾಣಗಳಿಂದ ಸಹಿತರಾಗಿ ಸುಗ್ರೀವನ ಪಟ್ಟಣವನ್ನು ಕುರಿತು ಬಂದರು. ಆ ಸುಗ್ರೀವನು ತಾಪನಿಃ=ತಪನಃ=ಸೂರ್ಯಃ ತಪನಸ್ಯ ಅಯಂ=ತಾಪನಿಃ= ಸುಗ್ರೀವಃ ಎಂದು ಸಮಾಸ. ಬಂದ ಈ ಲಕ್ಷ್ಮಣರನ್ನು ನೋಡಿ ಒಡನೆಯೇ ಭಯಪಟ್ಟು ಲಕ್ಷ್ಮಣರಿಂದ ಸಹಿತನಾಗಿ ಬಹು ಜಾಗ್ರತೆಯಿಂದ ಶ್ರೀರಾಮರ ಪಾದಗಳ ಸಮೀಪವನ್ನು ಕುರಿತು ಹೋದನು.

ಶ್ಲೋಕ || ಹನೂಮತಃ ಸಾಧು ವಚೋಭಿರಾಶು | ಪ್ರಸನ್ನ ಚೇತಸ್ಯಧಿಪೇ ಕಪೀನಾಂ | ಸಮಾಗತೇ ಸರ್ವಹರಿಪ್ರವೀರೈಃ | ಸಹೈವತಂವೀಕ್ಷ್ಯ ನನಂದ ರಾಘವಃ ||೩೧||

ಅರ್ಥ.—ಹನೂಮತಃ=ಹನುಮಂತರ, ಸಾಧುವಚೋಭಿಃ=ಶಿಕ್ಷಾರೂಪವಾದ ವಾಕ್ಯಗಳಿಂದ, ಪ್ರಸನ್ನಚೇತಸಿ=ಪ್ರಸನ್ನವಾದ ಮನಸ್ಸುಳ್ಳ ಕಪೀನಾಂ=ಕಪಿಗಳಿಗೆ ರಾಜನಾದ ಸುಗ್ರೀವನು, ಆಶು - ತಕ್ಷಣದಲ್ಲಿಯೇ, ಸರ್ವಹರಿಪ್ರವೀರೈಃ=ಸಮಸ್ತರಾದ ಕಪಿಶ್ರೇಷ್ಠರಿಂದ, ಸಹೈವ=ಸಹಿತನಾಗಿ ಸಮಾಗತೇಸತಿ=ಬರುತ್ತಿರಲಾಗಿ, ರಾಘವಃ-ಶ್ರೀರಾಮದೇವರು, ತಂ=ಆ ಸುಗ್ರೀವನನ್ನು, ವೀಕ್ಷ್ಯ-ನೋಡಿ, ನನಂದ=ಸಂತೋಷಪಟ್ಟರು.

ತಾತ್ಪರ್ಯ.—ರಾಜ್ಯ ವಿಷಯಾಸಕ್ತನಾಗಿದ್ದ ಸುಗ್ರೀವನಿಗೆ ಬುದ್ಧಿವಾದರೂಪವಾದ ವಾಕ್ಯವನ್ನು ಹನುಮಂತರು ಹೇಳಿದರು. ಅದರಿಂದ ಪ್ರಸನ್ನವಾದ ಮನಸ್ಸುಳ್ಳವನಾಗಿ ಸುಗ್ರೀವನು ಬಹು ಜಾಗ್ರತೆಯಾಗಿ ಸಮಸ್ತರಾದ ಕಪಿಶ್ರೇಷ್ಠರಿಂದ ಸಹಿತನಾಗಿ ರಾಮರ ಪಾದಗಳನ್ನು ಕುರಿತು ಬಂದನು. ನಂತರ ಶ್ರೀರಾಮರು ಭಕ್ತಿಯುಕ್ತನಾಗಿ ಬಂದ ಈ ಸುಗ್ರೀವನನ್ನು ನೋಡಿ ಸಂತೋಷಪಟ್ಟರು.

ಶ್ಲೋಕ || ಸಸಂಭ್ರಮಂತಂ ಪತಿತಂ ಪದಾಬ್ಜಯೋಃ | ತ್ವರನ್ ಸಮುತ್ಥಾಪ್ಯ ಸಮಾಶ್ಲಿಷತ್ಪ್ರಭುಃ || ಸಚೋಪವಿಷ್ಟೋ ಜಗದೀಶ ಸನ್ನಿಧೌ | ತದಾಜ್ಞಯೈವಾದಿಶದಾಶುವಾನರಾನ್ ||೩೨||

ಅರ್ಥ.—ಪ್ರಭುಃ=ಪ್ರಭುಗಳಾದ ಶ್ರೀರಾಮರು, ಪದಾಬ್ಜಯೋಃ=ಪಾದಕಮಲಗಳಲ್ಲಿ, ಪತಿತಂ=ಬಿದ್ದಂಥ, ತಂ-ಸುಗ್ರೀವನನ್ನು, ಸಸಂಭ್ರಮಂ=ಸಂತೋಷದಿಂದ ಸಹಿತರಾಗಿ, ತ್ವರನ್=ಶೀಘ್ರವಾಗಿ, ಸಮುತ್ಥಾಪ್ಯ=ಎತ್ತಿ, ಸಮಾಶ್ಲಿಷತ್=ಆಲಿಂಗನ ಮಾಡಿದರು. ಸಚ-ಆ ಸುಗ್ರೀವನಾದರೋ, ತದಾಜ್ಞಯಾ-ಶ್ರೀರಾಮರ ಆಜ್ಞೆಯಿಂದ, ಜಗದೀಶಸನ್ನಿಧೌ=ಜಗತ್ಪ್ರಭುವಾದ ಶ್ರೀರಾಮರ ಸಮ್ಮುಖದಲ್ಲಿ, ಉಪವಿಷ್ಟಃಸನ್=ಕೂತುಕೊಂಡವನಾಗಿ, ತದಾಜ್ಞಯೈವ=ಶ್ರೀರಾಮರ ಆಜ್ಞಾಪ್ರಕಾರದಿಂದಲೇನೇ, ಆಶು=

ಶೀಘ್ರವಾಗಿ, ವಾನರಾನ್‌ಪ್ರತಿ=ಕಪಿಗಳನ್ನು ಕುರಿತು, ಆದಿಶತ್=ಸೀತಾನ್ವೇಷಣಕ್ಕಾಗಿ ಆಜ್ಞಾಪಿಸಿದನು.

ತಾತ್ಪರ್ಯ.—ಸುಗ್ರೀವನು ರಾಮರ ಬಳಿಗೆ ಬಂದು ಅವರ ಪಾದಗಳಲ್ಲಿ ಬಿದ್ದನು. ಶ್ರೀರಾಮರು ಪಾದಗಳ ಮೇಲೆ ಬಿದ್ದಿದ್ದ ಸುಗ್ರೀವನನ್ನು ಬಹಳ ಸಂತೋಷದಿಂದ ಮೇಲಕ್ಕೆ ಎಬ್ಬಿಸಿ ಆಲಿಂಗನ ಮಾಡಿದರು. ಅನಂತರ ಜಗತ್ಪ್ರಭುಗಳಾದ ಶ್ರೀರಾಮರ ಆಜ್ಞೆಯಿಂದ ಅವರ ಸನ್ನಿಧಾನದಲ್ಲಿ ಕೂತು ಅಲ್ಲಿದ್ದ ಸಮಸ್ತ ಕಪಿಗಳಿಗೂ ಕೂಡಲೇ ಶೀತಾನ್ವೇಷಣ ಮಾಡಿಕೊಂಡು ಬರುವದಾಗಿ ಆಜ್ಞಾಪಿಸಿದನು.

ಶ್ಲೋಕ ॥ ಸಮಸ್ತದಿಕ್ಷು ಪ್ರಹಿತೇಷು ತೇನ ಪ್ರಭುರ್ಹನೂಮಂತ ಮಿದಂಬಭಾಷೇ । ನಕಶ್ಚಿದೀಶಸ್ತ್ವದೃತೇಽಸ್ತಿ ಸಾಧನೇ । ಸಮಸ್ತಕಾರ್ಯಪ್ರವರಸ್ಯಮೇಽಸ್ಯ ॥೩೩॥

ಅರ್ಥ.—ತೇನ=ಆ ಸುಗ್ರೀವನಿಂದ, ವಾನರೇಷು=ಕಪಿಗಳು, ಸಮಸ್ತದಿಕ್ಷು=ಸಮಸ್ತ ದಿಕ್ಕುಗಳಿಗೂ, ಪ್ರಹಿತೇಷುಸತ್ಸು=ಸೀತಾನ್ವೇಷಣಾರ್ಥವಾಗಿ ಕಳುಹಿಸಲ್ಪಡುತ್ತಿರಲಾಗಿ, ಪ್ರಭುಃ-ಶ್ರೀರಾಮರು, ಹನುಮಂತಂಪ್ರತಿ=ಹನುಮಂತರನ್ನು ಕುರಿತು, ಮೇ=ನನಗೆ, ಸಮಸ್ತ ಕಾರ್ಯಪ್ರವರಸ್ಯ-ಸಮಸ್ತಕಾರ್ಯ=ಎಲ್ಲಾ ಕಾರ್ಯಗಳಲ್ಲಿಯೂ, ಪ್ರವರಸ್ಯ-ಶ್ರೇಷ್ಟವಾದ ಅಸ್ಯ=ಸೀತಾನ್ವೇಷಣ ರೂಪವಾದ ಈ ಕಾರ್ಯವನ್ನು, ಸಾಧನೇ=ಸಾಧನ ಮಾಡತಕ್ಕ ವಿಷಯದಲ್ಲಿ, ತ್ವದೃತೇ=ನಿನ್ನ ಹೊರತು, ಈಶಃ=ಸಮರ್ಥರಾದವರು, ಕಶ್ಚಿದಪಿ=ಯಾವ ಪುರುಷನೂ, ನಾಸ್ತಿ=ಇಲ್ಲವು, ಇದಂ=ಈ ಪ್ರಕಾರವಾಗಿ, ಬಭಾಷೇ=ಮಾತನಾಡಿದರು.

ತಾತ್ಪರ್ಯ.—ಸುಗ್ರೀವನು ರಾಮರ ಅಪ್ಪಣೆಯಿಂದ ಸಮಸ್ತ ಕಪಿಗಳನ್ನೂ ಸೀತಾನ್ವೇಷಣಾರ್ಥವಾಗಿ ದಿಕ್ಕು ದಿಕ್ಕುಗಳಿಗೂ ಕಳುಹಿಸಿಕೊಟ್ಟನಂತರ, ಪ್ರಭುಗಳಾದ ಶ್ರೀರಾಮರು ಹನುಮಂತನನ್ನು ಕುರಿತು ಸಮಸ್ತ ಕಾರ್ಯಗಳಿಗಿಂತಲೂ ನನಗೆ ಹೆಚ್ಚು ಶ್ರೇಷ್ಟವಾದ ಸೀತಾಮಾರ್ಗಣ ಕಾರ್ಯವನ್ನು ಸಾಧನಮಾಡುವ ವಿಷಯದಲ್ಲಿ ನಿನಗಿಂತಲೂ ಸಮರ್ಥರಾದವರು ಬೇರೆ ಯಾರೂ ಇಲ್ಲವು, ಎಂದು ಹೇಳಿದರು.

**ಶ್ಲೋ॥ ಅತಸ್ತ್ವಮೇವ ಪ್ರತಿಯಾಹಿ ದಕ್ಷಿಣಾಂ ದಿಶಂ ಸಮಾದಾಯಮುದಂ ಗುಲೀಯಕಂ। ಇತೀರಿತೋಽಸೌ ಪುರುಷೋತ್ತಮೇನಮಯೌ ದಿಶಂ ತಾಂ ಯುವರಾಜ ಯುಕ್ತಃ ॥೩೪॥**

ಅರ್ಥ.—ಅತಃ=ಹೀಗಿರುವದರಿಂದ, ತ್ವಮೇವ=ನೀನೇ, ಮುದಂಗುಲೀಯಕಂ=ನನ್ನ ಮುದ್ರೆ ಉಂಗುರವನ್ನು, ಸಮಾದಾಯ - ತೆಗೆದುಕೊಂಡು, ದಕ್ಷಿಣಾಂದಿಶಂಪ್ರತಿ=ದಕ್ಷಿಣದಿಕ್ಕನ್ನು ಕುರಿತು, ಯಾಹಿ-ಹೋಗು, ಇತಿ - ಹೀಗೆಂದು, ಪುರುಷೋತ್ತಮೇನ=ಪುರುಷ ಶ್ರೇಷ್ಠಗಾದ ಶ್ರೀರಾಮರಿಂದ, ಈರಿತಃ=ಹೇಳಲ್ಪಟ್ಟ, ಅಸೌ=ಹನುಮಂತರು, ಯುವರಾಜಯುಕ್ತಃಸರ್-ಯುವರಾಜನಾದ ಅಂಗದನಿಂದ ಸಹಿತನಾಗಿ, ತಾಂದಿಶಂ=ಆ ದಕ್ಷಿಣ ದಿಕ್ಕನ್ನು ಕುರಿತು, ಯಯೌ=ಹೊರಟು ಹೋದರು.

**ಶ್ಲೋ॥ ಸಮಸ್ತ ದಿಕ್ಷು ಪ್ರತಿಯಾಪಿತಾಹಿತೇ ಕಪೀಶ್ವರಾಜ್ಞಾ ಮುಪಧಾರ್ಯ ಮಾಸತಃ। ಸಮಾಯಯುಸ್ತೇಂಗದ ಜಾಂಬವನ್ಮುಖಾಃ। ಸುತೇನ ವಾಯೋಃ ಸಹಿತಾನಚಾಯಯುಃ ॥೩೫॥**

ಅರ್ಥ:—ಸಮಸ್ತದಿಕ್ಷುಃ-ಸಮಸ್ತ ದಿಕ್ಕುಗಳಿಗೂ, ಪ್ರತಿಯಾಪಿತಾಃ=ಕಳುಹಲ್ಪಟ್ಟ, ತೇ=ವಾನರರು, ಕಪೀಶ್ವರಾಜ್ಞಾಂ=ಕಪಿರಾಜನಾದ ಸುಗ್ರೀವನ ಆಜ್ಞೆಯನ್ನು, ಉಪಧಾರ್ಯ=ಅನುಸರಿಸಿ, ಮಾಸತಃಹಿ=ಒಂದು ತಿಂಗಳವಧಿಯಲ್ಲಿ, ಸಮಾಯಯುಃ=ಕಪಿರಾಜ್ಯವನ್ನು ಕುರಿತು ಬಂದರು. ವಾಯೋಃಸುತೇನ - ಹನುಮಂತರಿಂದ, ಸಹಿತಾರ್-ಯುಕ್ತರಾದ, ಅಂಗದ ಜಾಂಬವನ್ಮುಖಾಃ - ಅಂಗದನೂ ಜಾಂಬವಂತನೂ ಮೊದಲಾದ, ತೇ=ವಾನರ ಪ್ರಮುಖರೂ, ನಚಾಯಯುಃ-ಮಾಸಾವಧಿಯಲ್ಲಿ ಬರಲಿಲ್ಲ.

ತಾತ್ಪರ್ಯ:—ಸುಗ್ರೀವನಿಂದ ಒಂದು ತಿಂಗಳವಧಿಯಲ್ಲಿ ಸೀತಾನ್ವೇಷಣ ಮಾಡಿಕೊಂಡು ಬರಬೇಕೆಂದು ಆಜ್ಞಾಪ್ತರಾಗಿ ಸಮಸ್ತ ದಿಕ್ಕುಗಳಿಗವ ಹೋಗಿದ್ದ ಕಪಿಗಳೂ ಆ ಆಜ್ಞಾವನ್ನನುಸರಿಸಿ ಒಂದು ಮಾಸದಲ್ಲಿಯೇ ಹಿಂತಿರುಗಿ ಬಂದರು. ಆದರೆ ದಕ್ಷಿಣ ದಿಕ್ಕಿಗೆ ಅನ್ವೇಷಣಾರ್ಥವಾಗಿ ಹೋಗಿದ್ದ ಹನುಮಂತರಿಂದ ಸಹಿತರಾದ ಅಂಗದ ಜಾಂಬವಂತನೇ ಮೊದಲಾದ ಕಪಿ ಶ್ರೇಷ್ಠರು ಒಂದು ಮಾಸದ ಅವಧಿಯಲ್ಲಿ ಹಿಂದಕ್ಕೆ ಬರಲಿಲ್ಲ

**ಶ್ಲೋಕ|| ಸಮಸ್ತ ದುರ್ಗ ಪ್ರವರಂ ದುರಾಸದಂ ವಿಮಾರ್ಗತಾಂ ವಿಂಧ್ಯಗಿರಿಂ ಮಹಾತ್ಮನಾಂ । ಗತಃಸಕಾಲೋ ಹರಿರಾಡದೀರಿತಃ ಸಮಾಸದಂ ಶ್ಚಾಥಬಿಲಂ ಮಹಾದ್ಭುತಂ ||೩೬||**

ಅರ್ಥ:— ಸಮಸ್ತದುರ್ಗಪ್ರವರಂ=ಸಮಸ್ತ=ಸಮಗ್ರವಾದ, ದುರ್ಗ =ಗಮನಕ್ಕೆ ಅಸಾಧ್ಯವಾದ ಪರ್ವತಗಳಲ್ಲಿ, ಪ್ರವರಂ=ಶ್ರೇಷ್ಠವಾದ, ದುರಾಸದಂ = ಹೊಂದಲಸಾಧ್ಯವಾದ, ವಿಂಧ್ಯಗಿರಿಂ = ವಿಂಧ್ಯಪರ್ವತವನ್ನು, ವಿಮಾರ್ಗತಾಂ = ಹುಡುಕಿ ಶೋಧನ ಮಾಡುತ್ತಿರುವ, ಮಹಾತ್ಮನಾಂ= ಹನುಮದಾದಿ ಕಪಿ ಶ್ರೇಷ್ಠರಿಗೆ, ಹರಿರಾಡುದೀರಿತಃ = ಹರಿರಾಟ್=ಕಪಿ ರಾಜನಾದ ಸುಗ್ರೀವನಿಂದ, ಉದೀರಿತಃ=ಹೇಳಲ್ಪಟ್ಟಿದ್ದ, ಸಃ = ಒಂದು ಮಾಸ ಮಾತ್ರ ಅವಧಿಯುಳ್ಳ, ಕಾಲಃ-ಕಾಲ ಪ್ರಮಾಣವು,=ಗತಃ=ಗತಿಸಿ ಹೋಯಿತು. ಅಥ=ಮಾಸ ಕಾಲಾವಧಿ ಅತಿಕ್ರಾಂತವಾದನಂತರ, ತೇ= ಆ ವಾನರ ಪ್ರಮುಖರು, ಮಹಾದ್ಭುತಂ=ಅತ್ಯಂತ ಆಶ್ಚರ್ಯಕರವಾದ, ಬಿಲಂಚ=ಗುಹೆಯನ್ನು, ಸಮಾಸದರ್=ಸೇರಿದರು.

ತಾತ್ಪರ್ಯ:— ಹನುಮಂತರು ಅಂಗದ ಜಾಂಬವಂತ ಮೊದಲಾದ ವಾನರ ಪ್ರಮುಖರಿಂದ ಸಹಿತರಾಗಿ ದಕ್ಷಿಣ ದಿಕ್ಕಿನಲ್ಲಿ ಸೀತಾನ್ವೇಷಣ ಮಾಡುತ್ತಾ ಮಹಾ ದುರ್ಗಟವಾದ ದುರ್ಗಮನವಾದ ಪರ್ವತಗಳಲ್ಲೆಲ್ಲಾ ಶ್ರೇಷ್ಠವಾದ, ಗಮನಕ್ಕೆ ಅಸಾಧ್ಯವಾದ ವಿಂಧ್ಯಪರ್ವತಕ್ಕೆ ಬಂದರು. ಅಲ್ಲಿರುವ ಕಾಲದಲ್ಲಿಯೇ ವಾನರ ರಾಜನಾದ ಸುಗ್ರೀವನಿಂದ ವಿಧಿಸಲ್ಪಟ್ಟಿದ್ದ ಒಂದು ಮಾಸದ ಅವಧಿಯು ಅತಿಕ್ರಾಂತವಾಯಿತು. ಅನಂತರ ಈ ವಾನರ ಪ್ರಮುಖರು ಆ ವಿಂಧ್ಯ ಪರ್ವತದಲ್ಲಿರತಕ್ಕ ಅತ್ಯಾಶ್ಚರ್ಯಕರವಾದ ಒಂದು ಗುಹೆಯನ್ನು ಹೊಂದಿದರು.

**ಶ್ಲೋಕ|| ಕೃತಂ ಮಯೇನಾತಿ ವಿಚಿತ್ರ ಮುತ್ತಮಂ ಸಮೀಕ್ಷ್ಯ ತತ್ತಾರ ಉವಾಚಚಾಂಗದಂ । ವಯಂನಯಾಯೋ ಹರಿರಾಜ ಸನ್ನಿಧಿಂವಿಲಂಘಿತೋನಃ ಸಮಯೋ ಯತೋಸ್ಯ ||೩೭||**

ಅರ್ಥ:— ತತ್=ಆ ಬಿಲವು, ಮಯೇನ-ಮಯನಿಂದ, ಕೃತಂ= ಮಾಡಲ್ಪಟ್ಟದ್ದು ( ಆದ್ದರಿಂದಲೇ ) ಅತಿವಿಚಿತ್ರಂ=ಅತ್ಯಂತ ಆಶ್ಚರ್ಯಕರವಾದ

ದದ್ದು, ಉತ್ತಮಂ=ಅತ್ಯುತ್ತಮವಾದ್ದುದು, ತತ್-ಆ ಬಿಲವನ್ನು, ಸಮೀಕ್ಷ್ಯ=ನೋಡಿ, ತಾರಃ-ವಾಲೀ ಪತ್ನಿಯಾದ ತಾರೆಗೆ ಅಣ್ಣನಾದ ತಾರ ನಾಮಕನಾದ ವಾನರ ಶ್ರೇಷ್ಟನು, ಅಂಗದಂಪ್ರತಿ=ವಾಲಿ ಪುತ್ರನಾದ ಅಂಗದನನ್ನು ಕುರಿತು, ಯತಃ-ಯಾವ ಕಾರಣದ ದೆಶೆಯಿಂದ, ಅಸ್ಯ=ಸುಗ್ರೀವನ ಸಮಯಃ=ಮಾಸ ಮಾತ್ರಾವಧಿ ಕಾಲವು, ನಃ-ನಮ್ಮಗಳಿಂದ, ವಿಲಂಘಿತಃ=ಉಲ್ಲಂಘನ ಮಾಡಲ್ಪಟ್ಟಿತೋ, ತಸ್ಮಾತ್=ಆ ಕಾರಣದಿಂದ, ವಯಂ ನಾವು, ಹರಿರಾಜಸನ್ನಿಧಿಂ-ವಾನರ ರಾಜನಾದ ಸುಗ್ರೀವನ ಸನ್ನಿಧಾನವನ್ನು ಕುರಿತು, ನಯಾಮಃ=ಹೊಂದುವದಿಲ್ಲವು, ಇತಿ=ಹೀಗೆಂದು, ಉವಾಚ-ಹೇಳಿದನು.

ತಾತ್ಪರ್ಯ:—ಆ ಗುಹೆಯು ಮಯನಾಮಕನಾದ ದೈತ್ಯರ ಬಡಿಗಿಯಿಂದ ನಿರ್ಮಿತವಾದದ್ದು. ಆದುದರಿಂದಲೇನೇ ಬಹು ಆಶ್ಚರ್ಯ ಯುಕ್ತವಾಗಿಯೂ ಮತ್ತು ಅತ್ಯುತ್ತಮವಾಗಿಯೂ ಇದೆ. ಈ ಗುಹೆಯನ್ನು ನೋಡಿ, ವಾಲಿ ಪತ್ನಿಯಾದ ತಾರೆಯ ಅಣ್ಣನಾದ " ತಾರ ' ನಾಮಕನಾದ ವಾನರ ಶ್ರೇಷ್ಟನು ಅಂಗದನಿಗೆ ವಾನರ ರಾಜನಾದ ಸುಗ್ರೀವನು ನಮ್ಮಗಳಿಗೆ ಆಜ್ಞಾಪಿಸಿದ್ದ ಏಕ ಮಾಸಕಾಲವನ್ನು ನಾವು ಅತಿಕ್ರಮಿಸಿದ್ದೇವೆ, ಆದ್ದರಿಂದ ನಾವುಗಳು ಅವನ ಬಳಿಗೆ ಬರುವುದಿಲ್ಲವೆಂದನು.

**ಶ್ಲೋಕ॥ ದುರಾಸದೋ ಸಾವತಿ ಚಂಡಶಾಸನೋ ಹನಿಷ್ಯತಿತ್ವಾಮಪಿ ಕಿಂವುದಾದಿಕಾ೯ । ಅಗಮ್ಯ ಮೇತದ್ಬಿಲಮಾಪ್ಯ ತತ್ಸುಖಂವಸಾಮ ಸರ್ವೇ ಕಿಮಸಾವಿಹಾ ಚರೇತ್ ॥೩೮॥**

ಅರ್ಥ:—ಅಸೌ-ಈ ಸುಗ್ರೀವನು, ದುರಾಸದಃ=ಆಶ್ರಯ ಮಾಡುವದಕ್ಕೆ ಅಸಾಧ್ಯನು. ಅತಿ ಚಂಡಶಾಸನಃ=ಅತಿ ಕ್ರೂರವಾದ ಆಜ್ಞೆ ಮಾಡತಕ್ಕವನು, ತ್ವಾಮಪಿ-ನಿನ್ನನ್ನೇ, ಹನಿಷ್ಯತಿ = ಸಂಹಾರ ಮಾಡುತ್ತಾನೆ, ಮದಾದಿಕಾ೯-ನಮ್ಮಗಳನ್ನು, ಕಿಮ್=ಏನು ಹೇಳತಕ್ಕದ್ದಿದೆ ( ಕೊಂದು ಬಿಡುತ್ತಾನೆ ) ತತ್=ಆದ್ದರಿಂದ, ವಯಂಸರ್ವೇ-ನಾವೆಲ್ಲರೂ, ಅಗಮ್ಯ-ಬರುವುದಕ್ಕೆ ಅಸಾಧ್ಯವಾದ, ಯೇತದ್ಬಿಲಂ=ಈ ಗುಹೆಯನ್ನು, ಅಪ್ಯ=ಹೊಂದಿ, ಸುಖಂ=ಸೌಖ್ಯವಾಗಿ, ವಸಾಮಃ=ವಾಸಮಾಡೋಣ, ಅಸೌ=ಸುಗ್ರೀವನು, ಇಹ= ಇಲ್ಲಿ ಬಂದು, ಕಿಂ=ಏನನ್ನು, ಆಚರೇತ್=ಮಾಡಿಯಾನು

**ಶ್ಲೋಕ॥ ನಚೈವರಾಮೇಣ ಸಲಕ್ಷ್ಮಣೇನ ಪ್ರಯೋಜನಂನ್ನೋ ವನಚಾರಿಣಾಂ ಸದಾ । ನಚೇಹೇ ಹನಃ ಪೀಡಯಿತುಂ ಸಚಕ್ಷಮಃ ತತೋಮಮೇಯಂ ಸುವಿನಿಶ್ಚಿತಾಮತಿಃ ॥೩೯॥**

ಅರ್ಥ:—ಸದಾ=ಸರ್ವ ಕಾಲದಲ್ಲೂ, ವನಚಾರಿಣಾ = ವನಗಳಲ್ಲಿ ಸಂಚಾರ ಮಾಡುತ್ತಿರುವ, ನಃ–ನಮ್ಮಗಳಿಗೆ, ಸಲಕ್ಷ್ಮಣೇನ - ಲಕ್ಷ್ಮಣನಿಂದ ಸಮೇತರಾದ, ರಾಮೇಣ–ಶ್ರೀರಾಮರಿಂದ, ಕಿಂಪ್ರಯೋಜನಂ - ಏನು ಪ್ರಯೋಜನವಾಗತಕ್ಕದ್ದಿದೆ ? ನಚೈವ–ಇಲ್ಲವೇ ಇಲ್ಲವು. ಸಚ- ಅವರುಗಳು, ಇಹ=ಈ ಗುಹೆಗೆ ಬಂದು, ನಃ=ನಮ್ಮಗಳನ್ನು, ಪೀಡಯಿತುಂ–ಪೀಡಿಸಲು, ನಚಕ್ಷಮಃ=ಸಮರ್ಥರಾಗುವುದಿಲ್ಲ. ತತಃ=ಆದ್ದರಿಂದ ಮಮ=ನನ್ನ, ಮತಿಃ=ಬುದ್ಧಿಯು, ಇಯಂ=ಈ ರೀತಿಯಾಗಿ, ಸುವಿನಿಶ್ಚಿತಾ=ಚೆನ್ನಾಗಿ ವ್ಯವಸ್ಥಾ ಮಾಡಿದೆ.

ತಾತ್ಪರ್ಯ:—ಸರ್ವದಾ ಅರಣ್ಯದಲ್ಲಿಯೇ ವಾಸಮಾಡತಕ್ಕ ವಾನರರಾದ ನಮ್ಮಗಳಿಗೆ ಲಕ್ಷ್ಮಣರಿಂದ ಸಹಿತರಾದ ಶ್ರೀರಾಮರಿಂದ ಪ್ರಯೋಜನವೇನು ? ಏನೂ ಇಲ್ಲ. ಅವರು ಇಲ್ಲಿಗೆ ಬಂದು ನಮ್ಮನು ಪೀಡಿಸುವುದಕ್ಕೆ ಸಮರ್ಥರಾಗುವುದಿಲ್ಲ. ಆದ್ದರಿಂದ ನಾವು ಸರ್ವರೂ ಈ ಗುಹೆಯಲ್ಲಿದ್ದುಕೊಂಡು ಸುಖವಾಗಿ ವಾಸಮಾಡೋಣವೆಂದು ವ್ಯವಸ್ಥೆ ಮಾಡಿದ್ದೇನೆಂದು ತಾನು ಹೇಳಿದನು.

**ಶ್ಲೋಕ॥ ಇತೀರಿತಂ ಮಾತುಲವಾಕ್ಯ ಮಾಶು ಸ ಆದದೇ ವಾಲಿಸುತೋಪಿ ಸಾದರಂ । ಉವಾಚ ವಾಕ್ಯಂಚನನೋ ಹರೀಶ್ವರಃ ಕ್ಷಮಾಭವೇ ಲ್ಲಂಘಿತ ಶಾಸನಾನಾಂ ॥೪೦॥**

ಅರ್ಥ:—ವಾಲಿಸುತಃ=ವಾಲಿಯ ಪುತ್ರನಾದ ಅಂಗದನು, ಇತಿ= ಈರೀತಿಯಾದ, ಮಾತುಲವಾಕ್ಯಂ=ಮಾತುಲ - ಸೋದರಮಾವನಾದ ತಾರಾಖ್ಯವಾನರನ, ವಾಕ್ಯಂ–ಮಾತನ್ನು, ಆಶು – ವಿಚಾರಮಾಡದಲೇನೇ, ಜಾಗ್ರತೆಯಾಗಿ, ಸಾಗಿರಂ– (ಯಥಾಭಪತಿತಥಾ) ಪ್ರೀತಿಪೂರ್ವಕವಾಗಿ, ಆದದೇ–ಅಂಗೀಕರಿಸಿದನು, ಅಪಿ–ಮತ್ತು, ಸಃ–ಆ ಅಂಗದನು, ಹರೀಶ್ವರಃ - ಕಪೀಶ್ವರನಾದ ಸುಗ್ರೀವನು, ಲಂಘಿತಶಾಸನಾನಾಂ=ಉಲ್ಲಂಘನ

ಮಾಡಲ್ಪಟ್ಟ, ಶಾಸನಾಂ = ಆಜ್ಞೆಯುಳ್ಳ, ನಃ = ನಮ್ಮಗಳ ವಿಷಯದಲ್ಲಿ, ಕ್ಷಮೀ=ಮನ್ನಿಸುವಂತವನು, ನಭವೇತ್=ಆಗುವುದೇ ಇಲ್ಲವು. ಇತಿ=ಈ ರೀತಿಯಾದ, ವಾಕ್ಯಂ ಮಾತನ್ನು. ಉವಾಚ=ಹೇಳಿದನು.

**ತಾತ್ಪರ್ಯ:**—ಅಂಗದನು ತನ್ನ ಸೋದರನಾಗಿರುವ ತಾರಾಖ್ಯ ವಾನರನು ಹೇಳಿದ ಮಾತನ್ನು ಕೇಳಿ ಪುನಃ ಪ್ರತ್ಯುತ್ತರ ಹೇಳದೆ ತಕ್ಷಣ ದಲ್ಲಿಯೇ ಪ್ರೀತಿಪೂರ್ವಕವಾಗಿ ಅಂಗೀಕಾರ ಮಾಡಿದನು. ಮತ್ತು ಕಪೀಶ್ವರನು ಆಜ್ಞಾ ಉಲ್ಲಂಘನ ಮಾಡಿರುವ ನಮ್ಮಗಳನ್ನು ಎಂದಿಗೂ ಕ್ಷಮಿಸುವುದಿಲ್ಲವೆಂದು ತನ್ನ ಸೋದರ ವಾನರನನ್ನು ಕುರಿತು ಹೇಳಿದನು.

**ಶ್ಲೋಕ॥ ರಾಜ್ಯಾರ್ಥಿನಾ ಯೇನಹಿ ಘಾತಿತೋಗ್ರಜೋ ಹೃತಾಶ್ಚ ದಾರಾಃ ಸುನೃಶಂಸಕೇನ । ಸನಃ ಕಥಂ ಶಾಸನಾತಿಗಾನ್ನಿರಾಶ್ರಯಾನ್ದುರ್ಬಲಕಾನ್ಬಲೇ ಸ್ಥಿತಃ ॥ ೪೧ ॥**

**ಅರ್ಥ :**—ರಾಜ್ಯಾರ್ಥಿನಾ = ರಾಜ್ಯಾಪೇಕ್ಷೆಯುಳ್ಳ, ಯೇನ=ಯಾವ ಸುಗ್ರೀವನಿಂದ, ಅಗ್ರಜಃ=ಅಣ್ಣನಾದ ವಾಲಿಯು, ಘಾತಿತಃ=ಹತನಾದನೋ, ಯೇನನೃಶಂಸಕೇನ = ಯಾವ ಹಿಂಸಕನಾದ ಸುಗ್ರೀವನಿಂದ, ದಾರಾಃ=ಪತ್ನಿಯಗ, ಹೃತಾಶ್ಚ = ಅಪಹರಿಸಲ್ಪಟ್ಟಳೋ, ಸಃ = ಅಂತಹ, ಬಲೇಸ್ಥಿತಃ=ಶ್ರೀರಾಮರ ಬಲಪರಾಕ್ರಮದಿಂದ ಕೂಡಿದ (ಸುಗ್ರೀವನು), ಶಾಸನಾತಿಗಾನ್=ಆಜ್ಞಾತಿಕ್ರಮಿಸಿರುವ, ನಿರಾಶ್ರಯಾನ್=ಆಶ್ರಯರಹಿತರಾಗಿರುವ, ದುರ್ಬಲಕಾನ್ = ಬಲವಿಲ್ಲದವರಾದ, ನಃ = ನಮ್ಮಗಳನ್ನು, ಕಥಂ ರಕ್ಷತಿ = ಹೇಗೆತಾನೆ ರಕ್ಷಣೆಮಾಡುತ್ತಾನೆ, ಇತಿ = ಹೀಗೆಂದು ಹೇಳಿದನು.

**ತಾತ್ಪರ್ಯ.**—ಅತಿ ಕ್ರೂರನಾದ ರಾಜ್ಯಾಪೇಕ್ಷೆಯಿಂದ ಅಣ್ಣನನ್ನ ಸಂಹಾರ ಮಾಡಿಸಿ ಅವರ ಭಾರ್ಯೆಯನ್ನು ಅಪಹರಿಸಿದ ಶ್ರೀರಾಮರ ಸಹಾಯ ಯುಕ್ತನಾದ ಸುಗ್ರೀವನು ಆಜ್ಞೋಲ್ಲಂಘನ ಮಾಡಿದ ನಿರಾಶ್ರಯರಾದ ದುರ್ಬಲರಾದ ನಮ್ಮಗಳನ್ನು ಹೇಗೆತಾನೇ ಕ್ಷಮಿಸುವನು ?

**ಶ್ಲೋಕ॥ ಇತೀರಿತೇ ಶಕ್ರಸುತಾತ್ಮಜೇನ ತಥೇತಿ ಚೋಚುಃ ಸಹಜಾಂಬವನ್ಮುಖಾಃ । ಸರ್ವೇಽಪಿತೇಷಾಮಥಚೇಕವಮುತ್ತಂ । ದೃಷ್ಟ್ವಾಹನೂಮಾನಿದಮಾಬಭಾಷೇ ॥ ೪೨ ॥**

**ಅರ್ಥ:—**ಶಕ್ರಸುತಾತ್ಮಜೇನ-ಶಕ್ರಸುತ-ಇಂದ್ರಪುತ್ರನಾದ ವಾಲಿಯ, ಆತ್ಮಜೇನ-ಮಗನಾದ ಅಂಗದನಿಂದ, ಇತಿ-ಈ ಪ್ರಕಾರ (ಸುಗ್ರೀವನು ನಮ್ಮನ್ನು ಕ್ಷಮಿಸುವದಿಲ್ಲವೆಂದು) ಈರಿತೇಸತಿ - ಹೇಳಲ್ಪಡುತ್ತಿರಲಾಗಿ, ಜಾಂಬವನ್ಮುಖಾಃ=ಜಾಂಬವಂತನೇ ಮೊದಲಾದ, ಸರ್ವೇ-ಸಮಸ್ತರಾದ ವಾನರ ಪ್ರಮುಖರೂ, ಸಹ-ಒಟ್ಟುಗೂಡಿ, ತಥಾಚ-ಅಂಗದನು ಹೇಳಿದ್ದೇ ಸರಿಯಾಗಿದೆ. ನೀನು ಹೇಳಿದ ಪ್ರಕಾರವೇ ಮಾಡಲ್ಪಡತಕ್ಕದ್ದು. ಇತಿ-ಹೀಗೆಂದು, ಊಚುಃ-ಹೇಳಿದರು, ಅಥ-ಅನಂತರ, ಹನುಮಾನ್-ಹನುಮಂತನು, ತೇಷಾಂ-ಆ ಅಂಗಧಾದಿ ಸರ್ವ ವಾನರ ಪ್ರಮುಖರ, ಐಕಮತ್ಯಂ-ಏಕೀಭಾವವನ್ನು, ದೃಷ್ಟ್ವಾ-ನೋಡಿ, ಇದಂ-ವಕ್ಷ್ಯಮಾಣಪ್ರಕಾರ, ಅಬಭಾಷೆ-ಮಾತನಾಡಿದರು.

**ತಾತ್ಪರ್ಯ.—**ಈ ಪ್ರಕಾರ ತಾರಾಂಗದರು ಹೇಳಿದ ನಂತರ ಜಾಂಬವಾದಿ ವಾನರ ಪ್ರಮುಖರೆಲ್ಲರೂ ಒಟ್ಟುಶೇರಿ ನೀನು ಹೇಳಿದ ಪ್ರಕಾರವೇ ಮಾಡತಕ್ಕದ್ದು ಎಂದು ಏಕವಾಕ್ಯದಿಂದ ಹೇಳುತ್ತಿರಲಾಗಿ ಹನುಮಂತರು ತಾರ, ಅಂಗದ, ಜಾಂಬವಂತ ಮೊದಲಾದ ಕಪಿಪ್ರಮುಖರ ಐಕಮತ್ಯವನ್ನು ನೋಡಿ ಮುಂದೆ ಹೇಳುವ ಪ್ರಕಾರ ಮಾತನಾಡಿದರು.

**ಶ್ಲೋಕ॥ ವಿಜ್ಞಾಂತಮೇತದ್ಧಿ ಮಯಾಂಗದಸ್ಯರಾಜ್ಯಾಯ ತಾರಾಭಿಹಿತಂ ಹಿ ವಾಕ್ಯಂ । ಸಾಧ್ಯಂನಚೈತನ್ನಹಿ ವಾಯುಸೂನುಃ ರಾಮಪ್ರತೀಪಂ ವಚನಂಸಹೇತ ॥ ೪೩ ॥**

**ಅರ್ಥ.—**ಏಕದ್ವಾಕ್ಯಂ-ಈ ಮಾತು, ಅಂಗದಸ್ಯ-ಅಂಗದನಿಗೆ ರಾಜ್ಯಪ್ರಾಪ್ತಿಗೋಸ್ಕರ, ತಾರಾಭಿಹಿತಂ - ತಾರನಿಂದ ಹೇಳಲ್ಪಟ್ಟಿತು, ಇತಿ-ಹೀಗೆಂದು, ಮೇ=ನನಗೆ, ವಿಜ್ಞಾತಂ-ತಿಳಿಯಬಂದಿತು, ವಾಯುಸೂನುಃ-ವಾಯುಪುತ್ರನು, (ಹನುಮಂತನು) ರಾಮಪ್ರತೀಪಂ-ಶ್ರೀರಾಮರಿಗೆ ಪ್ರತಿಕೂಲವಾದ, ವಚನಂ-ವಾಕ್ಯವನ್ನು, ನಸಹೇತ-ಸಹಿಸುವದಿಲ್ಲವು. (ಅತಃ-ಆದ್ದರಿಂದ, ಏತತ್ - ತಾರನಿಂದ ಹೇಳಲ್ಪಟ್ಟ ವಾಕ್ಯವು, ನಸಾಧ್ಯಂಹಿ-ಎಂದಿಗೂ ಸಾಧ್ಯವಲ್ಲವು, ಎಂದು ಹನೂಮಾನ್ - ಹನುಮಂತರು, ಉವಾಚ-ಮಾತನಾಡಿದರು.

**ತಾತ್ಪರ್ಯ:—** ಅಂಗದಾದಿ ವಾನರ ಪ್ರಮುಖರು ಸರ್ವರೂ ಐಕ್ಯಮತ್ಯದಿಂದ ತಾರನು ಹೇಳಿದ ಮಾತನ್ನು ಆದರಪೂರ್ವಕವಾಗಿ ಅಂಗೀಕಾರ ಮಾಡಿದ್ದನ್ನ ಹನುಮಂತರು ಕೇಳಿ ಇನ್ನು ಉದಾಸೀನವಾಗಿದ್ದರೆ ಮುಂದೆ ಕೆಲಸ ಕೆಡುತ್ತದೆಂದು ಯೋಚಿಸಿ ಅವರನ್ನು ಕುರಿತು ಹೇಳುತ್ತಾರೆ :— ಹೇಗೆಂದರೆ ಈಗ ತಾರನು ಅಂಗದನಿಗೆ ರಾಜ್ಯಾಧಿಕಾರ ಪ್ರಾಪ್ತಿಯಾಗ ಬೇಕೆಂಬುವುದಕ್ಕೋಸ್ಕರ ಈ ರೀತಿಯಾದ ವಾಕ್ಯವನ್ನು ಹೇಳಿದನು. ಇದು ನನಗೆ ಚೆನ್ನಾಗಿ ತಿಳಿಯುಬಂದಿತು. ಆದರೆ ತಾರನ ಯೋಚನೆಯು ಎಂದಿಗೂ ಸಾಧ್ಯವಾಗಲಾರದು, ಏತಕ್ಕೆಂದರೆ ಶ್ರೀರಾಮರಿಗೆ ಪ್ರತಿಕೂಲ ವಾದ ವಾಕ್ಯವನ್ನು ಹನುಮಂತನು ಎಂದಿಗೂ ಸಹಿಸಲಾರನು ಎಂದು ಹನುಮಂತರು ಹೇಳಿದರು.

**ಶ್ಲೋಕ॥ ನಚೇಹ ವಾಕ್ರಷ್ಟು ಮುಪಾಯತೋಽಪಿ ಶಕ್ಯಃ ಕಥಂಚಿತ್ಸಕಲೈಃ ಸಮೇತೈಃ । ಸನ್ಮಾರ್ಗತೋ ನೈವಹಿ ರಾಘವಸ್ಯ ದುರಂತ ಶಕ್ತೇ ರ್ಬಿಲ ಮಪ್ರಧೃಷ್ಯಂ ॥ ೪೪ ॥**

**ಅರ್ಥ:—** ಅಹಂಸಮೇತೈಃ = ನನ್ನಿಂದ ಸಮೇತರಾದ, ಸಕಲೈಃ= ಸಮಸ್ತರಾದ, ಭವದ್ಭಿಃ=ನಿಮ್ಮಗಳಿಂದ, ಉಪಾಯೇನಾಗಿ=ಸಾಮೋಪಾಯ ಗಳಿಂದ, ಸನ್ಮಾರ್ಗತಃ=ರಾಮರಿಗೆ ಅನುಕೂಲವಾದ ಮಾರ್ಗದಿಂದ, ಆಕ್ರಷ್ಟುಂ = ನಿಮ್ಮ ಬುದ್ಧಿಗೆ ಅನುಸಾರವಾಗಿ ತಿರುಗಿಸಿಕೊಳ್ಳುವುದಕ್ಕೆ. ಕಥಂಚಿತ್=ಯಾವ ರೀತಿಯಿಂದಲೂ, ನಶಕ್ಯಃ=ಸಾಧ್ಯವಲ್ಲವು, (ಯಸ್ಮಾತ್– ಏತಕ್ಕೆಂದರೆ) ಸಃ=ಆ ರಾಮರು, ದುರಂತಶಕ್ತಿಃ=ಮಿತಿಯಿಲ್ಲದ ಪರಾಕ್ರಮ ವುಳ್ಳವರು, (ಆದ್ದರಿಂದ) ರಾಘವಸ್ಯ = ಈ ಶ್ರೀರಾಮರಿಗೆ, ಬಿಲಂ= ಈ ಗುಹೆಯು, ಅಪ್ರಧೃಷ್ಯಂ = ಅಸಾಧ್ಯವಾದದ್ದು, ನಚೈವ=ಅಲ್ಲವೇ ಅಲ್ಲವು.

**ತಾತ್ಪರ್ಯ:—** ಈ ಕಪಿಪ್ರಮುಖರು ನನ್ನನ್ನು (ಹನುಮಂತರನ್ನ) ಸಹ ನಮ್ಮಗಳಿಗೆ ಅನುಕೂಲವಾದ ಬುದ್ಧಿಯುಳ್ಳವನನ್ನಾಗಿ ಸಾಮಾದ್ಯುಪಾಯ ಧಿಂದ ಸರಿಮಾಡಿಕೊಳ್ಳುತ್ತೇವೆಂದು ಹೇಳಿದರೆ ಅದಕ್ಕೆ ಹನುಮಂತರು ಹೇಳುತ್ತಾರೆ. ಇಲ್ಲ ಏಳಿತರಾಗಿರತಕ್ಕ ನೀತಿಕಲಾಕೋವಿದ ರಿಂದ ನಿಮ್ಮ ಸರ್ವರಿಂದಲೂ ನನ್ನನ್ನು ಶ್ರೀರಾಮರಿಗೆ ಅನುಕೂ...

ಲವಾದ ಸನ್ಮಾರ್ಗದಿಂದ ತಪ್ಪಿಸಿ ನಿಮ್ಮಗಳ ಬುದ್ಧ್ಯನುಸಾರವಾಗಿ ಮಾಡಿಕೊಳ್ಳಲು ಯಾವ ಉಪಾಯದಿಂದಲೂ ನಿಮಗೆ ಶಕ್ಯವಲ್ಲವು. ಏತಕ್ಕೆಂದರೆ ಶ್ರೀರಾಮರು ದುರಂತ (ಹೋಂದಲಸಾಧ್ಯವಾದ) ಶಕ್ತಿಯುಳ್ಳವರು. ಆದುದರಿಂದ ಅವರು ಇಲ್ಲಿಗೆ ಬಂದು ನವ್ಮನ್ನು ಪೀಡಿಸಲಾರರು ಎಂಬ ಯೋಚನೆಯು ಸಾಧುವಲ್ಲವು. ಶ್ರೀರಾಮರಿಗೆ ಈ ಗುಹೆಯು ಎಂದಿಗೂ ಬರಲಸಾಧ್ಯವಲ್ಲವು ಎಂದು ಶ್ರೀ ಹನುಮಂತರು ಕಪಿಪ್ರಮುಖರಾದ ಅಂಗದಾದಿ ಸಮಸ್ತ ವಾನರಿಗೂ ಹೇಳಿದರು.

**ಶ್ಲೋ॥ ವಚೋ ಮಮೇತ ದ್ಯದಿ ಚಾದರೇಣ ಗ್ರಾಹ್ಯಂ ಭವೇದ್ವ ಸ್ತದತಿ ಪ್ರಿಯಂಮೇ । ನಚೇದ್ಬಲಾದಪ್ಯನಯೇ ಪ್ರವೃತ್ತಾನ್ ಪ್ರಶಾಸ್ಯ ಸನ್ಮಾರ್ಗ ಗತಾನ್ ಕರೋಮಿ ॥ ೪೫ ॥**

**ಅರ್ಥ:**—ಮಮ=ನನ್ನ, ಏತದ್ವಚನಂ=ಈ ವಾಕ್ಯವು, ವಃ=ನಿಮ್ಮಗಳಿಗೆ, ಆದರೇಣ=ಸ್ನೇಹಪೂರ್ವಕವಾಗಿ, ಗ್ರಾಹ್ಯಂ=ಅನುಮೋದನ ಮಾಡತಕ್ಕದ್ದು, ಭವೇದ್ಯಂ=ಆದದ್ದೇ ಆದರೆ, ತತ್=ಆ ವಿಷಯದಲ್ಲಿ, ಮೇ=ನನಗೆ, ಅತಿಪ್ರಿಯಂ=ಅತ್ಯಂತ ಸಂತೋಷವು, ನಚೇದ್ಯದಿ=ಹಾಗೆ ನಿಮಗೆ ನನ್ನ ವಾಕ್ಯವು ಗ್ರಾಹ್ಯವಿಲ್ಲದೆ ಇದ್ದರೆ, ಬಲಾದಪಿ=ಬಲಾತ್ಕಾರದಿಂದಲಾದರೂ, ಅನಯೇ=ದುರ್ಮಾರ್ಗದಲ್ಲಿ, ಪ್ರವೃತ್ತಾನ್=ಪ್ರವರ್ತಿಸಿರುವ, ವಃ=ನಿಮ್ಮಗಳನ್ನು, ಪ್ರಶಸ್ಯ=ಚೆನ್ನಾಗಿ ಶಾಸನಮಾಡಿ, ಸನ್ಮಾರ್ಗತಾನ್=ಶ್ರೀರಾಮರ ಕಾರ್ಯಾನುಕೂಲವಾದ ಮಾರ್ಗದಲ್ಲಿ ಪ್ರವರ್ತಿಸುವವರನ್ನಾಗಿ, ಕರೋಮಿ=ಮಾಡುತ್ತೇನೆ, ಇತಿ=ಹೀಗೆಂದು ಹನೂಮಾನ್=ಹನುಮಂತರು, ಅಬಭಾಷೇ=ಮಾತನಾಡಿದರು.

**ತಾತ್ಪರ್ಯ.**—ಹನುಮಂತರು ವಾನರ ಪ್ರಮುಖರನ್ನು ಕುರಿತು ಖಂಡಿತವಾಗಿ ಹೇಳುತ್ತಾರೆ:—ನಾನು ಹೇಳಿದ ವಾಕ್ಯವು ನಿಮಗೆ ಸ್ನೇಹಪೂರ್ವಕವಾಗಿ ಗ್ರಾಹ್ಯವಾದದ್ದೇ ಆದರೆ ನನಗೆ ಬಹಳ ಸಂತೋಷ ಹಾಗೆ ಆಗದಪಕ್ಷದಲ್ಲಿ ನಾನು ಬಲಾತ್ಕಾರದಿಂದ ದುರ್ನೀತಿ (ರಾಮರಿಗೆ ಪ್ರತಿಕೂಲವಾದ ಕಾರ್ಯ) ದಲ್ಲಿ ಪ್ರವೇಶಿಸಿರುವ ನಿಮ್ಮಗಳನ್ನು ಶಿಕ್ಷಾಮಾಡಿ ಸನ್ಮಾರ್ಗಪ್ರವರ್ತನ (ರಾಮಕಾರ್ಯಾನುಕೂಲ ಪ್ರವರ್ತನ) ವುಳ್ಳವರನ್ನಾಗಿ ಮಾಡುತ್ತೇನೆಂದು ಹೇಳಿದನು.

**ಶ್ಲೋಕ॥ ಇತೀರಿತಂ ತತ್ಪವನಾತ್ಮಜಸ್ಯ ಶೃತ್ವಾತಿಭೀತಾ ಧೃತಮೂಕಭಾವಾಃ। ಸರ್ವೇಷು ಜಗ್ಮುಸ್ತಮಥಾದ್ರಿ ಮುಖ್ಯಂ ಮಾಹೇಂದ್ರ ಮಾಸೇದು ರಗಾದಬೋಧಾಃ ॥೪೬॥**

ಅರ್ಥ:--ಇತಿ-ಈ ಪ್ರಕಾರವಾಗಿ, ಈರಿತಂ=ಹೇಳಿದ, ಪವನಾತ್ಮ ಜಸ್ಯ-ಹನುಮಂತರ, ತತ್=ಪೂರ್ವೋಕ್ತವಾದ ವಾಕ್ಯವನ್ನು, ಶೃತ್ವಾ - ಕೇಳಿ, ಅತಿಭೀತಾಃ-ಅತ್ಯಂತ ಭಯಗ್ರಸ್ತರಾದ ಆ ವಾನರ ಪ್ರಮುಖರು, ಧೃತಮೂಕಭಾವಾಃಸಂತಃ=ಒಪ್ಪಿಕೊಂಡು ಏನನ್ನೂ ಹೇಳದೆ ಮೂಕ ಸ್ವಭಾವವುಳ್ಳವರಾಗಿ, ಅತಯೇವ ಅಗಾಧಭೋದಾಃ=ಅಪರಿಮಿತವಾದ ಜ್ಞಾನವುಳ್ಳವರಾದ್ದರಿಂದಲೇನೆ, ಸರ್ವೇ-ಸಮಸ್ತರಾದ ಕಪಿಶ್ರೇಷ್ಠರೂ, ತಂ-ಹನುಮಂತರನ್ನೂ, ಅನುಜಗ್ಮುಃ=ಅನುಸರಿಸಿದರು, ಅಥ-ಅವರು ಅನುಸರಿಸಿದನಂತರ, ಸರ್ವೇಪಿ-ಎಲ್ಲರೂ. ಅದ್ರಿಮುಖ್ಯಂ=ಪರ್ವತಗಳಲ್ಲಿ ಮುಖ್ಯವಾದ ಮಾಹೇಂದ್ರ ಪರ್ವತವನ್ನು, ಆಸೇದುಃ-ಸೇರಿದರು.

ತಾತ್ಪರ್ಯ:--ಈ ಪ್ರಕಾರ ಹೇಳಿದ ಹನುಮಂತರ ವಾಕ್ಯವನ್ನು ಕೇಳಿ ಸಮಸ್ತ ವಾನರ ಮುಖಂಡರೂ ಭಯಪಟ್ಟು ಗಂಭೀರವಾದ ಜ್ಞಾನವುಳ್ಳವರಾದ್ದರಿಂದ ಏನೂ ಪ್ರತಿಯಾಗಿ ಹೇಳದೆ ಮೂಕ ಸ್ವಭಾವವನ್ನನುಸರಿಸಿ ಅವರು ಹೇಳಿದ್ದನ್ನು ಅನುಮೋದಿಸಿ ಅವರನ್ನನುಸರಿಸಿದರು. ಅನಂತರ ಸರ್ವರೂ ಒಂದಾಗಿ ಸೇರಿ ಪರ್ವತಗಳಲ್ಲಿ ಮುಖ್ಯವಾದ ಮಾಹೇಂದ್ರ ಪರ್ವತವನ್ನು ಹೊಂದಿದರು.

**ಶ್ಲೋಕ॥ ನಿರೀಕ್ಷ್ಯ ತೇ ಸಾಗರಮಪ್ರಧೃಷ್ಯಂ ಅಪಾರ ಮೇಯಂ ಸಹಸಾ ವಿಷಣ್ಣಾಃ। ದೃಢಂ ನಿರಾಶಾಶ್ಚ ಮೃತಿಂಹಿ ದಧ್ರುಃ ಪ್ರಾಯೋಪವೇಶಾಯ ತಥಾಚ ಚಕ್ರುಃ ॥೪೭॥**

ಅರ್ಥ:--ತೇ=ಕಪಿಪ್ರಮುಖರು, ಸಹಸಾ-ಮಹಾ ಪ್ರಯತ್ನಗಳಿಂದ ಅಪ್ರಧೃಷ್ಯಂ=ಪಾರವನ್ನು ಹೊಂದಲು ಅಸಾಧ್ಯವಾದ, ಅಪಾರಮೇಯಂ= ತೀರವನ್ನು ತಿಳಿಯಲಸಾಧ್ಯವಾದ, ಸಾಗರಂ=ಮಹಾಸಮುದ್ರವನ್ನು, ನಿರೀಕ್ಷ್ಯ-ನೋಡಿ, ವಿಷಣ್ಣಾಃ=ಆಶ್ಚರ್ಯಚಕಿತರಾಗಿ, ಧೃಡಂ = ದೃಢವಾಗಿ,

ನಿರಾಶಾಃಸಂತಃ=ಆಶಾರಹಿತರಾವದರಾಗಿ, ಪ್ರಾಯೋಪವೇಶಾಯ=ನಿರಶನ ವ್ರತವನ್ನು ಮಾಡುವುದಕ್ಕೆ, ಮತಿಂ=ಬುದ್ಧಿಯನ್ನು, ದಧ್ರೇ=ದೃಢಮಾಡಿದರು ಮತ್ತು, ತಥೈವ=ಅದೇ ಪ್ರಕಾರ, ಚಕ್ರುಃ=ಮಾಡಿದರು.

**ತಾತ್ಪರ್ಯ:—** ಆ ಕಪಿಗಳು ಹನುಮಂತರಿಂದ ಸಹಿತರಾಗಿ ಮಹೇಂದ್ರ ಪರ್ವತವನ್ನು ಹೊಂದಿ ಅಲ್ಲಿ ಅತಿಸಾಹಸದಿಂದಲೂ ಕೂಡ ತೀರವನ್ನು ಹೊಂದಲಸಾಧ್ಯವಾದ ಮತ್ತು ತೀರವನ್ನು ತಿಳಿಯಲು ಸಾಧ್ಯವಿಲ್ಲದ ಇರುವ ಮಹಾ ಸಮುದ್ರವನ್ನು ನೋಡಿ ಶ್ರಾಂತರಾಗಿ ಖಂಡಿತವಾಗಿಯೂ ಆಶಾರಹಿತರಾದರು. ತಾವು ಜೀವಸಹಿತವಾಗಿ ಬದುಕಿರುವ ವಿಷಯದಲ್ಲಿ ಆಶೆ ಬಿಟ್ಟುಬಿಟ್ಟರು. ಏತಕ್ಕೆಂದರೆ ಸುಗ್ರೀವನಿಂದ ಆಜ್ಞಾಪಿತನಾದ ಮಾಸ ಮಾತ್ರ ಅವಧಿಯನ್ನು ಉಲ್ಲಂಘನ ಮಾಡಿ ಬಹುದಿವಸವಾದಾಗ್ಯೂ ಕಾರ್ಯ ಪೂರ್ಣವಾಗದೆ ಇರುವದರಿಂದಲೂ ಆಜ್ಞೋಲಂಘನ ಮಾಡಿದ್ದರಿಂದಲೂ ಸುಗ್ರೀವನು ಕೋಪಿಸಿ ನಮ್ಮಗಳನ್ನು ಖಂಡಿತವಾಗಿ ಸಂಹರಿಸಿಬಿಡುತ್ತಾನೆ, ಎಂದು ಜೀ. ದ ಮೇಲೆ ಆಶೆಬಿಟ್ಟು ಪ್ರಾಯೋಪವೇಶ ಮಾಡುವುದಾಗಿ ನಿರ್ಧರಿಸಿಕೊಂಡರು. ಮತ್ತು ಅದೇ ಪ್ರಕಾರವಾಗಿ ಪ್ರಾಯೋಪವೇಶವನ್ನೂ ಮಾಡಿದರು.

**ಶ್ಲೋಕ॥ ಪ್ರಾಯೋಪ ವಿಷ್ಟಾಶ್ಚ ಕಥಾರಿ ವದಂತೋಽರಾಮಸ್ಯ ಸಂಸಾರ ವಿಮುಕ್ತಿದಾತುಃ । ಜಟಾಯುಷಃ ಪಾತನ ಮೂಚಿರೇತತ್ಸಂ ಪಾತಿ ನಾಮ್ನಃ ಶ್ರವಣಂ ಜಗಾಮ ॥ ೪೮ ॥**

**ಅರ್ಥ :—** ಪ್ರಾಯೋಪವಿಷ್ಟಾಃ=ಪ್ರಾಯೋಪವೇಶನ ಮಾಡುತ್ತಿದ್ದ ಈ ಕಪಿಶ್ರೇಷ್ಟರು, ಸಂಸಾರವಿಮುಕ್ತದಾತುಃ=ಸಂಸಾರ=ಜನನಮರಣಾಖ್ಯ ಸಂಸಾರಕ್ಕೆ, ವಿಮುಕ್ತಿ=ಮುಕ್ತಿಯನ್ನು (ಕಲ್ಪಿಸುವಿಕೆಯನ್ನು,) ದಾತುಃ=ಕೊಡತಕ್ಕ, ರಾಮಸ್ಯ=ಶ್ರೀರಾಮರ, ಕಥಾಂ=ಚರಿತ್ರೆಯನ್ನು, ವದಂತಃ ಸಂತಃ=ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಾ ಇರುವಾಗ, ಜಟಾಯುಷಃ=ಜಟಾಯುವಿನ, ತತ್=ಜಟಾಯುವಿನ ಮರಣದ ಆ ಕಥೆಯು, ಸಂಪಾತಿ ನಾಮ್ನಾಃ=ಸಂಪಾತಿ ನಾಮಕನಾದ ಗೃಧ್ರನ, ಶ್ರವಣಂಜಗಾಮ=ಕಿವಿಗೆ ಬಿದ್ದಿತು.

**ತಾತ್ಪರ್ಯ.**—ಸಮುದ್ರವನ್ನು ನೋಡಿ ಆಶ್ಚರ್ಯಮುಕ್ತರಾಗಿ ಜೀವದ ಮೇಲೆ ಆಶೆಬಿಟ್ಟು ಪ್ರಾಯೋಪವೇಶನ ಮಾಡಿಕೊಂಡಿದ್ದ ಆ ಕಪಿಶ್ರೇಷ್ಠರು ಒಬ್ಬರಿಗೊಬ್ಬರು ಸಂಸಾರಕ್ಕೆಮುಕ್ತಿದಾತೃವಾದ ಶ್ರೀರಾಮರ ಚರಿತ್ರೆಯನ್ನು ಕಥನ ಮಾಡುತ್ತಾ ಇದ್ದರು, ಆ ಸಂದರ್ಭದಲ್ಲಿ ಜಟಾಯುನಾಮಕ ಗೃಧ್ರರಾಜನು ಸೀತೆಯನ್ನು ಅಪಹಾರ ಮಾಡಿಕೊಂಡು ಹೋಗುತ್ತಿದ್ದ ರಾವಣನ ಸಂಗಡ ಯುದ್ಧಮಾಡಿ ಅವನಿಂದ ಪೆಟ್ಟುತಿಂದು ಬಿದ್ದಿದ್ದು ರಾಮರ ದರ್ಶನಾನಂತರ ಮೃತನಾದನೆಂಬ ಕಥೆಯನ್ನೂ ಪರಸ್ಪರ ಹೇಳಿಕೊಂಡರು. ಈ ಕಥೆಯು ಈ ಸ್ಥಳದಲ್ಲಿದ್ದ ಜಟಾಯುವಿನ ಅಣ್ಣನಾದ ಸಂಪಾತಿಯ ಕಿವಿಗೆ ಬಿದ್ದಿತು.

ಆ ಸಂಪಾತಿ ಯಾರು ಅವನು ಎಲ್ಲಿದ್ದನೆಂಬ ಕಥೆಯನ್ನು ವಿಶದಪಡಿಸುತ್ತಾರೆ :—

**ಶ್ಲೋಕ॥ ತಸ್ಯಾಗ್ರಜೋಽಸೌ ವರುಣಸ್ಯಸೂನುಃ ಸೂರ್ಯಸ್ಯ ಬಿಂಬಂ ಸ ಹತೇನಯಾತಃ । ಜವಂಪರೀಕ್ಷನ್ನಥ ತಂಸುತಪ್ತಂ ಗುಪ್ತ್ವಾವತತ್ರಕ್ಷಯ ಮಾಪ್ಯಚಾಪತತ್ ॥ ೪೯ ॥**

**ಅರ್ಥ:**—ಅಸೌ=ಆ ಸಂಪಾತಿಯು, ತಸ್ಯ = ಆ ಜಟಾಯುವಿಗೆ, ಅಗ್ರಜಃ=ಅಣ್ಣನು, ಸೂನುಃ =ಪುತ್ರನು, ಅಸೌ = ಈ ಸಂಪಾತಿಯು, ಸೂರ್ಯಸ್ಯ=ಸೂರ್ಯನ, ಜವಂ=ವೇಗವನ್ನು, ಪರೀಕ್ಷನ್=ಪರೀಕ್ಷಿಸಬೇಕೆಂದು ಅಪೇಕ್ಷೆಯುಳ್ಳವನಾಗಿ, ತೇನ=ಆ ಜಟಾಯುವಿನಿಂದ, ಸಹ=ಸಹಿತನಾಗಿ, ಬಿಂಬಂ= ಸೂರ್ಯನ ಬಿಂಬವನ್ನು, ಯಾತಃ = ಹೋಗಿ ಸೇರಿದನು. ಅಥ=ಅನಂತರ, (ಅಸೌ=ಈ ಸಂಪಾತಿಯು) ಸುತಪ್ತಂ=ಅತ್ಯಂತವಾಗಿ ತಾಪವನ್ನು ಹೊಂದಿದ ಜಟಾಯುವನ್ನು, ಗುಪ್ತ್ವಾ=ತನ್ನ ರಕ್ಕೆಗಳಿಂದ ಮುಚ್ಚಿ ರಕ್ಷಣೆ ಮಾಡಿ, ಪತತ್ರಕ್ಷಯಂ=ತನ್ನ ರೆಕ್ಕೆಗಳ ನಾಶನವನ್ನು, ಆಪ್ಯ=ಹೊಂದಿ, ಅಪಪಚ್ಚ=ಬಿದ್ದುಹೋದನು.

**ತಾತ್ಪರ್ಯ:**—ಸಂಪಾತಿಯು ಜಟಾಯುವಿನ ಅಣ್ಣನು ಸೂರ್ಯ ಸಾರಥಿಯಾದ ಅರುಣನ ಪುತ್ರನು. ಸಂಪಾತಿಯು ಸೂರ್ಯನ ವೇಗವನ್ನು ಪರೀಕ್ಷಿಸಬೇಕೆಂದು ಯೋಚಿಸಿ ತಮ್ಮನಾದ ಜಟಾಯುವಿನಿಂದ ಕೂಡಿ ಸೂ

ರ್ಯನ ಬಿಂಬವನ್ನು ಹೊಂದಿದನು. ಅಲ್ಲಿ ಜಟಾಯುವು ಸೂರ್ಯನ ಬಿಂಬದ ವೇಗವನ್ನು ಸಹಿಸಲಾರದೆ ಅತ್ಯಂತ ತಾಪವುಳ್ಳವನಾದನು. ಅವನನ್ನು ತನ್ನ ರೆಕ್ಕೆಗಳಲ್ಲಿ ಮುಚ್ಚಿಕೊಂಡು ರಕ್ಷಣೆ ಮಾಡಿದ್ದರಿಂದ ತನ್ನ ರೆಕ್ಕೆಗಳು ಸೂರ್ಯನ ತಾಪದಿಂದ ಸುಟ್ಟುಹೋದವು. ನಂತರ ಗಮನಕ್ಕೆ ಶಕ್ತಿಯಿಲ್ಲದೆ ಆ ಗಂಧಮಾಧನ ಪರ್ವತದಲ್ಲಿ ಒಂದಾನೊಂದು ವೃಕ್ಷದ ಮೇಲೆ ಬಿದ್ದಿದ್ದನು.

**ಶ್ಲೋಕ || ಸದಗ್ಧಪಕ್ಷಃ ಸವಿತೃ ಪ್ರತಾಪಾಚ್ಛ್ರುತ್ವೈವ ರಾಮಸ್ಯ ಕಥಾಂ ಸ ಪಕ್ಷೀ ಭೂತ್ವಾ ಪುನಶ್ಚಾಶು ಮೃತಿಂ ಜಟಾಯುಷಃ ಶುಶ್ರಾವ ಪೃಷ್ಟ್ವಾ ಪುನರೇವ ಸಮ್ಯಕ್ ||೫೦||**

ಅರ್ಥ:--ಸವಿತೃಪ್ರತಾಪಾತ್=ಸವಿತೃ=ಸೂರ್ಯನ, ಪ್ರತಾಪಾತ್=ಉಜ್ವಲ ತೇಜಸ್ಸಿನಿಂದ, ದಗ್ಧ=ಸುಟ್ಟುಹೋದ, ಪಕ್ಷಃ = ರೆಕ್ಕೆಗಳುಳ್ಳ, ಸಃ-ಆ ಸಂಪಾತಿಯು, ರಾಮಸ್ಯಕಥಾಂ=ಶ್ರೀರಾಮರ ಚರಿತ್ರೆಯನ್ನು, ಶ್ರುತ್ವೈವ=ಕೇಳೋಣಮಾತ್ರದಿಂದಲೇ, ಸಪಕ್ಷೀಸರ್=ರೆಕ್ಕೆಗಳಿಂದ ಯುಕ್ತನಾದವನಾಗಿ, ಪುನಶ್ಚ=ಪುನಃ, ಜಟಾಯುಷಃ=ಜಟಾಯುವಿನ, ಮೃತಿಂ = ಮರಣವನ್ನು, ಪುನಶ್ಚ=ತಿರಿಗಿಯೂ, ಪೃಷ್ಟ್ವಾ=ಕಪಿಗಳನ್ನು ಪ್ರಶ್ನೆಮಾಡಿ, ಸಮ್ಯನೇವ=ಭಕ್ತಿಪೂರ್ವಕವಾಗಿ, ಶುಶ್ರಾವ=ಶ್ರವಣ ಮಾಡಿದನು.

ತಾತ್ಪರ್ಯ:--ಸೂರ್ಯನ ಪ್ರಚಂಡವಾದ ತೇಜಸ್ಸಿನಿಂದ ಸುಟ್ಟುನಾಶವಾದ ರಕ್ಕೆಗಳುಳ್ಳ ಸಂಪಾತಿಯು ಶ್ರೀರಾಮರ ಕಥೆಯನ್ನು ಕೇಳಿದ ಕೂಡಲೇ ಅವನ ರಕ್ಕೆಗಳು ಪೂರ್ವದಂತೆ ಬೆಳೆದವು. ಅನಂತರ ಸಂಪಾತಿಯು ಕಪಿವರರನ್ನು ಪ್ರಶ್ನೆಮಾಡಿ ಭಕ್ತಿಯಿಂದ ರಾಮರ ಕಥೆಯನ್ನು ಪುನಃ ಶ್ರವಣಮಾಡಿದನು.

**ಶ್ಲೋಕ || ಸರಾವಣಸ್ಯಾಥಗತಿಂಸುತೋಕ್ತಾಂ ನಿವೇದ್ಯ ದೃಷ್ಟ್ವಾ ಜನಕಾತ್ಮಜಾಕೃತಿಂ | ಸ್ವಯಂತಥಾಶೋಕವನೇ ನಿಷಣ್ಣಾ | ಮುವೋಚ ದೇಭ್ಯೋ ಹರಿಪುಂಗವೇಭ್ಯಃ ||೫೧||**

ಅರ್ಥ:—ಅಥ=ಶ್ರೀರಾಮ ಕಥಾ ಶ್ರವಣಾನಂತರ, ಸಃ=ಈ ಸಂಪಾತಿಯು, ಸುತೋಕ್ತಾಂ = ತನ್ನ ಮಗನಾದ ಸುಪಾರ್ಶ್ವನಿಂದ ಹೇಳಲ್ಪಟ್ಟ, ರಾವಣಸ್ಯ=ರಾವಣನ, ಗತಿಂ=ಸ್ಥಿತಿಯನ್ನು, ನಿವೇದ್ಯ-ಹೇಳಿ, ಸ್ವಯಂ = ತಾನು, ಆಶೋಕವನೇ=ಅಶೋಕವನದಲ್ಲಿ, ನಿಷಣ್ಣಾಂ = ಕೂತುಕೊಂಡಿರ

ತಕ್ಕ, ಜನಕಾತ್ಮಜಾ=ಜನಕರಾಜನ ಕುಮಾರಿಯಾದ, ಸೀತಾಕೃತಿಂ=ಸೀತಾದೇವಿಯ ಆಕಾರವನ್ನು, ದೃಷ್ಟ್ವಾ=ನೋಡಿ, ತಥಾ=ಅದೇ ಪ್ರಕಾರ, ಉಪಿಷ್ಟೈಃ-ಪ್ರಾಯೋಪವೇಶನ ಮಾಡಿಕೊಂಡಿದ್ದ ಕಪಿಗಳಿಗೆ, ಅಪ್ರೋಚತ್=ಹೇಳಿದನು.

ತಾತ್ಪರ್ಯ.—ಸಂಪಾತಿಯು ಭಕ್ತಿಯಿಂದ ಪುನಶ್ಚ ಶ್ರೀರಾಮಕಥಾವನ್ನು ಕೇಳಿದನಂತರ ತನ್ನ ಮಗನಾದ ಸುಪಾರ್ಶ್ವನಿಂದ ಹೇಳಲ್ಪಟ್ಟ ಸೀತಾಪಹಾರ ಮಾಡಿಕೊಂಡು ಹೋಗುತ್ತಿದ್ದ ರಾವಣನ ಮಾರ್ಗವನ್ನು ಕಪಿವರರಿಗೆ ತಿಳಿಸಿದನು, ಮತ್ತು ಅಶೋಕವನದಲ್ಲಿ ಕೂತುಕೊಂಡಿರತಕ್ಕ ಜನಕಾತ್ಮಜಳಾದ ಸೀತಾದೇವಿಯ ಆಕಾರವನ್ನು ತಾನಿದ್ದ ಸ್ಥಳದಿಂದಲೇ ನೋಡಿ ಪ್ರಾಯೋಪವೇಶನ ಮಾಡಿಕೊಂಡಿದ್ದ ಕಪಿಶ್ರೇಷ್ಠರಿಗೆ ಹೇಳಿದನು.

ಶ್ಲೋಕ || ತತಸ್ತು ತೇ ಬ್ರಹ್ಮಸುತೇನಪೃಷ್ಟಾಃ ನ್ಯವೇದಯನ್ನಾತ್ಮಬಲಂ ಪೃಥಕ್ ಪೃಥಕ್ । ದಶೈವಚಾರಭ್ಯ ದಶೋತ್ತರಸ್ಯ ಕ್ರಮಾತ್ಪಥೋ ಯೋಜನ ತೋಭಿಯಾನೇ ||೩೨||

ಅರ್ಥ.—ತತಃ=ಸಂಪಾತಿಯ ವಾಕ್ಯಶ್ರವಣಾನಂತರ, ಬ್ರಹ್ಮಸುತೇನ-ಬ್ರಹ್ಮ ಪುತ್ರನಾದ ಜಾಂಬವಂತನಿಂದ, ಪೃಷ್ಟಾಃ-ಪ್ರಶ್ನೆಮಾಡಲ್ಪಟ್ಟ, ತೇ=ಆ ಕಪಿಶ್ರೇಷ್ಠರು, ದಶೈವಾರಭ್ಯ=ಹತ್ತು ಯೋಜನ, ಕ್ರಮಾತ್=ಕ್ರಮಕ್ರಮವಾಗಿ, ಮೊದಲು, ದಶೋತ್ತರಸ್ಯ=ಹತ್ತು ಯೋಜನ ಹೆಚ್ಚಿಚ್ಚಾಗುಳ್ಳ, ಪಥಃ=ಮಾರ್ಗದ, ಅಭಿಯಾನೇ=ದಾಟಿಹೋಗುವ ವಿಷಯದಲ್ಲಿ, ಪೃಥಕ್ಪೃಥಕ್=ಒಬ್ಬೊಬ್ಬರೂ ಬೇರೆಬೇರೆಯಾಗಿ, ಆತ್ಮಬಲಂ=ತಮ್ಮ ತಮ್ಮ ಸ್ವಬಲವನ್ನು, ನ್ಯವೇದಯನ್=ಹೇಳಿಕೊಂಡರು.

ತಾತ್ಪರ್ಯ.—ನಂತರ ಲಂಕಾವನ್ನು ಕುರಿತು ಹೋಗುವ ವಿಷಯದಲ್ಲಿ ಬ್ರಹ್ಮ ಪುತ್ರನಾದ ಜಾಂಬವಂತನು ಒಬ್ಬೊಬ್ಬರನ್ನಾಗಿ ಪ್ರಶ್ನಮಾಡಿದನು ಅವರಲ್ಲಿ ಒಬ್ಬರಿಗಿಂತ ಮತ್ತೊಬ್ಬರು ಕ್ರಮೇಣ ಹತ್ತು ಹತ್ತು ಯೋಜನ ಅಧಿಕವಾಗಿ ದಾಟಲು ಶಕ್ತಿಯುಳ್ಳವರೆಂದು, ತಮ್ಮ ತಮ್ಮ ಬಲಗಳನ್ನು ತಿಳಿಸಿದರು.

ವಿನ್ಯಾಸದಿಂದ, ಲೋಕಾನ್=ಭೂಲೋಕವನ್ನು, ಪ್ರವಾಕ್ಷಿಪಾಸ=ಹೊಂದಿದಾಗ, ನಂದಿರವಂ=ನಂದಿ ಎಂಬ ವಾದ್ಯಘೋಷವನ್ನು, ಪ್ರಕುರ್ವತಾ=ಮಾಡುತ್ತಿರುವ, ಮಯಾ=ನನ್ನಿಂದ, ಇದಂ=ಈ, ಜಗತ್ತ್ರಯಂ=೩ ಜಗತ್ತೂ, ಭ್ರಾಂತಂ=ಭ್ರಮಾಪೂರ್ವಕ ಓಡಾಡಲ್ಪಟ್ಟಿತು. ತದಾ=ಆ ಸಂದರ್ಭದಲ್ಲಿ, ಮೇರುತಃ=ಮೇರುಪರ್ವತದ ಘಾತದ್ದೆಸೆಯಿಂದ, ಮಮ = ನನ್ನ, ಜಾನು=ಮೊಣಕಾಲು, ಸವೇದನಂ=ವೇದನಯುಕ್ತವಾದದ್ದಾಗಿ ಆಯಿತು.

ತಾತ್ಪರ್ಯ.—ಶ್ರೀವಿಷ್ಣುವು ವಾಮನಾವತಾರದಲ್ಲಿ ೩ ಪಾದಗಳ ವಿಕ್ಷೇಪಕ್ರಮದಿಂದ ಭೂಲೋಕ, ಭುವರ್ಲೋಕ (ಅಂತರಿಕ್ಷ) ಸ್ವರ್ಗಲೋಕ ಈ ೩ ಲೋಕಗಳನ್ನು ಪ್ರಹ್ಲಾದನ ಪೌತ್ರನಾದ ಬಲಿಚಕ್ರವರ್ತಿಯಿಂದ ಪಡೆದನು. ಆ ಕಾಲದಲ್ಲಿ ನಾನು ಮಹಾಸಂತೋಷದಿಂದ ನಂದಿ ಎಂಬ ವಾದ್ಯಘೋಷಮಾಡುತ್ತಾ ೩ ಲೋಕವನ್ನೂ ಸಂಚರಿಸಿದೆನು. ಆ ಸಂದರ್ಭದಲ್ಲಿ ಮೇರುಪರ್ವತವು ನನ್ನ ಕಾಲಿಗೆ ತಗಲಿ ಮೊಣಕಾಲಿನ ಸಂಧಿಯು ವೇದನವಾಯಿತು.

**ಶ್ಲೋಕ || ಅತೋ ಜವೋ ಮೇ ನಹಿ ಪೂರ್ವಸಮ್ಮಿತಃ ಪುರಾತ್ವಹಂ ಷಣ್ಣವತಿಪ್ಲವೋಽಸ್ಮಿ | ತತಃ ಕುಮಾರೋಽಂಗದ ಆಹ ಚಾಸ್ಮಾಚ್ಛತಂ ಪ್ಲವೇಯೇನ ತತೋಽಭಿಜಾನೇ ||೩೫||**

ಅರ್ಥ.—ಸಃ=ಆ ಜಾಂಬವಂತನು, ಅತಃ=ಆದಕಾರಣ, ಮೇ=ನನ್ನ ಜವಃ=ವೇಗವು, ಪೂರ್ವಸಮ್ಮಿತಃ=ಮೊದಲಿನಷ್ಟು, ನಹಿ=ಇಲ್ಲವು. ಅಹಂ=ನಾನು, ಪುರಾತು=ಪೂರ್ವದಲ್ಲಾದರೋ, ಷಣ್ಣವತಿಪ್ಲವಃ=೯೬ ಯೋಜನದಷ್ಟು ದೂರ ಹಾರತಕ್ಕವನು, ಅಸ್ಮಿ=ಆಗಿದ್ದೆನು, ಇತಿ=ಈ ರೀತಿಯಾಗಿ, ಅವೋಚತ್=ಹೇಳಿದನು. ತತಃ=ಮತ್ತೆ, ಕುಮಾರಃ=ವಾಲಿಯ ಪುತ್ರನಾದ ಅಂಗದಃ=ಅಂಗದನು, ಅಸ್ಮಾತ್=ಈ ಮಹೇಂದ್ರಪರ್ವತದಿಂದ, ಶತಂ=೧೦೦ ಯೋಜನವನ್ನು, ಪ್ಲವೇಯಂ=ದಾಟಬಲ್ಲೆನು. ತತಃ=ಉಲ್ಲಂಘನ ಮಾಡಿದನಂತರ, ನಾಭಿಜಾನೇ=ನನಗೆ ತಿಳಿಯದು (ಪುನಃ ಹಿಂದಕ್ಕೆ ದಾಟಿಕೊಂಡು ಬರುವಷ್ಟು ಶಕ್ತಿ ಇದೆಯೋ ಇಲ್ಲವೋ ತಿಳಿಯದು.)

ತಾತ್ಪರ್ಯ.—ಜಾಂಬವಂತನು ಪೂರ್ವದಲ್ಲಿ ನಾನು ತೊಂಬತ್ತಾರು ಯೋಜನ ದೂರ ಹಾರುತ್ತಾ ಇದ್ದೆನೆಂದು ಹೇಳಿದ್ದನು. ಆಮೇಲೆ ವಾಲಿಯ ಪುತ್ರನಾದ ಅಂಗದನು ಈ ಮಹೇಂದ್ರ ಪರ್ವತದಿಂದ ನೂರು ಯೋ

ಜನ ವಿಸ್ತೀರ್ಣ ಹಾರಬಲ್ಲೆನು, ಅನಂತರ ಸೀತಾನ್ವೇಷಣಾದಿಗಳನ್ನು ಮಾಡಿಕೊಂಡು ಪುನಃ ಇಷ್ಟು ದೂರ ದಾಟಿಕೊಂಡು ಬರಲು ನನಗೆ ಶಕ್ತಿ ಇದೆಯೋ ಇಲ್ಲವೋ ತಿಳಿಯದೆಂದನು.

**ಶ್ಲೋಕ || ಅಪೂರಿತೇ ತೈಃ ಸಕಲೈಃ ಶತಸ್ಯ ಗಮಾಗಮೇ ಶತ್ರುಬಲಂಚ ವೀಕ್ಷ್ಯ | ಸುದುರ್ಗಮತ್ವಂಚ ನಿಶಾಚರೇಶ ಪೂರ್ಯಾಃ ಸಧಾತುಃ ಸುತ ಆಬಭಾಷೇ ||೫೬||**

ಅರ್ಥ.—ಸಕಲೈಃ=ಸಮರ್ಥರಾದ, ತೈಃ=ಕಪಿಶ್ರೇಷ್ಠರಿಂದ, ಶತಸ್ಯ=ಶತಯೋಜನ ಫಾಸಲೆಯ, ಗಮಾಗಮೇ=ಹೋಗುವ ಮತ್ತು ಹೋಗಲಾರದ ವಿಷಯವು, ಅಪೂರಿತೇಸತಿ=ಪೂರ್ಣಮಾಡುತ್ತಿರಲಾಗಿ, ಧಾತುಃ=ಬ್ರಹ್ಮದೇವರ, ಸುತಃ=ಪುತ್ರನಾದ, ಸಃ–ಆ ಜಾಂಬವಂತನು, ನಿಶಾಚರೇಶ ಪೂರ್ಯಾಃ–ನಿಶಾಚರೇಶ–ರಾತ್ರಿಯಲ್ಲಿ ಸಂಚಾರಮಾಡತಕ್ಕ ರಾಕ್ಷಸರಿಗೆ, ಸ್ವಾಮಿಯಾದ ರಾವಣನ, ಪುರ್ಯಾಃ–ಲಂಕಾಪಟ್ಟಣದ, ಸುದುರ್ಗಮತ್ವಂ–ಪ್ರವೇಶಮಾಡಲು ಅತ್ಯಂತ ಅಸಾಧ್ಯವಾದ ವಿಷಯವನ್ನೂ, ಶತ್ರುಬಲಂ ಚ–ಶತ್ರುವಾದ ರಾವಣನ ಬಲವನ್ನೂ ಸಹ, ವಿಕ್ಷ್ಯ ಚ=ಪರ್ಯಾಲೋಚಿಸಿ, ಅಬಭಾಷೆ=ಮಾತನಾಡಿದರು.

ತಾತ್ಪರ್ಯ.—ಅಲ್ಲಿರತಕ್ಕ ಸಮಸ್ತ ಕಪಿಶ್ರೇಷ್ಠರೂ ತಮ್ಮ ಬಲಾಬಲಗಳನ್ನು ವಿಮರ್ಶೆಮಾಡಿ ನೂರು ಯೋಜನ ದೂರ ದಾಟುವುದನ್ನು ದಾಟದೆ ಇರುವುದನ್ನು ವ್ಯವಸ್ಥೆಮಾಡಿದರು. ಅನಂತರ ಬ್ರಹ್ಮಪುತ್ರನಾದ ಜಾಂಬವಂತನು, ರಾಕ್ಷಸ ಪ್ರಭುವಾದ ರಾವಣನ ಲಂಕಾಪಟ್ಟಣ ಪ್ರವೇಶದ ಅತ್ಯಂತ ಅಸಾಧ್ಯವಾದ ವಿಷಯವನ್ನೂ ಮತ್ತೂ ರಾವಣನ ಬಲವನ್ನೂ ಸಹ ಪರ್ಯಾಲೋಚಿಸಿ ಮಾತನಾಡಿದನು.

**ಶ್ಲೋಕ || ಅಯಂಹಿ ಗೃಧ್ರಃ ಶತಯೋಜನಂ ಗಿರಿಂ ತ್ರಿಕೂಟ ಮಾಹೇತ ಉತಾತ್ರ ವಿಘ್ನಾಃ | ಭವೇಯುರನ್ಯೇಽಪಿ ತತೋಽಹನೂಮಾನೇಕಃ ಸಮರ್ಥೋನಪರೋಽಸ್ತಿ ಕಶ್ಚಿತ್ ||೫೭||**

ಅರ್ಥ.—ಅಯಂ=ಈ, ಗೃಧ್ರಃಹಿ=ಗೃಧ್ರರೂಪನಾದ ಸಂಪಾತಿಯು ಇತಃ=ಇಲ್ಲಿಂದ, ಶತಯೋಜನಂ–ನೂರು ಯೋಜನದಲ್ಲಿರತಕ್ಕ ಲಂಕಾಪಟ್ಟಣವನ್ನೂ ಸುತ್ತಿಕೊಂಡಿರುವ ತ್ರಿಕೂಟನಾಮಕವಾದ, ಗಿರಿಂ=ಪರ್ವತವನ್ನೂ, ಉತ=ಮತ್ತು, ಅತ್ರ = ಅಲ್ಲದೆ ಹೋಗತಕ್ಕ ವಿಷಯದಲ್ಲಿ,

ಅನ್ಯೇ=ಇತರವಾದ, ವಿಘ್ನಾಃಅಪಿ=ಮಧ್ಯದಲ್ಲಿ ಅನೇಕ ತೊಂದರೆಗಳೂ ಕೂಡ, ಭವೇಯುಃ=ಉಂಟಾಗಬಹುದೆಂತಲೂ, ಆಹ-ಹೇಳಿದನು, ತಸ್ಮಾತ್-ಆದ್ದರಿಂದ, ಹನೂಮಾನ್-ಹನುಮಂತರು, ಏಕಃ-ಒಬ್ಬರೇ, ಸಮರ್ಥಃ=ಅಲ್ಲಿಗೆ ಹೋಗಿ ಬರಲು ಸಮರ್ಥರು, ಪರಃ=ಇನ್ನೊಬ್ಬನು, ಕಶ್ಚಿತ್=ಯಾರೂ, ನಾಸ್ತಿ=ಇಲ್ಲವು. ಇತಿ=ಹೀಗೆಂದು, ಜಾಂಬವಾನ್=ಜಾಂಬವಂತನು, ಬಭಾಷೇ=ಹೇಳಿದನು.

ತಾತ್ಪರ್ಯ—ಜಾಂಬವಂತನು ಹೇಳುತ್ತಾನೆ. ಈ ಗೃಧ್ರ ರೂಪನಾದ ಸಂಪಾತಿಯು ಲಂಕಾಪಟ್ಟಣವನ್ನು ಸುತ್ತಿಕೊಂಡಿರುವ ತ್ರಿಕೂಟಪರ್ವತವು ಇಲ್ಲಿಗೆ ಒಂದುನೂರು ಯೋಜನ ದೂರದಲ್ಲಿವೆ ಎಂದೂ ಮತ್ತೂ ಅಲ್ಲಿಗೆ ಹೋಗಬೇಕಾದರೆ ಅನೇಕ ತೊಂದರೆಗಳುಂಟಾಗುತ್ತವೆ ಎಂದು ಹೇಳುತ್ತಾನೆ. ಆದುದರಿಂದ ಅಲ್ಲಿಗೆ ಹೋಗಿ ಹಿಂತಿರುಗಿ ಬರುವುದಕ್ಕೆ ಹನುಮಂತರೊಬ್ಬರೇ ಸಮರ್ಥರು. ಮತ್ತಾರೂ ಇಲ್ಲ.

ಶ್ಲೋಕ || ಉಕ್ತ್ವಾಥ ಇತ್ಥಂ ಪುನರಾಹ ಸೂನುಂ ಪ್ರಾಣಸ್ಯ ನಿಸ್ಸೀಮಬಲಂ
ಪ್ರಕಾಶಯನ್ । ತ್ವಮೇಕ ಏವಾತ್ರಪರಂ ಸಮರ್ಥಃ ಕುರುಷ್ವಚೈತ
ತ್ಪರಿಪಾಹಿ ವಾನರಾನ್ ||೫೪||

ಅರ್ಥ.—ಸಃ-ಜಾಂಬವಂತನು, ಇತ್ಥಂ=ಈ ರೀತಿಯಾಗಿ, ಉಕ್ತ್ವಾ=ಹೇಳಿ, ಪುನಃ=ತಿರುಗಿ, ನಿಸ್ಸೀಮಬಲಂ=ಅಪಾರ ಬಲವುಳ್ಳ, ಪ್ರಾಣಸ್ಯ=ವಾಯುದೇವರ, ಪುತ್ರಂ=ಕುಮಾರರಾದ ಹನುಮಂತರನ್ನು ಕುರಿತು, ಪ್ರಕಾಶಯನ್=ಅವರ ಬಲವನ್ನು ಪ್ರಕಟನಮಾಡುವುದಕ್ಕಾಗಿ, ಈ ರೀತಿ ಮಾತನಾಡಿದನು. " ಹನುಮಂತರೇ ! ಅತ್ರ=ಈ ಸೀತಾನ್ವೇಷಣ ಕಾರ್ಯದಲ್ಲಿ, ತ್ವಂಏಕಏವ=ನೀವೊಬ್ಬರೇ, ಪರಂಸಮರ್ಥಃ-ಅತ್ಯಂತ ಸಮರ್ಥರು. ಏತತ್=ಈ ಕಾರ್ಯವನ್ನು, ಕುರುಷ್ವ-ನೀವು ಮಾಡಿರಿ, ವಾನರಾನ್ಚ=ಈ ವಾನರರನ್ನು, ಪರಿಪಾಹಿ=ಸಂರಕ್ಷಣೆ ಮಾಡಿರೆಂದು, ಆಹ=ಹೇಳಿದನು.

ತಾತ್ಪರ್ಯ.—ಜಾಂಬವಂತನು ಪೂರ್ವೋಕ್ತ ರೀತಿಯಾಗಿ ಹೇಳಿ ಪುನಃ ವಾಯುಪುತ್ರರಾದ ಹನುಮಂತರನ್ನು ಕುರಿತು ಅಪಾರ ಬಲವುಳ್ಳವರನ್ನಾಗಿ ಪ್ರಶಂಸನಮಾಡಿ ಈ ಸಮುದ್ರತರಣ ಸೀತಾನ್ವೇಷಣಾದಿ ಕಾರ್ಯಗಳನ್ನು ಮಾಡುವುದರಲ್ಲಿ ನೀವೊಬ್ಬರೇ ಅತ್ಯಂತ ಸಮರ್ಥರು ಮತ್ತಾರೂ ಇಲ್ಲವು. ಆದುದರಿಂದ ಈ ಕಾರ್ಯವನ್ನು ನೀವೇ ಮಾಡಿರಿ ಈ ಸಕಲ ವಾನರರನ್ನೂ ಸುಗ್ರೀವನ ಶಿಕ್ಷೆಯಿಂದ ತಪ್ಪಿಸಿ ರಕ್ಷಣೆ ಮಾಡಿರೆಂದನು.

**ಶ್ಲೋಕ ॥ ಇತೀರಿತೋಽಸೌ ಹನುಮಾನ್ನಿಜೇಪ್ಸಿತಂ ತೇಷಾಮ ಶಕ್ತಿಂ ಪ್ರಕ ಟಾಂ ವಿಧಾಯ । ಅವರ್ಧತಾಶು ಪ್ರವಿಚಿಂತ್ಯ ರಾಮಂ ಸಂಪೂರ್ಣ ಶಕ್ತಿಂ ಚರಿತೋಽಸ್ತದಾಜ್ಞಾಂ ॥೫೯॥**

ಅರ್ಥ.—ಇತಿ=ಈ ರೀತಿಯಾಗಿ, ನಿಜೇಪ್ಸಿತಂ-ತನಗೆ ಅಪೇಕ್ಷಿತವಾದುದನ್ನು, ಈರಿತಃ=ಜಾಂಬವಂತನಿಂದ ಹೇಳಿಸಿಕೊಳ್ಳಲ್ಪಟ್ಟ, ಅಸೌ=ಈ, ಹನೂಮಾನ್=ಹನುಮಂತನು, ತೇಷಾಂ-ವಾನರರ, ಅಶಕ್ತಿಂ = ಅಸಾಮರ್ಥ್ಯವನ್ನು, ಪ್ರಕಟಾಂ=ಪ್ರಕಟನೆಯನ್ನು, ವಿಧಾಯ=ಮಾಡಿ, ಆಶು=ಜಾಗ್ರತೆಯಾಗಿ, ಸಂಪೂರ್ಣಶಕ್ತಿಂ=ಪರಿಪೂರ್ಣ ಪರಾಕ್ರಮ ಉಳ್ಳ, ರಾಮಂ=ಶ್ರೀರಾಮನನ್ನು, ಪ್ರವಿಚಿಂತ್ಯ=ಚೆನ್ನಾಗಿ ಧ್ಯಾನಮಾಡಿ, ತದಾಜ್ಞಾಂ=ಶ್ರೀರಾಮನ ಆಜ್ಞಾರೂಪವಾದ ಸೀತಾನ್ವೇಷಣ ಕಾರ್ಯವನ್ನು, ಚರಿತೋಃ-ನಡಿಸುವದಕ್ಕಾಗಿ, ಅವರ್ಧತ-ತಮ್ಮ ದೇಹವನ್ನು ಬೆಳಿಸಿದನು.

ತಾತ್ಪರ್ಯ.—ಜಾಂಬವಂತನು ಹನುಮಂತರಿಗೆ ಅಪೇಕ್ಷಿತವಾದದನ್ನೇ ಹೇಳಿದ್ದನ್ನು ಹನುಮಂತರು ಕೇಳಿ, ಬೇರೆ ಕಪಿಗಳ ಅಶಕ್ತಿಯನ್ನು ಪ್ರಕಟನಮಾಡಿ, ಸಂಪೂರ್ಣ ಶಕ್ತಿಯುಳ್ಳ ಶ್ರೀರಾಮಚಂದ್ರನನ್ನು ಮನಸಾ ಧ್ಯಾನಮಾಡಿ, ಶ್ರೀರಾಮನ ಆಜ್ಞಾಪರಿಪೂರ್ಣ ಮಾಡುವದಕ್ಕಾಗಿ ತಮ್ಮ ದೇಹವನ್ನು ಅಭಿವೃದ್ಧಿ ಮಾಡಿದರು.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಪೂಜ್ಯಪಾದ ವಿರಚಿತೇ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯೇ ಶ್ರೀರಾಮಚರಿತೇ ಸಮುದ್ರ ತರಣ ನಿಶ್ಚಯೋನಾಮ ಷಷ್ಠೋಽಧ್ಯಾಯಃ ಸಮಾಪ್ತಃ ॥

ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ
ರಚಿಸಲ್ಪಟ್ಟ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯವೆಂಬ
ಗ್ರಂಥದಲ್ಲಿ ಶ್ರೀರಾಮಚರಿತ್ರೆಯಲ್ಲಿ ಸಮುದ್ರೋಲ್ಲಂಘನ
ನಿಶ್ಚಯರೂಪವಾದ ೬ನೆಯ ಅಧ್ಯಾಯವು ಮುಗಿಯಿತು.
ಶ್ರೀಸೀತಾ ಲಕ್ಷ್ಮಣ ಭರತ ಶತೃಘ್ನ ಹನುಮತ್ಸಮೇತ
ಶ್ರೀರಾಮಚಂದ್ರಃ ಪ್ರಿಯತಾಮ್.
॥ ಶ್ರೀಕೃಷ್ಣಾರ್ಪಣಮಸ್ತು ॥



ಏಳನೇ ಅಧ್ಯಾಯ.

—:o:—

# ಸುಂದರಕಾಂಡ.

ಶ್ಲೋಕ॥ ರಾಮಾಯ ಶಾಶ್ವತಸುವಿಸ್ತೃತ ಷಡ್ಗುಣಾಯ ಸರ್ವೇಶ್ವರಾಯ
ಬಲವೀರ್ಯಮಹಾರ್ಣವಾಯ। ನತ್ವಾಲಿಲಂಘಯಿಷುರರ್ಣವ ಮು
ತ್ಪಪಾತ ನಿಷ್ಪೀಡ್ಯತಂ ಗಿರಿವರಂ ಪವನಸ್ಯ ಸೂನುಃ ॥೧॥

ಅರ್ಥ.—ಅರ್ಣವಂ=ಸಮುದ್ರವನ್ನು, ಲಿಲಂಘಯಿಷುಃ=ಹಾರಲಪೇಕ್ಷಿಸಿದ, ಪವನಸ್ಯಸೂನುಃ=ವಾಯುಪುತ್ರರಾದ ಹನುಮಂತದೇವರು, ಶಾಶ್ವತಸುವಿಸ್ತೃತ ಷಡ್ಗುಣಾಯ=ಶಾಶ್ವತ = ಸರ್ವಕಾಲದಲ್ಲಿಯೂ, ಸುವಿಸ್ತೃತ= ಅನೇಕಪ್ರಕಾರವಾಗಿ ಪರಿಚ್ಛೇದ ಶೂನ್ಯಗಳಾದಂಥ, ಷಡ್ಗುಣಾಯ= ಐಶ್ವರ್ಯ, ವೀರ್ಯ, ಯಶಸ್ಸು, ತೇಜಸ್ಸು, ಜ್ಞಾನ ಮತ್ತು ವಿಜ್ಞಾನಗಳೆಂಬ ಷಡ್ಗುಣಗಳುಳ್ಳ, ಸರ್ವೇಶ್ವರಾಯ = ಸರ್ವ ಜಗತ್ತಿಗೂ ಈಶ್ವರನಾದ, ಬಲವೀರ್ಯ ಮಹಾರ್ಣವಾಯ = ಬಲ ಮತ್ತು ಪರಾಕ್ರಮಗಳಿಗೆ ಸಮುದ್ರದಂತೆ ಇರುವ, ರಾಮಾಯ=ಶ್ರೀರಾಮಚಂದ್ರ ದೇವರಿಗೆ, ನತ್ವಾ= ನಮಸ್ಕರಿಸಿ, ತಂ=ಆ, ಗಿರಿವರಂ = ಶ್ರೇಷ್ಠವಾದ ಮಹೇಂದ್ರಾಚಲವನ್ನು, ನಿಷ್ಪೀಡ್ಯ=ಕಾಲುಗಳಿಂದ ವತ್ತಿ, ಉತ್ಪಪಾತ=ಹಾರಿದರು.

ತಾತ್ಪರ್ಯ.—ಸಮುದ್ರವನ್ನು ಹಾರಲಪೇಕ್ಷಿಸಿದ ಹನುಮಂತದೇವರು, ಸರ್ವದೇಶಕಾಲಗಳಲ್ಲಿಯೂ ಪರಿಚ್ಛೇದ ಶೂನ್ಯಗಳಾದ ಷಡ್ಗುಣವುಳ್ಳ, ಸಮುದ್ರವು ಹೇಗೆ ಗಭೀರವೋ ಹಾಗೆ ಬಲಪರಾಕ್ರಮಗಳಲ್ಲಿ ಅಗಾಧನಾದ, ಸರ್ವೇಶ್ವರನಾದ ಶ್ರೀರಾಮಚಂದ್ರ ದೇವರಿಗೆ ನಮಸ್ಕರಿಸಿ ಮಹೇಂದ್ರಾಚಲವನ್ನು ಪಾದಗಳಿಂದ ವತ್ತಿ ಹಾರಿದರು.

**ಶ್ಲೋಕ॥ ಚುಕ್ಷೋಭ ವಾರಿಧಿರನುಪ್ರಯಯೌ ಚ ಶೀಘ್ರಂ ಯಾದೋಗಣೈಃ ಸಹತದೀಯ ಬಲಾಭಿ ಕೃಷ್ಟಃ। ವೃಕ್ಷಾಶ್ಚ ಪರ್ವತಗತಾಃ ಪವನೇನ ಪೂರ್ವಂ ಕ್ಷಿಪ್ತೋಽರ್ಣವೇ ಗಿರಿರುದಾಗಮದಸ್ಯ ಹೇತೋಃ ॥೨॥**

ಅರ್ಥ.—ತದೀಯ ಬಲಾಭಿಕೃಷ್ಟಃ=ಹನುಮಂತದೇವರ ಬಲದಿಂದ ಸೆಳೆಯಲ್ಪಟ್ಟ, ವಾರಿಧಿಃ=ಸಮುದ್ರವು, ಚುಕ್ಷೋಭ=ಅಲ್ಲೋಲ ಕಲ್ಲೋಲವಾಯಿತು, ಚ=ಮತ್ತು, ಪರ್ವತಗತಾಃ=ಮಹೇಂದ್ರಗಿರಿಯಲ್ಲಿದ್ದ, ವೃಕ್ಷಾಶ್ಚ=ಮರಗಳೂಕೂಡ, ಯಾದೋಗಣೈಃ ಸಹ—ಜಲಚರಗಳಿಂದ ಸಹಿತವಾಗಿ, ತದೀಯಬಲಾಭಿಕೃಷ್ಟಃ=ಹನುಮತ್ಸಂಬಂಧ ಬಲದಿಂದ ಸೆಳೆಯಲ್ಪಟ್ಟು, ಶೀಘ್ರಂ=ವೇಗವಾಗಿ, ಅನುಪ್ರಯಯೌ=ಹಿಂಬಾಲಿಸಿದುವು. ಪೂರ್ವಂ=ಹಿಂದೆ, ಪವನೇನ = ವಾಯುದೇವರಿಂದ, ಅರ್ಣವೇ = ಸಮುದ್ರದಲ್ಲಿ, ಕ್ಷಿಪ್ತಂ=ಹಾಕಲ್ಪಟ್ಟ, ಗಿರಿಃ=ಮೈನಾಕಪರ್ವತವು, ಅಸ್ಯ=ಮಾರುತಿಯ, ಹೇತೋಃ=ವಿಶ್ರಾಂತಿಗೋಸ್ಕರ, ಉದಾಗಮತ್ = ಸಮುದ್ರದೊಳಗಿನಿಂದ ಮೇಲಕ್ಕೆದ್ದಿತು.

ತಾತ್ಪರ್ಯ.—ಮಾರುತಿಯ ಲಂಘನ ರಭಸದಿಂದುಂಟಾದ ಗಾಳಿಯ ವೇಗದಿಂದ ಆಕರ್ಷಿಸಲ್ಪಟ್ಟ ಸಮುದ್ರವು ಅಲ್ಲೋಲಕಲ್ಲೋಲವಾಯಿತು. ಸಮುದ್ರದೊಳಗಿನ ಜಲಚರಗಳು ಗಾಳಿಯಿಂದ ತೂರಲ್ಪಟ್ಟು ಮಾರುತಿಯ ಹಿಂದೆ ಹೊರಟವು. ಮಹೇಂದ್ರಾಚಲದಲ್ಲಿನ ವೃಕ್ಷಗಳು ಮಾರುತಿಯ ಬಲರಭಸಕ್ಕೆ ಬುಡಸಹಿತ ಕೀಳಲ್ಪಟ್ಟು, ಪ್ರಯಾಣಸ್ಥನಾದ ಬಂಧುವನ್ನು ಸಾಗಕಳುಹಲು ಬರುವಂತೆ ಮಾರುತಿಯನ್ನು ಹಿಂಬಾಲಿಸಿದವು. ಹಿಂದೆ ವಾಯುದೇವರಿಂದ ಸಮುದ್ರದಲ್ಲಿ ಹಾಕಲ್ಪಟ್ಟ ರಕ್ಷಿತನಾದ ಮೈನಾಕನು ಆ ವಾಯು ಕುಮಾರರಾದ ಹನುಮಂತ ದೇವರಿಗೆ ವಿಶ್ರಾಂತಿಯನ್ನುಂಟುಮಾಡಲು ಸಮುದ್ರದಿಂದ ಮೇಲಕ್ಕೆದ್ದನು.

ಅವತಾರಿಕೆ.—ವಾಯುದೇವರು ಮೈನಾಕನನ್ನು ಸಮುದ್ರದಲ್ಲಿ ಹಾಕಲು ಕಾರಣವೇನು? ಮಾರುತಿಯ ವಿಶ್ರಾಂತ್ಯರ್ಥವಾಗಿ ಆತನು ಸಮುದ್ರದಿಂದೇಳಲು ಕಾರಣವೇನೆಂಬುದನ್ನು ತಿಳಿಸುತ್ತಾರೆ :—

ಶ್ಲೋಕ॥ ಶಾಲೋಃ ಹರಸ್ಯ ಗಿರಿಪಕ್ಷವಿನಾಶಕಾಲೇ ಕ್ಷಿಪ್ತೋಽರ್ಣವೇ ಸಮು
ರುತೋ ವರ್ಽರಿತಾತ್ಮಪಕ್ಷಃ। ಹೈಮೋಗಿರಿಃ ಪವನಜಸ್ಯ ತು ವಿಶ್ರ
ಮಾರ್ಥೆ ಮುದ್ಭಿದ್ಯ ವಾರಿಧಿಮವರ್ಧ ದನೇಕಸಾನುಃ ॥೩॥

ಅರ್ಥ.—ಗಿರಿಪಕ್ಷವಿನಾಶಕಾಲೇ=ಇಂದ್ರನು ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದ ಕಾಲದಲ್ಲಿ, ಹರಸ್ಯ = ರುದ್ರದೇವರ, ಶಾಲಃ=ಮೈದುನನಾದ ಮೈನಾಕನು, ಮರುತಃ=ವಾಯುದೇವರ ದೆಸೆಯಿಂದ, ಅರ್ಣವೇ=ಸಮುದ್ರದಲ್ಲಿ, ಕ್ಷಿಪ್ತಃ=ಹಾಕಲ್ಪಟ್ಟನು. (ಆದ್ದರಿಂದ) ಉರ್ವರಿತಾತ್ಮಪಕ್ಷಃ = ರಕ್ಷಿಸಲ್ಪಟ್ಟ ರೆಕ್ಕೆಗಳುಳ್ಳವನಾದನೋ, ಸಃ=ಅಂಥಾ, ಅನೇಕಸಾನುಃ—ಬಹುಶಿಖರಗಳುಳ್ಳ, ಹೈಮೋಗಿರಿಃ—ಸುವರ್ಣಪರ್ವತನು ಅಥವಾ ಹಿಮವತ್ಪುತ್ರನಾದ ಮೈನಾಕನು, ಪವನಜಸ್ಯ – ವಾಯುಕುಮಾರರಾದ ಹನುಮಂತದೇವರ, ವಿಶ್ರಮಾರ್ಥಂ = ಆಯಾಸಪರಿಹಾರಕ್ಕೋಸ್ಕರ, ವಾರಿಧಿಂ=ಸಮುದ್ರವನ್ನು, ಉದ್ಭಿದ್ಯ=ಭೇದಿಸಿಕೊಂಡು, ಅವರ್ಧತ–ಮೇಲಕ್ಕೆ ಕಾಣಿಸಿಕೊಂಡನು.

ತಾತ್ಪರ್ಯ.—ಪೂರ್ವದಲ್ಲಿ ಇಂದ್ರನು ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸುತ್ತಾ ಬಂದಕಾಲದಲ್ಲಿ ವಾಯುದೇವರು ಮೈನಾಕನನ್ನು ಸಮುದ್ರದಲ್ಲಿ ತಂದುಹಾಕಿ ರೆಕ್ಕೆಗಳು ಹೋಗದಂತೆ ಕಾಪಾಡಿದರು. ಗಿರಿಜೆಯು ಭ್ರಾತೃವಾದ್ದರಿಂದ ರುದ್ರದೇವರ ಮೈದುನನಾದ ಮೈನಾಕನು ವಾಯುದೇವರ ಉಪಕಾರವನ್ನು ಸ್ಮರಿಸಿ ಕೃತಜ್ಞತೆಯನ್ನು ತೋರಿಸಲು ವಾಯುಕುಮಾರನ ವಿಶ್ರಾಂತ್ಯರ್ಥವಾಗಿ ಸಮುದ್ರದಿಂದ ಮೇಲಕ್ಕೆ ಬಂದನು.

ಶ್ಲೋಕ॥ ನೈವಾತ್ರ ವಿಶ್ರಮಣಮೈಚ್ಛದ ವಿಶ್ರಮೋಽಸೌ ನಿಸ್ಸೀಮಪೌರುಷಬ
ಲಸ್ಯ ಕುತಃ ಶ್ರಮೋಽಸ್ಯ। ಆಶ್ಲಿಷ್ಯ ಪರ್ವತವರಂ ಸ ದದರ್ಶ
ಗಚ್ಛನ್ ದೇವೈಸ್ತು ನಾಗಜನನೀಂ ಪ್ರಹಿತಾಂ ವರೇಣ ॥೪॥

ಅರ್ಥ.—ಅವಿಶ್ರಮಃ=ಶ್ರಮರಹಿತರಾದ, ಅಸೌ=ಹನುಮಂತದೇವರು, ಅತ್ರ=ಮೈನಾಕಪರ್ವತದಲ್ಲಿ, ವಿಶ್ರಮಣಂ = ವಿಶ್ರಾಂತಿಯನ್ನು ನೈವ

ಮೇರೆಯಿಲ್ಲದ, ಪೌರುಷಬಲಸ್ಯ=ಬಲ ಪೌರುಷವುಳ್ಳ, ಅಸ್ಯ=ಹನುಮಂತ ದೇವರಿಗೆ, ಶ್ರಮಃ=ಆಯಾಸವು, ಕುತಃ?=ಎಲ್ಲಿಬಂತು? ಅಂದರೆ ಶ್ರಮ ವಿಲ್ಲವೇ ಇಲ್ಲವೆಂದರ್ಥ. (ಮೇಲಕ್ಕೆ ಎದ್ದುಬಂದ ಮೈನಾಕನ ಇಷ್ಟವನ್ನು ಸಾರ್ಥಕಪಡಿಸಲು) ಪರ್ವತವರಂ–ಮೈನಾಕನನ್ನು, ಆಶ್ಲಿಷ್ಯ=ಆಲಿಂಗಿಸಿ, ಗಚ್ಛನ್=ಹೋಗುತ್ತಾ ಇದ್ದಂಥಾ, ಸಃ=ಹನುಮಂತದೇವರು, ದೇವೈಸ್ತು= ದೇವತೆಗಳ, ವರೇಣ=ವರದಿಂದ, ಪ್ರಹಿತಾಂ= ಕಳುಹಿಸಲ್ಪಟ್ಟ, ನಾಗಜನ ನೀಂ=ಸುರಸೆಯನ್ನು, ದದರ್ಶ–ನೋಡಿದರು.

ತಾತ್ಪರ್ಯ.—ವಿಶ್ರಾಂತಿ ಹೊಂದಲಿ ಎಂದು ಮೇಲಕ್ಕೆ ಎದ್ದುಬಂದ ಮೈನಾಕಪರ್ವತದಲ್ಲಿ ಶ್ರಮರಹಿತರಾದ ಹನುಮಂತದೇವರು ವಿಶ್ರಾಂತಿ ಹೊಂದಲು ಇಷ್ಟಪಡಲಿಲ್ಲ; ಏಕೆಂದರೆ, ಮೇರೆಯಿಲ್ಲದ ಪೌರುಷಬಲವುಳ್ಳ ಅವರಿಗೆ ಆಯಾಸವೆಲ್ಲಿಯದು? "ಗೋಷ್ಪದೀಕೃತವಾರಾಶಿಂ" ನೂರು ಯೋಜನ ವಿಸ್ತಾರವುಳ್ಳ ಸಮುದ್ರವನ್ನೇ ಗೋವಿನಹೆಜ್ಜೆ ಮುಳುಗುವಷ್ಟು ನೀರಿನಂತೆ ಎಂದುಭಾವಿಸಿ ಲಂಘಿಸುತ್ತಿರುವ ಮಾರುತಿಗೆ ಶ್ರಮವೆಲ್ಲಿಬಂತು? ಉಪಚರಿಸಲು ಬಂದ ಮೈನಾಕನ ಮನೋರಥವು ಭಂಗವಾಗಬಾರ ದೆಂಬ ಅಭಿಪ್ರಾಯದಿಂದ ಆ ಪರ್ವತರಾಜನನ್ನು ತಮ್ಮ ಹಸ್ತದಿಂದಾಲಂಗಿಸಿ (ಸ್ಪರ್ಶಿಸಿ) ಹೊರಟರು. ಹೀಗೆ ಮುಂದಕ್ಕೆ ಹೋಗುತ್ತಿರಲು ದೇವತೆ ಗಳು ವರವನ್ನು ಕೊಟ್ಟು ಕಳುಹಿಸಿದ ನಾಗಮಾತೆಯಾದ ಸುರಸೆಯನ್ನು ನೋಡಿದರು.

ಅವತಾರಿಕೆ.—ಸುರಸೆಗೆ ದೇವತೆಗಳು ಕೊಟ್ಟ ವರವೇನೆಂಬು ದನ್ನು ಹೇಳುತ್ತಾರೆ.—

ಶ್ಲೋಕ॥ ಜಿಜ್ಞಾಸುಭಿರ್ನಿಜಬಲಂ ತವ ಭಕ್ಷ್ಯಮೇತು ಯದ್ಯತ್ತ್ವಮಿಚ್ಛಸಿ
ತದಿತ್ಯಮರೋದಿತಾಯಾಃ। ಆಸ್ಯಂ ಪ್ರವಿಶ್ಯ ಸಪದಿ ಪ್ರವಿನಿಃಸ್ಸೃ
ತೋಽಸ್ಮಾದ್ದೇವಾನನಂದಯದುತಃ ಸ್ಮೃತಮೇಷು ರಕ್ಷನ್ ॥

ಅರ್ಥ.—ನಿಜಬಲಂ=ಹನುಮಂತರ ಬಲವನ್ನು, ಜಿಜ್ಞಾಸುಭಿಃ= ತಿಳಿಯಲಿಚ್ಛಿಸಿದ ದೇವತೆಗಳಿಂದ, (ಹೇಸುರಸೇ!) ತ್ವಂ=ನೀನು, ಯದ್ಯತ್= ಯಾವುಯಾವುದನ್ನು, ಇಚ್ಛಸಿ = ತಿನ್ನಲಪೇಕ್ಷಿಸುತ್ತೀಯೋ, ತತ್ತತ್=

ಅವುಗಳು, ತವ=ನಿನ್ನ, ಭಕ್ತ್ರಂ=ಬಾಯಿಯಲ್ಲಿ, ಏತು=ಬೀಳಲಿ, ಇತಿ=ಹೀಗೆಂದು, (ವರವನ್ನು ಕೊಟ್ಟರು) ಉತ=ಅನಂತರ, ಏಷು=ದೇವತೆಗಳು, ಸ್ಮೃತಂ- ಸುರಸೆಗೆ ಕೊಟ್ಟ ವರವನ್ನು ಸ್ಮರಿಸಿಕೊಂಡು, ರಕ್ಷನ್ಸರ್ಗ -ಆ ವರವನ್ನು ಸತ್ಯಮಾಡುವದಕ್ಕೋಸ್ಕರ, ಅನುರೋದಿತಾಯುಃ-ದೇವತೆಗಳ ಅಪ್ಪಣೆಯಪ್ರಕಾರ ಬಂದಿರುವ ಸುರಸೆಯು, ಅಸ್ಯಂ = ಬಾಯನ್ನು, ಪ್ರವಿಶ್ಯ-ಪ್ರವೇಶಿಸಿ, ಸಪದಿ=ತಕ್ಷಣವೇ, ಅಸ್ಮಾತ್=ಆ ಬಾಯಿಂದ, ಪ್ರವಿನಿಸ್ಸೃತಃ=ಹೊರಗೆ ಬಂದು, ದೇವಾನ್-ದೇವತೆಗಳನ್ನು, ಆನಂದಯತ್ -ಸಂತೋಷಪಡಿಸಿದರು.

ತಾತ್ಪರ್ಯ.—ದೇವತೆಗಳು, ಕ್ಷಣಕ್ಷಣಕ್ಕೂ ವೇಗಾಧಿಕ್ಯಮಾಡಿ ಮುಖದಲ್ಲಿ ಸ್ವಲ್ಪವೂ ವಿಕಾರವಿಲ್ಲದೆ ಹಾರುತ್ತಿರುವ ಹನುಮಂತದೇವರನ್ನು ನೋಡಿ ಆಶ್ಚರ್ಯಚಕಿತರಾಗಿ, ಅವರ ಬಲವನ್ನು ತಿಳಿಯಬೇಕೆಂಬ ಆಶೆಯಿಂದ ಪನ್ನಗರಿಗೆ ಮಾತೆಯಾದ ಸುರಸೆಯನ್ನು ಕರೆದು, " ಸುರಸೇ ! ನೀನು ಯಾವುದನ್ನು ಭಕ್ಷಿಸಬೇಕೆಂದಪೇಕ್ಷಿಸುವಿಯೋ ಅದು ತಾನಾಗಿ ನಿನ್ನ ಬಾಯಲ್ಲಿ ಬೀಳಲಿ, " ಎಂದು ವರವನ್ನು ಕೊಟ್ಟು, " ನೀನು ಹೋಗಿ ಹನುಮಂತದೇವರೆದುರಿಗೆ ನಿಲ್ಲು ಆಗ ಏನಾಗುವುದೆಂಬುದನ್ನು ನೋಡೋಣವೆಂದು ಹೇಳಿಕಳುಹಿಸಲು ಆ ಸುರಸೆಯು ಬಂದು ಮಾರುತಿಯನ್ನು ಕುರಿತು " ಮಮ ಭಕ್ಷ್ಯಃ ಪ್ರದಿಷ್ಟಸ್ತ್ವಂಸೇಂದ್ರೈಃ ಸುರಗಣೈಃ ಕಪೇ " (ಆರ್ಷರಾಮಾಯಣೇ) ಹೀಗೆಂದು ಹೇಳಿದನಂತರ ಮಾರುತಿಯು ಆಕೆಯ ಬಾಯಿಯನ್ನು ಹೊಕ್ಕು ದೇವತೆಗಳ ವರವನ್ನು ಸತ್ಯಮಾಡಿ ಪುನಃ ಬಾಯಿಂದ ಈಚೆಗೆ ಬಂದು ದೇವತೆಗಳನ್ನು ಸಂತೋಷಪಡಿಸಿದರು.

ಶ್ಲೋಕ ॥ ದೃಷ್ಟ್ವಾಸ್ಯ ಸುರಪ್ರಣಯಿತಾಂ ಬಲಮಸ್ಯಚೋಗ್ರಂ ದೇವಾಃ ಪ್ರತುಷ್ಟುವುರಮುಂಸು ಮನೋಭಿವೃಷ್ಟ್ಯಾ । ತೈರಾದೃತಃ ಪುನರಸೌವಿಯತ್ಯೈವಗಚ್ಛನ್ ಛಾಯಾಗ್ರಹಂ ಪ್ರತಿದದರ್ಶ ಚ ಸಿಂಹಿಕಾಖ್ಯಾಂ ॥

ಅರ್ಥ.—ದೇವಾಃ=ದೇವತೆಗಳು, ಅಸ್ಯ=ಈ ಹನುಮಂತದೇವರಿಗೆ, ಸುರಪ್ರಣಯತಾಂ=ಸುರ=ದೇವತೆಗಳಲ್ಲಿ ಇರುವ ಪ್ರಣಯತಾಂ- (ತಮ್ಮ ವಚನ ಸತ್ಯಕರಣರೂಪ) ಸ್ನೇಹವನ್ನೂ ಉಗ್ರಬಲಂಚ=ಅಧಿಕಬಲವನ್ನೂ

ಕೂಡ, ದೃಷ್ಟ್ವಾ=ನೋಡಿ, ಅಮುಂ-ಈ ಹನುಮಂತದೇವರನ್ನು, ಸುಮ ನೋಭಿವೃಷ್ಟ್ಯಾ=ಪುಷ್ಪವೃಷ್ಟಿಯಿಂದ, ಪ್ರತುಷ್ಟುವುಃ – ಸಂತೋಷಪಡಿಸಿ ದರು. ತೈಃ=ಆ ದೇವತೆಗಳಿಂದ, ಆದೃತಃ–ಸತ್ಕರಿಸಲ್ಪಟ್ಟ, ಅಸೌ=ಮಾ ರುತಿಯು, ಪುನಃ=ಮತ್ತೂ, ವಿಯತ್ಯೇವ=ಗಗನದಲ್ಲೇ, ಗಚ್ಛನ್=ಹೋಗು ತ್ತಿರುವಾಗ, ಸಿಂಹಿಕಾಖ್ಯಂ=ಸಿಂಹಿಕಾ ಎಂಬ, ಛಾಯಾಗ್ರಹಂ = ನೆರಳಿ ನಿಂದಲೇ ಪುರುಷನನ್ನು ಗ್ರಹಿಸುವ, ಪ್ರತಿದದರ್ಶ ಚ – ನೋಡಿಯೂನೋಡಿ ದರು.

ತಾತ್ಪರ್ಯ.—ದೇವತೆಗಳು ತಾವು ಸುರಸೆಗೆ ಕೊಟ್ಟ ವರವನ್ನು, ಹನುಮಂತದೇವರು ಸತ್ಯಮಾಡಿದ್ದನ್ನೂ ಮತ್ತು ಅವರ ಅಧಿಕಬಲವನ್ನೂ ನೋಡಿ, ಅವರಮೇಲೆ ಪುಷ್ಪವೃಷ್ಟಿಗರೆದು ಸಂತೋಷಪಡಿಸಿದರು. ಮಾರು ತಿಯು ಹೀಗೆ ದೇವತೆಗಳಿಂದ ಆದರಿಸಲ್ಪಟ್ಟು ಗಗನದಲ್ಲೇ ಮುಂದಕ್ಕೆ ಹೋ ಗುತ್ತಿರಲು ನೆರಳನ್ನು ಗ್ರಹಿಸಿ ದೇಹವನ್ನು ಭಕ್ಷಿಸುವ ಸಿಂಹಿಕಾ ಎಂಬ ರಾಕ್ಷ ಸಿಯನ್ನು ನೋಡಿದರು.

**ಶ್ಲೋಕ ॥ ಲಂಕಾವನಾಯ ಸಕಲಸ್ಯ ಚ ನಿಗ್ರಹೇಽಸ್ಯಾಃ ಸಾಮರ್ಥ್ಯಮಪ್ರತಿ ಹತಂ ಪ್ರದದೌ ವಿಧಾತಾ । ಛಾಯಾಮವಾಕ್ಷಿಪದಸೌ ಪವನಾತ್ಮಜ ಸ್ಯ ಸೋಽಸ್ಯಾಃ ಶರೀರಮನುವಿಶ್ಯ ಬಿಭೇದಚಾಶು ॥೭॥**

ಅರ್ಥ.—ವಿಧಾತಾ=ಬ್ರಹ್ಮದೇವರು, ಲಂಕಾವನಾಯ=ಲಂಕಾಪುರಿ ಯ ರಕ್ಷಣಾರ್ಥವಾಗಿಯೂ, ಚ=ಮತ್ತೂ, ಸಕಲಸ್ಯ–ಸರ್ವ ವೀರಸಮೂ ಹದ, ನಿಗ್ರಹೇ–ನಿಗ್ರಹಕ್ಕಾಗಿಯೂ, ಅಸ್ಯಾಃ=ಈ ಸಿಂಹಿಕೆಗೆ, ಅಪ್ರತಿಹ ತಂ=ಮತ್ತೊಬ್ಬರಿಂದ ತಡೆಯಲಶಕ್ಯವಾದ, ಸಾಮರ್ಥ್ಯಂ=ಶಕ್ತಿಯನ್ನು, ಪ್ರದದೌ=ಕೊಟ್ಟಿದ್ದರು. ಅಸೌ=ಆ ವರಬಲದಿಂದ ಈ ರಾಕ್ಷಸಿಯು, ಪವ ನಾತ್ಮಜಸ್ಯ–ವಾಯುಪುತ್ರರ, ಛಾಯಾಂ=ನೆಳಲನ್ನು, ಅವಾಕ್ಷಿಪತ್=ಆಕ ರ್ಷಿಸಿದಳು, ಸಃ=ಹನುಮಂತದೇವರು, ಅಸ್ಯಾಃ=ಈ ಸಿಂಹಿಕೆಯ, ಶರೀ ರಂ=ಉದರವನ್ನು, ಅನುವಿಶ್ಯ=ಪ್ರವೇಶಿಸಿ, ಆಶು–ಬೇಗ, ಬಿಭೇದಚ– ತಮ್ಮ ಉಗುರುಗಳಿಂದ ಶೀಳಿಬಿಟ್ಟರು.

ತಾತ್ಪರ್ಯ.—ಬ್ರಹ್ಮದೇವರು, ಸಿಂಹಿಕಾ ರಾಕ್ಷಸಿಗೆ ಲಂಕಾನಗರ ರಕ್ಷಣಾರ್ಥವಾಗಿಯೂ ಸಮಸ್ತವೀರನಿಕರವನ್ನು ಸಂಹರಿಸುವುದಕ್ಕಾಗಿಯೂ

ಅಪ್ರತಿಹತವಾದ ಶಕ್ತಿಯನ್ನು ಕೊಟ್ಟಿದ್ದರು. ಆ ರಾಕ್ಷಸಿಯು, ಮಾರುತಿಯ ದೇಹದ ನೆಳಲನ್ನು ಹಿಡಿದು ಸೆಳೆಯಲು, ಮಾರುತಿಯು ಅವಳ ಉದರ ಪ್ರವೇಶಮಾಡಿ ತಕ್ಷಣದಲ್ಲೇ ಅದನ್ನು ಸೀಳಿದರು. ಇಲ್ಲಿ " ಶರೀರಂ " ಎಂಬ ಪದಕ್ಕೆ ಉದರವನ್ನು ಎಂಬ ಅರ್ಥಮಾಡಲು ಕಾರಣವೇನೆಂದರೆ ? ಸಂಗ್ರಹ ರಾಮಾಯಣ ಮತ್ತು ಆರ್ಷರಾಮಾಯಣದಲ್ಲೂ ಶ್ಲೋಕ|| (೧) ಹೃದಯಂ ನಿರ್ದಯಂ ತಸ್ಯಾಬಿಭೇದ ನಖರೈಃ || (೨) ತತಸ್ತಸ್ಯಾಃ ನಖೈಸ್ತೀಕ್ಷ್ಣೈ ೩ ರ್ಮರ್ಮವಯಣ್ಯುತ್ಕೃತ್ಯವಾನರಃ । ಉತ್ಪಪಾತಾಥವೇಗೇನಮನಃ ಸಂಪಾತವಿಕ್ರಮಃ || ಎಂದು ಇರುವುದು.

**ಶ್ಲೋಕ || ನಿಸ್ಸೀಮಮಾತ್ಮಬಲಂ ಮಿತ್ಯನು ದರ್ಶಯಾನೋ ಹತ್ವೈವ ತಾಮಪಿ ವಿಧಾತೃ ವರಾಭಿಗುಪ್ತಾಂ । ಲಂಬೇ ಸಲಂಬ ಶಿಖರೇನಿಪಪಾತಲಂಕಾಪ್ರಕಾರರೂಪಕ ಗಿರಾವಥಸಂಚುಕೋಚ ||೮||**

ಅರ್ಥ.—(ಮಾರುತಿಯು) ಆತ್ಮಬಲಂ=ತಮ್ಮ ಬಲವು, ನಿಸ್ಸೀಮಮಿತಿ=ಅಪಾರವಾದದ್ದೆಂದು, ದರ್ಶಯಾನಃ=ತೋರಿಸಲೋಸುಗ, ವಿಧಾತೃವರಾಭಿಗುಪ್ತಾಮಪಿ- ಬ್ರಹ್ಮದೇವರ ವರದಿಂದ ಪಾಲಿತಳಾದಾಗ್ಯೂ ಕೂಡ, ತಾಂ-ಆ ರಾಕ್ಷಸಿಯನ್ನು, ಹತ್ವ=ಸಂಹರಿಸಿ, ಸಲಂಬಶಿಖರೇ- ಉದ್ದವಾದ ಶಿಖರಗಳಿಂದ ಸಹಿತವಾದ್ದರಿಂದ, ಲಂಬೇ = ಲಂಬಾ ಎಂದು ಹೆಸರುಳ್ಳ, ಲಂಕಾಪ್ರಾಕಾರಗಿರೌ=ಲಂಕಾನಗರಿಗೆ ಕೋಟೆಯಂತಿರುವ ತ್ರಿಕೂಟಾಚಲದ ಮೇಲೆ, ನಿಪಪಾತ=ಹಾರಿನಿಂತರು. ಅಥ=ಅನಂತರ, ಸಂಚುಕೋಚ-ಹಾರುವಕಾಲದಲ್ಲಿ ತೆಗೆದುಕೊಂಡಿದ್ದ ಆಕಾರವನ್ನು ಸಂಕೋಚಮಾಡಿದರು.

ತಾತ್ಪರ್ಯ.—ಹನುಮಂತದೇವರು, ತಮ್ಮ ಬಲವು ಅಪಾರವಾದದ್ದೆಂದು ತೋರಿಸುವುದಕ್ಕಾಗಿ ಆ ರಾಕ್ಷಸಿಯು ಬ್ರಹ್ಮ ವರದಿಂದ ಪಾಲಿತಳಾದಾಗ್ಯೂ ಅವಳನ್ನು ಸಂಹರಿಸಿ ಮಹೇಂದ್ರಾಚಲದಿಂದ ಹೊರಟವರು ಉನ್ನತಶೃಂಗಗಳುಳ್ಳ ಲಂಬಾ ಎನ್ನುವ ತ್ರಿಕೂಟಾಚಲದ ಶಿಖರದಮೇಲೆ ಬಂದು ನಿಂತುಹಾರುವಾಗ ಧರಿಸಿದ್ದ ದೊಡ್ಡದೇಹವನ್ನು ಸಂಕೋಚಪಡಿಸಿದರು.

**ಶ್ಲೋಕ || ಭೂತ್ವಾಬಿಡಾಲಸಮಿತೋ ನಿಶಿತಾಂ ಪುರೀಂ ಚ ಪ್ರಾಪ್ಸ್ಯನ್ ದದರ್ಶ ನಿಜರೂಪವರೀಂ ಸ ಲಂಕಾಂ । ರುದ್ಧೋ ನಯಾಕ್ಷ್ಥ ವಿಜಿತ್ಯಚತಾಂ ಸ್ವಮುಷ್ಟಿ ಪಿಷ್ಟಾಂ ತಯಾನುಮತ ಏವವಿವೇಶಲಂಕಾಂ||೯||**

ಅರ್ಥ.—ಸಃ=ಹನುಮಂತದೇವರು, ನಿಶಿ-ರಾತ್ರಿಯಲ್ಲಿ, ಬಿಡಾಲಸ ಮಿತಃ=ಬೆಕ್ಕಿನ ಪರಿಮಾಣದೇಹವುಳ್ಳವರಾಗಿ, ತಾಂಪುರೀಂ=ಆ ಲಂಕಾಪು ರವನ್ನು, ಪ್ರಾಸ್ಸ್ಯನ್=ಪ್ರವೇಶಿಸುತ್ತಿರಲು, ನಿಜರೂಪವತೀಂ = ಪುರಿಯೇ ತನ್ನ ನಿಜರೂಪವಾಗಿವುಳ್ಳ, ಲಂಕಾಂ-ಮೂರ್ತಿಮಂತಳಾದ ಲಂಕಾಭಿಮಾ ನಿಯನ್ನು, ದದರ್ಶ-ನೋಡಿದರು. ಅನಯಾ-ಆ ಲಂಕೆಯಿಂದ, ರುದ್ಧಃ-ತಡೆಯಲ್ಪಟ್ಟು, ಸ್ವಮುಷ್ಟಿಪಿಷ್ಟಾಂ-ತಮ್ಮ ಮುಷ್ಟಿಗಳಿಂದ ಚೂರ್ಣೀಕೃತ ದೇಹವುಳ್ಳವಳನ್ನಾಗಿ ಮಾಡಿ, ಲಂಕಾಂ=ಲಂಕೆಯನ್ನು, ಆಶು = ಜಾಗ್ರತೆ ವಿಜಿತ್ಯ=ಜಯಿಸಿ, ತಯಾ=ಲಂಕಾಪಟ್ಟಣವನ್ನು, ವಿವೇಶ=ಪ್ರವೇಶಿಸಿದರು.

ತಾತ್ಪರ್ಯ.—ಹನುಮಂತದೇವರು ಲಂಕಾಪುರಿಯನ್ನು ರಾತ್ರಿಯಲ್ಲಿ ಪ್ರವೇಶಿಸುವಾಗ ತಮ್ಮ ಶರೀರವನ್ನು ಮಾರ್ಜಾಲದೇಹದ ಪ್ರಮಾಣ ಮಾಡಿಕೊಂಡು ಬರುತ್ತಿರಲು, ಲಂಕಾಭಿಮಾನಿಯಾದ ಲಂಕೆಯು ಕಾಣಿಸಿ ಕೊಂಡು ಅವರನ್ನು ತಡೆದಳು. ಆಗ ಮಾರುತಿಯು ತಮ್ಮ ಮುಷ್ಟಿಗಳಿಂದ ಲಂಕೆಯನ್ನು ಹೊಡೆದು ಜಯಿಸಿ ಅವಳ ಸಮ್ಮತಿಯಿಂದಲೇ ಲಂಕಾಪುರಿ ಯನ್ನು ಪ್ರವೇಶಿಸಿದರು.

**ಶ್ಲೋಕ ॥ ಮಾರ್ಗಮಾಣೋ ಬಹಿಶ್ಚಾಂತಃಸೋಽಶೋಕವನಿಕಾತಲೇ । ದ ದರ್ಶ ಶಿಂಶುಪಾವೃಕ್ಷಮೂಲಸ್ಥಿತ ರಮಾಕೃತಿಂ ॥೧೦॥**

ಅರ್ಥ.—ಸಃ-ಹನುಮಂತದೇವರು, ಬಹಿಶ್ಚಾಂತಃ=ಲಂಕೆಯ ಒಳ ಗೂ ಹೊರಗೂ ಸಹ, ಮಾರ್ಗಮಾಣಃಸನ್-ಸೀತಾಕೃತಿಯನ್ನು ಹುಡಕತ ಕ್ಕವರಾಗಿ, ಅಶೋಕವನಿತಾಕಲೇ - ಅಶೋಕವನದಲ್ಲಿ, ಶಿಂಶುಪಾವೃಕ್ಷದ ಬುಡದಲ್ಲಿ ಕುಳಿತಿದ್ದ, ರಮಾಕೃತಿಂ=ಸಿತಾಕೃತಿಯನ್ನು; ದದರ್ಶ-ನೋಡಿ ದರು.

ತಾತ್ಪರ್ಯ.—ಮಾರುತಿಯು ಲಂಕಾಪುರಿಯ ಒಳಗೂ ಹೊರಗೂ ಸೀತಾಕೃತಿಯನ್ನು ಹುಡುಕಿ ಅಶೋಕವನದಲ್ಲಿದ್ದ ಶಿಂಶುಪಾವೃಕ್ಷದ ಕೆಳಗಡೆ ಕುಳಿತಿದ್ದ ಸೀತಾಕೃತಿಯನ್ನು ನೋಡಿದರು.

**ಶ್ಲೋಕ ॥ ನರಲೋಕ ವಿಡಂಬಸ್ಯ ಜಾನನ್ ರಾಮಸ್ಯ ಹೃದ್ಗತಂ ತಸ್ಯ ಚೇ ಷ್ಟಾನುಸಾರೇಣ ಕೃತ್ವಾ ಚೇಷ್ಟಾಶ್ಚ ಸಂವಿದಂ । ತಾದೃಕ್ಚೇಷ್ಟಾ ಸಮೇ ತಾಯೈ ಅಂಗುಲೀಯಮದಾತ್ತತಃ ॥೧೧॥**

ಅರ್ಥ.—ನರಲೋಕವಿಡಂಬಸ್ಯ = ಮನುಷ್ಯ ಲೋಕವನ್ನೆ ತನ್ನ ನಟನದಿಂದ ಮೋಹಪಡಿಸುವ, ರಾಮಸ್ಯ–ಶ್ರೀರಾಮದೇವರ, ಹೃದ್ಗತಂ= ಮನಸ್ಸಿನ ಅಭಿಪ್ರಾಯವನ್ನ, ಜಾನನ್=ತಿಳಿದಂಥಾ ಹನುಮಂತದೇವರು, ತಸ್ಯ=ರಾಮನ, ಚೇಷ್ಟಾನುಸಾರೇಣ=ದೈತ್ಯರನ್ನು ಮೋಹಪಡಿಸುವ ವ್ಯಾಪಾರಗಳಿಗನುಸಾರವಾದ, ಚೇಷ್ಟಾಶ್ಚ = ವ್ಯಾಪಾರಗಳನ್ನ, ಕೃತ್ವಾ=ಮಾಡಿ, ಸಂವಿದಂಕೃತ್ವಾ=ವಿಚಾರಮಾಡಿ, ತತಃ=ಅನಂತರ, ತಾದೃಕ್ಚೇಷ್ಟಾಭಿಃ= ರಾಮನ ವ್ಯಾಪಾರಗಳಿಗೆ ಸದೃಶವಾದ ವ್ಯಾಪಾರಗಳಿಂದ, ಸಮೇತಾಯೈ= ಕೂಡಿದಂಥ ಸೀತಾದೇವಿಗೆ, ಅಂಗುಲೀಯಂ=ರಾಮನ ಮುದ್ರೆ ಉಂಗುರವನ್ನ, ಅದಾತ್=ಕೊಟ್ಟರು.

ತಾತ್ಪರ್ಯ.—ಮನುಷ್ಯಲೋಕವನ್ನೆ ತನ್ನ ಕಾರ್ಯಗಳಿಂದ ಆಶ್ಚರ್ಯಪಡಿಸುವ ಶ್ರೀರಾಮನ ಮನೋಭಿಪ್ರಾಯವನ್ನ ತಿಳಿದ ಹನುಮಂತದೇವರು, ದೈತ್ಯರ ಮೋಹನಾರ್ಥವಾಗಿ ಮಾಡತಕ್ಕ ರಾಮನ ಚೇಷ್ಟೆಗೆ ಅನುಸಾರವಾಗಿ ವ್ಯಾಪಾರಗಳನ್ನು ಮಾಡಿ, ತಾನು ಸರ್ವಜ್ಞನಾದರೂ ನಟನೆಗಾಗಿ ಸೀತಾಕೃತಿಯನ್ನು ಕುರಿತು ನೀನುಯಾರು ಏನೆಂಬುದಾಗಿ ವಿಚಾರಮಾಡಿ ನಂತರ ರಾಮನ ವ್ಯಾಪಾರಗಳಿಗೆ ಸಮಾನವಾದ ವ್ಯಾಪಾರವುಳ್ಳ ಸೀತೆಗೆ ರಾಮನ ಮುದ್ರೆ ಉಂಗುರವನ್ನು ಕೊಟ್ಟರು.

ಅವತಾರಿಕೆ.—ಮುಂದಿನ ಶ್ಲೋಕದಲ್ಲಿ ರಾಮನ ವಿಶ್ವಾಸಾರ್ಥವಾಗಿ ಸೀತಾಕೃತಿಯು ಚೂಡಾಮಣಿಯನ್ನು ಕೊಟ್ಟಳೆಂದು ಹೇಳುತ್ತಾರೆ. ಆದರೆ ಸೀತೆಯ ಆಭರಣಗಳು ಆಕೃತಿಯಲ್ಲಿ ಹೇಗೆ ಬಂದವು? ಅಂದರೆ ಹೇಳುತ್ತಾರೆ :—

**ಶ್ಲೋಕ॥ ಸೀತಾಯಾ ಯಾನಿಚೈವಾಸ ನಾಕೃತೇಸ್ತಾನಿ ಸರ್ವಶಃ। ಭೂಷಣಾನಿ ದ್ವಿಧಾಭೂತ್ವಾ ತಾನ್ಯೇವಾಸಂಸ್ತಥೈವ ಚ ॥೧೨॥**

ಅರ್ಥ.—ಸೀತಾಯಾಃ=ಸೀತೆಗೆ, ಯಾನಿ ಭೂಷಣಾನಿ=ಯಾವ ಆಭರಣಗಳು, ಆಸನ್=ಇದ್ದವೋ, ಸರ್ವಶಃ=ಸಮಸ್ತವಾದ, ತಾನಿ ಭೂಷಣಾನಿ=ಚೂಡಾಮಣಿಯೇ ಮೊದಲಾದ ಆಭರಣಗಳು, ಆಕೃತೇ=ಸೀತಾಕೃತಿಗೆ, ಆಸನ್=ಇದ್ದವು. (ಹಾಗಾದರೆ ಸೀತೆಗೆ ಇರಲಿಲ್ಲವೋ? ಅಂದರೆ) ತಾನ್ಯೇ

ನ ಭೂಷಣಾನಿ=ಅದೇ ಆಭರಣಗಳು, ತಥೈವ=ಒಂದೇರೀತಿಯಿಂದ, ದ್ವಿಧಾ ಭೂತ್ವಾ=ಎರಡಾಗಿ ಪರಿಣಮಿಸಿ, ಆಕೃತೇ=ಆಕೃತಿಗೆ, ಆಸನ್=ಇದ್ದವು.

ತಾತ್ಪರ್ಯ.—ಸೀತೆಯಂತೆಯೇ ಸೀತಾಕೃತಿ ಹೇಗೆ ಆಯಿತೋ ಹಾಗೆ ಸೀತಾದೇವಿಯಲ್ಲಿ ಇದ್ದ ಆಭರಣಗಳಂತೆ ಸೀತಾಕೃತಿಯಲ್ಲೂ ಆ ಎಲ್ಲಾ ಆಭರಣಗಳೂ ಆಗಿ ಇದ್ದುವು. ಅಂದರೆ ಒಂದೊಂದು ಒಡವೆಯೂ ಎರಡಾಯಿತು.

**ಶ್ಲೋಕ॥ ಅಥ ಚೂಡಾಮಣಿಂ ದಿವ್ಯಂ ದಾತುಂ ರಾಮಾಯ ಸಾದದೌ॥೧೩॥**

ಅರ್ಥ.—ಸಾ=ಸೀತಾಕೃತಿಯು, ಅಥ–ಮಾರುತಿಯು ರಾಮಭೃತ್ಯ ರೆಂದು ಮನಸ್ಸಿಗೆ ಬಂದನಂತರ, ದಿವ್ಯಂ=ಪರಮಶ್ರೇಷ್ಠವಾದ, ಚೂಡಾಮ ಣಿಂ=ಶಿರೋರತ್ನವನ್ನು, ರಾಮಾಯ=ರಾಮನಿಗೆ, ದಾತುಂ=ಕೊಡಬೇಕೆಂದು ದದೌ=ಕೊಟ್ಟಳು.

ಅವತಾರಿಕೆ.—ರಾತ್ರಿಯಲ್ಲಿ ರಾಮನ ವ್ಯಾಪಾರಗಳಿಗೆ ಅನುಸಾರ ವಾದ ವ್ಯಾಪಾರವುಳ್ಳ ಸೀತಾಕೃತಿ ಮತ್ತೂ ಹನುಮಂತ ಇವರಿಬ್ಬರ ವ್ಯಾಪಾ ರಗಳನ್ನು ರಾಕ್ಷಸರು ನೋಡಲಿಲ್ಲವಾಗಿ ಅವರ ಚೇಷ್ಟೆಗಳು ವ್ಯರ್ಥವಲ್ಲವೇ? ಅಂದರೆ ಅವರ ಚೇಷ್ಟೆಗಳ ಸಾರ್ಥಕ್ಯವನ್ನು ತಿಳಿಸುತ್ತಾರೆ.

**ಶ್ಲೋಕ॥ ಯದ್ಯಪ್ಯೇತೇ ನಪಶ್ಯಂತಿ ನಿಶಾಚರ ಗಣಾಸ್ತು ತೇ। ದ್ಯುಲೋಕ ಚಾರಿಣಃಸರ್ವೇ ಪಶ್ಯಂತ್ವೃಷಯ ಏವಚ ॥೧೪॥**

ಅರ್ಥ.—ತೇ ನಿಶಾಚರಗಣಾಃ=ಆ ರಾಕ್ಷಸ ಸಮೂಹಗಳು, ಯದ್ಯ ಪಿ=ಹೇಗಾದರೂ, (ನಿದ್ರಾವಸ್ಥೆಯಲ್ಲಿರುವುದರಿಂದ) ಏತತ್ = ಸೀತಾಕೃತಿ ಹನುಮಂತದೇವರ ವಿಡಂಬನೆಯನ್ನು, ನಪಶ್ಯಂತಿ=ನೋಡುತ್ತಿರುವುದಿಲ್ಲ, ತಥಾಪಿ=ಹಾಗಾದರೂ, ಸರ್ವೇ ದ್ಯುಲೋಕಚಾರಿಣಃ=ಸಮಸ್ತರಾದ ಗಗನ ಚಾರಿಗಳೂ, ಚ=ಮತ್ತು, ಋಷಯಏವ=ಜ್ಞಾನಿಗಳಾದ ದೇವತೆಗಳೂ, ಪಶ್ಯಂತು=ನೋಡಲಿ, ಅಂದರೆ ಇವರಾದರೂ ನೋಡಲಿಎಂದು ನಟನೆ ಮಾಡಿದರು.

ತಾತ್ಪರ್ಯ.—ರಾಕ್ಷಸರು ನಿದ್ರೆಯಲ್ಲಿರುವುದರಿಂದ ಸೀತಾಕೃತಿ ಮಾರು ತಿಗಳ ವಿಡಂಬನೆಯನ್ನು ನೋಡುವಂತಿಲ್ಲ. ಆದರೂ ನಟನೆ ಏಕೆ ಮಾಡಿದ ರೆಂದರೆ ಗಗನ ಸಂಚಾರಿಗಳೂ, ದೇವತೆಗಳೂ ನೋಡಲಿಎಂದೇ.

**ಶ್ಲೋಕ॥ ತೇಷಾಂ ವಿಡಂಬನಾಯೈವ ದೈತ್ಯಾನಾಂ ವಂಚನಾಯಚ। ಪಶ್ಯ ತಾಂ ಕಲಿಮುಖ್ಯಾನಾಂ ವಿಡಂಬೋಽಯಂ ಕೃತೋಽಭವೇತ್ ॥೧೫॥**

ಅರ್ಥ.—ಕೃತಃ=ಇವರಿಬ್ಬರಿಂದ ಮಾಡಲ್ಪಟ್ಟ, ಅಯಂ ವಿಡಂಬಃ= ಈ ನಟನೆಯು, ತೇಷಾಂ-ಆ ಜ್ಞಾನಿಗಳಾದ ದೇವತೆಗಳು, ವಿಡಂಬನಾಯೈ ವ= ನಟನೆಯೆಂದು ತಿಳಿಯುವುದಕ್ಕೋಸ್ಕರವಾಗಿಯೇ ! ಪಶ್ಯತಾಂ = ನೋಡುವಂಥಾ. ಕಲಿಮುಖ್ಯಾನಾಂ=ಕಲಿಯೇ ಮೊದಲಾದ, ದೈತ್ಯಾನಾಂ= ದೈತ್ಯರ, ವಂಚನಾಯಚ-(ಈ ನಟನೆಯು) ಸತ್ಯವೆಂಬ ಮಿಥ್ಯಾಜ್ಞಾನಾರ್ಥ ವಾಗಿಯೇ, ಭವೇತ್=ಆಗಲಿ.

ತಾತ್ಪರ್ಯ.—ಸೀತಾಕೃತಿ ಮತ್ತೂ ಹನುಮಂತದೇವರ ನಟನೆಯನ್ನು ನೋಡಿ, ದೇವತೆಗಳು ಇದು ಕೇವಲ ವಿಡಂಬನೆಯೇಹೊರತು ನಿಜವಲ್ಲ ವೆಂಬ ನಿಶ್ಚಯ ಜ್ಞಾನವನ್ನು ಹೊಂದಲಿಎಂಬುದಾಗಿಯೂ, ಕಲಿಯೇ ಮೊ ದಲಾದ ದೈತ್ಯರಿಗೆ ಸತ್ಯವೆಂಬ ಮಿಥ್ಯಾಜ್ಞಾನ ಉಂಟಾಗಲಿ ಎಂಬುವುದ ಕ್ಕಾಗಿಯೇ ನಟನೆ ಮಾಡಿದರು.

**ಶ್ಲೋಕ॥ ಕೃತ್ವಾ ಕಾರ್ಯಮಿದಂ ಸರ್ವಂ ವಿಶಂಕಃ ಪವನಾತ್ಮಜಃ। ಆತ್ಮಾವಿ ಷ್ಕರಣೇ ಚಿತ್ತಂ ಚಕ್ರೇಮತಿಮತಾಂ ವರಃ ॥೧೬॥**

ಅರ್ಥ.—ಮತಿಮತಾಂವರಃ-ಬುದ್ಧಿವಂತರಲ್ಲಿ ಶ್ರೇಷ್ಠರಾದಂಥ, ವಿ ಶಂಕಃ-ರಾಕ್ಷಸರಬಾಧೆ ಬರುವುದೆಂಬ ಅನುಮಾನವಿಲ್ಲದಿರುವ, ಪವನಾತ್ಮ ಜಃ ವಾಯುಪುತ್ರರಾದ ಹನುಮಂತದೇವರು, ಇದಂ ಸರ್ವಂ ಕಾರ್ಯಂ= ಲಂಕೆಯಲ್ಲ ಮುದ್ರಿಕಾದಾನವೇ ಮೊದಲಾದ ಕಾರ್ಯವನ್ನು, ಕೃತ್ವಾ=ಮಾಡಿ, ಆತ್ಮಾವಿಷ್ಕರಣೇ=ತನ್ನನ್ನು ಪ್ರಕಟನಮಾಡುವ ವಿಷಯದಲ್ಲಿ ಚಿತ್ತಂ=ಬುದ್ಧಿ ಯನ್ನು, ಚಕ್ರೇ=ಮಾಡಿದರು. ಅಂದರೆ ಮನಸ್ಸು ಮಾಡಿದರು.

ತಾತ್ಪರ್ಯ.—ರಾಕ್ಷಸರಿಂದ ಬಾಧೆಬರುವುದೆಂಬ ಭಯವಿಲ್ಲದಿರುವ, ಬಹಳ ಬುದ್ಧಿವಂತರಾದ ಹನುಮಂತದೇವರು ಮುದ್ರಿಕೆಯನ್ನು ಕೊ

ಡೋಣವೇ ಮೊದಲಾದ ಸರ್ವಕಾರ್ಯಗಳನ್ನೂ ಮಾಡಿ, ಲಂಕೆಯಲ್ಲಿ ತಮ್ಮ ಪರಾಕ್ರಮವನ್ನು ವ್ಯಕ್ತಮಾಡಲು ಮನಸ್ಸುಮಾಡಿದರು.

ಅವತಾರಿಕೆ.—ದುಷ್ಟರಲ್ಲಿ ಪರಾಕ್ರಮವನ್ನು ತೋರಿಸುವಬಗೆ ಯಾವುದೆಂಬುದನ್ನು ಮಾರುತಿಯು ಚೇಷ್ಟೆಮಾಡಿ ತೋರಿಸುತ್ತಾರೆ. ಅದೇನೆಂದರೆ :—

**ಶ್ಲೋಕ॥ ಅಥವನಮಖಿಲಂ ತದ್ರಾವಣಸ್ಯಾವಲುಂಪ್ಯ ಕ್ಷಿತಿರುಹಮಿಮಮೇಕಂ ವರ್ಜಯಿತ್ವಾ ಶುವೀರಃ। ರಜನಿಚರ ವಿನಾಶಂ ಕಾಂಕ್ಷಮಾಣೋತಿ ವೇಲಂ ಮುಹುರತಿ ರವನಾದೀ ತೋರಣಂ ಚಾರುರೋಹ ॥೧೭॥**

ಅರ್ಥ.—ಅಥ=ಅನಂತರದಲ್ಲಿ, ವೀರಃ=ಶೂರನಾದ, ರಜನಿಚರವಿನಾಶಂ=ರಾಕ್ಷಸನಾಶವನ್ನು, ಕಾಂಕ್ಷಮಾಣಃ–ಅಪೇಕ್ಷಿಸಿದ ಹನುಮಂತದೇವರು, ಇಮಂ–ಈ, ಏಕಂ–ಒಂದಾದ, ಕ್ಷಿತಿರುಹಂ=ಸೀತಾಕೃತಿಯು ಆಶ್ರಯಿಸಿರುವ ಶಿಂಶುಪಾವೃಕ್ಷವನ್ನು, ವರ್ಜಯಿತ್ವಾ=ಬಿಟ್ಟು, ರಾವಣಸ್ಯ=ರಾವಣನ, ಅಖಿಲಂ–ಸಮಸ್ತವಾದ, ತದ್ವನಂ–ಆ ಅಶೋಕವನವನ್ನು, ಅತಿವೇಲಂ–ನಿಶ್ಶೇಷವಾಗಿ, ಆಶು=ಬೇಗ, ಅವಲುಂಪ್ಯ=ನಾಶಮಾಡಿ, ಮುಹುಃ=ಪದೇ ಪದೇ, ಅತಿರವನಾದೀ–ಉತ್ಕೃಷ್ಟ ಗರ್ಜನೆವುಳ್ಳವರಾಗಿ, ತೋರಣಂಚಾ=ಪ್ರಾಕಾರ ದ್ವಾರವನ್ನು, ಆರುರೋಹ=ಹತ್ತಿದರು.

ತಾತ್ಪರ್ಯ.—ಮಾರುತಿಯು, ಸೀತಾಕೃತಿ ಆಶ್ರಯಿಸಿದ್ದ ಶಿಂಶುಪವೃಕ್ಷವೊಂದನ್ನು ಬಿಟ್ಟು ಅಶೋಕವನವನ್ನೆಲ್ಲಾ ನಿಶ್ಶೇಷಮಾಡಿ ಪುನಃ ಪುನಃ ಸಿಂಹನಾದ ಮಾಡುತ್ತಾ ರಾಕ್ಷಸರನ್ನು ಸಂಹಾರಮಾಡಬೇಕೆಂದು ಲಂಕಾ ಪ್ರಾಕಾರದ್ವಾರವನ್ನು ಹತ್ತಿದರು.

**ಶ್ಲೋಕ॥ ಅಥಾ ಶ್ರುಣೋದ್ದಶಾನನಃ ಕಪೀಂದ್ರ ಚೇಷ್ಟಿತಂ ಪರಂ। ದಿದೇಶ ಕಿಂಕರಾನ್ ಬಹೂನ್ ಕಪಿ ನಿಗೃಹ್ಯತಾಮಿತಿ ॥೧೮।**

ಅರ್ಥ.—ಅಥ=ಅನಂತರದಲ್ಲಿ, ದಶಾನನಃ–ರಾವಣನು, ಪರಂ–ವನವ್ಯತ್ಯಾಸವೇ ಮೊದಲಾದ, ಕಪೀಂದ್ರಚೇಷ್ಟಿತಂ=ಕಪಿಶ್ರೇಷ್ಠನ ವ್ಯಾಪಾರ

ವನ್ನು, ಅಶ್ರುಣೋತ್=ಕೇಳಿದನು, ಕಪಿಃ=ಕಪಿಯು, ನಿರ್ವಿಂದ, ನಿಗೃಹ್ಯತಾಂ=ಕೊಲ್ಲಲ್ಪಡಲಿ, ಇತಿ=ಹೀಗೆಂದು, ಬಹೂನ್-ಬಹು ಜನ, ಕಿಂಕರಾನ್=ಕಿಂಕರರೆಂಬ ರಾಕ್ಷಸರಿಗೆ, ದಿದೇಶ=ಆಜ್ಞಾಪಿಸಿದನು.

ತಾತ್ಪರ್ಯ.—ವನಭಂಗಮಾಡಿದ ಮಾರುತಿಯ ಚೇಷ್ಟೆಯನ್ನು ರಾವಣನು ಕೇಳಿ ಆ ಕಪಿಯನ್ನು ಹಿಡಿದು ಕೊಲ್ಲಿರೆಂದು ತನ್ನ ಕಿಂಕರರಿಗೆ ಆಜ್ಞಾಪಿಸಿದನು.

ಶ್ಲೋಕ ॥ ಸಮಸ್ತಶೋವಿಮೃತ್ಯವೋ ವರಾದ್ಧರಸ್ಯ ಕಿಂಕರಾಃ ।
ಸಮಾಸದನ್ ಮಹಾಬಲಂ ಸುರಾಂತರಾತ್ಮನೋಂಗಜಂ ॥೧೯॥

ಅರ್ಥ.—ಸಮಸ್ತಶಃ-ಸಮಸ್ತರಾದ, ಕಿಂಕರಾಃ=ಕಿಂಕರರು, ಹರಸ್ಯ=ಮಹೇಶ್ವರನ, ವರಾತ್=ವರಬಲದಿಂದ, ವಿಮೃತ್ಯವಃ-ಮರಣಶೂನ್ಯರು, ಸುರಾಂತರಾತ್ಮನಃ = ದೇವತೆಗಳ ಅಂತರ್ಯಾಮಿಯಾದ ವಾಯುದೇವರ, ಅಂಗಜಂ=ಪುತ್ರನಾದ, ಅತಏವ, ಮಹಾಬಲಂ=ಆದ್ದರಿಂದ ಮಹಾಬಲಿಷ್ಠನಾದ ಹನುಮಂತನನ್ನು ಆ ಕಿಂಕರರು ಸುತ್ತಲೂ ಆಕ್ರಮಿಸಿದರು.

ತಾತ್ಪರ್ಯ.—ಮಹೇಶ್ವರನ ವರಬಲದಿಂದ ಮರಣರಹಿತರಾದ ಆ ಕಿಂಕರರು ದೇವತೆಗಳ ಅಂತರ್ಯಾಮಿಯಾದ ವಾಯುದೇವರ ಕುಮಾರರಾದ ಹನುಮಂತದೇವರನ್ನು ಸುತ್ತಲೂ ಮುತ್ತಿದರು.

ಶ್ಲೋಕ ॥ ಅಶೀತಿಕೋಟಿಯೂಥಪಂ ಪುರಃಸರಾಷ್ಟಕಾಯುತಂ ।
ಅನೇಕಹೇತಿ ಸಂಕುಲಂ ಕಪೀಂದ್ರಮಾವೃಣೋದ್ಬಲಂ ॥೨೦॥

ಅರ್ಥ.—ಆ ಕಿಂಕರರು ಎಷ್ಟು ಜನರೆಂದರೆ? ಅನೇಕಹೇತಿಸಂಕುಲಂ=ಬಹು ಆಯುಧಗಳಿಂದಕೂಡಿದ, ಪುರಃಸರಾಷ್ಟಕಾಯುತಃ = ೮೦ ಸಾವಿರ ಅಗ್ರೇಸರರಿಂದ ಕೂಡಿದ, ಅಶೀತಿಕೋಟಿಯೂಥಪಂ - ೮೦ ಕೋಟಿ ಸೇನಾನಾಯಕರಿಂದ ಸಹಿತವಾದ, ಬಲಂ=ಸೇನೆಯು, ಕಪೀಂದ್ರಂ=ಕಪಿಶ್ರೇಷ್ಠನನ್ನು, ಅವೃಣೋತ್=ಆಕ್ರಮಿಸಿತು.

ಶ್ಲೋಕ ॥ ಸಮಾವೃತಸ್ತಥಾಯುಧೈಃ ಸತಾಡಿತಶ್ಚ ತೈರ್ಭೃಶಂ ।
ಚಕಾರತಾನ್ ಸಮಸ್ತಶಸ್ತಲಪ್ರಹಾರ ಚೂರ್ಣಿತಾನ್ ।೨೧।

ಅರ್ಥ.—ತೈಃ=ಕಿಂಕರನಾಮಕ ರಾಕ್ಷಸರಿಂದ, ಸಮಾವೃತಃ-ಸುತ್ತ ಲ್ಪಟ್ಟು, ತದಾ=ಹಾಗೆಯೇ, ಭೃಶಂ=ಅತ್ಯಂತವಾಗಿ, ಆಯುಧೈಃ=ಆಯು ಗಳಿಂದ, ತಾಡಿತಃ=ಹೊಡಿಸಿಕೊಳ್ಳಲ್ಪಟ್ಟಂಥಾ, ಸಃ-ಹನುಮಂತನು, ಸಮ ಸ್ತಶಃ-ಸಮಸ್ತರಾದಂಥಾ, ತಾನ್=ಆ ಕಿಂಕರರುಗಳನ್ನು, ತಳಪ್ರಹಾರಚೂ ರ್ಣಿತಾನ್=ಕೈತಳದ ಹೊಡತಗಳಿಂದ ಚೂರ್ಣಿತರನ್ನಾಗಿ, ಚಕಾರ=ಮಾಡಿ ದರು.

ತಾತ್ಪರ್ಯ.—ಹನುಮಂತನು ಸುತ್ತಮುತ್ತಲೂ ಆವರಿಸಿದ್ದ ಕಿಂಕರ ರುಗಳಿಂದ ಏಕಕಾಲದಲ್ಲಿ ಅನೇಕಾಯುಧಗಳಿಂದ ಹೊಡಸಿಕೊಂಡರೂ, ತಮ್ಮ ಕೈಪೆಟ್ಟುಗಳಿಂದಲೇ ಆ ಸಮೂಹವನ್ನು ನಾಶಮಾಡಿದರು.

ಶ್ಲೋಕ ॥ ಪುನಶ್ಚ ಮಂತ್ರಿಪುತ್ರಕಾನ್ ಸ ರಾವಣ ಪ್ರಚೋದಿತಾನ್ ।
ಮಮರ್ದ ಸಪ್ತ ಪರ್ವತ ಪ್ರಭಾನ್ ವರಾಭಿರಕ್ಷಿತಾನ್ ॥೨೨॥
ಬಲಾಗ್ರಗಾಮಿನಸ್ತಥಾ ಸಶರ್ವವಾಕ್ಸು ಗರ್ವಿತಾನ್ ।
ನಿಹತ್ಯ ಸರ್ವರಾಕ್ಷಸಾನ್ ತೃತೀಯಭಾಗ ಮಕ್ಷಿಣೋತ್ ॥೨೩॥

ಅರ್ಥ.—ಸಃ=ಹನುಮಂತನು, ಪುನಶ್ಚ-ಪುನಃ, ರಾವಣಪ್ರಚೋದಿತಾನ್=ರಾವಣನಿಂದ ಕಳುಹಿಸಲ್ಪಟ್ಟ, ವರಾಭಿರಕ್ಷಿತಾನ್=ರುದ್ರದೇವರ ವರದಿಂದ, ರಕ್ಷಿತರಾದಂಥಾ, ಪರ್ವತಪ್ರಭಾನ್=ಪರ್ವತ ಸಮಾನರಾದಂಥ ಸಪ್ತಮಂತ್ರಿಪುತ್ರಕಾನ್-ಏಳು ಜನ ಮಂತ್ರಿ ಕುಮಾರರನ್ನು, ಮಮರ್ದ- ಪಾದತಾಡನೆಯಿಂದ ಸಂಹರಿಸಿದನು, ತಥಾ=ಹಾಗೆಯೇ, ಶರ್ವವಾಕ್ಸು ಗರ್ವಿತಾನ್= ರುದ್ರದೇವರ ವಾಕ್ಯದಿಂದ ಅಹಂಕಾರಿಗಳಾದಂಥ, ಬಲಾಗ್ರ ಗಾಮಿನಃ=ಸೈನ್ಯದ ಮುಂದೆ ಯುದ್ಧಮಾಡುವಂಥಾ ರಾಕ್ಷಸರನ್ನು, ನಿಹತ್ಯ ಕೊಂದು, ಸರ್ವರಾಕ್ಷಸಾಂ-ಲಂಕೆಯಲ್ಲಿರುವ ಸಮಸ್ತ ರಾಕ್ಷಸರ, ತೃತೀಯ ಭಾಗಂ=ಮೂರನೇ ಒಂದು ಭಾಗವನ್ನು, ಅಕ್ಷಿಣೋತ್=ನಾಶಮಾಡಿದನು.

ತಾತ್ಪರ್ಯ.—ಪುನಃ ಮಾರುತಿಯು, ರಾವಣನಿಂದ ಪ್ರೇರಿತರಾಗಿ ರುದ್ರಬಲದಿಂದ ಮದಿಸಿಬಂದ ಏಳುಜನ ಮಂತ್ರಿ ಕುಮಾರರನ್ನೂ ಪಾದ ದಿಂದ ತಿಕ್ಕಿ ಸಂಹರಿಸಿದನು. ಸೈನ್ಯದ ಮುಂದೆ ಯುದ್ಧಮಾಡತಕ್ಕ ಬಲಿ ಷ್ಠರಾದ ರಾಕ್ಷಸರನ್ನು ಕೊಂದು ಲಂಕೆಯಲ್ಲಿರುವ ರಾಕ್ಷಸರಲ್ಲಿನ ಮೂರನೇ ಒಂದು ಭಾಗವನ್ನು ನಾಶಮಾಡಿದನು.

ಶ್ಲೋಕ || ಅನೌಪಮಂ ಹರೇರ್ಬಲಂ ನಿಶಮ್ಯ ರಾಕ್ಷಸಾಧಿಪಃ |
ಕುಮಾರಮಕ್ಷಮಾತ್ಮನಃ ಸಮಂ ಸುತಂ ನ್ಯಯೋಜಯತ್ ||೨೪||

ಅರ್ಥ.— ರಾಕ್ಷಸಾಧಿಪಃ=ರಾವಣನು, ಅನೌಪಮಂ=ಅತುಲವಾದ, ಹರೇಃ=ಕಪಿಯ, ಬಲಂ-ಪರಾಕ್ರಮವನ್ನು, ನಿಶಮ್ಯ=ಕೇಳಿ, ಆತ್ಮನಃ=ತನಗೆ, ಸಮಂ=ಬಲದಿಂದ ಸಮಾನನಾದ, ಸುತಂ=ತನ್ನ ಮಗನಾದ, ಕುಮಾರಮಕ್ಷಂ-ಅಕ್ಷಕುಮಾರನನ್ನು, ನ್ಯಯೋಜಯತ್=ಯುದ್ಧಮಾಡಲು ನಿಯಮಿಸಿದನು.

ತಾತ್ಪರ್ಯ.— ಕಪಿಶ್ರೇಷ್ಠನ ಪರಾಕ್ರಮವನ್ನು ಕೇಳಿದ ರಾವಣನು ಪರಾಕ್ರಮದಲ್ಲಿ ತನ್ನ ಸಮನಾದ ತನ್ನ ಮಗನಾದ ಅಕ್ಷಕುಮಾರನನ್ನು ಯುದ್ಧಕ್ಕೆ ಕಳುಹಿಸಿದನು.

ಶ್ಲೋಕ || ಸಸರ್ವಲೋಕ ಸಾಕ್ಷಿಣಃ ಸುತಂ ಶರೈರ್ವವರ್ಷಹ |
ಶಿತೈರ್ವರಾಸ್ತ್ರ ಮಂತ್ರಿತೈರ್ನಚೈನ ಮಭ್ಯ ಚಾಲಯತ್ ||೨೫||

ಅರ್ಥ.— ಸಃ-ಅಕ್ಷನು, ಸರ್ವಲೋಕಸಾಕ್ಷಿಣಃ=ಅಂತರ್ಯಾಮಿತ್ವದಿಂದ ಸರ್ವಲೋಕ ಸಾಕ್ಷಿಯಾದ ವಾಯುದೇವರ, ಸುತಂ=ಮಕ್ಕಳಾದ ಮಾರುತಿಯನ್ನು, ಶಿತೈಃ=ತೀಕ್ಷ್ಣವಾದ, ವರಾಸ್ತ್ರ ಮಂತ್ರಿತೈಃ = ಶ್ರೇಷ್ಟ ಅಸ್ತ್ರಮಂತ್ರದಿಂದ ಅಭಿಮಂತ್ರಿತವಾದ, ಶರೈಃ=ಬಾಣಗಳಿಂದ, ವವರ್ಷಹ=ಮಳೆಗರೆದನು. ಆದರೂ ಅವು, ಏನಂ=ಹನುಮಂತದೇವರನ್ನು, ನಾಭ್ಯಚಾಲಯತ್=ಅಲ್ಲಾಡಿಸಲಿಲ್ಲ.

ತಾತ್ಪರ್ಯ.— ಅಕ್ಷನು, ಸರ್ವಾಂತರ್ಯಾಮಿಗಳಾಗಿ ಸಕಲರ ಕರ್ಮಕ್ಕೂ ಸಾಕ್ಷಿಭೂತರಾದ ವಾಯುದೇವರ ಪುತ್ರರ ಮೇಲೆ ಅಮೋಘವಾದ ಮಂತ್ರಪೂರಿತ ಬಾಣಗಳನ್ನು ಮಳೆಗರೆದನು. ಆದರೂ ಆ ಮಾರುತಿಯನ್ನು ಅಲ್ಲಾಡಿಸದೇ ಹೋದನು.

ಶ್ಲೋಕ || ಸಮಂಡಮಧ್ಯಕಾಸುತಂ ಸಮೀಕ್ಷ್ಯ ರಾವಣೋಪಮಂ ||
ತೃತೀಯ ಏಷಚಾಂಶಕೋ ಬಲಸ್ಯ ಹೀತ್ಯಚಿಂತಯತ್ ||೨೬||

ಅರ್ಥ.— ಸಃ=ಮಾರುತಿಯು, ಮಂಡಮಧ್ಯಕಾಸುತಂ-ಮಂಡೋದರಿಯ ಮಗನಾದ, ರಾವಣೋಪಮಂ=ಬಲದಲ್ಲಿ ರಾವಣನಿಗೆ ಸಮನಾದ

ಅಕ್ಷನನ್ನು, ಸಮೀಕ್ಷ್ಯ=ನೋಡಿ, ಏಷಃ-ಈ ಅಕ್ಷನು, ಬಲಸ್ಯ=ರಾವಣನ ಬಲಕ್ಕೆ, ತೃತೀಯಾಂಶಕಃಹಿ=ಮೂರನೇ ಒಂದು ಭಾಗವು, ಇತಿ=ಎಂದು, ಅಚಿಂತಯತ್=ಯೋಚಿಸಿದರು.

ತಾತ್ಪರ್ಯ.—ಹನುಮಂತದೇವರು ಮಂಡೋದರಿಯ ಮಗನಾದ ಅಕ್ಷನನ್ನು ನೋಡಿ ಇವನು ರಾವಣನ ಬಲಕ್ಕೆ ಸಮನು, ಮತ್ತು ರಾವಣನು ಒಂದು, ಇಂದ್ರಜಿತು ಎರಡು, ಅಕ್ಷ ಮೂರು, ಈ ರೀತಿ ರಾವಣನ ಬಲಕ್ಕೆ ಈ ಅಕ್ಷನು ಮೂರನೇ ಒಂದು ಭಾಗವು ಎಂದು ಯೋಚಿಸಿದರು.

ಅವತಾರಿಕೆ.—ತರುವಾಯ ಹನುಮಂತದೇವರು ಅಕ್ಷನನ್ನು ಸಂಹರಿಸುವ ವಿಚಾರದಲ್ಲಿ ಹೀಗೆ ನಿಷ್ಕರಿಸುತ್ತಾರೆ. ಏನೆಂದರೆ:—

**ಶ್ಲೋಕ ॥ ನಿಧಾರ್ಯ ಏವರಾವಣಃ ಸರಾಘವಾಯನಾನ್ಯಥಾ ।**
**ಯದೀಂದ್ರಜನ್ಮಯಾಹತೋ ನಚಾಸ್ಯ ಶಕ್ತಿರೀಕ್ಷ್ಯತೇ ॥೨೭॥**

ಅರ್ಥ.—ಸಃರಾವಣಃ=ಆ ರಾವಣನು ರಾಘವಾಯ=ಶ್ರೀರಾಮನಿಗೋಸ್ಕರ, ನಿಧಾರ್ಯಏವ=ಬಿಡಲ್ಪಡತಕ್ಕವನೇ, ನಅನ್ಯಥಾ = ಬೇರೆಯಿಲ್ಲ ಅಂದರೆ ( ರಾಮನ ವಿನಃ ಇತರರಿಂದ ಸಂಹರಿಸಲ್ಪಡತಕ್ಕವನಲ್ಲವೆಂದು ಭಾವ ) ಯದಿ=ಒಂದು ಪಕ್ಷದಲ್ಲಿ, ಇಂದ್ರಜಿತ್-ಇಂದ್ರಜಿತುವು, ಮಯಾ=ನನ್ನಿಂದ, ಹತಶ್ಚೇತ್-ಸಂಹೃತನಾದರೆ, ಅಸ್ಯ-ಈ ಇಂದ್ರಜಿತುವಿನ, ಶಕ್ತಿಃ =ಶಸ್ತ್ರಾಸ್ತ್ರ ಶಾರೀರ ಬಲವು, ನೇಕ್ಷ್ಯತೇ-ನಮ್ಮವರಿಂದ ನೋಡಲ್ಪಡುವುದಿಲ್ಲ.

ತಾತ್ಪರ್ಯ.—ರಾವಣನು ಶ್ರೀರಾಮನಿಂದಲೇ ಸಂಹೃತನಾಗತಕ್ಕವನು, ಇಂದ್ರಜಿತುವನ್ನು ನಾನು ಸಂಹರಿಸಿದರೆ ಅವನ ಅಸ್ತ್ರ ಶಸ್ತ್ರ ದೇಹ ಬಲ ಇವುಗಳನ್ನು ನಮ್ಮ ಕಪಿಗಳು ನೋಡಲವಕಾಶವಾಗುವುದಿಲ್ಲ.

**ಶ್ಲೋಕ ॥ ಅತಸ್ತಯೋಃ ಸಮೋ ಮಯಾ ತೃತೀಯ ಏಷಹನ್ಯತೇ ।**
**ವಿಚಾರ್ಯ ಚೈವಮಾಶುತಂಪದೋಃ ಪ್ರಗೃಹ್ಯ ಪುಪ್ಲುವೇ ॥೨೮॥**

ಅರ್ಥ.—ಏಷಃ=ಇವನು, ತೃತೀಯಃ=ಮೂರನೆಯವನು, ತಯೋಃ -ರಾವಣೇಂದ್ರಜಿತುಗಳಿಗೆ, ಸಮಃ=ಸಮಾನನು, ಅತಃ=ಆದ್ದರಿಂದ, ಮಯಾ-ನನ್ನಿಂದ, ಹನ್ಯತೇ=ಸಂಹರಿಸಲ್ಪಡುತ್ತಾನೆ, ಏವಂ – ಹೀಗೆಂದು,

ವಿಚಾರ್ಯ ಚ=ಆಲೋಚಿಸಿಯೇ, ಆಶು=ಜಾಗ್ರತೆಯಾಗಿ, ತ್ವಂ=ಅಕ್ಷನನ್ನು, ಪದೇನೇಃ-ಕಾಲುಗಳನ್ನು, ಪ್ರಗೃಹ್ಯ=ಹಿಡಿದು, ಪುಪ್ಲುವೇ=ಹಾರಿದನು.

ತಾತ್ಪರ್ಯ.—ಈ ಅಕ್ಷನು ರಾವಣನ ಮೂರನೇ ಒಂದು ಭಾಗದವನು. ರಾವಣ, ಇಂದ್ರಜಿತು ಇವರಿಗೆ ಸಮಾನನು. ಆದ್ದರಿಂದ ಇವನನ್ನು ನಾನು ಸಂಹರಿಸುತ್ತೇನೆಂದು ಯೋಚಿಸಿ ಅವನ ಕಾಲುಗಳನ್ನು ಹಿಡಿದುಕೊಂಡು ಮೇಲಕ್ಕೆ ಹಾರಿದನು.

**ಶ್ಲೋಕ ॥ ಸ ಚಕ್ರವದ್ಭ್ರಮಾತುರಂ ವಿಧಾಯ ರಾವಣಾತ್ಮಜಂ ।**
**ಅಪೋಥಯದ್ಧರಾತಲೇ ಕ್ಷಣೇನ ಮಾರುತೀತನುಃ ॥೨೯॥**

ಅರ್ಥ.—ಮಾರುತೀತನುಃ=ವಾಯುಪುತ್ರನಾದ, ಸಃ=ಹನುಮಂತನು, ರಾವಣಾತ್ಮಜಂ=ರಾವಣನ ಪುತ್ರನನ್ನು, ಚಕ್ರವತ್ = ಕುಂಬಾರನ ಚಕ್ರದಂತೆ, ಭ್ರಮಾತುರಂ-ತಿರುಗುವುದರಿಂದ, ದುಃಖಿತನನ್ನಾಗಿ, ವಿಧಾಯ ಮಾಡಿ, ಕ್ಷಣೇನ=ನಿಮಿಷದಲ್ಲೇ, ಧರಾತಲೇ=ಭೂಮಿಯಮೇಲೆ, ಅಪೋತಯತ್-ಒಗೆದನು.

ತಾತ್ಪರ್ಯ-ಹನುಮಂತನು ಅಕ್ಷನನ್ನು ಗರಗರನೆ ತಿರುಗಿಸಿ ದುಃಖವನ್ನುಂಟುಮಾಡಿ, ನೆಲದಮೇಲೆ ಒಗೆದನು.

**ಶ್ಲೋಕ ॥ ವಿಚೂರ್ಣಿತೇ ಧರಾತಲೇ ನಿಜೇಸುತೇ ಸರಾವಣಃ ।**
**ನಿಶಮ್ಯಶೋಕ ತಾಪಿತಸ್ತದಗ್ರಜಂ ಸಮಾದಿಶತ್ ॥೩೦॥**

ಅರ್ಥ.—ಸರಾವಣಃ=ಆ ರಾವಣನು, ನಿಜೇ-ತನ್ನ, ಸುತೇ-ಕುಮಾರನು, ಧರಾತಲೇ-ಭೂಮಿಯಮೇಲೆ, ವಿಚೂರ್ಣಿತೇಸತಿ-ಹನುಮಂತನಿಂದ ಅಂಗಭಂಗವಾಗಿ ಸಾಯಲಾಗಿ, ಅದನ್ನು, ನಿಶಮ್ಯ=ಕೇಳಿ, ಶೋಕತಾಪಿತಃ =ದುಃಖದಿಂದ ತಪ್ತನಾಗಿ, ತದಗ್ರಜಂ=ಅವನ ಅಣ್ಣನಾದ ಇಂದ್ರಜಿತುವನ್ನ ಸಮಾದಿಶತ್=ಹನುಮಂತನ ಮೇಲೆ ಯುದ್ಧಮಾಡೆಂದು ಅಪ್ಪಣೆಮಾಡಿದನು.

ತಾತ್ಪರ್ಯ.—ಅಕ್ಷನು ಸತ್ತದ್ದನ್ನು ಕೇಳಿ ರಾವಣನು ಶೋಕ ತಪ್ತನಾಗಿ ಅವನನ್ನು ಅಣ್ಣನಾದ ಇಂದ್ರಜಿತುವನ್ನು ಯುದ್ಧಕ್ಕೆ ಕಳುಹಿಸಿದನು.

**ಶ್ಲೋಕ ॥ ಅಥೇಂದ್ರಜಿನ್ಮಹಾಶರೈರ್ವರಾಸ್ತ್ರಸಂಪ್ರಯೋಜಿತೈಃ ।**
**ತತಕ್ಷ ವಾನರೋತ್ತಮಂ ನಚಾಶಕದ್ವಿಚಾಲನೇ ॥೩೧॥**

ಅರ್ಥ.—ಅನಂತರದಲ್ಲಿ, ಇಂದ್ರಜಿತ್=ಇಂದ್ರಜಿತುವು, ವರಾಸ್ತ್ರ ಸಂಪ್ರಯೋಜಿತೈಃ=ಶ್ರೇಷ್ಠವಾದ ಅಸ್ತ್ರಮಂತ್ರಗಳಿಂದ ಅಭಿಮಂತ್ರಿಸಲ್ಪಟ್ಟ ಮಹಾಶರೈಃ-ಪ್ರಬಲವಾದ ಬಾಣಗಳಿಂದ, ವಾನರೋತ್ತಮಂ=ಕಪಿಶ್ರೇಷ್ಠನನ್ನು, ತತಕ್ಷ=ಹೊಡೆದನು. ವಿಚಾಲನೇಚ-ಹನುಮಂತನನ್ನು ಅಲ್ಲಾಡಿಸಲೂ ಕೂಡ, ನಾಶಕತ್=ಶಕ್ಯವಾಗಲಿಲ್ಲ.

ತಾತ್ಪರ್ಯ.—ಇಂದ್ರಜಿತುವು ಶ್ರೇಷ್ಠವಾದ ಮಂತ್ರಗಳಿಂದ ಅಭಿಮಂತ್ರಿಸಿ ಮಹಾಬಾಣಗಳನ್ನು ಮಾರುತಿಯಮೇಲೆ ಬಿಟ್ಟರೂ ಅವು ಮಾರುತಿಯನ್ನು ಅಲುಗಾಡಿಸುವುದಕ್ಕೂ ಕೂಡ ಸಮರ್ಥವಾಗಲಿಲ್ಲ.

**ಶ್ಲೋಕ ॥ ಅಥಾಸ್ತ್ರಮುತ್ತಮಂ ವಿಧೇರ್ಯುಯೋಜ ಸರ್ವದುಃಸಹಂ ।**
**ಸತೇನ ತಾಡಿತೋ ಹರಿರ್ವ್ಯಚಿಂತಯನ್ನಿರಾಕುಲಃ ॥೩೨॥**

ಅರ್ಥ.—ಅಥ-ಅನಂತರದಲ್ಲಿ, ಸಃ-ಇಂದ್ರಜಿತುವು, ಸರ್ವದುಸ್ಸಹಂ ಸರ್ವರಿಂದಲೂ ಸಹಿಸಲಶಕ್ಯವಾದ, ಉತ್ತಮಂ=ಶ್ರೇಷ್ಟವಾದ, ವಿಧೇಃ=ಬ್ರಹ್ಮದೇವರ ಸಂಬಂಧವಾದ, ಅಸ್ತ್ರಂ=ಅಸ್ತ್ರವನ್ನು ಯುಯೋಜ=ಪ್ರಯೋಗಿಸಿದನು, ತೇನ=ಆ ಅಸ್ತ್ರದಿಂದ, ತಾಡಿತಃ=ಹೊಡೆಸಿಕೊಳ್ಳಲ್ಪಟ್ಟ, ನಿರಾಕುಲಃ=ಬ್ರಹ್ಮಾಸ್ತ್ರದಿಂದ ದುಃಖವಿಲ್ಲದಿರುವ, ಹರಿಃ=ಹನುಮಂತದೇವರು, ವ್ಯಚಿಂತಯತ್-ಈ ರೀತಿ ಆಲೋಚಿಸಿದರು.

ತಾತ್ಪರ್ಯ.-ಇಂದ್ರಜಿತುವು ರುದ್ರೇಂದ್ರಾದಿಗಳೂ ಸಹಿಸಲಾರದ ಶ್ರೇಷ್ಠವಾದ ಬ್ರಹ್ಮಾಸ್ತ್ರವನ್ನು ಮಾರುತಿಯಮೇಲೆ ಬಿಟ್ಟನು. ಆ ಅಸ್ತ್ರದಿಂದ ಹನುಮಂತನಿಗೆ ದುಃಖವಾಗಲಿಲ್ಲ. ಆದರೂ ತಾನು ಮುಂದೆ ಏನು ಮಾಡಬೇಕೆಂದು ಯೋಚಿಸಿದನು.

**ಶ್ಲೋಕ ॥ ಮಯಾ ವರಾವಿಲಂಘಿತಾಹ್ಯನೇಕಶಃ ಸ್ವಯಂಭುವಃ ।**
**ಸಮಾನನೀಯಏವ ಮೇತತೋತ್ರಮಾನಯಾಮ್ಯಹಂ ॥೩೩॥**

ಅರ್ಥ.— ಮಯಾ-ನನ್ನಿಂದ, ಸ್ವಯಂಭುವಃ-ಬ್ರಹ್ಮದೇವರ, ವರಾಃ=ವರಗಳು, ಅನೇಕಶಃ=ಅನೇಕಾವರ್ತಿ, ವಿಲಂಘಿತಾಃ=ನನ್ನಿಂದ ಸಂಸ್ಕೃತರಲ್ಲದ ರಾಕ್ಷಸರನ್ನು ಕೊಂದು ನಾಶಪಡಿಸಲ್ಪಟ್ಟಿರುತ್ತೆ. ಯಸ್ಮಾತ್-ಯಾವ ಕಾರಣದ ದೆಶೆಯಿಂದ, ಸಬ್ರಹ್ಮಾ-ಆ ಬ್ರಹ್ಮದೇವರು, ಮಯಾ-ನನ್ನಿಂದ, ಮಾನನೀಯಃ=ಮರ್ರ್ಯಾದಾರ್ಹನೋ, ತತಃ=ಆ ಕಾರಣದ್ದೆಶೆಯಿಂದ, ಅತ್ರಯಾ=ಇಂದ್ರಜಿತುವು ಬಿಟ್ಟ ಬ್ರಹ್ಮಾಸ್ತ್ರದಲ್ಲಿ, ಅಹ=ನಾನು, ಮಾನಯಾಮಿ=ಬ್ರಹ್ಮನನ್ನೇ ಮರ್ರ್ಯಾದೆಮಾಡುತ್ತೇನೆ.

ತಾತ್ಪರ್ಯ.—ಬ್ರಹ್ಮನ ವರದಿಂದ ಅವಧ್ಯರಾದ ಅನೇಕ ರಾಕ್ಷಸರನ್ನು ಕೊಂದು ಅನೇಕಾವರ್ತಿ ನಾನು ಬ್ರಹ್ಮನ ವರಗಳನ್ನ ಉಲ್ಲಂಘಿಸಿದ್ದೇನೆ. ಆ ಬ್ರಹ್ಮನು ನನ್ನಿಂದ ಮರ್ಯಾದಾರ್ಹನು. ಆದ್ದರಿಂದ ಈ ಇಂದ್ರಜಿತು ಬಿಟ್ಟ ಬ್ರಹಾಸ್ತ್ರವನ್ನು ಮರ್ರ್ಯಾದೆ ಮಾಡುತ್ತೇನೆಂದು ನಿಷ್ಕರ್ಷೆಮಾಡಿದನು.

ಶ್ಲೋಕ ॥ ಇಮೇಚ ಕುರ್ಯುರ್ರತ್ರಕಿಂ ಪ್ರಹೃಷ್ಟ ರಾಕ್ಷಸಾಂಗಣಾಃ ।
ಇತೀಹಲಕ್ಷ್ಯಮೇವಮೇ ಶರಾವಣಶ್ಚ ದೃಶ್ಯತೇ ॥೩೪॥

ಅರ್ಥ.—ಅತ್ರ=ಈ ಬ್ರಹ್ಮಾಸ್ತ್ರಕ್ಕೆ ಮರ್ರ್ಯಾದೆ ಮಾಡಿದರೆ, ಇಮೇಚ=ಇಲ್ಲಿ ಶೇರಿರುವ, ಪ್ರಹೃಷ್ಟರಾಕ್ಷಸಾಂಗಣಾಃ-ಸಂತೋಷಪಟ್ಟ ರಾಕ್ಷಸ ಸಮೂಹವಾದರೂ, ಕಿಂಕುರ್ಯುಃ=ಏನು ಮಾಡಿಯಾರು? (ಅಲ್ಲದೆ ಪ್ರಯೋಜನಾಂತರವನ್ನು ಹೇಳುತ್ತಾರೆ) ಇಹ=ಇಲ್ಲಿ, ಮೇ=ನನಗೆ, ಲಕ್ಷ್ಯಂ ನೋಡಬೇಕಾದ ವಸ್ತುವು, ರಾವಣಏವ=ರಾವಣನು ತಾನೇ, ಸಃ-ಅವನು, ದೃಶ್ಯತೇಚ-ನೋಡಿಸಿಕೊಳ್ಳಲ್ಪಡುತ್ತಾನೆ, ಇತಿ=ಹೀಗೆಂದು ಯೋಚಿಸಿದನು.

ತಾತ್ಪರ್ಯ.—ಬ್ರಹ್ಮಾಸ್ತ್ರಕ್ಕೆ ಮರ್ರ್ಯಾದೆಮಾಡಿ ನಾನು ಅದಕ್ಕೆ ಶಿಕ್ಕಿಬಿದ್ದರೆ ಈ ರಾಕ್ಷಸ ಸಮೂಹವು ಸಂತೋಷಹೊಂದಿ ನನ್ನನ್ನು ಏನುಮಾಡಿಯಾರು? ಅಂದರೆ ಏನು ಮಾಡುವುದಕ್ಕೂ ಇವರು ಶಕ್ತರಲ್ಲ. ನಾನು ಬ್ರಹ್ಮಾಸ್ತ್ರಕ್ಕೆ ಶಿಕ್ಕುವದರಿಂದ ಬ್ರಹ್ಮನಿಗೆ ಮರ್ರ್ಯಾದೆ ಮಾಡುವದು ಒಂದಲ್ಲದೆ ನಾನು ಮುಖ್ಯವಾಗಿ ಯಾರನ್ನು ನೋಡಬೇಕೆಂದಿರುವೆನೋ ಆ ರಾವಣನನ್ನು ನೋಡುವುದಕ್ಕೆ ಅವಕಾಶವಾಗುವದು.

**ಶ್ಲೋಕ ॥ ಇದಂ ಸಮೀಕ್ಷ್ಯಬದ್ಧವತ್ಥ್ಸಿತಂ ಕಪೀಂದ್ರಮಾರುತೇ ।**
**ಬಬಂಧುರನ್ಯಪಾಶಕೈಃ ಜಗಾಮಚಾಸ್ತ್ರಮಸ್ಯತತ್ ॥೩೫॥**

ಅರ್ಥ.—ಇದಂ=ಈ ಎರಡು ಕಾರ್ಯಗಳನ್ನು, ಸಮೀಕ್ಷ್ಯ=ಯೋಚಿಸಿ ಬದ್ಧವತ್-ಕಟ್ಟುಬಿದ್ದವರೋಪಾದಿಯಲ್ಲಿ, ಸ್ಥಿತಂ=ಇರುವ, ಕಪೀಂದ್ರಂ=ಕಪಿಶ್ರೇಷ್ಠನನ್ನು, ತೇ=ಆ ರಾಕ್ಷಸರು, ಆಶು=ಜಾಗ್ರತೆಯಾಗಿ, ಅನ್ಯಪಾಶಕೈಃ=ಬ್ರಹ್ಮಾಸ್ತ್ರವಲ್ಲದೆ ಇತರ ಪಾಶಗಳಿಂದಲೂ, ಬಬಂಧುಃ=ಕಟ್ಟಿದರು. ಅಸ್ಯ-ಇಂದ್ರಜಿತುವಿನ, ತದಸ್ತ್ರಂ=ಆ ಬ್ರಹ್ಮಾಸ್ತ್ರವು, ಜಗಾಮ=ಬ್ರಹ್ಮಲೋಕವನ್ನು ಕುರಿತು ಹೋಯಿತು.

ತಾತ್ಪರ್ಯ.—ಎರಡು ಕಾರ್ಯಗಳನ್ನೂ ಯೋಚಿಸಿ ಹನುಮಂತದೇವರು ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದವರಂತೆ ನಿಲ್ಲಲು ರಾಕ್ಷಸರು ಇತರ ಹಗ್ಗಗಳನ್ನು ತಂದು ಅವರನ್ನು ಕಟ್ಟಿದರು. ಇದರಿಂದ ಬ್ರಹ್ಮಾಸ್ತ್ರವು, ಬ್ರಹ್ಮಲೋಕವನ್ನು ಕುರಿತು ಹೊರಟು ಹೋಯಿತು.

**ಶ್ಲೋಕ ॥ ಅಥಪ್ರಗೃಹ್ಯ ತಂ ಕಪಿಂ ಸಮೀಪ ಮಾನಯಂಶ್ಚ ತೇ ।**
**ನಿಶಾಚರೇಶ್ವರಸ್ಯ ತಂ ಪ್ರಹೃಷ್ಟವಾನ್ಸ ರಾವಣಃ ॥೩೬॥**

ಅರ್ಥ.—ಅಥ=ಅನಂತರದಲ್ಲಿ, ತೇ=ರಾಕ್ಷಸರು, ತಂಕಪಿಂ=ಆ ಕಪಿಶ್ರೇಷ್ಟನನ್ನು, ಪ್ರಗೃಹ್ಯ=ಹಿಡಿದು, ನಿಶಾಚರೇಶ್ವರಸ್ಯ=ರಾವಣನ, ಸಮೀಪಂ=ಸಮೀಪವನ್ನು ಕುರಿತು, ಆನಯಂಶ್ಚ=ತೆಗೆದುಕೊಂಡು ಹೋದರಷ್ಟೆ ! ಪ್ರಹೃಷ್ಟವಾನ್-ಸಂತುಷ್ಟನಾದ, ಸರಾವಣಃ=ಆ ರಾವಣನು, ತಂ=ಆ ಕಪಿಯನ್ನು ( ಪ್ರಪ್ರಚ್ಛ=ಪ್ರಶ್ನಿಸಿದನು. )

ತಾತ್ಪರ್ಯ.—ರಾಕ್ಷಸರು ಮಾರುತಿಯನ್ನು ಹಿಡಿದು ರಾವಣನ ಸಮೀಪಕ್ಕೆ ಕರೆದುಕೊಂಡು ಹೋದರು. ಇವನನ್ನು ಕಂಡು ರಾವಣನು ಸಂತೋಷಪಟ್ಟು ಕಪಿಯನ್ನು ಈ ರೀತಿ ಪ್ರಶ್ನೆಮಾಡಿದನು.

**ಶ್ಲೋಕ ॥ ಕಪೇ ಕುತೋಽಸಿ ಕಸ್ಯವಾಕಿಮರ್ಥಮೀದೃಶಂ ಕೃತಂ ।**
**ಇತೀರಿತಃ ಸಚಾವದತ್ಪ್ರಣಮ್ಯ ರಾಮಮೀಶ್ವರಂ ॥೩೭॥**

ಅರ್ಥ.—ಕಪೇ=ಎಲೈ ಕೋಡಗನೇ, ತ್ವಂ=ನೀನು, ಕುತಃ=ಯಾವ ದ್ವೀಪದಿಂದ, ಆಸಿ=ಬಂದಿರುತ್ತೀ ? ಕಸ್ಯವಾ-ಯಾರ ದೂತ, ಈದೃಶಂ-ವನಭಂಗ ರಾಕ್ಷಸ ಸಂಹಾರ ರೂಪವಾದ ಕಾರ್ಯವನ್ನು, ಕಿಮಿರ್ಥಂ=ಏನು ಕಾರಣ, ಕೃತಂ-ಮಾಡಿದ್ದೀ ? ಇತಿ=ಹೀಗೆಂದು, ಈರಿತಃ=ಕೇಳಿಸಿಕೊಳ್ಳಲ್ಪಟ್ಟ, ಸಚ-ಹನುಮಂತದೇವರು, ಈಶ್ವರಂ=ತನಗೆ ಸ್ವಾಮಿಯಾದ, ರಾಮಂ=ಶ್ರೀರಾಮಚಂದ್ರದೇವರನ್ನು, ಪ್ರಣಮ್ಯ=ನಮಸ್ಕರಿಸಿ, ಅವದತ್-ಹೇಳಿದರು.

ತಾತ್ಪರ್ಯ.—ರಾವಣನು ಮಾರುತಿಯನ್ನು ಕುರಿತು “ ಎಲಾ ಕೋಡಗವೇ ? ಯಾವ ದ್ವೀಪದಿಂದ ಬಂದೆ ? ನೀನು ಯಾರ ದೂತಾ ? ವನಭಂಗವನ್ನೇಕೆ ಮಾಡಿದೆ ? ರಾಕ್ಷಸರನ್ನು ಕೊಂದದ್ದೇಕೆ ? ” ಎಂದು ಕೇಳಲು, ಹನುಮಂತದೇವರು ಸರ್ವೇಶ್ವರನಾಗಿಯೂ ತನಗೆ ಸ್ವಾಮಿಯಾಗಿಯೂ ಇರುವ ಶ್ರೀರಾಮಚಂದ್ರದೇವರನ್ನು ಮನದಲ್ಲಿ ನಮಸ್ಕರಿಸಿ ರಾವಣನನ್ನು ಕುರಿತು ಹೇಳತೊಡಗಿದರು.

**ಶ್ಲೋಕ ॥ ಅವೈಹಿದೂತಮಾಗತಂ ದುರಂತವಿಕ್ರಮಸ್ಯಮಾಂ । ರಘೋತ್ತಮಸ್ಯ ಮಾರುತಿಂ ಕುಲಕ್ಷಯೇತವೇಶ್ವರಂ ॥೩೮॥**

ಅರ್ಥ.—ಮಾರುತಿಯು ಹೇಳಿದ್ದೇನೆಂದರೆ.—ದುರಂತವಿಕ್ರಮಸ್ಯ=ಮೇರೆ ಇಲ್ಲದ ಪರಾಕ್ರಮವುಳ್ಳ, ರಘೂತ್ತಮಸ್ಯ = ರಘುಕುಲ ಶ್ರೇಷ್ಠನಾದ ಶ್ರೀರಾಮನ, ದೂತಂ=ದೂತನನ್ನಾಗಿಯೂ, ತವ= ನಿನ್ನ, ಕುಲಕ್ಷಯೇ=ವಂಶನಾಶ ವಿಷಯದಲ್ಲಿ, ಈಶ್ವರಂ-ಸಮರ್ಥನನ್ನಾಗಿಯೂ, ಆಗತಂ=ಬಂದಿರತಕ್ಕ, ಮಾಂ=ನನ್ನನ್ನು, ಮಾರುತಿಂ-ಮರುತ್ಪುತ್ರನಾಗಿ, ಅವೈಹಿ=ತಿಳಿ.

ತಾತ್ಪರ್ಯ.—ಮಾರುತಿಯು ಹೇಳುತ್ತಾನೆ.—ಎಲಾ ರಾವಣಾ ! ಇಲ್ಲಿಗೆ ಬಂದಿರತಕ್ಕ ನಾನು ಅಪಾರಪರಾಕ್ರಮಿಯಾದ ಶ್ರೀರಾಮಚಂದ್ರನ ದೂತನು. ವಾಯು ಕುಮಾರನು. ನಿನ್ನ ವಂಶನಾಶಮಾಡತಕ್ಕ ವಿಷಯದಲ್ಲಿ ಸಮರ್ಥನು. ಎಂದು ತಿಳಿ.

**ಶ್ಲೋಕ ॥ ನಚೇತ್ಪ್ರದಾಸ್ಯಸಿತ್ವರನ್ರಘೂತ್ತಮ ಪ್ರಿಯಾಂ ತದಾ । ಸಪುತ್ರ ಮಿತ್ರಬಾಂಧವೋ ವಿನಾಶಮಾಶುಯಾಸ್ಯಸಿ ॥೩೯॥**

ಅರ್ಥ.—( ರಾವಣಾ) ತ್ವಂ=ನೀನು, ತ್ವರ್ದ=ವಿಚಾರಮಾಡದೆ ಕೂಡಲೆ, ರಘೂತ್ತಮಪ್ರಿಯಂ=ಶ್ರೀರಾಮನ ಪತ್ನಿಯಾದ ಸೀತೆಯನ್ನು, ಪ್ರದಾಸ್ಯಸಿನಚೇತ್=ರಾಮನಿಗೆ ಒಪ್ಪಿಸದೇ ಹೋದಲ್ಲಿ, ತದಾ=ಆವಾಗ, ಸಪುತ್ರಮಿತ್ರಬಾಂಧವಃ=ಮಕ್ಕಳು ಸ್ನೇಹಿತರು ಬಂಧುಗಳಿಂದ ಸಹಿತನಾಗಿ, ವಿನಾಶಂ=ನಾಶವನ್ನು, ಆಶು=ಜಾಗ್ರತೆಯಾಗಿ, ಯಾಸ್ಯಸಿ=ಹೊಂದುತ್ತೀ.

ತಾತ್ಪರ್ಯ.—ಎಲಾ ರಾವಣಾ ! ನೀನು ವಿಚಾರವನ್ನೇ ಮಾಡದೇ ಈ ಕ್ಷಣವೇ ಸೀತಾದೇವಿಯನ್ನು ಶ್ರೀರಾಮನಿಗೆ ಒಪ್ಪಿಸದೇ ಹೋದರೆ ಪುತ್ರ ಮಿತ್ರ ಬಾಂಧವರೊಡನೆ ಜಾಗ್ರತೆ ನಾಶಹೊಂದುತ್ತೀ.

**ಶ್ಲೋಕ || ನ ರಾಮಬಾಣ ಧಾರಣೇ ಕ್ಷಮಾಃ ಸುರೇಶ್ವರಾ ಅಪಿ || ವಿರಿಂಚ ಶರ್ವಪೂರ್ವಕಾಃ ಕಿಮುತ್ವಮಲ್ಪ ಸಾರಕಃ ||೪೦||**

ಅರ್ಥ.—ವಿರಿಂಚಶರ್ವಪೂರ್ವಕಾಃ-ಬ್ರಹ್ಮ ರುದ್ರರೇ ಮೊದಲಾದ, ಸುರೇಶ್ವರಾಅಪಿ=ದೇವಶ್ರೇಷ್ಠರೂ ಕೂಡ, ರಾಮಬಾಣಧಾರಣೇ = ನಮ್ಮ ರಾಮನ ಬಾಣದ ಹೊಡೆತವನ್ನು ಸಹಿಸಲು, ನಕ್ಷಮಾಃ-ಶಕ್ತರಲ್ಲ. ಅಲ್ಪ ಸಾರಕಃ=ಪರಾಕ್ರಮ ಹೀನನಾದ, ತ್ವಂ=ನೀನು, ಕಿಮು=ಎಷ್ಟು ಮಾತ್ರದವನು (ಅಂದರೆ ನೀನು ಸಹಿಸಲಾರಿ. )

ತಾತ್ಪರ್ಯ.—ಬ್ರಹ್ಮ ರುದ್ರಾದಿ ದೇವತೆಗಳೇ ರಾಮಬಾಣದ ಹೊಡೆತವನ್ನು ಸಹಿಸಲಾರರು. ಅಂದಮೇಲೆ ಅಲ್ಪನಾದ ನೀನು ರಾಮನನ್ನು ಕೆಣಕಿ ಬದುಕುವುದೇ ಇಲ್ಲ.

**ಶ್ಲೋಕ || ಪ್ರಕೋಪಿತಸ್ಯ ತಸ್ಯ ಕಃ ಪುರಸ್ಥಿತೌಕ್ಷಮೋಭವೇತ್ | ಸುರಾಸುರೋರುಗಾದಿಕೇ ಜಗತ್ಯ ಚಿಂತ್ಯ ಕರ್ಮಣಃ ||೪೧||**

ಅರ್ಥ.—ಅಚಿಂತ್ಯಕರ್ಮಣಃ-ಯೋಚಿಸಲು ಅಸಾಧ್ಯನಾದ ಕಾರ್ಯವುಳ್ಳ, ಪ್ರಕೋಪಿತಸ್ಯ-ಕೋಪಯುಕ್ತನಾದ, ತಸ್ಯ=ಆ ಶ್ರೀರಾಮನ, ಪುರಃ-ಮುಂದೆ, ಸ್ಥಿತೌ-ನಿಲ್ಲುವುದಕ್ಕೆ, ಸುರಾಸುರೋರುಗಾದಕೇ=ದೇವತೆಗಳು, ದೈತ್ಯರು, ಸರ್ಪಗಳು, ಇವೇ ಮೊದಲಾದ, ಜಗತೀ-ಪ್ರಪಂಚದಲ್ಲಿರುವ, ಕಃ-ಯಾರು, ಕ್ಷಮಃ=ಶಕ್ತರು, ಭವೇತ್=ಆದಾರು ?

ತಾತ್ಪರ್ಯ.-ಯೋಚಿಸುವದಕ್ಕೂ ಆಗದಂಥಾ ವ್ಯಾಪಾರವುಳ್ಳ ಶ್ರೀರಾಮನು ಕೋಪಯುಕ್ತನಾದರೆ ಅವನೆದುರಗಡೆ ನಿಲ್ಲಲು, ಸುರದೈತ್ಯ ಸರ್ಪ ಇವರೇ ಮೊದಲಾಗಿವುಳ್ಳ ಪ್ರಪಂಚದಲ್ಲಿ ಯಾವನು ತಾನೇ ಸಮರ್ಥನು? ಅಂದರೆ ಯಾರೂ ನಿಲ್ಲಲಾರರೆಂದರ್ಥ.

**ಶ್ಲೋಕ || ಇತೀರಿತೇವಧೋದ್ಯತಂ ನಿವಾರಯದ್ವಿಭೀಷಣಃ || ಸಪುಚ್ಛದಾಹ ಕರ್ಮಣಿನ್ಯಯೋಜಯನ್ನಿಶಾಚರಾನ್ ||೪೨||**

ಅರ್ಥ.-ಇತಿ=ಪೂರ್ವೋಕ್ತಪ್ರಕಾರವಾಗಿ, ಯಿರಿತೇಸತಿ=ಹನುಮಂತನು ಹೇಳುತ್ತಿರಲಾಗಿ, ವಧೋದ್ಯತಂ=ಹನುಮಂತನನ್ನು ಸಂಹರಿಸಲು ಉದ್ಯೋಗವುಳ್ಳ ರಾವಣನನ್ನು, ವಿಭೀಷಣಃ=ವಿಭೀಷಣನು, ನಿವಾರಯತು=ತಡೆದನು. ಸಃ=ಆ ರಾವಣನು, ಪುಚ್ಛದಾಹಕರ್ಮಣಿ=ಹನುಮಂತನ ಬಾಲಸುಡುವ ಕೆಲಸದಲ್ಲಿ, ನಿಶಾಚರಾನ್=ರಾಕ್ಷಸರುಗಳನ್ನು, ನ್ಯಯೋಜಯತು=ಅಪ್ಪಣೆಮಾಡಿದನು.

ತಾತ್ಪರ್ಯ.—ಹನುಮಂತನು ರಾವಣನ ಸಭೆಯಲ್ಲಿ ರಾಮನ ಮಹಿಮೆಯನ್ನು ಹೊಗಳಿ ರಾವಣನನ್ನು ನಿರಾಕರಿಸಿದುದನ್ನು ಕೇಳಿ ಕೋಪದಿಂದ ಈ ಕೋಡಗವನ್ನು ಕೊಲ್ಲಿರಿ ಎನ್ನಲು, ನೀತಿಯನ್ನು ಬಲ್ಲ ವಿಭೀಷಣನು ದೂತನನ್ನು ಕೊಲ್ಲುವುದು ರಾಜಧರ್ಮವಲ್ಲವೆಂದು ತಡೆದನು. ಆಗ ರಾವಣನು ಹನುಮಂತನ ಬಾಲಕ್ಕೆ ಬಟ್ಟೆಗಳನ್ನು ಸುತ್ತಿ ತೈಲದಲ್ಲಿ ಅದ್ದಿ ಬೆಂಕಿ ಹಚ್ಚಿಸಲು ತನ್ನ ರಾಕ್ಷಸ ಭೃತ್ಯರಿಗೆ ಅಪ್ಪಣೆಮಾಡಿದನು.

**ಶ್ಲೋಕ || ಅಥಾಸ್ಯ ವಸ್ತ್ರಸಂಚಯೈಃ ಪಿಧಾಯ ಪುಚ್ಛಮಗ್ನಯೇ | ದದುರ್ನದಾಹನಾಸ್ಯತನ್ಮರುತ್ಸಖೋಹುತಾಶನಃ ||೪೩||**

ಅರ್ಥ.-ಅಥ=ಅನಂತರದಲ್ಲಿ, ಅಸ್ಯ=ಈ ಹನುಮಂತನ, ಪುಚ್ಛಂ=ಬಾಲವನ್ನು, ವಸ್ತ್ರಸಂಚಯೈಃ=ವಸ್ತ್ರ ಸಮೂಹಗಳಿಂದ, ಪಿಧಾಯ-ಸುತ್ತಿ ಅಗ್ನಯೇ=ಅಗ್ನಿಗೋಸ್ಕರ, ದದುಃ=ಕೊಟ್ಟರು. ಯಿತಃ-ಯಾವ ಕಾರಣದಿಂದ, ಹುತಾಶನಃ=ಅಗ್ನಿಯು, ಮರುತ್ಸಖಃ - ವಾಯುದೇವರ ಸ್ನೇಹಿತನೋ, ತತಃ=ಆ ಕಾರಣದ ದೆಶೆಯಿಂದ, ತತ್ಪುಚ್ಛಂ=ಆ ಹನುಮಂತನ ಬಾಲವನ್ನು, ನದದಾಹ - ಸುಡಲಿಲ್ಲ.

ತಾತ್ಪರ್ಯ.—ರಾವಣನ ಅಪ್ಪಣೆಯಂತೆ ರಾಕ್ಷಸರು ವಸ್ತ್ರ ಸಮೂಹ ಗಳಲ್ಲಿ ಅಭಿವೃದ್ಧವಾದ ಬಾಲಕ್ಕೆ ಸುತ್ತಿ ಎಣ್ಣೆಯಲ್ಲಿ ಅದ್ದಿ ಬೆಂಕಿ ಹತ್ತಿಸಿ ದರು. ಆದರೆ ಹನುಮಂತನಿಗೆ ಅಗ್ನಿ ಸಂಬಂಧ ವ್ಯಥೆ ಉಂಟೆ ಅಂದರೆ ಅ ಗ್ನಿಯು ವಾಯುದೇವರಿಗೆ ಸ್ನೇಹಿತನಾದ್ದರಿಂದ ಅಗ್ನಿ ಸಂಬಂಧ ಶಿಖೆಯೂ ಸಹಾ ಆಗಲಿಲ್ಲ—ಸುಡಲಿಲ್ಲ. ಇದೇ ವಿಚಾರ ಆರ್ಷರಾಮಾಯಣದಲ್ಲಿ "ಸೀತಾಯಾಶ್ಚಾನೃಶಂಸೇನ ತೇಜಸಾ ರಾಘವಸ್ಯಚ ಪಿತುಶ್ಚಮಮ ಸಖ್ಯೇ ನನಮಾಂದಹತಿಪಾವಕಃ" ಸೀತಾದೇವಿಯ ದಯದಿಂದಲೂ, ಶ್ರೀರಾಮನ ತೇಜಸ್ಸಿನಿಂದಲೂ, ಅಗ್ನಿಯು ನಮ್ಮ ತಂದೆಯ ಸ್ನೇಹಿತನಾದುದರಿಂದಲೂ ನನ್ನನ್ನು ಸುಡಲಿಲ್ಲವೆಂದು ಹನುಮಂತನು ಹೇಳುತ್ತಾನೆ.

ಅವತಾರಿಕೆ.—ಹನುಮಂತನು ಮಹಾ ಶಕ್ತನು ರಾಕ್ಷಸರ ಈ ಚೇಷ್ಟೆಗಳನ್ನು ಹೇಗೆ ಸಹಿಸಿದನೆಂದರೆ.

**ಶ್ಲೋಕ || ಮಮರ್ಷ ಸರ್ವಚೇಷ್ಟಿತಂ ಸರಾಕ್ಷಸಾಂ ನಿರಾಮಯಃ ಬಲೋದ್ಧತ**
**ಶ್ಚ ಕೌತುಕಾತ್ಪ್ರದಗ್ಧುಮೇವತಾಂ ಪುರೀಂ ||೪೪||**

ಅರ್ಥ.—ಬಲೋದ್ಧತಃ=ಬಲದಲ್ಲಿ ಶ್ರೇಷ್ಠರಾದ, ನಿರಾಮಯಃ= ಆದ್ದರಿಂದಲೇ ಛೇದಭೇದಾದಿ ದುಃಖವಿಲ್ಲದ, ಸಃ=ಆ ಹನುಮಂತದೇವರು ಕೌತುಕಾತ್=ಸಂತೋಷದಿಂದ, ತಾಂಪುರೀಂ=ಆ ಲಂಕಾಪುರಿಯನ್ನು, ಪ್ರ ದಗ್ಧುಮೇವ=ಸುಡಬೇಕೆಂತಲೇ, ರಾಕ್ಷಸಾಂ=ರಾಕ್ಷಸರುಗಳ, ಸರ್ವಚೇಷ್ಟಿ ತಂ=ಹೊಡೆಯುವುದು, ಬಾಲಕ್ಕೆ ಬಟ್ಟೆ ಸುತ್ತುವುದು ಇವೇ ಮೊದಲಾದ ಚೇಷ್ಟೆಗಳನ್ನು, ಮಮರ್ಷ=ಸಹಿಸಿದರು.

ತಾತ್ಪರ್ಯ.—ಬಲದಲ್ಲಿ ಶ್ರೇಷ್ಠರಾದ್ದರಿಂದ ಛೇದಭೇದಾದಿ ದುಃಖವಿ ಲ್ಲದವರಾದ ಹನುಮಂತದೇವರು ರಾಕ್ಷಸರ ದುಶ್ಚೇಷ್ಟೆಗಳನ್ನು ಹೇಗೆ ಸಹಿಸಿ ದರು? ಅಂದರೆ, ಈ ಲಂಕಾಪುರಿಯನ್ನು ಸುಟ್ಟು ಸಂತೋಷಪಡಬೇಕೆಂ ಬುದಕ್ಕಾಗಿಯೇ ಸಹಿಸಿದರು. ಆರ್ಷರಾಮಾಯಣದಲ್ಲಿ ಇದೇ ವಿಚಾರದಲ್ಲಿ "ರಾಮನ ಪ್ರೀತ್ಯರ್ಥವಾಗಿಯೇ ರಾಕ್ಷಸರ ಚೇಷ್ಟೆಗಳನ್ನು ದಹಿಸುತ್ತೇನೆಂ ದು" ಹೇಳುತ್ತಾರೆ.

ಶ್ಲೋಕ ॥ " ಕಿಂತು ರಾಮಸ್ಯ ಪ್ರೀತ್ಯರ್ಥಂ ವಿಷಹಿಷ್ಯೇಹಮೀದೃಶಂ ದದಾಹಚಾಖಿಲಾಂ ಪುರೀಂ ಸ್ವಪುಚ್ಛಗೇನವಹ್ನಿನಾ । ಕೃತಿಸ್ತು ವಿಶ್ವಕರ್ಮಣೋಽಪ್ಯದಹ್ಯತಾಸ್ಯ ತೇಜಸಾ ॥೪೫॥

ಅರ್ಥ—ಸ್ವಪುಚ್ಛಗೇನ-ತಮ್ಮ ಬಾಲದಲ್ಲಿದ್ದ, ವಹ್ನಿನಾ=ಅಗ್ನಿಯಿಂದ, ಅಖಿಲಾಂ=ಸಮಸ್ತೈಶ್ವರ್ಯ ಸಹಿತವಾದ, ಪುರೀಂ=ಲಂಕಾನಗರವನ್ನು, ದದಾಹಚ=ಸುಟ್ಟುಬಿಟ್ಟರು. ಕೃತಿಸ್ತು=ಲಂಕಾನಿರ್ಮಾಣ ಕೆಲಸವಾದರೋ, ವಿಶ್ವಕರ್ಮಣೋಃ=ದೇವಬಡಗಿಯಾದ ವಿಶ್ವಕರ್ಮನದಾದರೂ ಅಸ್ಯ-ಹನುಮಂತದೇವರ, ತೇಜಸಾ=ತೇಜೋವಿಶೇಷದಿಂದ, ಅಸಹ್ಯತ-ಸುಡಲ್ಪಟ್ಟಿತು.

ತಾತ್ಪರ್ಯ.—ಮಾರುತಿಯು ತಮ್ಮ ಬಾಲಕ್ಕೆ ಹತ್ತಿಸಿದ್ದ ಬೆಂಕಿಯಿಂದಲೇ ಸಕಲೈಶ್ವರ್ಯ ಯುಕ್ತವಾದ ಲಂಕಾಪಟ್ಟಣವನ್ನು ದಹಿಸಿದರು. ಲಂಕಾನಗರಿಯು ವಿಶ್ವಕರ್ಮನಿಂದ ನಿರ್ಮಿತವಾದ್ದರಿಂದ ಅದನ್ನು ಸುಡುವ ಶಕ್ತಿ ಅಗ್ನಿಗುಂಟೆ ಅಂದರೆ-ಇಲ್ಲ. ಕೇವಲ ಮಾರುತಿಯ ತೇಜಸ್ಸಿನಿಂದಲೇ ದಗ್ಧವಾಯಿತು.

ಶ್ಲೋಕ ॥ ಸುವರ್ಣ ರತ್ನಕಾರಿತಾಂ ಸರಾಕ್ಷಸೋತ್ತಮೈಃ ಸಹ । ಪ್ರದಹ್ಯ ಸರ್ವತಃ ಪುರೀಂ ಮುದಾನ್ವಿತೋಜಗರ್ಜಚ ॥೪೬॥

ಅರ್ಥ.—ಸುವರ್ಣರತ್ನಕಾರಿತಾಂ=ಬಂಗಾರ, ರತ್ನ ಇವುಗಳಿಂದ ನಿರ್ಮಿತವಾದ, ರಾಕ್ಷಸೋತ್ತಮೈಃಸಹ=ರಾಕ್ಷಸ ಶ್ರೇಷ್ಠರಿಂದ ಸಹಿತವಾದ, ಸರ್ವತಃ-ಸಮಸ್ತವಾದಂಥಾ, ಪುರೀಂ = ಲಂಕಾನಗರಿಯನ್ನು, ಪ್ರದಹ್ಯ=ಸುಟ್ಟು, ಮುದಾನ್ವಿತಃ=ಸಂತೋಷಭರಿತರಾದಂಥಾ, ಸಃ=ಹನುಮಂತದೇವರು, ಜಗರ್ಜಚ=ಸಿಂಹನಾದವನ್ನು ಮಾಡಿದರು.

ತಾತ್ಪರ್ಯ.—ಮಾರುತಿಯು, ಚಿನ್ನ, ರತ್ನ ಇವುಗಳಿಂದ ರಚಿತವಾದ ಮತ್ತು ರಾಕ್ಷಸ ಶ್ರೀಸ್ತ್ರೀಯರಿಂದ ಸಹಿತವಾದ ಲಂಕಾನಗರಿಯನ್ನು ಸಮಗ್ರ ದಹಿಸಿ ಸಂತೋಷದಿಂದ ಸಿಂಹನಾದಮಾಡಿದರು.

ಶ್ಲೋಕ ॥ ಸರಾವಣಂ ಪುತ್ರಕಂ ತೃಣೋಪಮಂ ವಿಧಾಯಚ । ತಯೋಃ ಪ್ರಪಶ್ಯತೋಃ ಪುರೀಂ ವಿಧಾಯ ಭಸ್ಮಸಾದ್ಯಯೌ ॥೪೭॥

ಅರ್ಥ.—ಸಪುತ್ರಕಂ=ಪುತ್ರನಿಂದ ಸಹಿತನಾದ, ರಾವಣಂ=ರಾವಣನನ್ನು, ತೃಣೋಪಮಂ=ಹುಲ್ಲುಕಡ್ಡಿಗೆ ಸಮನಾಗಿ, ವಿಧಾಯ=ಮಾಡಿ, ಚ ಮತ್ತು, ಸಃ=ಹನುಮಂತದೇವರು, ತಯೋಃ=ರಾವಣೇಂದ್ರಜಿತು ಗಳ, ಪ್ರಪಶ್ಯತೋಃ=ಸಮಕ್ಷಮದಲ್ಲೀ, ಪುರೀಂ=ಲಂಕೆಯನ್ನು, ಭಸ್ಮಸಾತ್ =ಬೂದಿಯನ್ನಾಗಿ, ವಿಧಾಯ=ಮಾಡಿ, ಯಯೌ=ಹೊರಟರು.

ತಾತ್ಪರ್ಯ.— ಪುತ್ರನಿಂದ ಸಹಿತನಾದ ರಾವಣನನ್ನು ತೃಣದಂತೆ ಭಾವಿಸಿ ರಾವಣ ಇಂದ್ರಜಿತುಗಳು ನೋಡುವಂತೆ ಲಂಕೆಯನ್ನು ಬೂದಿಮಾಡಿ ಹನುಮಂತದೇವರು ಹೊರಟರು.

ಶ್ಲೋಕ ॥ ವಿಲಂಘ್ಯಚಾರ್ಣವಂ ಪುನಃ ಸ್ವಜಾತಿಭಿಃ ಪ್ರಪೂಜಿತಃ । ಪ್ರಭಕ್ಷ್ಯ ವಾನರೇಶಿತುರ್ಮಧು ಪ್ರಭುಂ ಸಮೇಯಿವಾನ್ ॥೪೮॥

ಅರ್ಥ.—ಅರ್ಣವಂ=ಸಮುದ್ರವನ್ನು, ಪುನಃ=ಮತ್ತೆ, ವಿಲಂಘ್ಯ ದಾಟಿ, ಸ್ವಜಾತಿಭಿಃ=ಕಪಿಗಳಿಂದ, ಪ್ರಪೂಜಿತಃ=ಪೂಜಿತರಾದ ಹನುಮಂತ ದೇವರು, ವಾನರೇಶಿತುಃ=ಸುಗ್ರೀವನ, ಮಧು–ಮಧುವನ್ನು ( ಮಧುವನದ ಲ್ಲಿ ರಸವತ್ತಾದ ಹಣ್ಣುಗಳನ್ನೂ ಮತ್ತು ಮಧುವನ್ನೂ ) ಪ್ರಭಕ್ಷ್ಯ= ಭುಂಜಿಸಿ, ಪ್ರಭುಂ=ಶ್ರೀರಾಮನನ್ನು, ಸಮೇಯಿವಾನ್–ಹೊಂದಿದರು.

ತಾತ್ಪರ್ಯ.—ಮಾರುತಿಯು ಸಮುದ್ರವನ್ನು ದಾಟಿಬಂದು ಕಪಿಗ

ರಿಂದ ಪೂಜಿತರಾಗಿ ಮಧುವನದಲ್ಲಿನ ಫಲಾದಿಗಳನ್ನು ಭುಂಜಿಸಿ ಶ್ರೀರಾಮನನ್ನು ಕುರಿತು ಹೊರಟುಬಂದರು.

ಶ್ಲೋಕ || ರಾಮಂ ಸುರೇಶ್ವರಮಗಣ್ಯಗುಣಾಭಿರಾಮಂ ಸಂಪ್ರಾಪ್ಯ ಸರ್ವಕಪಿವೀರವರೈಃ ಸಮೇತಃ || ಚೂಡಾಮಣಿಂ ಪವನಜಃ ಪದಯೋರ್ನಿಧಾಯ ಸರ್ವಾಂಗಕೈಃ ಪ್ರಣತಿಮಸ್ಯ ಚಕಾರಭಕ್ತ್ಯಾ ||೪೯||

ಅರ್ಥ.—ಸರ್ವಕಪಿವೀರವರೈಃ=ಸಮಸ್ತರಾದ ಕಪಿವೀರಶ್ರೇಷ್ಠರಿಂದ ಸಮೇತಃ=ಕೂಡಿದಂಥ, ಪವನಜಃ=ಹನುಮಂತದೇವರು, ಸುರೇಶ್ವರಂ=ದೇವಶ್ರೇಷ್ಠನಾದ, ಅಗಣ್ಯಗುಣಾಭಿರಾಮಂ=ಎಣಿಸಲಶಕ್ಯವಾದ ಗುಣಗಳಿಂದ ಮನೋಹರವಾದಂಥ, ರಾಮಂ-ಶ್ರೀರಾಮಚಂದ್ರದೇವರನ್ನು, ಸಂಪ್ರಾಪ್ಯ-ಹೊಂದಿ, ಅಸ್ಯ=ರಾಮನ, ಪದಯೋಃ=ಪಾದಗಳಲ್ಲಿ, ಚೂಡಾಮಣಿ-ಚೂಡಾಮಣಿ ಎಂಬ ಶಿರೋರತ್ನವನ್ನು, ನಿಧಾಯ-ಇಟ್ಟು, ಭಕ್ತ್ಯಾ=ಭಕ್ತಿಯಿಂದ, ಸರ್ವಾಂಗಕೈಃ=ಸಮಸ್ತಾವಯವಗಳಿಂದ, ಪ್ರಣತಿಂ=ನಮಸ್ಕಾರವನ್ನು, ಚಕಾರ=ಮಾಡಿದರು.

ತಾತ್ಪರ್ಯ.—ಸಮಸ್ತ ಕಪಿವೀರಶ್ರೇಷ್ಠರಿಂದ ಯುಕ್ತರಾದ ಹನುಮಂತದೇವರು, ದೇವದೇವನು ಅಪಾರಗುಣ ಸಮುದ್ರನೂ ಆದ ಶ್ರೀರಾಮಚಂದ್ರದೇವರ ಸಮೀಪಕ್ಕೆ ಬಂದು ಆತನ ಚರಣಗಳಲ್ಲಿ ಚೂಡಾಮಣಿಯನ್ನು ಸಮರ್ಪಿಸಿ ಭಕ್ತಿಯಿಂದ, (ಉರಸಾ ಶಿರಸಾದೃಷ್ಟ್ಯಾ ಮನಸಾವಚಸಾ ತಥಾ, ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಷ್ಟಾಂಗ ಈರಿತಃ) ಈ ರೀತಿ ಎಂಟು ಅಂಗಗಳಿಂದ ನಮಸ್ಕರಿಸಿದರು.

ಶ್ಲೋಕ || ರಾಮೋಽಪಿನಾನ್ಯದನುದಾತು ಮುಮುಷ್ಯ ಯೋಗ್ಯಮತ್ಯಂತ ಭಕ್ತಿಭರಿತಸ್ಯ ವಿಲಕ್ಷ್ಯ ಕಿಂಚಿತ್ | ಸ್ವಾತ್ಮಪ್ರದಾನಮಧಿಕಂ ಪವನಾತ್ಮಜಸ್ಯ ಕುರ್ವನ್ ಸಮಾಶ್ಲಿಷದಮು ಪರಮಾಭಿತುಷ್ಟಃ ||೫೦||

ಅರ್ಥ.— ಶ್ರೀರಾಮೋಽಪಿ= ರಾಮನಾದರೋ, ಅತ್ಯಂತಭಕ್ತಿಭರಿತಸ್ಯ- ವಿಶೇಷ ಭಕ್ತಿಯಿಂದ ಕೂಡಿದ, ಪವನಾತ್ಮಜಸ್ಯ – ವಾಯುಪುತ್ರರಾದ, ಅಮುಷ್ಯ=ಹನುಮಂತದೇವರಿಗೆ, ಅನುದಾತುಂ- ಕೊಡಲು, ಯೋಗ್ಯಂ= ವಿಹಿತವಾದದ್ದು, ಅನ್ಯತ್= ಬೇರೆ ಯಾವುದೂ, ಕಿಂಚಿತ್ =ಸ್ವಲ್ಪವೂ, ನ= ಇಲ್ಲ. ಇತಿ=ಹೀಗೆಂದು, ವಿಲಕ್ಷ್ಯ= ತಿಳಿದು, ಸ್ವಾತ್ಮಪ್ರದಾನಂ-ತನ್ನನ್ನೇ ಅಥವಾ ಉತ್ತಮವಾದ ಸಾಯುಜ್ಯವೇ, ಅಧಿಕಂ-ಎಲ್ಲಕ್ಕಿಂತಲೂ ಶ್ರೇಷ್ಠವೆನ್ನಾಗಿ ಎಣಿಸಿ, ಕುರ್ವನ್ ಸ್ವ= ಮಾಡತಕ್ಕವನಾಗಿ, ಪರಮಭಕ್ತನಾದ ಹನುಮಂತದೇವರ ಭಕ್ತಿಗೆ ಸಂತೋಷಪಟ್ಟವನಾಗಿ, ಏನಂ=ಇವನನ್ನು, ಸಮಾಶ್ಲಿಷತ್=ಆಲಿಂಗಿಸಿದನು.

ತಾತ್ಪರ್ಯ.— ಶ್ರೀರಾಮನು ಅತಿ ಭಕ್ತಿಯಿಂದ ಪೂರ್ಣರಾದ ಮಾರುತಿಯ ಭಕ್ತಿಗೆ ತುಷ್ಟನಾಗಿ ಅವನಿಗೆ ಕೊಡಲು ಬೇರೆ ಯಾವುದೂ ಇಲ್ಲವೆಂದು ತಿಳಿದು ತನ್ನನ್ನೇ ದಾನಕೊಡೋಣವೆಂಬ ಅಂದರೆ ಸಾಯುಜ್ಯವನ್ನು ಕೊಡುವುದೇ ಎಲ್ಲಕ್ಕಿಂತಲೂ ಶ್ರೇಷ್ಠವೆಂದು ತಿಳಿದು ತನ್ನ ಅತ್ಯಂತ ಪ್ರೀತಿಯ ದೇಹದ ಆಲಿಂಗನವನ್ನು ಕೊಟ್ಟನು.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ

ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ

ಶ್ರೀರಾಮಚರಿತೇ ಸುಂದರಕಾಂಡ ಕಥಾನಿರೂಪಣಂ ನಾಮ

ಸಪ್ತಮೋಽಧ್ಯಾಯಃ ॥

ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದ ೭ನೇ

ಅಧ್ಯಾಯದ ಕನ್ನಡ ತಾತ್ಪರ್ಯವು ಮುಗಿಯಿತು.

—: ಶ್ರೀಕೃಷ್ಣಾರ್ಪಣಮಸ್ತು :—

